ಜೀವರಾಜ ಜೈನ ಗ್ರಂಥಮಾಲಾ, ಕನ್ನಡ ಗ್ರಂಥ-೩

# ಭಾರತೀಯ ಸಂಸ್ಕೃತಿಗೆ

# ಜೈನಧರ್ಮದ ಕೊಡುಗೆ

ಮೂಲ ಲೇಖಕ

ಡಾ. ಹೀರಾಲಾಲ ಜೈನ, ಎಂ.ಎ., ಡಿ.ಲಿಟ್.

ಅನುವಾದಕ

ಮಿರ್ಜಿ ಅಣ್ಣಾರಾಯ, ಸೇಡಬಾಳ

ಪ್ರಕಾಶಕ

ಲಾಲಚಂದ ಹೀರಾಚಂದ ದೋಶೀ

ಜೈನ ಸಂಸ್ಕೃತಿ ಸಂರಕ್ಷಕ ಸಂಘ

ಸೊಲ್ಲಾಪುರ

೧೯೭೧

"*Bharatiya Samskrutige Jainadharmada Koduge*" by Dr. Hiralal Jain, M.A., D.Lit and Translated by Sri Mirji Anna Rao, Shedbal, Published by Lalchand Hirachand Doshi, Jaina Samskruti Samrakshaka Sangha, Sholapur. First edition 1971 Pages 600+16. Price Rs. 12/- only.

ಮೊದಲ ಮುದ್ರಣ : ೧೯೭೧



ಬೆಲೆ :
ರೂ. ೧೨-೦೦

ಮುದ್ರಕರು
ಆರ್. ಎನ್. ಹಬ್ಬು
ಉಷಾ ಪ್ರೆಸ್, ಮೈಸೂರು-೧

ಬ್ರ॥ ಜೀವರಾಜ ಗೌತಮಚಂದಜೀ

# ಗ್ರಂಥಮಾಲೆಯ ಸಂಪಾದಕರು

ಪ್ರೊ. ಆ. ನೇ. ಉಪಾಧ್ಯೆ
ಎಂ.ಎ., ಡಿ.ಲಿಟ್.

ಪ್ರೊ. ಹೀರಾಲಾಲ ಜೈನ
ಎಂ.ಎ., ಡಿ.ಲಿಟ್.

## ಜೀವರಾಜ ಜೈನ ಗ್ರಂಥ ಮಾಲೆಯ ಪರಿಚಯ

ಸೊಲ್ಲಾಪುರ ನಿವಾಸಿಗಳಾದ ಬ್ರ. ಜೀವರಾಜ ಗೌತಮ ಚಂದ ದೋಶೀ ಇವರು ಕೆಲವೊಂದು ವರ್ಷಗಳಿಂದ ಸಂಸಾರದಲ್ಲಿ ಉದಾಸೀನರಾಗಿ ಧರ್ಮ ಕಾರ್ಯದಲ್ಲಿ ತಮ್ಮ ವೃತ್ತಿಯನ್ನು ಪ್ರವೃತ್ತಗೊಳಿಸಿದ್ದರು. ಶ್ರೀ. ಶ. ೧೯೪೦ ರಲ್ಲಿ ಅವರಿಗೆ ತಮ್ಮ ನ್ಯಾಯೋಪಾರ್ಜಿತ ಸಂಪತ್ತಿಯ ಉಪಯೋಗವನ್ನು ವಿಶೇಷ ರೂಪದಲ್ಲಿ ಧರ್ಮ ಮತ್ತು ಸಮಾಜದ ಉನ್ನತಿಯ ಕಾರ್ಯದಲ್ಲಿ ಮಾಡ ಬೇಕೆಂದು ಪ್ರಬಲ ಇಚ್ಛೆಯು ಉಂಟಾಯಿತು. ಆಗ ಅವರು ಸಮಸ್ತ ಭಾರತ ವನ್ನು ಸಂಚರಿಸಿದರಲ್ಲದೆ ಅನೇಕ ವಿದ್ವಾಂಸರ ಪ್ರತ್ಯಕ್ಷ ಹಾಗೂ ಬರಹ ರೂಪದಲ್ಲಿ ತಮ್ಮ ಸಂಪತ್ತಿಯ ವಿನಿಯೋಗವನ್ನು ಯಾವ ಕಾರ್ಯದಲ್ಲಿ ಮಾಡಬೇಕೆಂಬುದರ ಬಗ್ಗೆ ಅಭಿಪ್ರಾಯಗಳನ್ನು ಕೂಡ ಹಾಕಿದರು. ಈ ಅಭಿಪ್ರಾಯ ಸಂಗ್ರಹದ ತರುವಾಯ ಶ್ರೀ. ಶ. ೧೯೪೧ರ ಗ್ರೀಷ್ಮ ಋತುವಿನಲ್ಲಿ ಈ ಬ್ರಹ್ಮಚಾರಿಗಳು ತೀರ್ಥಕ್ಷೇತ್ರ ಗಜಪಂಥದ (ನಾಶಿಕ) ಶಾಂತ ವಾತಾವರಣದಲ್ಲಿ ವಿದ್ವಾಂಸರನ್ನು ಒತ್ತಟ್ಟಿಗೆ ಕೂಡಿಸಿದರು. ಅಲ್ಲಿ ವಿಚಾರ ವಿನಿಮಯದ ನಂತರ ನಿರ್ಣಯಾತ್ಮಕ ತಮ್ಮ ಇಚ್ಛೆಯನ್ನು ಪ್ರದರ್ಶಿಸಿದರು. ವಿದ್ವತ್ ಸಮ್ಮೇಲನದ ನಿರ್ಣಯದಂತೆ ಬ್ರಹ್ಮಚಾರೀಜಿಯವರು ಜೈನಸಂಸ್ಕೃತಿ ಹಾಗೂ ಸಾಹಿತ್ಯದ ಸಮಸ್ತ ಅಂಗಗಳ ಸಂರಕ್ಷಣ, ಉದ್ಧಾರ ಮತ್ತು ಪ್ರಚಾರದ ಹೇತುವಿನಿಂದ 'ಜೈನ ಸಂಸ್ಕೃತಿ ಸಂರ ಕ್ಷಕವಿದ್ಯಾ ಸಂಘ'ದ, ಸ್ಥಾಪನೆಯನ್ನು ಮಾಡಿದರು. ಅದಕ್ಕಾಗಿ ಮೂವತ್ತು ಸಾವಿರ ರೂಪಾಯಿಗಳ (೩೦,೦೦೦) ತಮ್ಮ ಕೊಡುಗೆಯನ್ನು ಘೋಷಿಸಿದರು. ಮುಂದೆ ಅವರ ಪರಿಗ್ರಹ ನಿವೃತ್ತಿಯು ಬೆಳೆಯುತ್ತಲೇ ಹೋಯಿತು. ಅದರಿಂದ ಶ್ರೀ. ಶ. ೧೯೪೪ ರಲ್ಲಿ ಅವರು ಸುಮಾರು ಎರಡು ಲಕ್ಷದ (೨,೦೦,೦೦೦) ತಮ್ಮ ಸಂಪೂರ್ಣ ಸಂಪತ್ತಿಯನ್ನು ಸಂಘಕ್ಕೆ ವಿಶ್ವಸ್ತ ರೂಪದಿಂದ ಅರ್ಪಣ ಮಾಡಿದರು. ಈ ಪ್ರಕಾರ ತಮ್ಮ ಸರ್ವಸ್ವವನ್ನು ತ್ಯಾಗ ಮಾಡಿ ದಿನಾಂಕ ೧೬-೧-೧೯೫೭ ರಂದು ಅತ್ಯಂತ ಸಾವಧಾನ ಹಾಗೂ ಸಮಾಧಾನದಿಂದ ಸಮಾಧಿ ಮರಣದ ಆರಾಧನೆಯನ್ನು ಮಾಡಿದರು. ಇವರು ಸ್ಥಾಪಿಸಿದ ಸಂಘದ ಅಂತರ್ಗತವಾಗಿ 'ಜೀವರಾಜ ಜೈನ ಗ್ರಂಥ ಮಾಲೆಯ' ಸಂಚಾಲನ ನಡೆಯುತ್ತದೆ.

# ಪ್ರಧಾನ ಸಂಪಾದಕೀಯ

ಭಾರತೀಯ ವಿಚಾರ ಪ್ರಣಾಲಿಯನ್ನೂ ಸಾಂಸ್ಕೃತಿಕ ಪರಂಪರೆಯನ್ನೂ ಸಮೃದ್ಧ ಗೊಳಿಸುವುದರಲ್ಲಿ ಜೈನಧರ್ಮ ಹಾಗೂ ಜೈನಾಚಾರ್ಯರು ಬಹು ದೊಡ್ಡ ಸೇವೆಯನ್ನು ಸಲ್ಲಿಸಿದ್ದಾರೆ. ವಸ್ತುನಿಷ್ಠ ದೃಷ್ಟಿಕೋಣವನ್ನಿಟ್ಟು ವಿಚಾರ ಮಾಡಿದರೆ ಜೈನಧರ್ಮವು ನಿಜವಾಗಿಯೂ ಭಾರತೀಯ ಧರ್ಮವಾಗಿದೆ. ಹೇಗೆಂದರೆ ಜೈನ ವಿಚಾರ ಪ್ರಣಾಲಿಯ ಪರಂಪರೆಯು ಮೊಹೆಂಜೊದಾರೊ ಸಂಸ್ಕೃತಿಯವರೆಗೂ ಹೋಗಿ ತಲುಪುತ್ತದೆ; ಪ್ರಾಚೀನತಮ ಜೈನಗುಹೆಗಳು, ಜೈನ ಶಿಲಾಲೇಖ, ಜೈನಮಂದಿರಗಳು ಮತ್ತು ಜೈನ ಮೂರ್ತಿಗಳು ಭಾರತದ ಎಲ್ಲ ಭಾಗಗಳಲ್ಲಿಯೂ ಲಭಿಸುತ್ತವೆ. ಈಗಲೂ ಕೂಡ ಜೈನ ಧರ್ಮದ ಅನುಯಾಯಿಗಳು ಒಂದಿಲ್ಲೊಂದು ಸ್ವರೂಪದಲ್ಲಿ ನಮ್ಮ ಈ ವಿಶಾಲವಾದ ಭಾರತ ದೇಶದಲ್ಲಿ ಎಲ್ಲೆಡೆಯಲ್ಲಿಯೂ ವಾಸ ಮಾಡಿದ್ದಾರೆ.

ಭಾರತೀಯ ಸಂಸ್ಕೃತಿಯ ಅಭ್ಯಾಸಿಗಳಿಗೆ ಜೈನಧರ್ಮ, ಜೈನಸಾಹಿತ್ಯ, ಜೈನ ಕಲೆ, ಜೈನತೀರ್ಥಕ್ಷೇತ್ರಗಳು ಮತ್ತು ಜೈನಪರಂಪರೆ ಇವೇ ಮೊದಲಾದವುಗಳ ವಿವರ ವಾದ ಅಭ್ಯಾಸವನ್ನು ಮಾಡುವ ಅವಶ್ಯಕತೆಯಿದೆ. ಈ ವಿಷಯಗಳ ಆಳವಾದ ಹಾಗೂ ಸಪ್ರಮಾಣ ಅಭ್ಯಾಸ ಮತ್ತು ಸಂಶೋಧನ ಮಾಡುವದಕ್ಕಾಗಿ ಬೇಕಾಗಿರುವ ಸಾಧನ ಗಳು ವಿಪುಲವಾಗಿವೆ. ಅಲ್ಲದೆ ಅವು ಬೇರೆ ಬೇರೆ ಭಾಷೆಗಳಲ್ಲಿ, ವಿವಿಧ ಸಂಶೋಧನಾತ್ಮಕ ಗ್ರಂಥಗಳಲ್ಲಿ ಅಲ್ಲಲ್ಲಿ ಹುದುಗಿಕೊಂಡಿವೆ. ಈ ಎಲ್ಲ ಸಾಧನಗಳ ಅಭ್ಯಾಸವನ್ನು ಸಾಂಗೋಪಾಂಗವಾಗಿಯೂ ಸಮಗ್ರವಾಗಿಯೂ ಮಾಡಿ, ವಿದ್ವಾಂಸರ ಮುಂದೆ ಪ್ರಾಮಾಣಿಕವಾಗಿ ಮಂಡಿಸುವ ಅವಶ್ಯಕತೆಯು ಅತ್ಯಂತ ತೀವ್ರವಾಗಿ ಭಾಸವಾಗು ತ್ತಿತ್ತು. ಮೇಲೆ ಉಲ್ಲೇಖಿಸಿದ ವಿವಿಧ ವಿಷಯಗಳನ್ನು ಕುರಿತು, ವಿಧವಿಧ ಗ್ರಂಥಗಳೂ ಪ್ರಬಂಧಗಳೂ ಉಪಲಬ್ಧವಾಗಿವೆ. ಆದರೆ ಈ ಎಲ್ಲ ಸಾಧನಗಳ ಪರಿಶೀಲನಾತ್ಮಕ ಅಭ್ಯಾಸ ಮಾಡಿ, ತರ್ಕಸಮ್ಮತ ವಿಚಾರ ಪದ್ಧತಿಯನ್ನನುಸರಿಸಿ, ಗ್ರಂಥ ರೂಪದಲ್ಲಿ ರಚಿಸಿ, ವಿದ್ವಾಂಸರ ಮುಂದೆ ಒಂದೆಡೆಯಲ್ಲಿ ಮಂಡಿಸುವ ಅವಶ್ಯಕತೆಯು ಬಹಳವಾಗಿತ್ತು. ಇಂಥದೊಂದು ಕೊರತೆಯಿದೆ ಎಂಬ ಕೊರಗು ಬಹುಕಾಲದಿಂದಲೂ ಹೃದಯವನ್ನು ಕೊರೆಯುತ್ತಲಿತ್ತು.

ನನ್ನ ಸಹಯೋಗಿ ವಿದ್ವಾನ್ ಡಾ. ಹೀರಾಲಾಲ ಜೈನರ ಪರಿಚಯವನ್ನು ಭಾರ ತೀಯ ವಿದ್ವಾಂಸರಿಗೆ ಮಾಡಿಕೊಡುವ ಅವಶ್ಯಕತೆಯಿಲ್ಲ. ಸಾಹಿತ್ಯ ಕ್ಷೇತ್ರದಲ್ಲಿ ಸರ್ವ ಸ್ಪರ್ಶಿ ಅಭ್ಯಾಸ ಮತ್ತು ಸಂಶೋಧನ ಮಾಡುವಂಥ ಅವರ ಸಮತೂಕದ ವಿದ್ವಾಂಸರು ನಮ್ಮ ದೇಶದಲ್ಲಿ ಬಹು ಕಡಿಮೆ. ಸಂಸ್ಕೃತ ಸಾಹಿತ್ಯ ಮತ್ತು ಪ್ರಾಚೀನ ಭಾರತೀಯ ಇತಿಹಾಸ ಇವುಗಳ ಬಗ್ಗೆ ಅವರ ಅಭ್ಯಾಸವು ಬಹು ದೊಡ್ಡದಾಗಿದೆ. ಅವರ ಜೈನ ಧರ್ಮದ ಅಭ್ಯಾಸವು ಆಳವಾಗಿದ್ದು, ಅವರು ಬರೆದ ವಿವಿಧ ವಿಷಯಗಳ ಮೇಲಿನ

ಸಂಶೋಧನಾತ್ಮಕ ಗ್ರಂಥ ಹಾಗೂ ಪರಿಶೀಲನಾತ್ಮಕ ನಿಬಂಧಗಳನ್ನು ನೋಡಿದರೆ ಅವು ಆಯಾ ವಿಷಯಗಳ ನಿರೂಪಣೆಯನ್ನು ಎಷ್ಟು ನಿಚ್ಚಳವಾಗಿಯೂ ಸಮಗ್ರವಾಗಿಯೂ ಮಾಡುತ್ತವೆಂಬುದು ಸಹಜವಾಗಿ ಕಂಡುಬರುತ್ತದೆ. ಧವಲಾಟೀಕಾ ಸಹಿತ ಷಟ್ ಖಂಡಾಗಮ ಎಂಬ ಮಹಾನ್ ಗ್ರಂಥದ ಪ್ರಮಾಣಭೂತ ಆವೃತ್ತಿಯನ್ನು ಪ್ರಕಟಗೊಳಿಸಿ, ಜೈನಧರ್ಮ ಹಾಗು ಜೈನ ವಾಙ್ಮಯದ ನಿಸ್ವಾರ್ಥ ಸೇವೆಯನ್ನು ಇವರು ಮಾಡಿದ್ದಾರೆ. ಅದು ಅವಿಸ್ಮರಣೀಯವಾಗಿದೆ. ಅದೇ ಪ್ರಕಾರ ಅವರು ಮಾಡಿದ ಅಪಭ್ರಂಶ ಸಾಹಿತ್ಯದ ಉದ್ಧಾರವು ಭಾರತೀಯ ಸಾಹಿತ್ಯ ಕ್ಷೇತ್ರದಲ್ಲಿ ಅತ್ಯಂತ ಮಹತ್ವ ಪೂರ್ಣವಾಗಿದೆ.

ವಿದರ್ಭ ಮಹಾವಿದ್ಯಾಲಯ, ನಾಗಪುರ ಮಹಾವಿದ್ಯಾಲಯ, ವೈಶಾಲೀ ವಿದ್ಯಾಪೀಠ ಮತ್ತು ಜಬಲಪುರ ವಿಶ್ವವಿದ್ಯಾಲಯ ಈ ಸ್ಥಳಗಳಲ್ಲಿ ಒಬ್ಬ ಅತ್ಯಂತ ನಿಷ್ಣಾತ ವಿದ್ವಾನ್ ಮತ್ತು ಸತತೋದ್ಯೋಗಿ ಶಿಕ್ಷಕರೆಂದು ಅವರು ಸಂಪಾದಿಸಿದ ಕೀರ್ತಿಯು ಗೌರವಾಸ್ಪದವಾಗಿದೆ. ವೈಶಾಲೀ ವಿದ್ಯಾಪೀಠದ ಪ್ರಾರಂಭದಲ್ಲಿ ಪಾರ್ಶ್ವಭೂಮಿಯನ್ನು ರೂಪಿಸುವುದರಲ್ಲಿ ಅವರು ಬಹಳೇ ಶ್ರಮವಹಿಸಿದರು. ವೈಶಾಲೀ ಸಂಶೋಧನ ಮಂದಿರದ ಪ್ರಮುಖ ಸಂಚಾಲಕ ಮತ್ತು ಪ್ರಾಕೃತ ಸಾಹಿತ್ಯ, ಜೈನ ಸಿದ್ಧಾಂತ ಹಾಗೂ ಅಹಿಂಸಾ ತತ್ವಜ್ಞಾನ ಈ ಕ್ಷೇತ್ರದಲ್ಲಿಯ ಒಬ್ಬ ಹಿರಿಯ ಅಭ್ಯಾಸಕರೂ ಸಂಶೋಧಕರೂ ಹಾಗೆಯೇ ಆ ಕ್ಷೇತ್ರದಲ್ಲಿಯ ತರುಣ ಜಿಜ್ಞಾಸುಗಳಿಗೆ ಮಾರ್ಗದರ್ಶಕರು ಎಂಬ ವಿವಿಧ ಅಂಗಗಳಲ್ಲಿ ಅವರು ಮಾಡಿದ ಕಾರ್ಯವು ಅತ್ಯಂತ ಉಪಯುಕ್ತವೆಂದು ನಿಶ್ಚಯವಾಗಿದೆ. ಭಾರತೀಯ ಜ್ಞಾನಪೀಠದ ಸಾಂಸ್ಕೃತಿಕ ಪ್ರಕಾಶನ ಹಾಗೂ ಜೀವರಾಜ ಗ್ರಂಥಮಾಲೆಯ ಪ್ರಕಾಶನ ಕಾರ್ಯಗಳಲ್ಲಿ ಅವರು ನೀಡಿರುವ ಅಮೂಲ್ಯ ಸಹಯೋಗವು ಗ್ರಂಥಸಂಪಾದಕರಿಗೆ ಆದರ್ಶವಾದದ್ದಾಗಿದೆ.

ಕ್ರಿಶ. ೧೯೬೦ ನೆಯ ವರ್ಷ ಮಧ್ಯಪ್ರದೇಶ ಶಾಸನ ಸಾಹಿತ್ಯ ಪರಿಷತ್ತಿನ ಆಮಂತ್ರಣವನ್ನು ಸ್ವೀಕರಿಸಿ " ಭಾರತೀಯ ಸಂಸ್ಕೃತಿಮೆ ಜೈನಧರ್ಮಕಾ ಯೋಗದಾನ " ಎಂಬ ವಿಷಯವನ್ನು ಕುರಿತು ಡಾ. ಹೀರಾಲಾಲ ಜೈನ ಇವರು ನಾಲ್ಕು ವ್ಯಾಖ್ಯಾನಗಳನ್ನಿತ್ತರು. (೧) ಜೈನಧರ್ಮದ ಉದ್ಗಮ ಮತ್ತು ವಿಕಾಸ, (೨) ಜೈನ ಸಾಹಿತ್ಯ, (೩) ಜೈನದರ್ಶನ ಮತ್ತು (೪) ಜೈನಕಲೆ ಇವು ನಾಲ್ಕು ವ್ಯಾಖ್ಯಾನದ ವಿಷಯಗಳಾಗಿದ್ದುವು. ಈ ವ್ಯಾಖ್ಯಾನಗಳು ಆ ಕಾಲದ ಮಧ್ಯ ಪ್ರದೇಶದ ಮುಖ್ಯ ಮಂತ್ರಿ (೧) ಡಾ. ಕೈಲಾಸನಾಥ ಕಾಟಜು, ವಿಧಾನ ಸಭೆಯ ಅಧ್ಯಕ್ಷ (೨) ಪಂ. ಕುಂಜೀಲಾಲ ದುಬೆ, ಅರ್ಥಮಂತ್ರಿ (೩) ಶ್ರೀ ಮಿಶ್ರೀಲಾಲ ಗಂಗವಾಲ ಮತ್ತು ಶಿಕ್ಷಣ ಮಂತ್ರಿ (೪) ಶಂಕರ ದಯಾಲ ಶರ್ಮಾ ಈ ನಾಲ್ಕು ಜನರ ಅಧ್ಯಕ್ಷತೆಯಲ್ಲಿ ಕ್ರಮದಿಂದ ನಡೆದುವು. ತರುವಾಯ ಇವೇ ವ್ಯಾಖ್ಯಾನಗಳನ್ನು ವಿಸ್ತೃತ ರೀತಿಯಿಂದ ಬರೆಯಿಸಿಕೊಂಡು ಭೋಪಾಳದಲ್ಲಿಯ ಮಧ್ಯಪ್ರದೇಶ ಶಾಸನ ಸಾಹಿತ್ಯ ಪರಿಷತ್ತು ಕ್ರಿ. ಶ. ೧೯೬೨ನೆಯ ವರ್ಷ ಗ್ರಂಥ ರೂಪದಿಂದ ಪ್ರಕಟಿಸಿತು.

ಡಾ. ಹೀರಾಲಾಲ ಜೈನರಂಥ ವಿದ್ವಾಂಸರಿಂದ ಬರೆಯಲ್ಪಟ್ಟ ಈ ಮಹತ್ವಪೂರ್ಣ ಗ್ರಂಥವು ಹಿಂದೀ ಭಾಷೆಯಲ್ಲಿ ಪ್ರಕಟವಾಯಿತು. ಅದು ಕನ್ನಡಿಗರಿಗೆ ಸುಲಭವಾಗಿ ಓದಲು ಸಾಧ್ಯವಾಗಿರಲಿಲ್ಲ. ಇಂಥ ಅಭ್ಯಾಸಪೂರ್ಣ ಗ್ರಂಥದ ಪ್ರಚಾರವೂ ಕನ್ನಡ ನಾಡಿನಲ್ಲಿ ಆಗಬೇಕೆಂದೂ ಇದರಲ್ಲಿಯ ಮೌಲಿಕ ವಿಚಾರಗಳು ಕನ್ನಡ ವಾಚಕರಿಗೆ ಸುಲಭ ರೀತಿಯಿಂದ ಲಭಿಸಬೇಕೆಂದೂ ಈ ಗ್ರಂಥದ ಕನ್ನಡ ಅನುವಾದವನ್ನು ಜನತೆಯ ಎದುರಿಗೆ ಇಡಲು ಜೀವರಾಜ ಗ್ರಂಥ ಮಾಲೆಯ ಪ್ರಧಾನ ಸಂಪಾದಕರಿಗೆ ಅತ್ಯಂತ ಆನಂದವಾಗುತ್ತಿದೆ. ಈ ಕನ್ನಡ ಅನುವಾದವನ್ನು ಪ್ರಕಟಿಸಲು, ಮಧ್ಯಪ್ರದೇಶ ಶಾಸನ ಸಾಹಿತ್ಯ ಪರಿಷತ್ತು, ಭೋಪಾಳ, ಈ ಸಂಸ್ಥೆಯ ಅಧಿಕಾರಿಗಳು ಒಪ್ಪಿಗೆಯನ್ನಿತ್ತರು; ಹಾಗೂ ಡಾ. ಹೀರಾಲಾಲ ಜೈನ ಇವರು ಈ ಕಾರ್ಯಕ್ಕೆ ಉತ್ತೇಜನವನ್ನು ನೀಡಿದರು. ಅದಕ್ಕಾಗಿ ಗ್ರಂಥಮಾಲೆಯ ಸಂಪಾದಕರು ಅವರಿಗೆ ಅತ್ಯಂತ ಋಣಿಯಾಗಿದ್ದಾರೆ.

ಗ್ರಂಥಮಾಲೆಯ ಪ್ರಕಾಶನ ಕಾರ್ಯದಲ್ಲಿ ನಮ್ಮ ಅಧ್ಯಕ್ಷರಾದ ಶ್ರೀಮಾನ್ ಶೇಠ ಲಾಲಚಂದ ಹೀರಾಚಂದ ಇವರು ಅತ್ಯಂತ ಆಸ್ಥೆಯಿಂದ ಭಾಗವಹಿಸುತ್ತಾರೆ. ನಮ್ಮ ಅತ್ಯಂತ ದಕ್ಷ ಮತ್ತು ಉತ್ಸಾಹಿ ಮಂತ್ರಿ ಶ್ರೀಮಾನ್ ಶೇಠ ವಾಲಚಂದ ದೇವಚಂದ ಶಹಾ ಇವರು ಈ ಗ್ರಂಥ ಪ್ರಕಾಶನ ಕಾರ್ಯದಲ್ಲಿ ವಿವಿಧ ರೀತಿಯಿಂದ ಸಹಾಯ ಸಲ್ಲಿಸಿದ್ದಾರೆ. ಅಲ್ಲದೆ ದಿವಂಗತ ಶ್ರೀ ಶೇಠ ಮಾಣಿಕಚಂದ ವೀರಚಂದ ಶಹಾ ಇವರಿಗೂ ಈ ಪ್ರಕಾಶನ ದಲ್ಲಿ ಉತ್ಕಟ ಆಸ್ಥೆಯಿತ್ತು. ಆದರೆ ದುರ್ದೈವದಿಂದ ಈ ಗ್ರಂಥದ ಪ್ರಕಾಶನವು ಅವರ ಜೀವಿತ ಕಾಲದಲ್ಲಿ ಆಗಲಿಲ್ಲ. ಇನ್ನು ಈ ಗ್ರಂಥದಲ್ಲಿ ಬರುವ ಚಿತ್ರಾವಳಿಯನ್ನು ಮುದ್ರಿಸುವದಕ್ಕೆಂದು ಪ್ರಾ. ಡಾ. ಕುಲಭೂಷಣ ಲೋಖಂಡೆ ಇವರು ಪ್ರಯತ್ನಪೂರ್ವಕ ಪಡಿಯಚ್ಚುಗಳನ್ನು ದೊರಕಿಸಿಕೊಟ್ಟು ಈ ಕಾರ್ಯದಲ್ಲಿ ಸಹಕರಿಸಿದ್ದಾರೆ. ಇವರೆಲ್ಲರಿಗೂ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಈ ಗ್ರಂಥದ ಕನ್ನಡ ಅನುವಾದವನ್ನು ಶೇಡಬಾಳ ಶಾಂತಿಸೇವಾ ಸದನದ ಶ್ರೀ ಅಣ್ಣಾರಾಯ ಅಪ್ಪಣ್ಣಾ ಮಿರ್ಜಿ ಇವರು ಅತ್ಯಂತ ತತ್ಪರತೆಯಿಂದ ಮಾಡಿ ಕೊಟ್ಟರು. 'ಭಾರತೀಯ ಸಂಸ್ಕೃತಿಗೆ ಜೈನ ಧರ್ಮದ ಕೊಡುಗೆ' ಎಂಬ ಈ ಗ್ರಂಥದ ಮುದ್ರಣ ಕಾರ್ಯವನ್ನು ಅತ್ಯಂತ ನಿಷ್ಠೆಯಿಂದ ಮಾಡಿಸಿಕೊಂಡರು. ಈ ಎಲ್ಲಾ ಕೆಲಸಕ್ಕಾಗಿ ನಾವು ಅವರಿಗೆ ಕೃತಜ್ಞರಾಗಿದ್ದೆವೆ. ಹಾಗೆಯೇ ಈ ಗ್ರಂಥದ ಮುದ್ರಣವನ್ನು ವ್ಯವಸ್ಥಿತ ರೀತಿಯಿಂದ ಮಾಡಿಕೊಟ್ಟ ಬಗ್ಗೆ ಮೈಸೂರಿನ ಉಷಾ ಪ್ರೆಸ್ಸಿನ ಒಡೆಯರಾದ ಶ್ರೀ ಆರ್. ಎನ್. ಹೆಬ್ಬು ಇವರಿಗೂ ನಾವು ಕೃತಜ್ಞತೆಯನ್ನು ಸಲ್ಲಿಸುವ ಅವಶ್ಯಕತೆಯು ಇದೆ.

ಕೊಲ್ಹಾಪುರ
ವಿಜಯ ದಶಮೀ, ೧೯೭೦

ಆ. ನೇ. ಉಪಾಧ್ಯೆ

# ಮೊದಲ ಮಾತು

ಭಾರತೀಯ ಸಂಸ್ಕೃತಿಗೆ ಧರ್ಮ, ದರ್ಶನ, ಸಾಹಿತ್ಯ ಮತ್ತು ಕಲೆ ಇವೇ ಪ್ರಮುಖ ಅಂಗಗಳಾಗಿವೆ. ಈ ಚತುರ್‌ಮುಖಗಳಲ್ಲಿಯೂ ನಮ್ಮ ಸಂಸ್ಕೃತಿಯು ಅತ್ಯಂತ ಪ್ರಾಚೀನಕಾಲದಿಂದಲೂ ವಿಕಾಸಗೊಳ್ಳುತ್ತ ಬಂದಿದೆ, ಪರಿಪೂರ್ಣತೆಯತ್ತ ಸಾಗಿದೆ. ನಮ್ಮ ದೇಶ ವಿಸ್ತಾರವಾದುದು ; ಇಲ್ಲಿಯ ಜನರ ಆಧ್ಯಾತ್ಮಿಕ ಸಾಧನೆಯು ವಿವಿಧಮುಖವಾದುದು ; ಭಾಷೆ, ಸಾಹಿತ್ಯ, ಕಲೆಗಳ ಬೆಳವಣಿಗೆಯೂ ಅನೇಕ ಮುಖ ವಾದುದು ; ಧರ್ಮ, ದರ್ಶನಗಳಲ್ಲಿಯೂ ವೈವಿಧ್ಯತೆಯು ಸಾಕಷ್ಟಿದೆ. ಇವೆಲ್ಲವುಗಳ ಸಮಗ್ರ ವಿಕಾಸ, ಸರ್ವೋದಯ ಭಾವ, ಸಮನ್ವಯ ದೃಷ್ಟಿಗಳಿಂದ ಭಾರತೀಯ ಸಂಸ್ಕೃ ತಿಯು ರೂಪುಗೊಂಡಿದೆ. ಇಂಥ ವಿಶಾಲವಾದ ಸಂಸ್ಕೃತಿಗೆ ಜೈನಧರ್ಮದ ಕೊಡುಗೆ ಏನು ? ಎಷ್ಟು ? ಎಂಥದೆಂಬುದನ್ನು ಸೂಚಿಸುವ ಕೃತಿಯಿದು.

ಭಾರತೀಯ ಸಂಸ್ಕೃತಿಯ ಪ್ರವಾಹವು ಆರಂಭಕಾಲದಿಂದಲೂ ಶ್ರಮಣ ಮತ್ತು ವೈದಿಕ ಎಂಬ ಎರಡು ಭಿನ್ನ ಭಿನ್ನ ಕವಲುಗಳಲ್ಲಿ ಹರಿಯುತ್ತ ಬಂದಿದೆ. ಅವುಗಳಲ್ಲಿ ಶ್ರಮಣ ಪರಂಪರೆಯ ಅಂಗವಾಗಿ ಅರಳಿದುದು ಜೈನ ಸಂಸ್ಕೃತಿಯಾಗಿದೆ. ಜೈನ ತೀರ್ಥಂ ಕರರಿಗೂ ಆಚಾರ್ಯರಿಗೂ ಜನಜೀವನವನ್ನು ಹಸನುಗೊಳಿಸಿ, ಮೇಲೆತ್ತುವುದರ ಕಡೆ ಗೇನೇ ದೃಷ್ಟಿ. ಅದಕ್ಕೆ ಜನರಿಗೆ ಅರ್ಥವಾಗುವ ಯಾವ ಭಾಷೆಯಾದರೂ ನಡೆದೀತು ; ಯಾವ ಪ್ರಾಂತದ ಯಾವ ಜನಾಂಗವಾದರೂ ನಡೆದೀತು. ಅದರಿಂದ ಜೈನಧರ್ಮೀಯ ರಿಗೆ ಸಮಗ್ರ ಭಾರತೀಯ ದೃಷ್ಟಿಯಿದೆ ; ವಿಶ್ವಕಲ್ಯಾಣದ ಮಾರ್ಗದಲ್ಲಿ ಮುನ್ನಡೆಯಿದೆ.

ಹೀಗಿರುವುದರಿಂದ ಜೈನ ಸಾಹಿತ್ಯವು ವಿವಿಧ ಭಾರತೀಯ ಭಾಷೆಗಳಲ್ಲೆಲ್ಲ ಬೆಳೆದು ಬಂದಿದೆ. ಅದರಂತೆ ಕಲೆಯು ಅನೇಕ ಪ್ರಾಂತಗಳಲ್ಲಿ ಚೆಲ್ಲುವರಿದಿದೆ ; ಕಲಾ ವಲ್ಲಿಯು ವಿವಿಧ ಮುಖಗಳಲ್ಲಿ ಕುಡಿಯಿಟ್ಟಿದೆ, ಬೆಳೆದು ಹಬ್ಬಿ ಹಂದರವಾಗಿ ನಿಂತಿದೆ. ಧರ್ಮವೂ ಕೂಡ ದೇಶದ ವಿವಿಧ ಭಾಗಗಳ ಜನತೆಯಲ್ಲಿ ಸ್ಥಿರವಾಗಿ ನೆಲಗೊಂಡಿದೆ. ದರ್ಶನವು ಅವರ ಜೀವನ ದೃಷ್ಟಿಯನ್ನು ರೂಪಿಸಿದೆ. ಇಂಥ ವಿಶಾಲವಾದ ಜೈನ ಸಂಸ್ಕೃ ತಿಯನ್ನು ಸಮಗ್ರವಾಗಿ ಅಭ್ಯಸಿಸಿ, ಅದರ ರೂಪರೇಖೆಗಳನ್ನು ಚಿತ್ರಿಸಿ, ಭಾರತೀಯ ಸಂಸ್ಕೃತಿಯಲ್ಲಿ ಅದರ ಪಾಲು ಎಷ್ಟೆಂಬುದನ್ನು ಸೂಚಿಸುವುದು ಬಹು ಕಷ್ಟಸಾಧ್ಯವಾದ ಕಾರ್ಯವಾಗಿದೆ. ಅದನ್ನು ಪರಮಪೂಜ್ಯ ಡಾ. ಹೀರಾಲಾಲ ಜೈನ ಅವರು ಈ ಗ್ರಂಥ ದಲ್ಲಿ ಸಾಧಿಸಿದ್ದಾರೆ.

ಹಿಂದೀ ಭಾಷೆಯಲ್ಲಿ ವ್ಯಾಖ್ಯಾನ ರೂಪದಿಂದ ವ್ಯಕ್ತಗೊಂಡ ಈ ಗ್ರಂಥವು ಒಂದು ಕೃತಿಮಾತ್ರವಲ್ಲ. ಸಂಸ್ಕೃತಿಯ ಅಭ್ಯಾಸಿಗಳು ವಿವಿಧ ಕೃತಿಗಳನ್ನು ರಚಿಸಲು, ಮೂಲ ವಸ್ತುಗಳನ್ನು ಒದಗಿಸುವ ಒಂದು ಸುಪುಷ್ಟ ಬೀಜ ಕೋಷವಿದಾಗಿದೆ. ಇದ ರಿಂದ ವಿಷಯವನ್ನು ಎತ್ತಿಕೊಂಡು, ಆ ವಿಷಯದಲ್ಲಿ ಅಭ್ಯಾಸ ಮುಂದರಿಸಿ, ಇನ್ನೂ

ವಿಸ್ತಾರವಾದ ಕ್ಷೇತ್ರಗಳನ್ನು ಪ್ರವೇಶಿಸಲು ಆಹ್ವಾನವನ್ನೀಯುವ ವಿಚಾರವೇದಿಕೆಗಳಿಲ್ಲಿವೆ; ಸುಂದರವಾದ ಹೆಬ್ಬಾಗಿಲುಗಳೂ ಇಲ್ಲಿವೆ. ಇಂಥ ಒಂದು ಅಪೂರ್ವ ಗ್ರಂಥವು ಅಭ್ಯಾಸಿಗಳಾದ ಕನ್ನಡಿಗರ ಕೈಯಲ್ಲಿರಲಿ ಎಂಬ ಮನೋಭಾವದಿಂದ ಇದನ್ನು ಕನ್ನಡಿಸಿದ್ದಾಗಿದೆ. ಕನ್ನಡ ವಿಚಾರ ಸಾಹಿತ್ಯದಲ್ಲಿ ಈ ಗ್ರಂಥಕ್ಕೊಂದು ವಿಶಿಷ್ಟ ಸ್ಥಾನವೂ ಇದೆ.

ಈ ಗ್ರಂಥವನ್ನು ಕನ್ನಡಿಸುವದಕ್ಕೆ ಪ್ರೇರಕಶಕ್ತಿಯಾದವರು ಪರಮಪೂಜ್ಯ ಡಾ. ಆದಿನಾಥ ನೇಮಿನಾಥ ಉಪಾಧ್ಯೆಯವರು. ಅವರೇ ಜೀವರಾಜ ಗ್ರಂಥಮಾಲೆಯಲ್ಲಿ ಇದು ಪ್ರಕಟಗೊಳ್ಳುವಂತೆಯೂ ಮಾಡಿದರು. ಕಾಶಿಯ ಭಾರತೀಯ ಜ್ಞಾನಪೀಠದಿಂದಾಗಲಿ, ಸೊಲ್ಲಾಪುರದ ಜೈನ ಸಂಸ್ಕೃತಿ ಸಂರಕ್ಷಕ ಸಂಘದಿಂದಾಗಲಿ ಕನ್ನಡ ಗ್ರಂಥ ಪ್ರಕಾಶನವು ನಡೆಯುತ್ತಿದ್ದುದು ಈ ಹಿರಿಯರ ಪ್ರಯತ್ನದಿಂದಲೇ. ಆದಕ್ಕಾಗಿ ಕನ್ನಡ ಜನತೆಯು ಈ ಮಹನೀಯರನ್ನು ಎಷ್ಟು ಅಭಿವಂದಿಸಿದರೂ ಕಡಿಮೆಯೆ. ಇಂಥ ಅಂತರ ರಾಷ್ಟ್ರೀಯ ವಿದ್ವಾಂಸರ ಮಾಲಿಕೆಯಲ್ಲಿ ಸೇರುವ ಡಾ. ಉಪಾಧ್ಯೆಯವರು ಇದೀಗ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಬಂದು, ಮಾನಸ ಗಂಗೋತ್ರಿಯಲ್ಲಿ ಮಿಂದು, ಕನ್ನಡ ನಾಡ ದೇವಿಯ ಆರಾಧನೆಗೆ ನಿಂತುದು ನಮ್ಮೆಲ್ಲರ ಸೌಭಾಗ್ಯವಾಗಿದೆ. ಇಂಥ ಸುಸಂದರ್ಭದಲ್ಲಿ ಈ ಗ್ರಂಥವು ಪ್ರಕಟಗೊಳ್ಳುತ್ತಿರುವುದೊಂದು ಯೋಗಾಯೋಗವೇ ಆಗಿದೆ ; ಕನ್ನಡದ ಶುಭೋದಯವಾಗಿದೆ.

ಇಲ್ಲಿ ಗ್ರಂಥದ ವಿಷಯದಲ್ಲಾಗಲಿ, ಅನುವಾದನದ ವಿಷಯದಲ್ಲಾಗಲಿ ಹೆಚ್ಚಿಗೆ ಹೇಳುವ ಗೊಡವೆಗೆ ಹೋಗುವುದಿಲ್ಲ. ಕೃತಿಯನ್ನೇ ಕೈಯಲ್ಲಿಡುವಾಗ ಆ ಮಾತಿನ ಅವಶ್ಯಕತೆಯೂ ತೋರುವುದಿಲ್ಲ. ಎಂದಿನಂತೆ ಈ ನನ್ನ ಅನುವಾದ ಕೃತಿಯನ್ನು ಅಕ್ಕರೆಯಿಂದ ಕನ್ನಡಿಗರು ಸ್ವೀಕರಿಸಬೇಕೆಂದು ಪ್ರಾರ್ಥಿಸುವೆ.

ಸೇಡಬಾಳ<br>
೩೧–೧–೭೧

ಮಿರ್ಜಿ ಅಣ್ಣಾರಾಯ

# ವಿಷಯಾನುಕ್ರಮಣಿಕೆ

ಪಾರ್ಶ್ವನಾಥ ಮಂದಿರದ ಭಿತ್ತಿಶಿಲ್ಪ—೪೮೦, ಜೈನಮಂದಿರ ಸಮೂಹ, ಸೋನಾಗಿರಿ—೪೮೧, ಅಬೂ ಮಂದಿರದ ಛತ್ರಶಿಲ್ಪ—೪೮೧, ಜೈನಮಂದಿರ, ರಾಣಕಪುರ—೪೮೨, ಜೈನಕೀರ್ತಿ ಸ್ತಂಭ, ಚಿತ್ತೋಡ—೪೮೩, ಜೈನಮಂದಿರ ಸಮೂಹ ಶತ್ರುಂಜಯ—೪೮೩, ಮಸ್ತಕರಹಿತ ಜಿನಪ್ರತಿಮೆ, ಲೋಹಾನೀಪುರ—೪೮೪, ಮಸ್ತಕ ರಹಿತ ನಗ್ನಮೂರ್ತಿ, ಸಿಂಧೂ ಸಂಸ್ಕೃತಿ ಹರಪ್ಪಾ—೪೮೪, ತ್ರಿಶೃಂಗಯುಕ್ತ ಧ್ಯಾನಸ್ಥ ಮೂರ್ತಿ, ಸಿಂಧೂ ಸಂಸ್ಕೃತಿ—೪೮೫, ಋಷಭ ಖಡ್ಗಾಸನ ಧಾತುಪ್ರತಿಮೆ ಚೌಸಾ, ಬಿಹಾರ—೪೮೫, ಪದ್ಮಾಸನ ಪಾರ್ಶ್ವನಾಥ, ತೇರಾಪುರಗುಹೆ—೪೮೬, ಖಡ್ಗಾಸನ ಪಾರ್ಶ್ವನಾಥ, ತೇರಾಪುರಗುಹೆ—೪೮೬, ಪದ್ಮಾಸನ ಪಾರ್ಶ್ವನಾಥ, ಉದಯಗಿರಿ ವಿದಿಶಾ—೪೮೭, ಪದ್ಮಾಸನ ಜಿನಪ್ರತಿಮೆ, ದೇವಗಢ—೪೮೭, ಪದ್ಮಾಸನ ಜಿನಪ್ರತಿಮೆ ದೇವಗಢ—೪೮೮, ಖಡ್ಗಾಸನ ಜಿನಪ್ರತಿಮೆ, ದೇವಗಢ—೪೮೯, ಜೀವಂತ ಸ್ವಾಮಿಯ ಧಾತು ಪ್ರತಿಮೆ, ಅಕೋಟಾ—೪೮೯, ಗೊಮ್ಮಟೇಶ್ವರ ಬಾಹುಬಲಿ, ಶ್ರವಣಬೆಳ್ಗೊಳ—೪೯೦, ಬಾಹುಬಲಿಯ ಧಾತು ಪ್ರತಿಮೆ...೪೯೧, ಯುಗಲ ಪ್ರತಿಮೆ, ಜೈನಮಂದಿರ ದೇವಗಢ...೪೯೨, ಯುಗಲ ಪ್ರತಿಮೆ, ಚಂದ್ರಪುರ, ಝಾಂಸಿ, ೪೯೨, ಮೂಡಬಿದ್ರಿ ಸಿದ್ಧಾಂತಗ್ರಂಥ ತಾಡಪತ್ರ ಚಿತ್ರ—೪೯೩, ಸುಪಾಸನಾಹ ಚರಿಯ: ಕಾಗದ ಚಿತ್ರ ಪಾಟಣ—೪೯೪.

ವ್ಯಾಖ್ಯಾನ—೧

# ಜೈನ ಧರ್ಮದ ಉದಯ ಮತ್ತು ವಿಕಾಸ

## ಜೈನ ಧರ್ಮದ ರಾಷ್ಟ್ರೀಯ ಭೂಮಿಕೆ :—

ಮಧ್ಯ ಪ್ರದೇಶ ಶಾಸನ ಸಾಹಿತ್ಯ ಪರಿಷತ್ತಿನಿಂದ ನನಗೆ ವ್ಯಾಖ್ಯಾನಕ್ಕೆ ಆಮಂತ್ರಣವು ಬಂತು. ಆ ಸಂದರ್ಭದಲ್ಲಿ ವಿಷಯವನ್ನು ಆಯ್ದುಕೊಳ್ಳುವ ಹೊಣೆಯನ್ನೂ ಕೂಡ ನನ್ನ ಮೇಲೆಯೇ ಹೊರಿಸಲಾಯಿತು. ಆಗ ನಾನು ಸ್ವಲ್ಪ ವಿಚಾರಕ್ಕೆ ಒಳಗಾದೆ. ಈಗ ಕೆಲವು ವರ್ಷಗಳ ಹಿಂದೆ ಬಿಹಾರ ರಾಜ್ಯ ಶಾಸನವು ಒಂದು ವಿದ್ಯಾಪೀಠವನ್ನು ಸ್ಥಾಪಿಸಿದೆ. ಅದರ ಉದ್ದೇಶವು ಪ್ರಾಕೃತ, ಜೈನ ತತ್ವಜ್ಞಾನ ಹಾಗೂ ಅಹಿಂಸಾ ವಿಷಯದಲ್ಲಿ ಸ್ನಾತಕೋತ್ತರ ಅಧ್ಯಯನವನ್ನೂ ಅನುಸಂಧಾನವನ್ನೂ ಮಾಡುವುದೆಂದು ಇದೆ. ಇದು ತಮಗೆಲ್ಲ ಗೊತ್ತಿದ್ದ ವಿಷಯ. ಆ ವಿದ್ಯಾಪೀಠದ ಸಂಚಾಲಕ ಪದವನ್ನು ನನಗೆ ನೀಡಲಾಗಿದೆ. ಈ ವಿಷಯದಲ್ಲಿ ನನಗೆ ಹಲವರು ಹಲವು ಕಡೆಗಳಿಂದ ಪ್ರಶ್ನೆಗಳನ್ನು ಕೇಳುತ್ತಾರೆ: ಬಿಹಾರ ಸರಕಾರವು ಈ ಕಾರ್ಯವನ್ನು ಏಕೆ ಮಾಡಿತು? ಹೇಗೆ ಮಾಡಿತು ? ಈ ಪ್ರಶ್ನೆ ಕೇಳುವವರ ಮನೋಭೂಮಿಕೆಯು ಹೀಗಿದೆ : ಸ್ವತಂತ್ರ ಭಾರತದ ರಾಷ್ಟ್ರೀಯ ನೀತಿಯು ಸಂಪೂರ್ಣ ಧರ್ಮ ನಿರಪೇಕ್ಷವೆಂದು ನಿಶ್ಚಿತವಾಗಿ ಹೋಗಿದೆ. ಅದಕ್ಕನುಸರಿಸಿ, ಸಂವಿಧಾನದಲ್ಲಿ ಸರ್ವ ಪ್ರಕಾರದ ಧಾರ್ಮಿಕ, ಸಾಂಪ್ರದಾಯಿಕ, ಜಾತೀಯ ಮೊದಲಾದ ಪಕ್ಷಪಾತಗಳನ್ನು ನಿಷೇಧಿಸಲಾಗಿದೆ. ಅಂದ ಮೇಲೆ ಈ ಮನೋಭೂಮಿಕೆಯಿಂದ ಇಂಥ ಪ್ರಶ್ನೆಗಳು ಏಳುವುದೂ ಸ್ವಾಭಾವಿಕವಿದೆ. ಈ ಪ್ರಶ್ನೆಗಳಿಗೆ ನನ್ನ ಸರಳವಾದ ಉತ್ತರವು ಹೀಗಿರುತ್ತದೆ : ಬಿಹಾರ ಸರಕಾರವು ಕೇವಲ ಈ ಜೈನ ವಿದ್ಯಾಪೀಠ ಒಂದನ್ನೇ ಸ್ಥಾಪಿಸಲಿಲ್ಲ. ಆವರೆ ಅದು ಸಂಸ್ಕೃತ ಮತ್ತು ವೈದಿಕ ಸಂಸ್ಕೃತಿಯ ಅಧ್ಯಯನಕ್ಕೆಂದೂ ಅನುಸಂಧಾನಕ್ಕೆಂದೂ ಮಿಥಿಲಾ ವಿದ್ಯಾಪೀಠವನ್ನು ಸ್ಥಾಪಿಸಿದೆ. ಅಲ್ಲದೆ ಪಾಲಿ ಮತ್ತು ಬೌದ್ಧ ತತ್ವಜ್ಞಾನಗಳ ಅಭ್ಯಾಸಕ್ಕೆಂದು ನವ ನಾಲಂದಾ ಮಹಾವಿಹಾರವನ್ನೂ ಸ್ಥಾಪಿಸಿದೆ. ಇದೇ ಪ್ರಕಾರ ಪಾಟಣಾದಲ್ಲಿ ಅರಬೀ-ಫಾರಸೀ ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಗಳ ಅಭ್ಯಾಸಕ್ಕೆಂದು ಒಂದು ಸಂಸ್ಥೆಯನ್ನು ಸ್ಥಾಪಿಸಲಾಗಿದೆ. ಭಾರತದ ಪ್ರಾಚೀನ ಸಂಸ್ಕೃತಿಗಳ ಉಚ್ಚ ಅಧ್ಯಯನ, ಅಧ್ಯಾಪನ ಮತ್ತು ಸಂಶೋಧನಗಳಿಗಾಗಿ ಈ ಮೂರು ನಾಲ್ಕು ವಿದ್ಯಾಪೀಠಗಳನ್ನು ಸ್ಥಾಪಿಸುವುದರಿಂದ ಆಡಳಿತೆಯು ತನ್ನ ಧರ್ಮ-ನಿರಪೇಕ್ಷ ದೃಷ್ಟಿಕೋಣವನ್ನು ಸ್ಪಷ್ಟಗೊಳಿಸಿದೆ. ಧರ್ಮನಿರಪೇಕ್ಷತೆ ಎಂದರೆ ಸರಕಾರವು ಯಾವುದೇ ಧರ್ಮ, ತತ್ವಜ್ಞಾನ ಮತ್ತು ಅದಕ್ಕೆ ಸಂಬಂಧಿಸಿದ ಸಾಹಿತ್ಯದ ಅಧ್ಯಯನ ಮೊದಲಾದವುಗಳನ್ನು ನಿಷೇಧಿಸ-

ಬೇಕು ಎಂದಲ್ಲ. ಆದರೆ ಯಾವುದೇ ಒಂದು ಧರ್ಮಕ್ಕೆ ಎಲ್ಲ ಅನುಕೂಲತೆಗಳನ್ನು ಒದಗಿಸುವುದು ಇನ್ನೊಂದು ಧರ್ಮವನ್ನು ಉಪೇಕ್ಷಿಸುವುದು- ಇಂಥ ರಾಜ್ಯ ನೀತಿಯು ಎಂದೂ ಆಗಕೂಡದು. ಇದೇ ಧರ್ಮ ನಿರಪೇಕ್ಷ ಶಾಸನದ ಉದ್ದೇಶವಾಗಿದೆ. ರಾಜ್ಯದ ಆಡಳಿತೆಯು ದೇಶದ ಪ್ರಾಚೀನ ಇತಿಹಾಸ ಸಾಹಿತ್ಯ, ಸಿದ್ಧಾಂತ ಮತ್ತು ದರ್ಶನ ಮೊದಲಾದವುಗಳಿಗೆ ಸಂಬಂಧಿಸಿದ ಸರ್ವ ವಿಷಯದಲ್ಲಿಯೂ ಅಧ್ಯಯನ ಮತ್ತು ಸಂಶೋಧನೆಗಳಿಗಾಗಿ ಎಷ್ಟು ಸಾಧ್ಯವೋ ಅಷ್ಟು ಅನುಕೂಲತೆಗಳನ್ನು ಸಮಾನದೃಷ್ಟಿಯಿಂದ, ನಿಷ್ಪಕ್ಷಪಾತ ಭಾವನೆಯಿಂದ ಒದಗಿಸುವುದು ಕರ್ತವ್ಯವಾಗಿದೆ. ಈ ಉದಾತ್ತ ಹಾಗೂ ಶ್ರೇಯಸ್ಕರ ದೃಷ್ಟಿಕೋಣದಿಂದ ಯಾವಾಗಲೂ ಯಾರಿಗೂ ಯಾವ ಆತಂಕವೂ ಒದಗುವುದಿಲ್ಲ. ಇಂಥ ಧರ್ಮ-ನಿರಪೇಕ್ಷ ದೃಷ್ಟಿಕೋಣದಿಂದ ಪ್ರೇರಿತವಾಗಿ ಈ ಶಾಸನ ಪರಿಷತ್ತು ನನ್ನನ್ನು ವ್ಯಾಖ್ಯಾನಕ್ಕೆ ಆಮಂತ್ರಿಸಿದೆಯೆಂದು ನಾನು ತಿಳಿಯುತ್ತೇನೆ. ಆದ್ದರಿಂದ ನಾನು ಭಾರತೀಯ ಸಂಸ್ಕೃತಿಗೆ ಜೈನ ಧರ್ಮದ ಕೊಡುಗೆ ಎಂಬ ವಿಷಯದಲ್ಲಿ ಇಲ್ಲಿ ವಿವೇಚನೆಯನ್ನು ಮಾಡಲಿಕ್ಕೆ ಯಾವ ಸಂಕೋಚವನ್ನೂ ಪಡುವುದಿಲ್ಲ.

ಈ ವಿಷಯದಲ್ಲಿ ನಾನು ಇಲ್ಲಿ ಮಾಡುವ ಸಮೀಕ್ಷೆಯಲ್ಲಿ ಆತ್ಮ ಪ್ರಶಂಸೆ ಹಾಗೂ ಪರನಿಂದೆಯ ಭಾವನೆಗಳು ಉಂಟಾಗದಂತೆ ಧ್ಯಾನವೀಯುತ್ತೇನೆ. ಅಲ್ಲದೆ ಪ್ರಸ್ತುತ ಸಂಸ್ಕೃತಿಯ ಪ್ರವಾಹವು ಭಾರತೀಯ ಜೀವನ, ವಿಚಾರ ಮತ್ತು ವ್ಯವಸ್ಥೆಗಳನ್ನು ಯಾವಾಗ ಹೇಗೆ ಪ್ರಭಾವಗೊಳಿಸಿತು ಹಾಗೂ ಪರಿಷ್ಕೃತಗೊಳಿಸಿತು ಎಂಬುದರ ಯಥಾರ್ಥ ಮೌಲ್ಯಮಾಪನವಾಗಿ ಅದರ ವಾಸ್ತವಿಕ ರೂಪ-ರೇಷೆಯು ಪ್ರಕಟಗೊಳ್ಳುವಂತೆ ನೋಡಿಕೊಳ್ಳುತ್ತೇನೆ. ಇವೆಲ್ಲ ವಿಷಯಗಳಲ್ಲಿ ನಾನು ವಿಶೇಷ ಜಾಗೃತನಾಗಿರುವ ಅವಶ್ಯಕತೆಯು ಇದೆ. ಯಾಕೆಂದರೆ ನಾನು ಸ್ವತಃ ಜನ್ಮ ಹಾಗೂ ಸಂಸ್ಕಾರಗಳಿಂದ ಜೈನನಾಗಿದ್ದೇನೆ ಆದರಿಂದ ಸುಲಭವಾಗಿ ಈ ದೋಷಗಳಿಗೆ ಒಳಗಾಗುವುದು ಸ್ವಾಭಾವಿಕವಾಗಿದೆ. ಈ ಕಾರಣದಿಂದ ಈ ವಿಷಯದಲ್ಲಿ ನನ್ನ ಶ್ರೇಯಸ್ಸೂ ಕೂಡ ವಿಶೇಷ ರೂಪದಿಂದ ಕೊರತೆಯನ್ನು ಹೊಂದಬಲ್ಲುದು. ಯಾಕೆಂದರೆ ಜೈನ ಧರ್ಮವು ತನ್ನ ವಿಚಾರ ಮತ್ತು ಜೀವನಕ್ಕೆ ಸಂಬಂಧಿಸಿದ ವ್ಯವಸ್ಥೆಗಳ ವಿಕಾಸದಲ್ಲಿ ಎಂದೂ ಯಾವ ಪ್ರಕಾರದ ಸಂಕುಚಿತ ದೃಷ್ಟಿಗೆ ಬಲಿಯಾಗಿಲ್ಲ. ಅದರ ಭೂಮಿಕೆಯು ರಾಷ್ಟ್ರೀಯ ದೃಷ್ಟಿಯಿಂದ ಯಾವಾಗಲೂ ಉದಾರ ಮತ್ತು ಉದಾತ್ತವಾಗಿಯೇ ಇದೆ. ಅದು ಒಮ್ಮೊಮ್ಮೆ ಅನ್ಯ ಧರ್ಮಗಳೊಡನೆ ವಿರೋಧವನ್ನೂ ಹೋರಾಟವನ್ನೂ ಹೂಡಿದುದೂ ಕೂಡ ತನ್ನ ಉದಾರ ನೀತಿಯನ್ನು ರಕ್ಷಿಸಿಕೊಳ್ಳುವುದಕ್ಕಾಗಿಯೇ. ಜೈನರು ಭಾರತ ದೇಶದ ಯಾವ ಒಂದು ಭಾಗವನ್ನು ಮಾತ್ರ ತಮ್ಮ ವಿಶೇಷ ಭಕ್ತಿಯ ಸ್ಥಾನವೆಂದು ಎಂದೂ ಭಾವಿಸಲಿಲ್ಲ. ಅವರ ಅಂತಿಮ ತೀರ್ಥಂಕರ ಭಗವಾನ್ ಮಹಾವೀರನು ವಿದೇಹದಲ್ಲಿ (ಉತ್ತರ ಬಿಹಾರ) ಜನಿಸಿದ್ದನು, ಆದರೆ ಅವನ ಉಪದೇಶ ಮತ್ತು ನಿರ್ವಾಣಗಳು ಮಗಧದಲ್ಲಿ (ದಕ್ಷಿಣ ಬಿಹಾರ) ಸಂಭವಿಸಿದುವು. ಅವನಿಗಿಂತ

ಮೊದಲಿನ ತೀರ್ಥಂಕರೆನಾದ ಪಾರ್ಶ್ವನಾಥನ ಜನ್ಮವು ಉತ್ತರ ಪ್ರದೇಶದ ಬನಾರಸ ನಗರದಲ್ಲಿ ಆಯಿತು; ಆದರೆ ಅವನು ತಪಸ್ಸು ಮಾಡಲಿಕ್ಕೆ ತೆರಳಿದುದು, ಮಗಧ ದೇಶದ ಸಮ್ಮೇದ ಶಿಖರದ ಪರ್ವತದಲ್ಲಿ. ಇವನಿಗಿಂತಲೂ ಮುಂಚೆ ಆಗಿ ಹೋದ ತೀರ್ಥಂಕರ ನೇಮಿನಾಥನು ತನ್ನ ತಪಸ್ಸು ಉಪದೇಶ ಮತ್ತು ನಿರ್ವಾಣ ಕ್ಷೇತ್ರಗಳನ್ನು ಭಾರತದ ಪಶ್ಚಿಮ ಭಾಗದಲ್ಲಿರುವ ಕಾಠೇವಾಡದಲ್ಲಿ ರೂಪಿಸಿಕೊಂಡನು. ಎಲ್ಲಕ್ಕೂ ಮೊದಲಿನ ಪ್ರಥಮ ತೀರ್ಥಂಕರ ಆದಿನಾಥನು ಜನ್ಮವೆತ್ತಿದುದು ಅಯೋಧ್ಯೆಯಲ್ಲಿ. ಆದರೆ ತಪಸ್ಸು ಮಾಡಲಿಕ್ಕೆ ತೆರಳಿದುದು ಕೈಲಾಸ ಪರ್ವತದಲ್ಲಿ. ಈ ಪ್ರಕಾರ ಜೈನರ ಪವಿತ್ರ ಭೂಮಿಯ ವಿಸ್ತಾರವು ಉತ್ತರದಲ್ಲಿ ಹಿಮಾಲಯ, ಪೂರ್ವದಲ್ಲಿ ಮಗಧ ಪಶ್ಚಿಮದಲ್ಲಿ ಕಾಠೇವಾಡದ ವರೆಗೆ ವ್ಯಾಪಿಸಿದೆ. ಈ ಸೀಮೆಗಳ ಮಧ್ಯದಲ್ಲಿ, ಅನೇಕ ಮುನಿಗಳೂ, ಆಚಾರ್ಯರೂ ಮೊದಲಾದ ಮಹಾಪುರುಷರು ಹೆಜ್ಜೆ ಹೆಜ್ಜೆಗೂ ಜನ್ಮವೆತ್ತಿದ್ದಾರೆ, ತಪಸ್ಸನ್ನು ಮಾಡಿದ್ದಾರೆ ನಿರ್ವಾಣವನ್ನು ಹೊಂದಿದ್ದಾರೆ ಅದರಿಂದ ಈ ಭೂಮಿಯು ಜೈನರ ಶ್ರದ್ಧೆ ಹಾಗೂ ಭಕ್ತಿಗಳ ಸ್ಥಾನವಾಗಿದೆ ಧರ್ಮಪ್ರಚಾರಕ್ಕಾಗಿಯಾಗಲಿ, ಆತ್ಮ ರಕ್ಷಣೆಗೆಂದಾಗಲಿ, ಜೈನರು ದೇಶದ ಹೊರಗೆ ಹೋಗಿಲ್ಲ. ದುರ್ಭಿಕ್ಷ ಮೊದಲಾದ ವಿಪತ್ತುಗಳ ಸಮಯವು ಬಂದಾಗ ಅವರು ಭಾರತ ದೇಶದಲ್ಲಿಯೇ ಪೂರ್ವದಿಂದ ಪಶ್ಚಿಮ ಭಾಗಕ್ಕೆ ಅಥವಾ ಉತ್ತರದಿಂದ ದಕ್ಷಿಣ ದೇಶಕ್ಕೆ ತೆರಳಿದುದುಂಟು. ಈ ಪ್ರಕಾರ ಅವರು ದಕ್ಷಿಣ ಭಾರತಕ್ಕೂ ಕೂಡ ತಮ್ಮ ಶ್ರದ್ಧಾಂಜಲಿಯನ್ನು ನೀಡದೆ ಇಲ್ಲ. ಅಲ್ಲಿ ತಮಿಳ ನಾಡಿನಂಥ ದೂರದ ಪ್ರದೇಶದಲ್ಲಿಯೂ ಸಹ ಅವರ ದೊಡ್ಡ ದೊಡ್ಡ ಆಚಾರ್ಯರೂ ಗ್ರಂಥಕರ್ತರೂ ಆಗಿ ಹೋಗಿದ್ದಾರೆ ಅಲ್ಲಿ ಅನೇಕ ಸ್ಥಳಗಳು ಜೈನರ ಪ್ರಾಚೀನ ಮಂದಿರಗಳ ಅವಶೇಷಗಳಿಂದ ಅಲಂಕೃತಗೊಂಡಿವೆ. ಕರ್ನಾಟಕ ಪ್ರಾಂತದಲ್ಲಿ ಶ್ರವಣಬೆಳ್ಗೊಳ ಮತ್ತು ಕಾರ್ಕಳ ಮೊದಲಾದ ಸ್ಥಾನಗಳಲ್ಲಿ ಇರುವ ಬಾಹುಬಲಿಯ ವಿಶಾಲವೂ ಕಲಾಪೂರ್ಣವೂ ಆದ ವಿಗ್ರಹಗಳು ಈಗಲೂ ಕೂಡಾ ಪ್ರಾಚೀನ ಶಿಲ್ಪಕಲೆಗೆ ಗೌರವವನ್ನು ಉಂಟುಮಾಡುವಂತೆ ಇವೆ. ಒಟ್ಟಿನಲ್ಲಿ ಈ ಸಮಗ್ರ ಭಾರತ ದೇಶವು ಇಂದಿನ ರಾಜನೈತಿಕ ದೃಷ್ಟಿ ಮಾತ್ರದಿಂದಷ್ಟೇ ಅಲ್ಲ, ಆದರೆ ತಮ್ಮ ಪ್ರಾಚೀನತಮ ಧಾರ್ಮಿಕ ಪರಂಪರಾನುಸಾರವಾಗಿಯೂ ಜೈನರಿಗಾಗಿ ಒಂದು ಅಖಂಡ ಶ್ರದ್ಧಾಭಕ್ತಿಯ ಸ್ಥಾನವಾಗಿದೆ. ಐತಿಹಾಸಿಕ ಕಾಲದಲ್ಲಿ ಜೈನರ ಯಾವ ಸಾಧುಗಳಾಗಲಿ, ಗೃಹಸ್ಥರ ಸಮೂಹವಾಗಲಿ, ದೊಡ್ಡ ಪ್ರಮಾಣದಲ್ಲಿ ಎಲ್ಲಿಯಾದರೂ ಭಾರತ ದೇಶದ ಹೊರಗೆ ಹೋದರು, ಅಲ್ಲಿ ಹೋಗಿ ಮಂದಿರ ಮೊದಲಾದ ಧಾರ್ಮಿಕ ಸಂಸ್ಥೆಗಳನ್ನು ಸ್ಥಾಪಿಸಿದರು, ಅದರಿಂದ ಅವರ ದೇಶ–ಪ್ರೇಮದಲ್ಲಿ ತಿಲಮಾತ್ರ ಶಿಥಿಲತೆ ಇಲ್ಲವೆ ವಿಭಾಗ ಉತ್ಪನ್ನವಾಯಿತು–ಎಂದು ಜೈನರು ಯಾರೂ ಸಾಧಿಸಲಿಕ್ಕೆ ಹೋಗುವುದಿಲ್ಲ. ಈ ಪ್ರಕಾರ ಪ್ರಾಂತೀಯತೆಯ ಸಂಕುಚಿತ ಭಾವನೆ ಇಲ್ಲವೆ ದೇಶ ಬಾಹ್ಯದ ಅನುಚಿತ ಅನುರಾಗಗಳಂಥ ದೋಷಗಳಿಂದ ನಿಷ್ಕಲಂಕವಾಗಿದ್ದ ಜೈನರ ದೇಶಭಕ್ತಿಯು ಯಾವಾಗಲೂ ವಿಶುದ್ಧವೂ ಅಚಲವೂ ಸ್ಥಿರವೂ ಎಂದು ಹೇಳ

ಲಾಗುತ್ತಿದೆ.

ದೇಶಭಕ್ತಿಯು ಕೇವಲ ಭೂಮಿಗತವಾಗಿರುವ ಸಂಗತಿಯಲ್ಲ. ಜೈನರು ಲೋಕ ಭಾವನೆಯ ಸಂಬಂಧದಲ್ಲಿಯೂ ಸಹ ತಮ್ಮ ಅದೇ ಉದಾರ ನೀತಿಯನ್ನು ಅನುಸರಿಸಿದ್ದಾರೆ. ಭಾಷೆಯ ಪ್ರಶ್ನೆಯನ್ನು ಅವಲೋಕಿಸೋಣ. ವೈದಿಕ ಪರಂಪರೆಯಲ್ಲಿ ಸಂಸ್ಕೃತ ಭಾಷೆಗೆ ಬಹು ಗೌರವವಿದೆ. ಅದಕ್ಕೇನೇ ಅವರು 'ದೇವ-ಭಾಷೆ' ಎಂದು ಮನ್ನಿಸುತ್ತಾರೆ. ಅಲ್ಲದೆ ಅದೇ ಭಾಷೆಯಲ್ಲಿ ಯಾವಾಗಲೂ ಸಾಹಿತ್ಯ ನಿರ್ಮಿತಿಯನ್ನು ಮಾಡುತ್ತ ಬಂದಿದ್ದಾರೆ. ಈ ಭಾವನೆಯ ಪರಿಣಾಮವು ಒಳ್ಳೆಯದೇ ಆಗಿದೆ. ಅದರಿಂದ ಪ್ರಾಚೀನತಮ ಸಾಹಿತ್ಯವೆನಿಸುವ ವೇದಾದಿಗಳ ವಿವಿಧ ಪ್ರಕಾರಗಳ ರಕ್ಷಣೆಯಾಯಿತು. ಸಂಸ್ಕೃತ ಭಾಷೆಯೂ ಕೂಡ ಉತ್ತರೋತ್ತರ ಅಭಿವೃದ್ಧಿಯನ್ನು ಹೊಂದಿತು. ಆದರೆ ಇದರಿಂದ ಒಂದು ದೊಡ್ಡ ಹಾನಿಯೂ ಸಂಭವಿಸದಿರಲಿಲ್ಲ. ಈ ಪರಂಪರೆಯವರಿಂದ ಎರಡು ಮೂರು ಸಾವಿರ ವರ್ಷಗಳ ಕಾಲಾವಧಿಯಲ್ಲಿ ನಿರ್ಮಾಣವಾದ ವಿಶಾಲ ಸಾಹಿತ್ಯ ಪ್ರಪಂಚದಲ್ಲಿ ಆಯಾ ಕಾಲದ ಭಿನ್ನ ಭಿನ್ನ ಪ್ರಾದೇಶಿಕ ಲೋಕಭಾಷೆಗಳ ಯಾವ ಪ್ರತಿನಿಧಿತ್ವವೂ ಉಳಿಯಲಿಲ್ಲ.

ಭಗವಾನ್ ಬುದ್ಧನು ತನ್ನ ಉಪದೇಶದ ಮಾಧ್ಯಮವೆಂದು ಆ ಕಾಲದ ಒಂದು ಲೋಕಭಾಷೆಯಾದ ಮಾಗಧಿಯನ್ನು ಸ್ವೀಕರಿಸಿದನು. ಅಲ್ಲದೆ ಧರ್ಮೋಪದೇಶಕ್ಕೆಂದು ಲೋಕಭಾಷೆಯನ್ನೇ ಉಪಯೋಗಿಸುವುದೆಂದು ತನ್ನ ಶಿಷ್ಯರಿಗೆ ಆದೇಶವನ್ನೂ ನೀಡಿದನು. ಆದರೆ ಬೌದ್ಧ ಪರಂಪರೆಯ ಸಾಹಿತ್ಯಿಕರು ಈ ಆದೇಶವನ್ನು ಸಂಪೂರ್ಣವಾಗಿ ಪಾಲಿಸಲು ಸಾಧ್ಯವಾಗಲಿಲ್ಲ. ಅವರು ಪಾಲಿ ಭಾಷೆಯೊಂದರಲ್ಲಿಯೇ ಮೋಹಿತರಾದರು. ಇಷ್ಟೇ ಅಲ್ಲ. ಅವರು ಸಿಂಹಲ, ಶ್ಯಾಮ, ಬ್ರಹ್ಮದೇಶ ಮೊದಲಾದ ದೂರ ದೇಶಗಳಲ್ಲಿ ಹೋಗಿಯೂ ಕೂಡ ಅಲ್ಲಿ ತಮ್ಮ ಸಾಹಿತ್ಯದ ಮಾಧ್ಯಮವನ್ನೂ ಪಾಲಿ ಭಾಷೆಯನ್ನೇ ಇಟ್ಟುಕೊಂಡರು. ಅಲ್ಲಿಯ ದೇಶ ಭಾಷೆಗಳಿಗೆ–ಬದುಕಿ ಬಾಳುತ್ತಿರುವ ಜನಪದ ಭಾಷೆಗಳಿಗೆ–ತಮ್ಮ ಸಾಹಿತ್ಯದಲ್ಲಿ ಯಾವ ಸ್ಥಾನವನ್ನೂ ಕಲ್ಪಿಸಿಕೊಡಲಿಲ್ಲ.

ಜೈನ ತೀರ್ಥಂಕರ ಭಗವಾನ್ ಮಹಾವೀರನು ಲೋಕೋಪಕಾರದ ಭಾವನೆಯಿಂದ ಆ ಸಮಯದ ಸುಬೋಧ ವಾಣಿಯಾದ ಅರ್ಧಮಾಗಧಿ ಭಾಷೆಯನ್ನು ಉಪಯೋಗಿಸಿದನು. ಹಾಗೆಯೇ ಅವನ ಗಣಧರರೂ ಕೂಡ ಅದೇ ಭಾಷೆಯಲ್ಲಿ ಅವನ ಉಪದೇಶದ ಸಂಕಲನ ಮಾಡಿದರು. ಆದ್ದರಿಂದ ಆ ಭಾಷೆ. ಆ ಸಾಹಿತ್ಯದ ವಿಷಯದಲ್ಲಿ ಜೈನರಲ್ಲಿ ಯಾವಾಗಲೂ ಆದರ ಭಾವನೆಯು ಸ್ಥಿರವಾಗಿ ನೆಲೆಸಿತು. ಆದರೆ ಅವರ ಈ ಭಾವನೆಯು, ವಿವಿಧ ಲೋಕಭಾಷೆಗಳಿಗೆ ಯೋಗ್ಯ ಸ್ಥಾನಮಾನಗಳನ್ನು ನೀಡಲಿಕ್ಕೆ ಎಂದೂ ಬಾಧಕವಾಗಲಿಲ್ಲ. ಜೈನಾಚಾರ್ಯರು ಧರ್ಮ ಪ್ರಚಾರಕ್ಕೆಂದು ಯಾವ ಯಾವ ಕಾಲಕ್ಕೆ ಎಲ್ಲಿ ಎಲ್ಲಿ ಹೋದರೋ, ಅಲ್ಲೆಲ್ಲ ಅವರು ಅಲ್ಲಿಯ ಲೋಕಭಾಷೆಯನ್ನೇ ತಮ್ಮ ಸಾಹಿತ್ಯ ರಚನೆಯ ಮಾಧ್ಯಮವೆಂದು ಸ್ವೀಕರಿಸಿದರು. ಇದೇ ಕಾರಣದಿಂದ ಜೈನ ಸಾಹಿತ್ಯದಲ್ಲಿಯೂ ಕೂಡ ಭಿನ್ನ ಭಿನ್ನ ಪ್ರದೇಶಗಳ ಭಿನ್ನ ಭಿನ್ನ ಕಾಲದಲ್ಲಿರುವ

ಶೌರಸೇನೀ, ಮಹಾರಾಷ್ಟ್ರೀ, ಅಪಭ್ರಂಶ ಆದಿ ಪ್ರಾಕೃತ ಭಾಷೆಗಳ ಪೂರ್ಣ ಪ್ರತಿನಿ-
ಧಿತ್ವವು ನೋಡಲಿಕ್ಕೆ ದೊರೆಯುತ್ತದೆ. ಹಿಂದಿ, ಗುಜರಾತೀ ಮೊದಲಾದ ಆಧುನಿಕ
ಭಾಷೆಗಳ ಪ್ರಾಚೀನತಮ ಸಾಹಿತ್ಯವು ಜೈನರ ಸಾಹಿತ್ಯವಾಗಿಯೇ ಲಭಿಸುತ್ತದೆ. ಇಷ್ಟೇ
ಅಲ್ಲ, ದಕ್ಷಿಣ ಭಾರತದ ದೂರದ ಪ್ರದೇಶಗಳಾದ ತಮಿಳು ಮತ್ತು ಕನ್ನಡ ಭಾಷೆಗಳಲ್ಲಿ
ಆರಂಭ ಕಾಲದ ಪ್ರಾಚೀನ ಸಾಹಿತ್ಯವನ್ನು ರಚಿಸಿದ ಶ್ರೇಯಸ್ಸು ಜೈನರಿಗೇನೇ ಸಲ್ಲು
ತ್ತದೆ. ಈ ಪ್ರಕಾರ ಜೈನರು ಎಂದೂ ಕೂಡ ಯಾವ ಒಂದು ಪ್ರಾಂತೀಯ ಭಾಷೆಯ
ಪಕ್ಷವನ್ನು ವಹಿಸಿಲ್ಲ. ಅಲ್ಲದೆ ಯಾವಾಗಲೂ ದೇಶದಲ್ಲೆಲ್ಲ ಪ್ರಚಲಿತವಿರುವ ವಿವಿಧ
ಭಾಷೆಗಳನ್ನೆಲ್ಲ ಸಮಾನ ಆದರಭಾವದಿಂದ ಸ್ವೀಕರಿಸಿದ್ದಾರೆ, ತಮ್ಮದನ್ನಾಗಿ ಮಾಡಿ
ಕೊಂಡಿದ್ದಾರೆ. ಈ ಮಾತಿಗೆ ಜೈನರ ವಿವಿಧ ಭಾಷೆಗಳಲ್ಲಿಯ ವಿಶಾಲ ಸಾಹಿತ್ಯವು
ಸಾಕ್ಷಿಯಾಗಿದೆ.

ಜನತೆಯ ಧಾರ್ಮಿಕ ನಂಬುಗೆಗಳನ್ನು ಕೂಡ ಜೈನ ಧರ್ಮವು ಉಪೇಕ್ಷಿಸಿಲ್ಲ.
ಅವುಗಳನ್ನು ಸ್ವೀಕರಿಸುವಾಗ ವಿಧಿಗನುಸರಿಸಿ ತಮ್ಮ ಪರಂಪರೆಯಲ್ಲಿ ಯಥಾಸ್ಥಾನದಲ್ಲಿ
ಸೇರಿಸಿಕೊಂಡಿದ್ದಾರೆ. ರಾಮ–ಲಕ್ಷ್ಮಣರು ಹಾಗೂ ಕೃಷ್ಣ–ಬಲದೇವರು ಜನಾಂಗದ
ಆದರಣೀಯ ವ್ಯಕ್ತಿಗಳೆನಿಸಿದ್ದಾರೆ. ಅಲ್ಲದೆ ಅವರನ್ನು ಜನರು ಅವತಾರ ಪುರುಷರೆಂದು
ಗೌರವಿಸುತ್ತಾರೆ. ಜೈನರೂ ಸಹ ತೀರ್ಥಂಕರರೊಡನೆಯೇ ಇವರನ್ನು ತ್ರಿಷಷ್ಠಿ ಶಲಾಕಾ
ಪುರುಷರಲ್ಲಿ ಸಮಾವೇಶಗೊಳಿಸಿದ್ದಾರೆ, ಆದರಣೀಯ ಸ್ಥಾನವನ್ನಿತ್ತು ತಮ್ಮ ಪುರಾಣ
ಗಳಲ್ಲಿ ಅವರ ಚರಿತ್ರೆಗಳನ್ನು ವಿಸ್ತಾರವಾಗಿ ವರ್ಣಿಸಿದ್ದಾರೆ. ಜೈನ ಪುರಾಣಗಳನ್ನು
ಆಳವಾಗಿ ಅಭ್ಯಾಸಮಾಡದೆ ಇದ್ದವರೂ ಗೌರವಭಾವವಿಲ್ಲದವರೂ ಜೈನರ ಈ ಕ್ರಮ
ವನ್ನು ಕಂಡು ನಗುತ್ತಾರೆ. ಈ ಭಾರತೀಯ ಮಹಾಪುರುಷರನ್ನು ಜೈನಮತಾವಲಂಬಿ
ಗಳನ್ನಾಗಿ ಮಾರ್ಪಡಿಸಿದ್ದಾರೆನ್ನುವರು; ವ್ಯರ್ಥವಾಗಿ ಕಥೆಗಳಲ್ಲಿ ಹೆಚ್ಚು ಕಡಿಮೆ
ಮಾಡಿದ್ದಾರೆಂದು ತಿಳಿಯುವರು, ಆದರೆ ಎಷ್ಟೊಂದು ಆತ್ಮೀಯತೆಯಿಂದ ಜೈನರು
ಅವರನ್ನು ತಮಗೂ ಪೂಜ್ಯರನ್ನಾಗಿ ಮಾಡಿಕೊಂಡಿದ್ದಾರೆ, ಮತ್ತು ಈ ರೀತಿಯಿಂದ
ತಮ್ಮ ಹಾಗೂ ಅನ್ಯ ಧರ್ಮೀಯರಾದ ದೇಶಬಾಂಧವರ ಭಾವನೆಗಳನ್ನು ರಕ್ಷಿಸಿದ್ದಾರೆ
–ಎಂಬುದರ ಕಡೆಗೆ ಕೆಲವರ ದೃಷ್ಟಿಯು ಹರಿಯುವುದಿಲ್ಲ. ಇಷ್ಟೇ ಅಲ್ಲ, ರಾವಣ ಮತ್ತು
ಜರಾಸಂಧರಂಥ ಅನಾರ್ಯ ರಾಜರನ್ನು ವೈದಿಕ ಪರಂಪರೆಯ ಪುರಾಣಗಳು ಕೆಲ
ವೊಂದು ತುಚ್ಛ ಭಾವನೆಯಿಂದ ಚಿತ್ರಿಸಿವೆ. ಇಂಥವರನ್ನು ಕೂಡ ಜೈನಪುರಾಣಗಳು
ಉಚ್ಚ ಹಾಗೂ ಗೌರವಾನ್ವಿತ ರೂಪಗಳಲ್ಲಿ ಚಿತ್ರಿಸಿ, ಅನಾರ್ಯ ಜಾತಿಯ ಜನರ
ಭಾವನೆಗಳೂ ಕೂಡ ನೋಯದಂತೆ ನೋಡಿಕೊಂಡಿದ್ದಾರೆ. ಈ ನಾರಾಯಣನ ಶತ್ರು
ವಿಗೂ ಕೂಡ ಅವರು ಪ್ರತಿ ನಾರಾಯಣನೆಂಬ ಉಚ್ಚಪದವನ್ನು ಇತ್ತು, ಮೇಲೆತ್ತಿ
ದ್ದಾರೆ. ರಾವಣನನ್ನು ಹತ್ತುಮುಖಗಳುಳ್ಳ ರಾಕ್ಷಸನೆಂದು ಹೇಳದೆ, ವಿದ್ಯಾಧರ
ವಂಶೀಯ ಶ್ರೇಷ್ಠ ರಾಜನೆಂದು ಮನ್ನಿಸಿದ್ದಾರೆ. ಅವನ ಸ್ವಾಭಾವಿಕವಾದ ಒಂದು
ಮುಖವು ಕೊರಳಲ್ಲಿರುವ ಹಾರದ ನವರತ್ನಗಳಲ್ಲಿ ಪ್ರತಿಬಿಂಬಿಸಿದುದರಿಂದ ಜನರು ಅವ

ಕಾಲಕ್ಕೆ ತಕ್ಕಂತೆ ರೂಪುಗೊಂಡಿದೆ. ಹೀಗಾಗಿ ಅದರಲ್ಲಿ ಅನೇಕ ಪರಸ್ಪರ ವಿರೋಧ ಸಂಗತಿಗಳೂ ಕೂಡ ಸಮಾವೇಶಗೊಂಡಿವೆ—ಹೀಗೆ ಕೆಲವು ಜನರು ಹೇಳುತ್ತಾರೆ. ಆದರೆ ಗಂಭೀರವಾಗಿ ವಿಚಾರ ಮಾಡುವುದರಿಂದ ಈ ಅನುಮಾನವು ಆಧಾರ ರಹಿತ ವೆಂದು ಸಿದ್ಧವಾಗುತ್ತದೆ. ಯಾಕೆಂದರೆ ಯಾವ ಹೊಸ ವಿಚಾರಗಳನ್ನೂ ಸಹ ಜೈನರು ವ್ಯಾವಹಾರಿಕ ಅನುಕೂಲತೆಗಾಗಿ ಸಮಾವೇಶಗೊಳಿಸಿಕೊಂಡಿಲ್ಲ. ಅವೆಲ್ಲ ಜೈನ ಧರ್ಮಕ್ಕೆ ಆಧಾರ ಭೂತವೆನಿಸುವ ದಾರ್ಶನಿಕ ಹಾಗೂ ಸೈದ್ಧಾಂತಿಕ ತಳಹದಿಯಿಂದಲೇ ಉತ್ಪನ್ನವಾದದ್ದುಂಟು. ಈ ಸಂಗತಿಯನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವುದಕ್ಕಾಗಿ ಜೈನದರ್ಶನದ ಮೇಲೆ ಇಲ್ಲಿ ಒಂದು ವಿಹಂಗಮ ದೃಷ್ಟಿಯನ್ನು ಬೀರುವುದು ಅನುಚಿತ ವಾಗಲಿಕ್ಕಿಲ್ಲ.

ವೇದಾಂತ ದರ್ಶನದಲ್ಲಿ ಕೇವಲ ಚಿದಾತ್ಮಕ ತತ್ವ ಒಂದನ್ನೇ ಸ್ವೀಕರಿಸಲಾಗಿದೆ. ಅದಕ್ಕೆ ಬ್ರಹ್ಮವೆಂದು ಹೇಳಲಾಗುತ್ತದೆ. ಇನ್ನುಳಿದ ದೃಶ್ಯ ಜಗತ್ತಿನ ಪದಾರ್ಥಗಳಿಗೆಲ್ಲ ಅಸತ್ ಅಥವಾ ಮಾಯಾಜಾಲವೆಂದು ಸಾರಿದೆ. ಇನ್ನೊಂದು ದರ್ಶನದಲ್ಲಿ ಕೇವಲ ಭೌತಿಕ ತತ್ವಗಳಿಗೇನೇ ಸತ್ ಎಂದು ಸ್ವೀಕರಿಸಲಾಗಿದೆ. ಅಲ್ಲದೆ ಅವುಗಳ ಸಮ್ಮಿಶ್ರಣ ದಿಂದ ಚೈತನ್ಯ ಗುಣದ ಉತ್ಪತ್ತಿಯೆಂದು ಮನ್ನಿಸಲಾಗಿದೆ. ಈ ಮತಕ್ಕೆ ಚಾರ್ವಾಕ ದರ್ಶನವೆಂದು ಹೇಳುವರು. ಜೈನ ದರ್ಶನವು ಜೀವ ಮತ್ತು ಅಜೀವ ರೂಪದಿಂದ ಎರಡೂ ತತ್ವಗಳನ್ನೂ ಸ್ವೀಕರಿಸಿದೆ. ಇದರಲ್ಲಿ ಮೌಲಿಕ ತತ್ವವು ಒಂದೇ ಅಲ್ಲ, ಆರು ದ್ರವ್ಯಗಳೆಂದು ಸ್ವೀಕರಿಸಲಾಗಿದೆ. ಸತ್ತಾ ಗುಣವಿದ್ದುದೆಲ್ಲ ದ್ರವ್ಯವೆನಿಸಿದೆ, ಸತ್ತೆಯು ಸ್ವತಃ ತ್ರಿಗುಣಾತ್ಮಕವಾಗಿದೆ. ಉತ್ಪಾದ, ವ್ಯಯ ಮತ್ತು ಧ್ರೌವ್ಯವೆಂಬುವೇ ಆ ಮೂರು ಗುಣಗಳಾಗಿವೆ. ವೇದಾಂತದರ್ಶನದಲ್ಲಾಗಲಿ, ಚಾರ್ವಾಕದರ್ಶನದಲ್ಲಾಗಲಿ ದ್ರವ್ಯಗಳ ಪೂರ್ಣ ಸತ್ತೆಯ ನಿರೂಪಣೆಯು ಕಂಡುಬರುವುದಿಲ್ಲ. ದ್ರವ್ಯಗಳಲ್ಲಿ ವೇದಾಂತ ಸಮ್ಮತ ಕೂಟಸ್ಥ ನಿತ್ಯತೆಯೂ ಸಿದ್ಧವಾಗುವುದಿಲ್ಲ; ಅದರಂತೆ ಬೌದ್ಧ ಸಿದ್ಧಾಂತದ ಕ್ಷಣಿಕ ರೂಪವೂ ಕಂಡುಬರುವುದಿಲ್ಲ. ಸೃಷ್ಟಿಯಲ್ಲಿ ಚೈತನ್ಯ ಗುಣಯುಕ್ತ ಆತ್ಮ ತತ್ವವೂ ಇದೆ, ಚೈತನ್ಯವಿಲ್ಲದ ಮೂರ್ತಿಮಾನ್ ಭೌತಿಕ ಪದಾರ್ಥವು ಇದೆ, ಅಲ್ಲದೆ ಅಮೂರ್ತಿಕ ಕಾಲ, ಆಕಾಶ ಆದಿ ತತ್ವಗಳೂ ಇವೆ. ಇವೆಲ್ಲವೂ ದ್ರವ್ಯ ಗುಣ—ಪರ್ಯಾಯಾತ್ಮಕವಾಗಿವೆ. ಅವುಗಳ ಗುಣಾತ್ಮಕ ಅವಸ್ಥೆಯಿಂದಾಗಿ ಅವುಗಳಲ್ಲಿ ಧ್ರುವತ್ವವಿದೆ, ಪರ್ಯಾಯಾತ್ಮಕತೆಯಿಂದ ಅವುಗಳಲ್ಲಿ ಉತ್ಪತ್ತಿ ಹಾಗೂ ವಿನಾಶ ರೂಪ ಅವಸ್ಥೆಗಳೂ ಕಂಡುಬರುತ್ತವೆ. ಜೈನಧರ್ಮದ ಈ ದಾರ್ಶನಿಕ ತತ್ವಜ್ಞಾನ ದಲ್ಲಿಯೇ ಅದರ ವ್ಯಾಪಕ ದೃಷ್ಟಿಯು ಕಂಡುಬರುತ್ತದೆ. ಅಲ್ಲದೆ ಇದೇ ವ್ಯಾಪಕ ದೃಷ್ಟಿ ಯಿಂದ ವಸ್ತುವಿಚಾರಕ್ಕಾಗಿ ಅದು ತನ್ನ ಸ್ಯಾದ್ವಾದ ಮತ್ತು ಅನೇಕಾಂತರೂಪ ನ್ಯಾಯವನ್ನು ಸ್ಥಾಪಿಸಿದೆ. ಈ ನ್ಯಾಯವನ್ನು ತಿಳಿಸಿಕೊಡುವುದಕ್ಕಾಗಿ ತಮ್ಮ ಮುಂದೆ ಇರುವ ಈ 'ಟೇಬಲ್'ವನ್ನೇ ಗಮನಿಸೋಣ. ಇದನ್ನು ನಾವು ಚೈತನ್ಯ ಹೀನವನ್ನಾಗಿ ಕಾಣುತ್ತೇವೆ. ಅದರಿಂದ ಇದಕ್ಕೆ ಜಡ ತತ್ವವೆಂದು ತಿಳಿಯುತ್ತೇವೆ. ಆದರೆ ಜಡ ತತ್ವ

ಗಳಲ್ಲಿ ಇದು ಅಮೂರ್ತವಲ್ಲ. ಮೂರ್ತಿಮಾನ್‌ವಾಗಿದೆ. ಆದಕ್ಕಾಗಿ ಇದಕ್ಕೆ ಪುದ್ಗಲ
ವೆಂದು ನಾವು ಹೇಳಬಲ್ಲೆವು. ಪುದ್ಗಲದ ಅನೇಕ ಪ್ರಕಾರಗಳಲ್ಲಿಯೇ ಒಂದಾದ ಕಟ್ಟಿಗೆ
ಯಿಂದ ಮಾತ್ರ ಇದನ್ನು ಮಾಡಲಾಗಿದೆ. ಆದರಿಂದ ಇದಕ್ಕೆ ಕಟ್ಟಿಗೆಯೆಂದು ಹೇಳ-
ಲಾಗುತ್ತದೆ. ಆದರೆ ಕಟ್ಟಿಗೆಯಿಂದ ಮಾಡಿದ ಕವಾಟು ಕುರ್ಚಿ. ಬಾಕು ಬಾಗಿಲು
ಮೊದಲಾದ ವಿವಿಧ ರೂಪಗಳಲ್ಲಿ ಇದಕ್ಕೊಂದು ವಿಶಿಷ್ಟ ಆಕಾರವಿರುವುದರಿಂದ ಇದಕ್ಕೆ
'ಟೇಬಲ್' ಎಂದು ಹೇಳಿದೆವು. ಈ 'ಟೇಬಲ್' ಗಳಲ್ಲಿಯೂ ಎತ್ತರ, ಅಗಲ ಆಕಾರ,
ಬಣ್ಣಗಳಿಂದ ಅನೇಕ ಪ್ರಕಾರಗಳಿಷ್ಟೇ ಅಲ್ಲ. ಅನಂತ ವಿಧಗಳೂ ಆಗುತ್ತವೆ. ಅಪೇ-
ಕ್ಷಿತ ದೃಷ್ಟಿಯಿಂದ ನೋಡಿದಾಗ ಇದೇ 'ಟೇಬಲ್ಲು' ನಮಗೊಮ್ಮೆ ಸಣ್ಣದಾಗಿ ಕಾಣು
ತ್ತದೆ; ಮತ್ತೊಮ್ಮೆ ದೊಡ್ಡದಾಗಿ ಕಾಣುತ್ತದೆ; ಇನ್ನೊಂದು ದೃಷ್ಟಿಯಿಂದ ಎತ್ತರ
ವಾಗಿ ಕಂಡರೆ ಮತ್ತೊಂದು ದೃಷ್ಟಿಗೆ ಕುಳ್ಳವೆನಿಸುತ್ತದೆ. ಈ ಪ್ರಕಾರ ನಾವು ಯಾವಾಗ
ಇದನ್ನು ಮೇಲೆ ಹೇಳಿದ ದ್ರವ್ಯಾತ್ಮಕ. ಗುಣಾತ್ಮಕ. ಪರ್ಯಾಯಾತ್ಮಕ ನಾಮಗಳಿಂದ
ಹೇಳುವೆವೋ ಆಗ ಅದರಲ್ಲಿ ವಾಸ್ತವಿಕತೆಯ ದೃಷ್ಟಿಯಿಂದ ಸತ್ಯದ ಏಕಾಂಶದ ಕಿರಣ
ಮಾತ್ರ ಕಂಡುಬರುತ್ತದೆ. ಆದರಿಂದ ತತ್‌ಕಾಲದ ನಮ್ಮ ಕಾರ್ಯವೂ ನಡೆದು
ಹೋಗುತ್ತದೆ. ಆದರೆ ನಾವು ಇದೇ ಆಂಶಿಕ ತಥ್ಯವನ್ನು ಪರಿಪೂರ್ಣ ಸತ್ಯವೆಂದು
ತಿಳಿದುಕೊಂಡಲ್ಲಿ ಮಾತ್ರ ಅದು ನಮ್ಮ ಭ್ರಮೆಯೆನಿಸುವುದು. ನಾನಾ ಕಾಲಗಳಲ್ಲಿ
ನಾನಾ ದೇಶಗಳಲ್ಲಿ ನಾನಾ ಮನುಷ್ಯರಲ್ಲಿ ವಸ್ತುಗಳನ್ನು ನಾನಾ ಪ್ರಕಾರಗಳಿಂದ
ಕಾಣಲಾಗುತ್ತಿದೆ, ತಿಳಿಯಲಾಗುತ್ತಿದೆ, ವರ್ಣಿಸಲಾಗುತ್ತಿದೆ. ಆದರಿಂದ ನಾವು ಆ ಎಲ್ಲ
ಕಥನಗಳನ್ನೂ ವರ್ಣನೆಗಳನ್ನೂ ಸಮರ್ಪಕವಾಗಿ ತಿಳಿದುಕೊಂಡು. ಅವುಗಳ ದೃಷ್ಟಿ
ಕೋಣಗಳನ್ನು ಅರ್ಥಮಾಡಿಕೊಂಡು, ಅವುಗಳನ್ನು ನಮ್ಮ ಜ್ಞಾನದಲ್ಲಿ ಯಥಾಸ್ಥಾನ
ಸಮಾವೇಶ ಮಾಡಿಕೊಳ್ಳುವ ಅವಶ್ಯಕತೆಯೂ ಇದೆ. ನಾವು ಹೀಗೆ ಮಾಡದೆ ಇದ್ದರೆ
ಹೆಜ್ಜೆ ಹೆಜ್ಜೆಗೂ ನಮಗೆ ವಿರೋಧವು ಕಂಡು ಬರುತ್ತದೆ. ನಾವು ಆ ಭಿನ್ನ ಭಿನ್ನ ದೃಷ್ಟಿ
ಕೋಣಗಳನ್ನು ತಿಳಿದುಕೊಂಡು, ಅವುಗಳಲ್ಲಿ ಸಾಮಂಜಸ್ಯ ರೂಪವನ್ನು ಸ್ಥಾಪಿಸಿದಲ್ಲಿ
ನಮಗೆ ವಿಶಾಲ ಸತ್ಯದ ದರ್ಶನವಾಗುವುದು. ಅದು ಈ ಜಗತ್ತಿನ ವಾಸ್ತವಿಕ ಸತ್ಯ
ವಾಗಿದೆ. ಇದೇ ಉದ್ದೇಶದಿಂದ ಜೈನಾಚಾರ್ಯರು ದೇಶ ಮತ್ತು ಕಾಲ, ದ್ರವ್ಯ
ಹಾಗೂ ಭಾವಗಳಿಗೆ ಅನುಸರಿಸಿ ವಸ್ತುವಿನ ವಿಚಾರ ಮಾಡುವುದನ್ನು ಒತ್ತಿ ಹೇಳು
ತ್ತಾರೆ. ಆದರಿಂದ ಒಬ್ಬ ಜೈನಾಚಾರ್ಯರು ಸಮಸ್ತ ಏಕಾಂತರೂಪ ಮಿಥ್ಯಾದೃಷ್ಟಿ
ಗಳ ಸಮನ್ವಯದಿಂದ ಸಮ್ಯಗ್ದೃಷ್ಟಿಯ ಉತ್ಪತ್ತಿಯೆಂದು ಸ್ವೀಕರಿಸುತ್ತಾರೆ.

ಜೈನ ಧರ್ಮದಲ್ಲಿ ಅಹಿಂಸೆಗೆ ಬಹು ಪ್ರಾಧಾನ್ಯತೆಯನ್ನು ಕೊಡಲಾಗಿದೆ. ಅದೂ
ಕೂಡ ಮೇಲೆ ಹೇಳಿದ ತತ್ವಚಿಂತನೆಯ ಪರಿಣಾಮವೇ ಆಗಿದೆ. ಸಂಸಾರದಲ್ಲಿ ಒಂದಲ್ಲ,
ಅನೇಕ, ಅನಂತ ಪ್ರಾಣಿಗಳಿವೆ; ಮತ್ತು ಅವುಗಳಲ್ಲಿ ಪ್ರತಿಯೊಂದರಲ್ಲಿಯೂ ಜೀವಾ-
ತ್ಮನಿದ್ದಾನೆ. ಈ ಆತ್ಮಗಳು ತಮ್ಮ ತಮ್ಮ ಕರ್ಮಬಂಧದ ಬಲದಿಂದ ಜೀವನದ ನಾನಾ
ಸ್ಥಿತಿಗಳಲ್ಲಿ, ನಾನಾ ಯೋನಿಗಳಲ್ಲಿ, ವಿವಿಧ ಪ್ರಕಾರದ ಶರೀರಗಳಲ್ಲಿ ಹಾಗೂ ಅನೇಕ

ಪ್ರಕಾರದ ಜ್ಞಾನಾತ್ಮಕ ಅವಸ್ಥೆಗಳಲ್ಲಿ ಇದ್ದುದು ಕಂಡು ಬರುತ್ತದೆ. ಆದರೆ ಈ ಎಲ್ಲ ಆತ್ಮಗಳಲ್ಲಿಯೂ ಜ್ಞಾನಾತ್ಮಕ ವಿಕಾಸದ ಮುಖಾಂತರ ಪರಮಾತ್ಮ ಪದವನ್ನು ಪಡೆಯುವ ಯೋಗ್ಯತೆಯೂ ಇದೆ. ಈ ಪ್ರಕಾರ ಶಕ್ತಿರೂಪದಿಂದ ಎಲ್ಲ ಆತ್ಮಗಳೂ ಸಮಾನವಾಗಿವೆ. ಅಂದಮೇಲೆ ಅವುಗಳಲ್ಲಿ ಪರಸ್ಪರ ಸನ್ಮಾನ, ಸದ್ಭಾವ ಹಾಗೂ ಸಹ ಯೋಗದ ವ್ಯವಹಾರವಿರಲಿಕ್ಕೆಬೇಕು. ಇದೇ ಜೈನಧರ್ಮದ ಜನತಂತ್ರಾತ್ಮಕತೆಯಾಗಿದೆ. ಇದನ್ನು ಇಂದಿನ ಜನತಂತ್ರಾತ್ಮಕದಿಂದ ಬೇರೆಯಾಗಿಟ್ಟು ನಿರ್ದಿಷ್ಟಗೊಳಿಸಿ ಹೇಳುವದಾದಲ್ಲಿ ಪ್ರಾಣಿತಂತ್ರಾತ್ಮಕವೆಂದು ಹೇಳುವುದು ಹೆಚ್ಚು ಉಚಿತವೆನಿಸುತ್ತದೆ. ಯಾಕಂದರೆ ಜನತಂತ್ರಾತ್ಮಕವು ಕೇವಲ ಮನುಷ್ಯರಿಗೆ ಮಾತ್ರ ಸೀಮಿತವಾಗಿದೆ. ಅದನ್ನು ಇನ್ನೂ ಹೆಚ್ಚಾಗಿ ವಿಸ್ತರಿಸಿ, ವಿಶಾಲಗೊಳಿಸಿ. ಜೈನಧರ್ಮವು ಪ್ರಾಣಿಮಾತ್ರವೆಲ್ಲಕ್ಕೂ ಅದರ ಸದಸ್ಯತ್ವವನ್ನು ನೀಡುತ್ತದೆ. ಈ ವಸ್ತು-ವಿಚಾರದಿಂದ ಸ್ವಾಭಾವಿಕವಾಗಿಯೇ ಸಮಸ್ತ ಪ್ರಾಣಿಗಳಲ್ಲಿ ಪರಸ್ಪರ-ತನ್ನ ಹಾಗೂ ಅನ್ಯರ ಹೀಗೆ ಇಬ್ಬರದೂ ರಕ್ಷಣೆಯ ಭಾವನೆಯು ಉತ್ಪನ್ನವಾಗುತ್ತದೆ. ಎಲ್ಲಿ ಎಲ್ಲರೂ ಒಂದೇ ಉದ್ದಿಷ್ಟಸ್ಥಾನವನ್ನು ಮುಟ್ಟುವ-ದಿದೆಯೋ ಮತ್ತು ಅವರೆಲ್ಲರೂ ಒಂದೇ ಮಾರ್ಗದೊಳಗೆ ನಡೆಯುವ ವಧಿಕರಾಗಿದ್ದಾ-ರೆಯೋ ಆಗ ಅವರಲ್ಲಿ ಪರಸ್ಪರ ಸಹಾಯಕ ಭಾವನೆಯು ಇರುವುದು ಸ್ವಾಭಾವಿಕವಿದೆ. ಈವಿವೇಕದ ಹೊರೆಯು ಮನುಷ್ಯನ ಮೇಲೆ ಎಲ್ಲ ಪ್ರಾಣಿಗಳಿಗಿಂತ ಹೆಚ್ಚಾಗಿದೆ. ಯಾಕಂದರೆ ಮನುಷ್ಯನಲ್ಲಿ ಅನ್ಯ ಎಲ್ಲ ಪ್ರಾಣಿಗಳಿಗಿಂತಲೂ ಹೆಚ್ಚು ಬುದ್ಧಿ ಹಾಗೂ ಜ್ಞಾನದ ವಿಕಾಸವಾಗಿದೆ. ಒಬ್ಬನ ಹತ್ತಿರ ಮೋಟಾರಗಾಡಿಯು ಇದೆ, ಮತ್ತು ಇನ್ನೊಬ್ಬನು ಕಾಲು ನಡಿಗೆಯಿಂದ ನಡೆಯುತ್ತಿದ್ದಾನೆ. ಅಂದಮೇಲೆ ಮೋಟಾರಗಾಡಿಯವನು ನಡೆಯುವವನನ್ನು ಮೋಟಾರಿನಲ್ಲಿ ಕೂಡಿಸಿಕೊಳ್ಳಬೇಕಾಗುತ್ತದೆ. ಒಂದು ವೇಳೆ ಇದು ಆಗದೆ ಹೋದರೆ ಹೋಗಲಿ. ಅದಕ್ಕೆ ಯಾವುದಾದರೂ ಒಂದು ಕಾರಣವಾಗಿದ್ದೀತು. ಆದರೆ ಮೋಟಾರಿನವನು ಉನ್ಮಾದದಿಂದ ಕಾಲುನಡಿಗೆಯವನನ್ನು ತನ್ನ ಮೋಟಾರಿನ ಕೆಳಗೆ ಹಾಕಿ ಮುಂದರಿಯುವ ಕಾರ್ಯವು ಮಾತ್ರ ಆಗಕೂಡದು. ಅಹಿಂಸಾ ಸಿದ್ಧಾಂತದ ತತ್ವವು ಮತ್ತು ಮರ್ಮವು ಇದೇ ಆಗಿದೆ.

ಆದರೆ ಜೀವನದಲ್ಲಿ ಬಹಳಷ್ಟು ವಿಷಮ ಪರಿಸ್ಥಿತಿಯಿದೆ. ಆದಕ್ಕೂ ಹೆಚ್ಚಾಗಿ ಪ್ರಾಣಿಗಳಲ್ಲಿ ವಿರೋಧಾತ್ಮಕ ಶಕ್ತಿಗಳೂ ಇವೆ, ವೃತ್ತಿಗಳೂ ಇವೆ. ಇವುಗಳ ಮಧ್ಯದಲ್ಲಿ ಅಹಿಂಸಾ ಸಿದ್ಧಾಂತವನ್ನು ಪೂರ್ಣರೂಪದಿಂದ ಪಾಲನ ಮಾಡುವುದು ಬಹು ಕಷ್ಟಕರವಾಗಿದೆ. ಜೈನಧರ್ಮವು ಮನುಷ್ಯನ ಈ ವಿಷಮ ಪರಿಸ್ಥಿತಿಯನ್ನೆಲ್ಲ ಸ್ವೀಕರಿಸಿ ಮುಂದರಿಯುತ್ತದೆ. ಅದರಿಂದ ಅದು ಅಹಿಂಸಾ ಪಾಲನೆಯ ರೀತಿ, ನೀತಿಗಳಲ್ಲಿ ತರತಮ ಪ್ರಣಾಲಿಗಳನ್ನು ಸ್ಥಾಪಿಸಿದೆ. ಗೃಹಸ್ಥನು ಒಂದು ಸೀಮೆಯವರೆಗೆ ಮಾತ್ರ ಅಹಿಂಸೆಯನ್ನು ಪಾಲಿಸಲು ಸಮರ್ಥನಾಗುತ್ತಾನೆ. ಅದಕ್ಕಾಗಿ ಅವನಿಗಾಗಿ ಅಣುವ್ರತದ ವಿಧಾನವನ್ನು ರೂಪಿಸಲಾಗಿದೆ. ಅದಕ್ಕಿಂತ ಮುಂದಿನದಾದ ಮಹಾವ್ರತದ ಪರಿಪಾಲನೆಯು ಮುನಿಗಳಿಗಾಗಿ ವಿಹಿತಗೊಳಿಸಲಾಗಿದೆ. ಗೃಹಸ್ಥ ಮಾರ್ಗವೂ ಬಹು

ವಿಶಾಲವಾಗಿದೆ. ಅವನಿಗೂ ತನ್ನ ವಿವಿಧ ಪರಿಸ್ಥಿತಿಗಳಿವೆ. ಅದರಿಂದ ಅವರಲ್ಲಿಯೂ ಕೂಡ ಗೃಹಸ್ಥರ ಹನ್ನೊಂದು ವರ್ಗಗಳನ್ನು ಸ್ಥಾಪಿಸಲಾಗಿದೆ. ಅಹಿಂಸೆಯೂ ಕೂಡ ತನ್ನ ರೂಪದಿಂದ ಒಂದೇ ರೂಪದಲ್ಲಿ ಇಲ್ಲ. ಭಾವನಾ ಹಾಗೂ ಕ್ರಿಯಾರೂಪದಿಂದ ಅದೂ ಸಹ ಎರಡು ಪ್ರಕಾರವಾಗಿದೆ. ಕ್ರಿಯಾರೂಪದಲ್ಲಿಯೂ ಕೂಡ ಪ್ರಯೋಜನ-ಕ್ಕನುಸರಿಸಿ. ಅನೇಕ ಪ್ರಕಾರಗಳು ಆಗುತ್ತವೆ. ಮನುಷ್ಯನು ನಡೆದಾಡುವುದರಲ್ಲಿಯೂ ಮನೆಯ ಅಂಗಳ ಕಸ ಗುಡಿಸುವುದರಲ್ಲಿಯೂ ಅವನಿಂದ ಹಿಂಸೆಯು ಆಗುತ್ತದೆ. ಕೃಷಿ, ವಾಣಿಜ್ಯ ಮೊದಲಾದ ವ್ಯವಸಾಯಗಳಲ್ಲಿಯೂ ಜೀವ ಹಿಂಸೆಯಾಗದೆ ನಿಲ್ಲುವುದಿಲ್ಲ. ಸ್ವತಃ ತನ್ನ ಹಾಗೂ ತನ್ನ ಬಂಧು ಬಾಂಧವರ ಮತ್ತು ತನ್ನ ಆಸ್ತಿಪಾಸ್ತಿಗಳ ರಕ್ಷಣೆಗಾಗಿಯೂ, ದೇಶದ ಸಂರಕ್ಷಣೆಗಾಗಿಯೂ ಆಕ್ರಮಣಕಾರಿಗಳ ಕೂಡ ಹೋರಾಡುವ ಪ್ರಸಂಗವು ಬರುತ್ತದೆ. ಗೃಹಸ್ಥನಿಗಾಗಿ ಪ್ರಸಂಗವಶಾತ್ ಈ ಪ್ರಕಾರದ ಹಿಂಸೆಗಳನ್ನು ಮಾಡಲಿಕ್ಕೆ ಜೈನಧರ್ಮವು ನಿಷೇಧಿಸಿಲ್ಲ. ಆದರೆ ಅಂಥ ಹಿಂಸೆಯನ್ನು ಪ್ರಯೋಜನ ವಿಲ್ಲದೆ, ಕ್ರೋಧ, ವೈರ ಮೊದಲಾದ ದುಷ್ಟ ಭಾವನೆಗಳಿಂದ ಪ್ರೇರಿತರಾಗಿ, ಸಂಕಲ್ಪ ಪೂರ್ವಕ ಮಾಡಕೂಡದೆಂದು ವಿಧಿಸಿದೆ. ಬೇಟೆಯನ್ನು ಆಡುವುದು, ಧನ ಹರಣ-ಕ್ಕಾಗಿ ಇನ್ನೊಬ್ಬರ ವಧೆಯನ್ನು ಮಾಡುವುದು ಇವೇ ಮೊದಲಾದವುಗಳ ನಿಷೇಧವಿದೆ. ಮುನಿಗಳು ಈ ವಿವಿಧ ಪ್ರಸಂಗಗಳಿಂದ ಮುಕ್ತರಾಗಿರುವುದರಿಂದ ಅವರ ಮೇಲೆ ಹೆಚ್ಚು ಸೂಕ್ಷ್ಮತೆಯಿಂದ ಅಹಿಂಸಾ ಪರಿಪಾಲನೆಯ ಭಾರವನ್ನು ಹಾಕಲಾಗಿದೆ.

ಜೈನ ಧರ್ಮವು ಈ ಅಹಿಂಸೆಯ ಸ್ವರೂಪವನ್ನು ಕುರಿತು ವಿಚಾರವನ್ನು ಮಾಡು ವುದರಿಂದ, ಅದರ ಮೇಲೆ ಹೊರಿಸುವ ಕೆಲವು ದೋಷಗಳು ನಿರ್ಮೂಲವಾಗುತ್ತವೆ: ಜೈನಧರ್ಮವು ದೇಶದಲ್ಲಿ ಶಕ್ತಿಹೀನತೆಯನ್ನು ಉತ್ಪನ್ನ ಮಾಡಿತು. ಅದೇ ಕಾರಣ ದಿಂದ ಪರಕೀಯರ ಆಕ್ರಮಣಕ್ಕೆ ದೇಶವು ಒಳಗಾಯಿತು ಎನ್ನುವ ವಿಚಾರಗಳೆಲ್ಲ ನಿರಾಧಾರವೆನಿಸುತ್ತವೆ. ಪ್ರಾಚೀನತಮ ಕಾಲದಿಂದಲೂ ಜೈನ ಮತವನ್ನವಲಂಬಿಸಿದ ವೀರ ಪುರುಷರು ಆಗಿ ಹೋಗಿದ್ದಾರೆ. ಅವರು ತಮ್ಮ ಧಾರ್ಮಿಕ ವೃತ್ತಿಯನ್ನೂ ಕಾಯ್ದುಕೊಂಡಿದ್ದಾರೆ; ಹಾಗೂ ಯೋಧತ್ವ ಸೇನಾಪತಿತ್ವಗಳನ್ನು ನಡೆಯಿಸಿಕೊಂಡು ಹೋಗಿದ್ದಾರೆ. ಇದಕ್ಕೆ ಇತಿಹಾಸವು ಸಾಕ್ಷ್ಯವಿದೆ. ಜೈನ ಅನೇಕಾಂತ ದೃಷ್ಟಿಯು ಇಂಥ ವಿರೋಧಾಭಾಸಗಳನ್ನು ಪರಿಹರಿಸಿಕೊಂಡು, ತಮ್ಮ ಕರ್ತವ್ಯಗಳಲ್ಲಿ ಸಾಮಂಜಸ್ಯ ವನ್ನು ಸ್ಥಾಪಿಸಿಕೊಳ್ಳುವ ಅದ್ಭುತ ಶಕ್ತಿಯನ್ನು ತನ್ನ ಅನುಯಾಯಿಗಳಿಗೆ ಅದು ಒದಗಿ ಸಿದೆ. ಈಗ ನಮ್ಮ ದೇಶವು ವೈಯಕ್ತಿಕ ವ್ಯವಹಾರದಲ್ಲಿ ಅಷ್ಟೇ ಅಲ್ಲ, ರಾಷ್ಟ್ರೀಯ ಹಾಗೂ ಅಂತರ್‌ರಾಷ್ಟ್ರೀಯ ನೀತಿಗಳನ್ನು ನಿರ್ಧರಿಸುವಲ್ಲಿಯೂ ಸಹ ಅಹಿಂಸಾ ತತ್ವ ವನ್ನು ಮೌಲಿಕ ರೂಪದಲ್ಲಿ ಸ್ವೀಕರಿಸಿದೆ. ಅಂದಮೇಲೆ ಜೈನಧರ್ಮದ ಈ ಸಿದ್ಧಾಂತವು ಅನೇಕ ದೃಷ್ಟಿಯಿಂದ ಮಹತ್ವಪೂರ್ಣವೆಂದು ಸಿದ್ಧವಾಗುತ್ತದೆ. ಅಲ್ಲದೆ ಇದರ ಸೂಕ್ಷ್ಮ ಅಧ್ಯಯನ ಹಾಗೂ ವಿಚಾರದ ಅವಶ್ಯಕತೆಯು ಬಹಳಷ್ಟಿದೆ ಎಂಬುದು ಗೊತ್ತಾಗು ತ್ತದೆ. ಇದೇ ಸಮನ್ವಯಾತ್ಮಕ ಅನೇಕಾಂತ ಸಿದ್ಧಾಂತದ ಆಧಾರದ ಮೇಲೆ ಇಂದಿಗೆ

ಸುಮಾರು ಒಂದೂವರೆ ಸಾವಿರ ವರ್ಷಗಳ ಹಿಂದೆ ಆಗಿ ಹೋದ ಸಮಂತಭದ್ರಾಚಾರ್ಯರು ತಮ್ಮ 'ಯುಕ್ತ್ಯನುಶಾಸನ' ಎಂಬ ಹೆಸರಿನ ಗ್ರಂಥದಲ್ಲಿ ಭ. ಮಹಾವೀರ ತೀರ್ಥಂಕರರ ಜೈನ ಶಾಸನವನ್ನು ಎಲ್ಲ ಅಪವಾದಗಳನ್ನು ನಿವಾರಿಸುವ ಸರ್ವೋದಯ ತೀರ್ಥವೆಂದು ಕರೆದಿದ್ದಾರೆ:—

ಸರ್ವಾಪದಾಂ ಅಂತಕರಂ ನಿರಂತಂ ಸರ್ವೋದಯಂ ತೀರ್ಥಮಿದಂ ತವೈವ ॥

(ಯು. ೬೧)

## ಪ್ರಾಚೀನ ಇತಿಹಾಸ :—

ಜೈನ ಪುರಾಣಗಳಲ್ಲಿ ಭಾರತ ವರ್ಷದ ಇತಿಹಾಸವನ್ನು ಅದರ ಭೌಗೋಲಿಕ ವರ್ಣನದ ಜೊತೆಯಲ್ಲಿ ವಿವರಿಸಿದುದು ಕಂಡುಬರುತ್ತದೆ. ಭಾರತವು ಜಂಬೂದ್ವೀಪದ ದಕ್ಷಿಣಭಾಗದಲ್ಲಿದೆ. ಇದರ ಉತ್ತರದಲ್ಲಿ ಹಿಮವತ್ ಪರ್ವತವಿದೆ. ಮಧ್ಯದಲ್ಲಿ ವಿಜಯಾರ್ಧಗಿರಿಯಿದೆ. ಪಶ್ಚಿಮದಲ್ಲಿ ಹಿಮಾಲಯದಲ್ಲಿ ಜನಿಸಿದ ಸಿಂಧು ನದಿಯು ಹರಿಯುತ್ತದೆ. ಪೂರ್ವದಲ್ಲಿ ಗಂಗಾನದಿಯು ಹರಿಯುತ್ತದೆ. ಇವುಗಳಿಂದ ಉತ್ತರ ಭಾರತವು ಮೂರು ವಿಭಾಗವಾಗಿದೆ ದಕ್ಷಿಣ ಭಾರತದಲ್ಲಿಯೂ ಪೂರ್ವ, ಮಧ್ಯ, ಪಶ್ಚಿಮ ದಿಕ್ಕುಗಳಲ್ಲಿ ಮೂರು ವಿಭಾಗಗಳು ಇವೆ. ಇವೇ ಭಾರತದ ಆರು ಖಂಡಗಳು. ಇವುಗಳನ್ನೆಲ್ಲ ಗೆದ್ದ ವೀರರು ಚಕ್ರವರ್ತಿಯೆಂಬ ಪದವಿಯನ್ನು ಹೊಂದುತ್ತಿದ್ದರು.

ಭಾರತದ ಇತಿಹಾಸವು ಬಹು ಪ್ರಾಚೀನ ಕಾಲದಿಂದ ಆರಂಭವಾಗುತ್ತದೆ. ಇದರ ಪ್ರಾರಂಭಿಕ ವರ್ಣನೆಯ ಕಾಲದಲ್ಲಿ ಈಗಿನ ಆಧುನಿಕ ನಾಗರಿಕತೆಯೂ ಸಭ್ಯತೆಯೂ ಇನ್ನೂ ವಿಕಾಸವನ್ನು ಹೊಂದಿರಲಿಲ್ಲ. ಸಿಂಹ ವ್ಯಾಘ್ರ, ಆನೆ, ಆಕಳು, ಎಮ್ಮೆ ಮೊದಲಾದ ಎಲ್ಲ ಪಶುಗಳೂ ವನದಲ್ಲಿಯೇ ಇರುತ್ತಿದ್ದವು. ಮನುಷ್ಯನೂ ಸಹ ಗ್ರಾಮ ಹಾಗೂ ನಗರಗಳಲ್ಲಿ ವಾಸಿಸುತ್ತಿರಲಿಲ್ಲ. ಅಲ್ಲದೆ ಕೌಟುಂಬಿಕ ವ್ಯವಸ್ಥೆಯೂ ಕೂಡ ಇರಲಿಲ್ಲ. ಆ ಕಾಲದಲ್ಲಿ ಜನರು ಒಕ್ಕಲತನವನ್ನು ಮಾಡುವುದಕ್ಕೆ ಕಲಿತಿರಲಿಲ್ಲ. ಪಶುಪಾಲನ ಹಾಗೂ ಅನ್ಯ ಉದ್ಯೋಗಗಳೂ ಸಹ ಜನರಿಗೆ ಗೊತ್ತಿರಲಿಲ್ಲ. ಅವರು ತಮ್ಮ ಆಹಾರ, ಶರೀರಾಚ್ಛಾದನ ಮೊದಲಾದ ಆವಶ್ಯಕತೆಗಳನ್ನು ವೃಕ್ಷಗಳಿಂದಲೇ ಪೂರೈಸಿಕೊಳ್ಳುತ್ತಿದ್ದರು. ಆದಕ್ಕಾಗಿ ಆ ಕಾಲದ ವೃಕ್ಷಗಳಿಗೆ ಕಲ್ಪವೃಕ್ಷಗಳೆಂದು ಹೇಳಲಾಗಿದೆ. ಕಲ್ಪವೃಕ್ಷಗಳು ಅರ್ಥಾತ್ ಇಂಥ ವೃಕ್ಷಗಳು ಮನುಷ್ಯನ ಎಲ್ಲ ಇಚ್ಛೆಗಳನ್ನೂ ಪೂರ್ಣಗೊಳಿಸುತ್ತಲಿದ್ದುವು. ಅಣ್ಣ-ತಂಗಿಯರೇ ಪತಿ ಪತ್ನಿಯರ ರೂಪದಲ್ಲಿ ಇರುತ್ತಿದ್ದರು. ತಂದೆ-ತಾಯಂದಿರು ತಮ್ಮ ಸಂತಾನದ ಯಾವ ಉತ್ತರದಾಯಿತ್ವವನ್ನೂ ಅನುಭವಿಸುತ್ತಿರಲಿಲ್ಲ. ಈ ಕಾಲದಲ್ಲಿ ಧರ್ಮ ಸಾಧನಾ, ಪುಣ್ಯ-ಪಾಪಗಳ ಭಾವನೆ ಮೊದಲಾದ ಯಾವ ವಿಚಾರ-ವಿವೇಕಗಳೂ ಇರಲಿಲ್ಲ. ಇಂಥ ಪರಿಸ್ಥಿತಿಗೆ ಪುರಾಣಕಾರರು ಭೋಗ-ಭೂಮಿ ವ್ಯವಸ್ಥೆಯೆಂದು ಹೇಳಿದ್ದಾರೆ. ಯಾಕಂದರೆ ಆಗ ಮುಂಬರುವ ಕರ್ಮಭೂಮಿಗೆ ಸಂಬಂಧಿಸಿದ ಕೃಷಿ ಹಾಗೂ ಇತರ ಉದ್ಯೋಗ ಮೊದಲಾದವುಗಳ ವ್ಯವಸ್ಥೆಯ

ಅಭಾವವಿತ್ತು.

ಕ್ರಮದಿಂದ ಆ ಅವಸ್ಥೆಯಲ್ಲಿ ಬದಲಾವಣೆಯು ಆಯಿತು. ಪುರಾಣಕಾರರು ಹೇಳುವ ಕರ್ಮಭೂಮಿಯ ಉದಯವಾಯಿತು. ಈ ಯುಗಕ್ಕೆ ನಾವು ಆಧುನಿಕಯುಗದ ಸಭ್ಯತೆಯ ಪ್ರಾರಂಭಕಾಲವೆಂದು ಹೇಳುತ್ತೇವೆ. ಈ ಯುಗವನ್ನು ವಿಕಾಸಗೊಳಿಸಿದ ಹದಿನಾಲ್ಕು ಮಹಾಪುರುಷರನ್ನೂ ಮನ್ನಿಸಲಾಗಿದೆ. ಇವರನ್ನು ಕುಲಂಕರ ಇಲ್ಲವೆ ಮನುಗಳೆಂದು ಕರೆಯಲಾಗಿದೆ. ಇವರು ಕ್ರಮದಿಂದ ತಮ್ಮ ತಮ್ಮ ಕಾಲಗಳಲ್ಲಿ ಜನರಿಗೆ ಹಿಂಸ್ರ ಪಶುಗಳಿಂದ ತಮ್ಮನ್ನು ರಕ್ಷಿಸಿಕೊಳ್ಳುವ ವಿಧಾನವನ್ನು ಹೇಳಿಕೊಟ್ಟರು. ಭೂಮಿ ಹಾಗೂ ವೃಕ್ಷಗಳ ವೈಯಕ್ತಿಕ ಸ್ವಾಮಿತ್ವದ ಸೀಮೆಗಳನ್ನು ನಿರ್ಧರಿಸಿ ಹೇಳಿದರು. ಆನೆ ಮೊದಲಾದ ವನ್ಯ ಪಶುಗಳನ್ನು ಸಾಕಿ, ಅವುಗಳನ್ನು ವಾಹನಗಳಂತೆ ಉಪಯೋಗಿಸುವುದನ್ನು ಕಲಿಸಿದರು. ಮಕ್ಕಳ ಲಾಲನಪಾಲನ ಹಾಗೂ ನಾಮಕರಣಗಳ ವಿವರಣಗಳನ್ನು ಹೇಳಿಕೊಟ್ಟರು. ಚಳಿ, ಮಳೆ ಮೊದಲಾದುವುಗಳಿಂದ ತಮ್ಮ ರಕ್ಷಣೆಯನ್ನು ಮಾಡಿಕೊಳ್ಳುವ ಕ್ರಮವನ್ನು ಸೂಚಿಸಿದರು. ನದಿಗಳನ್ನು ನೌಕೆಗಳ ನೆರವಿನಿಂದ ದಾಟುವುದಕ್ಕೂ ಪರ್ವತಗಳಿಗೆ ಮೆಟ್ಟಲುಗಳನ್ನು ಮಾಡಿ ಮೇರೇರುವುದಕ್ಕೂ, ಮಳೆಗಾಲದಲ್ಲಿ ಛತ್ರಾದಿಗಳಿಂದ ರಕ್ಷಣೆಯನ್ನು ಹೊಂದಲಿಕ್ಕೂ, ಇವೇ ಮೊದಲಾದ ಹಲವಾರು ವಿಷಯಗಳನ್ನು ಕಲಿಸಿದರು. ಕೊನೆಯಲ್ಲಿ ಕೃಷಿಯಿಂದ ಆಹಾರವನ್ನು ಉತ್ಪನ್ನ ಮಾಡುವ ಕಲೆಯನ್ನು ಹೇಳಿಕೊಟ್ಟರು. ಅದರ ತರುವಾಯ ವಾಣಿಜ್ಯ, ಶಿಲ್ಪಾದಿಗಳು ಪ್ರಚಾರದಲ್ಲಿ ಬಂದುವು. ಈ ಎಲ್ಲ ಕಲೆ ಹಾಗೂ ಉದ್ಯೋಗಗಳು ಉತ್ಪನ್ನವಾದುದರಿಂದ ಈ ಭೂಮಿಯು ಕರ್ಮಭೂಮಿಯೆಂಬ ಹೆಸರನ್ನು ಹೊಂದಿತು.

ಹದಿನಾಲ್ಕು ಜನ ಕುಲಂಕರರ ತರುವಾಯ ಕರ್ಮಭೂಮಿಯ ಸಭ್ಯತೆಯ ಯುಗದಲ್ಲಿ ಧರ್ಮೋಪದೇಶದಿಂದಲೂ ತಮ್ಮ ಚಾರಿತ್ರದಿಂದಲೂ ಒಳ್ಳೆಯದಾವುದು ಕೆಟ್ಟುದು ಯಾವುದು ಎಂಬ ಭೇದವನ್ನು ಜನತೆಗೆ ಕಲಿಸಿದಂಥ ಮಹಾಪುರುಷರು ಅರವತ್ತುಮೂರು ಜನರು ಆಗಿ ಹೋದರು. ಇವರು ಶಲಾಕಾಪುರುಷರು. ಇವರು ವಿಶೇಷ ಗಣನೀಯ ಪುರುಷರೆಂದು ಮನ್ನಣೆಗೆ ಪಾತ್ರರಾಗಿದ್ದಾರೆ. ಇವರ ಚರಿತ್ರಗಳೇ ಜೈನ ಪುರಾಣಗಳಲ್ಲಿ ವರ್ಣಿತಗೊಂಡಿವೆ. ಈ ತ್ರಿಷಷ್ಟಿ ಶಲಾಕಾಪುರುಷರಲ್ಲಿ ಇಪ್ಪತ್ತನಾಲ್ಕು ತೀರ್ಥಂಕರರು, ಹನ್ನೆರಡು ಚಕ್ರವರ್ತಿಗಳು, ಒಂಬತ್ತು ಬಲಭದ್ರರು, ಒಂಬತ್ತು ನಾರಾಯಣರು ಮತ್ತು ಒಂಬತ್ತು ಪ್ರತಿನಾರಾಯಣರು ಸಮಾವೇಶಗೊಳ್ಳುತ್ತಾರೆ. ಅವರ ಹೆಸರುಗಳು ಹೀಗಿವೆ :—

೨೪ ತೀರ್ಥಂಕರರು :—೧—ಋಷಭ, ೨—ಅಜಿತ, ೩—ಸಂಭವ, ೪—ಅಭಿನಂದನ, ೫—ಸುಮತಿ, ೬—ಪದ್ಮಪ್ರಭ, ೭—ಸುಪಾರ್ಶ್ವ, ೮—ಚಂದ್ರಪ್ರಭ, ೯—ಪುಷ್ಪದಂತ, ೧೦—ಶೀತಲ, ೧೧—ಶ್ರೇಯಾಂಸ, ೧೨—ವಾಸುಪೂಜ್ಯ, ೧೩—ವಿಮಲ ೧೪—ಅನಂತ, ೧೫—ಧರ್ಮ, ೧೬—ಶಾಂತಿ, ೧೭—ಕುಂಥು, ೧೮—ಅರಹ, ೧೯—ಮಲ್ಲಿ, ೨೦—ಮುನಿಸುವ್ರತ, ೨೧—ನಮಿ, ೨೨—ನೇಮಿ, ೨೩—ಪಾರ್ಶ್ವನಾಥ, ೨೪—ವರ್ಧ

ಮಾನ ಅಥವಾ ಮಹಾವೀರ.

೧೨ ಚಕ್ರವರ್ತಿ :—೨೫-ಭರತ, ೨೬-ಸಗರ, ೨೭-ಮಘವಾ ೨೮-ಸನತ್ ಕುಮಾರ, ೨೯-ಶಾಂತಿ, ೩೦-ಕುಂಥು, ೩೧-ಅರಹ, ೩೨-ಸುಭೌಮ, ೩೩-ಪದ್ಮ, ೩೪-ಹರಿಷೇಣ, ೩೫-ಜಯಸೇನ, ೩೬-ಬ್ರಹ್ಮದತ್ತ.

೯ ಬಲಭದ್ರರು :—೩೭-ಅಚಲ, ೩೮-ವಿಜಯ, ೩೯-ಭದ್ರ, ೪೦-ಸುಪ್ರಭ, ೪೧-ಸುದರ್ಶನ, ೪೨-ಆನಂದ ೪೩-ನಂದನ, ೪೪-ಪದ್ಮ ೪೫-ರಾಮ.

೯ ವಾಸುದೇವರು :—೪೬-ತ್ರಿಪೃಷ್ಠ. ೪೭-ದ್ವಿಪೃಷ್ಠ, ೪೮-ಸ್ವಯಂಭೂ, ೪೯-ಪುರುಷೋತ್ತಮ, ೫೦-ಪುರುಷಸಿಂಹ, ೫೧-ಪುರುಷಪುಂಡರೀಕ, ೫೨-ದತ್ತ, ೫೩-ನಾರಾಯಣ, ೫೪-ಕೃಷ್ಣ.

೯ ಪ್ರತಿವಾಸುದೇವರು .—೫೫-ಅಶ್ವಗ್ರೀವ, ೫೬-ತಾರಕ, ೫೭-ಮೇರಕ, ೫೮-ಮಧು, ೫೯-ನಿಶುಂಭ, ೬೦-ಬಲಿ, ೬೧-ಪ್ರಹ್ಲಾದ, ೬೨-ರಾವಣ, ೬೩-ಜರಾಸಂಧ.

## ಆದಿತೀರ್ಥಂಕರ ಮತ್ತು ವಾತರಶನಾ ಮುನಿ :—

ಈ ತ್ರಿಷಷ್ಠಿಶಲಾಕಾ ಪುರುಷರಲ್ಲಿ ಮೊಟ್ಟಮೊದಲಿನವರು ಜೈನರ ಆದಿತೀರ್ಥಂಕರರಾದ ಋಷಭನಾಥರಿದ್ದಾರೆ. ಇವರಿಂದ ಜೈನಧರ್ಮದ ಪ್ರಾರಂಭವಾಯಿತೆಂದು ಮನ್ನಿಸಲಾಗುತ್ತಿದೆ. ಇವರ ಜನ್ಮವು ಹದಿನಾಲ್ಕು ಕುಲಂಕರರಲ್ಲಿ ಕೊನೆಯವನಾದ ನಾಭಿರಾಜ ಕುಲಂಕರರು ಹಾಗು ಅವನ ಪತ್ನಿಯಾದ ಮರುದೇವಿಯಿಂದ ಆಯಿತು. ತನ್ನ ತಂದೆಯ ಮೃತ್ಯುವಿನ ತರುವಾಯ ಇವನು ರಾಜ್ಯ ಸಿಂಹಾಸನವನ್ನು ಏರಿದನು. ಇವನು ಕೃಷಿ ಅಸಿ, ಮಸಿ, ಶಿಲ್ಪ ವಾಣಿಜ್ಯ ಮತ್ತು ವಿದ್ಯಾ ಈ ಆರು ಜೀವನ ಸಾಧನದ ವಿದ್ಯೆಗಳನ್ನು ವಿಶೇಷ ರೂಪದಿಂದ ವ್ಯವಸ್ಥೆಗೊಳಿಸಿದನು, ಅದರಂತೆಯೇ ದೇಶ ಹಾಗೂ ನಗರ, ವರ್ಣ ಹಾಗೂ ಜಾತಿ ಮೊದಲಾದವುಗಳ ಸುವಿಭಜನೆಯನ್ನೂ ಮಾಡಿದನು. ಇವನಿಗೆ ಭರತ,ಬಾಹುಬಲಿಗಳೆಂದು ಇಬ್ಬರು ಮಕ್ಕಳು. ಬ್ರಾಹ್ಮಿ ಸುಂದರಿ ಎಂಬಿಬ್ಬರು ಹೆಣ್ಣು ಮಕ್ಕಳು. ಇವರಿಗೆ ಋಷಭದೇವನು ಸಮಸ್ತ ಕಲೆ ಹಾಗೂ ವಿದ್ಯೆಗಳನ್ನು ಕಲಿಸಿದನು. ಒಂದು ದಿನ ಈತನ ರಾಜಸಭೆಯಲ್ಲಿ ನೀಲಾಂಜನಾ ಎಂಬ ದೇವನರ್ತಕಿಯು ನರ್ತಿಸುತ್ತಿರುವಾಗಲೇ ಮರಣ ಹೊಂದಿದಳು. ಈ ದುರ್ಘಟನೆಯಿಂದ ಋಷದೇವನಿಗೆ ಸಂಸಾರದಲ್ಲಿ ವೈರಾಗ್ಯವು ಉತ್ಪನ್ನವಾಯಿತು. ಅವನು ರಾಜ್ಯವನ್ನು ತ್ಯಾಗಮಾಡಿ ತಪಸ್ಸು ಮಾಡಲು ವನಕ್ಕೆ ತೆರಳಿದನು ಆಗ ಇವನ ಹಿರಿಯ ಮಗನಾದ ಭರತನು ರಾಜನಾದನು. ಅವನು ತನ್ನ ದಿಗ್ವಿಜಯದಿಂದ ಮೊಟ್ಟಮೊದಲನೆಯ ಸಲ ಚಕ್ರವರ್ತಿ ಪದವನ್ನು ಸಂಪಾದಿಸಿದನು. ಅವನ ಕಿರಿಯ ತಮ್ಮನಾದ ಬಾಹುಬಲಿಯೂ ವಿರಕ್ತನಾಗಿ ತಪಸ್ಸಿನಲ್ಲಿ ತೊಡಗಿದನು.

ಜೈನ ಪುರಾಣಗಳಲ್ಲಿ ಋಷಭದೇವನ ಜೀವನ, ತಪಸ್ಸು, ಕೇವಲ ಜ್ಞಾನಪ್ರಾಪ್ತಿ

ಹಾಗೂ ಧರ್ಮೋಪದೇಶಗಳ ವಿಸ್ತೃತ ವರ್ಣನೆಯು ಬರುತ್ತದೆ. ಜೈನರು ಈ ಕಾಲ ದಲ್ಲಿಯೇ ತಮ್ಮ ಧರ್ಮದ ಉದಯವಾಯಿತೆಂದು ತಿಳಿಯುತ್ತಾರೆ. ಋಷಭದೇವನ ಕಾಲವನ್ನು ಅನುಮಾನಿಸಿ ಹೇಳುವುದು ಕಠಿಣವಾಗಿದೆ. ಅವನ ಕಾಲದ ಪ್ರಾಚೀನತೆಯ ವರ್ಣನೆಯನ್ನು ಜೈನ ಪುರಾಣಗಳು ಸಾಗರದ ಪ್ರಮಾಣದಲ್ಲಿ ಹೇಳುತ್ತವೆ. ಸೌಭಾಗ್ಯ ದಿಂದ ಋಷಭದೇವನ ಜೀವನ ಚರಿತ್ರೆಯೂ ಜೈನ ಸಾಹಿತ್ಯದಲ್ಲಷ್ಟೇ ಅಲ್ಲ. ವೈದಿಕ ಸಾಹಿತ್ಯದಲ್ಲಿಯೂ ಲಭಿಸುತ್ತದೆ. ಭಾಗವತ ಪುರಾಣದ ಐದನೆಯ ಸ್ಕಂಧದಲ್ಲಿ ಮೊದ ಲಿನ ಆರು ಅಧ್ಯಾಯಗಳಲ್ಲಿ ಋಷಭದೇವನ ವಂಶ ಜೀವನ ಮತ್ತು ತಪಶ್ಚರಣಗಳ ವೃತ್ತಾಂತವು ವರ್ಣಿತವಾಗಿದೆ. ಅದು ಮುಖ್ಯ ಮುಖ್ಯ ಸಂಗತಿಗಳಲ್ಲಿ ಜೈನಪುರಾಣ ಗಳ ಸಂಗತಿಯನ್ನು ಅನುಸರಿಸುತ್ತದೆ. ಅದರಲ್ಲಿಯೂ ಇವನ ತಂದೆ-ತಾಯಂದಿರ ಹೆಸರು ಗಳು ನಾಭಿ, ಮರುದೇವಿಯರೆಂದೇ ಹೇಳಿದೆ. ಅಲ್ಲದೆ ಋಷಭನು ಸ್ವಯಂಭೂಮನು- ವಿನಿಂದ ಐದನೆಯ ತಲೆಯವನೆಂದು ಉಲ್ಲೇಖಿಸಿದೆ ಸ್ವಯಂಭೂಮನು, ಪ್ರಿಯ ವ್ರತ, ಅಗ್ನೀಧ್ರ ನಾಭಿ ಮತ್ತು ಋಷಭ ಇವನು ತನ್ನ ಹಿರಿಯ ಮಗನಾದ ಭರತನಿಗೆ ರಾಜ್ಯವನ್ನು ಒಪ್ಪಿಸಿ, ಸನ್ಯಾಸವನ್ನು ಸ್ವೀಕರಿಸಿದನು. ಅವನು ನಗ್ನನಾಗಿರುತ್ತಿದ್ದನು ಅವನ ಹತ್ತಿರ ಕೇವಲ ಶರೀರ ಮಾತ್ರವಿತ್ತು. ಜನರು ತಿರಸ್ಕರಿಸಿದರೂ, ಕಟುವಚನ ಗಳಿಂದ ಬೈದರೂ, ಹೊಡೆದರೂ ಕೂಡ, ಮೌನವಾಗಿಯೇ ತಪಸ್ಸನ್ನಾಚರಿಸುತ್ತಿದ್ದನು. ತನ್ನ ಕಠೋರತಪಸ್ಸಿನಿಂದ ಅವನು ಕೈವಲ್ಯವನ್ನು ಹೊಂದಿದನು ಇವನು ದಕ್ಷಿಣ ಕರ್ನಾ ಟಕದವರೆಗೆ ನಾನಾ ಪ್ರದೇಶಗಳಲ್ಲಿ ವಿಹರಿಸಿದನು. ಇವನು ಕುಟಕಾಚಲ ಪರ್ವತದ ವನದಲ್ಲಿ ಉನ್ಮತ್ತನಂತೆ ನಗ್ನ ರೂಪದಿಂದ ವಿಚರಿಸುತ್ತಿದ್ದನು ಆಗ ಬಿದಿರು ಮೆಳೆ ಯಿಂದ ವನಕ್ಕೆ ಬೆಂಕಿ ಹತ್ತಿತು. ಅದರಲ್ಲಿಯೇ ಅವನು ತಾನೇ ಭಸ್ಮವಾಗಿ ಹೋದನು.

ಋಷಭದೇವನ ಈ ಚರಿತ್ರೆಯನ್ನು ಕೇಳಿ ಕೊಂಕ, ವೆಂಕ ಮತ್ತು ಕುಟಕಗಳ ರಾಜನಾದ ಅರ್ಹನ್‌ನು ಕಲಿಯುಗದಲ್ಲಿ ತನ್ನ ಇಚ್ಛೆಯಿಂದ ಇದೇ ಧರ್ಮವನ್ನು ಪ್ರವೃ ತ್ತಿಸುವನೆಂದು ಮೊದಲಾಗಿಯೂ ಅದೇ ಭಾಗವತ್ ಪುರಾಣವು ವಿವರಿಸುತ್ತದೆ. ಇದ ರಿಂದ ಇನ್ನಿಷ್ಟು ಸ್ಪಷ್ಟವಾಗುತ್ತದೆ. ಭಾಗವತ ಪುರಾಣದ ತಾತ್ಪರ್ಯವು ಜೈನಪುರಾಣ ಗಳು ವರ್ಣಿಸಿದ ತೀರ್ಥಂಕರ ಋಷಭದೇವನ ವಿಷಯವೇ ಆಗಿದೆ. ಮತ್ತು ಅರ್ಹನ್ ರಾಜನಿಂದ ಪ್ರಚರಗೊಂಡ ಧರ್ಮವು ಜೈನಧರ್ಮವೇ ಆಗಿದೆ. ಇನ್ನೂ ಭಾಗವತ ಪುರಾಣ ಹಾಗೂ ವೈದಿಕ ಪರಂಪರೆಯ ಅನ್ಯ ಪ್ರಾಚೀನ ಗ್ರಂಥಗಳಲ್ಲಿ ಋಷಭದೇವ ನಿಗೆ ಸಂಬಂಧಿಸಿದ ಸಂಗತಿಗಳು ಇನ್ನೇನಾದರೂ ಬರುತ್ತವೆಯೋ ಎಂಬುದನ್ನು ನಿರೀಕ್ಷಿ ಸುವ ಆವಶ್ಯಕತೆಯು ಇದೆ. ಭಾಗವತ ಪುರಾಣದಲ್ಲಿ ಹೀಗೆ ಹೇಳಿದೆ :—

"ಬರ್ಹಿಷಿ ತಸ್ಮಿನ್ನೇವ ವಿಷ್ಣುದತ್ತ ಭಗವಾನ್ ಪರಮರ್ಷಿಭಿಃ ಪ್ರಸಾದಿತೋ ನಾಭೇಃ ಪ್ರಿಯ ಚಿಕೀರ್ಷಯಾ ತದವರೋಧಾಯನೇ ಮೇರುದೇವ್ಯಾಂ ಧರ್ಮಾನ್ ದರ್ಶಯಿತುಕಾಮೋ ವಾತರಶನಾನಾಂ ಶ್ರಮಣಾನಾಮ್ ಋಷೀಣಾಮ್ ಊರ್ಧ್ವ ಮಂಥಿನಾಂ ಶುಕ್ಲಯಾ ತನ್ವಾವತ ತಾರ !"

(ಭಾ. ಪು. ೫-೩-೨೦)

" ಪರಮ ಋಷಿಗಳಿಂದ ಯಜ್ಞದಲ್ಲಿ ಪ್ರಸನ್ನಗೊಳಿಸಿದ ಮೇಲೆ; ಹೇ ವಿಷ್ಣುದತ್ತ, ಪರೀಕ್ಷಿತ, ಸ್ವಯಂ ಶ್ರೀ ಭಗವಾನ್ (ವಿಷ್ಣು)ನು ನಾಭಿಯನ್ನು ಪ್ರಿಯಗೊಳಿಸುವುದಕ್ಕಾಗಿ ಅವನ ರಾಣೀವಾಸದಲ್ಲಿ ಮಹಾರಾಣಿಯಾದ ಮೇರೂದೇವಿಯ ಗರ್ಭದಲ್ಲಿ ಬಂದನು. ಅವನು ಈ ಪವಿತ್ರ ಶರೀರದಲ್ಲಿ ಅವತಾರವನ್ನು ವಾತರಶನಾ ಶ್ರಮಣ ಋಷಿಗಳ ಧರ್ಮವನ್ನು ಪ್ರಕಟಗೊಳಿಸುವ ಇಚ್ಛೆಯಿಂದ ಗ್ರಹಣ ಮಾಡಿದನು."

ಭಾಗವತ ಪುರಾಣದ ಈ ಕಥನದಲ್ಲಿ ಮುಖ್ಯವಾಗಿ ಎರಡು ಸಂಗತಿಗಳು ವಿಶೇಷ ಗಮನ ಕೊಡಲಿಕ್ಕೆ ತಕ್ಕವುಗಳಾಗಿವೆ. ಅವುಗಳಲ್ಲಿ ಭಗವಾನ್ ಋಷಭದೇವನಿಗೆ ಭಾರತೀಯ ಸಂಸ್ಕೃತಿಯಲ್ಲಿ ಸ್ಥಾನವು ಒಂದು. ಅವನ ಪ್ರಾಚೀನತೆ ಹಾಗೂ ಸಾಹಿತ್ಯಿಕ ಪರಂಪರೆಯೊಡನಿರುವ ನಿಕಟ ಮತ್ತು ಮಹತ್ವಪೂರ್ಣ ಸಂಬಂಧವು ಇನ್ನೊಂದಾಗಿದೆ. ಋಷಭದೇವನ ಮಾನ್ಯತೆ ಹಾಗೂ ಪೂಜ್ಯತೆಗಳ ಸಂಬಂಧದಲ್ಲಿ ಜೈನರಲ್ಲಿಯೂ ಹಿಂದುಗಳಲ್ಲಿಯೂ ಯಾವ ಮತಭೇದವೂ ಇಲ್ಲವೆಂಬುದೊಂದು ಮುಖ್ಯ ಸಂಗತಿಯಾಗಿದೆ. ಋಷಭದೇವನು ಜೈನರ ಆದಿ ತೀರ್ಥಂಕರರಾಗಿದ್ದಂತೆ ಹಿಂದುಗಳಿಗೆ ಸಾಕ್ಷಾತ್ ಭಗವಾನ್ ವಿಷ್ಣುವಿನ ಅವತಾರನಾಗಿದ್ದಾನೆ. ಅವನ ಈಶ್ವರವತಾರದ ಮಾನ್ಯತೆಯು ಪ್ರಾಚೀನ ಕಾಲದಲ್ಲಿಯೇ ಬಹು ಸ್ಥಿರಗೊಂಡಿತ್ತು. ಶಿವಮಹಾಪುರಾಣದಲ್ಲಿಯೂ ಕೂಡ ಅವನನ್ನು ಶಿವನ ಇಪ್ಪತ್ತೆಂಟು ಯೋಗಾವತಾರಗಳಲ್ಲಿ ಸಮಾವೇಶಮಾಡಲಾಗಿದೆ. (ಶಿವಮಹಾಪುರಾಣ, ೭, ೨, ೯). ಇನ್ನೊಂದು ಸಂಗತಿಯನ್ನು ನಾವು ಗಮನಿಸಬೇಕು. ಋಷಭದೇವನ ಅವತಾರವು ರಾಮ ಮತ್ತು ಕೃಷ್ಣರ ಅವತಾರಗಳಿಗಿಂತಲೂ ಪೂರ್ವದ್ದೆಂದು ಮನ್ನಿಸಲಾಗಿದೆ. ಈ ಅವತಾರದ ಯಾವ ಉದ್ದೇಶವನ್ನು ಭಾಗವತ ಪುರಾಣವು ಉಲ್ಲೇಖಿಸುವುದೋ ಅದರಿಂದ ಶ್ರಮಣ ಧರ್ಮ ಪರಂಪರೆಯ ಸಂಬಂಧವು ಭಾರತೀಯ ಸಾಹಿತ್ಯದ ಪ್ರಾಚೀನತಮ ಗ್ರಂಥವಾದ ಋಗ್ವೇದದೊಡನೆ ನಿಃಸಂದೇಹವಾಗಿ ಹೊಂದುತ್ತದೆ. ಋಷಭಾವತಾರದ ಹೇತುವು ವಾತರಶನಾ ಶ್ರಮಣ ಋಷಿಗಳ ಧರ್ಮವನ್ನು ಪ್ರಕಟಗೊಳಿಸುವುದೆಂದು ಹೇಳಲಾಗಿದೆ. ಭಾಗವತ ಪುರಾಣದಲ್ಲಿ ಇದನ್ನೂ ಹೇಳಿದೆ :—

" ಅಯಮವತಾರೋ ರಜಸೋಪಪ್ಲುತ-ಕೈವಲ್ಯೋಪ ಶಿಕ್ಷಣಾರ್ಥಃ "

(ಭಾ ಪು. ೫-೬-೧೨)

ಅರ್ಥಾತ್ ಭಗವಂತನ ಈ ಅವತಾರವು ರಜೋಗುಣದಿಂದ ಕೂಡಿದ ಜನತೆಗೆ ಕೈವಲ್ಯ ಬೋಧವನ್ನು ನೀಡುವದಕ್ಕೆ ಆಯಿತು. ಇನ್ನು ಮೇಲೆ ಕಾಣಿಸಿದ ವಾಕ್ಯದ ಅರ್ಥವು ಹೀಗೂ ಆಗುವುದುಂಟು :— 'ಈ ಅವತಾರವು ರಜದಿಂದ ಉಪಪ್ಲುತ ಅರ್ಥಾತ್ ರಜೋಧಾರಣ (ಮಲಧಾರಣ) ವೃತ್ತಿಯಿಂದ ಕೈವಲ್ಯವನ್ನು ಸಂಪಾದಿಸುವ ಶಿಕ್ಷಣವನ್ನು ಕೊಡುವುದಕ್ಕಾಗಿ ಆಗಿತ್ತು.' ಜೈನ ಮುನಿಗಳ ಆಚಾರದಲ್ಲಿ ಅಸ್ನಾನ, ಅದಂತಧಾವನ, ಮಲಪರೀಷಹ ಮೊದಲಾದವುಗಳಿಂದ ರಜೋಧಾರಣವೂ ಸಂಯಮದ

ಅವಶ್ಯಕ ಅಂಗವೆಂದು ಸ್ವೀಕರಿಸಲಾಗಿದೆ. ಬುದ್ಧನ ಸಮಯದಲ್ಲಿಯೂ ರಜೋಯುಕ್ತ ಶ್ರಮಣರು ಇದ್ದರು. ಭಗವಾನ್ ಬುದ್ಧನು ಶ್ರಮಣರ ಆಚಾರ ಪ್ರಣಾಲಿಯಲ್ಲಿ ವ್ಯವಸ್ಥೆಯನ್ನುಂಟುಮಾಡುತ್ತ ಒಮ್ಮೆ ಹೀಗೆ ಹೇಳಿದ್ದನು :—

"ನಾಹಂ ಭಿಕ್ಖವೆ ಸಂಘಾಟಿಕಸ್ಯ ಸಂಘಾಟಿಧಾರಣಮತ್ತೇನ ಸಾಮಂಞ ವದಾಮಿ ಅಚೇಲಕಸ್ಸ ಅಚೇಲಕಮತ್ತೇನ ರಜೋಜಲ್ಲಿಕಸ್ಯ ರಜೋಜಲ್ಲಿಕ ಮತ್ತೇನ. ಜಟಿಲಕಸ್ಯ ಜಟಾಧಾರಣಮತ್ತೇನ ಸಾಮಞ್ಞಂ ವದಾಮಿ ।" (ಮಜ್ಝಿಮನಿಕಾಯ ೪೦)

ಅರ್ಥಾತ್ ಎಲೈ ಭಿಕ್ಷುಕರೇ, ಬೌದ್ಧ ಭಿಕ್ಷುಕನು ಧರಿಸುವ ವಸ್ತ್ರವನ್ನು ಧಾರಣಮಾಡುವುದರಿಂದ ಮಾತ್ರ ಅವರನ್ನು ನಾನು ಶ್ರಮಣರೆಂದು ಸಂಬೋಧಿಸಲಾರೆ. ಅಚೇಲಕರನ್ನು ಅಚೇಲಕತ್ವ ಮಾತ್ರದಿಂದ, ರಜೋಜಲ್ಲಿಕರನ್ನು ರಜೋಜಲ್ಲಿಕತ್ವ ಮಾತ್ರದಿಂದ ಜಟಾಧಾರಿಗಳನ್ನು ಜಟಾಧಾರಣ ಮಾತ್ರದಿಂದ ಶ್ರಮಣರೆಂದು ಹೇಳಲಿಕ್ಕಾಗದು.

ಇಲ್ಲಿ ಇನ್ನೊಂದು ಪ್ರಶ್ನೆಯು ಉದ್ಭವಿಸುವುದು. ವಾತರಶನಾ ಮುನಿಗಳ ಧರ್ಮವನ್ನು ಸ್ಥಾಪಿಸುವುದು ; ಅದರಂತೆ ರಜೋಜಲ್ಲಿಕ ವೃತ್ತಿಯಿಂದ ಕೈವಲ್ಯವನ್ನು ಸಂಪಾದಿಸುವುದು—ಇವುಗಳನ್ನು ಬೋಧಿಸುವುದಕ್ಕಾಗಿ ಋಷಭದೇವನ ಅವತಾರವಾಯಿತು. ಈ ಸಂಗತಿಯು ಭಾರತೀಯ ಸಾಹಿತ್ಯದಲ್ಲಿ ಎಂದಿನಿಂದ ಉಲ್ಲೇಖಗೊಂಡಿದೆ ? ಈ ಪ್ರಶ್ನೆಗಾಗಿ ನಾವು ಭಾರತದ ಪ್ರಾಚೀನತಮ ಗ್ರಂಥಗಳಾದ ವೇದಗಳನ್ನು ಅವಲೋಕಿಸಬೇಕು. ಅಲ್ಲಿಯೂ ಕೂಡ ವಾತರಶನಾ ಮುನಿಗಳ ಉಲ್ಲೇಖವು ಅನೇಕ ಸ್ಥಳಗಳಲ್ಲಿ ನೋಡಲಿಕ್ಕೆ ಸಿಕ್ಕುತ್ತದೆ.

ಋಗ್ವೇದದ ವಾತರಶನಾ ಮುನಿಗಳಿಗೆ ಸಂಬಂಧಿಸಿದ ಋಚೆಗಳಲ್ಲಿ ಆ ಮುನಿಗಳ ಸಾಧನೆಯ ವಿವರವೂ ಉಂಟು. ಅದನ್ನು ಇಲ್ಲಿ ಗಮನಿಸುವುದು ಯೋಗ್ಯವಾಗಿದೆ. ಒಂದು ಸೂಕ್ತದ ಕೆಲವು ಋಚೆಗಳನ್ನು ನೋಡೋಣ :—

ಮುನಿಯೊ ವಾತರಶನಾಃ ಪಿಶಂಗಾ ವಸತೆ ಮಲಾ ।
ವಾತಸ್ಯಾನು ಧ್ರಾಜಿಂ ಯಂತಿ ಯದ್ದೇವಾಸೋ ಅವಿಕ್ಷತ ॥
ಉನ್ಮದಿತಾ ಮೌನೆಯೇನ ವಾತಾಂ ಅತಸ್ಥಿಮಾ ವಯಮ್ ।
ಶರೀರೆದಸ್ಮಾಕಂ ಯೂಯಂ ಮರ್ತಾಸೋ ಅಭಿ ಪಶ್ಯಥ ॥

(ಋಗ್ವೇದ ೧೦–೧೩೬, ೨–೩)

ವಿದ್ವಾಂಸರು ವಿವಿಧ ರೀತಿಯಿಂದ ಪ್ರಯತ್ನಿಸಿದರೂ ಇನ್ನೂವರೆಗೆ ವೇದಗಳಿಗೆ ನಿಃಸಂದೇಹ ರೂಪದಿಂದ ಅರ್ಥವನ್ನು ವಿವರಿಸಲಿಕ್ಕೆ ಆಗಿಲ್ಲ. ಅದರೂ ಸಾಯಣ ಭಾಷ್ಯದ ಸಹಾಯದಿಂದ ನಾನು ಈ ಮೇಲ್ಕಾಣಿಸಿದ ಋಚೆಗಳ ಅರ್ಥವನ್ನು ಹೀಗೆ ಮಾಡುತ್ತೇನೆ :—ಅತೀಂದ್ರಿಯಾರ್ಥದರ್ಶಿ. ವಾತರಶನಾಮುನಿಗಳು ಮಲಧಾರಣ ಮಾಡುತ್ತಾರೆ. ಅದರಿಂದ ಅವರು ಪಿಂಗಲ ವರ್ಣದವರಾಗಿ ಕಾಣುತ್ತಾರೆ. ಯಾವಾಗ

ಅವರು ಶ್ವಾಸೋಚ್ಛ್ವಾಸದ ಗತಿಯನ್ನು ಪ್ರಾಣೋಪಾಸನೆಯ ಮೂಲಕ ಧಾರಣ ಮಾಡುವವರೋ—ಅರ್ಥಾತ್ ತಡೆದು ಹಿಡಿಯುವವರೋ—ಆಗ ಅವರು ತಮ್ಮ ತಪದ ಮಹಿಮೆಯಿಂದ ದೈದೀಪ್ಯಮಾನರಾಗಿ ದೇವತೆಗಳ ಸ್ವರೂಪವನ್ನು ಹೊಂದುತ್ತಾರೆ. ಸಮಸ್ತ ಲೌಕಿಕ ವ್ಯವಹಾರಗಳನ್ನು ತ್ಯಜಿಸಿ ನಾವು ಮೌನ ವೃತ್ತಿಯಿಂದ ಉನ್ಮತ್ತ-ವತ್ (ಉತ್ಕೃಷ್ಟ ಆನಂದ ಸಹಿತ) ವಾಯು ಭಾವವನ್ನು (ಅಶರೀರ ಧ್ಯಾನವೃತ್ತಿಯನ್ನು) ಹೊಂದುತ್ತೇವೆ. ನೀವು–ಸಾಧಾರಣ ಮನುಷ್ಯರು–ನಮ್ಮ ಬಾಹ್ಯ ಶರೀರವನ್ನು ಮಾತ್ರ ಕಾಣುತ್ತೀರಿ. ನಮ್ಮ ನಿಜವಾದ ಆಂತರಿಕ ಸ್ವರೂಪವನ್ನು ಕಾಣುವುದಿಲ್ಲ. (ಹೀಗೆ ಆ ವಾತರಶನಾ ಮುನಿಗಳು ಪ್ರಕಟಮಾಡುತ್ತಾರೆ.)

ಋಗ್ವೇದದಲ್ಲಿ ಮೇಲಿನ ಋಚೆಗಳ ಜೊತೆಯಲ್ಲಿ 'ಕೇಶೀ'ಯ ಸ್ತುತಿಯನ್ನು ಮಾಡಲಾಗಿದೆ—

> ಕೇಶ್ಯಗ್ನಿಂ ಕೇಶೀ ವಿಷಂ ಕೇಶೀ ಬಿಭರ್ತಿ ರೋದಸೀ ।
> ಕೇಶೀ ವಿಶ್ವಂ ಸ್ವರ್ದೃಶೆ ಕೇಶೀದಂ ಜ್ಯೋತಿರುಚ್ಯತೆ ॥
>
> (ಋಗ್ವೇದ ೧೦, ೧೩೬, ೧)

ಕೇಶಿಯು ಅಗ್ನಿ, ಜಲ ಹಾಗು ಸ್ವರ್ಗ ಮತ್ತು ಪೃಥ್ವೀಗಳನ್ನು ಧಾರಣ ಮಾಡುತ್ತಾನೆ. ಕೇಶಿಯು ಸಮಸ್ತ ವಿಶ್ವದ ತತ್ವಗಳ ದರ್ಶನ ಮಾಡುತ್ತಾನೆ. ಕೇಶಿಯೇ ಪ್ರಕಾಶಮಾನ್ (ಜ್ಞಾನ–) ಜ್ಯೋತಿ (ಕೇವಲ ಜ್ಞಾನೀ) ಯೆನಿಸುತ್ತಾನೆ.

ಕೇಶಿಯ ಈ ಸ್ತುತಿಯು ಮೇಲೆ ಹೇಳಿದ ವಾತರಶನಾ ಮುನಿಗಳ ವರ್ಣನಾದಿಗಳಲ್ಲಿ ಬರುತ್ತದೆ. ಇದರಿಂದ ಕೇಶಿಯು ವಾತರಶನಾ ಮುನಿಗಳ ವರ್ಣನೆಯ ಪ್ರಧಾನ ಅಂಗವಾಗಿತ್ತೆಂದು ಗೊತ್ತಾಗುತ್ತದೆ.

ಋಗ್ವೇದದ ಈ ಕೇಶೀ ಮತ್ತು ವಾತರಶನಾ ಮುನಿಗಳ ಸಾಧನೆಯನ್ನೂ ಭಾಗವತ ಪುರಾಣದಲ್ಲಿ ಉಲ್ಲೇಖಗೊಂಡು ವಾತರಶನಾ ಶ್ರಮಣಋಷಿ ಹಾಗೂ ಅವರ ಅಧಿನಾಯಕನಾದ ಋಷಭದೇವ ಹಾಗೂ ಅವನ ಸಾಧನೆಗಳನ್ನೂ ತುಲನೆ ಮಾಡಿ ನೋಡಲು ಯೋಗ್ಯವಾಗಿವೆ. ಋಗ್ವೇದದ ವಾತರಶನಾಮುನಿ ಮತ್ತು ಭಾಗವತದ 'ವಾತರಶನಾ ಶ್ರಮಣ ಋಷಿ' ಇವರು ಒಂದೇ ಸಂಪ್ರದಾಯವನ್ನು ಸೂಚಿಸುತ್ತಾರೆ. ಇದರಲ್ಲಿ ಯಾರಿಗೂ ಯಾವ ಪ್ರಕಾರದ ಸಂದೇಹವನ್ನೂ ವ್ಯಕ್ತಗೊಳಿಸಲು ಅವಕಾಶವು ಕಂಡುಬರುವುದಿಲ್ಲ. ಕೇಶೀ ಎಂಬುದರ ಅರ್ಥವು ಕೇಶಧಾರೀ ಎಂದಾಗುತ್ತದೆ. ಇದರ ಅರ್ಥವನ್ನು ಸಾಯಣಾಚಾರ್ಯರು 'ಕೇಶ ಸ್ಥಾನೀಯ ರಶ್ಮಿಗಳನ್ನು ಧಾರಣ ಮಾಡುವಂಥವರು'—ಎಂದು ಮಾಡಿದ್ದಾರೆ. ಇದರಿಂದ ಸೂರ್ಯ ಎಂಬ ಅರ್ಥವನ್ನು ಸೂಚಿಸಿದ್ದಾರೆ. ಆದರೆ ಇದರಲ್ಲಿ ಯಾವ ಸಾರ್ಥಕತೆಯೂ ಇಲ್ಲ. ಅಲ್ಲದೆ ವಾತರಶನಾ ಮುನಿಗಳ ಸಂಗತಿಯೊಡನೆ ಹೊಂದಿಕೆಯಾಗುವುದೂ ಇಲ್ಲ. ಅವರ ಸಾಧನೆಯನ್ನು ವರ್ಣಿಸುವ ಸೂಕ್ತದಲ್ಲಿ ಇದು ಬಂದಿದೆ. ಕೇಶೀಯು ಸ್ಪಷ್ಟವಾಗಿ ವಾತರಶನಾ ಮುನಿಗಳ ಅಧಿನಾಯಕನೇ ಆಗುತ್ತಾನೆ. ಅವನ ಸಾಧನೆಯಲ್ಲಿ ಮಲಧಾರಣ, ಮೌನವೃತ್ತಿ

ದಲ್ಲಿ ನನಗೆ ಕೇಸರಿಯಾನಾಥನ ಸ್ಮರಣೆಯು ಉಂಟಾಗುತ್ತದೆ; ಅದು ಋಷಭನಾಥನ ಇನ್ನೊಂದು ಹೆಸರಾಗಿದೆ. ಕೇಸರ, ಕೇಶ ಮತ್ತು ಜಡೆ ಇವು ಒಂದೇ ಅರ್ಥವನ್ನು ಸೂಚಿಸುತ್ತವೆ. 'ಸಟಾ ಜಟಾ ಕೇಸರಯೋಃ.' ಸಿಂಹವೂ ಕೂಡ ತನ್ನ ಕೇಶದ ಮೂಲಕ ಕೇಸರಿ ಎನಿಸುತ್ತದೆ. ಇದೇ ಪ್ರಕಾರ ಕೇಶೀ ಮತ್ತು ಕೇಸರೀ ಈ ಪದಗಳು ಕೇಸರಿಯಾನಾಥ ಅಥವಾ ಋಷಭನಾಥನ ವಾಚಕವೆಂದು ಪ್ರತೀತಗೊಳ್ಳುತ್ತದೆ. ಕೇಸರಿಯಾನಾಥನ ಮೇಲೆ ಕೇಶರ ಏರಿಸುವದು ವಿಶೇಷವಾಗಿ ಪ್ರಚಾರದಲ್ಲಿದೆ. ಇದು ನಾಮ ಸಾಮ್ಯದಿಂದ ಉತ್ಪನ್ನವಾದ ಜನರ ನಡುವಳಿಯಾಗಿದೆ. ಜೈನ ಪುರಾಣಗಳಲ್ಲಿಯೂ ಕೂಡ ಋಷಭನ ಜಡೆಗಳ ವರ್ಣನೆಯು ಎಲ್ಲೆಲ್ಲಿಯೂ ನೋಡಲಿಕ್ಕೆ ದೊರೆಯುತ್ತದೆ. ಪದ್ಮಪುರಾಣ (೩, ೨೮೮) ದಲ್ಲಿ ವಾತೋದ್ಧತಾ ಜಟಾಸ್ತಸ್ಯ ರೇಜುರಾಕುಲಮೂರ್ತಯಃ' ಮತ್ತು ಹರಿವಂಶಪುರಾಣ(೯, ೨೦೪)ದಲ್ಲಿ 'ಸ ಪ್ರಲಂಬಜಟಾಭಾರ–ಭ್ರಾಜಿವಿಷ್ಣುಃ' ಎಂದು ವರ್ಣಿಸಿದ್ದುಂಟು. ಈ ಪ್ರಕಾರ ಋಗ್ವೇದದ ಕೇಶೀ, ವಾತರಶನಾ ಮುನಿ ಮತ್ತು ಭಾಗವತ ಪುರಾಣದ ಋಷಭ ಹಾಗೂ ವಾತರಶನಾ ಶ್ರಮಣಋಷಿ ಅದರಂತೆ ಕೇಸರಿಯಾನಾಥ, ಋಷಭ ತೀರ್ಥಂಕರ ಮತ್ತು ಅವರ ನಿರ್ಗ್ರಂಥ ಸಂಪ್ರದಾಯ ಇವೆಲ್ಲವೂ ಒಂದೇ ಎಂದು ಸಿದ್ಧವಾಗುತ್ತದೆ.

ಕೇಶೀ ಮತ್ತು ಋಷಭ ಇವರಿಬ್ಬರೂ ಒಂದೇ ವ್ಯಕ್ತಿಯೆಂದು ಅನುಮಾನ ಮಾಡಿದ ತರುವಾಯ ಒಮ್ಮೆಲೇ ನನ್ನ ದೃಷ್ಟಿಯು ಋಗ್ವೇದದ ಇನ್ನೊಂದು ಋಚೆಯು ಕಡೆಗೆ ಹರಿಯಿತು. ಅದರಲ್ಲಿ ಋಷಭ ಹಾಗೂ ಕೇಶೀ ಇವರ ಉಲ್ಲೇಖವು ಜೊತೆ–ಜೊತೆಯಲ್ಲಿಯೇ ಬಂದಿದೆ. ಆ ಋಚೆಯು ಈ ಪ್ರಕಾರವಿದೆ :—

> ಕಕರ್ದವೆ ವೃಷಭೊ ಯುಕ್ತ ಆಸೀದ್
> ಅವಾವಚೀತ್ ಸಾರಥಿರಸ್ಯ ಕೇಶೀ
> ದುಧರ್ಯುರ್ಕ್ತಸ್ಯ ದ್ರವ್ರತಃ ಸಹಾನಸ
> ಋಚ್ಛನ್ತಿ ಮಾ ನಿಷ್ಪದೊ ಮುದ್‌ಗಲಾನೀಮ್ ॥
>
> (ಋಗ್ವೇದ ೧೦, ೧೦೨, ೬)

ಯಾವ ಸೂಕ್ತದಲ್ಲಿ ಈ ಋಚೆಯು ಬಂದಿದೆಯೋ ಅದರ ಪ್ರಸ್ತಾವನೆಯಲ್ಲಿ ನಿರುಕ್ತದ 'ಮುದ್ಗಲಸ್ಯ ಹತಾಗಾವಃ' ಮೊದಲಾದ ಶ್ಲೋಕವು ಉದ್ಧೃತಗೊಂಡಿದೆ. ಅದಕ್ಕನುಸರಿಸಿ ಮುದ್ಗಲ ಋಷಿಯ ಆಕಳುಗಳನ್ನು ಕಳ್ಳರು ಕದ್ದು ಒಯ್ದಿದ್ದರೆಂದು ಗೊತ್ತಾಗುತ್ತದೆ. ಆ ಆಕಳುಗಳನ್ನು ತಿರುಗಿಸುವುದಕ್ಕೆ ಋಷಿಗಳು ಕೇಶೀ ವೃಷಭನನ್ನು ತಮ್ಮ ನೇತೃವನ್ನಾಗಿ ಮಾಡಿಕೊಂಡರು. ವೃಷಭನ ವಚನ ಮಾತ್ರದಿಂದ ಆ ಆಕಳುಗಳು ಮುಂದೆ ಸಾಗದೆ ಹಿಂದಿರುಗಿದುವು. ಈ ಋಚೆಯ ಅರ್ಥವನ್ನು ವಿವರಿಸುತ್ತ ಸಾಯಣಾಚಾರ್ಯರು ಮೊದಲು ವೃಷಭ ಮತ್ತು ಕೇಶೀ ಇವುಗಳ ವಾಚ್ಯಾರ್ಥ ಬೇರೆ ಬೇರೆಯಾಗಿ ಹೇಳಿದರು. ಆದರೆ ತಿರುಗಿ ಇನ್ನೊಂದು ರೀತಿಯಿಂದ ಅವರು ಹೀಗೆ ಹೇಳಿದ್ದಾರೆ :—

" ಅಥವಾ, ಅಸ್ಯ ಸಾರಥಿಃ ಸಹಾಯಭೂತಃ ಕೇಶೀ ಪ್ರಕೃಷ್ಟಕೇಶೋ ವೃಷಭಃ ಅವಾವ ಚೀತ್ ಭೃಶಮಶಬ್ದಯತ್ " ಇತ್ಯಾದಿ।

ಸಾಯಣನ ಈ ಅರ್ಥವನ್ನೂ ನಿರುಕ್ತದ ಮೇಲಿನ ಕಥಾ-ಪ್ರಸಂಗವನ್ನೂ ಭಾರತೀಯ ದಾರ್ಶನಿಕ ಪರಂಪರೆಗೆ ಅನುಸರಿಸಿ ಲಕ್ಷಗೊಟ್ಟು ನಿರೀಕ್ಷಿಸಿದಲ್ಲಿ ಈ ಸೂಕ್ತದ ಅರ್ಥವು ನನಗೆ ಹೀಗೆ ಹೊಳೆಯುತ್ತದೆ :—

ಮುದ್ಗಲ ಋಷಿಯ ಸಾರಥಿಯು—ವಿದ್ವಾನ್ ನೇತೃವು— ಕೇಶೀ ವೃಷಭನೆಂದು ನಿಯುಕ್ತಿಯನ್ನು ಹೊಂದಿದ್ದನು. ಶತ್ರುಗಳ ವಿನಾಶಕ್ಕಾಗಿ ಈ ನಿಯುಕ್ತಿಯು ಆಗಿತ್ತು. ಆ ಸಾರಥಿಯ ವಾಣಿಯು ಹೊರಟಿತು. ಅದರ ಫಲಸ್ವರೂಪವಾಗಿ ಮುದ್ಗಲ ಋಷಿಯ ಗೋವುಗಳು (ಇಂದ್ರಿಯಗಳು) ಹೂಡಿದ ದುರ್ಧರ ರಥದೊಡನೆ (ಶರೀರ) ಓಡುತ್ತಿದ್ದಂಥವು ನಿಶ್ಚಲವಾಗಿ ನಿಂತುವು. ಇಷ್ಟೇ ಅಲ್ಲ, ಮುದ್ಗಲನ ಸ್ವಾತ್ಮವೃತ್ತಿಯ ಕಡೆಗೆ ಮರಳಿದುವು.

ತಾತ್ಪರ್ಯವಿಷ್ಟೆ :—ಮುದ್ಗಲ ಋಷಿಯ ಇಂದ್ರಿಯಗಳು ಮೊದಲು ಪರಾಙ್ಮುಖಿಯಾಗಿದ್ದುವು. ಅವು ಯೋಗಿಯೂ ಜ್ಞಾನಿಯೂ ಆದ ಕೇಶೀ ವೃಷಭನ ಧರ್ಮೋಪದೇಶವನ್ನು ಕೇಳಿ ಅಂತರ್ಮುಖಿಯಾದುವು.

ಈ ಪ್ರಕಾರ ಕೇಶೀ ಮತ್ತು ವೃಷಭ ಅಥವಾ ಋಷಭ ಇವರ ಏಕತ್ವದ ಅರ್ಥವು ಸ್ವತಃ ಋಗ್ವೇದದಿಂದಲೇ ಸ್ಪಷ್ಟಗೊಳ್ಳುತ್ತದೆ. ವಿದ್ವಾಂಸರು ಈ ಏಕೀಕರಣದ ಮೇಲೆ ವಿಚಾರ ಮಾಡಲಿ. ವೇದದ ಅರ್ಥವನ್ನು ಮಾಡುವುದರಲ್ಲಿ ವಿದ್ವಾಂಸರು ಇನ್ನೂ ಸಫಲರಾಗಿಲ್ಲವೆಂಬುದನ್ನು ನಾನು ಈ ಮೊದಲೇ ಹೇಳಿದ್ದೇನೆ. ವಿಶೇಷವಾಗಿ ವೇದಗಳಿಗೆ ಭಾರತೀಯ ಸಂಸ್ಕೃತಿಯಲ್ಲಿ ಬಹು ಪ್ರತಿಷ್ಠೆಯ ಸ್ಥಾನವಿದೆ. ಈ ದೃಷ್ಟಿಯಿಂದ ವೇದಗಳನ್ನು ತಿಳಿದುಕೊಳ್ಳುವುದರಲ್ಲಿಯೂ ತಿಳಿಸಿ ಹೇಳುವುದರಲ್ಲಿಯೂ ಇನ್ನೂ ಬಹಳಷ್ಟು ಸುಧಾರಣೆಯಾಗುವ ಅವಶ್ಯಕತೆಯು ಇದೆ. ಕೇಶೀ, ವೃಷಭ ಅಥವಾ ಋಷಭ, ವಾತರಶನಾ ಮುನಿಗಳ ಬಗ್ಗೆ ವೇದದಲ್ಲಿರುವ ಸಮಸ್ತ ಉಲ್ಲೇಖಗಳನ್ನು ಕುರಿತು ಸೂಕ್ಷ್ಮ ಅಧ್ಯಯನ ಮಾಡುವುದರಿಂದ ಈ ವಿಷಯದ ರಹಸ್ಯವು ಸಂಪೂರ್ಣವಾಗಿ ಪ್ರಕಾಶಕ್ಕೆ ಬಂದೀತೆಂಬ ಆಶೆಯು ನನಗಿದೆ. ಋಗ್ವೇದದ (೪, ೫೮, ೩) ' ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹಾದೇವೋ ಮರ್ತ್ಯಾನಾವಿವೇಶ ' ಎಂಬುದರ ಅರ್ಥವು ತ್ರಿಧಾ (ಜ್ಞಾನ, ದರ್ಶನ ಮತ್ತು ಚಾರಿತ್ರದಿಂದ) ಕೂಡಿದ ವೃಷಭನು ಧರ್ಮಘೋಷಣೆಯಿಂದ ಅವನೊಬ್ಬನು ಮಹಾನ್ ದೇವನ ರೂಪದಿಂದ ಮರ್ತ್ಯರಲ್ಲಿ ಪ್ರವಿಷ್ಟನಾದನೆಂದೇಕೆ ಆಗಬಾರದು ? ಈ ಸಂಬಂಧದಲ್ಲಿ ಋಗ್ವೇದದ ಶಿಶ್ನದೇವ (ನಗ್ನದೇವ) ರನ್ನು ಆರಾಧಿಸುವವರ ಉಲ್ಲೇಖದ ಕಡೆಗೂ ನಾವು ದೃಷ್ಟಿಯನ್ನು ಬೀರಬೇಕು (ಋಗ್ವೇದ ೭, ೨೧, ೫ , ೧೦, ೯೯, ೩). ಈ ಪ್ರಕಾರ ಋಗ್ವೇದದಲ್ಲಿ ಉಲ್ಲೇಖಗೊಂಡ ವಾತರಶನಾ ಮುನಿಗಳು ನಿರ್ಗ್ರಂಥ ಮುನಿಗಳೆಂದೂ ಹಾಗೂ ಆ ಮುನಿಗಳ ನಾಯಕನಾದ ಕೇಶೀಮುನಿ ಅರ್ಥಾತ್ ಋಷಭ ದೇವನೆಂದೂ ಸಮೀಕರಣವಾಗುವುದರಿಂದ

ಜೈನ ಧರ್ಮದ ಪ್ರಾಚೀನ ಪರಂಪರೆಯ ಮೇಲೆ ಮಹತ್ವ ಪೂರ್ಣವಾದ ಪ್ರಕಾಶವು ಬೀಳುತ್ತದೆ. ವೇದಗಳ ರಚನಾಕಾಲದ ಬಗ್ಗೆ ವಿದ್ವಾಂಸರಲ್ಲಿ ಬಹಳಷ್ಟು ಮತ ಭೇದಗಳಿವೆ. ಅನೇಕ ಜನ ವಿದ್ವಾಂಸರು ಅವು ಕ್ರಿ.ಪೂ. ೫೦೦೦ ವರ್ಷ ಮತ್ತು ಅದಕ್ಕಿಂತಲೂ ಹೆಚ್ಚು ಪ್ರಾಚೀನ ಕಾಲದಲ್ಲಿ ರಚಿತವಾದವೆಂದು ತಿಳಿಯುತ್ತಾರೆ. ಆದರೆ ಆಧುನಿಕ ಪಾಶ್ಚಾತ್ಯ ಭಾರತೀಯ ವಿದ್ವಾಂಸರೆಲ್ಲರ ಬಹು ಮತದಲ್ಲಿ ವೇದಗಳ ಈಗಿನ ಸ್ವರೂಪದ ರಚನೆಯು ಕ್ರಿ.ಪೂ. ೧೫೦೦ ವರ್ಷಗಳ ಸುಮಾರಿನಲ್ಲಿ ಆಯಿತೆಂದು ಇದೆ. ನಾಲ್ಕೂ ವೇದಗಳಲ್ಲಿ ಋಗ್ವೇದವು ಎಲ್ಲಕ್ಕೂ ಪ್ರಾಚೀನವೆಂದು ತಿಳಿಯಲಾಗುತ್ತದೆ. ಅಂದಮೇಲೆ ಋಗ್ವೇದದ ಋಚೆಗಳಲ್ಲಿಯೇ ವಾತರಶನಾ ಮುನಿಗಳೂ 'ಕೇಶೀಋಷಭದೇವ'ನೂ ಉಲ್ಲೇಖಗೊಂಡುದರಿಂದ ಜೈನ ಧರ್ಮವು ತನ್ನ ಪ್ರಾಚೀನ ರೂಪದಲ್ಲಿ ಕ್ರಿ.ಪೂ.೧೫೦೦ ವರ್ಷದಲ್ಲಿ ಪ್ರಚಲಿತವಿತ್ತೆಂದು ಹೇಳಿದರೆ ಅನುಚಿತವಾಗಲಾರದು. ಕೇಶೀ ಎಂಬ ಹೆಸರು ಜೈನ ಪರಂಪರೆಯಲ್ಲಿ ಪ್ರಚಲಿತವಾಗಿರುತ್ತದೆ. ಇದಕ್ಕೆ ಭಗವಾನ್ ಮಹಾವೀರನ ಕಾಲದಲ್ಲಿ ಪಾರ್ಶ್ವ ಸಂಪ್ರದಾಯದ ನೇತೃವು ಕೇಶೀಕುಮಾರನಾಗಿದ್ದನೆಂಬುದು ಪ್ರಮಾಣವಾಗಿದೆ (ಉತ್ತರಾಧ್ಯಯನಸೂತ್ರ ೨೩).

ವೈದಿಕ ಋಚೆಗಳಲ್ಲಿಯೂ ಉಲ್ಲೇಖಗೊಂಡ ವಾತರಶನಾ ಮುನಿಗಳ ಮಾನ್ಯತೆ ಹಾಗೂ ಸಾಧನೆಗಳನ್ನು ನಿರೀಕ್ಷಿಸಿದಲ್ಲಿ ಈ ಪರಂಪರೆಯು ವೈದಿಕ ಪರಂಪರೆಯಿಂದ ಸ್ಪಷ್ಟವಾಗಿ ಭಿನ್ನವಾಗಿದೆಯೆಂದು ತಿಳಿಯುತ್ತದೆ. ವೈದಿಕ ಋಷಿಗಳು ವಾತರಶನಾ ಮುನಿಗಳಂತೆ ತ್ಯಾಗಿಗಳೂ ತಪಸ್ವಿಗಳೂ ಆಗಿಲ್ಲ. ವೈದಿಕ ಋಷಿಗಳು ಸ್ವತಃ ಗೃಹಸ್ಥರಾಗಿದ್ದಾರೆ. ಅಲ್ಲದೆ ಯಜ್ಞಕ್ಕೆ ಸಂಬಂಧಿಸಿದ ವಿಧಿ ವಿಧಾನಗಳಲ್ಲಿ ಆಸ್ಥೆಯನ್ನು ವಹಿಸುತ್ತಾರೆ. ಮೇಲಾಗಿ ತಮ್ಮ ಇಹಲೋಕದ ಇಚ್ಛೆಗಳನ್ನು—ಪುತ್ರ, ಧನ, ಧಾನ್ಯ ಮೊದಲಾದ ಸಂಪತ್ತುಗಳ ಪ್ರಾಪ್ತಿಗಾಗಿ ಇಂದ್ರಾದಿ ದೇವ ದೇವತೆಗಳನ್ನು ಆಹ್ವಾನಿಸುವುದನ್ನು—ಪೂರೈಸಿಕೊಳ್ಳುತ್ತಾರೆ. ಇನ್ನೊಬ್ಬರಿಗೆ ಪೂರೈಸಿಯೂ ಕೊಡುತ್ತಾರೆ. ಅದಕ್ಕೆ ಪ್ರತಿಫಲವೆಂದು ಯಜಮಾನರಿಂದ ಧನ, ಸಂಪತ್ತಿಗಳನ್ನು ದಾನರೂಪದಿಂದ ಸ್ವೀಕರಿಸುತ್ತಾರೆ. ಇದಕ್ಕೆ ವಿಪರೀತವಾಗಿ ವಾತರಶನಾ ಮುನಿಗಳು ಇಂಥ ಕ್ರಿಯೆಗಳಿಂದ ದೂರವಿರುತ್ತಾರೆ. ಸಮಸ್ತ ಮನೆ-ಮಠ, ಸ್ತ್ರೀ-ಪುತ್ರ, ಧನ-ಧಾನ್ಯ ಮೊದಲಾದ ಪರಿಗ್ರಹಗಳನ್ನು—ಮೈಮೇಲಿನ ವಸ್ತ್ರಗಳನ್ನು ಸಹ ಪರಿತ್ಯಜಿಸುವಷ್ಟರ ಮಟ್ಟಿಗೆ-ತ್ಯಜಿಸಿ ಭಿಕ್ಷಾ ವೃತ್ತಿಯಿಂದ ಜೀವಿಸುತ್ತಾರೆ. ಶರೀರದ ಸ್ನಾನಾದಿ ಸಂಸ್ಕಾರಗಳನ್ನು ಹೊಂದದೆ ಮಲಧಾರಿಗಳಾಗಿರುತ್ತಾರೆ, ಮೌನ ವೃತ್ತಿಯಿಂದ ಇರುತ್ತಾರೆ. ಅಲ್ಲದೆ ಅನ್ಯ ದೇವ-ದೇವತೆಗಳ ಆರಾಧನೆಯಿಂದ ಮುಕ್ತರೂ, ಆತ್ಮಧ್ಯಾನದಲ್ಲಿಯೇ ತಮ್ಮ ಕಲ್ಯಾಣವಿದೆ-ಯೆಂದು ತಿಳಿಯುವಂಥವರೂ ಆಗಿದ್ದರು. ಇದು ಶ್ರಮಣ ಪರಂಪರೆಯ ಪ್ರಾಚೀನ ರೂಪ-ವೆಂದು ಸ್ಪಷ್ಟವಾಗುತ್ತದೆ. ಇದು ಮುಂದಿನ ಕಾಲದಲ್ಲಿ ಅನೇಕ ಅವೈದಿಕ ಸಂಪ್ರದಾಯಗಳಿಗೆ ಜನ್ಮವಿತ್ತಿತು. ಅಂಥವುಗಳಲ್ಲಿಯೇ ಜೈನ ಮತ್ತು ಬೌದ್ಧ ಸಂಪ್ರದಾಯಗಳು ಇಂದೂ ಕೂಡ ಅಸ್ತಿತ್ವದಲ್ಲಿವೆ. ಪ್ರಾಚೀನ ಸಮಸ್ತ ಭಾರತೀಯ ಸಾಹಿತ್ಯ, ವೈದಿಕ,

ಬೌದ್ಧ ಮತ್ತು ಜೈನ ಆದರಂತೆ ಶಿಲಾಲೇಖಗಳಲ್ಲಿಯೂ ಬ್ರಾಹ್ಮಣ ಹಾಗೂ ಶ್ರಮಣ ಸಂಪ್ರದಾಯಗಳ ಉಲ್ಲೇಖವು ದೊರೆಯುತ್ತದೆ. ಜೈನ ಮತ್ತು ಬೌದ್ಧ ಸಾಧುಗಳಿಗೆ ಈಗಲೂ ಕೂಡ ಶ್ರಮಣರೆಂದು ಸಂಬೋಧಿಸುತ್ತಾರೆ. ವೈದಿಕ ಸಂಪ್ರದಾಯದ ಧಾರ್ಮಿಕ ಗುರುಗಳಿಗೆ ಋಷಿಗಳೆಂದು ಕರೆಯುತ್ತಿದ್ದರು. ಅವರ ವರ್ಣನೆಯು ಋಗ್ವೇದ ದಲ್ಲಿ ಮೇಲಿಂದ ಮೇಲೆ ಬರುತ್ತದೆ. ಆದರೆ ಶ್ರಮಣ ಪರಂಪರೆಯ ಸಾಧುಗಳಿಗೆ ಮುನಿ ಗಳೆಂದು ಸಂಜ್ಞೆ ಇತ್ತು. ಇವರ ಉಲ್ಲೇಖವು ಋಗ್ವೇದದಲ್ಲಿ ಕೇವಲ ಆ ವಾತರಶನಾ ಮುನಿಗಳ ಸಂಬಂಧವನ್ನುಳಿದು ಇನ್ನೆಲ್ಲಿಯೂ ಬರುವುದಿಲ್ಲ. ಋಷಿ-ಮುನಿಗಳೆಂದು ಹೇಳುವುದರಿಂದ ಎರಡು ಸಂಪ್ರದಾಯಗಳನ್ನು ಗ್ರಹಿಸಿ ತಿಳಿದುಕೊಳ್ಳಲಿಕ್ಕೆ ಬೇಕು. ಮುಂದೆ ಈ ಎರಡೂ ಸಂಪ್ರದಾಯಗಳಲ್ಲಿ ಪರಸ್ಪರ ಆದಾನ-ಪ್ರದಾನಗಳು ಬಹಳಷ್ಟು ಆಗಿವೆ. ಅದರಿಂದ ಬರಬರುತ್ತ ಎರಡೂ ಪದಗಳು ಒಂದರ ಪರ್ಯಾಯವಾಚಕ ಇನ್ನೊಂದೆಂದು ಸ್ವೀಕರಿಸುತ್ತ ಮುಂದೆ ಸಾಗಲಾಗಿದೆ.

### ವೈದಿಕ ಸಾಹಿತ್ಯದ ಯತಿ ಮತ್ತು ವ್ರಾತ್ಯ :—

ಋಗ್ವೇದದಲ್ಲಿ ಮುನಿಗಳ ಹೊರತಾಗಿ ಯತಿಗಳ ಉಲ್ಲೇಖವು ಬಹಳ ಕಡೆಗೆ ಬರುತ್ತದೆ. ಈ ಯತಿಗಳೂ ಕೂಡ ಬ್ರಾಹ್ಮಣ ಪರಂಪರೆಯವರಾಗಿರದೆ ಶ್ರಮಣ ಪರಂಪರೆಯ ಸಾಧುಗಳೆಂದೇ ಸಿದ್ಧವಾಗತ್ತದೆ. ಈ ಸಂಜ್ಞೆಯು—ಸಾಧುಗಳಿಗೆ ಯತಿ ಯೆಂದು ಹೇಳುವ—ಸಮಸ್ತ ಜೈನ ಸಾಹಿತ್ಯದಲ್ಲಿ ಈಗಲೂ ಪ್ರಚಾರದಲ್ಲಿದೆ. ಆದರೂ ಮೂಲದಲ್ಲಿ ಋಷಿ, ಮುನಿ ಮತ್ತು ಯತಿಗಳಲ್ಲಿ ಸಮಾನ ಭಾವವು ವ್ಯಕ್ತವಾಗಿದೆ; ಸಮಾನ ರೂಪದಿಂದ ಪೂಜ್ಯರೆಂದು ಮನ್ನಿಸಲಾಗಿದೆ. ಆದರೆ ಕೆಲವೊಂದು ಕಾಲದ ತರುವಾಯ ಯತಿಗಳ ವಿಷಯದಲ್ಲಿ ವೈದಿಕ ಪರಂಪರೆಯ ಬ್ರಾಹ್ಮಣ ಗ್ರಂಥಗಳಲ್ಲಿ ಬಹ ಳಷ್ಟು ಕೋಪವು ಉತ್ಪನ್ನವಾದುದನ್ನು ನಾವು ಕಾಣುತ್ತೇವೆ. ಇಲ್ಲಿ ಇಂದ್ರನ ಮುಖಾಂತರ ಯತಿಗಳನ್ನು ನರಿ ನಾಯಿಗಳಿಂದ ಬೇಟೆ ಯಾಡಿಸಿದ ಉಲ್ಲೇಖವೂ ದೊರೆಯುತ್ತದೆ (ತೈತ್ತರೀಯ ಸಂಹಿತಾ ೨, ೪, ೯, ೨, ೬, ೨, ೭, ೫. ತಾಂಡ್ಯ ಬ್ರಾಹ್ಮಣ ೧೪-೨-೨೮, -೧೮, ೧, ೯). ಆದರೆ ಇಂದ್ರನ ಈ ಕಾರ್ಯವನ್ನು ದೇವ ಗಣವು ಉಚಿತವೆಂದು ತಿಳಿಯಲಿಲ್ಲ. ಇಷ್ಟೇ ಅಲ್ಲ, ಅವರು ಇಂದ್ರನನ್ನು ಬಹಿಷ್ಕರಿಸಿ ದರು (ಐತರೇಯ ಬ್ರಾಹ್ಮಣ ೭, ೨೮). ತಾಂಡ್ಯ ಬ್ರಾಹ್ಮಣದ ಟೀಕಾಕಾರರು ಯತಿ ಎಂಬುದರ ಅರ್ಥವನ್ನು ಹೀಗೆ ಮಾಡಿದ್ದಾರೆ :—"ವೇದವಿರುದ್ಧನಿಯಮೋಪೇತ, ಕರ್ಮವಿರೋಧಿಜನ, ಜ್ಯೋತಿಷ್ಟೋಮಾದಿ ಅಕೃತ್ವಾ ಪ್ರಕಾರಾಂತರೇಣ ವರ್ತಮಾನ" ಆದಿ. ಈ ವಿಶೇಷಣಗಳಿಂದ ಇವರು ಶ್ರಮಣ ಪರಂಪರೆಯವರೆಂದು ಸ್ಪಷ್ಟವಾಗುತ್ತದೆ. ಭಗವದ್‌ಗೀತೆಯಲ್ಲಿ ಋಷಿ, ಮುನಿ, ಯತಿಗಳ ಸ್ವರೂಪವನ್ನು ಕುರಿತು ಹೇಳಿದೆ. ಇವರೆಲ್ಲರೂ ಸಮಾನ ರೂಪದಿಂದ ಯೋಗ ಸಾಧನೆಯಲ್ಲಿ ಪ್ರವೃತ್ತ ರೆಂದು ಮನ್ನಿಸಲಾಗಿದೆ. ಇಲ್ಲಿ ಮುನಿಗಳನ್ನು ಮನ ಹಾಗೂ ಇಂದ್ರಿಯಗಳ ಸಂಯಮ

ಮಾಡುವವರೆಂದೂ ಇಚ್ಛಾ, ಭಯ, ಕ್ರೋಧ ರಹಿತ ಮೋಕ್ಷಪರಾಯಣ ಹಾಗೂ ಸದಾ ಮುಕ್ತ ಸಮಾನರೆಂದು ಸ್ವೀಕರಿಸಲಾಗಿದೆ. (ಭ. ಗೀ. ೫, ೨೮.) ಇನ್ನು ಯತಿಗಳನ್ನು ಕಾಮ-ಕ್ರೋಧರಹಿತ, ಸಂಯತ-ಚಿತ್ತ ಮತ್ತು ವೀತರಾಗವೆಂದು ಹೇಳಿದೆ. (ಭ. ಗೀ. ೫, ೨೬; ೮, ೧೧. ಆದಿ). ಅಥರ್ವವೇದದ ೧೫ ನೆಯ ಅಧ್ಯಾಯದಲ್ಲಿ ವ್ರಾತ್ಯರ ವರ್ಣನೆಯು ಬಂದಿದೆ. ಸಾಮವೇದದ ತಾಂಡ್ಯ ಬ್ರಾಹ್ಮಣ ಮತ್ತು ಲಾಟ್ಯಾಯನ, ಕಾತ್ಯಾಯನ ಮತ್ತು ಆಪಸ್ತಂಬೀಯ ಶ್ರೌತ ಸೂತ್ರಗಳಲ್ಲಿ ವ್ರಾತ್ಯಸ್ತೋಮ-ವಿಧಿಯ ಮುಖಾಂತರ ಅವರನ್ನು ಶುದ್ಧಗೊಳಿಸಿ ವೈದಿಕ ಪರಂಪರೆಯಲ್ಲಿ ಸಮ್ಮಿಲಿತಗೊಳಿಸುವ ವರ್ಣನೆಯೂ ಕೂಡ ಇದೆ. ಈ ವ್ರಾತ್ಯರು ವೈದಿಕ ವಿಧಿಯಿಂದ 'ಅದೀಕ್ಷಿತ ಮತ್ತು ಸಂಸ್ಕಾರಹೀನ' ರಾಗಿದ್ದರು. ಅವರು 'ಅದುರುಕ್ತ ವಾಕ್ಯಗಳನ್ನು ದುರುಕ್ತ' ರೀತಿಯಿಂದ (ವೈದಿಕ ಮತ್ತು ಸಂಸ್ಕೃತವಲ್ಲದ ಆ ಸಮಯದ ಪ್ರಾಕೃತ ಭಾಷೆಯಲ್ಲಿ) ಮಾತನಾಡುತ್ತಿದ್ದರು. ಅವರು 'ಜ್ಯಾಹೃದ' (ಜ್ಯಾವಿಲ್ಲದ ಧನು) ಧರಿಸುತ್ತಿದ್ದರು. ಮನುಸ್ಮೃತಿಯಲ್ಲಿ (೧೦ ನೆಯ ಅಧ್ಯಾಯ) ಲಿಚ್ಛವಿ, ನಾಥ, ಮಲ್ಲ ಮೊದಲಾದ ಕ್ಷತ್ರಿಯ ಜಾತಿಯವರನ್ನು ವ್ರಾತ್ಯರಲ್ಲಿ ಪರಿಗಣಿಸಲಾಗಿದೆ. ಈ ಎಲ್ಲ ಉಲ್ಲೇಖಗಳನ್ನು ಸೂಕ್ಷ್ಮವಾಗಿ ವಿಚಾರಿಸಿದಲ್ಲಿ ಈ ವ್ರಾತ್ಯರೂ ಕೂಡ ಶ್ರಮಣ ಪರಂಪರೆಯ ಸಾಧುಗಳು ಹಾಗೂ ಗೃಹಸ್ಥರೂ ಆಗಿದ್ದರೆಂಬುದರಲ್ಲಿ ಸಂಶಯವು ಉಳಿಯುವುದಿಲ್ಲ. ಇವರು ವೇದ ವಿರೋಧಿಗಳಾದುದರಿಂದ ವೈದಿಕ ಅನುಯಾಯಿಗಳ ಕೋಪಕ್ಕೆ ಪಾತ್ರರಾಗಿದ್ದರು. ಜೈನಧರ್ಮದ ಮುಖ್ಯ ಅಹಿಂಸಾದಿ ಐದು ನಿಯಮಗಳಿಗೆ ವ್ರತವೆಂದು ಹೇಳಿದೆ. ಅವುಗಳನ್ನು ಸ್ವೀಕರಿಸುವಂಥ ಶ್ರಾವಕರು ದೇಶವಿರತ ಅಥವಾ ಅಣುವ್ರತಿಗಳೆನಿಸುತ್ತಾರೆ. ಮುನಿಗಳು ಮಹಾವ್ರತಿಗಳೆನಿಸುತ್ತಾರೆ. ವಿಧಿಗನುಸರಿಸಿ ವ್ರತಗಳನ್ನು ಗ್ರಹಣಮಾಡದೆ ಇದ್ದು, ಧರ್ಮದಲ್ಲಿ ಶ್ರದ್ಧೆಯುಳ್ಳವರು ಅವಿರತ ಸಮ್ಯಗ್ದೃಷ್ಟಿಗಳೆಂದು ಎನಿಸುವರು. ಇದೇ ಪ್ರಕಾರ ವ್ರತಧಾರಿಗಳನ್ನು ವ್ರಾತ್ಯರೆಂದು ಹೇಳಲಾಗುತ್ತಿದ್ದುದು ತಿಳಿಯುತ್ತದೆ. ಯಾಕಂದರೆ ಇವರು ಹಿಂಸಾತ್ಮಕ ಯಜ್ಞ ವಿಧಿಯ ನಿಯಮಗಳನ್ನು ತ್ಯಜಿಸಿದವರಾಗಿದ್ದರು. ಅದಕ್ಕಾಗಿ ಉಪನಿಷತ್ತುಗಳಲ್ಲಿ ಹಲವೆಡೆಗೆ ಇವರನ್ನು ಬಹು ಪ್ರಶಂಸಿಸಲಾಗಿದೆ. ಪ್ರಶ್ನೋಪನಿಷತ್ತಿನಲ್ಲಿ ಹೀಗೆ ಹೇಳಿದೆ :— 'ವ್ರಾತ್ಯಸ್ತ್ವಂ ಪ್ರಾಣೈಕ ಋಷಿರತಾ ವಿಶ್ವಸ್ಯ ಸತ್ಪತಿಃ' (೨. ೧೧). ಶಾಂಕರ ಭಾಷ್ಯದಲ್ಲಿ ವ್ರಾತ್ಯದ ಅರ್ಥವು 'ಸ್ವಭಾವತ ಏಕ ಶುದ್ಧ ಇತ್ಯಭಿಪ್ರಾಯಃ' ಎಂದು ಮಾಡಲಾಗಿದೆ. ಈ ಪ್ರಕಾರ ಶ್ರಮಣ ಸಾಧನೆಗಳ ಪರಂಪರೆಯು ವಿವಿಧ ಪ್ರಕಾರಗಳಲ್ಲಿ, ಋಗ್ವೇದವೇ ಮೊದಲಾದ ಎಲ್ಲ ವೈದಿಕ ಸಾಹಿತ್ಯದಲ್ಲಿಯೂ ಉಲ್ಲೇಖಗೊಂಡುದನ್ನು ನಾವು ಕಾಣುತ್ತೇವೆ.

**ತೀರ್ಥಂಕರ ನೇಮಿ :—**

ವೇದ ಕಾಲೀನ ಆದಿ ತೀರ್ಥಂಕರ ಋಷಭನಾಥನ ತರುವಾಯ ಆಗಿ ಹೋದ ಇಪ್ಪತ್ತುಮೂರು ಜನ ತೀರ್ಥಂಕರರ ಉಲ್ಲೇಖವು ಜೈನ ಪುರಾಣಗಳಲ್ಲಿ ದೊರೆಯುತ್ತ

ದಷ್ಟೆ. ಇವರಲ್ಲಿ ಹಲವರ ಚರಿತ್ರಗಳ ಅಧ್ಯಯನವನ್ನು ತುಲನಾತ್ಮಕ ದೃಷ್ಟಿಯಿಂದ ಮಾಡಲಿಕ್ಕೆ ಸಾಧನಗಳು ಉಪಲಬ್ಧವಿಲ್ಲ. ಆದರೂ ಕೊನೆಯ ನಾಲ್ಕು ಜನ ತೀರ್ಥಂಕರರ ಐತಿಹಾಸಿಕ ಸತ್ತೆಯನ್ನು ಇಲ್ಲಿ ಸ್ವಲ್ಪ ಮಟ್ಟಿಗೆ ಉಲ್ಲೇಖಿಸಬಹುದಾಗಿದೆ. ಇಪ್ಪತ್ತೊಂದನೆಯ ತೀರ್ಥಂಕರನು ನಮಿ ನಾಥನು. ನಮಿಯು ಮಿಥಿಲೆಯ ರಾಜನು. ಇವನನ್ನು ಹಿಂದುಗಳ ಪುರಾಣಗಳೂ ಸಹ ಜನಕನ ಪೂರ್ವಜನೆಂದು ಉಲ್ಲೇಖಿಸಿವೆ. ನಮಿಯ ಪ್ರವ್ರಜ್ಯೆಯ ಒಂದು ಸುಂದರ ವರ್ಣನೆಯು ನಮಗೆ ಉತ್ತರಾಧ್ಯಯನ ಸೂತ್ರದ ಒಂಭತ್ತನೆಯ ಅಧ್ಯಾಯದಲ್ಲಿ ನೋಡಲಿಕ್ಕೆ ಸಿಕ್ಕುತ್ತದೆ. ಅಲ್ಲಿ ನಮಿಯು ಹೇಳಿದ ವಾಕ್ಯಗಳು ವೈದಿಕ ಮತ್ತು ಬೌದ್ಧ ಪರಂಪರೆಯ ಸಂಸ್ಕೃತ ಹಾಗೂ ಪಾಲಿ ಸಾಹಿತ್ಯದಲ್ಲಿ ಪ್ರತಿಧ್ವನಿಗೊಳ್ಳುತ್ತಲಿರುವುದನ್ನು ಕಾಣುತ್ತೇವೆ. ಭಾರತೀಯ ಆಧ್ಯಾತ್ಮವಿದ್ಯೆಯಲ್ಲಿ ನಿಷ್ಕಾಮ ಕರ್ಮ ಮತ್ತು ಅನಾಸಕ್ತಿ ಭಾವನೆಗಳನ್ನು ಪ್ರಕಟಿಸಲಿಕ್ಕೆಂದು ಸರ್ವೋತ್ಕೃಷ್ಟ ವಚನಗಳೆಂದು ಅವುಗಳನ್ನು ಸ್ವೀಕರಿಸಲಾಗಿದೆ; ಅಲ್ಲದೆ ಅಲ್ಲಲ್ಲಿ ಉದಹರಿಸಲಾಗಿದೆ. ಆ ವಚನಗಳು ಹೀಗಿವೆ :—

ಸುಹಂ ವಸಾಮೊ ಜೀವಾಮೊ ಜೇಸಿಂ ಮೊ ಣತ್ಥಿ ಕಿಂಚಣ |
ಮಿಹಿಲಾಎ ಡಜ್ಝಮಾಣೀಎ ಣ ಮೆ ಡಜ್ಝಇ ಕಿಂಚಣ ||
(ಉತ್ತ. ೯–೧೪)

ಸುಸುಖಂ ಬತ ಜೀವಾಮ ಯೇಸಂ ನೋ ನತ್ಥಿ ಕಿಂಚನಂ |
ಮಿಥಿಲಾಯೆ ದಹಮಾನಾಯೆ ನ ಮೇ ಕಿಂಚಿ ಅದಹ್ಯಥ ||
(ಪಾಲಿ–ಮಹಾಜನಕ ಜಾತಕ)

ಮಿಥಿಲಾಯಾಂ ಪ್ರದೀಪ್ತಾಯಾಂ ನ ಮೇ ಕಿಞ್ಚನ ದಹ್ಯತೆ ||
(ಮ. ಭಾ. ಶಾಂತಿಪರ್ವ)

ನಮಿಯ ಈ ಅನಾಸಕ್ತಿ ವೃತ್ತಿಯು ಮಿಥಿಲೆಯ ರಾಜವಂಶದಲ್ಲಿ ಜನಕನ ವರೆಗೆ ನೋಡಲಿಕ್ಕೆ ಸಿಕ್ಕುತ್ತದೆ. ಇದೇ ಆಧ್ಯಾತ್ಮ ಪರಂಪರೆಯು ಕಾರಣವಾಗಿ ಆ ವಂಶವೂ, ಆ ವಂಶದವರು ಆಳಿದ ಪ್ರದೇಶವೂ ವಿದೇಹ–ದೇಹದಲ್ಲಿ ನಿರ್ಮೋಹಿ, ಜೀವನ್ಮುಕ್ತ–ಎಂಬ ಹೆಸರಿಗೆ ಪಾತ್ರವಾದುವೆಂದು ಪ್ರತೀತಿಯು ಇದೆ. ಅವನ ಅಹಿಂಸಾತ್ಮಕ ಪ್ರವೃತ್ತಿಯ ಕಾರಣದಿಂದ ಅವನ ಧನುಸ್ಸವು ಕ್ಷತ್ರಿಯತ್ವದ ಪ್ರತೀಕ ಮಾತ್ರವಾಗಿ ಉಳಿದಿದೆ. ಸ್ವಾಭಾವಿಕವಾಗಿ ಅದು ಜೀರ್ಣ ಧನುಸ್ಸವಾಗಿರಬೇಕು. ಇದರ ಹೆದೆಯನ್ನೇ ರಾಮನು ಏರಿಸಿ, ಮುರಿದು ಬಿಟ್ಟನು. ಈ ಸಂದರ್ಭದಲ್ಲಿ ವ್ರಾತ್ಯರನ್ನು 'ಜ್ಯಾಹೃದ' ಶಸ್ತ್ರಧಾರಿಗಳೆಂದು ಮೇಲೆ ವರ್ಣಿಸಿದ ಸಂಗತಿಯನ್ನು ಕೂಡ ನೆನೆಯಬೇಕು.

**ತೀರ್ಥಂಕರ ನೇಮಿನಾಥ :—**

ತರುವಾಯ, ಮಹಾಭಾರತದ ಕಾಲದಲ್ಲಿ ಇಪ್ಪತ್ತೆರಡನೆಯ ತೀರ್ಥಂಕರನಾದ ನೇಮಿನಾಥನು ಆದನು. ಇವನ ವಂಶ ಪರಂಪರೆಯನ್ನು ಈ ಪ್ರಕಾರ ಹೇಳಲಾಗಿದೆ :—ಶೌರೀಪುರದ ಯಾದವ ವಂಶದ ರಾಜನಾದ ಅಂಧಕವೃಷ್ಣಿಯ ಹಿರಿಯ ಮಗನು ಸಮುದ್ರ ವಿಜಯನು. ಇವನಿಗೆ ನೇಮಿನಾಥನು ಜನಿಸಿದನು. ಅಂಧಕವೃಷ್ಣಿಗೆ ಎಲ್ಲಕ್ಕೂ ಚಿಕ್ಕಮಗನು ವಸುದೇವನು. ಇವನಿಗೆ ಜನಿಸಿದವನು ಕೃಷ್ಣನು. ಈತನು ವಾಸುದೇವನೆಂದೂ ಪ್ರಸಿದ್ಧನಾದನು. ಹೀಗೆ ನೇಮಿನಾಥ ಹಾಗು ಕೃಷ್ಣರು ಪರಸ್ಪರರು ಹಿರಿ–ಕಿರಯ್ಯನ ಮಕ್ಕಳಾಗುತ್ತಾರೆ, ಬಂಧುಗಳೆನಿಸುತ್ತಾರೆ. ಜರಾಸಂಧನ ಆತಂಕದಿಂದ ತ್ರಸ್ತರಾದ ಯಾದವರು ಶೌರೀ ಪುರವನ್ನು ತ್ಯಜಿಸಿ, ದ್ವಾರಕೆಯಲ್ಲಿ ಹೋಗಿ ನೆಲಸಿದರು. ನೇಮಿನಾಥನ ವಿವಾಹ ಸಂಬಂಧವು ಗಿರನಾರದ ರಾಜನಾದ ಉಗ್ರಸೇನನ ಮಗಳಾದ ರಾಜಮತಿಯೊಡನೆ ನಿಶ್ಚಯವಾಯಿತು. ಲಗ್ನ ಸಮಾರಂಭಕ್ಕಾಗಿ ನೇಮಿನಾಥನು ವೈಭವದಿಂದ ಮಾವನ ಮನೆಗೆ ಮೆರವಣಿಗೆಯಿಂದ ತೆರಳಿದನು. ಆದರೆ ಅಲ್ಲಿ ಅವನು ಕಂಡುದೇನು? ಅತಿಥಿಗಳ ಭೋಜನ ಸಮಾರಂಭಕ್ಕೆಂದು ತಂದು ಕಟ್ಟಿದ ಸಾವಿರಾರು ಪಶುಗಳನ್ನು! ಅವುಗಳ ಮರಣ ಸ್ಥಿತಿಯನ್ನು ಕಂಡು ನೇಮಿನಾಥನ ದಯಾಮಯವಾದ ಮನಸ್ಸು ಕರಗಿತು. ಹಿಂಸಾಮಯವಾದ ಈ ಗೃಹಸ್ಥ ಜೀವನವೇ ಬೇಡವೆಂದನು. ವ್ಯಾಕುಲತೆಯಿಂದ ವಿರಕ್ತಗೊಂಡನು. ವಿವಾಹದ ವಿಚಾರವನ್ನೇ ತ್ಯಜಿಸಿದನು. ಗಿರನಾರ ಗಿರಿಗೆ ತೆರಳಿದನು. ತಪಸ್ಸಿಗೆ ತೊಡಗಿದನು. ಅವನು ಕೇವಲಜ್ಞಾನವನ್ನು ಪಡೆದು, ಶ್ರಮಣ ಪರಂಪರೆಯನ್ನು ಪುಷ್ಟಗೊಳಿಸಿದನು. ನೇಮಿನಾಥನು ಈ ಪರಂಪರೆಗೆ ಇತ್ತ ವಿಶೇಷ ಕಾಣಿಕೆಯು ಹೀಗಿದೆ—'ಅವನು ಅಹಿಂಸೆಯನ್ನು ಧಾರ್ಮಿಕ ದೃಷ್ಟಿಯ ಮೂಲವೆಂದು ತಿಳಿದು, ಅದಕ್ಕೆ ಸೈದ್ಧಾಂತಿಕ ರೂಪವನ್ನು ಕೊಟ್ಟನು.' ಮಹಾಭಾರತದ ಕಾಲವನ್ನು ಸುಮಾರು ಕ್ರಿ. ಶ. ಪೂರ್ವ ಒಂದು ಸಾವಿರ ವರುಷವೆಂದು ಮನ್ನಿಸಲಾಗುತ್ತಿದೆ. ಅದಕ್ಕಾಗಿ ಐತಿಹಾಸಿಕ ದೃಷ್ಟಿಯಿಂದ ನೇಮಿನಾಥನ ಕಾಲವು ಅದೇ ಎಂದು ತಿಳಿಯುವುದು ಉಚಿತವಾಗಿದೆ. ಇನ್ನು ಮಹಾಭಾರತದ ಶಾಂತಿಪರ್ವದಲ್ಲಿ ಭಗವಾನ್ ತೀರ್ಥವತ್‌ಹಾಗು ಅವನ ಮುಖಾಂತರ ಕೊಡಲ್ಪಟ್ಟದ್ದೆಂದು ಬಹು ಉಪದೇಶವು ದೊರೆಯುತ್ತದೆ. ಅದು ಜೈನ ತೀರ್ಥಂಕರರು ಉಪದೇಶಿಸಿದ ಧರ್ಮಕ್ಕೆ ಸಮರೂಪವಾಗಿದೆ. ಇದನ್ನೂ ಕೂಡ ಈ ಸಂದರ್ಭದಲ್ಲಿ ನೆನೆಯುವುದು ಉಚಿತವಾಗಿದೆ.

**ತೀರ್ಥಂಕರ ಪಾರ್ಶ್ವನಾಥ :—**

ಇಪ್ಪತ್ತಮೂರನೆಯ ತೀರ್ಥಂಕರನಾದ ಭ. ಪಾರ್ಶ್ವನಾಥನ ಜನ್ಮವು ಬನಾರಸದ ರಾಜನಾದ ಅಶ್ವಸೇನ ಹಾಗೂ ಅವನ ರಾಣಿಯಾದ ವರ್ಮಲಾ (ವಾಮಾ) ದೇವಿಯಿಂದ ಆಯಿತು. ಅವನು ಮೂವತ್ತು ವರ್ಷದ ವಯಸ್ಸಿನಲ್ಲಿ ಮನೆಯನ್ನು ತ್ಯಜಿಸಿ, ಸಮ್ಮೇದ ಶಿಖರ ಪರ್ವತಕ್ಕೆ ತೆರಳಿ ತಪಸ್ಸನ್ನು ಮಾಡಿದನು. ಈ ಪರ್ವತವು

ಇಂದಿನವರೆಗೂ ಪಾರಸನಾಥ ಪರ್ವತವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇವನು ಕೇವಲಜ್ಞಾನವನ್ನು ಸಂಪಾದಿಸಿ ಎಪ್ಪತ್ತು ವರ್ಷಗಳ ವರೆಗೆ ಶ್ರಮಣಧರ್ಮದ ಉಪದೇಶ ಮಾಡಿದನು, ಪ್ರಸಾರವನ್ನೂ ಕೈಕೊಂಡನು. ಜೈನ ಪುರಾಣಗಳಿಗನುಸರಿಸಿ ಇವನ ನಿರ್ವಾಣವು ಭಗವಾನ್ ಮಹಾವೀರನ ನಿರ್ವಾಣಕ್ಕಿಂತ ೨೫೦ ವರ್ಷ ಪೂರ್ವದಲ್ಲಿ ಆದದ್ದು ಇದೆ. ಇದು ಕ್ರಿ. ಪೂ. ೭೭೭ =(೫೨೭+೨೫೦) ವರ್ಷವಾಗುತ್ತದೆ. ಪಾರ್ಶ್ವನಾಥನ ಪ್ರಭಾವವು ಶ್ರಮಣ ಪರಂಪರೆಯ ಮೇಲೆ ಬಹಳ ಗಾಢವಾಗಿದೆ. ಅದರ ಪರಿಣಾಮ ಸ್ವರೂಪವಾಗಿ ಈಗಲೂ ಕೂಡ ಜೈನ ಸಮಾಜವು ಪಾರ್ಶ್ವನಾಥನ ಅನುಯಾಯಿಗಳೆಂದೇ ಮನ್ನಿಸಲ್ಪಡುತ್ತಾರೆ. ಪಾರ್ಶ್ವನಾಥನು, ಋಷಭನಾಥನ ಸರ್ವಸ್ವತ್ಯಾಗರೂಪದ ಅಕಿಂಚನ ಮುನಿವೃತ್ತಿಯನ್ನೂ ನಮಿಯ ನಿರೀಹತೆಯನ್ನೂ ಮತ್ತು ನೇಮಿನಾಥನ ಅಹಿಂಸೆಯನ್ನೂ ತನ್ನ ಚಾತುರ್ಯಾಮ ರೂಪದ ಸಾಮಾಯಿಕ ಧರ್ಮದಲ್ಲಿ ವ್ಯವಸ್ಥಿತಗೊಳಿಸಿದನು. ಚಾತುರ್ಯಾಮದ ಉಲ್ಲೇಖವು ನಿರ್ಗ್ರಂಥರ ಸಂಬಂಧದಲ್ಲಿ ಪಾಲೀ ಗ್ರಂಥಗಳಲ್ಲಿಯೂ ನೋಡಲಿಕ್ಕೆ ದೊರೆಯುತ್ತದೆ. ಅದರಂತೆ ಜೈನಾಗಮಗಳಲ್ಲಿಯೂ ಬರುತ್ತದೆ. ಆದರೆ ಇವೆರಡರಲ್ಲಿ ನಾಲ್ಕು ಯಾಮಗಳಾವವು ?—ಎಂಬ ವಿಷಯದಲ್ಲಿ ಮತಭೇದವಿದೆ. ಜೈನ ಆಗಮಗಳಿಗೆ ಅನುಸರಿಸಿ ಪಾರ್ಶ್ವನಾಥನ ಚತುರ್ಯಾಮಗಳು ಈ ಪ್ರಕಾರ ಇವೆ :—(೧) ಸರ್ವಪ್ರಾಣಾತಿಕ್ರಮದಿಂದ ವಿರಮಣ, (೨) ಸರ್ವ ಮೃಷಾವಾದದಿಂದ ವಿರಮಣ, (೩) ಸರ್ವ ಅದತ್ತಾದಾನದಿಂದ ವಿರಮಣ, (೪) ಸರ್ವಬಹಿದ್ಧಾದಾನದಿಂದ ವಿರಮಣ. ಪಾರ್ಶ್ವನಾಥನ ಚಾತುರ್ಯಾಮರೂಪ ಸಾಮಾಯಿಕ ಧರ್ಮವು ಮಹಾವೀರನ ಪೂರ್ವಕಾಲದಲ್ಲಿಯೂ ಕೂಡ ಸುಪ್ರಚಲಿತವಾಗಿತ್ತು. ಇದನ್ನು ದಿಗಂಬರ ಶ್ವೇತಾಂಬರ ಪರಂಪರೆಗಳೆರಡೂ ಸ್ವೀಕರಿಸುತ್ತವೆ. ಅಲ್ಲದೆ ಬೌದ್ಧರ ಪಾಲೀ ಗ್ರಂಥಗಳ ಉಲ್ಲೇಖಗಳಿಂದಲೂ ಸಂಪೂರ್ಣವಾಗಿ ಸಿದ್ಧವಾಗುತ್ತದೆ. ಭ. ಮಹಾವೀರನ ಪೂರ್ವದ ತೀರ್ಥಂಕರರು ಸಾಮಾಯಿಕ ಸಂಯಮದ ಉಪದೇಶವನ್ನು ನೀಡಿದ್ದರೆಂದು ಮೂಲಾಚಾರವು (೭, ೩೬-೩೮) ಸ್ಪಷ್ಟವಾಗಿ ಉಲ್ಲೇಖಿಸುತ್ತದೆ. ಅದರಲ್ಲಿ ಅಪರಾಧವಾದಾಗ ಮಾತ್ರ ಪ್ರತಿಕ್ರಮಣ ಮಾಡಲು ಹೇಳಿದೆ. ಆದರೆ ಮಹಾವೀರನು ಸಾಮಾಯಿಕ ಧರ್ಮದ ಸ್ಥಾನದಲ್ಲಿ ಛೇದೋಪಸ್ಥಾಪನಾ ಸಂಯಮವನ್ನು ನಿರ್ಧರಿಸಿದನು, ಮತ್ತು ಪ್ರತಿಕ್ರಮಣವನ್ನು ನಿಯಮದಿಂದ ಮಾಡುವ ಉಪದೇಶವನ್ನಿತ್ತನು (ಮೂ. ೧೨೯-೧೩೩). ಇದೇ ಸಂಗತಿಯು ಭಗವತೀ (೨೦, ೮, ೬೭೫; ೨೫, ೭, ೭೮೫), ಉತ್ತರಾಧ್ಯಯನ ಮೊದಲಾದ ಆಗಮಗಳಲ್ಲಿಯೂ ತತ್ತ್ವಾರ್ಥ ಸೂತ್ರದ (೯, ೧೮) ಸಿದ್ಧಸೇನೀಯ ಟೀಕೆಯಲ್ಲಿಯೂ ಬಂದಿರುತ್ತದೆ. ಬೌದ್ಧ ಗ್ರಂಥವಾದ ಅಂಗುತ್ತರ ನಿಕಾಯ ಚತುಕ್ಕನಿಪಾತ (ವಗ್ಗ ೫) ಮತ್ತು ಅದರ ಅಟ್ಠಕಥೆಯಲ್ಲಿ ಹೀಗೆ ಉಲ್ಲೇಖಗೊಂಡಿದೆ :—ಗೌತಮಬುದ್ಧನ ಕಕ್ಕನಾದ 'ಬಪ್ಪಶಾಕ್ಯ'ನು ನಿರ್ಗ್ರಂಥ ಶ್ರಾವಕನಿದ್ದನು. ಪಾರ್ಶ್ವಪಿತಾ ಹಾಗೂ ನಿರ್ಗ್ರಂಥ ಶ್ರಾವಕರ ಬಗ್ಗೆ ಇದೇ ಪ್ರಕಾರ ಅನೇಕ ಉಲ್ಲೇಖಗಳು ಲಭಿಸುತ್ತವೆ. ಇವೆಲ್ಲವುಗಳಿಂದ ನಿರ್ಗ್ರಂಥ

ಸಂಪ್ರದಾಯದ ಅಸ್ತಿತ್ವವು ಬುದ್ಧನ ಪೂರ್ವದಲ್ಲಿಯೂ ಇದ್ದದ್ದು ಚೆನ್ನಾಗಿ ಸಿದ್ಧವಾಗುತ್ತದೆ.

ಪಾರ್ಶ್ವನಾಥ ಹಾಗೂ ಅವನ ಪೂರ್ವದ ಜೈನ ತೀರ್ಥಂಕರರನ್ನೂ ಜೈನಧರ್ಮದ ಅಸ್ತಿತ್ವವನ್ನೂ ಪಾಶ್ಚಾತ್ಯ ವಿದ್ವಾಂಸರು ಸ್ವೀಕರಿಸದ ಒಂದು ಕಾಲವು ಇತ್ತು. ಆದರೆ ಈಗ ಜರ್ಮನ್ ವಿದ್ವಾಂಸನಾದ ಹರ್ಮನ್ ಜಾಕೋಬಿಯು ಜೈನ ಮತ್ತು ಬೌದ್ಧ ಪ್ರಾಚೀನ ಸಾಹಿತ್ಯಗಳನ್ನು ಸೂಕ್ಷ್ಮವಾಗಿ ಅಭ್ಯಸಿಸಿ, ಮಹಾವೀರನ ಪೂರ್ವದಲ್ಲಿಯೂ ನಿರ್ಗ್ರಂಥ ಧರ್ಮದ ಅಸ್ತಿತ್ವವನ್ನು ಸಿದ್ಧಮಾಡಿದನು. ಅಂದಿನಿಂದ ವಿದ್ವಾಂಸರು ಪಾರ್ಶ್ವನಾಥನ ಐತಿಹಾಸಿಕತೆಯನ್ನು ಸ್ವೀಕರಿಸತೊಡಗಿದರು. ಅಲ್ಲದೆ ಅವರು ಅವನನ್ನು ಮಹಾವೀರನ ಪೂರ್ವದಲ್ಲಿ ೨೫೦ ವರ್ಷಗಳ ಹಿಂದೆ ನಿರ್ವಾಣ ಹೊಂದಿದನೆಂದು ಹೇಳುವ ಜೈನ ಪರಂಪರೆಯನ್ನು ಮನ್ನಿಸತೊಡಗಿದರು. ಬೌದ್ಧ ಗ್ರಂಥಗಳಲ್ಲಿ ದೊರೆಯುವ ನಿರ್ಗ್ರಂಥರ ಚತುರ್ಯಾಮಗಳ ಉಲ್ಲೇಖವು ಅದು ನಿರ್ಗ್ರಂಥ ನಾಥಪುತ್ರನ (ಮಹಾವೀರ) ಧರ್ಮವೆಂದು ಸೂಚಿಸಿದೆ. ಈ ಚತುರ್ಯಾಮ ಧರ್ಮದ ಸಂಬಂಧವು ಪಾರ್ಶ್ವನಾಥನ ಪರಂಪರೆಗೆ ಸಂಬಂಧಿಸಿದ್ದಾಗಿದೆ, ಯಾಕೆಂದರೆ ಜೈನ ಸಂಪ್ರದಾಯದಲ್ಲಿ ಚತುರ್ಯಾಮದ ಉಲ್ಲೇಖವು ಪಾರ್ಶ್ವನಾಥನೊಡನೆಯೇ ಇದೆ. ಮಹಾವೀರನ ಸಂಬಂಧವು ಅದಕ್ಕಿಲ್ಲ. ಮಹಾವೀರನು ಐದು ವ್ರತಗಳ ಸಂಸ್ಥಾಪಕನೆಂದೇ ಹೇಳಿದೆ, ಬೌದ್ಧ ಧರ್ಮದ ಕೆಲವೊಂದು ಆಚರಣೆಗಳನ್ನು ನಿಗ್ರಂಥರಿಂದ ತಕ್ಕೊಂಡು ಆಚರಿಸಲಾಗುತ್ತದೆ. ಉದಾ: ಉಪೋಸಥ (ಮಹಾವಗ್ಗ ೨, ೧, ೧), ವರ್ಷಾವಾಸ (ಮ. ೩, ೧,೧). ಇವೂ ಕೂಡ ಪಾರ್ಶ್ವನಾಥನ ಪರಂಪರೆಯವಾಗಿರಲಿಕ್ಕೆ ಬೇಕು. ಬುದ್ಧನನ್ನು ಯಾವ ಶ್ರಮಣ ಸಾಧುಗಳ ಸಮಕಾಲೀನನೆಂದು ಪಾಲೀ ಗ್ರಂಥಗಳು ಹೇಳುತ್ತವೆಯೋ ಅವರೂ ಕೂಡ ಪಾರ್ಶ್ವನಾಥನ ಪರಂಪರೆಯವರೆಂದೇ ಮನ್ನಿಸಲಾಗುತ್ತದೆ.

### ತೀರ್ಥಂಕರ ವರ್ಧಮಾನ ಮಹಾವೀರ :—

ಭಗವಾನ್ ಮಹಾವೀರನು ಜೈನರ ಅಂತಿಮ ತೀರ್ಥಂಕರನು. ಇವನ ತಂದೆ-ತಾಯಂದಿರು ಇಪ್ಪತ್ತಮೂರನೆಯ ತೀರ್ಥಂಕರನಾದ ಪಾರ್ಶ್ವನಾಥನ ಸಂಪ್ರದಾಯದ ಅನುಯಾಯಿಗಳೆಂದು ಜೈನಾಗಮಗಳು (ಆಚಾರಂಗ ೩, ಭಾವಚೂಲಿಕಾ ೩, ಸೂತ್ರ ೪೦೧) ಸ್ಪಷ್ಟವಾಗಿ ಉಲ್ಲೇಖಿಸುತ್ತವೆ. ಇಷ್ಟೇ ಅಲ್ಲ, ಅವನು ಪ್ರವ್ರಜಿತನಾದ ಮೇಲೆ ಸಾಮಾಯಿಕ ಧರ್ಮವನ್ನು ಗ್ರಹಣ ಮಾಡಿದನೆಂದೂ, ತರುವಾಯ ಕೇವಲಜ್ಞಾನಿಯಾದ ಮೇಲೆ ಛೇದೋಪಸ್ಥಾಪನಾ ಸಂಯಮದ ವಿಧಾನವನ್ನು ಮಾಡಿದನು. (ಆಚಾರಾಂಗ ೨, ೧೫, ೧೦೧೩). ಮಹಾವೀರನ ತಂದೆಯಾದ ಸಿದ್ಧಾರ್ಥನು ಕುಂಡಪುರದ ರಾಜನಾಗಿದ್ದನು. ಅವನ ತಾಯಿಯಾದ ತ್ರಿಶಲಾದೇವಿಯು ಲಿಚ್ಛವಿ ವಂಶದ ರಾಜನಾದ ಚೇಟಕನ ಮಗಳು. ಇನ್ನೊಂದು ಪರಂಪರೆಯು ತ್ರಿಶಲೆಯು ಚೇಟಕನ ತಂಗಿಯೆಂದು ಹೇಳುತ್ತದೆ. ಅವನ ತಂದೆಯ ಗೋತ್ರವು ನಾಯ, ನಾಥ, ನಾತ (ಸಂಸ್ಕೃತ ಜ್ಞಾತೃ)

ಎಂಡಿತ್ತು. ಇದೇ ಕಾರಣದಿಂದ ಬೌದ್ಧ ಪಾಲೀ ಗ್ರಂಥಗಳಲ್ಲಿ ನಾತಪುತ್ತ ಎಂಬ ಹೆಸರಿನಿಂದ ವರ್ಧಮಾನನನ್ನು ಉಲ್ಲೇಖಿಸಿದ್ದುಂಟು. ಭಗವಾನ್‌ನ ಜನ್ಮಸ್ಥಾನವು ಕುಂಡಪುರವೆಂದು ಹೇಳಿದೆ. ಈ ವಿಷಯದಲ್ಲಿ ತರುವಾಯದ ಜೈನ ಸಾಹಿತ್ಯದಲ್ಲಿ ಭ್ರಾಂತಿಯು ಉತ್ಪನ್ನವಾದಂತೆ ಕಂಡುಬರುತ್ತದೆ. ದಿಗಂಬರ ಸಂಪ್ರದಾಯವು ನಾಲಂದಾಕ್ಕೆ ಸಮೀಪದಲ್ಲಿರುವ ಕುಂಡಲಪುರವನ್ನು ಭಗವಂತನ ಜನ್ಮಸ್ಥಾನವೆಂದು ಮನ್ನಿಸುತ್ತ ಬಂದಿದೆ. ಶ್ವೇತಾಂಬರ ಸಂಪ್ರದಾಯವು ಮುಂಗೇರ ಜಿಲ್ಲೆಯ ಲಛುಆಡದ ನೆರೆಯಲ್ಲಿರುವ ಕ್ಷತ್ರಿಯ ಕುಂಡಗ್ರಾಮವನ್ನು ಈ ತೀರ್ಥಂಕರನ ಜನ್ಮಭೂಮಿಯೆಂದು ಗೌರವಿಸುತ್ತದೆ. ಆದರೆ ಜೈನಾಗಮಗಳಲ್ಲಿಯೂ ಪುರಾಣಗಳಲ್ಲಿಯೂ ವರ್ಣಿತಗೊಂಡ ಭಗವಾನ್ ಮಹಾವೀರನ ಜನ್ಮಸ್ಥಾನಕ್ಕೆ ಸಂಬಂಧಿಸಿದ ಸ್ಥಳ ವಿಶೇಷಗಳು ಇವೆರಡೂ ಸ್ಥಾನಗಳಿಗೆ ಅನ್ವಯಿಸುವದಿಲ್ಲ. ಎರಡೂ ಪರಂಪರೆಗಳಿಗೆ ಅನುಸರಿಸಿ ಭಗವಂತನ ಜನ್ಮಭೂಮಿಯಾದ ಕುಂಡಪುರವು ವಿದೇಹ ದೇಶದಲ್ಲಿದೆ (ಹ. ಪು. ೨, ೪; ಉ. ಪು. ೭೪, ೨೫೧). ಇದೇ ಕಾರಣದಿಂದ ಭಗವಾನ್ ಮಹಾವೀರನನ್ನು ವಿದೇಹ ಪುತ್ರ, ವಿದೇಹ ಸುಕುಮಾರ ಮೊದಲಾದ ಉಪನಾಮಗಳಿಂದ ಸಂಬೋಧಿಸಲಾಗಿದೆ. ಇಷ್ಟೇ ಅಲ್ಲದೆ ಅವನ ಕುಮಾರ ಕಾಲದ ಮೂವತ್ತು ವರ್ಷಗಳು ವಿದೇಹದಲ್ಲಿಯೇ ಕಳೆದುವೆಂದು ಸ್ಪಷ್ಟವಾಗಿ ವರ್ಣಿಸಲಾಗಿದೆ. ವಿದೇಹದ ಸೀಮೆಯು ಪ್ರಾಚೀನ ಕಾಲದಿಂದಲೂ ಬಹುತರ ನಿಶ್ಚಿತಗೊಂಡಂತೆಯೇ ಇದೆ. ಅರ್ಥಾತ್ ಉತ್ತರಕ್ಕೆ ಹಿಮಾಲಯ, ದಕ್ಷಿಣಕ್ಕೆ ಗಂಗಾನದಿ, ಪೂರ್ವದಲ್ಲಿ ಕೌಶಿಕೀ ಮತ್ತು ಪಶ್ಚಿಮದಲ್ಲಿ ಗಂಡಕೀ ನದಿಗಳ ಮಧ್ಯಭಾಗವು ವಿದೇಹ ದೇಶವೆನಿಸಿತ್ತು. ಆದರೆ ಮೇಲೆ ಉಲ್ಲೇಖಿಸಿದ-ವರ್ತಮಾನ ಕಾಲದಲ್ಲಿ ಜನ್ಮಸ್ಥಳವೆಂದು ಮನ್ನಿಸಲ್ಪಡುವ-ಎರಡೂ ಸ್ಥಾನಗಳು-ಕುಂಡಲಪುರ ಮತ್ತು ಕ್ಷತ್ರಿಯ ಕುಂಡ-ಗಂಗೆಯ ಉತ್ತರಕ್ಕೆ ಇಲ್ಲ, ಅವು ದಕ್ಷಿಣದಲ್ಲಿ ಇವೆ. ಅಲ್ಲದೆ ಅವು ವಿದೇಹದಲ್ಲಿ ಇರದೆ ಮಗಧದ ಸೀಮೆಯಲ್ಲಿ ಬರುತ್ತವೆ. ಮಹಾವೀರನ ಜನ್ಮಭೂಮಿಯ ಸಮೀಪದಲ್ಲಿ ಗಂಡಕೀ ನದಿಯು ಹರಿಯುತ್ತಿದ್ದುದರ ಉಲ್ಲೇಖವೂ ಇದೆ. ಗಂಡಕಿಯು ಉತ್ತರ ಬಿಹಾರದ ನದಿಯಾಗಿದೆ. ಅದು ಹಿಮಾಲಯದಲ್ಲಿ ಜನಿಸಿ, ಸೋನಪುರದ ಸಮೀಪದಲ್ಲಿ ಗಂಗೆಗೆ ಕೂಡುತ್ತದೆ, ಇದು ಗಂಗಾನದಿಯ ದಕ್ಷಿಣದಲ್ಲಿ ಇರುವ ಸಂಭವವಿಲ್ಲ. ಮಹಾವೀರನನ್ನು ಆಗಮಗಳಲ್ಲಿ ಅನೇಕ ಕಡೆಗೆ ವೆಸಾಲಿಯ (ವೈಶಾಲೀಯ) ಎಂಬ ಉಪಾಧಿ ಸಹಿತ ಉಲ್ಲೇಖಿಸಲಾಗಿದೆ (ಸೂ. ಕೃ. ೧, ೨; ಉತ್ತರಾ. ೬). ಇದರಿಂದ ಅವನು ವೈಶಾಲಿಯ ನಾಗರಿಕನಿದ್ದನೆಂದು ಸ್ಪಷ್ಟವಾಗುತ್ತದೆ. ಹೇಗೆಂದರೆ ಕೌಶಲ ದೇಶದವನಾದುದರಿಂದ ಭಗವಾನ್ ಋಷಭದೇವನನ್ನು ಅನೇಕ ಸ್ಥಲಗಳಲ್ಲಿ, ಕೋಸಲೀಯ (ಕೌಶಲೀಯ) ಎಂದು ಹೇಳಲಾಗಿದೆ. ಈ ಕಾರಣಗಳಿಂದ ಡಾ. ಹಾರ್ನಲೆ ಯಾಕೋಬಿ ಮೊದಲಾದ ಪಾಶ್ಚಾತ್ಯ ವಿದ್ವಾಂಸರಿಗೆ ಮೇಲ್ಕಾಣಿಸಿದ ಪರಂಪರೆಯು ಮನ್ನಿಸಿದ ಎರಡೂ ಸ್ಥಳಗಳಲ್ಲಿ ಒಂದನ್ನಾದರೂ ಮಹಾವೀರನ ನಿಜವಾದ ಜನ್ಮಭೂಮಿಯೆಂದು ಸ್ವೀಕರಿಸಲು ಸಂದೇಹವುಂಟಾಗಿದೆ. ಆದರಿಂದ ಅವರು ವೈಶಾಲಿಯೇ ಮಹಾ

ವೀರನ ನಿಜವಾದ ಜನ್ಮಭೂಮಿಯೆಂಬ ವಿಚಾರದೆಡೆಗೆ ಬಂದಿದ್ದಾರೆ. ಪ್ರಾಚೀನ ಕಾಲದ ವೈಶಾಲಿಯು ಈಗಿನ ತಿರಹುತ ಮಂಡಲದ ಮುಜಫ್ಫರಪುರ ಜಿಲ್ಲೆಯಲ್ಲಿರುವ ಬಸಾಢ ಎಂಬ ಗ್ರಾಮದ ನೆರೆಹೊರೆಯಲ್ಲಿ ಇದ್ದಿರಬೇಕೆಂದು ಪುರಾತತ್ತ್ವದ ಶೋಧಗಳಿಂದ ಸಿದ್ಧವಾಗಿದೆ. ಇಲ್ಲಿ ರಾಜಾ ವಿಶಾಲನ ಗುಡ್ಡದ ಮೇಲಿನ ಕೋಟೆ ಎಂದು ಹೇಳಲಾಗುವ ಸ್ಥಳವು ಈಗಲೂ ಇದೆ. ಈ ಸ್ಥಾನದ ಸುತ್ತಮುತ್ತಲಿನ ಸ್ಥಳದಲ್ಲಿ, ಮಹಾವೀರನ ಜನ್ಮಭೂಮಿಯ ವಿಷಯದಲ್ಲಿ ಉಲ್ಲೇಖಗೊಂಡ ಸಂಗತಿಗಳೆಲ್ಲ ಉಚಿತರೂಪದಿಂದ ಹೊಂದಿಕೊಳ್ಳುತ್ತವೆ. ಇದರ ಸಮೀಪದಲ್ಲಿ ಈಗಲೂ ಗಂಡಕಿ ನದಿಯು ಹರಿಯುತ್ತದೆ. ಅದು ಪ್ರಾಚೀನ ಕಾಲದಲ್ಲಿ ಬಸಾಢದ ತೀರ ಸಮೀಪಕ್ಕೆ ಹರಿಯುತ್ತಿರಬೇಕೆಂಬುದು ಸಂಭವನೀಯವೆಂದು ತೋರುತ್ತದೆ. ಭಗವಂತನು ಪ್ರವ್ರಜಿತನಾದ ಮೇಲೆ ಮೊದಲ ರಾತ್ರಿಯನ್ನು ಕರ್ಮಾರ ಗ್ರಾಮದಲ್ಲಿ ಕಳೆದಿದ್ದನು. ಆ ಗ್ರಾಮವು ಈಗ 'ಕಮ್ಮನ ಛಪರಾ' ಎಂಬ ಹೆಸರಿನಿಂದ ಪ್ರಸಿದ್ಧವಿದೆ. ಭಗವಾನ್‌ನು ಪ್ರಥಮ ಪಾರಣೆಯನ್ನು ಕೊಲ್ಲಾಗ ಸನ್ನಿವೇಶದಲ್ಲಿ ಮಾಡಿದ್ದನು. ಆ ಸ್ಥಾನವು ಇಂದಿನ ಕೊಲ್ಹುಆ ಗ್ರಾಮ ವಾಗಿದ್ದರೆ ಆಶ್ಚರ್ಯವೇನಲ್ಲ. ವಾಣಿಜ್ಯ ಗ್ರಾಮದಲ್ಲಿ ಭಗವಂತನು ತನ್ನ ಪ್ರಥಮ ಮಳೆ ಗಾಲ ವಾಸ-ವರ್ಷಾಯೋಗವನ್ನೂ ಮುಂದೆ ಹಲವು ಚೌತುರ್ಮಾಸಗಳನ್ನೂ ಕಳೆದಿ ದ್ದನು. ಅದನ್ನೇ ಈಗ ಬನಿಯಾಗ್ರಾಮವೆಂದು ಕರೆಯಲಾಗುತ್ತದೆ. ಲಿಚ್ಛವಿಗಣದ ಅಧಿನಾಯಕನಾದ ಚೇಟಕರಾಜನು ಇದೇ ವೈಶಾಲಿಯನ್ನು ತನ್ನ ರಾಜಧಾನಿಯನ್ನಾಗಿ ಮಾಡಿಕೊಂಡಿದ್ದನೆಂಬ ಸಂಗತಿಯನ್ನು ಇತಿಹಾಸವು ಈಗಾಗಲೇ ಸ್ವೀಕರಿಸಿದೆ. ಭಗ ವಂತನ ತಂದೆಯ ಕಡೆಯ ಗೋತ್ರವು ಕಾಶ್ಯಪವಾಗಿತ್ತು, ತಾಯಿಯ ಗೋತ್ರವು ವಶಿಷ್ಠವೆಂದಿತ್ತು. ಈ ಎರಡೂ ಗೋತ್ರಗಳು ಈಗ ಇಲ್ಲಿ ವಾಸಿಸುವ ಜಥರಿಯಾ ಎಂಬ ಹೆಸರಿನ ಜಾತಿಯ ಜನರಲ್ಲಿ ಇಂದೂ ನೋಡಲು ಸಿಗುತ್ತವೆ. ಅದರಿಂದ ಈ ಜಾತಿಯ ಜ್ಞಾತೃವಂಶದ ಆಧುನಿಕ ಪ್ರತಿನಿಧಿಯಾಗಿದ್ದರೆ ಆಶ್ಚರ್ಯವಿಲ್ಲವೆಂದು ಕೆಲವು ಜನ ವಿದ್ವಾಂಸರು ಸ್ವೀಕರಿಸುತ್ತಾರೆ. ಪ್ರಾಚೀನ ವೈಶಾಲಿಯ ಸಮೀಪದಲ್ಲಿಯೇ ವಾಸು ಕುಂಡವೆಂಬ ಹೆಸರಿನ ಒಂದು ಗ್ರಾಮವಿದೆ. ಅಲ್ಲಿಯ ನಿವಾಸಿಗಳು ಪರಂಪರಾನುಗತ ವಾಗಿ ಒಂದು ಸ್ಥಾನವನ್ನು ಭಗವಂತನ ಜನ್ಮಭೂಮಿಯೆಂದು ಮನ್ನಿಸುತ್ತಾ ಬಂದಿ ದ್ದಾರೆ. ಇದೇ ಪೂಜ್ಯಭಾವದಿಂದ ಆ ಸ್ಥಾನದ ಮೇಲೆ ಎಂದೂ ರೆಂಟೆ-ಕುಂಟೆಗಳನ್ನು ಅವರು ಹೊಡೆದಿಲ್ಲ. ಸಮೀಪದಲ್ಲಿಯೇ ಒಂದು ವಿಶಾಲವಾದ ಕುಂಡವಿದೆ. ಅದು ಈಗ ಮುಚ್ಚಿಹೋಗಿದೆ. ಅದನ್ನು ಕೃಷಿಗೆ ಉಪಯೋಗಿಸಲಾಗುತ್ತಿದೆ. ವೈಶಾಲಿಯ ಭೂಮಿ ಯನ್ನು ಅಗೆದು ಶೋಧಿಸುವಾಗ ಒಂದುಪ್ರಾಚೀನ ಮುದ್ರೆಯೂ ಲಭಿಸಿದೆ. ಅದರ ಮೇಲೆ 'ವೈಶಾಲೀ ನಾಮ ಕುಂಡೆ' ಎಂಬ ಉಲ್ಲೇಖವಿದೆ. ಈ ಎಲ್ಲ ಪ್ರಮಾಣಗಳ ಆಧಾರ ದಿಂದ ಬಹು ಜನ ವಿದ್ವಾಂಸರು ಇದೇ ವಾಸು-ಕುಂಡವನ್ನು ಪ್ರಾಚೀನ ಕುಂಡಪುರ ವೆಂದೂ, ಮಹಾವೀರನ ನಿಜವಾದ ಜನ್ಮಭೂಮಿಯೆಂದೂ ಸ್ವೀಕರಿಸಿದ್ದಾರೆ. ಇದರ ಆಧಾರದಿಂದ ಈ ಪ್ರದೇಶವನ್ನು ಬಿಹಾರ ರಾಜ್ಯ ಸರಕಾರವು ತನ್ನ ಸ್ವಾಧೀನದಲ್ಲಿ

ತಕ್ಕೊಂಡು, ಇಲ್ಲಿಯೇ ಮಹಾವೀರನ ಸ್ಮಾರಕವನ್ನು ನಿರ್ಮಿಸಿದೆ. ಅಲ್ಲಿ ಒಂದು ಅರ್ಧ ಮಾಗಧಿ ಪದ್ಯದಲ್ಲಿ ರಚಿಸಿದ ಶಿಲಾಲೇಖದಲ್ಲಿ. ಭಗವಂತನು ಜನಿಸಿದ ಪವಿತ್ರಭೂಮಿಯು ಇದೇ ಎಂದು ಸ್ಪಷ್ಟವಾಗಿ ಘೋಷಿಸಿದೆ ಇದೇ ಸ್ಥಳದ ಸಮೀಪದಲ್ಲಿ ಬಿಹಾರ ರಾಜ್ಯ ಸರಕಾರವು ಪ್ರಾಕೃತ ಜೈನ ವಿದ್ಯಾಪೀಠವನ್ನು ಸ್ಥಾಪಿಸುವ ನಿಶ್ಚಯವನ್ನೂ ಮಾಡಿದೆ.

ಮಹಾವೀರನ ಜೀವನಕ್ಕೆ ಸಂಬಂಧಿಸಿದ ಕೆಲವೊಂದು ಘಟನೆಗಳ ವಿಷಯದಲ್ಲಿ ದಿಗಂಬರ ಹಾಗೂ ಶ್ವೇತಾಂಬರ ಸಂಪ್ರದಾಯಗಳಲ್ಲಿ ಸ್ವಲ್ಪ ಮತಭೇದವಿದೆ. ದಿಗಂಬರ ಸಂಪ್ರದಾಯಕ್ಕೆ ಅನುಸರಿಸಿ ಅವನು ಮೂವತ್ತು ವರ್ಷ ವಯಸ್ಸಿನವರೆಗೆ ಕುಮಾರ ನಾಗಿಯೂ ಅವಿವಾಹಿತನಾಗಿಯೂ ಇದ್ದು, ತರುವಾಯ ಪ್ರವ್ರಜಿತನಾದನು. ಆದರೆ ಶ್ವೇತಾಂಬರ ಪರಂಪರೆಗೆ ಅನುಸರಿಸಿ, ಅವನ ವಿವಾಹವಾಗಿತ್ತು ; ಇಷ್ಟೇ ಅಲ್ಲ, ಅವ ನಿಗೆ ಒಬ್ಬ ಪುತ್ರಿಯೂ ಕೂಡ ಜನಿಸಿದ್ದಳು. ಮೇಲಾಗಿ ಅವನ ಅಳಿಯನಾದ ಜಾಮಾ ಲಿಯೂ ಕೆಲಕಾಲ ಅವನ ಶಿಷ್ಯನಾಗಿದ್ದನು. ಪ್ರವ್ರಜಿತನಾಗುವ ಕಾಲದಲ್ಲಿ, ದಿಗಂಬರ ಪರಂಪರೆಗನುಸರಿಸಿ, ಅವನು ಸಮಸ್ತ ವಸ್ತ್ರಗಳನ್ನು ಪರಿತ್ಯಜಿಸಿ, ಅಚೇಲ ದಿಗಂಬರ ರೂಪಧಾರಣ ಮಾಡಿದ್ದನು. ಆದರೆ ಶ್ವೇತಾಂಬರ ಪರಂಪರಾನುಸಾರ ಅವನು ಪ್ರವ್ರ ಜಿತನಾದಾಗಿನಿಂದ ಹದಿನೆಂಟು ತಿಂಗಳ ವರೆಗೆ ಸಂಪೂರ್ಣ ವಸ್ತ್ರಗಳನ್ನು ತ್ಯಜಿಸಿರಲಿಲ್ಲ. ಆ ನಂತರ ಅವನು ಅಚೇಲಕನಾದನು. ಹನ್ನೆರಡು ವರ್ಷಗಳ ತಪಶ್ಚರ್ಯೆಯ ತರು ವಾಯ ಅವನು ಋಜುಕೂಲಾ ನದಿಯ ತೀರದಲ್ಲಿ ಕೇವಲ ಜ್ಞಾನವನ್ನು ಹೊಂದಿದನು. ಆ ಮೇಲೆ ಮೂವತ್ತು ವರ್ಷಗಳ ವರೆಗೆ ವಿವಿಧ ಪ್ರದೇಶಗಳಲ್ಲಿ ವಿಹಾರ ಮಾಡುತ್ತ, ಧರ್ಮೋಪದೇಶ ಮಾಡುತ್ತ, ಅವನು ತನ್ನ ತೀರ್ಥವನ್ನು ಸ್ಥಾಪಿಸಿದನು. ಈ ಸಂಗ ತಿಯು ಎರಡೂ ಸಂಪ್ರದಾಯಗಳಿಗೆ ಸಮ್ಮತವಾದುದಾಗಿದೆ. ಆದರೆ ಅವನ ಪ್ರಥಮ ಉಪದೇಶವು ದಿಗಂಬರ ಸಂಪ್ರದಾಯದ ಮಾನ್ಯತೆಗನುಸರಿಸಿ ರಾಜಗೃಹದ ವಿಪುಲಾ ಚಲದ ಮೇಲೆ ನಡೆಯಿತು. ಆದರೆ ಅದೇ ಶ್ವೇತಾಂಬರ ಮಾನ್ಯತೆಗನುಸರಿಸಿ ಪಾವಾ ನಗರದ ಸಮೀಪದ ಒಂದು ಸ್ಥಳದಲ್ಲಿ ನಡೆಯಿತು. ಈಗ ಅಲ್ಲಿ ಒಂದು ವಿಶಾಲ ಮಂದಿರವೂ ನಿರ್ಮಾಣವಾಗಿದೆ. ಎರಡೂ ಪರಂಪರೆಗಳಿಗೆ ಅನುಸರಿಸಿ ಭಗವಂತನ ನಿರ್ವಾಣವು ಎಪ್ಪತ್ತೆರಡು ವರ್ಷ ವಯಸ್ಸಿರುವಾಗ ಪಾವಾದಲ್ಲಿ ಆಯಿತೆಂದು ಗೊತ್ತಾಗುತ್ತದೆ. ಈ ಸ್ಥಳವು ಪಾಟಣಾ ಜಿಲ್ಲೆಯಲ್ಲಿ ಬಿಹಾರ ಶರೀಫದ ಸಮೀಪಕ್ಕೆ-ಸುಮಾರು ಏಳು ಮೈಲಿನ ಮೇಲೆ ಇದೆಯೆಂದು ಮನ್ನಿಸಲಾಗಿದೆ. ಈಗ ಅಲ್ಲಿ ಸರೋವರದ ಮಧ್ಯದಲ್ಲಿ ಒಂದು ಭವ್ಯ ಮಂದಿರವನ್ನು ನಿರ್ಮಿಸಲಾಗಿದೆ.

### ಮಹಾವೀರನ ಸಂಘ ವ್ಯವಸ್ಥೆ ಮತ್ತು ಉಪದೇಶ :—

ಭಗವಾನ್ ಮಹಾವೀರನು ತನ್ನ ಅನುಯಾಯಿಗಳನ್ನು ಮುನಿ, ಆರ್ಯಿಕಾ, ಶ್ರಾವಕ ಮತ್ತು ಶ್ರಾವಿಕಾ ಎಂಬ ನಾಲ್ಕು ವಿಭಾಗಗಳಲ್ಲಿ ವಿಭಜಿಸಿದನು. ಮೊದಲಿನ ಎರಡು ವರ್ಗಗಳು ಗೃಹತ್ಯಾಗಿಗಳಾದ ಪರಿವ್ರಾಜಕರವು , ಉಳಿದವೆರಡು ಗೃಹಸ್ಥರ

ವಾಗಿದ್ದುವು. ಇದಕ್ಕೇನೇ ಅವನ ಚತುರ್ವಿಧ ಸಂಘವೆಂದು ಹೇಳಲಾಗುತ್ತದೆ- ಅವನು ಮುನಿ ಮತ್ತು ಗೃಹಸ್ಥ ಧರ್ಮದ ಬೇರೆ ಬೇರೆ ಅವಸ್ಥೆಗಳನ್ನು ರೂಪಿಸಿದನು. ಅವನು ಅಹಿಂಸೆಯನ್ನು ಧರ್ಮದ ಮೂಲಾಧಾರವೆಂದು ಸ್ವೀಕರಿಸಿದನು. ಅದರ ವಿಸ್ತಾರವಾದ ರೂಪವೆಂದು ಅಹಿಂಸಾ ಅಮೃಷಾ, ಅಚೌರ್ಯ, ಅಮೈಥುನ ಮತ್ತು ಅಪರಿಗ್ರಹ ಎಂದು ಐದು ವ್ರತಗಳನ್ನು ಸ್ಥಾಪಿಸಿದನು. ಈ ವ್ರತ ಹಾಗೂ ಯಮಗಳ ಪಾಲನೆ ಯನ್ನು ಮುನಿಗಳಿಗಾಗಿ ಪೂರ್ಣ ರೂಪದಲ್ಲಿ— ಮಹಾ ವ್ರತರೂಪ— ಗೃಹಸ್ಥರಿಗಾಗಿ ಸ್ಥೂಲರೂಪದಲ್ಲಿ— ಅಣುವ್ರತ ರೂಪ— ಹೇಳಿದೆ. ಗೃಹಸ್ಥರಲ್ಲಿಯೂ ಕೂಡ ಅವನು ಶ್ರದ್ಧೆ ಮಾತ್ರದಿಂದ ಆರಂಭಿಸಿ ಕೌಪೀನ ಮಾತ್ರ ಧಾರಿಯಾಗುವ ವರೆಗೆ ಹನ್ನೊಂದು ತರಗತಿಗಳನ್ನು ರೂಪಿಸಲಾಗಿದೆ. ದೋಷ ಹಾಗೂ ಅಪರಾಧಗಳ ನಿವಾರಣೆಗೆಂದು ಅವನು ನಿಯಮಿತ ಪ್ರತಿಕ್ರಮಣದ ಆಚರಣೆಯನ್ನು ಒತ್ತಿ ಹೇಳಿದ್ದಾನೆ.

ಭಗವಾನ್ ಮಹಾವೀರರಿಂದ ಉಪದೇಶಿಸಲ್ಪಟ್ಟ ತತ್ವಜ್ಞಾನವನ್ನು ಸಂಗ್ರಹ ರೂಪದಲ್ಲಿ ಹೀಗೆ ವ್ಯಕ್ತಪಡಿಸಲಾಗುತ್ತದೆ :—ಜೀವ ಮತ್ತು ಅಜೀವ ಅರ್ಥಾತ್ ಚೇತನ ಮತ್ತು ಜಡ ಇವು ಎರಡು ವಿಶ್ವದ ಮೂಲತತ್ವಗಳಾಗಿವೆ. ಇವು ಮೊದಲಿ ನಿಂದಲೂ ಪರಸ್ಪರ ಸಂಬಂಧವನ್ನು ಹೊಂದಿವೆ. ಅಲ್ಲದೆ ಚೇತನದ ಮನ-ವಚನ ಹಾಗೂ ಕಾಯಾತ್ಮಕ ಕ್ರಿಯೆಗಳ ಮುಖಾಂತರ ಈ ಜಡಚೇತನಗಳ ಸಂಬಂಧದ ಪರಂಪರೆಯು ಪ್ರಚಲಿತವಾಗಿರುತ್ತದೆ. ಇದಕ್ಕೇನೇ ಕರ್ಮಾಸ್ರವ ಮತ್ತು ಕರ್ಮಬಂಧವೆಂದು ಹೇಳಲಾಗುತ್ತದೆ. ಯಮ ಮತ್ತು ನಿಯಮಗಳ ಪಾಲನೆಯಿಂದ ಈ ಕರ್ಮಾಸ್ರವದ ಪರಂಪರೆಯನ್ನು ತಡೆಯಲು ಸಾಧ್ಯವಿದೆ. ಅಲ್ಲದೆ ಸಂಯಮ ಮತ್ತು ತಪಗಳಿಂದ ಹಿಂದಿನ ಕರ್ಮಬಂಧವನ್ನು ನಷ್ಟಗೊಳಿಸಲಿಕ್ಕೆ ಬರುತ್ತದೆ. ಈ ಪ್ರಕಾರ ಚೇತನವು ಜಡದಿಂದ ಸಂಪೂರ್ಣವಾಗಿ ಮುಕ್ತವಾಗಿ, ತನ್ನ ಅನಂತಜ್ಞಾನ ದರ್ಶನಾತ್ಮಕ ಸ್ವರೂಪವನ್ನು ಸಂಪಾದಿಸುವುದೇ ಜೀವನದ ಪರಮ ಗುರಿಯಾಗಲಿಕ್ಕೆ ಬೇಕು. ಇದರಿಂದ ಈ ಜನ್ಮ ಮೃತ್ಯುಗಳ ಪರಂಪರೆಯು ವಿಚ್ಛೇದಗೊಂಡು ಮೋಕ್ಷ ಅಥವಾ ನಿರ್ವಾಣದ ಪ್ರಾಪ್ತಿಯಾಗುತ್ತದೆ.

ಮಹಾವೀರನು ತನ್ನ ಉಪದೇಶದ ಮಾಧ್ಯಮವೆಂದು ಆ ಕಾಲದಲ್ಲಿ ತಾನು ಪ್ರಚಾರ ಮಾಡುವ ಪ್ರದೇಶದಲ್ಲಿ ಸುಪ್ರಚಲಿತವಾಗಿರುವ— ಲೋಕಭಾಷೆಯೆನಿಸಿದ- ಅರ್ಧಮಾಗಧಿಯನ್ನು ಸ್ವೀಕರಿಸಿದನು. ಇದೇ ಭಾಷೆಯಲ್ಲಿ ಅವನ ಶಿಷ್ಯರು ಅವನ ಉಪದೇಶಗಳನ್ನು ಆಚಾರಾಂಗವೇ ಮೊದಲಾದ ಹನ್ನೆರಡು ಅಂಗಗಳಲ್ಲಿ ಸಂಕಲನ ಗೈದರು. ಅವು ದ್ವಾದಶಾಂಗ ಆಗಮಗಳೆಂಬ ಹೆಸರಿನಿಂದ ಪ್ರಸಿದ್ಧವಾಗಿವೆ.

**ಮಹಾವೀರ ನಿರ್ವಾಣ ಕಾಲ :—**

ಜೈನ ಪರಂಪರೆಗನುಸರಿಸಿ ಮಹಾವೀರನ ನಿರ್ವಾಣವು ವಿಕ್ರಮ ಕಾಲಕ್ಕೆ ಪೂರ್ವದಲ್ಲಿ ೪೭೦ ವರ್ಷ ಅಥವಾ ಶಕ ಕಾಲದ ಪೂರ್ವದಲ್ಲಿ ೬೦೫ ವರ್ಷ ಐದು

ತಿಂಗಳುಗಳಲ್ಲಿ ಆಯಿತು. ಈ ಕಾಲವು ಕ್ರಿ.ಶ. ಪೂರ್ವ ೫೨೭ ವರ್ಷ ಆಗುತ್ತದೆ. ಈ ಮಹಾವೀರ ಸಂವತ್ಸರವು ಈಗಲೂ ಪ್ರಚಲಿತವಾಗಿದೆ. ಗ್ರಂಥ ಹಾಗೂ ಶಿಲಾ ಲೇಖಗಳಲ್ಲಿ ಇದನ್ನು ಉಪಯೋಗಿಸುವ ಪರಂಪರೆಯು ಐದು ಆರನೆಯ ಶತಮಾನ ಗಳಿಂದ ನೋಡಲು ದೊರೆಯುತ್ತದೆ. ಇವರಲ್ಲಿ ಸಂದೇಹ ಉತ್ಪನ್ನ ಮಾಡುವ ಸಂಗತಿಯೊಂದು ಹೇಮಚಂದ್ರನ ಪರಿಶಿಷ್ಟ ಪರ್ವದಲ್ಲಿ ಉಲ್ಲೇಖಗೊಂಡಿದೆ. ಅದ ಕ್ಕನುಸರಿಸಿ ಮಹಾವೀರ ನಿರ್ವಾಣದಿಂದ ೧೫೫ ವರ್ಷಗಳು ಉರುಳಿದ ಮೇಲೆ ಚಂದ್ರ ಗುಪ್ತ (ಮೌರ್ಯ) ರಾಜನಾದನು. ಇನ್ನು ಚಂದ್ರಗುಪ್ತನಿಂದ ವಿಕ್ರಮಾದಿತ್ಯನ ಕಾಲವು ೨೫೫ ವರ್ಷಗಳ ತರುವಾಯವಿದ್ದೆಂದು ಸರ್ವತ್ರ ಮನ್ನಿಸಲಾಗುತ್ತಿದೆ. ಅಂದ ಮೇಲೆ ವೀರ ನಿರ್ವಾಣದ ಸಮಯವು ವಿಕ್ರಮನಿಂದ ೨೫೫ + ೧೫೫ = ೪೧೦ ವರ್ಷ ಪೂರ್ವ (ಕ್ರಿ.ಶ.ಪೂ. ೪೬೭)ಎಂದು ಸ್ಪಷ್ಟವಾಯಿತು. ಯಾಕೋಬಿ, ಚಾರ್ಪೆಂಟಿಯರ ಮೊದಲಾದ ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯವು ಇದೇ ಆಗಿದೆ. ಇದಕ್ಕೆ ವಿಪರೀತವಾಗಿ ಡಾ. ಜಾಯಸ್‌ವಾಲನ ಮತವು ಹೀಗಿದೆ:—ವೀರ ನಿರ್ವಾಣದ ತರುವಾಯ ೪೭೦ ವರ್ಷಗಳು ಕಳೆದ ಮೇಲೆ ವಿಕ್ರಮನ ಜನ್ಮವಾಯಿತು. ಅವನು ೧೮ ವರ್ಷದವನಾದ ಮೇಲೆ ರಾಜ್ಯಾಭಿಷೇಕವಾಯಿತು. ರಾಜ್ಯಾಭಿಷೇಕದಿಂದ ಅವನ ಸಂವತ್‌ವು ಆರಂಭವಾಗಿದೆ. ಅಂದಮೇಲೆ ವಿಕ್ರಮ ಸಂವತ್‌ದ ೪೭೦ + ೧೮ = ೪೮೮ ವರ್ಷ ಪೂರ್ವ ವೀರ ನಿರ್ವಾಣ ಕಾಲವೆಂದು ಮನ್ನಿಸಲಿಕ್ಕೆ ಬೇಕು. ನಿಜವಾಗಿಯೂ ಈ ಎರಡೂ ಅಭಿಪ್ರಾಯಗಳು ಭ್ರಾಂತಿಯಿಂದ ಕೂಡಿವೆ. ಬಹಳಷ್ಟು ಜೈನ ಉಲ್ಲೇಖ ಗಳಿಂದ ಹೀಗೆ ಸಿದ್ಧವಾಗುತ್ತದೆ:—ವಿಕ್ರಮನು ಜನಿಸಿ ಹದಿನೆಂಟು ವರ್ಷಗಳಾದ ಮೇಲೆ ಅಭಿಷಿಕ್ತನಾದನು. ಮುಂದೆ ಅವನು ಅರವತ್ತು ವರ್ಷಗಳ ವರೆಗೆ ರಾಜ್ಯ ವಾಳಿದನು. ಅವನ ಸಂವತ್‌ವು ಅವನ ಮೃತ್ಯುವಿನಿಂದ ಆರಂಭವಾಗುತ್ತದೆ. ಅಂದಿ ನಿಂದ ೪೭೦ ವರ್ಷಗಳ ಪೂರ್ವದಲ್ಲಿ ವೀರ ನಿರ್ವಾಣವು ಆಗಿದೆ.

ವೀರ ನಿರ್ವಾಣ ಕಾಲದಿಂದ ೬೦೫ ವರ್ಷ ೫ ತಿಂಗಳು ಕಳೆದ ಮೇಲೆ ಶಕ ಸಂವತ್‌ದ ಪ್ರಾರಂಭವೆಂದು ಹೇಳಲಾಗುತ್ತಿದೆ. ಅದರ ಕಾರಣವಿಷ್ಟೆ :—ಮಹಾವೀರನ ನಿರ್ವಾಣವು ಕಾರ್ತಿಕ ಮಾಸದ ಅಮಾವಾಸ್ಯೆಗೆ ಆಯಿತು. ಆದಕ್ಕಾಗಿ ಪ್ರಚಲಿತ ವಿರುವ ವೀರ ನಿರ್ವಾಣ ಸಂವತ್ಸರವು ಕಾರ್ತಿಕ ಶುಕ್ಲ ಪ್ರತಿಪದೆಯಿಂದ ಬದಲಾಗು ತ್ತದೆ. ಅಂದಿನಿಂದ ಸರಿಯಾಗಿ ಐದು ತಿಂಗಳುಗಳ ತರುವಾಯ ಚೈತ್ರ ಶುಕ್ಲ ಪ್ರತಿ ಪದೆಯಿಂದ ಶಕ ಸಂವತ್‌ವು ಪ್ರಾರಂಭವಾಗುತ್ತದೆ. ಶಕ ಸಂವತ್ ೭೦೫ ರಲ್ಲಿ ರಚಿತವಾದ ಜಿನಸೇನಕೃತ ಸಂಸ್ಕೃತ ಹರಿವಂಶ ಪುರಾಣದಲ್ಲಿ ವೀರ ನಿರ್ವಾಣದ ವರ್ಣನೆಯು ಬರುತ್ತದೆ: ಮಹಾವೀರನು ನಿರ್ವಾಣ ಹೊಂದಿದ ಮೇಲೆ ಅವನ ನಿರ್ವಾಣ ಭೂಮಿಯಾದ ಪಾವಾನಗರಿಯಲ್ಲಿ ದೀಪೋತ್ಸವವನ್ನು ಆಚರಿಸಲಾಯಿತು. ಅಂದಿನಿಂದಲೇ ಭಾರತದಲ್ಲಿ ಆ ತಿಥಿಗೆ ಪ್ರತಿ ವರ್ಷ ದೀಪೋತ್ಸವವನ್ನು ಆಚರಿಸುವ ಪರಿವಾಠವು ಪ್ರಾರಂಭವಾಯಿತು. ಈ ದಿನ ಜೈನ ಸಮಾಜದವರು ನಿರ್ವಾಣೋತ್ಸವ

ವನ್ನು ದೀಪಮಾಲಿಕೆಯಿಂದ ಆಚರಿಸುತ್ತಾರೆ. ಅಲ್ಲದೆ ಭಗವಾನ್ ಮಹಾವೀರನ ಪೂಜೋತ್ಸವವನ್ನು ವಿಶೇಷ ರೀತಿಯಿಂದ ನೆರವೇರಿಸುತ್ತಾರೆ. ದೀಪಾವಳಿಯ ಉತ್ಸವವು ಭಾರತದ ತುಂಬೆಲ್ಲ ನಡೆಯುತ್ತದೆ; ಅದು ಸರ್ವವ್ಯಾಪಿಯಾಗಿದೆ. ಇದಕೆ ಪ್ರಾಚೀನ ಗ್ರಾಂಥಿಕ ಉಲ್ಲೇಖವು ಇದನ್ನುಳಿದು ಬೇರೆ ಎಲ್ಲಿಯೂ ಇದ್ದದ್ದು ಕಂಡು ಬರುವುದಿಲ್ಲ.

**ಗೌತಮ-ಕೇಶೀ-ಸಂವಾದ :—**

ಮಹಾವೀರ ನಿರ್ವಾಣದ ತರುವಾಯ ಅವನ ಶಿಷ್ಯರಾದ ಗೌತಮ, ಸುಧರ್ಮ ಮತ್ತು ಜಂಬೂಸ್ವಾಮಿ ಈ ಮೂವರು ಕ್ರಮದಿಂದ ಜೈನ ಸಂಘದ ನಾಯಕತ್ವವನು ವಹಿಸಿದರು. ಇವರ ಕಾಲವು ಕ್ರಮದಿಂದ ೧೨ + ೧೨ + ೩೮ = ೬೨ ವರ್ಷ ಇತ್ತು. ಇಲ್ಲಿಯವರೆಗೆ ಆಚಾರ್ಯ ಪರಂಪರೆಯಲ್ಲಿ ಯಾವ ಭೇದವೂ ಕಂಡುಬರುವುದಿಲ್ಲ. ಇದ-ರಿಂದಲೂ ಈ ಮೂವರು ಗಣಧರರಿಗೂ ಕೇವಲೀ ಎಂಬ ಸಂಜ್ಞೆಯು ಸಾರ್ಥಕವೆಂದು ಸಿದ್ಧವಾಗುತ್ತದೆ. ಆದರೆ ಇವರ ತರುವಾಯ ಆಚಾರ್ಯ ಪರಂಪರೆಯಲ್ಲಿ ದಿಗಂಬರ ಮತ್ತು ಶ್ವೇತಾಂಬರ ಎಂಬ ಸಂಪ್ರದಾಯ ಭೇದಗಳು ಕಂಡುಬರುತ್ತವೆ. ಅದರಿಂದ ಈಗ ಭಿನ್ನ ಭಿನ್ನ ಸಂಪ್ರದಾಯಗಳ ಭೇದದ ಬೀಜವು ಅಂದಿನಿಂದಲೇ ಮೊಳಕೆ ಒಡೆ ಯಿತೆಂದು ತೋರುತ್ತದೆ. ಈ ಸಂಪ್ರದಾಯ ಭೇದದ ಕಾರಣ ಮೀಮಾಂಸೆಯ ಒಂದಂ ಶವು ಉತ್ತರಾಧ್ಯಯನ ಸೂತ್ರದ ' ಕೇಸೀ-ಗೋಯಮ ಸಂವಾದ ' ಎಂಬ ೨೩ ನೆಯ ಅಧ್ಯಾಯದಲ್ಲಿ ನಮಗೆ ನೋಡಲು ಸಿಕ್ಕುತ್ತದೆ. ಅದರಿಂದ ಗೊತ್ತಾಗುವ ಸಂಗತಿ-ಯಿದು:—ಯಾವ ಕಾಲದಲ್ಲಿ ಭಗವಾನ್ ಮಹಾವೀರನು ತನ್ನ ಅಚೇಲಕ ಅಥವಾ ನಿರ್ಗ್ರಂಥ ಸಂಪ್ರದಾಯವನ್ನು ಸ್ಥಾಪಿಸಿದನೋ ಆಗ ಪಾರ್ಶ್ವನಾಥನ ಪ್ರಾಚೀನ ಸಂಪ್ರದಾಯವು ಪ್ರಚಲಿತವಾಗಿತ್ತು. ಸ್ವತಃ ಭಗವಾನ್ ಮಹಾವೀರನ ತಂದೆ ತಾಯಂದಿರು ಇದೇ ಪಾರ್ಶ್ವ ಸಂಪ್ರದಾಯದ ಅನುಯಾಯಿಗಳಾಗಿದ್ದರೆಂದು ನಾವು ಹಿಂದೆ ಹೇಳಿದ್ದೇವೆ. ಆ ಸಂಪ್ರದಾಯದಿಂದಲೇ ಭಗವಾನ್ ಮಹಾವೀರನೂ ಪ್ರಭಾ-ವಿತನಾಗಿದ್ದನು. ಉತ್ತರಾಧ್ಯಯನದ ಮೇಲೆ ಉಲ್ಲೇಖಿಸಿದ ಪ್ರಕರಣಕ್ಕನುಸರಿಸಿ, ಮಹಾವೀರನ ಸಂಪ್ರದಾಯಕ್ಕೆ ಅಧಿನಾಯಕನು ಗೌತಮನಾಗಿದ್ದಾಗ ಪಾರ್ಶ್ವ ಸಂಪ್ರದಾಯದ ನಾಯಕನು ಶ್ರಮಣ ಕೇಶೀಕುಮಾರನಾಗಿದ್ದನು. ಈ ಇಬ್ಬರೂ ಗಣಧರರ ಭೆಟ್ಟಿಯು ಶ್ರಾವಸ್ತಿಪುರದಲ್ಲಿ ಆಯಿತು. ಆಗ ಇಬ್ಬರಲ್ಲಿಯೂ ಒಂದು ವಿಚಾರವುಂಟಾಯಿತು :—ಸಂಪ್ರದಾಯವು ಒಂದೇ ಇದ್ದೂ ಕೂಡ ಪಾರ್ಶ್ವನಾಥ ಸಂಪ್ರದಾಯವು ' ಚಾಉಜ್ಜಾಮ ' ಧರ್ಮವೆಂದೂ, ವರ್ಧಮಾನನ ಸಂಪ್ರದಾಯವು ' ಪಂಚಸಿಕ್ಖಿಯ ' ವೆಂದೂ ಹೇಳಲು ಕಾರಣವೇನು ? ಇದೇ ಪ್ರಕಾರ ಪಾರ್ಶ್ವನ ಧರ್ಮವು ' ಸಂತರೋತ್ತರ ' ಹಾಗೂ ವರ್ಧಮಾನನದು 'ಅಚೇಲಕ' ಧರ್ಮವಾಗಿದೆ. ಈ ಪ್ರಕಾರ ಇವೆರಡೂ ಒಂದೇ ಕಾರ್ಯ ಪ್ರವೃತ್ತಿಯಲ್ಲಿದ್ದರೂ ಎರಡರಲ್ಲಿಯೂ

ವಿಶೇಷತೆಗೆ ಕಾರಣವೇನು ? ಕೇಶೀ ಕುಮಾರನು ಈ ವಿಷಯದಲ್ಲಿ ಪ್ರಶ್ನೆ ಕೇಳಿದಾಗ ಗೌತಮ ಗಣಧರನು ಉತ್ತರ ಹೇಳಿದ್ದು ಹೀಗಿದೆ :- ಪೂರ್ವ ಕಾಲದಲ್ಲಿ ಮನುಷ್ಯನು ಸರಳ ಹಾಗೂ ಜಡ (ಋಜು ಜಡ) ನಾಗಿರುತ್ತಿದ್ದನು. ಪಶ್ಚಿಮ ಕಾಲದಲ್ಲಿ ವಕ್ರ ಮತ್ತು ಜಡ ; ಆದರೆ ಮಧ್ಯಮ ಕಾಲದ ಜನರು ಸರಳ ಹಾಗೂ ತಿಳುವಳಿಕೆಯವರು (ಋಜುಪ್ರಾಜ್ಞ) ಇದ್ದರು. ಆದರಿಂದ ಪುರಾತನ ಜನರಿಗಾಗಿ ಧರ್ಮದ ಬೋಧವು ಕಠಿಣವೆನಿಸಿತ್ತು. ಪಶ್ಚಿಮ ಕಾಲೀನ ಜನರಿಗೆ ಅದರ ಅನುಪಾಲನೆಯು ಕಠಿಣ ವೆನಿಸಿತ್ತು. ಆದರೆ ಮಧ್ಯಕಾಲದ ಜನರಿಗಾಗಿ ಧರ್ಮಬೋಧ ಹಾಗೂ ಅದರ ಪಾಲನೆಗಳು ಸರಳವೆನಿಸಿದುವು. ಇದೇ ಕಾರಣದಿಂದ ಮೊದಲನೆಯವನೊಬ್ಬ ಮತ್ತು ಅಂತಿಮ ತೀರ್ಥಂಕರನೊಬ್ಬ ಪಂಚವ್ರತರೂಪ ಹಾಗೂ ನಡುವಿನ ತೀರ್ಥಂಕರರು ಅದನ್ನು ಚಾತುರ್ಯಾಮ ರೂಪದಿಂದ ಸ್ಥಾಪಿತಗೊಳಿಸಿದರು. ಅಚೇಲಕ ಅಥವಾ ಸಾಂತರೋತ್ತರ ವೇಷವು ಕೇವಲ ಜನತೆಯಲ್ಲಿ ಗುರುತಿಗಾಗಿ ನಿಯತಗೊಳಿಸಲಾಗಿದೆ. ಆದರೆ ಯಥಾರ್ಥದಲ್ಲಿ ಮೋಕ್ಷಕ್ಕೆ ಕಾರಣಭೂತವಾಗಿ ಜ್ಞಾನ, ದರ್ಶನ ಮತ್ತು ಚಾರಿತ್ರಗಳೇ ನಿಲ್ಲುತ್ತವೆಂದೂ ಅವನು ಹೇಳಿದನು. ಗೌತಮ ಮತ್ತು ಕೇಶೀ ಶ್ರಮಣರ ಮಧ್ಯದಲ್ಲಿ ನಡೆದ ಈ ಮಾತುಕತೆಗಳಿಂದ ಕೇಶಿಯು ಮಹಾವೀರನ ಪಂಚಮಹಾ ವ್ರತರೂಪ ಧರ್ಮವನ್ನು ಸ್ವೀಕರಿಸಿದನೆಂದು ತಿಳಿಯುತ್ತದೆ. ಆದರೆ ಅವರಲ್ಲಿ ವೇಷದ ವಿಷಯದಲ್ಲಿ ಯಾವ ನಿರ್ಣಯವಾಯಿತೆಂಬುದನ್ನು ಸ್ಪಷ್ಟವಾಗಿ ಹೇಳಲಾಗಿಲ್ಲ. ಸಾಮಾನ್ಯವಾಗಿ ಈ ವಿಷಯದಲ್ಲಿ ಅಚೇಲಕತ್ವ ಮತ್ತು ಅಲ್ಪವಸ್ತ್ರತ್ವದ ಸಂಗತಿಯು ಅವರವರ ಇಚ್ಛಾನುಸಾರ ಗ್ರಹಣಮಾಡುವ ಮಾತು ಸ್ವೀಕಾರವಾಗಿರಬೇಕು. ಅದಕ್ಕನುಸರಿಸಿ ನಮಗೆ ಸ್ಥವಿರಕಲ್ಪ ಮತ್ತು ಜಿನಕಲ್ಪದ ಉಲ್ಲೇಖವು ಲಭಿಸುತ್ತದೆ. ಸ್ಥವಿರಕಲ್ಪವು ಪಾರ್ಶ್ವಪರಂಪರೆಯ ಅಲ್ಪವಸ್ತ್ರಧಾರಣರೂಪವನ್ನು ಮನ್ನಿಸಿದೆ. ಅದರಂತೆ ಜಿನಕಲ್ಪವು ಸಂಪೂರ್ಣ ಅಚೇಲಕ ರೂಪ ಮಹಾವೀರನ ಪರಂಪರೆಯನ್ನು ಸ್ವೀಕರಿಸಿತು. ಆದರೆ ಸ್ವಾಭಾವಿಕವಾಗಿ ಒಂದು ಸಂಪ್ರದಾಯದಲ್ಲಿ ಹೀಗೆ ಎರಡು ಪ್ರಕಾರದ ಪದ್ಧತಿಯು ಬಹುಕಾಲದ ವರೆಗೆ ನಡೆಯುವ ಸಂಭವವಿರಲಿಲ್ಲ. ವಸ್ತ್ರಧಾರಣ ಮಾಡಿಯೂ ಕೂಡ ಮಹಾವ್ರತಿಯಾಗಲು ಬರುತ್ತದೆಯೆ ? ಅದರಿಂದಲೂ ನಿರ್ವಾಣ ಪ್ರಾಪ್ತವಾಗುವುದು ಸಾಧ್ಯವೆ ? ಹಾಗಿದ್ದರೆ ಅಚೇಲಕತೆಯ ಅವಶ್ಯಕತೆಯಾದರೂ ಏನಿದೆ ?- ಇವೇ ಮೊದಲಾದ ಪ್ರಶ್ನೆಗಳ ಉದ್ಭವವನ್ನು ತಡೆಯುವುದು ಸಾಧ್ಯವಿರಲಿಲ್ಲ. ಆದರಿಂದ ಈ ಸಂಘರ್ಷದ ಫಲಸ್ವರೂಪವಾಗಿ ಮಹಾವೀರ ನಿರ್ವಾಣದ ತರುವಾಯ ೬೨ ವರ್ಷಗಳು ಕಳೆದ ಮೇಲೆ ಜಂಬೂ ಸ್ವಾಮಿಯ ನಾಯಕತ್ವವು ಮುಗಿದಕೂಡಲೆ ಸಂಘಭೇದವಾದದ್ದು ಗೊತ್ತಾಗುತ್ತದೆ. ದಿಗಂಬರ ಪರಂಪರೆಯಲ್ಲಿ ಮಹಾವೀರ ನಿರ್ವಾಣದ ತರುವಾಯ ಮೇಲೆ ಹೇಳಿದ ಮೂವರು ಕೇವಲಿಗಳು , ವಿಷ್ಣು ವೇ ಮೊದ ಲಾದ ಐದು ಜನ ಶ್ರುತಕೇವಲಿಗಳು , ವಿಶಾಖಾಚಾರ್ಯ ಮೊದಲಾದ ಹನ್ನೊಂದು ಜನ ದಶಪೂರ್ವಧಾರಿಗಳು ; ನಕ್ಷತ್ರ ಮೊದಲಾದ ಐವರು ಏಕಾದಶ ಅಂಗಧಾರಿಗಳು,

ಹಾಗೆಯೇ ಸುಭದ್ರನಿಂದ ಮೊದಲುಗೊಂಡು ಲೋಹಾರ್ಯನ ವರೆಗೆ ನಾಲ್ವರು ಏಕಾಂಗಧಾರೀ ಆಚಾರ್ಯರ ವಂಶಾವಲಿಯು ದೊರೆಯುತ್ತದೆ ಈ ಎಲ್ಲ ಇಪ್ಪತ್ತೆಂಟು ಆಚಾರ್ಯರ ಒಟ್ಟು ಕಾಲವು ೬೨+೧೦೦+೧೮೩+೨೨೦+೧೧೮=೬೮೩ ವರ್ಷಗಳೆಂದು ನಿರ್ದಿಷ್ಟಗೊಳಿಸಲಾಗಿದೆ.

## ಶ್ವೇತಾಂಬರ ಸಂಪ್ರದಾಯದ ಗಣಭೇದ :—

ಜೈನ ಸಂಘಕ್ಕೆ ಸಂಬಂಧಿಸಿದ ಶ್ವೇತಾಂಬರ ಪರಂಪರೆಯ ಪ್ರಾಚೀನತಮ ಉಲ್ಲೇಖವು ಕಲ್ಪಸೂತ್ರಕ್ಕೆ ಸೇರಿದ ಸ್ಥವಿರಾವಲಿಯಲ್ಲಿ ನೋಡಲಿಕ್ಕೆ ಸಿಕ್ಕುತ್ತದೆ. ಇಂದ್ರಭೂತಿ ಗೌತಮ ಮೊದಲಾದ ಹನ್ನೊಂದು ಜನ ಗಣಧರರ ಮೂಲಕ ಅಭ್ಯಾಸ ಮಾಡಿದ ಶ್ರಮಣರ ಸಂಖ್ಯೆಯ ಉಲ್ಲೇಖವೂ ಕೂಡ ಅದರಲ್ಲಿದೆ. ಈ ಹನ್ನೊಂದು ಜನ ಗಣಧರರು ಹನ್ನೆರಡು ಅಂಗ, ಹದಿನಾಲ್ಕು ಪೂರ್ವ, ಈ ಎಲ್ಲ ಗಣಿಪಿಟಕಗಳ ಧಾರಕರಾಗಿದ್ದರು. ಅದಕ್ಕನುಸರಿಸಿ ಅವರೆಲ್ಲರ ಒಟ್ಟು ಶ್ರಮಣ ಶಿಷ್ಯರ ಸಂಖ್ಯೆಯು ೪೨೦೦ ಇತ್ತೆಂದು ತಿಳಿಯುತ್ತದೆ. ಈ ಹನ್ನೊಂದು ಜನ ಗಣಧರರಲ್ಲಿ ಒಂಭತ್ತು ಜನರ ನಿರ್ವಾಣವು ಮಹಾವೀರರ ಜೀವನ ಕಾಲದಲ್ಲಿಯೇ ಆಗಿತ್ತು. ಕೇವಲ ಇಬ್ಬರು ಮಾತ್ರ -ಇಂದ್ರಭೂತಿ ಗೌತಮ ಮತ್ತು ಆರ್ಯ ಸುಧರ್ಮ—ಮಹಾವೀರರ ತರುವಾಯ ಬದುಕಿದ್ದರು. 'ಇಂದು ಯಾವನೇ ಶ್ರಮಣ ನಿಗ್ರಂಥನು ವಿಹಾರ ಮಾಡುತ್ತಿದ್ದರೆ ಅವನು ಆರ್ಯ ಸುಧರ್ಮನ ಶಿಷ್ಯನೇ ಆಗಿದ್ದಾನೆ—ಎಂದೂ ಹೇಳಲಾಗಿದೆ. ಉಳಿದ ಗಣಧರರ ಯಾವ ಸಂತಾನವೂ ಮುಂದೆ ನಡೆದು ಬರಲಿಲ್ಲ.' ಮುಂದೆ ಸ್ಥವಿರಾವಲಿಯಲ್ಲಿ ಆರ್ಯ ಸುಧರ್ಮನಿಂದ ಆರಂಭಿಸಿ ಆರ್ಯ ಶಾಂಡಿಲ್ಯನವರೆಗೆ ಮೂವತ್ತುಮೂರು ಜನ ಆಚಾರ್ಯರ ಗುರು-ಶಿಷ್ಯ ಪರಂಪರೆಯನ್ನು ಕೊಡಲಾಗಿದೆ. ಅದರಲ್ಲಿ ಆರನೆಯ ಆಚಾರ್ಯನಾದ ಆರ್ಯ ಯಶೋಭದ್ರನಿಗೆ ಸಂಭೂತಿವಿಜಯ ಮತ್ತು ಭದ್ರಬಾಹು ಎಂಬ ಇಬ್ಬರು ಶಿಷ್ಯರಿದ್ದು, ಅವರಿಂದ ಭಿನ್ನ ಭಿನ್ನ ಶಿಷ್ಯ ಪರಂಪರೆಗಳು ನಡೆದು ಬಂದುವು. ಆರ್ಯ ಸಂಭೂತಿ ವಿಜಯನ ಶಾಖೆಯಲ್ಲಿ ಒಂಭತ್ತನೆಯ ಸ್ಥವಿರನಾದ ಆರ್ಯ ವಜ್ರಸೇನನ ನಾಲ್ವರು ಶಿಷ್ಯರಿಂದ ನಾಲ್ಕು ಭಿನ್ನ ಭಿನ್ನ ಶಾಖೆಗಳು ಸ್ಥಾಪಿತವಾದುವು. ಅವುಗಳ ಹೆಸರುಗಳು ಅವುಗಳನ್ನು ಸ್ಥಾಪಿಸಿದ ಆಚಾರ್ಯರ ಹೆಸರುಗಳಾದ ನಾಇಲ, ಪೋಮಿಲ, ಜಯಂತ ಮತ್ತು ತಾವಸ ಎಂದು ಪ್ರಸಿದ್ಧವಾದುವು. ಇದೇ ಪ್ರಕಾರ ಆರ್ಯ ಭದ್ರಬಾಹುವಿನ ನಾಲ್ಕು ಜನ ಶಿಷ್ಯರಿಂದ ತಾಮ್ರಲಿಪ್ತಿಕಾ, ಕೋಟಿವರ್ಷಿಕಾ, ಪೌಂಡ್ರವರ್ಧನಿಕಾ, ಮತ್ತು ದಾಸೀಖಬಡಿಕಾ ಈ ನಾಲ್ಕು ಶಾಖೆಗಳು ಸ್ಥಾಪಿತವಾದುವು. ಹೀಗೆಯೇ ಏಳನೆಯ ಸ್ಥವಿರನಾದ ಆರ್ಯ ಸ್ಥೂಲಭದ್ರನ ರೋಹಗುಪ್ತ ಎಂಬ ಹೆಸರಿನ ಶಿಷ್ಯನಿಂದ 'ತೇರಾಸಿಯ' ಶಾಖೆಯೂ ಉತ್ತರ ಬಲಿಸ್ಸಹ ಶಿಷ್ಯನಿಂದ ಉತ್ತರ ಬಲಿಸ್ಸಹ ಎಂಬ ಹೆಸರಿನ ಗಣವು ಉಂಟಾಯಿತು. ಇದಕ್ಕೆ ಪುನಃ ಕೌಶಾಂಬಿಕೆ, ಸೌವರ್ತಿಕಾ, ಕೋಡಂಬಾಣಿ, ಮತ್ತು ಚಂದ್ರನಾಗರೀ

ಎಂಬ ನಾಲ್ಕು ಶಾಖೆಗಳು ಉತ್ಪನ್ನವಾದುವು. ಸ್ಥೂಲಭದ್ರನ ಎರಡನೆಯ ಶಿಷ್ಯನಾದ ಆರ್ಯ ಸುಹಸ್ತಿಯ ಶಿಷ್ಯನಾದ ರೋಹಣನಿಂದ **ಉದ್ದೇಹಗಣದ** ಸ್ಥಾಪನೆಯಾಯಿತು. ಇದರಿಂದ ಮತ್ತೆ **ಉದುಂಬರಿಜ್ಜಿಕಾ** ಮೊದಲಾದ ನಾಲ್ಕು ಉಪಶಾಖೆಗಳುಂಟಾದುವು; **ನಾಗಭೂತ** ಮೊದಲಾದ ಆರು ಕುಲಗಳು ಉತ್ಪನ್ನವಾದುವು. ಆರ್ಯ ಸುಹಸ್ತಿಯ ಶ್ರೀ ಗುಪ್ತನೆಂಬ ಹೆಸರಿನ ಶಿಷ್ಯನಿಂದ **ಚಾರಣಗಣವೂ** ಅದರ **ಹಾರ್ಯಮಾಲಾಕಾರಿ** ಮೊದಲಾದ ನಾಲ್ಕು ಶಾಖೆಗಳೂ **ಬರ್ಧಲೀಯ** ಮುಂತಾದ ಏಳು ಕುಲಗಳೂ ಜನಿಸಿದುವು. ಆರ್ಯ ಸುಹಸ್ತಿಯ ಯಶೋಭದ್ರನೆಂಬ ಹೆಸರಿನ ಶಿಷ್ಯನಿಂದ **ಉಡ್ಡುವಾಡಿಯ** ಗಣದ ಸ್ಥಾಪನೆಯಾಯಿತು. ಅದಕ್ಕೆ ಪುನಃ **ಚಂಪಿಜ್ಜಿಯಾ** ಮೊದಲಾದ ನಾಲ್ಕು ಶಾಖೆಗಳೂ **ಭದ್ರಯಶೀಯ** ಮುಂತಾದ ಮೂರು ಕುಲಗಳೂ ಉತ್ಪನ್ನವಾದುವು. ಇದೇ ಪ್ರಕಾರ ಆರ್ಯ ಸುಹಸ್ತಿಯ ಕಾಮರ್ದ್ಧಿ ಎಂಬ ಹೆಸರಿನ ಶಿಷ್ಯನಿಂದ **ವೇಸವಾಡಿಯಾ** ಗಣವು ಉತ್ಪನ್ನವಾಯಿತು. ಇದಕ್ಕೆ **ಶ್ರಾವಸ್ತಿಕಾ** ಮೊದಲಾದ ನಾಲ್ಕು ಶಾಖೆಗಳೂ **ಗಣಿಕ** ಮೊದಲಾದ ನಾಲ್ಕು ಕುಲಗಳೂ ಸ್ಥಾಪಿತವಾದುವು. ಈತನ ಅನ್ಯ ಶಿಷ್ಯನಾದ ಋಷಿಗುಪ್ತನೆಂಬವನಿಂದ **ಮಾಣವ** ಗಣವು ಸ್ಥಾಪಿತವಾಯಿತು. ಅದಕ್ಕೆ **ಕಾಸವಾರ್ಯಿಕಾ, ಗೌತಮಾರ್ಯಿಕಾ, ವಾಸಿಷ್ಠಿಕಾ** ಮತ್ತು **ಸೇರಾಷ್ಟ್ರಿಕಾ** ಎಂಬ ನಾಲ್ಕು ಶಾಖೆಗಳೂ **ಋಷಿಗುಪ್ತಿ** ಮೊದಲಾದ ನಾಲ್ಕು ಕುಲಗಳೂ ಉಂಟಾದುವು. ಶಾಖೆಗಳ ಹೆಸರುಗಳನ್ನು ಗಮನಿಸಿದಲ್ಲಿ ಕೆಲ ಕೆಲವೆಡೆಯಲ್ಲಿ ಸ್ಥಾನಭೇದವನ್ನುಳಿದು ಗೋತ್ರ-**ಭೇದಾನುಸಾರವೂ** ಕೂಡ ಶಾಖೆ-ಉಪಶಾಖೆಗಳು ಉಂಟಾದುದು ಕಂಡುಬರುತ್ತದೆ. ಸ್ಥವಿರ ಸುಸ್ಥಿತನಿಂದ **ಕೋಟಿಕಗಣದ** ಸ್ಥಾಪನೆಯಾಯಿತು. ಇದರಿಂದ **ಉಚ್ಚಾನಾಗರೀ, ವಿದ್ಯಾಧರೀ, ವಜ್ರೀ,** ಮತ್ತು **ಮಾಧ್ಯಮಿಕಾ** ಈ ನಾಲ್ಕು ಶಾಖೆಗಳು ಉತ್ಪನ್ನವಾದುವು. ಹಾಗೆಯೇ **ಬಮ್ಹಲೀಯ, ವತ್ಥಲೀಯ, ವಾಣಿಜ್ಯ** ಮತ್ತು **ಪಣ್ಹವಾಹಣಕ** ಎಂಬ ನಾಲ್ಕು ಕುಲಗಳು ರೂಪುಗೊಂಡುವು. ಈ ಪ್ರಕಾರ ಆರ್ಯ ಸುಹಸ್ತಿಯ ಶಿಷ್ಯರಿಂದ ಬಹಳಷ್ಟು ಶಾಖೆಗಳೂ ಕುಲಗಳೂ ಭಿನ್ನ ಭಿನ್ನವಾಗಿ ಸ್ಥಾಪನಗೊಂಡಿವೆ. ಭೇದ ಪ್ರಭೇದಗಳನ್ನುಂಟು ಮಾಡಿವೆ. ಆರ್ಯ ಸುಸ್ಥಿತನ ಅರ್ಹದ್ದತ್ತನಿಂದ **ಮಧ್ಯಮಾಶಾಖೆಯು** ಸ್ಥಾಪಿತವಾಯಿತು. ವಿದ್ಯಾಧಾರ ಗೋಪಾಲನಿಂದ **ವಿದ್ಯಾಧರೀಶಾಖೆಯು** ನಿರ್ಮಾಣವಾಯಿತು. ಆರ್ಯದತ್ತನ ಶಿಷ್ಯನಾದ ಶಾಂತಿಸೇನನು ಇನ್ನೊಂದು **ಉಚ್ಚಾನಾಗರೀ** ಶಾಖೆಯನ್ನು ಸ್ಥಾಪಿಸಿದನು. ಆರ್ಯ ಶಾಂತಿಸೇನನಿಗೆ ಶ್ರೇಣಿಕ, ತಾಪಸ, ಕುಬೇರ ಮತ್ತು ಋಷಿ ಪಾಲಿಕಾ ಎಂಬ ನಾಲ್ವರು ಶಿಷ್ಯರಾದರು ಇವರಿಂದ ಕ್ರಮವಾಗಿ **ಆರ್ಯ ಸೇನಿಕಾ, ತಾಪಸೀ, ಕುಬೇರ** ಮತ್ತು **ಋಷಿಪಾಲಿಕಾ** ಈ ನಾಲ್ಕು ಶಾಖೆಗಳು ಹುಟ್ಟಿಕೊಂಡುವು. ಆರ್ಯ ಸಿಂಹಗಿರಿಯ ಶಿಷ್ಯನಾದ ಆರ್ಯ ಶಮಿತನಿಂದ **ಬ್ರಹ್ಮದೀಪಿಕಾ** ಹಾಗೂ ಆರ್ಯ ವಜ್ರನಿಂದ **ಆರ್ಯವಜ್ರೀ** ಶಾಖೆಗಳು ಸ್ಥಾಪಿತವಾದುವು. ಆರ್ಯವಜ್ರನ ಶಿಷ್ಯರಾದ ವಜ್ರಸೇನ, ಪದ್ಮ ಮತ್ತು ರಥ ಇವರಿಂದ ಕ್ರಮವಾಗಿ

ಅರ್ಯೇನಾಇಲಿ, ವಜ್ರಾ, ಮತ್ತು ಜಯಂತೀ ಎಂಬ ಹೆಸರಿನ ಶಾಖೆಗಳು ಹುಟ್ಟಿ-ಕೊಂಡುವು. ಈ ವಿವಿಧ ಶಾಖೆ ಹಾಗೂ ಕುಲಗಳ ವಿಷಯದಲ್ಲಿ ಸ್ಥಾನ, ಗೋತ್ರ ಮೊದಲಾದ ಭೇದಗಳು ಇದ್ದುವು. ಇವುಗಳ ಹೊರತಾಗಿ ಇನ್ನೇನೇನು ವೈಶಿಷ್ಟ್ಯತೆಗಳಿದ್ದ ವೆಂಬುದು ಪೂರ್ಣವಾಗಿ ತಿಳಿಯುವ ಸಂಭವವಿಲ್ಲ. ಇವುಗಳಲ್ಲಿಯ ಕೆಲ ಕೆಲವು ಶಾಖೆ ಹಾಗೂ ಕುಲಗಳ ಹೆಸರುಗಳು ಮಥುರೆಯಲ್ಲಿ ದೊರೆತ ಮೂರ್ತಿ ಮೊದಲಾದವುಗಳ ಮೇಲೆ ಉಲ್ಲೇಖಗೊಂಡಿವೆ. ಅದರಿಂದ ಇವುಗಳ ಐತಿಹಾಸಿಕತೆಯು ಸಿದ್ಧವಾಗುತ್ತದೆ.

## ಪ್ರಾಚೀನ ಐತಿಹಾಸಿಕ ಕಾಲಗಣನೆ :—

ಕಲ್ಪಸೂತ್ರ ಸ್ಥವಿರಾವಲಿಯಲ್ಲಿ ಉಲ್ಲೇಖಗೊಂಡ ಆಚಾರ್ಯ ಪರಂಪರೆಯ ಸಂಬಂಧದಲ್ಲಿ ಕಾಲದ ನಿರ್ದೇಶವು ಕಂಡು ಬರುವುದಿಲ್ಲ. ಆದರೆ ಧರ್ಮಸೂರೀ ಕೃತ 'ದುಷಮಕಾಲ-ಶ್ರಮಣಸಂಘ-ಸ್ತವ' ಎಂಬ ಪ್ರಾಕೃತ ಪಟ್ಟಾವಲಿಯಲ್ಲಿ ಕೆಲ ವೊಂದು ಮಹತ್ವಪೂರ್ಣ ಕಾಲ ನಿರ್ದೇಶವು ವ್ಯಕ್ತವಾಗಿದೆ. ಅದರಲ್ಲಿ ಹೀಗೆ ಹೇಳಿದೆ :— ಯಾವ ರಾತ್ರಿ ಭಗವಾನ್ ಮಹಾವೀರನ ನಿರ್ವಾಣವಾಯಿತೋ, ಅದೇ ರಾತ್ರಿಯಲ್ಲಿ ಉಜ್ಜಯಿನಿಯಲ್ಲಿ ಚಂಡಪ್ರದ್ಯೋತ ರಾಜನ ಮೃತ್ಯುವಾಯಿತು, ಪಾಲಕರಾಜನ ಅಭಿಷೇಕವೂ ಆಯಿತು. ಈ ಪಾಲಕರಾಜನು ಆಯುಷ್ಯದಲ್ಲಿ ನಿಃಸಂತಾನವಾಗಿ ಮರಣ ಹೊಂದಿದನು. ಆಗ ಕುಣಿಕನು ಆ ರಾಜ್ಯವನ್ನು ಪಾಟಲಿ ಪುತ್ರದಲ್ಲಿದ್ದೇ ಅಧಿಕಾರ ವಹಿಸಿ, ೬೦ ವರ್ಷಗಳ ವರೆಗೆ ಆಳಿದನು. ಇದೇ ಕಾಲದಲ್ಲಿ ಗೌತಮ ೧೨, ಸುಧರ್ಮ ೮, ಮತ್ತು ಜಂಬೂಸ್ವಾಮಿ ೪೪ ವರ್ಷಗಳ ವರೆಗೆ ಜೈನ ಸಂಘದ ನಾಯಕತ್ವ ವನ್ನು ಯುಗಪ್ರಧಾನ ರೂಪದಲ್ಲಿ ವಹಿಸಿಕೊಂಡಿದ್ದರು. ಪಾಲಕನ ರಾಜ್ಯಕಾಲವು ಅರವತ್ತು ವರ್ಷ ಕಳೆದಮೇಲೆ ಪಾಟಲೀಪುತ್ರದಲ್ಲಿ ನವ ನಂದರು ೧೫೫ ವರ್ಷಗಳ ವರೆಗೆ ರಾಜ್ಯವಾಳಿದರು. ಈ ಅವಧಿಯಲ್ಲಿ ಜೈನ ಸಂಘದ ನಾಯಕತ್ವವನ್ನು ಪ್ರಭಾವ ೧೧ ವರ್ಷ, ಸ್ವಯಂಭೂ ೨೩ ವರ್ಷ, ಯಶೋಭದ್ರ ೫೦, ಸಂಭೂತಿ ವಿಜಯ ೮, ಭದ್ರಬಾಹು ೧೪, ಸ್ಥೂಲಭದ್ರ ೪೫ ವರ್ಷಗಳ ವರೆಗೆ ತೂಗಿಸಿಕೊಂಡು ಹೋದರು. ಈ ಪ್ರಕಾರ ಇಲ್ಲಿಯವರೆಗೆ ವೀರ ನಿರ್ವಾಣದ ತರುವಾಯ ೨೧೫ ವರ್ಷಗಳು ಕಳೆದುವು. ಇದರ ತರುವಾಯ ಮೌರ್ಯವಂಶದ ರಾಜ್ಯವು ೧೦೮ ವರ್ಷಗಳ ವರೆಗೆ ನಡೆಯಿತು. ಈ ಅವಧಿಯಲ್ಲಿ ಮಹಾಗಿರಿ ೩೦ ವರ್ಷ, ಸುಹಸ್ತಿ ೪೬ ವರ್ಷ ಮತ್ತು ಗುಣಸುಂದ ರನು ೩೩ ವರ್ಷ ಜೈನ ಸಂಘದ ನಾಯಕತ್ವವನ್ನು ವಹಿಸಿದ್ದರು. ಮೌರ್ಯರ ನಂತರ ರಾಜಾ ಪುಷ್ಯಮಿತ್ರನು ೩೦ ವರ್ಷ ಹಾಗೂ ಬಲಮಿತ್ರ ಮತ್ತು ಭಾನುಮಿತ್ರರು ನೇರಿ ೬೦ ವರ್ಷ ರಾಜ್ಯವಾಳಿದರು. ಇದರ ಮಧ್ಯದಲ್ಲಿ ಗುಣಸುಂದರನು ತನ್ನ ಉಳಿದ ಆಯುಷ್ಯದ ೧೨ ವರ್ಷ, ಕಾಲಿಕ ೪೦ ವರ್ಷ ಮತ್ತು ಸ್ಕಂದಿಲ ೩೮ ವರ್ಷ ಜೈನಸಂಘದ ನಾಯಕರಾಗಿದ್ದರು. ಈ ಪ್ರಕಾರ ಮಹಾವೀರನ ನಿರ್ವಾಣದ ತರುವಾಯ ೪೧೩ ವರ್ಷಗಳು ಉರುಳಿದುವು. ಭಾನುಮಿತ್ರನ ತರುವಾಯ ರಾಜಾ ನರವಾಹನನು ೪೦

ವರ್ಷ, ಗರ್ದಭಿಲ್ಲನು ೧೩ ಮತ್ತು ಶಕನು ೪ ವರ್ಷಗಳ ವರೆಗೆ ರಾಜ್ಯವಾಳಿದರು. ಈ ಅವಧಿಯಲ್ಲಿ ರೇವತೀಮಿತ್ರನಿಂದ ೩೬ ವರ್ಷ ಹಾಗೂ ಆರ್ಯ ಮಂಗುವಿನಿಂದ ೨೦ ವರ್ಷ ಜೈನ ಸಂಘದ ನಾಯಕತ್ವವು ನಡೆಯಿತು. ಹೀಗೆ ಮಹಾವೀರ ನಿರ್ವಾಣವಾದ ಮೇಲೆ ೪೭೦ ಷರ್ಷಗಳು ಕಳೆದುವು. ಗರ್ದಭಿಲ್ಲನ ರಾಜ್ಯ ಸಮಾಪ್ತಿಯು ಕಾಲಕಾಚಾರ್ಯನಿಂದ ಆಯಿತು. ಅವನ ಪುತ್ರನಾದ ವಿಕ್ರಮಾದಿತ್ಯನು ರಾಜ್ಯಾರೋಹಣನಾಗಿ ೬೦ ವರ್ಷಗಳ ವರೆಗೆ ರಾಜ್ಯವಾಳಿದನು. ಈ ಕಾಲಾವಧಿಯಲ್ಲಿ ಜೈನಸಂಘದಲ್ಲಿ ಬಹುಲ, ಶ್ರೀವೃತ, ಸ್ವಾತಿ, ಹಾರಿ, ಶ್ಯಾಮಾರ್ಯ ಮತ್ತು ಶಾಂಡಿಲ್ಯ ಮೊದಲಾದವರು ಆಗಿ ಹೋದರು. ಪ್ರತ್ಯೇಕಬುದ್ಧ ಹಾಗೂ ಸ್ವಯಂಬುದ್ಧರ ಪರಂಪರೆಯು ನಿಂತು ಹೋಯಿತು. ಬುದ್ಧ ಬೋಧಿತರ ಅಲ್ಪತೆಯಾಯಿತು. ಅದರಂತೆ ಭದ್ರಗುಪ್ತ, ಶ್ರೀಗುಪ್ತ ಮತ್ತು ವಜ್ರಸ್ವಾಮಿ ಇವರು ಆಚಾರ್ಯರಾದರು. ವಿಕ್ರಮಾದಿತ್ಯನ ತರುವಾಯ ಧರ್ಮಾದಿತ್ಯನು ೪೦ ವರ್ಷ, ಮಾಇಲ್ಲನು ೧೧ ವರ್ಷ ರಾಜ್ಯವಾಳಿದರು. ಹೀಗೆ ವೀರ ನಿರ್ವಾಣವಾದ ಮೇಲೆ ೫೮೧ ವರ್ಷಗಳು ವ್ಯತೀತವಾದುವು. ಆ ಮೇಲೆ ದುರ್ವಲಿಕಾ ಪುಷ್ಪಮಿತ್ರನ ೨೦ ವರ್ಷ ಹಾಗೂ ರಾಜಾ ನಾಹಡನ ೪ ವರ್ಷ (?) ಸಮಾಪ್ತವಾದ ಮೇಲೆ ವೀರ ನಿರ್ವಾಣದ ನಂತರ ೬೦೫ ವರ್ಷಗಳು ಮುಗಿದ ಮೇಲೆ ಶಕ ಸಂವತ್ಸರವು ಪ್ರಾರಂಭವಾಯಿತು. ವೀರ ನಿರ್ವಾಣದಿಂದ ೯೯೩ ವರ್ಷ ಉರುಳಿದ ಮೇಲೆ ಕಾಲಕ ಸೂರಿಯು ಪರ್ಯೂಷಣ ಚತುರ್ಥಿಯನ್ನು ಸ್ಥಾಪನೆಗೈದನು. ವೀರ ನಿರ್ವಾಣದಿಂದ ೯೮೦ ವರ್ಷ ಪೂರ್ಣ ಮುಗಿದ ಮೇಲೆ ಆರ್ಯ ಮಹಾಗಿರಿಯ ಶಿಷ್ಯ ಪರಂಪರೆಯಲ್ಲಿ ಜನಿಸಿದ ಶ್ರೀ ದೇವರ್ಧಿಗಣಿ ಕ್ಷಮಾಶ್ರಮಣನು ಕಲ್ಪಸೂತ್ರದ ರಚನೆಯನ್ನು ಮಾಡಿದನು. ಇದೇ ವರ್ಷ ಆನಂದಪುರದಲ್ಲಿ ಧ್ರುವಸೇನ ರಾಜನು ಪುತ್ರ–ವಿಯೋಗದಿಂದ ಶೋಕಾರ್ತನಾದುದರಿಂದ ಅವನ ಸಮಾಧಾನಕ್ಕಾಗಿ ಸಭೆಯ ಸಮಕ್ಷಮದಲ್ಲಿ ಕಲ್ಪ ಸೂತ್ರದ ವಾಚನವು ನಡೆಯಿತು. ಇದು ಬಹು ಶ್ರುತದ ಪರಂಪರೆಯಿಂದ ಗೊತ್ತಾಯಿತು. ಇಷ್ಟು ಸಂಗತಿಗಳೆಲ್ಲ ನಡೆದ ತರುವಾಯ ಈ 'ದುಷಮ ಕಾಲ ಶ್ರಮಣ ಸಂಘ ಸ್ತವದ ಅವಚೂರಿ'ಯು ಈ ಸಮಾಚಾರದ ಜೊತೆಗೆ ಸಮಾಪ್ತಿಯನ್ನು ಹೊಂದುತ್ತದೆ. ವೀರ ನಿರ್ವಾಣವಾಗಿ ೧೩೦೦ ವರ್ಷಗಳು ಸಮಾಪ್ತಿಗೊಂಡ ಮೇಲೆ ವಿದ್ವಾಂಸರ ಶಿರೋಮಣಿಯಾದ ಶ್ರೀ ಬಪ್ಪಭಟ್ಟಸೂರಿಯಾದನು.

**ಏಳು ನಿಹ್ನವ ಮತ್ತು ದಿಗಂಬರ–ಶ್ವೇತಾಂಬರ ಸಂಪ್ರದಾಯ :—**

ಮೇಲೆ ಕಾಣಿಸಿದ ಗಣಗಳು, ಕುಲಗಳು ಮತ್ತು ಶಾಖೆಗಳು ವಿವಿಧವಾಗಿದ್ದರೂ ಇವುಗಳಲ್ಲಿ ವಿಶೇಷ ಸಿದ್ಧಾಂತ ಭೇದವೇನೂ ಕಂಡುಬರುವುದಿಲ್ಲ. ಸಿದ್ಧಾಂತ ಭೇದದ ದೃಷ್ಟಿಯಿಂದ ಏಳು ನಿಹ್ನವಗಳ ಉಲ್ಲೇಖವು ದೊರೆಯುತ್ತದೆ. ಮೊದಲನೆಯ ನಿಹ್ನವವು ಮಹಾವೀರನು ಬದುಕಿರುವಾಗಲೇ ಅವನ ಜ್ಞಾನೋತ್ಪತ್ತಿಯಾಗಿ ಹದಿನಾಲ್ಕು ವರ್ಷಗಳು ಕಳೆದ ಮೇಲೆ ಅವನ ಒಬ್ಬ ಶಿಷ್ಯನಾದ ಜಮಾಲಿಯಿಂದ ಶ್ರಾವಸ್ತಿಯಲ್ಲಿ ಉತ್ಪನ್ನ

ವಾಯಿತು. ಈ ನಿಹ್ನವದ ಹೆಸರು ಬಹುರತ ಎಂದಿತ್ತು. ಯಾಕಂದರೆ ಅದರ ಮೂಲ ಸಿದ್ಧಾಂತವೇ ಹಾಗಿತ್ತು : ಯಾವ ವಸ್ತುವೂ ಒಂದು ಸಮಯದ ಕ್ರಿಯೆಯಿಂದ ಉತ್ಪನ್ನವಾಗುವುದಿಲ್ಲ ; ಅನೇಕ ಸಮಯಗಳಲ್ಲಿ ಉತ್ಪನ್ನವಾಗುತ್ತದೆ. ಎರಡನೆಯ ನಿಹ್ನವವು ಮುಂದೆ ಎರಡು ವರ್ಷಗಳ ತರುವಾಯ ಶಿಷ್ಯಗುಪ್ತನಿಂದ ಋಷಭಪುರದಲ್ಲಿ ಉತ್ಪನ್ನವಾಯಿತೆಂದು ಹೇಳಲಾಗಿದೆ. ಇದರ ಅನುಯಾಯಿಗಳಿಗೆ ಜೀವ ಪ್ರದೇಶಕ ಎಂದು ಕರೆಯಲಾಯಿತು. ಯಾಕಂದರೆ ಇವರು ಜೀವದ ಕೊನೆಯ ಪ್ರದೇಶಕ್ಕೇನೇ ಜೀವ ಸಂಜ್ಞೆಯನ್ನೀಯುತ್ತಿದ್ದರು. ಅವ್ಯಕ್ತ ಎಂಬ ಹೆಸರಿನ ಮೂರನೆಯ ನಿಹ್ನವವು, ವೀರ ನಿರ್ವಾಣವಾಗಿ ೨೧೪ ವರ್ಷಗಳು ಕಳೆದ ಮೇಲೆ ಆಷಾಢ-ಆಚಾರ್ಯನಿಂದ ಶ್ವೇತವಿಕಾ ನಗರದಲ್ಲಿ ಸ್ಥಾಪಿಸಲ್ಪಟ್ಟಿತು. ಇದರ ಮತದಲ್ಲಿ ವಸ್ತುವಿನ ಸ್ವರೂಪವು ಅವ್ಯಕ್ತ, ಅರ್ಥಾತ್ ಅಸ್ಪಷ್ಟ ಮತ್ತು ಅಜ್ಞೇಯವೆಂದು ಮನ್ನಿಸಲಾಗಿದೆ. ನಾಲ್ಕನೆಯ ದಾದ ಸಮುಚ್ಛೇದ ಎಂಬ ಹೆಸರಿನ ನಿಹ್ನವವು, ವೀರ ನಿರ್ವಾಣದ ತರುವಾಯ ೨೨೦ ವರ್ಷಗಳ ಮೇಲೆ ಅಶ್ವಮಿತ್ರ ಆಚಾರ್ಯನಿಂದ ಮಿಥಿಲಾ ನಗರದಲ್ಲಿ ಆರಂಭ ವಾಯಿತು. ಇದಕ್ಕನುಸರಿಸಿ ಪ್ರತಿಯೊಂದು ಕಾರ್ಯವೂ ತನ್ನ ಉತ್ಪತ್ತಿಯ ನಂತರ ಸಮಯದಲ್ಲಿ ಸಮಸ್ತರೂಪದಿಂದ ವ್ಯುಚ್ಛಿನ್ನವಾಗಿ ಹೋಗುತ್ತದೆ ; ಅರ್ಥಾತ್ ಪ್ರತ್ಯೇಕ ಉತ್ಪಾದಿತ ವಸ್ತುವು ಕ್ಷಣಸ್ಥಾಯಿಯಾಗಿದೆ. ಈ ಮತವು ಬೌದ್ಧದರ್ಶನದ ಕ್ಷಣಿಕತ್ವ ವಾದಕ್ಕೆ ಹೊಂದುವಂತೆ ತೋರುತ್ತದೆ. ಐದನೆಯ ನಿಹ್ನವವು ವೀರ ನಿರ್ವಾಣದ ೨೨೮ ವರ್ಷಗಳ ತರುವಾಯ ಗಂಗ ಆಚಾರ್ಯನಿಂದ ಉಲ್ಲುಕಾ ತೀರದಲ್ಲಿ ಉತ್ಪನ್ನವಾಯಿತು. ಇದರ ಹೆಸರು ದ್ವಿಕ್ರಿಯಾ ಎಂದಿದೆ. ಒಂದು ಸಮಯದಲ್ಲಿ ಕೇವಲ ಒಂದೇ ಅಲ್ಲ, ಎರಡು ಕ್ರಿಯೆಗಳ ಅನುಭವನವು ಸಂಭವವಿದೆ-ಎಂಬುದೇ ಈ ಮತದ ಮರ್ಮವಾಗಿದೆ. ಆರನೆಯ ತ್ರೈರಾಶಿಕ ಎಂಬ ನಿಹ್ನವವು ಛಲ್ಲುಕ ಮುನಿಯಿಂದ ಪುರಮಂತರಂಜಿಕಾ ನಗರದಲ್ಲಿ ಉತ್ಪನ್ನವಾಯಿತು. ಈ ಮತದ ಅನುಯಾಯಿಗಳು ವಸ್ತು ವಿಭಾಗವನ್ನು ಮೂರು ರಾಶಿಗಳಲ್ಲಿ ವಿಂಗಡಿಸುತ್ತಿದ್ದರು ; ಜೀವ, ಅಜೀವ, ಜೀವಾಜೀವ ಎಂಬುದೇ ಆ ವಿಭಾಗ ಕ್ರಮವಾಗಿದೆ. ಏಳನೆಯ ನಿಹ್ನವವು ಅಬದ್ಧ ಎಂಬುದು. ಇದರ ಸ್ಥಾಪನೆಯು ವೀರ ನಿರ್ವಾಣವಾಗಿ ೫೮೪ ವರ್ಷಗಳ ತರುವಾಯ ಗೋಷ್ಠಾಮಾಹಿಲನಿಂದ ದಶಪುರದಲ್ಲಾಯಿತು. ಇದರ ಮರ್ಮವು ಹೀಗಿದೆ :—ಕರ್ಮವು ಜೀವವನ್ನು ಸ್ಪರ್ಶಿಸುತ್ತದೆ ಮಾತ್ರ ; ಬಾಧಿಸುವುದಿಲ್ಲ.

ಈ ಏಳು ನಿಹ್ನವಗಳ ತರುವಾಯ, ವೀರ ನಿರ್ವಾಣದಿಂದ ೬೦೯ ವರ್ಷಗಳು ಉರುಳಿದ ಮೇಲೆ ಬೋಟಿಕ ನಿಹ್ನವ ಅರ್ಥಾತ್ ದಿಗಂಬರ ಸಂಘದ ಉತ್ಪತ್ತಿಯಾಯಿತೆಂದು ಹೇಳಲಾಗಿದೆ (ಸ್ಥಾ೭, ವಿ. ಅವಶ್ಯಕ ಮತ್ತು ತವಾ, ಪಟ್ಟಾ). ದಿಗಂಬರ ಪರಂಪರೆಯಲ್ಲಿ ಮೇಲೆ ವಿವರಿಸಿದ ಏಳು ನಿಹ್ನವಗಳ ಯಾವ ಉಲ್ಲೇಖವೂ ಇಲ್ಲ. ಆದರೆ ವಿ. ಸಂವತ್ಸರದ ೧೩೬ ವರ್ಷಗಳ ತರುವಾಯ ಶ್ವೇತಾಂಬರ ಸಂಘದ ಉತ್ಪತ್ತಿಯಾಯಿತೆಂಬ ಉಲ್ಲೇಖವು ಸ್ಪಷ್ಟವಾಗಿದೆ (ದರ್ಶನಸಾರ ಗಾಥಾ ೧೧). ಈ ಪ್ರಕಾರ ಶ್ವೇತಾಂಬರ

ಪರಂಪರೆಯಲ್ಲಿ ದಿಗಂಬರ ಸಂಪ್ರದಾಯದ ಉತ್ಪತ್ತಿಯ ಕಾಲದಲ್ಲಿಯೂ ಮತ್ತು ದಿಗಂಬರ ಪರಂಪರೆಯಲ್ಲಿ ಶ್ವೇತಾಂಬರ ಪಂಥದ ಉತ್ಪತ್ತಿ ಕಾಲ-ನಿರ್ದೇಶದಲ್ಲಿಯೂ ಕೇವಲ ಮೂರು ವರ್ಷಗಳ ಅಂತರವು ಕಂಡು ಬರುತ್ತದೆ. ಈ ಉಲ್ಲೇಖಗಳ ಮೇಲಿಂದ ಮಹಾವೀರನ ಸಂಘದಲ್ಲಿ, ದಿಗಂಬರ, ಶ್ವೇತಾಂಬರ ಸಂಪ್ರದಾಯಗಳ ಸ್ಪಷ್ಟ ರೂಪದಲ್ಲಿ ಭೇದವಾದುದು ವೀರ ನಿರ್ವಾಣದ ೬೦೦ ವರ್ಷಗಳ ತರುವಾಯವೆಂದು ಅನುಮಾನ ಮಾಡಿದರೆ ಅನುಚಿತವಾಗಲಾರದು.

## ದಿಗಂಬರ ಆಮ್ನಾಯದಲ್ಲಿ ಗಣಭೇದ :—

ದಿಗಂಬರ ಮಾನ್ಯತೆಗನುಸರಿಸಿ ಮಹಾವೀರ ನಿರ್ವಾಣದ ನಂತರ ೬೮೩ ವರ್ಷಗಳ ವರೆಗಿನ ಆಚಾರ್ಯ ಪರಂಪರೆಯನ್ನು ಹಿಂದೆ ಉಲ್ಲೇಖಿಸಲಾಗಿದೆ. ತರುವಾಯ ಯಾವುದೋ ಒಂದು ಕಾಲದಲ್ಲಿ ಅರ್ಹದ್ಬಲಿ ಎಂಬ ಆಚಾರ್ಯನಾದನು. ಅವನು ಐದು ವರ್ಷದ ಯುಗ ಪ್ರತಿಕ್ರಮಣದ ಸಮಯದಲ್ಲಿ ಒಂದು ದೊಡ್ಡ ಮುನಿ ಸಮ್ಮೇಲನವನ್ನು ಮಾಡಿದನು. ಅದರಲ್ಲಿ ಸುತ್ತಲೂ ನೂರು ಯೋಜನಗಳಲ್ಲಿರುವ ಮುನಿಗಳೆಲ್ಲ ಒತ್ತಟ್ಟಿಗೆ ಸೇರಿದರು. ಅವರೆಲ್ಲರ ಭಾವನೆಗಳ ಮೇಲಿಂದ, ಇನ್ನು ಪಕ್ಷಪಾತದ ಯುಗವು ಆರಂಭವಾಯಿತೆಂದು ಅವನು ತಿಳಿದನು. ಅದರಿಂದ ಅವನು ನಂದಿ, ವೀರ, ಅಪರಾಜಿತ, ದೇವ, ಪಂಚಸ್ತೂಪ, ಸೇನ, ಭದ್ರ ಗುಪ್ತ, ಸಿಂಹ, ಚಂದ್ರ ಮೊದಲಾದ ಹೆಸರುಗಳಿಂದ ಭಿನ್ನ ಭಿನ್ನ ಸಂಘಗಳನ್ನು ಸ್ಥಾಪಿಸಿದನು. ಇವುಗಳಿಂದ ಸಮೀಪವರ್ತಿ ಆಪ್ತತ್ವವು ಉಂಟಾಗಿ, ಆತ್ಮೀಯತೆಯ ಭಾವನೆಯು ಹೆಚ್ಚಿ, ಧರ್ಮ ವಾತ್ಸಲ್ಯ ಹಾಗೂ ಪ್ರಭಾವನೆಗಳು ಹೆಚ್ಚುವವೆಂದು ಆತನು ಭಾವಿಸಿದನು. ದರ್ಶನ ಸಾರಕ್ಕನುಸರಿಸಿ, ವಿಕ್ರಮ ಸಂವತ್ಸರದ ೫೨೬ ವರ್ಷದಲ್ಲಿ ದಕ್ಷಿಣ ಮದುರೆಯಲ್ಲಿ—ಮಥುರಾನಗರದಲ್ಲಿ-ಪೂಜ್ಯಪಾದನ ಶಿಷ್ಯನಾದ ವಜ್ರನಂದಿಯು ದ್ರಾವಡ ಸಂಘವನ್ನು ಸ್ಥಾಪಿಸಿದನು. ಈ ಸಂಘದ ಮತಕ್ಕನುಸರಿಸಿ, ಬೀಜಗಳಲ್ಲಿ ಜೀವವು ಇರುವುದಿಲ್ಲ ; ಪ್ರಾಶುಕ ಅಪ್ರಾಶುಕ ಜಲದಲ್ಲೇನೂ ಭೇದವಿಲ್ಲ ; ಹೀಗಾಗಿ ವಸತಿಗಳಲ್ಲಿ ಇರುವುದು, ವ್ಯಾಪಾರ ಮಾಡುವುದು, ತಣ್ಣೀರಿನಿಂದ ಸ್ನಾನಮಾಡುವುದು ಮುನಿಗಳಿಗೆ ನಿಷೇಧವಾಗಿರಲಿಲ್ಲ, ಅದರಿಂದ ಅವರಿಗೆ ಪಾಪವೂ ಸಂಭವಿಸುತ್ತಿರಲಿಲ್ಲ. ವಿಕ್ರಮ ಸಂವತ್ಸರದ ೨೦೫ನೆಯ ವರ್ಷದಲ್ಲಿ ಕಲ್ಯಾಣ ಪಟ್ಟಣದಲ್ಲಿ ಶ್ವೇತಾಂಬರ ಮುನಿಯಾದ ಶ್ರೀ ತಲಶನಿಂದ ಯಾಪನೀಯ ಸಂಘದ ಸ್ಥಾಪನೆಯಾಯಿತು. ವಿಕ್ರಮ ಸಂವತ್ಸರದ ಐದು ಆರನೆಯ ಶತಮಾನಗಳಲ್ಲಿಯ ತಾಮ್ರಪಟ ಮೊದಲಾದುವುಗಳಲ್ಲಿ ಯಾಪನೀಯ ಸಂಘದ ಆಚಾರ್ಯರ ಉಲ್ಲೇಖವು ದೊರೆಯುತ್ತದೆ. ಕಾಷ್ಠಾಸಂಘದ ಉತ್ಪತ್ತಿಯು ವಿ. ಸಂ. ೭೫೩ರಲ್ಲಿ ನಂದಿತಟವೆಂಬ-ಗ್ರಾಮದಲ್ಲಿ ಕುಮಾರಸೇನ ಮುನಿಯಿಂದ ಆಯಿತು. ಈ ಸಂಘದಲ್ಲಿ ಸ್ತ್ರೀಯರಿಗೆ ದೀಕ್ಷೆ ಕೊಡುವುದೂ ಪಿಂಛಿಗೆ ಬದಲಾಗಿ ಮುನಿಗಳು ಚೌರಿಯನ್ನು ಇಟ್ಟುಕೊಳ್ಳುವುದೂ ಕಂಡುಬರುತ್ತದೆ. ಮಾಥುರ ಸಂಘದ ಸ್ಥಾಪನೆಯು ಕಾಷ್ಠಾ ಸಂಘದ ಸ್ಥಾಪನೆಯ

ತರುವಾಯ ಇನ್ನೂರು ವರ್ಷಗಳ ಮೇಲೆ ಆಯಿತು, ಅಂದರೆ ಆಗ ವಿ. ಸಂ. ೯೫೩ನೆಯ ವರ್ಷನಡೆಯುತ್ತಿತ್ತು. ಇದನ್ನು ರಾಮಸೇನ ಮುನಿಯು ಸ್ಥಾಪಿಸಿದನು. ಈ ಸಂಘದ ಮುನಿಗಳು ಪಿಂಛಿಯನ್ನು ಇಟ್ಟುಕೊಳ್ಳುವುದನ್ನು ಬಿಟ್ಟರು. ಇದೊಂದು ವಿಶೇಷತೆ ಯಾಗಿದೆ. ಕಾಷ್ಠಾ ಸಂಘದ ಉತ್ಪತ್ತಿಯಾದ ಮೇಲೆ ಹದಿನೆಂಟು ವರ್ಷಗಳ ತರುವಾಯ ಅರ್ಥಾತ್ ವಿ. ಸಂ. ೯೭೧ರಲ್ಲಿ ದಕ್ಷಿಣ ದೇಶದ ವಿಂಧ್ಯಪರ್ವತದ ಪುಷ್ಕಲ ಎಂಬ ಸ್ಥಾನ ದಲ್ಲಿ ವೀರಚಂದ್ರ ಮುನಿಯಿಂದ ಭಿಲ್ಲಕ ಸಂಘದ ಸ್ಥಾಪನೆಯಾಯಿತು. ಅವನು ತನ್ನ ದಾದ ಬೇರೆ ಗಚ್ಛವನ್ನೇ ನಿರ್ಮಿಸಿದನು, ಪ್ರತಿಕ್ರಮಣ ಹಾಗೂ ಮುನಿಗಳ ಚರ್ಯೆಯ ವಿಷಯದಲ್ಲಿ ಬೇರೆ ರೀತಿಯ ವ್ಯವಸ್ಥೆಯನ್ನೇ ಮಾಡಿದನು, ಅಲ್ಲದೆ ವರ್ಣಾಚಾರಕ್ಕೆ ಯಾವ ಸ್ಥಾನವನ್ನೂ ಕೊಡಲಿಲ್ಲ. ದರ್ಶನಸಾರವನ್ನುಳಿದು ಬೇರೆಲ್ಲಿಯೂ ಈ ಸಂಘದ ಉಲ್ಲೇಖವು ದೊರೆಯುವುದಿಲ್ಲ. ಆದರೆ ಈ ಒಂದು ಉಲ್ಲೇಖದಿಂದಲೂ ಕೂಡ ಒಂಭತ್ತು–ಹತ್ತನೆಯ ಶತಮಾನದ ಸುಮಾರಿನಲ್ಲಿ ಜೈನ ಮುನಿಯೊಬ್ಬನು ವಿಂಧ್ಯ ಪರ್ವತದ ಭಿಲ್ಲರಲ್ಲಿಯೂ ಧರ್ಮ ಪ್ರಚಾರ ಮಾಡಿದನೆಂಬುದು ನಿಶ್ಚಿತವಾಗಿ ತಿಳಿಯು ತ್ತದೆ. ಇಷ್ಟೇ ಅಲ್ಲ, ಆ ಜನರ ಆಚರಣೆಯ ಶಕ್ತಿಗೆ ಅನುಸರಿಸಿ, ಧರ್ಮಪಾಲನೆ ಯಲ್ಲಿಯೂ ಕೆಲವೊಂದು ವಿಶೇಷ ವ್ಯವಸ್ಥೆಗಳನ್ನೂ ರೂಪಿಸಿದನು.

ಶ್ರವಣಬೆಳ್ಗೊಳದಲ್ಲಿ ಲಭಿಸಿದ, ೫೦೦ ಕ್ಕಿಂತಲೂ ಹೆಚ್ಚು ಸಂಖ್ಯೆಯಲ್ಲಿರುವ, ಶಿಲಾಲೇಖಗಳಿಂದ ಅನೇಕ ಶತಮಾನಗಳ ವರೆಗಿನ ವಿವಿಧ ಆಮ್ನಾಯ ಹಾಗೂ ಆಚಾರ್ಯ ಪರಂಪರೆಗಳ ವಿವರಣವು ನಮಗೆ ಲಭಿಸುತ್ತದೆ ಸಿದ್ಧರ ಬಸ್ತಿಯ ಒಂದು ಶಿಲಾಲೇಖದಲ್ಲಿ, ಅರ್ಹದ್‌ಬಲಿಯು ತನ್ನ ಇಬ್ಬರು ಶಿಷ್ಯರಾದ ಪುಷ್ಪದಂತ ಮತ್ತು ಭೂತಬಲಿ ಇವರಿಂದ ಬಹು ಪ್ರತಿಷ್ಠೆಯನ್ನು ಹೊಂದಿದನೆಂತಲೂ ಅವನು ಮೂಲ ಸಂಘವನ್ನು ಸೇನ, ನಂದಿ, ದೇವ ಮತ್ತು ಸಿಂಹ ಎಂಬ ನಾಲ್ಕು ಶಾಖೆಗಳನ್ನಾಗಿ ವಿಭಜಿಸಿದನೆಂದೂ ಹೇಳಿದೆ. ಅನೇಕ ಲೇಖಗಳಲ್ಲಿ ಉಲ್ಲೇಖಗೊಂಡ ಸಂಘ, ಗಣ, ಗಚ್ಛಗಳು ಹೀಗಿವೆ:—ಮೂಲಸಂಘ, ನಂದಿಸಂಘ, ನವಿಲೂರ ಸಂಘ, ಮಯೂರ ಸಂಘ, ಕಿತ್ತೂರ ಸಂಘ, ಕೊಲ್ಲತೂರ ಸಂಘ, ನಂದಿಗಣ, ದೇಶೀಗಣ, ದ್ರಮಿಲ (ತಮಿಲ) ಗಣ, ಕಾಣೂರ ಗಣ, ಪುಸ್ತಕ ಅಥವಾ ಸರಸ್ವತೀ ಗಚ್ಛ, ವಕ್ರ ಗಚ್ಛ, ತಗರಿಲ ಗಚ್ಛ, ಮಂಡಿತಟ ಗಚ್ಛ, ಇಂಗಳೇಶ್ವರ ಬಲಿ, ಪನಸೋಗೆ ಬಲಿ ಮೊದಲಾ ದವುಗಳಾಗಿವೆ.

**ಪೂರ್ವ ಮತ್ತು ಉತ್ತರ ಭಾರತದಲ್ಲಿ ಧಾರ್ಮಿಕ ಪ್ರಸಾರದ ಇತಿಹಾಸ:—**

ಭಗವಾನ್ ಮಹಾವೀರನು ಸ್ವತಃ ವಿಹರಿಸಿ, ತನ್ನ ಉಪದೇಶವನ್ನು ವಿಶೇಷ ರೂಪದಿಂದ ಮಗಧ, ವಿದೇಹ, ಅಂಗ, ವಂಗ ಮೊದಲಾದ ಪೂರ್ವದೇಶಗಳಲ್ಲಿಯೂ ಮತ್ತು ಪಶ್ಚಿಮದ ಕೋಶಲ ಹಾಗೂ ಕಾಶೀ ಪ್ರದೇಶಗಳಲ್ಲಿಯೂ ಪ್ರಚುರಗೊಳಿಸಿದ್ದನು. ಅಲ್ಲದೆ ಆ ಕಾಲದಲ್ಲಿದ್ದ ಮಗಧ ರಾಜನಾದ ಶ್ರೇಣಿಕ ಬಿಂಬಿಸಾರ ಮತ್ತು ಅವನ

ಪುತ್ರನಾದ ಕುಣಿಕ ಅಜಾತಶತ್ರು ಇವರನ್ನು ತನ್ನ ಅನುಯಾಯಿಗಳನ್ನಾಗಿ ಮಾಡಿ
ಕೊಂಡಿದ್ದನು. ನಂದರಾಜರೂ ಜೈನಧರ್ಮಾನುಯಾಯಿಗಳಾಗಿದ್ದರೆಂಬುದಕ್ಕೆ
ಪ್ರಮಾಣಗಳು ದೊರೆಯುತ್ತವೆ. ಕ್ರಿ. ಪೂ. ೧೫೦ ರ ಸುಮಾರಿನದಾದ ಖಾರವೇಲನ
ಶಿಲಾಲೇಖದಲ್ಲಿ, ನಂದರಾಜನು ಕಲಿಂಗದಿಂದ ಮಗಧ ದೇಶಕ್ಕೆ ಒಯ್ದ ಜೈನ ಮೂರ್ತಿ
ಯನ್ನು ಖಾರವೇಲನು ಪುನಃ ತನ್ನ ದೇಶದಲ್ಲಿ ತಂದು ಪ್ರತಿಷ್ಠಾಪಿಸಿದನೆಂಬ ಉಲ್ಲೇಖವು
ಸ್ಪಷ್ಟವಾಗಿ ಇದೆ. ಈ ಲೇಖವು ಅರಹಂತ ಹಾಗೂ ಸಿದ್ಧರ ನಮಸ್ಕಾರದಿಂದ ಆರಂಭ
ವಾಗುತ್ತದೆ. ಮುಂದೆ ಖಾರವೇಲನ ಬಾಲ್ಯ, ಶಿಕ್ಷಣ, ರಾಜ್ಯಾಭಿಷೇಕ, ಅವನು ನಾನಾ
ಪ್ರದೇಶಗಳನ್ನು ಗೆದ್ದುಕೊಂಡ ರೀತಿ, ಸ್ವದೇಶದಲ್ಲಿ ಮಾಡಿದ ಲೋಕೋಪಯೋಗಿ
ಕಾರ್ಯಗಳ ವಿವರವೆಲ್ಲ ಬರುತ್ತದೆ. ಕಲಿಂಗದಲ್ಲಿ (ಓಡಿಸಾ) ಜೈನಧರ್ಮವು ಬಿಹಾರ
ದಿಂದಲೇ ಪಸರಿಸಿದೆ. ಇದರಲ್ಲಿ ಯಾವ ಸಂದೇಹವೂ ಇಲ್ಲ. ಬಿಹಾರದೊಡನೆ ಜೈನ
ಧರ್ಮದ ಸಂಬಂಧವು ಇತಿಹಾಸಾತೀತ ಕಾಲದಿಂದಲೂ ಇದೆ. ಭಾಗಲಪುರ ಸ್ಟೇಶನ್ನ
ಸರಿಸಿ ಬಿಹಾರದಿಂದ ಓದಿಸಾಕ್ಕೆ ಹೋಗುವ ಮಾರ್ಗವು ಮಾನಭೂಮ ಮತ್ತು ಸಿಂಹ
ಭೂಮ ಜಿಲ್ಲೆಗಳಿಂದಲೇ ಇತ್ತು. ಮಾನಭೂಮದ ಬ್ರಾಹ್ಮಣರಲ್ಲಿ ಈಗಲೂ ಕೂಡ
ತಮ್ಮನ್ನು 'ಪಶ್ಚಿಮ ಬ್ರಾಹ್ಮಣ' ಎಂದು ಕರೆದುಕೊಳ್ಳುವ ಪಂಗಡವೊಂದಿದೆ. ಅವ
ರನ್ನು ವರ್ಧಮಾನ ಮಹಾವೀರನ ವಂಶಜರೆಂದು ವರ್ಣಿಸಲಾಗಿದೆ. ಇಷ್ಟೇ ಅಲ್ಲದೆ
ಅವರು ಭೂಮಿಯ ಮೇಲೆ ಮೊಟ್ಟ ಮೊದಲು ಜನಿಸಿದ ಅತಿ ಪ್ರಾಚೀನ ಆರ್ಯ
ವಂಶಕ್ಕೆ ತಾವು ಸಂಬಂಧಿಸಿದವರೆಂದು ಹೇಳಿಕೊಳ್ಳುತ್ತಾರೆ. ಪ್ರಾರಂಭದ ಶ್ರಮಣ
ಪರಂಪರೆಯು ಆರ್ಯರದೇ ಆಗಿತ್ತು. ಆದರೆ ಈ ಆರ್ಯರು ವೈದಿಕ ಆರ್ಯರು ಭಾರ
ತಕ್ಕೆ ಬರುವ ಪೂರ್ವದಲ್ಲಿಯೇ ಮಗಧ ಪ್ರದೇಶಗಳಲ್ಲಿ ವಾಸಿಸುತ್ತಿದ್ದರು. ಈಗ ಇದರಲ್ಲಿ
ಯಾವ ಸಂಶಯವೂ ನಿಂತಂತೆ ತೋರುವುದಿಲ್ಲ ಈ ದೃಷ್ಟಿಯಿಂದ ಮೇಲೆ ಹೇಳಿದ
'ಪಶ್ಚಿಮ ಬ್ರಾಹ್ಮಣ' ಎನ್ನುವ ಮಾತು ಬಹು ಐತಿಹಾಸಿಕ ಮಹತ್ವವುಳ್ಳುದೆಂದು
ಕಂಡು ಬರುತ್ತದೆ. ಸಮಗ್ರ ಮಗಧ ಪ್ರದೇಶದಲ್ಲೆಲ್ಲ ಪ್ರಾಚೀನ ಜೈನ ಅವಶೇಷಗಳು
ಲಭಿಸುತ್ತವೆ. ಇವುಗಳಲ್ಲಿ ಪಾಟಣಾ ಜಿಲ್ಲೆಯ ರಾಜಗೃಹ ಮತ್ತು ಪಾವಾ. ಹಜಾರಿ
ಬಾಗ ಜಿಲ್ಲೆಯ ಪಾರ್ಶ್ವನಾಥ ಪರ್ವತಗಳು ಸುಪ್ರಸಿದ್ಧವಾಗಿವೆ. ಆದರೂ ಈ ಸ್ಥಾನ
ಗಳಲ್ಲಿ ಈಗ ಕಂಡುಬರುವ ಮಂದಿರ ಹಾಗೂ ಮೂರ್ತಿಗಳಲ್ಲಿ ಹೆಚ್ಚಾಗಿ ಪ್ರಾಚೀನತ್ವವು
ವ್ಯಕ್ತವಾಗುವುದಿಲ್ಲ. ಇವುಗಳಿಗಿಂತ ಮಾನಭೂಮ ಮತ್ತು ಸಿಂಹಭೂಮ ಜಿಲ್ಲೆಗಳ
ಮೂರ್ತಿಗಳು ತೀರ ಪ್ರಾಚೀನವಾಗಿವೆ. ಇವುಗಳಲ್ಲಿ ಹಲವು ಈಗ ಹಿಂದುಗಳಿಂದ ತಮ್ಮ
ಧರ್ಮಾಯತನಗಳೆಂದು ಪೂಜಾಸ್ಥಾನಗಳಾಗಿವೆ. ಕೆಲವೊಂದು ಜೈನಮೂರ್ತಿಗಳು
ಭೈರವನಾಥ ಎಂಬ ಹೆಸರಿನಿಂದ ಪೂಜಿಸಲ್ಪಡುತ್ತವೆ. ಕೆಲಕೆಲವು ಪಾಂಡವರ ಮೂರ್ತಿ
ಗಳೆಂದು ಮನ್ನಣೆಗೆ ಪಾತ್ರವಾಗಿವೆ. ಅಲ್ಲಿ-ಇಲ್ಲಿಂದ ಕೂಡ ಹಾಕಿ ಇಟ್ಟ ಪಾಟಣಾ
ಸಂಗ್ರಹಾಲಯದೊಳಗಿನ ಜೈನ ಮೂರ್ತಿಗಳು ಕ್ರಿ. ಶ. ಹನ್ನೊಂದನೆಯ ಶತಮಾನ
ಕ್ಕಿಂತ ಪ್ರಾಚೀನ-ಕಾಲದವುಗಳಾಗಿವೆ. (ಇದಕ್ಕೆ ಪ್ರಮಾಣವೆಂದು ರಾಯ ಚೌಧುರಿ

ಕೃತ "ಜೈನಿಝಂ ಇನ್ ಬಿಹಾರ್" ಎಂಬುದನ್ನು ನೋಡಬಹುದು.) ಚೀನೀ ಯಾತ್ರಿಕನಾದ ಹುಯೇನತ್ಸಾಂಗನು (ಏಳನೆಯ ಶತಮಾನ) ತಾನು ಮಾಡಿದ ವೈಶಾಲಿಯ ವರ್ಣನೆಯಲ್ಲಿ ನಿರ್ಗ್ರಂಥರು ಬಹುಸಂಖ್ಯೆಯಲ್ಲಿ ಅಲ್ಲಿದ್ದುದನ್ನು ಉಲ್ಲೇಖಿಸಿದ್ದಾನೆ. ಇಷ್ಟೇ ಅಲ್ಲದೆ, ಅವನು ಈ ವಿವರವನ್ನೂ ಕೂಡ ಪೂರೈಸಿದ್ದಾನೆ :- ದಿಗಂಬರ ಮತ್ತು ಶ್ವೇತಾಂಬರ ಸಂಪ್ರದಾಯದ ಜೈನ ಮುನಿಗಳು ಪಶ್ಚಿಮದಲ್ಲಿ ತಕ್ಷಶಿಲಾ ಮತ್ತು ಗೃಧ್ರಕೂಟಗಳ ವರೆಗೆ ಪಸರಿಸಿದ್ದಾರೆ. ಪೂರ್ವದಲ್ಲಿ ದಿಗಂಬರ ನಿರ್ಗ್ರಂಥ ಮುನಿಗಳು ಪುಂಡ್ರವರ್ಧನ ಮತ್ತು ಸಮತಟದ ವರೆಗೆ ವಿಪುಲವಾಗಿ ಕಂಡುಬರುತ್ತಾರೆ. ಚೀನೀ ಯಾತ್ರಿಕನ ಈ ಉಲ್ಲೇಖದಿಂದ ಏಳನೆಯ ಶತಮಾನದಲ್ಲಿ ಸಂಪೂರ್ಣ ಉತ್ತರದಲ್ಲೆಲ್ಲ ಜೈನಧರ್ಮವು ಬಹುಪ್ರಚಾರದಲ್ಲಿತ್ತೆಂಬುದು ಚೆನ್ನಾಗಿ ಗೊತ್ತಾಗುತ್ತದೆ.

ಮಥುರೆಯ ಕಂಕಾಲಿಟಿಲೆಯನ್ನು ಅಗೆಯುವಾಗ ಅದರಲ್ಲಿ ಅತಿ ಪ್ರಾಚೀನ ಸ್ತೂಪ ಹಾಗೂ ಒಂದೆರಡು ಜೈನಮಂದಿರಗಳ ಭಗ್ನಾವಶೇಷಗಳು ದೊರೆತುವು. ಇಲ್ಲಿ ಲಭಿಸಿದ ಪುರಾತತ್ತ್ವ ಸಾಮಗ್ರಿಗಳಿಂದ. ಕ್ರಿ. ಪೂ. ಕೆಲವೊಂದು ಶತಾಬ್ಧಿಗಳಿಂದ ಮೊದಲುಗೊಂಡು ಸುಮಾರು ಹತ್ತನೆಯ ಶತಮಾನದ ವರೆಗೆ ಈ ಸ್ಥಾನವು ಜೈನ ಧರ್ಮದ ಒಂದು ಮಹತ್ವಪೂರ್ಣವಾದ ಕೇಂದ್ರವಾಗಿತ್ತೆಂದು ತಿಳಿಯುತ್ತದೆ. ಮೂರ್ತಿಗಳ ಸಿಂಹಾಸನ, ಆಯಾಗಪಟ್ಟಗಳ ಮೇಲೆ ಕೆಲವೊಂದು ಲೇಖನಗಳು ಇವೆ. ಅವುಗಳಲ್ಲಿ ಕೆಲವು ಕುಷಾಣ ರಾಜರಾದ ಕನಿಷ್ಕ, ಹುವಿಷ್ಕ, ವಾಸುದೇವ ಮೊದಲಾದವರ ಹೆಸರುಗಳೂ ಅವರ ಕಾಲಗಳ ಉಲ್ಲೇಖವೂ ಸ್ಪಷ್ಟವಾಗಿದೆ ಆದರಿಂದ ಅವು ಕ್ರಿ.ಶ. ಪ್ರಾರಂಭದವುಗಳೆಂದು ತಿಳಿಯುತ್ತದೆ. ಪ್ರಾಚೀನ ಜೈನ ಗ್ರಂಥಗಳಲ್ಲಿಯೂ ಈ ಸ್ತೂಪದ ಉಲ್ಲೇಖವು ದೊರೆಯುತ್ತದೆ ಅದರಲ್ಲಿ ಇದನ್ನು ಸುಪಾರ್ಶ್ವನಾಥ ತೀರ್ಥಂಕರನ ಸ್ಮೃತಿಗೆಂದು ನಿರ್ಮಾಣ ಮಾಡಲಾಯಿತೆಂದು ಹೇಳಿದೆ. ಅಲ್ಲದೆ ಪಾರ್ಶ್ವನಾಥನ ಕಾಲದಲ್ಲಿ ಇದರ ಜೀರ್ಣೋದ್ಧಾರ ಮಾಡಲಾಯಿತೆಂದೂ ಸೂಚಿಸಿದೆ. ಇದನ್ನು ದೇವ ನಿರ್ಮಿತ ಸ್ತೂಪವೆಂದೂ ಉಲ್ಲೇಖಿಸಿದೆ. ಆದರಿಂದ ಇದು ಮಹಾವೀರನ ಪೂರ್ವ ಕಾಲದಲ್ಲಿ ಇದ್ದ ಸ್ತೂಪವೆಂದು ಹೇಳಿದರೆ ಆಶ್ಚರ್ಯಪಡುವ ಕಾರಣವಿಲ್ಲ. ಹರಿಷೇಣನ ಕಥಾಕೋಶದ " ವೈರಕುಮಾರ ಕಥಾನಕ " ದಲ್ಲಿ (ಶ್ಲೋಕ ೧೩೨) ಮಥುರೆಯ ಐದು ಸ್ತೂಪಗಳ ಉಲ್ಲೇಖವು ದೊರೆಯುತ್ತದೆ. ಬಹುತರ ಇಲ್ಲಿಂದಲೇ ಜೈನ ಮುನಿಗಳ ಪಂಚಸ್ತೂಪಾನ್ವಯವು ಪ್ರಾರಂಭವಾಗಿರಬೇಕು. ಈ ಅನ್ವಯದ ಉಲ್ಲೇಖವು ಗುಪ್ತ ಸಂವತ್ ೧೫೯ (ಕಿ.ಶ. ೪೭೮)ರ ಪಹಾಡಪುರ (ಬಂಗಾಲ) ತಾಮ್ರಪಟದಲ್ಲಿ ದೊರೆಯುತ್ತದೆ. ಅದಕ್ಕನುಸರಿಸಿ ಆ ಸಮಯದಲ್ಲಿ ವಟಗೋಹಾಲಿಯಲ್ಲಿ ಒಂದು ಜೈನ ವಿಹಾರವಿತ್ತು. ಅಲ್ಲಿರುವ ಅರಹಂತನ ಪೂಜೆಗೆಂದು ನಿರ್ಗ್ರಂಥ ಆಚಾರ್ಯನಿಗೆ ಒಂದು ದಾನ ನೀಡಲಾಯಿತು. ಈ ಆಚಾರ್ಯನು ಬನಾರಸದ ಪಂಚಸ್ತೂಪ ನಿಕಾಯದ ಆಚಾರ್ಯನಾದ ಗುಹನಂದಿಯ ಶಿಷ್ಯನೆಂದು ಹೇಳಿದೆ. ಧವಲಾ ಟೀಕೆಯನ್ನು ರಚಿಸಿದ ವೀರಸೇನ ಮತ್ತು ಜಿನಸೇನರೂ (೮-೯ನೆಯ ಶತಮಾನ) ಇದೇ ಶಾಖೆಯವರಾಗಿ

ದ್ದರು. ಇದೇ ಅನ್ವಯದ ಉಲ್ಲೇಖವನ್ನು ಜಿನಸೇನನ ಶಿಷ್ಯನಾದ ಗುಣಭದ್ರನು ತನ್ನ 'ಉತ್ತರಪುರಾಣ'ದಲ್ಲಿ ಸೇನಾನ್ವಯ ಎಂಬ ಹೆಸರಿನಿಂದ ಮಾಡಿದ್ದಾನೆ. ಅಂದಿನಿಂದ ಈ ಅನ್ವಯವು ಸೇನ ಗಣವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಅದು ಇಂದಿನ ವರೆಗೂ ಅವಿಚ್ಛಿನ್ನವಾಗಿ ನಡೆದು ಬಂದಿದೆ. ಇದರ ಅನೇಕ ಶಾಖೆ, ಉಪಶಾಖೆಗಳೂ ಕೂಡ ನಾಡಿನಲ್ಲಿ ಪಸರಿಸಿವೆ. ಮಥುರೆಯ ಸ್ತೂಪಗಳ ಪರಂಪರೆಯು ಮೊಗಲ ಸಾಮ್ರಾಟ್ ಅಕಬರನ ಕಾಲದ ವರೆಗೂ ಕಂಡುಬರುತ್ತದೆ. ಆ ಕಾಲದ ಜೈನ ಪಂಡಿತನಾದ ರಾಜಮಲ್ಲನು ತನ್ನ 'ಜಂಬೂಸ್ವಾಮಿಚರಿತ'ದಲ್ಲಿ ಹೀಗೆ ವಿವರಿಸಿದ್ದಾನೆ:– ಮಥುರೆಯಲ್ಲಿ ೫೧೫ ಜೀರ್ಣ ಸ್ತೂಪಗಳಿದ್ದುವು. ಅವುಗಳ ಉದ್ಧಾರವನ್ನು ಟೋಡರ ಸೇರನು ಅಪರಿಮಿತ ಧನವ್ಯಯದಿಂದ ಮಾಡಿದ್ದನು. ಕ್ರಿ.ಪೂ. ಮೊದಲನೆಯ ಶತಮಾನದಲ್ಲಿ ಜೈನಮುನಿ ಸಂಘವು ಉಜ್ಜಯಿನಿಯಲ್ಲಿ ಅಸ್ತಿತ್ವದಲ್ಲಿ ಇದ್ದುದರ ಉಲ್ಲೇಖವು ಕಾಲಕಾಚಾರ್ಯನ ಕಥಾನಕದಲ್ಲಿ ದೊರೆಯುತ್ತದೆ ಈ ಕಥೆಗನುಸರಿಸಿ, ಉಜ್ಜಯಿನಿಯ ರಾಜನಾದ ಗರ್ದಭಿಲ್ಲನು ತನ್ನ ಕಾಮುಕಪ್ರವೃತ್ತಿಯಿಂದ ಜೈನ ಆರ್ಯಿಕೆಯೊಬ್ಬಳ ಕೂಡ ಅತ್ಯಾಚಾರವನ್ನೆಸಗಿದನು; ಇದರ ಪ್ರತಿರೋಧಕ್ಕಾಗಿ ಕಾಲಕಸೂರಿಯು ಶಾಹೀರಾಜರೊಡನೆ ಸಂಬಂಧವನ್ನು ಬೆಳೆಯಿಸಿದನು. ಅವನು ಗರ್ದಭಿಲ್ಲನನ್ನು ಯುದ್ಧದಲ್ಲಿ ನಷ್ಟಗೊಳಿಸಿ. ಉಜ್ಜಯಿನಿಯಲ್ಲಿ ಶಕರಾಜ್ಯವನ್ನು ಸ್ಥಾಪಿಸಿದನು. ಇದೇ ವಂಶದ ವಿನಾಶವನ್ನು ತರುವಾಯ ವಿಕ್ರಮಾದಿತ್ಯನು ಮಾಡಿದನು. ಈ ಪ್ರಕಾರ ಈ ಘಟನೆಯು ವಿಕ್ರಮ ಸಂವತ್ಸರದ ಪೂರ್ವದಲ್ಲಿ ನಡೆದುದೆಂದು ಸಿದ್ಧವಾಗುತ್ತದೆ. ಇದರಿಂದ ಇನ್ನೊಂದು ಸಂಗತಿಯು ಪ್ರಕಟವಾಗುತ್ತದೆ: ಅತಿ ಶಾಂತ ಸ್ವಭಾವಿಗಳೂ ಸಹನಶೀಲರೂ ಆದ ಜೈನಮುನಿಗಳಿಗೂ ಕೂಡ ಒಮ್ಮೊಮ್ಮೆ ರಾಜಶಕ್ತಿಯ ಕೂಡ ಹೋರಾಡುವ ಪ್ರಸಂಗವೂ ಪ್ರಸಂಗವಶಾತ್ ಉಂಟಾಗುತ್ತಿತ್ತು.

ಗುಪ್ತ ಸಂವತ್ಸರ ೧೧೩ (ಕ್ರಿ.ಶ. ೪೩೨) ರಲ್ಲಿ, ಕುಮಾರಗುಪ್ತನ ರಾಜ್ಯಕಾಲದಲ್ಲಿ ವಿದ್ಯಾಧರೀ ಶಾಖೆಯ ದಂತಿಲಾಚಾರ್ಯನ ಆಜ್ಞೆಯಿಂದ ಶ್ಯಾಮಾಢ್ಯನು ಒಂದು ಪ್ರತಿಮೆಯನ್ನ ಪ್ರತಿಷ್ಠಾಪಿಸಿದನೆಂಬ ಉಲ್ಲೇಖವು ಮಥುರೆಯಲ್ಲಿ ದೊರೆತ ಲೇಖದಲ್ಲಿದೆ. ಕುಮಾರಗುಪ್ತ ಕಾಲದ (ಕ್ರಿ.ಶ. ೪೨೬) ಒಂದು ಲೇಖವು ಉದಯಗಿರಿಯಲ್ಲಿ (ವಿದಿಶಾ–ಮಾಲವಾ) ದೊರೆತಿದೆ. ಅದರಲ್ಲಿ ಅಲ್ಲಿ ಪಾರ್ಶ್ವನಾಥನ ಪ್ರತಿಷ್ಠೆಯ ವರ್ಣನೆಯು ಇದೆ. ಗುಪ್ತಕಾಲದ ಸಂವತ್ಸರ ೧೪೧ (ಕ್ರಿ. ಶ. ೪೬೦) ರಲ್ಲಿ ಸ್ಕಂದಗುಪ್ತ ರಾಜನ ಉಲ್ಲೇಖ ಸಹಿತವುಳ್ಳ ಕಹಾಯೂದಲ್ಲಿ (ಸಂಸ್ಕೃತ ಕಕುಭಃ) ಪ್ರಾಪ್ತವಾದ ಶಿಲಾಲೇಖದಲ್ಲಿ, ಐವರು ಅರಹಂತರ ಸ್ಥಾಪನೆಯನ್ನು ಮಂದ್ರ ಎಂಬ ಹೆಸರಿನ ಧರ್ಮಾತ್ಮನು ಮಾಡಿಸಿದನೆಂದೂ ಅಲ್ಲೊಂದು ಶಿಲಾಸ್ತಂಭವನ್ನು ನಿಲ್ಲಿಸಿದನೆಂದೂ ಉಲ್ಲೇಖವಿದೆ.

## ದಕ್ಷಿಣ ಭಾರತ ಮತ್ತು ಲಂಕೆಗಳಲ್ಲಿ ಜೈನಧರ್ಮ ಹಾಗೂ ರಾಜವಂಶಗಳ ಸಂಬಂಧ :—

ಒಂದು ಜೈನ ಪರಂಪರೆಗನುಸರಿಸಿ ಮೌರ್ಯ ಕಾಲದಲ್ಲಿ ಜೈನ ಮುನಿಯಾದ ಭದ್ರಬಾಹುವು ಸಮ್ರಾಟ್ ಚಂದ್ರಗುಪ್ತನ ಮೇಲೆ ಪ್ರಭಾವವನ್ನು ಬೀರಿದ್ದನು. ಅದರಿಂದ ಆ ರಾಜನು ರಾಜ್ಯ ತ್ಯಾಗಮಾಡಿ, ಆ ಮುನಿರಾಜನೊಡನೆ ದಕ್ಷಿಣ ದೇಶಕ್ಕೆ ಬಂದನು. ಮೈಸೂರು ರಾಜ್ಯದಲ್ಲಿರುವ ಶ್ರವಣಬೆಳ್ಗೊಳದಲ್ಲಿ ಈಗಲೂ ಕೂಡ ಆ ರಾಜನ ಹೆಸರಿನಿಂದ ಚಂದ್ರಗಿರಿ ಎಂಬ ಬೆಟ್ಟವು ಪ್ರಸಿದ್ಧವಾಗಿದೆ. ಅದರ ಮೇಲೆ ಭದ್ರಬಾಹುವು ತಪಸ್ಸು ಮಾಡಿದ ಗುಹೆಯನ್ನು ಸಹ ತೋರಿಸಲಾಗುತ್ತಿದೆ. ಅಲ್ಲಿ ರಾಜಾ ಚಂದ್ರಗುಪ್ತನು ಅವರೊಡನೆ ಕೊನೆಯ ವರೆಗೂ ಇದ್ದನು. ಈ ಪ್ರಕಾರ ಮೌರ್ಯ ಸಮ್ರಾಟ್ ಚಂದ್ರಗುಪ್ತನ ಕಾಲದಲ್ಲಿ ಜೈನಧರ್ಮವು ದಕ್ಷಿಣ ಭಾರತದಲ್ಲಿ ಪ್ರವೇಶವಾಯಿತೆಂದು ಮನ್ನಿಸಲಾಗುತ್ತದೆ. ಆದರೆ ಬೌದ್ಧರ ಪಾಲೀ ಸಾಹಿತ್ಯಕ್ಕೆ ಸೇರಿದ ಮಹಾವಂಶದಲ್ಲಿ ಲಂಕೆಯ ರಾಜವಂಶದ ಉಲ್ಲೇಖವು ಲಭಿಸುತ್ತದೆ. ಅದಕ್ಕನುಸರಿಸಿ ಬುದ್ಧನಿರ್ವಾಣದಿಂದ ೧೦೬ ವರ್ಷಗಳು ಕಳೆದ ಮೇಲೆ ಪಾಂಡುಕಾಭಯ ರಾಜನ ಅಭಿಷೇಕವಾಯಿತು. ಅವನು ತನ್ನ ರಾಜ್ಯ ಆಳಿಕೆಯ ಪ್ರಾರಂಭದಲ್ಲಿಯೇ ಅನುರಾಧ-ಪುರವನ್ನು ಸ್ಥಾಪಿಸಿದನು. ಅದರಲ್ಲಿ ಅವನು ನಿರ್ಗ್ರಂಥ ಶ್ರಮಣರಿಗಾಗಿ ಅನೇಕ ನಿವಾಸಸ್ಥಾನಗಳನ್ನು ನಿರ್ಮಿಸಿದನು ಈ ಉಲ್ಲೇಖದಿಂದ, ಬುದ್ಧನಿರ್ವಾಣ ಸಂವತ್ಸರದ ೧೦೬ ನೆಯ ವರ್ಷದಲ್ಲಿ ಸಹ ಲಂಕೆಯಲ್ಲಿ ನಿರ್ಗ್ರಂಥರ ಅಸ್ತಿತ್ವವಿತ್ತೆಂದು ಸ್ಪಷ್ಟವಾಗಿ ಪ್ರಮಾಣಿತವಾಗುತ್ತದೆ. ಲಂಕೆಯಲ್ಲಿ ಬೌದ್ಧ ಧರ್ಮದ ಪ್ರವೇಶವು ಅಶೋಕನ ಪುತ್ರನಾದ ಮಹೇಂದ್ರನಿಂದ ಬುದ್ಧನ ನಿರ್ವಾಣದ ತರುವಾಯ ೨೩೬ ವರ್ಷಗಳ ಮೇಲೆ ಆದದ್ದು ತಿಳಿಯುತ್ತದೆ. ಇದರ ಮೇಲಿಂದ, ಲಂಕೆಯಲ್ಲಿ ಜೈನಧರ್ಮದ ಪ್ರಸಾರವು ಬೌದ್ಧ ಧರ್ಮಕ್ಕಿಂತಲೂ ಪೂರ್ವದಲ್ಲಿ ಸುಮಾರು ೧೩೦ ವರ್ಷಗಳ ಹಿಂದೆಯೇ ಆಗಿತ್ತೆಂಬುದು ಕಂಡುಬರುತ್ತದೆ ಬಹುತರ ಸಿಂಹಲಕ್ಕೆ ಜೈನಧರ್ಮವು ದಕ್ಷಿಣ ಭಾರತದಿಂದಲೇ ಹೋಗಿರಬೇಕು. ಉತ್ತರ ಭಾರತದಲ್ಲಿ ಹನ್ನೆರಡು ವರ್ಷಗಳ ದುರ್ಭಿಕ್ಷೆಯು ಉಂಟಾದ ಕಾಲಕ್ಕೆ ಭದ್ರಬಾಹು ಮುನಿಯು ತನ್ನ ಶಿಷ್ಯನಾದ ಸಮ್ರಾಟ ಚಂದ್ರಗುಪ್ತ ಹಾಗೂ ವಿಶಾಲವಾದ ಮುನಿಸಂಘ ಸಹಿತ ದಕ್ಷಿಣಾಪಥಕ್ಕೆ ಬಂದನಷ್ಟೆ, ಹಾಗೆ ಅವನು ದಕ್ಷಿಣಕ್ಕೆ ಬರಬೇಕಾದರೆ ದಕ್ಷಿಣ ಭಾರತದಲ್ಲಿ ಮುನಿಸಂಘವನ್ನು ಸಂರಕ್ಷಿಸುವಂಥ ಜನ ಧರ್ಮಾನುಯಾಯಿಗಳು ಇದ್ದಿರಬೇಕೆಂದು ಹಲವು ಜನ ವಿದ್ವಾಂಸರ ಅಭಿಪ್ರಾಯವಿದೆ. ಚಂದ್ರಗುಪ್ತನ ಮೊಮ್ಮಗನಾದ ಸಂಪ್ರತಿಯು, ಒಂದು ಜೈನ ಪರಂಪರೆಗೆ ಅನುಸರಿಸಿ, ಆಚಾರ್ಯ ಸುಹಸ್ತಿಯ ಶಿಷ್ಯನಾಗಿದ್ದನು. ಇವನು ಜೈನಧರ್ಮದ ಸ್ತೂಪ, ಮಂದಿರ ಮೊದಲಾದವುಗಳನ್ನು ನಿರ್ಮಿಸಿದನು. ಅಲ್ಲದೆ ಅಶೋಕನು ಬೌದ್ಧ ಧರ್ಮದ ಪ್ರಸಾರ ಮಾಡಿದಂತೆ ಈತನು ಜೈನಧರ್ಮವನ್ನು ನಾಡಿನಲ್ಲೆಲ್ಲಾ ಪ್ರಚುರಗೊಳಿಸಿದನು. ರಾಮನಾಡ ಮತ್ತು ತಿನವಲ್ಲಿಗಳ ಗುಹೆಗಳಲ್ಲಿ ಬ್ರಾಹ್ಮಿಲಿಪಿಯಲ್ಲಿ ಬರೆದ ಲೇಖಗಳು

ಲಭಿಸಿವೆ. ಇವು ಅಸ್ಪಷ್ಟವಾಗಿದ್ದರೂ ಮತ್ತು ಪ್ರಾಚೀನತಮ ತಮಿಳು ಗ್ರಂಥದಿಂದಲೂ ಈ ಪ್ರದೇಶದಲ್ಲಿ ಅತಿ ಪ್ರಾಚೀನ ಕಾಲದಲ್ಲಿಯೇ ಜೈನಧರ್ಮವು ಪ್ರಚಾರದಲ್ಲಿತ್ತೆಂಬುದು ಸಿದ್ಧವಾಗುತ್ತದೆ. ತಮಿಳು ಕಾವ್ಯವಾದ ಕುರೆಳ್ ಹಾಗೂ ತೋಳಕಪ್ಪಿಯಮ್‌ಗಳ ಮೇಲೆ ಜೈನ ಧರ್ಮದ ಪ್ರಭಾವವು ಸ್ಪಷ್ಟವಾಗಿದೆ.

'ಮಣಿಮೇಖಲೈ' ಎಂಬುದು ತಮಿಳು ಭಾಷೆಯ ಒಂದು ಬೌದ್ಧ ಕಾವ್ಯವಾಗಿದೆ. ಆದರೂ ಅದರಲ್ಲಿ ದಿಗಂಬರ ಮುನಿಗಳು ಮತ್ತು ಅವರ ಉಪದೇಶದ ವಿವರಗಳು ಹಲವೆಡೆಗೆ ಬಂದಿವೆ. ಜೀವಕ ಚಿಂತಾಮಣಿ, ಶಿಲಪ್ಪದಿಗಾರ, ನೀಲಕೇಶಿ, ಯಶೋಧರ ಕಾವ್ಯ ಮೊದಲಾದ ಗ್ರಂಥಗಳಂತೂ ಸ್ಪಷ್ಟವಾಗಿ ಜೈನ ಕೃತಿಗಳೇ ಆಗಿವೆ. ಸುಪ್ರಸಿದ್ಧ ಜೈನಾಚಾರ್ಯನಾದ ಸಮಂತಭದ್ರನ ಸಂಬಂಧವು ಕಾಂಚಿಯೊಡನೆ ಇದ್ದುದರ ಉಲ್ಲೇಖವು ಲಭಿಸುತ್ತದೆ. ಕುಂದಕುಂದಾಚಾರ್ಯನ ಸಂಬಂಧವು ಅವನ ಒಬ್ಬ ಟೀಕಾಕಾರನು ಶಿವಕುಮಾರ ಮಹಾರಾಜನೊಡನೆ ಇದ್ದುದನ್ನು ಉಲ್ಲೇಖಿಸಿದ್ದಾನೆ. ಪ್ರಾಕೃತ ಲೋಕ-ವಿಭಾಗದ ಕರ್ತೃವಾದ ಸರ್ವನಂದಿ (ಕ್ರಿ ಶ. ೪೫೮) ಆಚಾರ್ಯನು ಕಾಂಚಿಯ ಸಿಂಹವರ್ಮನ ಸಮಕಾಲೀನನೆಂದು ಹೇಳಲಾಗಿದೆ. ದರ್ಶನಸಾರಕ್ಕನುಸರಿಸಿ ದ್ರಾವಿಡ ಸಂಘದ ಸ್ಥಾಪನೆಯು ಪೂಜ್ಯವಾದನ ಶಿಷ್ಯನಾದ ವಜ್ರನಂದಿಯಿಂದ ಮದುರೆಯಲ್ಲಿ ಕ್ರಿ.ಶ. ೪೭೦ ರಲ್ಲಿ ಆಯಿತು. ಈ ಪ್ರಕಾರ ಅನೇಕ ಉಲ್ಲೇಖಗಳೂ ವಿವಿಧ ಘಟನೆಗಳ ಐತಿಹ್ಯವೂ ನೋಡಲು ದೊರೆಯುತ್ತದೆ! ಇವೆಲ್ಲವುಗಳಿಂದ ಕ್ರಿ.ಶ. ಪ್ರಾರಂಭದ ಶತಮಾನದಿಂದಲೂ ತಮಿಳು ಪ್ರದೇಶದಲ್ಲಿ ಜೈನಧರ್ಮದ ಪ್ರಚಾರವು ಬಹು ಚೆನ್ನಾಗಿಯೇ ಆಗಿತ್ತೆಂದು ತಿಳಿಯುತ್ತದೆ.

**ಕದಂಬ ರಾಜವಂಶ :—**

ಕದಂಬ ವಂಶದ ಅವಿನೀತ ಮಹಾರಾಜನ ದಾನಪತ್ರವೊಂದು ಲಭಿಸಿದೆ. ಅದರಲ್ಲಿ ಆ ರಾಜನು ದೇಸೀಗಣ ಕುಂದಕುಂದಾನ್ವಯದ ಚಂದ್ರನಂದಿ ಭಟ್ಟಾರಕನಿಗೆ ಜೈನ ಮಂದಿರದ ವ್ಯವಸ್ಥೆಗೆಂದು ಒಂದು ಗ್ರಾಮವನ್ನು ದಾನ ಕೊಟ್ಟ ಬಗ್ಗೆ ಹೇಳಿದೆ. ಈ ದಾನಪತ್ರವು ಶಕ ಸಂವತ್ಸರ ೩೮೮ (ಕ್ರಿ ಶ. ೪೬೬) ರಲ್ಲಿ ರೂಪುಗೊಂಡಿದೆ. ಅದು ಮಡಿಕೇರಿ ಎಂಬ ಸ್ಥಾನದಲ್ಲಿ ಲಭಿಸಿದೆ. ಇದೇ ವಂಶದ ಯುವರಾಜನಾದ ಕಾಕುತ್‌ಸ್ಥನಿಂದ ಭಗವಾನ್ ಅರ್ಹಂತನ ನಿಮಿತ್ತ ಶ್ರುತಕೀರ್ತಿ ಸೇನಾಪತಿಗೆ ಭೂದಾನವನ್ನಿತ್ತ ಉಲ್ಲೇಖವಿದೆ. ಈ ರಾಜವಂಶದ ಇನ್ನೊಂದೆರಡು ದಾನಪತ್ರಗಳು ಮಹತ್ವಪೂರ್ಣವಾಗಿವೆ. ಅವುಗಳಲ್ಲಿ ಒಂದು ಶ್ರೀ ವಿಜಯ ಶಿವ ಮೃಗೇಶವರ್ಮನಿಂದ ತನ್ನ ರಾಜ್ಯ ಕಾಲದ ನಾಲ್ಕನೆಯ ವರ್ಷದಲ್ಲಿ ಒಂದು ಗ್ರಾಮದ ದಾನವನ್ನು ಮೂರು ಭಾಗಗಳಲ್ಲಿ ವಿಂಗಡಿಸಿ ಕೊಟ್ಟ ವಿವರವನ್ನು ಒದಗಿಸುತ್ತದೆ. ಒಂದು ವಿಭಾಗ "ಭಗವತ್ ಅರ್ಹದ್ ಮಹಾ ಜಿನೇಂದ್ರ ದೇವತೆ"ಗೆ ಕೊಡಲಾಯಿತು, ಇನ್ನೊಂದು ಭಾಗವನ್ನು "ಶ್ವೇತಪಟ ಮಹಾ ಶ್ರಮಣ ಸಂಘ"ದ ಉಪಭೋಗಕ್ಕೆಂದು ನೀಡಲಾಯಿತು, ಮೂರನೆಯ ಭಾಗ

ವನ್ನು "ನಿರ್ಗ್ರಂಥ ಮಹಾ-ಶ್ರಮಣ ಸಂಘ"ದ ಉಪಯೋಗಕ್ಕಾಗಿ ಕೊಡಲಾಗಿದೆ. ಇನ್ನೊಂದು ಲೇಖದಲ್ಲಿ ಶಾಂತಿವರ್ಮನ ಪುತ್ರನಾದ ಶ್ರೀ ಮೃಗೇಶನಿಂದ ತನ್ನ ರಾಜ್ಯ ಕಾಲದ ಎಂಟನೆಯ ವರ್ಷದಲ್ಲಿ ಯಾಪನೀಯ ನಿರ್ಗ್ರಂಥ ಮತ್ತು ಕೂರ್ಚಕ ಮುನಿಗಳಿಗಾಗಿ ಭೂದಾನ ಮಾಡಿದ ಉಲ್ಲೇಖವಿದೆ. ಇನ್ನೂ ಬೇರೊಂದು ಲೇಖದಲ್ಲಿ ಯಾಪನೀಯ ತಪಸ್ವಿಗಳಿಗಾಗಿ ಒಂದು ಗ್ರಾಮದಾನದ ವಿವರವು ದೊರೆಯುತ್ತದೆ. ಮತ್ತೊಂದು ಲೇಖದಲ್ಲಿ, ಹರಿವರ್ಮನು ಸಿಂಹ ಸೇನಾಪತಿಯ ಪುತ್ರನಾದ ಮೃಗೇಶನ ಮುಖಾಂತರ ನಿರ್ಮಾಣಗೊಂಡ ಜೈನಮಂದಿರದ ಅಷ್ಟಾಹ್ನಿಕ ಪೂಜೆಗಾಗಿ ಹಾಗೂ ಸರ್ವ ಸಂಘದ ಭೋಜನಕ್ಕೆಂದು ಒಂದು ಗ್ರಾಮವನ್ನು ಕೂರ್ಚಕರ ವಾರಿಷೇಣಾಚಾರ್ಯ ಸಂಘದ ಅಧೀನದಲ್ಲಿ ಕೊಟ್ಟ ಸಂಗತಿಯು ಇದೆ. ಈ ವಂಶದ ಇನ್ನೂ ಹಲವು ಲೇಖಗಳು ಇವೆ. ಅವುಗಳಲ್ಲಿ ಜಿನಾಲಯಗಳ ರಕ್ಷಣೆಗೆಂದೂ ನಾನಾ ಜೈನ ಸಂಘಗಳ ನಿಮಿತ್ತ ಗ್ರಾಮ ಮತ್ತು ಭೂಮಿಗಳನ್ನು ದಾನವಿತ್ತ ಉಲ್ಲೇಖಗಳು ಲಭಿಸುತ್ತವೆ. ಇವುಗಳಿಂದ, ಐದನೆಯ ಆರನೆಯ ಶತಮಾನಗಳಲ್ಲಿ ಜೈನಸಂಘದ ನಿರ್ಗ್ರಂಥ (ದಿಗಂಬರ) ಶ್ವೇತ ಪಟ, ಯಾಪನೀಯ, ಕೂರ್ಚಕ ಶಾಖೆಗಳು ಸುಪ್ರತಿಷ್ಠಿತ ಸುವಿಖ್ಯಾತ, ಲೋಕಪ್ರಿಯ ಮತ್ತು ರಾಜ್ಯ-ಸನ್ಮಾನ್ಯವಾಗಿದ್ದವೆಂದು ಸ್ಪಷ್ಟವಾಗುತ್ತದೆ. ಇವುಗಳಲ್ಲಿ ಮೊದಲನೆಯ ಮೂರು ಮುನಿ-ಸಂಪ್ರದಾಯಗಳ ಉಲ್ಲೇಖವಂತೂ ಪಟ್ಟಾವಲಿಗಳಲ್ಲಿಯೂ ಜೈನ ಸಾಹಿತ್ಯದಲ್ಲಿಯೂ ವಿಪುಲವಾಗಿವೆ. ಆದರೆ ಕೂರ್ಚಕ ಸಂಪ್ರದಾಯದ ಪರಿಚಯವು ಇತರೆಡೆಗಳಲ್ಲಿ ವಿಶೇಷವಾಗಿ ದೊರೆಯುವುದಿಲ್ಲ

**ಗಂಗ ರಾಜವಂಶ :—**

ಗಂಗ ರಾಜ್ಯದ ಸ್ಥಾಪನೆಯಲ್ಲಿ ಜೈನಾಚಾರ್ಯನಾದ ಸಿಂಹನಂದಿಯು ಬಹಳ ಸಹಾಯವನ್ನು ಮಾಡಿದ್ದನೆಂದು ಶ್ರವಣ ಬೆಳ್ಗೊಳದ ಅನೇಕ ಶಿಲಾಲೇಖಗಳಿಂದಲೂ ಅಭಯಚಂದ್ರಕೃತ ಗೊಮ್ಮಟಸಾರ ವೃತ್ತಿಯ ಉತ್ಥಾನಿಕೆಯಲ್ಲಿ ಬರುವ ಉಲ್ಲೇಖದಿಂದಲೂ ಗೊತ್ತಾಗುತ್ತದೆ. ಈ ವಂಶದ ಅವಿನೀತನೆಂಬ ಹೆಸರಿನ ರಾಜನ ಪ್ರತಿಪಾಲಕನು ಜೈನಾಚಾರ್ಯ ವಿಜಯಕೀರ್ತಿಯೆಂದು ಹೇಳಲಾಗಿದೆ. ಸುಪ್ರಸಿದ್ಧ 'ತತ್ವಾರ್ಥ ಸೂತ್ರ'ದ 'ಸರ್ವಾರ್ಥಸಿದ್ಧಿ' ಟೀಕೆಯ ಕರ್ತೃವಾದ ಆಚಾರ್ಯ ಪೂಜ್ಯಪಾದ ದೇವ ನಂದಿಯು ಇದೇ ವಂಶದ ಏಳನೆಯ ರಾಜನಾದ ದುರ್ವಿನೀತನ ರಾಜಗುರುವಾಗಿದ್ದನೆಂದು ಉಲ್ಲೇಖವು ದೊರೆಯುತ್ತದೆ. ಇವನ ಹಾಗೂ ಶಿವಮಾರ ಮತ್ತು ಶ್ರೀಪುರುಷ ಎಂಬ ಹೆಸರಿನ ರಾಜರ ಅನೇಕ ಲೇಖಗಳಲ್ಲಿ ಜೈನ ಮಂದಿರ ನಿರ್ಮಾಣಕ್ಕೂ ಜೈನ ಮುನಿಗಳಿಗೂ ದಾನವಿತ್ತ ಸಂಗತಿಯು ಬಂದಿದೆ. ಗಂಗ ನರೇಶನಾದ ಮಾರಸಿಂಹನ ವಿಷಯದಲ್ಲಿ ಹೀಗೆ ಹೇಳಲಾಗಿದೆ :- ಅವನು ಅನೇಕ ದೊಡ್ಡ ದೊಡ್ಡ ಯುದ್ಧಗಳನ್ನು ಮಾಡಿದನು; ವಿಜಯಗಳನ್ನು ಸಂಪಾದಿಸಿದನು; ಅನೇಕ ದುರ್ಗ ಹಾಗೂ ಕೋಟೆಗಳನ್ನು ಗೆದ್ದನು. ಅಲ್ಲದೆ ಹಲವು ಜಿನಮಂದಿರಗಳನ್ನೂ ಸ್ತಂಭಗಳನ್ನೂ ನಿರ್ಮಿಸಿದನು.

ಕೊನೆಗೆ ಅಜಿತಸೇನ ಭಟ್ಟಾರಕರ ಸಾಂನಿಧ್ಯದಲ್ಲಿ ಸಲ್ಲೇಖನ ವಿಧಿಯಿಂದ ಶಕ್ ಸಂವತ್ ೮೯೬ ರಲ್ಲಿ (ಕ್ರಿ.ಶ. ೯೭೪) ದೇಹವಿಟ್ಟನೆಂಬುದು ನಿರ್ದಿಷ್ಟವಿದೆ. ಮಾರಸಿಂಹನ ಉತ್ತರಾಧಿಕಾರಿಯು (ಚತುರ್ಥ) ರಾಚಮಲ್ಲನು. ಇವನ ಮಂತ್ರಿಯಾದ ಚಾಮುಂಡರಾಯನು ಶ್ರವಣ ಬೆಳ್ಗೊಳದ ವಿಂಧ್ಯಗಿರಿಯ ಮೇಲೆ ಚಾಮುಂಡರಾಯ ಬಸ್ತಿಯನ್ನು ನಿರ್ಮಿಸಿದನು. ಗೋಮಟೇಶ್ವರನ ಆ ವಿಶಾಲ ಮೂರ್ತಿಯನ್ನು ಪ್ರತಿಷ್ಠಿಸಿದನು. ಇದು ಪ್ರಾಚೀನ ಭಾರತೀಯ ಮೂರ್ತಿ ಕಲೆಯ ಗೌರವಶಾಲಿ ಪ್ರತೀಕವಾಗಿದೆ. ಕನ್ನಡ ಭಾಷೆಯಲ್ಲಿ ಚಾಮುಂಡರಾಯನು ರಚಿಸಿದ ತ್ರಿಷಷ್ಠಿ ಶಲಾಕಾಪುರುಷರ ಚರಿತ್ರೆಯು ಚಾಮುಂಡರಾಯ ಪುರಾಣವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಅದನ್ನವನು ಶಕ ಸಂವತ್ಸರ ೯೦೦ ರಲ್ಲಿ ಪೂರ್ಣಗೊಳಿಸಿದನು. ಅದರಲ್ಲಿಯೂ ಅವನು ತನ್ನ ಬ್ರಹ್ಮಕ್ಷತ್ರ ಕುಲವನ್ನೂ ಅಜಿತಸೇನ ಗುರುಗಳನ್ನೂ ಪರಿಚಯ ಮಾಡಿಕೊಟ್ಟಿದ್ದಾನೆ. ಅನೇಕ ಶಿಲಾಲೇಖಗಳಲ್ಲಿ ಗಂಗ ವಂಶದ ಅನೇಕ ರಾಜರು. ಸಾಮಂತರು ಮಂತ್ರಿಗಳು, ಸೇನಾಪತಿಗಳ ಪರಿಚಯವೂ ದೊರೆಯುತ್ತದೆ. ಅದರ ಜೊತೆಗೆ ಅವರು ಮಾಡಿದ ಧರ್ಮ ಕಾರ್ಯ, ದಾನ, ಹಾಗೂ ಅವರು ಸಲ್ಲೇಖನಾಪೂರ್ವಕ ಹೊಂದಿದ ಮರಣಗಳ ವಿವರವೆಲ್ಲ ಲಭಿಸುತ್ತದೆ. ಕನ್ನಡ ಕವಿಯಾದ ಪೊನ್ನನು ಕ್ರಿ. ಶ. ೯೩೩ ರಲ್ಲಿ ರಚಿಸಿದ "ಶಾಂತಿ ಪುರಾಣ"ದ ಒಂದು ಸಾವಿರ ಪ್ರತಿಗಳನ್ನು ಮಾಡಿಸಿ, ಅತ್ತಿಮಬ್ಬೆ ಎಂಬ ಧರ್ಮಿಷ್ಠ ಮಹಿಳೆಯು ದಾನರೂಪದಲ್ಲಿ ಹಂಚಿದ್ದಳು. (ಸು.ಕ್ರಿ.ಶ. ೯೭೩)

### ರಾಷ್ಟ್ರಕೂಟ ರಾಜವಂಶ :—

ಏಳನೆಯ ಶತಮಾನದಿಂದ ದಕ್ಷಿಣ ಭಾರತದಲ್ಲಿ ರಾಷ್ಟ್ರಕೂಟ ರಾಜವಂಶದ ಬಲ ಹಾಗೂ ರಾಜ್ಯ-ವಿಸ್ತಾರಗಳು ಹೆಚ್ಚಿದುವು. ಈ ರಾಷ್ಟ್ರಕೂಟ ಮನೆತನದ ಜೊತೆಗೆ ಜೈನ ಧರ್ಮದ ಸಂಬಂಧವು ಬಹು ಘನಿಷ್ಠವಾಗಿತ್ತು. ರಾಷ್ಟ್ರಕೂಟ ರಾಜನಾದ ಮೊದಲನೆಯ ಅಮೋಘವರ್ಷನು ಸ್ವತಃ "ಪ್ರಶ್ನೋತ್ತರ ರತ್ನಮಾಲಿಕಾ" ಎಂಬ ಗ್ರಂಥವನ್ನು ರಚಿಸಿದನು. ತಿಬೇಟಿ ಭಾಷೆಯಲ್ಲಿ ಇದರ ಅನುವಾದವು ಆಗಲೇ ಸ್ವಲ್ಪ ಕಾಲದ ತರುವಾಯ ಆಯಿತು. ಈ ಗ್ರಂಥದ ಆಧಾರದಿಂದ ಅಮೋಘವರ್ಷನು ರಾಜ್ಯವನ್ನು ತ್ಯಜಿಸಿ, ಸ್ವತಃ ಸನ್ಯಾಸವನ್ನು ಸ್ವೀಕರಿಸಿದುದೂ ಸ್ಪಷ್ಟವಾಗುತ್ತದೆ. ಈತನು ಆದಿ ಪುರಾಣದ ಕರ್ತೃವಾದ ಜಿನಸೇನನ ಪಾದಗಳನ್ನು ಪೂಜಿಸುತ್ತಿದ್ದನೆಂದೂ ಹೇಳುವರು. ಶಾಕಟಾಯನ ವ್ಯಾಕರಣದ ಮೇಲೆ ಇರುವ ಅಮೋಘವೃತ್ತಿ ಎಂಬ ಟೀಕೆಗೆ ಈತನ ಹೆಸರಿನ ಸಂಬಂಧವು ಇದ್ದುದ್ದು ಕಂಡುಬರುತ್ತದೆ. ಇವನ ಕಾಲದಲ್ಲಿಯೇ ಮಹಾವೀರಾಚಾರ್ಯನು 'ಗಣಿತಸಾರ' ಎಂಬ ಹೆಸರಿನ ಗ್ರಂಥವನ್ನು ರಚಿಸಿದನು. ಕನ್ನಡ ಅಲಂಕಾರ ಗ್ರಂಥವಾದ 'ಕವಿರಾಜಮಾರ್ಗ'ದ ಕರ್ತೃವೂ ಕೂಡ ಈತನೇ ಎಂದು ಹೇಳುತ್ತಾರೆ. ಇವನ ಉತ್ತರಾಧಿಕಾರಿಯಾದ ಎರಡನೆಯ ಕೃಷ್ಣನ ಕಾಲದಲ್ಲಿ ಗುಣಭದ್ರಾಚಾರ್ಯನು 'ಉತ್ತರ ಪುರಾಣ' ವನ್ನೂ ಪೂರ್ಣ

ಗೊಳಿಸಿದನು. ಇಂದ್ರನಂದಿಯು ಅದೇ ಕಾಲಾವಧಿಯಲ್ಲಿ "ಜ್ವಾಲಾ-ಮಾಲಿನೀ-ಕಲ್ಪ"ದ ರಚನೆಯನ್ನು ಮಾಡಿದನು. ಸೋಮದೇವನು "ಯಶಸ್ತಿಲಕ ಚಂಪೂ" ಗ್ರಂಥವನ್ನು ನಿರ್ಮಿಸಿದನು. ಪುಷ್ಪದಂತನು ತನ್ನ ವಿಶಾಲವೂ ಶ್ರೇಷ್ಠವೂ ಆದ ಅಪಭ್ರಂಶ ಗ್ರಂಥಗಳನ್ನು ರೂಪಿಸಿದನು. ಈ ಕೃಷ್ಣರಾಜನೇ ಕನ್ನಡ ಭಾಷೆಯ ಶ್ರೇಷ್ಠ ಕವಿಯಾದ ಪೊನ್ನನಿಗೆ "ಉಭಯ ಭಾಷಾಚಕ್ರವರ್ತಿ" ಎಂಬ ಬಿರುದನ್ನಿತ್ತು ಗೌರವಿಸಿದನು. ಇವನ ತರುವಾಯ ಆಳಿದ ರಾಷ್ಟ್ರಕೂಟ ರಾಜನಾದ ನಾಲ್ಕನೆಯ ಇಂದ್ರನು ತನ್ನ ಪೂರ್ವಜನಾದ ಅಮೋಘವರ್ಷನಂತೆ ರಾಜ್ಯತ್ಯಾಗ ಮಾಡಿ, ಜೈನ ಮುನಿ ದೀಕ್ಷೆಯನ್ನು ಸ್ವೀಕರಿಸಿ, ಶ್ರವಣಬೆಳ್ಗೊಳದ ಚಂದ್ರಗಿರಿಯ ಮೇಲೆ ಸಮಾಧಿ ಮರಣವನ್ನು ಹೊಂದಿದನೆಂದು ಶಿಲಾಲೇಖದಿಂದ ವಿದಿತವಾಗುತ್ತದೆ. ಶ್ರವಣಬೆಳ್ಗೊಳದ ಅನೇಕ ಶಿಲಾಲೇಖಗಳಲ್ಲಿ ರಾಷ್ಟ್ರಕೂಟ ರಾಜರಿಗೆ ಇದ್ದ ಜೈನಧರ್ಮದ ವಿಷಯದಲ್ಲಿ ಆಸ್ಥೆ, ಅದರ ಬುದ್ಧಿ ಮತ್ತು ದಾನಶೀಲತೆಗಳ ವರ್ಣನೆಯು ಬರುತ್ತದೆ. ರಾಷ್ಟ್ರಕೂಟರ ರಕ್ಷಣೆಯಲ್ಲಿ ಅವರ ರಾಜಧಾನಿಯಾದ ಮಾನ್ಯಖೇಟವು–ಮಳಖೇಡ–ಒಂದು ಒಳ್ಳೆಯ ಜೈನ ಕೇಂದ್ರ ಸ್ಥಳವಾಗಿತ್ತು. ಪರಮಾರ ವಂಶದ ರಾಜನಾದ ಹರ್ಷದೇವನು ಸಂವತ್ ೧೦೨೯ ರ ಸುಮಾರಿನಲ್ಲಿ ಮಾನ್ಯಖೇಟ ನಗರವನ್ನು ಸುಲಿದನಷ್ಟೆ ? ಸುಟ್ಟನಷ್ಟೆ ? ಆ ಪ್ರಸಂಗದಲ್ಲಿ ಮಹಾಕವಿ ಪುಷ್ಪದಂತನ ಮುಖದಿಂದ ಈ ವಾಕ್ಯಗಳು ತಟ್ಟನೆ ಹೊರಬಿದ್ದವು :–" ಮಾನ್ಯಖೇಟ ನಗರವು ದೀನ ಮತ್ತು ಅನಾಥರ ಧನವಾಗಿತ್ತು. ಯಾವಾಗಲೂ ಅರಳಿದ ಹೂವುಗಳಿರುವ ಉದ್ಯಾನಗಳಿದ್ದವಲ್ಲಿ. ಅವುಗಳಲ್ಲಿ ಅನೇಕ ಜನರು ವಿಹರಿಸುತ್ತಿದ್ದರು. ಅದರಿಂದ ಅದು ಇಂದ್ರಪುರಿಯಂತೆ ಸುಂದರವಾಗಿತ್ತು. ಇಂಥ ನಗರವು ಧಾರಾನಾಥನ ಕೋಪಾಗ್ನಿಯಿಂದ ದಗ್ಧವಾಗಿ ಹೋಯಿತು. ಇನ್ನು ಪುಷ್ಪದಂತ ಕವಿಯು ಎಲ್ಲಿ ವಾಸಿಸಿಯಾನು" (ಅಪಭ್ರಂಶ ಮಹಾಪುರಾಣ, ಸಂಧಿ ೫೦).

## ಚಾಲುಕ್ಯ ಮತ್ತು ಹೊಯ್ಸಳ ರಾಜವಂಶ :–

ಚಾಲುಕ್ಯ ರಾಜನಾದ ಎರಡನೆಯ ಪುಲಿಕೇಶಿಯ ಕಾಲದಲ್ಲಿ ಜೈನ ಕವಿಯಾದ ರವಿಕೀರ್ತಿಯು ಐಹೊಳೆಯಲ್ಲಿ ಮೇಘುಟಿ ಮಂದಿರವನ್ನು ನಿರ್ಮಿಸಿದನು. ಅಲ್ಲದೆ ತಾನು ಶಿಲಾಲೇಖವನ್ನೂ ಬರೆದನು. ಅದು ಕಾವ್ಯಕಲೆಯ ದೃಷ್ಟಿಯಿಂದಲೂ ಐತಿಹಾಸಿಕ ತಥ್ಯದಿಂದಲೂ ಕೂಡಿ ಮಹತ್ವಪೂರ್ಣವಾದುದಾಗಿದೆ ರವಿಕೀರ್ತಿಯ ಕಾವ್ಯಕೀರ್ತಿಯು ಕಾಲಿದಾಸ ಮತ್ತು ಭಾರವಿಯ ಸಮಾನವಾಗಿತ್ತೆಂದು ಅದರಲ್ಲಿ ಹೇಳಿದೆ. ಈ ಶಿಲಾಲೇಖವು ಶಕ ಸಂವತ್ಸರ ೫೫೬ ರಲ್ಲಿ (ಕ್ರಿ.ಶ. ೬೩೪) ಬರೆದದ್ದೆಂದು ಉಲ್ಲೇಖವುಳ್ಳದ್ದಾಗಿದೆ. ಇದರ ಆಧಾರದಿಂದಲೇ ಸಂಸ್ಕೃತದ ಮೇಲೆ ಹೇಳಿದ ಇಬ್ಬರೂ ಮಹಾಕವಿಗಳ ಕಾಲವು ಇದಕ್ಕೂ ಪೂರ್ವದ್ದೆಂದು ನಿರ್ಣಯಿಸಲಾಗಿದೆ. ಲಕ್ಷ್ಮೇಶ್ವರದಲ್ಲಿ ಲಭಿಸಿದ ಅನೇಕ ದಾನ ಪತ್ರಗಳಲ್ಲಿ ಚಾಲುಕ್ಯರಾಜರಾದ ವಿನಯಾದಿತ್ಯ, ವಿಜಯಾದಿತ್ಯ ಮತ್ತು ವಿಕ್ರಮಾದಿತ್ಯರಿಂದ ಜೈನ ಆಚಾರ್ಯರಿಗೆ ದಾನಗಳು ಲಭಿಸಿದ ಉಲ್ಲೇಖಗಳಿವೆ.

ಬಾದಾಮಿ ಮತ್ತು ಐಹೊಳೆಗಳಲ್ಲಿಯ ಜೈನ ಗುಹೆಗಳೂ ಅದರಲ್ಲಿರುವ ತೀರ್ಥಂಕರರ ಪ್ರತಿಮೆಗಳೂ ಇದೇ ಕಾಲದವುಗಳೆಂದು ಸಿದ್ಧವಾಗುತ್ತದೆ.

ಹನ್ನೊಂದನೆಯ ಶತಮಾನದ ಆರಂಭದಿಂದಲೇ ದಕ್ಷಿಣದಲ್ಲಿ ಪುನಃ ಚಾಲುಕ್ಯ ರಾಜವಂಶದ ಬಲವು ಬೆಳೆಯಿತು. ಈ ರಾಜವಂಶವು ಜೈನ ಧರ್ಮಕ್ಕೆ ಬಹುದೊಡ್ಡ ಆಶ್ರಯಸ್ಥಾನವಾಗಿತ್ತು. ಇವರ ಸಹಾಯದಿಂದ ದಕ್ಷಿಣದಲ್ಲಿ ಜೈನಧರ್ಮದ ಪ್ರಸಾರವು ಬಹಳಷ್ಟಾಯಿತು. ಅದರಿಂದ ಅವರ ಖ್ಯಾತಿಯೂ ಬೆಳೆಯಿತು. ಪಶ್ಚಿಮ ಚಾಲುಕ್ಯ ವಂಶದ ಸಂಸ್ಥಾಪಕನಾದ ತೈಲಪನು ಕನ್ನಡ ಜೈನ ಕವಿಯಾದ ರನ್ನನಿಗೆ ಆಶ್ರಯ ವಿತ್ತನು. ತೈಲಪನ ಉತ್ತರಾಧಿಕಾರಿಯಾದ ಸತ್ಯಾಶ್ರಯನು ಜೈನ ಮುನಿಯಾದ ವಿಮಲಚಂದ್ರ ಪಂಡಿತ ದೇವನನ್ನು ತನ್ನ ಗುರುವೆಂದು ಪೂಜಿಸುತ್ತಿದ್ದನು. ಈ ವಂಶದ ಉಳಿದ ರಾಜರಾದ ಎರಡನೆಯ ಜಯಸಿಂಹ, ಮೊದಲನೆಯ ಸೋಮೇಶ್ವರ ಹಾಗೂ ಆರನೆಯ ವಿಕ್ರಮಾದಿತ್ಯ ಇವರು ಅನೇಕ ಜನ ಜೈನ ಕವಿಗಳಿಗೆ ಪ್ರೋತ್ಸಾಹವಿತ್ತರು, ಸಾಹಿತ್ಯ ಸೃಷ್ಟಿಗೆ ಕಾರಣರಾದರು. ಹಾಗೆಯೇ, ಜೈನ ಮಂದಿರ, ಜೈನ ಸಂಸ್ಥೆಗಳಿಗೆ ಭೂಮಿ ಮೊದಲಾದುವುಗಳನ್ನು ದಾನ ಕೊಟ್ಟು, ಅವುಗಳನ್ನು ಪುಷ್ಟಿಗೊಳಿಸಿದರು.

ಹೊಯ್ಸಳ ರಾಜವಂಶದ ಸ್ಥಾಪನೆಯೂ ಕೂಡ ಒಬ್ಬ ಜೈನ ಮುನಿಯ ನಿಮಿತ್ತವಾಗಿ ಆಯಿತೆಂದು ಹೇಳುತ್ತಾರೆ. ವಿನಯಾದಿತ್ಯ ರಾಜನ ಆಳಿಕೆಯಲ್ಲಿ ಜೈನ ಮುನಿಯಾದ ವರ್ಧಮಾನ ದೇವನ ಕೈಯೂ ರಾಜ್ಯದಾಡಳಿತೆಯಲ್ಲಿ ನಡೆಯುತ್ತಿತ್ತೆಂದು ತಿಳಿಯುತ್ತದೆ. ಈ ರಾಜವಂಶದ ಇನ್ನಿಬ್ಬರು ರಾಜರಿಗೂ ಗುರುಗಳು ಜೈನ ಮುನಿಗಳೇ ಆಗಿದ್ದರು. ಈ ರಾಜವಂಶದ ಎಲ್ಲ ರಾಜರೂ ಜೈನ ಮಂದಿರಗಳಿಗೂ ಆಶ್ರಮಗಳಿಗೂ ದಾನವಿತ್ತಿದ್ದಾರೆ. ಈ ವಂಶದ ಎಲ್ಲಕ್ಕೂ ಹೆಚ್ಚು ಪ್ರತಾಪಿ ರಾಜನಾದ ವಿಷ್ಣುವರ್ಧನನು ರಾಮಾನುಜಾಚಾರ್ಯನ ಪ್ರಭಾವಕ್ಕೆ ಒಳಗಾಗಿ ವೈಷ್ಣವ ಧರ್ಮವನ್ನು ಸ್ವೀಕಾರ ಮಾಡಿದನು. ಆದರೂ ಅವನು ತಾನು ರಾಜ್ಯವಾಳುವವರೆಗೂ ಜೈನಧರ್ಮಕ್ಕೆ ಉಪಕಾರಿಯಾಗಿಯೂ ದಾನಶೀಲನಾಗಿಯೂ ಉಳಿದನೆಂಬುದಕ್ಕೆ ಬಹಳಷ್ಟು ಪ್ರಮಾಣಗಳು ಲಭಿಸುತ್ತವೆ. ಕ್ರಿ.ಶ. ೧೧೨೫ ರಲ್ಲಿಯೂ ಅವನು ಜೈನ ಮುನಿ ಶ್ರೀಪಾಲ ತ್ರೈವಿದ್ಯದೇವನನ್ನು ಆರಾಧಿಸಿದನು. ಶಲ್ಯವೆಂಬ ಹೆಸರಿನ ಸ್ಥಾನದಲ್ಲಿ ಜೈನ ವಿಹಾರವನ್ನು ಸ್ಥಾಪಿಸಿದನು. ಜೈನ ಮಂದಿರ ಹಾಗೂ ಮುನಿಗಳ ಆಹಾರಕ್ಕೆಂದು ದಾನವನ್ನೂ ನೀಡಿದನು. ಕ್ರಿ.ಶ. ೧೧೨೯ ರಲ್ಲಿ ಬರೆದ ಇನ್ನೊಂದು ಲೇಖಕ್ಕನುಸರಿಸಿ ಅವನು ಮಲ್ಲಿಜಿನಾಲಯಕ್ಕೆಂದು ದಾನವನ್ನಿತ್ತನು. ಕ್ರಿ.ಶ. ೧೧೩೩ರಲ್ಲಿ ತನ್ನ ರಾಜಧಾನಿಯಾದ ದ್ವಾರಸಮುದ್ರದಲ್ಲಿಯ ಪಾರ್ಶ್ವನಾಥಜಿನಾಲಯಕ್ಕೆ ಒಂದು ಗ್ರಾಮವನ್ನು ದಾನವಿತ್ತನು. ಹಾಗೂ ತನ್ನ ಆ ಕಾಲದ ವಿಜಯದ ನೆನಪಿಗೆಂದು ಅಲ್ಲಿಯ ಮೂಲ ನಾಯಕನಿಗೆ ವಿಜಯ ಪಾರ್ಶ್ವನಾಥನೆಂದು ಕರೆದು ಪ್ರಸಿದ್ಧಗೊಳಿಸಿದನು. ತನ್ನ ಮಗನ ಹೆಸರನ್ನೂ ಸಹ ವಿಜಯಸಿಂಹನೆಂದು ಇಟ್ಟನು. ಈ ಪ್ರಕಾರ ಅವನು ತನ್ನ ಪರಂಪರಾಗತ ಧರ್ಮದಲ್ಲಿಯೂ ತಾನು ಹೊಸದಾಗಿ ಸ್ವೀಕರಿಸಿದ ಧರ್ಮ

ದಲ್ಲಿಯೂ ಸಂತುಲವನ್ನು ಕಾಯ್ದುಕೊಂಡನು. ಅವನ ರಾಣಿಯಾದ ಶಾಂತಲದೇವಿಯು ಆಜನ್ಮ ಜೈನ ಧರ್ಮದ ಉಪಾಸಿಕೆಯಾಗಿಯೇ ಉಳಿದಳು. ಜೈನ ಮಂದಿರಗಳಿಗೆ ಅನೇಕ ದಾನಗಳನ್ನು ಕೊಡುತ್ತಲೂ ಇದ್ದಳು. ಅವಳ ಗುರುವು ಪ್ರಭಾಚಂದ್ರ ಸಿದ್ಧಾಂತ ದೇವನಿದ್ದನು. ಅವಳು ಕ್ರಿ. ಶ. ೧೧೨೧ ರಲ್ಲಿ ಜೈನ ಧರ್ಮದ ಪ್ರಕಾರ ಸಮಾಧಿ ಮರಣದಿಂದ ದೇಹತ್ಯಾಗ ಮಾಡಿದಳು. ವಿಷ್ಣುವರ್ಧನನ ಪ್ರಭಾವಶಾಲಿ ಯಾದ ಮಂತ್ರಿಗಳೂ ಸೇನಾಪತಿಗಳೂ ಜೈನ ಧರ್ಮಾನುಯಾಯಿಗಳಾಗಿದ್ದರು. ಅಂಥ ವರಲ್ಲಿ ಸೇನಾಪತಿಯಾದ ಗಂಗರಾಜನು ಅನೇಕ ಜೈನ ಮಂದಿರಗಳನ್ನು ನಿರ್ಮಿಸಿದನು; ಹಲವು ಮಂದಿರಗಳ ಜೀರ್ಣೋದ್ಧಾರ ಮಾಡಿದನು; ವಿವಿಧ ಜೈನ ಸಂಸ್ಥೆಗಳಿಗೆ ವಿಪುಲ ದಾನವಿತ್ತನು. ಅವನ ಪತ್ನಿಯಾದ ಲಕ್ಷ್ಮೀಮತಿಯೂ ಜೈನ ಸಲ್ಲೇಖನ ವಿಧಿಯ ಪ್ರಕಾರ ಮರಣ ಹೊಂದಿದಳು. ಅವಳ ಸ್ಮೃತಿಗಾಗಿ ಅವಳ ಪತಿಯು ಶ್ರವಣ ಬೆಳ್ಗೊಳದ ಪರ್ವತದ ಮೇಲೆ ಒಂದು ಲೇಖವನ್ನು ಕೆತ್ತಿದನು. ಅವನ ಇನ್ನಿತರ ಸೇನಾಪತಿಗಳಾದ ಬೊಪ್ಪ, ಪುನಿಸ ಮರಿಯಣ್ಣ, ಭರತೇಶ್ವರ ಮೊದಲಾದವರು ಜೈನ ಮುನಿಗಳ ಉಪಾಸಕರಾಗಿದ್ದರು. ಜೈನ ಧರ್ಮದ ವಿಷಯಕ್ಕೆ ದೊಡ್ಡ ದಾನಿಗಳಾಗಿ ದ್ದರು. ಇದಕ್ಕೆಲ್ಲ ಪ್ರಮಾಣಗಳು ಶ್ರವಣಬೆಳ್ಗೊಳ ಹಾಗೂ ಇತರೆಡೆಗಳಲ್ಲಿ ಲಭಿಸಿದ ಶಿಲಾಲೇಖಗಳಲ್ಲಿ ವಿಪುಲವಾಗಿ ದೊರೆಯುತ್ತವೆ. ವಿಷ್ಣುವರ್ಧನನ ಉತ್ತರಾಧಿಕಾರಿ ಯಾದ ಮೊದಲನೆಯ ನರಸಿಂಹನು ಶ್ರವಣಬೆಳ್ಗೊಳದ ದರ್ಶನವನ್ನು ಮಾಡಿದನು. ಅಲ್ಲದೆ ತನ್ನ ಮಹಾನ್ ಸೇನಾಪತಿ ಹುಲ್ಲನು ಅಲ್ಲಿ ನಿರ್ಮಿಸಿದ ಚತುರ್ವಿಂಶತಿ ಜಿನಾಲಯಕ್ಕೆ ಒಂದು ಗ್ರಾಮವನ್ನು ದಾನವಿತ್ತನು. ಹೊಯ್‌ಸಳ ರಾಜನಾದ ಎರಡನೆಯ ವೀರಬಲ್ಲಾಳನಿಗೂ, ಮೂರನೆಯ ನರಸಿಂಹನಿಗೂ ಜೈನಮುನಿಗಳೇ ಗುರು ಗಳಾಗಿದ್ದರು. ಈ ಅರಸರು ಹಾಗೂ ಈ ವಂಶದ ಉಳಿದ ರಾಜರೂ ಸಹ ಅನೇಕ ಜೈನಮಂದಿರಗಳನ್ನು ನಿರ್ಮಿಸಿದರಲ್ಲದೆ ವಿವಿಧ ದಾನ-ದತ್ತಿಗಳನ್ನು ಇತ್ತು ಅವು ಗಳನ್ನು ಪೋಷಿಸಿದರು, ಪುಷ್ಟಗೊಳಿಸಿದರು. ಈ ಪ್ರಕಾರ ಹೊಯ್‌ಸಳ ವಂಶದ ಎಲ್ಲ ಅರಸರೂ ಜೈನಧರ್ಮಾನುಯಾಯಿಗಳಾಗಿದ್ದರೆಂಬುದು ಸ್ಪಷ್ಟವಾಗಿ ಸಿದ್ಧವಾಗುತ್ತದೆ. ಅವರ ಸಹಾಯ ಹಾಗೂ ಸಂರಕ್ಷಣಗಳಿಂದ ಜೈನ ಮಂದಿರಗಳೂ ಇತರ ಧಾರ್ಮಿಕ ಸಂಸ್ಥೆಗಳೂ ದಕ್ಷಿಣ ಭಾಗದಲ್ಲಿ ಬಹಳಷ್ಟು ಪ್ರಚುರಗೊಂಡುವು, ಸಮೃದ್ಧವೂ ಆದುವು.

**ಉಳಿದ ರಾಜವಂಶ :—**

ಮೇಲೆ ವಿವರಿಸಿದ ರಾಜವಂಶಗಳಲ್ಲದೆ ಇನ್ನುಳಿದ ಹಿರಿಕಿರಿಯ ಅನೇಕ ರಾಜ ಮನೆತನಗಳಿಂದಲೂ ದಕ್ಷಿಣದಲ್ಲಿ ಜೈನಧರ್ಮಕ್ಕೆ ತುಂಬ ಬಲವು ಬಂತು. ಕರ್ನಾಟಕದ ತೀರ್ಥಹಳ್ಳಿ ತಾಲೂಕು ಹಾಗೂ ಅದರ ಸುತ್ತಮುತ್ತಲಿನ ಪ್ರದೇಶವನ್ನು ಆಳುತ್ತಿದ್ದ ಸಾಂತರರು ಪ್ರಾರಂಭದಿಂದಲೂ ಜೈನರಿದ್ದರು. ಜೈನಧರ್ಮವನ್ನು ಬೆಳೆಯಿಸಲು ಕಾರಣರಾದರು. ಸಾಂತರ ಭುಜಬಲ ಎಂಬವನು ತನ್ನ ರಾಜಧಾನಿಯಾದ ಹೊಂಬುಜ

ದಲ್ಲಿ ಒಂದು ಜೈನ ಮಂದಿರವನ್ನು ನಿರ್ಮಿಸಿದನು. ಅಲ್ಲದೆ ಆ ಮಂದಿರದ ವ್ಯವಸ್ಥೆಗಾಗಿ ತನ್ನ ಗುರುವಾದ ಕನಕನಂದಿಗೆ ಒಂದು ಗ್ರಾಮವನ್ನು ದಾನವಾಗಿ ಕೊಟ್ಟನು. ವೀರ ಸಾಂತರನ ಮಂತ್ರಿಯಾದ ನಗುಲ ಅರಸನಿಗೆ ಕ್ರಿ.ಶ. ೧೧೮೧ ರ ಒಂದು ಶಿಲಾಲೇಖದಲ್ಲಿ ಜೈನಧರ್ಮದ ಕೋಟೆಯೆಂದು ಕರೆಯಲಾಗಿದೆ. ಸ್ವತಃ ವೀರ ಸಾಂತರನಿಗೆ ಒಂದು ಶಿಲಾಲೇಖದಲ್ಲಿ ' ಜಿನಭಗವಾನ್‌ರ ಚರಣಭೃಂಗ' ವೆಂದು ಹೇಳಿದೆ. ಹದಿಮೂರನೆಯ ಶತಮಾನದಲ್ಲಿ ಸಾಂತರರು ವೀರಶೈವ ಧರ್ಮವನ್ನು ಸ್ವೀಕರಿಸಿದರು. ಅದರಿಂದ ಅವರ ರಾಜ್ಯದಲ್ಲಿ ಜೈನಧರ್ಮದ ಪ್ರಗತಿ ಹಾಗೂ ಪ್ರಭಾವಗಳು ಸ್ವಲ್ಪ ಕಡಿಮೆಯಾಗಿರಬೇಕು. ಆದರೂ ಸಾಂತರರು ವೀರಶೈವ ಧರ್ಮಾವಲಂಬಿಗಳಾದರೂ ಸಹ ಜೈನಧರ್ಮದ ವಿಷಯದಲ್ಲಿ ಶ್ರದ್ಧೆ ಹಾಗೂ ದಾನಶೀಲ ಭಾವನೆಗಳು ಅವರಲ್ಲಿ ಇದ್ದುವು.

ಇದೇ ಪ್ರಕಾರ ಮೈಸೂರು ಸೀಮೆಗೆ ಸೇರಿದ ಕೊಡಗು ಹಾಗೂ ಅದರ ನೆರೆಯ ಪ್ರದೇಶವನ್ನು ಆಳುತ್ತಿದ್ದ ಕೊಂಗಾಳ್ವರು ಹನ್ನೊಂದು ಹಾಗೂ ಹನ್ನೆರಡನೆಯ ಶತಮಾನಗಳಲ್ಲಿ ಅನೇಕ ಜಿನಮಂದಿರಗಳನ್ನು ನಿರ್ಮಿಸಿದರು. ಅಲ್ಲದೆ ಅವುಗಳಿಗೆ ದಾನಗಳನ್ನೂ ನೀಡಿದರು. ಅದರಂತೆ ಚೆಂಗಾಳ್ವ ಅರಸರು ಶೈವರಿದ್ದರೂ ಸಹ ಜೈನಧರ್ಮಕ್ಕೆ ಬಹಳ ಉಪಕಾರಿಗಳಾಗಿದ್ದರು. ಅವರು ಜೈನ ಮಂದಿರಗಳನ್ನು ನಿರ್ಮಿಸಿ, ಅವುಗಳಿಗೆ ದಾನವಿತ್ತ ಬಗ್ಗೆ ಅವರ ಶಿಲಾಲೇಖಗಳಲ್ಲಿ ಉಲ್ಲೇಖಗಳು ದೊರೆಯುತ್ತವೆ. ಈ ರಾಜರಲ್ಲದೆ ಮಂತ್ರಿಗಳು, ಸೇನಾಪತಿಗಳು, ಸಾಮಂತರು ಮತ್ತು ಸೆಟ್ಟಿ ಸಾವುಕಾರರು ವೈಯಕ್ತಿಕವಾಗಿ ವಿವಿಧ ಸ್ಥಳಗಳಲ್ಲಿ ಜಿನಮಂದಿರ ನಿರ್ಮಿಸಿದ್ದಾರೆ, ದಾನ-ದತ್ತಿಗಳನ್ನು ನೀಡಿದ್ದಾರೆ; ಜಿನಮೂರ್ತಿಗಳನ್ನು ಪ್ರತಿಷ್ಠಿಸಿದ್ದಾರೆ, ಪೂಜೆ ಅರ್ಚನೆಗಳ ವ್ಯವಸ್ಥೆ ಮಾಡಿದ್ದಾರೆ, ವಿವಿಧ ಪ್ರಕಾರದ ಧರ್ಮ ಪ್ರಭಾವನೆಯನ್ನು ಗೈದಿದ್ದಾರೆ. ಇಷ್ಟೇ ಅಲ್ಲದೆ, ಅವರು ತಮ್ಮ ಜೀವನದಲ್ಲಿ ಧರ್ಮಾಚರಣೆಯಲ್ಲಿದ್ದು, ಕೊನೆಗೆ ವೈರಾಗ್ಯಶೀಲರಾಗಿ, ಸಮಾಧಿ ಮರಣವನ್ನೂ ಸಹ ಹೊಂದಿದ್ದುಂಟು. ದಕ್ಷಿಣ ಭಾರತದಲ್ಲಿ ಎಲ್ಲೆಲ್ಲಿಯೂ ಕಂಡುಬರುವ ಜಿನಮಂದಿರಗಳೂ, ಮೂರ್ತಿಗಳೂ, ಜೈನ ಶಿಲ್ಪದ ಭಗ್ನಾವಶೇಷಗಳೂ ಇದಕ್ಕೆ ಬಲವಾದ ಸಾಕ್ಷಿಯಾಗಿವೆ. ಅವುಗಳಿಂದ ಈ ಧರ್ಮವು ದಕ್ಷಿಣ ಭಾಗದಲ್ಲಿ ಎಷ್ಟು ಲೋಕಪ್ರಿಯವೂ ಸುಪ್ರಚಲಿತವೂ ಆಗಿತ್ತೆಂಬುದು ಗೊತ್ತಾಗುತ್ತದೆ. ಈ ಧರ್ಮವು ಅರಮನೆಯಿಂದ ಜನಸಾಮಾನ್ಯರ ಮನೆಗಳ ವರೆಗೆ ಪ್ರತಿಷ್ಠಿತವಾಗಿತ್ತು. ಅದರಿಂದ ಇದು ಜನತೆಯ ಜೀವನವನ್ನು ನೈತಿಕ, ದಾನಶೀಲ ಹಾಗೂ ಲೋಕೋಪಕಾರೋನ್ಮುಖಗೊಳಿಸಿತು.

### ಗುಜರಾತ–ಕಾಠೇವಾಡಗಳಲ್ಲಿ ಜೈನಧರ್ಮ :—

ಕ್ರಿ. ಶ. ಮೊದಲನೆಯ ಶತಮಾನದ ಸುಮಾರಿನಲ್ಲಿ ಕಾಠೇವಾಡದೊಳಗೂ ಸಹ ಒಂದು ಜೈನ ಕೇಂದ್ರವು ಸುಪ್ರತಿಷ್ಠಿತಗೊಂಡುದು ಕಂಡುಬರುತ್ತದೆ. " ಷಟ್ ಖಂಡಾಗಮ "ದ ಸೂತ್ರಗಳ ರಚನೆಯ ವಿಷಯದಲ್ಲಿ ಅದರ ಟೀಕಾಕಾರರಾದ ವೀರಸೇನಾ

ಚಾರ್ಯರು ಕೆಲವು ಐತಿಹಾಸಿಕ ಸಂಗತಿಗಳನ್ನು ವಿವರಿಸಿದ್ದಾರೆ. ಅದಕ್ಕನುಸರಿಸಿ ವೀರ ನಿರ್ವಾಣ ಸಂವತ್ಸರ ೬೮೩ ನೆಯ ವರ್ಷದಲ್ಲಿ–ಶ್ರುತಜ್ಞಾನಿ ಆಚಾರ್ಯರ ಅವಿಚ್ಛಿನ್ನ ಪರಂಪರೆಯು ನಿಂತ ಕೆಲವು ಕಾಲದ ಮೇಲೆ–ಧರಸೇನಾಚಾರ್ಯರು ಆದರು. ಅವರು ಗಿರಿನಗರದ (ಗಿರನಾರ್–ಕಾಠೇವಾಡ) ಚಂದ್ರಗುಹೆಯಲ್ಲಿ ಇರುತ್ತಿದ್ದರು. ಅಲ್ಲಿಯೇ ಅವರು ಪುಷ್ಪದಂತ ಹಾಗೂ ಭೂತಬಲಿ ಆಚಾರ್ಯರನ್ನು ಕರೆಯಿಸಿಕೊಂಡು, ಅವರಿಗೆ ಜ್ಞಾನ ಪ್ರಧಾನವನ್ನು ಮಾಡಿದರು. ಅದರ ಆಧಾರದ ಮೇಲೆ ಅವರು ದ್ರವಿಡ ದೇಶಕ್ಕೆ ತೆರಳಿ, ಷಟ್‌ಖಂಡಾಗಮವನ್ನು ಸೂತ್ರರೂಪದಲ್ಲಿ ರಚಿಸಿದರು. ಜುನಾಗಡದ ಸಮೀಪದಲ್ಲಿ ಕೆಲವು ಅತ್ಯಂತ ಪ್ರಾಚೀನ ಗುಹೆಗಳ ಶೋಧವಾಗಿದೆ. ಈಗ ಅವುಗಳಿಗೆ "ಬಾಬಾ ಪ್ಯಾರ"ನ ಮಠಗಳೆಂದು ಹೇಳಲಾಗುತ್ತಿದೆ. ಇದರ ಸಮೀಪದ ಒಂದು ಗುಹೆಯಲ್ಲಿ ಭಗ್ನವಾದ ಎರಡು ಶಿಲಾಲೇಖಗಳೂ ಸಹ ಲಭಿಸಿವೆ. ಅವು ಕ್ಷತ್ರಪ ವಂಶದ ರಾಜರ ಹೆಸರುಗಳನ್ನು ಉಲ್ಲೇಖಿಸುತ್ತವೆ. ಅವುಗಳನ್ನೂ ಅವುಗಳ ಲಿಪಿಯನ್ನೂ ಅವಲೋಕಿಸಿದಲ್ಲಿ ಅವು ಕ್ರಿ.ಶ. ಪ್ರಾರಂಭದವುಗಳೆಂದು ಸಿದ್ಧವಾಗುತ್ತದೆ. ಇದೇ ಗುಹೆಯು ಧರಸೇನಾಚಾರ್ಯರ ನಿವಾಸ ಭೂಮಿಯಾಗಿರಬೇಕೆಂದು ನಾನು ಒಂದು ಲೇಖದಲ್ಲಿ ಪ್ರತಿಪಾದಿಸಲು ಯತ್ನಿಸಿದ್ದೇನೆ. ಬಹುತರ ಅಲ್ಲಿಯೇ ಅವರ ಸಮಾಧಿ ಮರಣವಾಗಿರಬೇಕು. ಅದರ ಸ್ಮೃತಿಗೆಂದೇ ಆ ಶಿಲಾಲೇಖಗಳನ್ನು ಬರೆಯಿಸಿದ್ದರೆ ಆಶ್ಚರ್ಯ ಪಡುವ ಕಾರಣವಿಲ್ಲ. ಈ ಲೇಖವು ಜಯದಾಮನ್‌ನ ಮೊಮ್ಮಗನಾದ ಪ್ರಥಮ ರುದ್ರಸಿಂಹನದೆಂದು ಗೊತ್ತಾಗುತ್ತದೆ ತುಂಡಾದುದರಿಂದ ಲೇಖದ ಪೂರ್ಣ ಅರ್ಥವನ್ನು ಹಚ್ಚಲು ಸಾಧ್ಯವಾಗುವುದಿಲ್ಲ. ಆದರೂ ಅದರಲ್ಲಿ ಇರುವ ಕೇವಲಜ್ಞಾನ, ಜರಾಮರಣದಿಂದ ಮುಕ್ತಿ ಮೊದಲಾದ ಪದಗಳನ್ನು ಸ್ಪಷ್ಟವಾಗಿ ಓದಲಾಗುತ್ತಿದೆ. ಅದರಿಂದ ಅದು ಮಹಾನ್ ಜೈನಾಚಾರ್ಯರ ತಪಸ್ಸು ಮತ್ತು ಸಮಾಧಿ ಮರಣಗಳ ಬಗ್ಗೆ ವಿವರವುಳ್ಳ ಲೇಖನವಿರಬೇಕೆಂದು ಖಚಿತಗೊಳ್ಳುತ್ತದೆ. ಈ ಗುಹೆಯಲ್ಲಿ ಕೆತ್ತಿದ ಸ್ವಸ್ತಿಕ, ಭದ್ರಾಸನ, ಮೀನಯುಗಲ ಮೊದಲಾದ ಚಿಹ್ನೆಗಳು ಕೂಡ ಜೈನತತ್ವವನ್ನು ಸಿದ್ಧಗೊಳಿಸುತ್ತವೆ. ಢಂಕ ಎಂಬ ಹೆಸರಿನ ಸ್ಥಾನದಲ್ಲಿರುವ ಗುಹೆಗಳೂ ಅದರಲ್ಲಿರುವ ಋಷಭ, ಪಾರ್ಶ್ವ, ಮಹಾವೀರ ಮತ್ತು ಅನ್ಯ ತೀರ್ಥಂಕರರ ಪ್ರತಿಮೆಗಳೂ ಕೂಡ ಅದೇ ಕಾಲದುವೆಂದು ನಿಶ್ಚಿತವಾಗಿದೆ. ಗಿರನಾರದಲ್ಲಿ ಧರಸೇನಾಚಾರ್ಯರ ಉಪದೇಶವನ್ನು ಗ್ರಹಿಸಿ, ಪುಷ್ಪದಂತ, ಭೂತಬಲಿ ಆಚಾರ್ಯರು ದ್ರವಿಡ ದೇಶಕ್ಕೆ ಹೋದರು. ಅಲ್ಲಿ ಆಗಮದ ಸೂತ್ರಗಳನ್ನು ರಚಿಸಿದರು. ಈ ವೃತ್ತಾಂತವು ಆ ಕಾಲದಲ್ಲಿ ಕಾಠೇವಾಡ–ಗುಜರಾಥಗಳಿಂದ ದೂರದ ಪ್ರದೇಶವಾದ ತಮಿಳ ನಾಡಿನ ವರೆಗೂ ಜೈನಮುನಿಗಳ ವಿಹಾರವು ನಿರ್ಬಾಧವಾಗಿ ನಡೆಯುತ್ತಿತ್ತೆಂದು ಸಿದ್ಧವಾಗುತ್ತದೆ.

ಮುಂದಿನ ಶತಮಾನಗಳಲ್ಲಿ ಗುಜರಾತದೊಳಗೆ ಜೈನಧರ್ಮದ ಪ್ರಭಾವವು ಉತ್ತರೋತ್ತರ ಹೆಚ್ಚಾಗುತ್ತ ಹೋಯಿತು. ಅಲ್ಲಿ ವೀರ ನಿರ್ವಾಣವಾಗಿ ೯೮೦ ವರ್ಷಗಳು ಕಳೆದ ಮೇಲೆ ವಲ್ಲಭಿನಗರದಲ್ಲಿ ಕ್ಷಮಾಶ್ರಮಣ ದೇವರ್ಧಿಗಣಿಯ ಅಧ್ಯಕ್ಷತೆಯಲ್ಲಿ

ಜೈನಮುನಿಗಳ ಒಂದು ವಿಶಾಲ ಸಮ್ಮೇಲನವು ನೆರವೇರಿತು. ಅದರಲ್ಲಿ ಜೈನಾಗಮಗಳ ಅಂಗೋಪಾಂಗವೇ ಮೊದಲಾದ ೪೫–೫೦ ಗ್ರಂಥಗಳ ಸಂಕಲನವಾಯಿತು. ಇವುಗಳನ್ನು ಶ್ವೇತಾಂಬರ ಸಂಪ್ರದಾಯದಲ್ಲಿ ಸರ್ವರೀತಿಯಿಂದ ಪ್ರಮಾಣಭೂತ ಗ್ರಂಥಗಳೆಂದು ತಿಳಿಯಲಾಗುತ್ತದೆ. ಇವು ಅರ್ಧಮಾಗಧೀ ಪ್ರಾಕೃತದ ಅದ್ವಿತೀಯ ಉಪಲಬ್ಧ ಕೃತಿಗಳಾಗಿವೆ. ಏಳನೆಯ ಶತಮಾನದ ಇಬ್ಬರು ಗುಜರಾಥದ ಅರಸರಾದ ಪ್ರಥಮ ಜಯಭಟ ಹಾಗೂ ಎರಡನೆಯ ದಡ್ಡ ಇವರ ದಾನಪತ್ರಗಳು ಲಭಿಸಿವೆ. ಇವುಗಳಲ್ಲಿ ಅವರಿಗೆ ವೀತರಾಗ ಮತ್ತು ಪ್ರಶಾಂತರಾಗ ಎಂಬ ವಿಶೇಷಣಗಳಿವೆ. ಇವು ಅವರ ಜೈನಧರ್ಮಾವಲಂಬಿತ್ವವನ್ನಲ್ಲದಿದ್ದರೂ ಜೈನಧರ್ಮಾನುರಾಗವನ್ನಂತೂ ಅವಶ್ಯವಾಗಿ ಪ್ರಕಟಿಸುತ್ತವೆ. ಈ ಪ್ರದೇಶದ ಚಾವಡಾ (ಚಾಪೋತ್ಕಟ) ರಾಜವಂಶದ ಸಂಸ್ಥಾಪಕನಾದ ವನರಾಜನ ಸಂಬಂಧವು ಜೈನಧರ್ಮದೊಡನೆ ಇದ್ದುದಕ್ಕೂ ಅದನ್ನವನು ಪ್ರೋತ್ಸಾಹಿಸಿದುದಕ್ಕೂ ಆಧಾರಗಳು ಲಭಿಸುತ್ತವೆ. ಈ ವಂಶದ ಪ್ರತಾಪೀ ನರೇಂದ್ರನಾದ ಮೂಲರಾಜನು ತನ್ನ ರಾಜಧಾನಿಯಾದ ಅನಹಿಲವಾಡದಲ್ಲಿ ಮೂಲವಸತಿಕಾ ಎಂಬ ಜೈನಮಂದಿರವನ್ನು ನಿರ್ಮಿಸಿದನು. ಅದು ಈಗಲೂ ಅಸ್ತಿತ್ವದಲ್ಲಿದೆ. ಶ್ರೀಚಂದ್ರನೆಂಬ ಕವಿಯು ಕಥಾಕೋಷ ಎಂಬ ಹೆಸರಿನ ಅಪಭ್ರಂಶ ಭಾಷೆಯ ಗ್ರಂಥದ ಪ್ರಶಸ್ತಿಯಲ್ಲಿ ಹೀಗೆ ಹೇಳಿದ್ದಾನೆ :—ಮೂಲರಾಜನ ಧರ್ಮಸ್ಥಾನದ ಗೋಷ್ಠಿಯಲ್ಲಿ ಪ್ರಾಗ್ವಾಟ ವಂಶದ ಸಜ್ಜನ ಎಂಬ ಹೆಸರಿನ ವಿದ್ವಾಂಸನಿದ್ದನು. ಅದೇ ರಾಜನ ಮಗನಾದ ಕೃಷ್ಣನ ಕುಟುಂಬದ ಜನರಿಗೆ ಧರ್ಮೋಪದೇಶ ಮಾಡಲೆಂದಿರುವ ಕುಂದಕುಂದಾನ್ವಯದ ಮುನಿ ಸಹಸ್ರಕೀರ್ತಿಯ ಶಿಷ್ಯನಾದ ಶ್ರೀಚಂದನು ಈ ಗ್ರಂಥವನ್ನು ಬರೆದನು. ಮುನಿ ಸಹಸ್ರಕೀರ್ತಿಯ ಪಾದಪದ್ಮಗಳಿಗೆ ಗಾಂಗೇಯ, ಭೋಜದೇವ ಮೊದಲಾದ ಅರಸರು ವಂದಿಸುತ್ತಿದ್ದರೆಂದೂ ಹೇಳಿದೆ. ಗಾಂಗೇಯರೆಂದರೆ ಚೇದಿಯ ಕಲಚೂರಿ ವಂಶದ ರಾಜರು ; ಭೋಜದೇವನು ಪರಮಾರ ವಂಶದ ಮಾಲವದ ರಾಜನಾಗಿರಬೇಕೆಂದು ಅಭಿಪ್ರಾಯವಿದೆ. ಉದ್ಯೋತನಸೂರಿ ಕೃತ ' ಕುವಲಯ ಮಾಲಾ ' (ಕ್ರಿ. ಶ. ೭೭೮) ಗ್ರಂಥಕ್ಕೆ ಅನುಸರಿಸಿ ಗುಪ್ತವಂಶದ ಆಚಾರ್ಯನಾದ ಹರಿಗುಪ್ತನು ಯವನ ರಾಜನಾದ ತೋರಮಾಣನ್ನು (ಹೂಣವಂಶೀಯ) ಗುರುವಾಗಿದ್ದನು. ಅಲ್ಲದೆ ಚಂದ್ರ ಭಾಗಾ ನದಿಯ ಸಮೀಪದಲ್ಲಿರುವ ಪವ್ವೈಯಾ (ಪಂಜಾಬ) ರಾಜಧಾನಿಯಲ್ಲಿ ಇರುತ್ತಿದ್ದನು. ಹರಿಗುಪ್ತನ ಶಿಷ್ಯನಾದ ದೇವಗುಪ್ತನದೂ ಕೂಡ ಬಹು ದೊಡ್ಡ ಪದ–ಪ್ರತಿಷ್ಠೆಯಿತ್ತು. ದೇವಗುಪ್ತನ ಶಿಷ್ಯನಾದ ಶಿವಚಂದ್ರನು ಪವ್ವೈಯಾದಿಂದ ವಿಹಾರ ಗೈಯುತ್ತ ಭಿನ್ನಮಾಲದಲ್ಲಿ (ಗುಜರಾಥದ ಪ್ರಾಚೀನ ರಾಜಧಾನಿಯಾದ ಶ್ರೀಮಾಲ) ಬಂದನು. ಅವನ ಶಿಷ್ಯನಾದ ಯಜ್ಞದತ್ತ ಮತ್ತು ಇತರ ಗುಣವಾನ್ ಶಿಷ್ಯರು ಗುಜರಾಥ ದೇಶದಲ್ಲಿ ಜೈನ ಧರ್ಮವನ್ನು ಬಹಳಷ್ಟು ಪ್ರಚಾರ ಮಾಡಿದರು. ಅವರು ಬಹಳಷ್ಟು ಜೈನ ಮಂದಿರಗಳನ್ನು ನಿರ್ಮಿಸಿ, ಅಲಂಕರಿಸಿದರು. ಅವನ ಒಬ್ಬ ಶಿಷ್ಯ ವಟೇಶ್ವರನು ಆಕಾಶವಪ್ರನಗರದಲ್ಲಿ ವಿಸ್ತಾರವಾದ ಮಂದಿರವನ್ನು ನಿರ್ಮಿಸಿ

ದನು. ವಟೇಶ್ವರನ ಶಿಷ್ಯ ತತ್ವಾಚಾರ್ಯನು ' ಕುವಲಯ ಮಾಲಾ ' ಕಾರನಾದ ಕ್ಷತ್ರಿಯವಂಶಿ ಉದ್ಯೋತನ ಸೂರಿಯ ಗುರುವಾಗಿದ್ದನು. ಉದ್ಯೋತನಸೂರಿಯು ವೀರಭದ್ರಆಚಾರ್ಯನಿಂದ ಸಿದ್ಧಾಂತವನ್ನೂ ಹರಿಭದ್ರಆಚಾರ್ಯನಿಂದನ್ಯಾಯವನ್ನೂ ಕಲಿತನು. ಮುಂದೆ ಶಕ ಸಂವತ್ಸರ ೭೦೦ ರಲ್ಲಿ ಜಾವಾಲಿಪುರದಲ್ಲಿ (ರಾಜಪುತಾನದಲ್ಲಿರುವ ಜಾಲೋರ) ವೀರಭದ್ರನಿಂದ ನಿರ್ಮಿತವಾದ ಋಷಭದೇವ ಮಂದಿರದಲ್ಲಿ ತನ್ನ ' ಕುವಲಯಮಾಲಾ ' ಕೃತಿಯನ್ನು ಪೂರ್ಣಗೊಳಿಸಿದನು. ತೋರಮಾಣನು ಆ ಆಕ್ರಮಣಕಾರಿ ಹೂಣ ಮಿಹಿರಕುಲದ ಉತ್ತರಾಧಿಕಾರಿಯಾಗಿದ್ದನು. ಅವನ ಕ್ರೂರತೆಯು ಇತಿಹಾಸ ಪ್ರಸಿದ್ಧವಾಗಿದೆ. ಇಂಥ ಕ್ರೂರ ವ್ಯಕ್ತಿಯ ಮೇಲೆ ಅಷ್ಟು ಶೀಘ್ರವಾಗಿ ಜೈನ ಮುನಿಗಳು ಪ್ರಭಾವವನ್ನು ಬೀರಿದರು. ಇದು ಆ ಕಾಲದ ಜೈನ ಧರ್ಮದ ಸಜೀವತೆಯನ್ನೂ ಉದಾತ್ತ ಧರ್ಮ-ಪ್ರಚಾರದ ರೀತಿಯನ್ನೂ ಒಳ್ಳೆಯದಾಗಿ ವ್ಯಕ್ತ ಪಡಿಸಲು ಪ್ರಮಾಣವಾಗಿದೆ.

ಚಾಲುಕ್ಯ ವಂಶದ ರಾಜನಾದ ಭೀಮನ ಆಳಿಕೆಯಲ್ಲಿ ಜೈನ ಧರ್ಮದ ಪ್ರಸಾರವು ವಿಶೇಷವಾಗಿ ಆಯಿತು. ಅವನ ಮಂತ್ರಿಯಾದ ಪ್ರಾಗ್ವಾಟ ವಂಶದ ವಿಮಲ ಶಾಹನು ಆಬೂ ಗಿರಿಯ ಮೇಲೆ ಆದಿನಾಥ ತೀರ್ಥಂಕರರ ಜಿನ ಮಂದಿರವನ್ನು ನಿರ್ಮಿಸಿದನು. ಇದರಲ್ಲಿ ಭಾರತೀಯ ಸ್ಥಾಪತ್ಯ ಕಲೆಯ ಅತ್ಯುತ್ಕೃಷ್ಟ ಪ್ರದರ್ಶನವಾಗಿದೆ. ಇದರ ಸೂಕ್ಷ್ಮ ಕೆತ್ತನೆಯೂ ನಿರ್ಮಾಣ ಚಾತುರ್ಯವೂ, ಸೌಂದರ್ಯವೂ ಜಗದ್ವಿಖ್ಯಾತವೆಂದು ತಿಳಿಯಲಾಗುತ್ತದೆ. ಈ ಮಂದಿರವು ಕ್ರಿ.ಶ ೧೦೩೧ ರಲ್ಲಿ ಅರ್ಥಾತ್ ಮಹಮ್ಮದ ಗುಝನಿಯಿಂದ ಸೋಮನಾಥಪುರವು ಧ್ವಸ್ತವಾದ ಏಳುವರ್ಷಗಳಲ್ಲಿಯೇ ನಿರ್ಮಾಣವಾಯಿತು. ಈ ವಿಮಲ ಮಂತ್ರಿಯು ಹದಿಮೂರು ಜನ ಸುಲ್ತಾನರ ಛತ್ರಗಳನ್ನು ಕಸಿದುಕೊಂಡನೆಂದು ಖರತರ ಗಚ್ಛದ ಪಟ್ಟಾವಲಿಯಲ್ಲಿ ಉಲ್ಲೇಖವು ದೊರೆಯುತ್ತದೆ. ಈತನೇ ಚಂದ್ರಾವತೀ ನಗರದ ಅಸ್ತಿವಾರವನ್ನು ಹಾಕಿದನು, ಅರ್ಬುದಾಚಲದ ಮೇಲೆ ವೃಷಭದೇವನ ಮಂದಿರವನ್ನು ನಿರ್ಮಿಸಿದನು. ವಿಮಲ ಶಾಹನು ಈ ಕಾರ್ಯಗಳನ್ನೆಲ್ಲ ತನ್ನ ದೊರೆಯಾದ ಭೀಮನ ಅನುಮತಿಯಿಂದಲೇ ಮಾಡಿರಬೇಕೆಂದು ಸ್ಪಷ್ಟವಾಗುತ್ತದೆ. ಅಲ್ಲದೆ ತನ್ನ ಕೃತಿಯಿಂದ ಸೋಮನಾಥಪುರ ಹಾಗೂ ಇತರ ಕಡೆಗಳಲ್ಲಿ ನಡೆದ ವಿಧ್ವಂಸಗಳಿಗೆ ಪ್ರತ್ಯುತ್ತರ ಕೊಟ್ಟಿರಬೇಕು. ಚಾಲುಕ್ಯ ರಾಜನಾದ ಸಿದ್ಧರಾಜ ಮತ್ತು ಅವನ ಉತ್ತರಾಧಿಕಾರಿಯಾದ ಕುಮಾರ ಪಾಲನ ಕಾಲದಲ್ಲಿ ಜೈನ ಧರ್ಮದ ಬಲವು ಮತ್ತೂ ಹೆಚ್ಚಾಗಿ ಬೆಳೆಯಿತು. ಪ್ರಸಿದ್ಧ ಜೈನಾಚಾರ್ಯನಾದ ಹೇಮಚಂದ್ರನ ಉಪದೇಶದಿಂದ ಕುಮಾರಪಾಲನು ಸ್ವತಃ ಜೈನ ಧರ್ಮವನ್ನು ಸ್ವೀಕರಿಸಿದನು. ಅಲ್ಲದೆ ಜೈನ ಸಂಸ್ಥೆಗಳನ್ನು ಸಮೃದ್ಧಗೊಳಿಸಿದನು. ಇದರ ಫಲಸ್ವರೂಪವಾಗಿ ಗುಜರಾಥ ಪ್ರದೇಶವು ಸದಾ ಕಾಲದಲ್ಲಿಯೂ ಧರ್ಮಾನುಯಾಯಿಗಳ ಸಂಖ್ಯೆ ಹಾಗೂ ಸಂಸ್ಥೆಗಳ ಸಮೃದ್ಧಿ ಇವುಗಳ ದೃಷ್ಟಿಯಿಂದ ಜೈನ ಧರ್ಮದ ಒಂದು ಸುದೃಢ ಕೇಂದ್ರ ಸ್ಥಾನವಾಯಿತು. ಈ ಮಹಾನ್ ಕಾರ್ಯವು

ಯಾವ ಧಾರ್ಮಿಕ ದುರಭಿಮಾನದಿಂದಲೂ ಆದುದಲ್ಲ. ಆದರೆ ನಾನಾ ಧರ್ಮಗಳ ವಿಷಯದಲ್ಲಿ ಸದ್ಭಾವನೆ ಹಾಗೂ ಸಾಮಂಜಸ ಬುದ್ಧಿಯಿಂದ ಇದೆಲ್ಲವನ್ನೂ ಮಾಡಲಾಯಿತು. ಇದೇ ಪ್ರಣಾಲಿಯು ಜೈನ ಧರ್ಮದ ಪ್ರಾಣವೆನಿಸಿ ಮುಂದೆ ಸಾಗಿ ಬಂದಿದೆ. ಹೇಮಚಂದ್ರಾಚಾರ್ಯನು ತನ್ನ ಉಪದೇಶ ಹಾಗೂ ಕಾರ್ಯಗಳಲ್ಲಿ ಈ ದೃಷ್ಟಿಯನ್ನೇ ಸಂಪೂರ್ಣವಾಗಿ ಅನುಸರಿಸಿದ್ದಾನೆ. ಧರ್ಮದ ಅವಿಚ್ಛಿನ್ನ ಪರಂಪರೆ ಹಾಗೂ ಅದರ ಅನುಯಾಯಿಗಳ ಸಮೃದ್ಧಿಯ ಫಲಸ್ವರೂಪವಾಗಿ ಕ್ರಿ. ಶ. ೧೨೩೦ ರಲ್ಲಿ ಸೋಮಸಿಂಹ ರಾಜನ ಆಳಿಕೆಯಲ್ಲಿ, ಪೋರವಾಡ ವಂಶದ ಶ್ರೇಷ್ಠಿ ತೇಜಪಾಲನು ಆಬೂಗಿರಿಯ ಮೇಲೆ ಆ ಆದಿನಾಥ ಮಂದಿರದ ಸಮೀಪದಲ್ಲಿಯೇ ನೇಮಿನಾಥ ಮಂದಿರವನ್ನು ನಿರ್ಮಿಸಿದನು. ಈ ಮಂದಿರವೂ ತನ್ನ ಶಿಲ್ಪ ಕಲೆಯಲ್ಲಿ ಕೇವಲ ಮೊದಲನೆಯ ಮಂದಿರಕ್ಕೆ ಹೋಲುವಂತಿದೆ. ಹನ್ನೆರಡು ಹದಿಮೂರನೆಯ ಶತಮಾನಗಳಲ್ಲಿ ಆಬೂ ಪರ್ವತದ ಮೇಲೆ ಇನ್ನೂ ಕೆಲವು ಜಿನಮಂದಿರಗಳು ನಿರ್ಮಾಣವಾದುವು. ಇದರಿಂದ ಈ ಸ್ಥಾನದ ಹೆಸರು ದೇಲವಾಡಾ (ದೇವಲವಾಡಾ) ಅರ್ಥಾತ್ ದೇವರ ನಗರವೆಂದು ಪ್ರಸಿದ್ಧವಾಯಿತು. ಆಬೂಗಿರಿಯನ್ನುಳಿದು ಕಾಠೇವಾಡದ ಶತ್ರುಂಜಯ ಮತ್ತು ಗಿರಿನಾರ ತೀರ್ಥ ಕ್ಷೇತ್ರಗಳ ಕಡೆಗೂ ಹಲವು ಜನ ರಾಜರ ಹಾಗೂ ಶ್ರೇಷ್ಠಿಗಳ ದೃಷ್ಟಿಯು ಹರಿಯಿತು. ಅದರ ಪರಿಣಾಮವಾಗಿ ಅಲ್ಲಿಯ ಶಿಖರಗಳೂ ಅನೇಕ ಸುಂದರವೂ ಭವ್ಯವೂ ಆದ ಜಿನ ಮಂದಿರಗಳಿಂದ ಅಲಂಕೃತಗೊಂಡುವು. ಖಂಬಾಯತದ ಚಿಂತಾಮಣಿ ಪಾರ್ಶ್ವನಾಥ ಮಂದಿರವು ಕ್ರಿ.ಶ. ೧೧೦೮ ರಲ್ಲಿ ಕಟ್ಟಲ್ಪಟ್ಟಿತ್ತು. ಆದರ ಜೀರ್ಣೋದ್ಧಾರವನ್ನು ಕ್ರಿ.ಶ. ೧೨೯೫ ರಲ್ಲಿ ಮಾಡಲಾಯಿತು. ಅಲ್ಲಿ ದೊರೆತ ಲೇಖನಗಳಿಂದ ಅವು ಕಾಲ ಕಾಲಕ್ಕೆ ಮಾಳವಾ, ಸಪಾದಲಕ್ಷ ಹಾಗೂ ಚಿತ್ರಕೂಟದ ಅನೇಕ ಧರ್ಮಾನುಯಾಯಿಗಳ ವಿಪುಲ ದಾನಗಳಿಂದ ಸಮೃದ್ಧಗೊಂಡವೆಂದು ತಿಳಿಯುತ್ತದೆ.

## ಜೈನ ಸಂಘದ ಉತ್ತರ ಕಾಲೀನ ಪಂಥ ಭೇದ :—

ಜೈನ ಸಂಘದಲ್ಲಿ ವಿವಿಧ ಕಾಲದಲ್ಲಿ ಉತ್ಪನ್ನವಾದ ಭೇದೋಪಭೇದ, ಸಂಪ್ರದಾಯ, ಗಣ-ಗಚ್ಛಾದಿಗಳ ವಿವರವನ್ನು ಮೇಲೆ ವರ್ಣಿಸಲಾಗಿದೆ. ಆದರೆ ಇವುಗಳಿಂದ ಜೈನ ಮಾನ್ಯತೆಗಳಲ್ಲಿಯೂ ಮುನಿ ಆಚಾರದಲ್ಲಿಯೂ ಏನೂ ವಿಶೇಷ ಪರಿವರ್ತನೆಯಾಯಿತೆಂದು ಕಂಡುಬರುವುದಿಲ್ಲ. ಕೇವಲ ದಿಗಂಬರ ಶ್ವೇತಾಂಬರ ಸಂಪ್ರದಾಯ ಭೇದವು ವಿಕ್ರಮ ಶಕದ ಎರಡನೆಯ ಶತಮಾನದ ಸುಮಾರಿನಲ್ಲಿ ಉತ್ಪನ್ನವಾಯಿತು. ಅದರಿಂದ ಮುನಿಗಳ ಆಚಾರದ ಮೇಲೆ ಕ್ರಮದಿಂದ ಗಂಭೀರವಾದ ಪರಿಣಾಮವಾಯಿತು. ಶ್ವೇತಾಂಬರ ಸಂಪ್ರದಾಯದಲ್ಲಿ ಮುನಿಗಳಷ್ಟೇ ವಸ್ತ್ರಧಾರಣ ಮಾಡುವ ಸಂಗತಿಯು ಹೆಚ್ಚಲಿಲ್ಲ; ತೀರ್ಥಂಕರರ ಮೂರ್ತಿಗಳ ಮೇಲೆಯೂ ಸಹ ಕೌಪೀನದ ಚಿಹ್ನವನ್ನು ಕೆತ್ತುವ ಪರಿಪಾಠವು ಕ್ರಮದಿಂದ ಬೆಳೆದು ಬಂತು. ಆದರಂತೆಯೇ ಮೂರ್ತಿಗಳ ಕಣ್ಣು, ಶರೀರ, ಮುಕುಟ ಮೊದಲಾದವುಗಳನ್ನು ಅಲಂಕಾರಗೈಯತೊಡಗಿದರು. ಈ ಕಾರಣ

ದಿಂದ ದಿಗಂಬರ ಮತ್ತು ಶ್ವೇತಾಂಬರ ಮಂದಿರ ಹಾಗೂ ಮೂರ್ತಿಗಳು ಮೊದಲು ಒಂದೇಯಾಗಿದ್ದಂಥವು ಮುಂದಿನ ಕಾಲದಲ್ಲಿ ಭಿನ್ನ ಭಿನ್ನವಾಗತೊಡಗಿದುವು. ಈ ಪ್ರವೃತ್ತಿಯು ಏಳು ಎಂಟನೆಯ ಶತಮಾನಗಳ ಪೂರ್ವದಲ್ಲಿ ಕಂಡು ಬರುವುದಿಲ್ಲ. ಇನ್ನೊಂದು ವಿಧದಲ್ಲಿ ಮುನಿ ಸಂಘದಲ್ಲಿ ಭೇದವು ಎರಡೂ ಸಂಪ್ರದಾಯಗಳಲ್ಲಿ ಉತ್ಪನ್ನವಾಯಿತು. ಜೈನ ಮುನಿಗಳು ಪ್ರಾರಂಭಕಾಲದಿಂದಲೂ ವರ್ಷಾ ಋತುವಿನ ನಾಲ್ಕು ತಿಂಗಳನ್ನು ಉಳಿದು ಅನ್ಯ ಕಾಲದಲ್ಲಿ ಒಂದು ಸ್ಥಾನದಲ್ಲಿ ಪರಿಮಿತ ಕಾಲಾವಧಿ ಯನ್ನುಳಿದು ಹೆಚ್ಚುಕಾಲ ತಂಗುತ್ತಿರಲಿಲ್ಲ, ಸದಾ ವಿಹರಿಸುತ್ತಲೆ ಇರುತ್ತಿದ್ದರು. ಅವರು ಪಟ್ಟಣಗಳಲ್ಲಿ ಆಹಾರ ಮತ್ತು ಧರ್ಮೋಪದೇಶಗಳಿಗೆ ಮಾತ್ರ ಆಗಮಿಸುತ್ತಿದ್ದರು. ಉಳಿದ ವೇಳೆಯಲ್ಲಿ ಅವರು ವನ, ಉಪವನಗಳಲ್ಲಿಯೇ ಇರುತ್ತಿದ್ದರು. ಆದರೆ ನಾವ ಕಾಶವಾಗಿ ಐದು, ಆರನೆಯ ಶತಮಾನಗಳ ತರುವಾಯ ಕೆಲವೊಂದು ಸಾಧುಗಳು ಚೈತ್ಯಾಲಯಗಳಲ್ಲಿ ಸ್ಥಿರವಾಗಿ ವಾಸಿಸತೊಡಗಿದರು. ಇದರಿಂದ ಶ್ವೇತಾಂಬರ ಸಮಾಜ ದಲ್ಲಿ ವನವಾಸಿ ಹಾಗೂ ಚೈತ್ಯವಾಸಿ ಮುನಿ ಸಂಪ್ರದಾಯಗಳು ಉಂಟಾದುವು. ದಿಗಂಬರ ಸಂಪ್ರದಾಯದಲ್ಲಿಯೂ ಸಹ ಇದೇ ಕಾಲದಿಂದ ಕೆಲವು ಮುನಿಗಳು ಚೈತ್ಯ ಗಳಲ್ಲಿ ಇರಹತ್ತಿದರು. ಈ ಪ್ರವೃತ್ತಿಯು ಪ್ರಾರಂಭದಲ್ಲಿ ಸಿದ್ಧಾಂತದ ಪಠನ–ಪಾಠನ ಮತ್ತು ಸಾಹಿತ್ಯ ಸೃಜನಗಳಿಗೆ ಅನುಕೂಲವಾಗಲೆಂದು ಪ್ರಾರಂಭವಾಯಿತೆಂದು ಕಂಡು ಬರುತ್ತದೆ. ಮುಂದೆ ಅದು ಮೆಲ್ಲ–ಮೆಲ್ಲನೆ ಸಾಧುವರ್ಗದ ಸ್ಥಾಯಿ ಜೀವನ ಪದ್ಧತಿ ಯಾಗಿಹೋಯಿತು ಈ ಕಾರಣದಿಂದ ಅನೇಕ ಜಿನಮಂದಿರಗಳಲ್ಲಿ ಭಟ್ಟಾರಕರ ಗದ್ದು ಗೆಗಳೂ ಮಠಗಳೂ ಸ್ಥಾಪಿತವಾದುವು ಈ ಪ್ರಕಾರ ಭಟ್ಟಾರಕರ ಆಚಾರದಲ್ಲಿ ಸ್ವಲ್ಪ ಶೈಥಿಲ್ಯ ಹಾಗೂ ಪರಿಗ್ರಹಗಳು ಅನಿವಾರ್ಯವಾಗಿ ಸೇರಿಕೊಂಡವು. ಆದರೆ ಇನ್ನೊಂದು ದೃಷ್ಟಿಯಿಂದ ಇದರಿಂದ ಲಾಭವೂ ಆಗದಿರಲಿಲ್ಲ. ಭಟ್ಟಾರಕರ ಪದ ಹಾಗೂ ಮಠಗ ಳಿರುವಲ್ಲಿ ವಿಶಾಲ ಶಾಸ್ತ್ರ ಭಂಡಾರಗಳು ಸ್ಥಾಪಿತವಾದುವು, ಅವು ವಿದ್ಯಾಭ್ಯಾಸದ ಸುವ್ಯವಸ್ಥೆ ಕೇಂದ್ರಗಳೂ ಆದುವು. ಒಂಬತ್ತನೆಯ ಹತ್ತನೆಯ ಶತಮಾನಗಳ ಪೂರ್ವ ದಲ್ಲಿ ನಿರ್ಮಾಣಗೊಂಡ ಜೈನ ಸಾಹಿತ್ಯವು ಇಂಥ ವಿದ್ಯಾಕೇಂದ್ರಗಳಲ್ಲಿಯೇ ಬಹುತರ ಆಯಿತೆಂಬುದೂ ಕಂಡುಬರುತ್ತದೆ. ಈ ಉಪಯುಕ್ತತೆಯ ಕಾರಣದಿಂದಾಗಿ ಭಟ್ಟಾ ರಕರ ಗದ್ದುಗೆಗಳು ಕಾಲಕ್ರಮದಿಂದ ಎಲ್ಲ ನಗರಗಳಲ್ಲಿಯೂ ಸ್ಥಾಪಿತವಾದುವು. ಮಂದಿ ರಗಳಲ್ಲಿ ಒಳ್ಳೆಯ ಶಾಸ್ತ್ರ ಭಾಂಡಾರಗಳೂ ಇರಹತ್ತಿದುವು. ಇಲ್ಲಿಂದಲೇ ಪ್ರಾಚೀನ ಶಾಸ್ತ್ರಗಳ ಪುನರ್ ಲಿಪಿ, ಪ್ರತಿಲಿಪಿಗಳು ರೂಪುಗೊಂಡು, ಅವುಗಳನ್ನು ವಿವಿಧ ಕೇಂದ್ರ ಗಳಿಗೆ ಕಳಿಸುವುದೂ, ಅಲ್ಲಿಂದ ತರಿಸಿಕೊಳ್ಳುವುದೂ ಪ್ರಾರಂಭವಾಯಿತು. ಈ ಪ್ರಣಾ ಲಿಯು, ಗ್ರಂಥಗಳು ಮುದ್ರಣ ಯಂತ್ರಗಳಿಂದ ಮುದ್ರಿತಗೊಳ್ಳುವ ಪೂರ್ವಕಾಲದ ವರೆಗೂ ಅವಿಚ್ಛಿನ್ನವಾಗಿ ನಡೆದು ಬಂತು. ಜಯಪುರ, ಜೈಸಲಮೇರ, ಈಡರ, ಕಾರಂಜಾ, ಮೂಡಬಿದ್ರಿ, ಕೊಲ್ಹಾಪುರ ಮೊದಲಾದ ಸ್ಥಾನಗಳಲ್ಲಿ ಇಂಥ ಶಾಸ್ತ್ರ ಭಾಂಡಾರದ ಪರಂಪರೆಯು ಇಂದಿನ ವರೆಗೂ ಸ್ಥಿರವಾಗಿದೆ.

೧೫ನೆಯ, ೧೬ನೆಯ ಶತಮಾನಗಳಲ್ಲಿ ಜೈನ ಸಂಪ್ರದಾಯಗಳಲ್ಲಿ ಒಂದು ಮಹಾನ್ ಕ್ರಾಂತಿಯು ಉತ್ಪನ್ನವಾಯಿತು. ಶ್ವೇತಾಂಬರ ಸಂಪ್ರದಾಯದಲ್ಲಿ ಲೋಕಾಶಾಹನಿಂದ ಮೂರ್ತಿಪೂಜಾ ವಿರೋಧಿಯಾದ ಉಪದೇಶವು ಆರಂಭವಾಯಿತು. ಅದರ ಫಲ ಸ್ವರೂಪವೆಂದು ಸ್ಥಾನಕವಾಸೀ ಸಂಪ್ರದಾಯದ ಸ್ಥಾಪನೆಯಾಯಿತು. ಈ ಸಂಪ್ರದಾಯಕ್ಕೆ 'ಢೂಂಢಿಯಾ' ಎಂಬ ಹೆಸರೂ ಪ್ರಚಾರದಲ್ಲಿದೆ. ಈ ಸಂಪ್ರದಾಯದಲ್ಲಿ ಮೂರ್ತಿ ಪೂಜೆಯನ್ನು ನಿಷೇಧಿಸಲಾಗಿದೆ. ಅವರ ಮಂದಿರಗಳಿಲ್ಲ; ಆದರೆ ಸ್ಥಾನಗಳಿವೆ. ಅವುಗಳಲ್ಲಿ ಮೂರ್ತಿಗಳಿಲ್ಲ, ಆಗಮಗಳ ಪ್ರತಿಷ್ಠೆ ಇರುತ್ತದೆ. ಶ್ವೇತಾಂಬರ ಸಂಪ್ರದಾಯದ ೪೫ ಆಗಮಗಳಲ್ಲಿ ಹನ್ನೆರಡು–ಹದಿನಾಲ್ಕು ಆಗಮಗಳನ್ನು–ಇವುಗಳಲ್ಲಿ ಮೂರ್ತಿ ಪೂಜೆಯ ವಿಧಾನವು ಇದೆಯೆಂದು-ಇವರು ಸ್ವೀಕಾರ ಮಾಡುವುದಿಲ್ಲ. ಇದೇ ಸಂಪ್ರದಾಯದಿಂದಲೇ ೧೮ನೆಯ ಶತಮಾನದಲ್ಲಿ ಆಚಾರ್ಯ ಭಿಕ್ಷುವಿನಿಂದ 'ತೇರಾಪಂಥ'ದ ಸ್ಥಾಪನೆಯಾಯಿತು. ಈಗ ಈ ಸಂಪ್ರದಾಯದ ನಾಯಕನು ತುಲಸೀ ಗಣಿ ಎಂಬವರಾಗಿದ್ದಾರೆ. ಅವರು ಅಣುವ್ರತ ಆಂದೋಲನವನ್ನು ಪ್ರವರ್ತಿಸಿದ್ದಾರೆ. ದಿಗಂಬರ ಸಂಪ್ರದಾಯದಲ್ಲಿಯೂ ೧೬ನೆಯ ಶತಮಾನದಲ್ಲಿ ತಾರಣ ಸ್ವಾಮಿಯಿಂದ ಮೂರ್ತಿ ಪೂಜೆಯನ್ನು ನಿಷೇಧಿಸುವ ಪಂಥದ ಸ್ಥಾಪನೆಯಾಯಿತು, ಇದಕ್ಕೆ ತಾರಣ ಪಂಥವೆಂದು ಹೆಸರಿದೆ. ಈ ಪಂಥದ ಅನುಯಾಯಿಗಳು ವಿಶೇಷವಾಗಿ ಮಧ್ಯಪ್ರದೇಶದಲ್ಲಿ ನೋಡಲು ಸಿಕ್ಕುತ್ತಾರೆ. ಈ ದಿಗಂಬರ-ಶ್ವೇತಾಂಬರ ಸಂಪ್ರದಾಯ ಭೇದದ ಪರಿಣಾಮವು ಜೈನ ಗೃಹಸ್ಥ ಸಮಾಜದ ಮೇಲೆಯೂ ಆಯಿತು. ಅದರಿಂದ ಜೈನಧರ್ಮದ ಅನುಯಾಯಿಗಳು ಈ ಪಂಥಗಳಲ್ಲಿ ವಿಭಜಿತಗೊಂಡಿದ್ದಾರೆ. ಈ ಕಾಲದಲ್ಲಿ ಭಾರತವರ್ಷದಲ್ಲಿ ಜೈನಧರ್ಮಾನುಯಾಯಿಗಳ ಸಂಖ್ಯೆಯು, ಹಿಂದಿನ ಭಾರತೀಯ ಜನಗಣನೆಗನುಸರಿಸಿ, ಸುಮಾರು ಇಪ್ಪತ್ತು ಲಕ್ಷದಷ್ಟು ಇದೆ.

---

ವ್ಯಾಖ್ಯಾನ—೨

# ಜೈನ ಸಾಹಿತ್ಯ

**ಸಾಹಿತ್ಯದ ದ್ರವ್ಯಾತ್ಮಕ ಮತ್ತು ಭಾವಾತ್ಮಕ ಸ್ವರೂಪ :—**

ಭಾರತದ ಪ್ರಾಚೀನ ಸಾಹಿತ್ಯವು ಮುಖ್ಯವಾಗಿ ಧಾರ್ಮಿಕ ಭಾವನೆಗಳಿಂದ ಪ್ರೇರಿತವೂ ಪ್ರಭಾವಿತವೂ ಆದುದು ಕಂಡುಬರುತ್ತದೆ. ಇಲ್ಲಿಯ ಪ್ರಾಚೀನತಮ ಸಾಹಿತ್ಯವು ಋಗ್ವೇದ ಮೊದಲಾದ ವೇದಗಳ ರೂಪದಲ್ಲಿದೆ. ಅವುಗಳಲ್ಲಿ ಪ್ರಕೃತಿಯ ಶಕ್ತಿಗಳಾದ ಅಗ್ನಿ, ವಾಯು, ವರುಣ (ಜಲ), ಮಿತ್ರ (ಸೂರ್ಯ), ದ್ಯಾವಾ–ಪೃಥ್ವಿ (ಆಕಾಶ ಮತ್ತು ಭೂಮಿ), ಉಷಃ (ಪ್ರಾತಃ) ಮೊದಲಾದವುಗಳನ್ನು ದೇವತೆಗಳೆಂದು ಮನ್ನಿಸಿ ಅವುಗಳ ವಂದನೆ ಮತ್ತು ಪ್ರಾರ್ಥನೆಗಳನ್ನು ಸೂಕ್ತ ಮತ್ತು ಋಚೆಗಳ ರೂಪ ದಿಂದ ಮಾಡಲಾಗಿದೆ. ವೇದಗಳ ತರುವಾಯ ರಚಿತವಾದ ಬ್ರಾಹ್ಮಣ ಗ್ರಂಥಗಳಲ್ಲಿ ಅದೇ ವೈದಿಕ ದೇವತೆಗಳನ್ನು ಮಂತ್ರಗಳಿಂದ ಆಹ್ವಾನಿಸಿ, ಹೋಮಾದಿ ಸಹಿತ ಪೂಜೆ ಅರ್ಚನೆಗಳ ವಿಧಾನಗಳನ್ನು ವಿವರಿಸಲಾಗಿದೆ. ಇವುಗಳಿಗೆ ಉದಾಹರಣೆಗಳೆಂದು ಅವು ಗಳಲ್ಲಿ ಯಜ್ಞಗಳನ್ನು ಮಾಡಿಸುವ ರಾಜರೇ ಮೊದಲಾದ ಮಹಾಪುರುಷರ ಹಾಗೂ ಯಜ್ಞವನ್ನು ಮಾಡುವ ವಿದ್ವಾನ್ ಬ್ರಾಹ್ಮಣರ ಅನೇಕ ಆಖ್ಯಾನಗಳನ್ನು ಹೇಳಿದೆ. ಸೂತ್ರ ಗ್ರಂಥಗಳ ಒಂದು ಶಾಖೆಯು ಶ್ರೌತ ಸೂತ್ರವೆಂದಿದೆ. ಅದರಲ್ಲಿ ಸೂತ್ರ ರೂಪ ದಿಂದ ಯಜ್ಞ ವಿಧಿಗಳ ನಿಯಮವನ್ನು ಪ್ರತಿಪಾದಿಸಲಾಗಿದೆ. ಇನ್ನೊಂದು ಶಾಖೆ ಯಾದ ಗೃಹ್ಯಸೂತ್ರದಲ್ಲಿ ಗೃಹಸ್ಥರ ಮನೆಗಳಲ್ಲಿ ನಡೆಯುವ ಗರ್ಭಾಧಾನ, ಜನ್ಮ, ಉಪನಯನ, ವಿವಾಹ ಮೊದಲಾದ ಪ್ರಸಂಗಗಳಲ್ಲಿ ಮಾಡುವಂಥ ಧಾರ್ಮಿಕ ವಿಧಿ ಹಾಗೂ ಸಂಸ್ಕಾರಗಳ ನಿರೂಪಣೆಯನ್ನು ಮಾಡಲಾಗಿದೆ. ಈ ಪ್ರಕಾರ ಸಮಗ್ರ ವೈದಿಕ ಸಾಹಿತ್ಯವು ಪೂರ್ಣವಾಗಿ ಧಾರ್ಮಿಕ ರೂಪದಲ್ಲಿದ್ದುದು ಕಂಡುಬರುತ್ತದೆ.

ಇದೇ ವೈದಿಕ ಸಾಹಿತ್ಯದ ಒಂದಂಗವೆನಿಸುವ ಆರಣ್ಯಕ ಮತ್ತು ಉಪನಿಷತ್ತು ಎಂಬ ಹೆಸರಿನ ಗ್ರಂಥಗಳಿವೆ. ಇವುಗಳಲ್ಲಿ ನಮಗೆ ಭಾರತದ ಪ್ರಾಚೀನತಮ ದರ್ಶನ-ಶಾಸ್ತ್ರಗಳ ತತ್ವಚಿಂತನೆಯು ಲಭಿಸುತ್ತದೆ. ಅದು ಹೀಗೆ :—

> ಕೋ ಅದ್ಧಾ ವೇದ ಕ ಇಹ ಪ್ರವೋಚತ್ ।
> ಕುತ ಅಜಾತಾ ಕುತ ಇಯಂ ವಿಸೃಷ್ಟಿಃ ॥ ಋಗ್ವೇದ ೧೦, ೧೨೯, ೬.

ಅರ್ಥಾತ್ ಈ ಸೃಷ್ಟಿಯು ಎಲ್ಲಿಂದ ಉತ್ಪನ್ನವಾಯಿತು? ಇದನ್ನು ಯಾರು ಚೆನ್ನಾಗಿ ತಿಳಿದಿದ್ದಾರೆ? ಯಾರಿಗೆ ಇದನ್ನು ಹೇಳಲು ಸಾಧ್ಯವಿದೆ? ಆದರೆ ಈ ವಿಚಾರ ಧಾರೆಯು ಅವಿಚ್ಛಿನ್ನವಾಗಿ ಬೆಳೆದು ಬಂದುದು ಕಂಡು ಬರುವುದಿಲ್ಲ. ಅಲ್ಲದೆ ಈ ಪ್ರಶ್ನೆ

ಗಳಿಗೆ ಒಂದು ವ್ಯವಸ್ಥಿತ ರೀತಿಯಿಂದ ಸಮಾಧಾನವನ್ನು ಕಂಡುಕೊಳ್ಳುವ ಪ್ರಯತ್ನವು ನಡೆದದ್ದು ಕಂಡು ಬರುವುದಿಲ್ಲ. ಈ ಪ್ರಕಾರದ ಚಿಂತನದ ಪ್ರಯತ್ನವು ಆರಣ್ಯಕಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ ಬಹಳಷ್ಟು ನಡೆದದ್ದು ತಿಳಿಯುತ್ತದೆ. ಇಂಥ ಗ್ರಂಥ ರಚನೆಗಳ ಪ್ರಾರಂಭವು ಬ್ರಾಹ್ಮಣಕಾಲದಲ್ಲಿ ಅರ್ಥಾತ್ ಕ್ರಿ.ಶ. ಪೂರ್ವ ೮ ನೆಯ ಶತಮಾನದ ಸುಮಾರಿನಲ್ಲಿ ಆಯಿತು. ಆ ಮೇಲೆ ಸಾವಿರಾರು ವರ್ಷಗಳ ವರೆಗೆ ಪ್ರಚಲಿತವಾಗಿ ನಿರಂತರ ಉಳಿಯಿತು. ಇದರ ಫಲ ಸ್ವರೂಪವಾಗಿ ಸಂಸ್ಕೃತ ಸಾಹಿತ್ಯದಲ್ಲಿ ನೂರಾರು ಉಪನಿಷದ್ ಗ್ರಂಥಗಳು ಹುಟ್ಟಿಕೊಂಡವು. ಈ ಗ್ರಂಥಗಳು ತಮ್ಮ ವಿಷಯ ಮತ್ತು ಭಾವನೆಗಳ ದೃಷ್ಟಿಯಿಂದಷ್ಟೇ ಅಲ್ಲ, ಆದರೆ ತಮ್ಮ ಐತಿಹಾಸಿಕ ಮತ್ತು ಭೌಗೋಲಿಕ ಪರಂಪರೆಯಿಂದಲೂ ಉಳಿದ ವೈದಿಕ ಸಾಹಿತ್ಯದಿಂದ ತಮ್ಮ ವಿಶೇಷತೆಯನ್ನು ಕಾಯ್ದುಕೊಂಡಿವೆ. ವೇದಗಳಲ್ಲಿ ದೇವ-ದೇವತೆಗಳ ಆಹ್ವಾನ, ಅವುಗಳ ಪೂಜೆ-ಅರ್ಚೆ ಹಾಗೂ ಸಾಂಸಾರಿಕ ಸುಖ ಮತ್ತು ಅಭ್ಯುದಯಗಳಿಗೆ ಸಂಬಂಧಿಸಿದ ವರಗಳನ್ನು ಬೇಡುವುದು ಇವೇ ಪ್ರಮುಖವಾಗಿವೆ. ಆದರೆ ಉಪನಿಷದುಗಳಲ್ಲಿ ಈ ಸಮಸ್ತ ವಿಷಯಗಳ ಬಗ್ಗೆ ಕಠೋರ ಉಪೇಕ್ಷೆಯಿದೆ. ಅದರೊಡನೆಯೇ ತಾತ್ವಿಕ ಹಾಗೂ ಆಧ್ಯಾತ್ಮಿಕ ಚಿಂತನೆಗೆ ಪ್ರಧಾನತೆಯು ದೊರತಿದೆ ಈ ಚಿಂತನದ ಪ್ರಾರಂಭವು, ವೈದಿಕ ಸಾಹಿತ್ಯದಲ್ಲಿಧಾರ್ಮಿಕ ದೃಷ್ಟಿಯಿಂದ ಪವಿತ್ರವೆಂದು ಮನ್ನಿಸಲಾಗದ ಪೂರ್ವ ಪ್ರದೇಶದಲ್ಲಿ ಆಯಿತು. ವೇದ ಪ್ರಸಿದ್ಧ ಪಂಚನದ ಪ್ರದೇಶವಾಗಲಿ, ಗಂಗಾ, ಯಮುನಾ ನದಿಗಳಿಂದ ಪವಿತ್ರವೆನಿಸುವ ಮಧ್ಯಪ್ರದೇಶವಾಗಲಿ, ಇದರ ಭೌಗೋಲಿಕ ಕೇಂದ್ರವಾಗಿಲ್ಲ. ಅಧ್ಯಾತ್ಮಿಕದ ಆದಿ ಚಿಂತಕರು ವೈದಿಕ ಋಷಿ ಮತ್ತು ಬ್ರಾಹ್ಮಣ ಪುರೋಹಿತರಲ್ಲ, ಜನಕನಂಥ ಕ್ಷತ್ರಿಯ ರಾಜರ್ಷಿಗಳಾಗಿದ್ದರು. ಜನಕನ ರಾಜಸಭೆಯಲ್ಲಿಯೇ ಈ ಅಧ್ಯಾತ್ಮಿಕ ಚಿಂತನ ಧಾರೆಯು ಪುಷ್ಟಗೊಂಡುದು ಕಂಡು ಬರುತ್ತದೆ.

ಜೈನ ಧರ್ಮವು ಮೂಲತಃ ಆಧ್ಯಾತ್ಮಿಕವಾಗಿದೆ. ಪ್ರಾರಂಭದಿಂದಲೂ ಅದರ ಸಂಬಂಧವು ಕೋಸಲ, ಕಾಶಿ, ವಿದೇಹ, ಮೊದಲಾದ ಪೂರ್ವ ಪ್ರದೇಶದ ಕ್ಷತ್ರಿಯ ವಂಶದ ರಾಜರುಗಳೊಡನೆ ಇದ್ದುದು ಕಂಡು ಬರುತ್ತದೆ. ಇದೇ ಪೂರ್ವ ಪ್ರದೇಶದಲ್ಲಿಯೇ ಜೈನರ ಹಲವು ಜಿನ ತೀರ್ಥಂಕರರು ಜನಿಸಿದರು. ಅಲ್ಲಿಯೇ ತಪಸ್ಸು ಮಾಡಿದರು, ಜ್ಞಾನ ಸಂಪಾದಿಸಿದರು, ಮತ್ತು ತಮ್ಮ ಉಪದೇಶದಿಂದ, ಜೈನ ಧರ್ಮವೆಂಬ ಹೆಸರಿನಿಂದ ಇಂದಿಗೂ ಸುಪ್ರವಾಹಿತವಾಗಿರುವ ಜ್ಞಾನ-ಗಂಗೆಯನ್ನು ಹರಿಯಿಸಿದರು. ಈ ಎಲ್ಲ ತೀರ್ಥಂಕರರೂ ಕ್ಷತ್ರಿಯ ರಾಜವಂಶದವರಾಗಿದ್ದರು. ಇವರಲ್ಲಿ ಜನಕರಾಜನ ಪೂರ್ವಜನೇ ಆಗಿದ್ದ ನಮಿ ರಾಜನು ಜೈನ-ಧರ್ಮದ ೨೧ ನೆಯ ತೀರ್ಥಂಕರನಾಗಿದ್ದನೆಂಬ ಸಂಗತಿಯು ವಿಶೇಷ ಗಮನಾರ್ಹವಾಗಿದೆ. ಜನಕನ ವಂಶದಲ್ಲಿ ಯಾವ ಆಧ್ಯಾತ್ಮಿಕ ಚಿಂತನದ ಧಾರೆಯು ಕಂಡುಬರುತ್ತದೆಯೋ ಅದು ಜೈನ ಧರ್ಮದ ಮೂಲಭೂತ ಅಂಗವಾಗಿತ್ತೆಂದು ಹೇಳುವುದು ಆಶ್ಚರ್ಯದ ಮಾತಲ್ಲ. ಉಪನಿಷತ್‌ಕಾರನು ಕೂಗಿ ಕೂಗಿ ಹೇಳುವುದು ಹೀಗೆ :—

ಏಷ ಸರ್ವೇಷು ಭೂತೇಷು ಗುಢೋತ್ಮಾ ನ ಪ್ರಕಾಶತೆ ।
ದೃಶ್ಯತೆ ತ್ವಗ್ರ್ಯಯಾ ಬುದ್ಧ್ಯಾ ಸುಕ್ಷ್ಮಯಾ ಸೂ ಕ್ಷ್ಮದರ್ಶಿಭಿ ॥
ಕಠೋಪನಿಷತ್ತು ೧.೩.೧೨.

* * * * *

ಹಂತ ತೇಽದಮಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಮ್ ।
ಯಥಾ ಚ ಮರಣಂ ಪ್ರಾಪ್ಯ ಆತ್ಮಾ ಭವತಿ ಗೌತಮ ॥
ಯೋನಿಮನ್ಯೆ ಪ್ರಪಶ್ಯಂತೆ ಶರೀರತ್ವಾಯ ದೇಹಿನಃ ।
ಸ್ಥಾಣುಮನ್ಯೇಽನುಸಂಯಂತಿ ಯಥಾಕರ್ಮ ಯಥಾಶ್ರುತಂ ॥ ಕಠೋ. ೨.೨ ೬-೭.

ಅರ್ಥಾತ್ ಪ್ರಾಣಿ ಮಾತ್ರದಲ್ಲಿ ಒಂದು ಅನಾದಿ ಅನಂತ ಸಜೀವ ತತ್ವವಿದೆ. ಅದು ಭೌತಿಕವಲ್ಲ. ಆ ಕಾರಣದಿಂದ ಅದು ಕಾಣುವುದಿಲ್ಲ. ಅದೇ ಆತ್ಮವಾಗಿದೆ. ಮರಣದ ತರುವಾಯ ಈ ಆತ್ಮವು ತನ್ನ ಕರ್ಮ ಮತ್ತು ಜ್ಞಾನದ ಅವಸ್ಥೆಗನುಸರಿಸಿ ವೃಕ್ಷ ಮೊದಲುಗೊಂಡು ಸಂಸಾರದ ವಿವಿಧ ಜೀವ-ಯೋನಿಗಳಲ್ಲಿ ಸುತ್ತುತ್ತಿರುತ್ತದೆ. ಅದು ತನ್ನ ಉತ್ತಮ ಚಾರಿತ್ರ ಮತ್ತು ಜ್ಞಾನಗಳಿಂದ ನಿರ್ವಾಣ ಪದವನ್ನು ಪಡೆಯುವವರೆಗೆ ಹೀಗೆಯೇ ಸಂಚರಿಸುತ್ತದೆ. ಉಪನಿಷತ್ತಿನಲ್ಲಿ ಈ ಉಪದೇಶವು ಗೌತಮನ ಹೆಸರನ್ನು ಹೇಳಿ, ಹೇಳಲಾಗುತ್ತದೆ. ಆಗ ನಮಗೆ ಜೈನ ಧರ್ಮದ ಅಂತಿಮ ತೀರ್ಥಂಕರನಾದ ಭಗವಾನ್ ಮಹಾವೀರನ ಆ ಉಪದೇಶಕನ ಸ್ಮರಣವಾಗದೆ ಇರದು. ಮಹಾವೀರನು ತನ್ನ ಪ್ರಧಾನ ಶಿಷ್ಯನಾದ ಇಂದ್ರಭೂತಿ ಗೌತಮನನ್ನು ಗೌತಮ ಎಂಬ ಹೆಸರಿನಿಂದಲೇ ಸಂಬೋಧಿಸಿ ಉಪದೇಶಿಸುತ್ತಿದ್ದನು. ಆ ಉಪದೇಶಗಳನ್ನು ಅದೇ ಗೌತಮನು ಹನ್ನೆರಡು ಅಂಗಗಳಲ್ಲಿ ನಿಬದ್ಧಗೊಳಿಸಿದನು. ಅವು ಪ್ರಾಚೀನತಮ ಜೈನ ಸಾಹಿತ್ಯವೆನಿಸಿವೆ. ದ್ವಾದಶಾಂಗ ಆಗಮ ಅಥವಾ ಜೈನ ಶ್ರುತಾಂಗ-ಎಂಬ ಹೆಸರಿನಿಂದ ಪ್ರಚಲಿತವಾಗಿವೆ. ಈಗಲೂ ಪ್ರಚಾರದಲ್ಲಿವೆ.

## ಮಹಾವೀರನ ಪೂರ್ವದ ಸಾಹಿತ್ಯ :—

ಈಗ ಮಹಾವೀರನ ಪೂರ್ವದಲ್ಲಿಯೂ ಏನಾದರೂ ಜೈನ ಸಾಹಿತ್ಯವಿತ್ತೇ ?— ಎಂಬ ಪ್ರಶ್ನೆಯು ಉದ್ಭವಿಸುತ್ತದೆ. ಇದಕ್ಕೆ ಉತ್ತರ ಹೌದು. ಮತ್ತು ಇಲ್ಲ 'ಎಂಬ ಎರಡೂ ಪ್ರಕಾರದಿಂದ ಕೊಡಲಾಗುತ್ತದೆ. ಸಾಹಿತ್ಯದಲ್ಲಿ ಎರಡು ತತ್ವಗಳನ್ನು ಸ್ವೀಕರಿಸಲಾಗುತ್ತಿದೆ. ಒಂದು ಅದರ ಶಾಬ್ದಿಕ ಮತ್ತು ರಚನಾತ್ಮಕ ಸ್ವರೂಪವಾಗಿದೆ. ಇನ್ನೊಂದು ಆರ್ಥಿಕ ಹಾಗೂ ವಿಚಾರಾತ್ಮಕ ಸ್ವರೂಪವಾಗಿದೆ. ಈ ಎರಡೂ ಸಂಗತಿಗಳಿಗೆ ಜೈನ ಪರಂಪರೆಯು ದ್ರವ್ಯಶ್ರುತ ಮತ್ತು ಭಾವಶ್ರುತವೆಂದು ಹೇಳುತ್ತದೆ. ದ್ರವ್ಯಶ್ರುತ ಅರ್ಥಾತ್ ಶಬ್ದಾತ್ಮಕತೆಯ ರೂಪದಿಂದ ಮಹಾವೀರನ ಪೂರ್ವಕಾಲದ ಯಾವ ಸಾಹಿತ್ಯವೂ ಉಪಲಬ್ಧವಿಲ್ಲ. ಆದರೆ ಭಾವಶ್ರುತದ ಅಪೇಕ್ಷೆಯಿಂದ ಜೈನ ಶ್ರುತಾಂಗಗಳಲ್ಲಿ ಕೆಲವು ರಚನೆಗಳನ್ನು ಮಹಾವೀರನ ಪೂರ್ವಕಾಲದಿಂದಲೂ ಶ್ರಮಣ

ಪರಂಪರೆಯಲ್ಲಿ ಪ್ರಚಲಿತವಿದ್ದವೆಂದು ಸ್ವೀಕರಿಸಲಾಗುತ್ತಿದೆ. ಅವುಗಳಿಗೇನೇ 'ಪೂರ್ವ' ಎಂದು ಹೇಳಲಾಗಿದೆ. ದ್ವಾದಶಾಂಗ ಆಗಮದ ಹನ್ನೆರಡನೆಯ ಅಂಗವು ದೃಷ್ಟಿವಾದ ವಾಗಿತ್ತು. ಈ ದೃಷ್ಟಿ ವಾದದ ಅಂತರ್ಗತವೆಂದು ಇಂಥ ಹದಿನಾಲ್ಕು ಪೂರ್ವಗಳನ್ನು ಉಲ್ಲೇಖಿಸಲಾಗಿದೆ. ಇವುಗಳಲ್ಲಿ ಮಹಾವೀರನ ಪೂರ್ವದ ಅನೇಕ ವಿಚಾರ ಧಾರೆಗಳೂ ಮತ–ಮತಾಂತರಗಳೂ ಜ್ಞಾನ-ವಿಜ್ಞಾನಗಳೂ ಮಹಾವೀರನ ಶಿಷ್ಯನಾದ ಗೌತಮ ನಿಂದ ಸಂಕಲನಗೊಂಡಿವೆ. ಈ ಹದಿನಾಲ್ಕು ಪೂರ್ವಗಳ ಹೆಸರುಗಳು ಈ ಪ್ರಕಾರ ಇವೆ —ಉತ್ಪಾದ ಪೂರ್ವ, ಅಗ್ರಾಯಣೀಯ, ವೀರ್ಯಾನುವಾದ, ಅಸ್ತಿನಾಸ್ತಿ ಪ್ರವಾದ, ಜ್ಞಾನಪ್ರವಾದ, ಸತ್ಯಪ್ರವಾದ, ಆತ್ಮಪ್ರವಾದ, ಕರ್ಮಪ್ರವಾದ, ಪ್ರತ್ಯಾಖ್ಯಾನ, ವಿದ್ಯಾನುವಾದ, ಕಲ್ಯಾಣವಾದ(ಶ್ವೇತಾಂಬರ ಪರಂಪರೆಗನುಸರಿಸಿ ಅಬಂಧ್ಯ), ಪ್ರಾಣಾ ವಾಯ, ಕ್ರಿಯಾವಿಶಾಲ ಮತ್ತು ಲೋಕಬಿಂದುಸಾರ. ಈ ಹೆಸರುಗಳಿಂದ ಅವುಗಳ ವಿಷಯವನ್ನೂ ಸಹ ಅನುಮಾನಿಸಲು ಬರುವಂತಿದೆ. ಮೊದಲನೆಯ ಪೂರ್ವವಾದ **ಉತ್ಪಾದ**ದಲ್ಲಿ ಜೀವ, ಕಾಲ, ಪುದ್‌ಗಲ ಮೊದಲಾದ ದ್ರವ್ಯಗಳ ಉತ್ಪತ್ತಿ, ವಿನಾಶ ಮತ್ತು ಧ್ರುವತೆಗಳ ವಿಚಾರವನ್ನು ಮಾಡಲಾಗಿತ್ತು. ದ್ವಿತೀಯ ಪೂರ್ವವಾದ **ಅಗ್ರಾಯಣೀಯ**ದಲ್ಲಿ ಮೇಲೆ ಹೇಳಿದ ಎಲ್ಲ ದ್ರವ್ಯಗಳ ಹಾಗೂ ಅವುಗಳ ವಿವಿಧ ಅವಸ್ಥೆಗಳ ಸಂಖ್ಯೆ, ಪರಿಮಾಣಗಳ ವಿಚಾರ ಮಾಡಲಾಗಿತ್ತು. ಮೂರನೆಯದಾದ **ವೀರ್ಯಾನುವಾದ** ಪೂರ್ವದಲ್ಲಿ ಆ ದ್ರವ್ಯಗಳ ಕ್ಷೇತ್ರಕಾಲಾದಿಗಳ ಅಪೇಕ್ಷೆಯಿಂದ ವೀರ್ಯದ–ಸಾಮರ್ಥ್ಯದ–ಪ್ರತಿವಾದನೆಯನ್ನು ಮಾಡಲಾಗಿದೆ. ನಾಲ್ಕನೆಯ ಪೂರ್ವ ವಾದ **ಅಸ್ತಿ–ನಾಸ್ತಿ–ಪ್ರವಾದ**ದಲ್ಲಿ ಲೌಕಿಕ ವಸ್ತುಗಳ ನಾನಾ ಅಪೇಕ್ಷೆಯಿಂದ ಅಸ್ತಿತ್ವ ನಾಸ್ತಿತ್ವಗಳ ವಿವೇಕವನ್ನು ವಿವರಿಸಲಾಗಿದೆ. ಐದನೆಯ ಪೂರ್ವವು **ಜ್ಞಾನ ಪ್ರವಾದ**ವಾಗಿದೆ. ಅದರಲ್ಲಿ ಮತಿಜ್ಞಾನವೇ ಮೊದಲಾದ ಜ್ಞಾನಗಳ ಭೇದ ಪ್ರಭೇದ ಗಳನ್ನು ವಿವೇಚಿಸಲಾಗಿತ್ತು. ಆರನೆಯ ಪೂರ್ವವಾದ **ಸತ್ಯಪ್ರವಾದ**ದಲ್ಲಿ ವಚನದ ಅಪೇಕ್ಷೆಯಿಂದ ಸತ್ಯಾಸತ್ಯ ವಿವೇಕವನ್ನೂ, ಮಾತನಾಡುವವರ ಮಾನಸಿಕ ಪರಿಸ್ಥಿತಿ ಯನ್ನೂ ಹಾಗೇಯೇ ಅಸತ್ಯದ ಸ್ವರೂಪವನ್ನೂ ವಿವೇಚಿಸಲಾಗಿತ್ತು. ಏಳನೆಯ ಪೂರ್ವವು **ಆತ್ಮಪ್ರವಾದವು**. ಇದರಲ್ಲಿ ಆತ್ಮನ ಸ್ವರೂಪ, ಅದರ ವ್ಯಾಪಕತೆ, ಜ್ಞಾತೃ ಭಾವ ಮತ್ತು ಭೋಕ್ತೃತ್ವಗಳ ಸಂಬಂಧದಲ್ಲಿ ವಿವರವಿತ್ತು. ಎಂಟನೆಯದು **ಕರ್ಮ ಪ್ರವಾದವು**. ಇದರಲ್ಲಿ ನಾನಾ ವಿಧದ ಕರ್ಮ ಪಕೃತಿಗಳ ಸ್ಥಿತಿಯನ್ನೂ ಅವುಗಳ ಶಕ್ತಿ, ಪರಿಣಾಮಾದಿಗಳನ್ನೂ ನಿರೂಪಿಸಲಾಗಿತ್ತು. ಒಂಭತ್ತನೆಯ ಪೂರ್ವವು **ಪ್ರತ್ಯಾಖ್ಯಾನವು**. ಇದರಲ್ಲಿ ಪರಿಗ್ರಹ-ತ್ಯಾಗ, ಉಪವಾಸಾದಿ ವಿಧಿಗಳು, ಮನ-ವಚನ–ಕಾರ್ಯ ಗಳ ವಿಶುದ್ಧಿ ಮೊದಲಾದ ಆಚಾರಕ್ಕೆ ಸಂಬಂಧಿಸಿದ ನಿಯಮಗಳನ್ನು ನಿರ್ಧರಿಸಲಾ ಗಿದೆ. ಹತ್ತನೆಯ ಪೂರ್ವವಾದ **ವಿದ್ಯಾನುವಾದ**ದಲ್ಲಿ ನಾನಾ ವಿದ್ಯೆಗಳು ಮತ್ತು ಉಪ ವಿದ್ಯೆಗಳ ಪ್ರರೂಪಣವಿತ್ತು. ಅದರಲ್ಲಿ ಅಂಗುಷ್ಟ, ಪ್ರಸೇನಾದಿ ಏಳುನೂರು ಅಲ್ಪ ವಿದ್ಯೆಗಳೂ ರೋಹಿಣಿಯೇ ಮೊಧಲಾದ ಐದುನೂರು ಮಹಾವಿದ್ಯೆಗಳೂ ಅಲ್ಲದೆ ಅಂತ

ರಿಕ್ಷ, ಭೌಮ, ಅಂಗ, ಸ್ವಪ್ನ, ಸ್ವರ, ಲಕ್ಷಣ, ವ್ಯಂಜನ, ಮತ್ತು ಛಿನ್ನ ಈ ಎಂಟ ಮಹಾ ನಿಮಿತ್ತಗಳಿಂದ ಭವಿಷ್ಯವನ್ನು ತಿಳಿದುಕೊಳ್ಳುವ ವಿಧಿ ಇವೆಲ್ಲವುಗಳು ಸಮಾವೇಶ ಗೊಳ್ಳುತ್ತವೆ. ಹನ್ನೊಂದನೆಯ ಪೂರ್ವವು ಕಲ್ಯಾಣವಾದವು. ಇದರಲ್ಲಿ ಸೂರ್ಯ, ಚಂದ್ರ, ನಕ್ಷತ್ರ ಮತ್ತು ತಾರಾಗಣ ಇವುಗಳ ಗತಿಯನ್ನು ತಿಳಿದು, ಶಕುನವನ್ನು ನಿರ್ಧರಿಸುವ ವಿಚಾರವಿತ್ತು. ಇದಲ್ಲದೆ ಬಲದೇವ, ವಾಸುದೇವ, ಚಕ್ರವರ್ತಿ ಮೊದ ಲಾದ ಮಹಾಪುರುಷರ ಗರ್ಭಾವತರಣ ಮೊದಲಾದ ಸಂದರ್ಭಗಳಲ್ಲಿ ಉಂಟಾಗುವ ಲಕ್ಷಣಗಳು ಹಾಗೂ ಕಲ್ಯಾಣಗಳ ಕಥನವಿದೆ. ಈ ಪೂರ್ವಕ್ಕೆ ಇರುವ ಇನ್ನೊಂದು ಹೆಸರು **ಅಬಂಧ್ಯ** ಎಂಬುದು ಸಾರ್ಥಕವೆನಿಸುತ್ತದೆ. ಹೇಗೆಂದರೆ ಶಕುನಗಳು ಮತ್ತು ಶುಭಾ ಶುಭ ಲಕ್ಷಣಗಳ ನಿಮಿತ್ತದಿಂದ ಭವಿಷ್ಯತ್ಕಾಲದಲ್ಲಿ ನಡೆಯುವ ಘಟನೆಗಳ ಕಥ ನವು ಅಬಂಧ್ಯ ಅರ್ಥಾತ್ ಅವಶ್ಯಂಭಾವಿ ಎಂದು ತಿಳಿಯಲಾಗಿದೆ. ಹನ್ನೆರಡನೆಯ ಪೂರ್ವವು **ಪ್ರಾಣಾವಾಯವು**. ಇದರಲ್ಲಿ ಆಯುರ್ವೇದ ಅರ್ಥಾತ್ ಕಾಯ ಚಿಕಿತ್ಸೆಗೆ ಸಂಬಂಧಿಸಿದ ಶಾಸ್ತ್ರವಿತ್ತು. ಪ್ರಾಣ, ಅಪಾನ ವಾಯುಗಳು ಶರೀರ ಧಾರಣೆಯ ಅಪೇಕ್ಷೆಯಿಂದ ಮಾಡುವ ಕಾರ್ಯಗಳ ವಿವೇಚನೆಯೂ ಇತ್ತು. ಹದಿಮೂರನೆಯ ಪೂರ್ವವು **ಕ್ರಿಯಾವಿಶಾಲವು**. ಇದರಲ್ಲಿ ಲೇಖನ, ಗಣನೆ ಮೊದಲಾದ ಎಪ್ಪತ್ತೆರಡು ಕಲೆಗಳು ಸ್ತ್ರೀಯರ ಅರವತ್ತುನಾಲ್ಕು ಗುಣಗಳು, ಶಿಲ್ಪ, ಗ್ರಂಥ ರಚನೆಗೆ ಸಂಬಂಧಿ ಸಿದ ಗುಣ ದೋಷಗಳು, ಛಂದಸ್ಸು ಮೊದಲಾದವುಗಳ ಪ್ರರೂಪಣೆಯಿತ್ತು. ಹದಿ ನಾಲ್ಕನೆಯ ಪೂರ್ವವು **ಲೋಕಬಿಂದುಸಾರವೆಂಬುದು**. ಇದರಲ್ಲಿ ಜೀವನದ ಶ್ರೇಷ್ಠ ಕ್ರಿಯೆಗಳನ್ನೂ ವ್ಯವಹಾರ ಹಾಗೂ ಅದಕ್ಕೆ ಸಂಬಂಧಿಸಿ ಪಡೆಯುವ ಮೋಕ್ಷ ಇವುಗಳ ವಿಚಾರಮಾಡಲಾಗಿತ್ತು.

ಈ ಪೂರ್ವಗಳೆಂಬ ಹೆಸರಿನ ಕೃತಿಗಳು ಕೇವಲ ಆ ಕಾಲದ ಧರ್ಮ, ದರ್ಶನ ಗಳನ್ನಷ್ಟೇ ವಿವರಿಸಿದಂಥವುಗಳಲ್ಲ. ನೈತಿಕ ವಿಚಾರಗಳ ಪರಿಮಿತಿಯಲ್ಲಿಯೂ ಇವು ಗಳ ವಿಷಯವು ಮುಗಿದಿಲ್ಲ. ಇವುಗಳಲ್ಲಿ ನಾನಾ ಕಲೆಗಳ ವಿವರವಿದೆ. ಜ್ಯೋತಿಷ, ಆಯುರ್ವೇದಗಳಂಥ ವಿಜ್ಞಾನದ ವಿಷಯಗಳಿವೆ. ಫಲಿತ ಜ್ಯೋತಿಷ, ಶಕುನಶಾಸ್ತ್ರ, ಮಂತ್ರ-ತಂತ್ರಗಳಾದಿ ವಿಷಯಗಳ ಸಮಾವೇಶವೂ ಇದೆ. ಈ ಪ್ರಕಾರ ಇರುವುದ ರಿಂದ ಈ ಪೂರ್ವಗಳನ್ನು ಪ್ರಾಚೀನ ಕಾಲದ ಭಾರತೀಯ ಜ್ಞಾನಕೋಶವೆಂದು ಹೇಳಿ ದರೆ ಅನುಚಿತವೆನಿಸಲಾರದು.

ಆದರೆ ಈ ಪೂರ್ವ ಸಾಹಿತ್ಯವು ನಮ್ಮ ದುರ್ಭಾಗ್ಯದಿಂದ ಈಗ ಸುರಕ್ಷಿತವಾಗಿಲ್ಲ. ಅಂದರೂ ತರುವಾಯದ ಕಾಲದ ಸಾಹಿತ್ಯದಲ್ಲಿ ಮೇಲಿಂದ ಮೇಲೆ ಇದರ ಉಲ್ಲೇಖವು ಲಭಿಸುತ್ತದೆ. ಅಲ್ಲದೆ ಅವುಗಳ ವಿಷಯದ ಪ್ರರೂಪಣೆಯೂ ಅಲ್ಲಲ್ಲಿ ದೊರೆಯುತ್ತದೆ. ಆದರೂ ಈ-ಗ್ರಂಥಗಳು ಮಹಾವೀರ ನಿರ್ವಾಣದ ತರುವಾಯ ೧೬೨ ವರ್ಷಗಳು ಕಳೆದಮೇಲೆ ಕ್ರಮದಿಂದ ವಿಚ್ಛಿನ್ನವಾದವೆಂದು ಹೇಳಲಾಗುತ್ತದೆ. ಈ ಸಮಗ್ರ ಪೂರ್ವ ಗಳ ಕೊನೆಯ ಕಾಲದ ಜ್ಞಾನಿಯ ಶ್ರುತಕೇವಲಿಯಾದ ಭದ್ರಬಾಹುವಾಗಿದ್ದನು.

ತರುವಾಯ ೧೮೧ ವರ್ಷಗಳಲ್ಲಿ ಆದ ವಿಶಾಖಾಚಾರ್ಯನಿಂದ ಧರ್ಮಸೇನನ ವರೆಗೆ ಕೊನೆಯ ನಾಲ್ಕು ಪೂರ್ವಗಳನ್ನುಳಿದು ಉಳಿದ ದಶಪೂರ್ವಗಳ ಜ್ಞಾನವು ಇತ್ತು. ಅದರ ತರುವಾಯ ಪೂರ್ವಗಳ ಜ್ಞಾನವಿದ್ದ ಆಚಾರ್ಯರಾರೂ ಉಳಿಯಲಿಲ್ಲ. ಷಟ್ ಖಂಡಾಗಮದ ವೇದನಾ ಎಂಬ ಹೆಸರಿನ ನಾಲ್ಕನೆಯ ಖಂಡದ ಆದಿಯಲ್ಲಿ ನಮಸ್ಕಾರಾತ್ಮಕ ಸೂತ್ರವೊಂದು ಕಂಡುಬರುತ್ತದೆ. ಅದರಲ್ಲಿ ದಶಪೂರ್ವ ಜ್ಞಾನಿಗಳನ್ನೂ ಹದಿನಾಲ್ಕು ಪೂರ್ವಗಳ ಜ್ಞಾನಿಗಳನ್ನೂ ಬೇರೆಬೇರೆಯಾಗಿ ನಮಸ್ಕರಿಸಲಾಗಿದೆ. (ನವೋ ದಸಪುವ್ವಿಯೋಣಂ, ನವೋ ಚೆಉ ಪ್ದಸವುವ್ವಿಯೋಣಂ) ಈ ಸೂತ್ರಕ್ಕೆ ವಿವರಣೆಯನ್ನು ಕೊಡುತ್ತ ವೀರಸೇನಾಚಾರ್ಯರು ಹೀಗೆ ಹೇಳಿದ್ದಾರೆ :— ಮೊದಲಿನ ಹತ್ತು ಪೂರ್ವಗಳ ಜ್ಞಾನವನ್ನು ಹೊಂದಿದ ಮುನಿಗಳಿಗೆ ನಾನಾ ಮಹಾವಿದ್ಯೆಗಳ ಪ್ರಾಪ್ತಿಯಾಗುತ್ತಿತ್ತು. ಇದರಿಂದ ಸಾಂಸಾರಿಕ ಲೋಭ ಮತ್ತು ಮೋಹಗಳು ಉತ್ಪನ್ನವಾಗುವವು. ಅದರಿಂದ ಮುಂದೆ ವೀತರಾಗತ್ವವು ವಿಕಾಸ ಹೊಂದದೆ ಹೋಗುವುದು. ಯಾವ ಮುನಿಯು ಇಂಥ ಲೋಭ-ಮೋಹಗಳನ್ನು ಗೆಲ್ಲುವನೋ ಅವನೇ ಸಂಪೂರ್ಣ ಶ್ರುತಜ್ಞಾನಿಯೆನಿಸುವನು. ಇನ್ನು ಯಾವ ಪೂರ್ವಗಳಲ್ಲಿ ಕಲೆ, ವಿದ್ಯೆ, ಮಂತ್ರ-ತಂತ್ರ ಮತ್ತು ಇಂದ್ರಜಾಲಗಳ ಪ್ರರೂಪಣೆಯು ಇತ್ತೋ ಆ ಪೂರ್ವಗಳ ಅಭ್ಯಾಸವೂ ಮುನಿಗಳಿಗೆ ನಿಷಿದ್ಧವೆಂದು ಹೇಳಲಾಯಿತು. ಇದು ಅವರ ಸಂಯಮ ರಕ್ಷಣೆಗಾಗಿಯೇ ಹೇಳಿತ್ತೆಂದು ಗೊತ್ತಾಗುತ್ತದೆ. ಪೂರ್ವಗಳಲ್ಲಿಯ ಜ್ಞಾನವು ಜೈನಮುನಿಗಳಿಗೆ ಎಷ್ಟು ಅವಶ್ಯಕವಾಗಿತ್ತೋ ಅಷ್ಟನ್ನು ಉಳಿದ ದ್ವಾದಶಾಂಗ ಆಗಮದ ಅನ್ಯಭಾಗಗಳಲ್ಲಿ ಸಮಾವಿಷ್ಟಗೊಳಿಸಲಾಯಿತು. ಅದರಿಂದ ಉಳಿದ ಪೂರ್ವಗಳ ಅಭ್ಯಾಸ, ಪಠನ-ಪಾಠನ ಮಾಡುವುದರಲ್ಲಿ ವೇಳೆಯನ್ನು ಕಳೆಯುವುದು ಉಚಿತವೆಂದು ತಿಳಿಯಲಿಲ್ಲ. ಹೀಗಾಗಿ ಪೂರ್ವಗಳ ಜ್ಞಾನಪರಂಪರೆಯು ವಿಚ್ಛಿನ್ನವಾಗಿ ಹೋಯಿತು. ಈ ಮಾತಿಗೆ ಪುಷ್ಟಿಯು, ದಿಗಂಬರ ಸಾಹಿತ್ಯದ ಪರಂಪರೆಯನ್ನು ಅವಲೋಕಿಸಿದಲ್ಲಿ ದೊರೆಯುತ್ತದೆ. ವೀರ ನಿರ್ವಾಣವಾದ ಮೇಲೆ ಸುಮಾರು ಏಳುನೂರು ವರ್ಷಗಳು ಉರುಳಿದ ಮೇಲೆ ಗಿರಿನಗರದ ಚಂದ್ರಗುಹೆಯಲ್ಲಿ ಇರುವ ಆಚಾರ್ಯ ಧರಸೇನನಿಗೆ ದ್ವಿತೀಯ ಪೂರ್ವದ ಕೆಲವೊಂದು ಅಧಿಕಾರಗಳ ಜ್ಞಾನವು ಮಾತ್ರ ವಿಶೇಷವಾಗಿ ಇತ್ತು. ಅವನು ಅದೇ ಜ್ಞಾನವನ್ನು ಪುಷ್ಪದಂತ ಮತ್ತು ಭೂತಬಲಿ ಆಚಾರ್ಯರಿಗೆ ನೀಡಿದನು. ಅವರು ಆ ಜ್ಞಾನದ ಆಧಾರದ ಮೇಲೆ ಸತ್ಕರ್ಮಪ್ರಾಭೃತ ಅರ್ಥಾತ್ ಷಟ್‌ಖಂಡಾಗಮವನ್ನು ಸೂತ್ರರೂಪದಲ್ಲಿ ರಚಿಸಿದರು.

**ಅಂಗ-ಪ್ರವಿಷ್ಟ ಮತ್ತು ಅಂಗ-ಬಾಹ್ಯ ಸಾಹಿತ್ಯ :—**

ದಿಗಂಬರ ಪರಂಪರೆಗೆ ಅನುಸರಿಸಿ ಮಹಾವೀರನಿಂದ ಉಪದೇಶಿಸಲ್ಪಟ್ಟ ಸಾಹಿತ್ಯದ ಗ್ರಂಥರಚನೆಯನ್ನು ಅವನ ಶಿಷ್ಯರು ಎರಡು ಭಾಗಗಳಲ್ಲಿ ಮಾಡಿದರು. ಅವುಗಳಲ್ಲಿ ಒಂದು ಅಂಗ-ಪ್ರವಿಷ್ಟ ; ಇನ್ನೊಂದು ಅಂಗ-ಬಾಹ್ಯವು. ಅಂಗ-ಪ್ರವಿಷ್ಟದಲ್ಲಿ

ಆಚಾರಾಂಗವೇ ಮೊದಲಾದ ಹನ್ನೆರಡು ಗ್ರಂಥಗಳಿದ್ದುವು—ಅವು ಕ್ರಮದಿಂದ ಲೋಪ ಹೊಂದಿದವೆಂದು ತಿಳಿಯಲಾಗಿದೆ. ಆದರೆ ಶ್ವೇತಾಂಬರ ಪರಂಪರೆಗನುಸರಿಸಿ, ಹನ್ನೊಂದು ಅಂಗಗಳನ್ನು ಮಹಾವೀರ ನಿರ್ವಾಣ ಹೊಂದಿದ ಮೇಲೆ ಹತ್ತನೆಯ ಶತಮಾನದಲ್ಲಿ ಸಂಕಲನ ಮಾಡಿದ್ದು ಅವು ಉಪಲಬ್ಧವಿರುತ್ತವೆ. ಇವುಗಳ ವಿಶೇಷ ಪರಿಚಯವನ್ನು ಮುಂದೆ ಮಾಡಿಕೊಡಲಾಗುತ್ತದೆ. ಅಂಗ ಬಾಹ್ಯಗ್ರಂಥಗಳಲ್ಲಿ ಹದಿನಾಲ್ಕು ಭಾಗಗಳಿವೆಯೆಂದು ಹೇಳಲಾಗಿದೆ. ಅವು ಈ ಪ್ರಕಾರ ಇವೆ:—**ಸಾಮಾಯಿಕ, ಚತುರ್ವಿಂಶತಿಸ್ತವ, ವಂದನಾ, ಪ್ರತಿಕ್ರಮಣ, ವೈನಯಿಕ, ಕೃತಿಕರ್ಮ, ದಶವೈಕಾಲಿಕ, ಉತ್ತರಾಧ್ಯಯನ, ಕಲ್ಪವ್ಯವಹಾರ, ಕಲ್ಪಾಕಲ್ಪ, ಮಹಾಕಲ್ಪ, ಪುಂಡರೀಕ, ಮಹಾ ಪುಂಡರೀಕ ಮತ್ತು ನಿಷಿದ್ಧಿಕಾ.** ಈ ಅಂಗ ಬಾಹ್ಯ ಸಾಹಿತ್ಯವೂ ಸಹ ದಿಗಂಬರ ಪರಂಪರೆಗನುಸರಿಸಿ ಮೂಲರೂಪದಲ್ಲಿ ಅಪ್ರಾಪ್ಯವೆನಿಸಿದೆ. ಆದರೆ ಶ್ವೇತಾಂಬರ ಪರಂಪರೆಯಲ್ಲಿ ಅವುಗಳ ಉಪಲಬ್ಧತೆಯು ಇದೆ. ಸಾಮಾಯಿಕವೇ ಮೊದಲಾದ ಮೊದಲಿನ ಆರು ಗ್ರಂಥಗಳ ಸಮಾವೇಶವು ಆವಶ್ಯಕ ಸೂತ್ರದಲ್ಲಿ ಆಗಿಹೋಗಿದೆ. ಅಲ್ಲದೆ ಕಲ್ಪ, ವ್ಯವಹಾರಾದಿ ಕೊನೆಯ ಆರು ಗ್ರಂಥಗಳ ಸಮಾವೇಶವು ನಿಶೀಥ ಸೂತ್ರದಲ್ಲಿ ಆಗಿದೆ. ದಶವೈಕಾಲಿಕ ಮತ್ತು ಉತ್ತರಾಧ್ಯಯನ ಎಂಬ ಹೆಸರಿನ ರಚನೆಗಳ ಕಡೆಗೆ ವಿಶೇಷ ಲಕ್ಷ್ಯ ಕೊಡುವಂತಿದೆ. ಇವುಗಳಿಗೆ ಶ್ವೇತಾಂಬರ ಆಗಮ ಸಾಹಿತ್ಯದಲ್ಲಿ ಬಹಳ ಮಹತ್ವವಿದೆ. ಇಷ್ಟೇ ಅಲ್ಲ, ಈ ಗ್ರಂಥರಚನೆಯ ಕಾರಣದ ಉಲ್ಲೇಖವೂ ಸಹ ದಿಗಂಬರ ಶಾಸ್ತ್ರಗಳಲ್ಲಿ ಕಂಡು ಬರುತ್ತದೆ. ನಿಜವಾಗಿಯೂ ಉಪಲಬ್ಧವಿರುವ ಈ ದಶವೈಕಾಲಿಕ ಗ್ರಂಥದ ಬಗ್ಗೆಯೇ ಆ ಉಲ್ಲೇಖವಿದೆ. ಆಚಾರ್ಯ ಪೂಜ್ಯಪಾದನು ತನ್ನ 'ಸರ್ವಾರ್ಥಸಿದ್ಧಿ' ಟೀಕೆಯಲ್ಲಿ(೧—೨೦) ಹೀಗೆ ಬರೆದಿದ್ದಾನೆ :— "ಆರಾತೀಯ ಆಚಾರ್ಯರು ಕಾಲದೋಷದಿಂದ ಸಂಕ್ಷಿಪ್ತ ಆಯುಷ್ಯ, ಮತಿ ಮತ್ತು ಬಲಶಾಲಿ ಶಿಷ್ಯರ ಅನುಗ್ರಹಕ್ಕಾಗಿ ದಶವೈಕಾಲಿಕಾದಿ ಗ್ರಂಥಗಳನ್ನು ರಚಿಸಿದರು. ಈ ಗ್ರಂಥಗಳಲ್ಲಿ ಗಣಧರರು ಹಾಗು ಶ್ರುತಕೇವಲಿಗಳು ರಚಿಸಿದ ಸೂತ್ರಗ್ರಂಥಗಳಷ್ಟೇ ಪ್ರಮಾಣಿಕತೆಯುಂಟು. ಯಾಕೆಂದರೆ ಅರ್ಥದ ದಷ್ಟಿಯಿಂದ ಅವೂ ಸೂತ್ರಗಳೇ ಆಗಿವೆ. ಹೇಗೆಂದರೆ ಕ್ಷೀರಸಾಗರದಿಂದ ಕೊಡದಲ್ಲಿ ತುಂಬಿದ ಜಲವು ಕ್ಷೀರೋಥದಿಯೇ ಆಗಿರುತ್ತದೆಯೇ ಹೊರತಾಗಿ ಬೇರೆಯಾಗಿರುವುದಿಲ್ಲ." ದಶವೈಕಾಲಿಕ ನಿರ್ಯುಕ್ತಿ ಮತ್ತು ಹೇಮಚಂದ್ರನ ಪರಿಶಿಷ್ಟ ಪರ್ವಗಳಲ್ಲಿಯೂ ಹೀಗೆ ಹೇಳಲಾಗಿದೆ:—ಸ್ವಯಂಭವ ಆಚಾರ್ಯನು ತನ್ನ ಪುತ್ರನಾದ ಮನಕನ ಅಲ್ಪಾಯುಷ್ಯತ್ವವನ್ನು ತಿಳಿದು, ಅವನನ್ನು ಅನುಗ್ರಹಿಸಲೆಂದು ಆಗಮದ ಸಾರರೂಪವಾದ ದಶವೈಕಾಲಿಕ ಸೂತ್ರದ ರಚನೆಯನ್ನು ಮಾಡಿದನು. ಈ ಪ್ರಕಾರ ರಚನೆಗಳ ವಿಷಯದಲ್ಲಿ ಎರಡೂ ಸಂಪ್ರದಾಯಗಳಲ್ಲಿ ಮತೈಕ್ಯವು ಕಂಡು ಬರುತ್ತದೆ. ಶ್ವೇತಾಂಬರ ಪರಂಪರೆಗನುಸರಿಸಿ ಮಹಾವೀರ ನಿರ್ವಾಣ ಹೊಂದಿ ೧೬೦ ವರ್ಷಗಳು ಕಳೆದ ಮೇಲೆ ಪಾಟಲೀಪುತ್ರದಲ್ಲಿ ಸ್ಥೂಲಭದ್ರ ಆಚಾರ್ಯನು ಜೈನ ಶ್ರಮಣ ಸಂಘದ ಸಮ್ಮೇಲನವನ್ನು ಕೂಡಿಸಿದನು. ಆಗ ಅಲ್ಲಿ ಹನ್ನೊಂದು ಅಂಗ

ಗಳ ಸಂಕಲನವನ್ನು ಮಾಡಲಾಯಿತು. ಹನ್ನೆರಡನೆಯ ಅಂಗವು ದೃಷ್ಟಿವಾದವು. ಅದರ ಜ್ಞಾನವು ಅಲ್ಲಿರುವ ಮುನಿಗಳಿಗೆ ಯಾರಿಗೂ ಇರಲಿಲ್ಲ. ಅದರಿಂದ ಅದರ ಸಂಕಲನವನ್ನು ಮಾಡಲಿಕ್ಕೆ ಆಗಲಿಲ್ಲ. ಆ ಮುಂದಿನ ಶತಮಾನಗಳಲ್ಲಿಯೂ ಆ ಶ್ರುತ ಸಂಕಲನವು ಮತ್ತೆ ಭಿನ್ನಭಿನ್ನವಾಗುತ್ತ ಹೋಯಿತು. ತರುವಾಯ ವೀರನಿರ್ವಾಣವಾಗಿ ಸುಮಾರು ೮೪೦ ವರ್ಷಗಳು ಕಳೆದ ಮೇಲೆ ಆರ್ಯಸ್ಕಂದಿಲನು ಮಥುರೆಯಲ್ಲಿ ಒಂದು ಸಂಘ ಸಮ್ಮೇಲನವನ್ನು ಸೇರಿಸಿದನು. ಅಲ್ಲಿ ಪುನಃ ಆಗಮ ಸಾಹಿತ್ಯವನ್ನು ವ್ಯವಸ್ಥಿತ ಸ್ವರೂಪದಲ್ಲಿ ತರುವ ಪ್ರಯತ್ನವು ನಡೆಯಿತು. ಇದೇ ಸಮಯಕ್ಕೆ ವಲಭಿಯಲ್ಲಿಯೂ ನಾಗಾರ್ಜುನ ಸೂರಿಯೂ ಒಂದು ಮುನಿ ಸಮ್ಮೇಲನವನ್ನು ಸೇರಿಸಿ, ಆಗಮ ರಕ್ಷಣೆಯ ಪ್ರಯತ್ನವನ್ನು ಮಾಡಿದನು. ಆದರೆ ಪಾಟಲಿಪುತ್ರೀ, ಮಾಥುರೀ ಮತ್ತು ಪ್ರಥಮ ವಲ್ಲಭೀ ಈ ಮೂರೂ ವಾಚನಗಳ ಪಾಠವು ಉಪಲಬ್ಧವಿಲ್ಲ. ಕೇವಲ ಸಾಹಿತ್ಯದಲ್ಲಿ ಅಲ್ಲಿ-ಇಲ್ಲಿ ಅವುಗಳ ಉಲ್ಲೇಖವು ಮಾತ್ರ ಲಭಿಸುತ್ತದೆ. ಕೊನೆಯ ಸಲ ಮಹಾವೀರ ನಿರ್ವಾಣ ನಂತರ ೯೮೦ ವರ್ಷಗಳು ಕಳೆದ ಮೇಲೆ ವಲಭಿಯಲ್ಲಿ ದೇವರ್ಧಿಗಣಿ ಕ್ಷಮಾಶ್ರಮಣನು ಒಂದು ಮುನಿ ಸಮ್ಮೇಲನವನ್ನು ಸೇರಿಸಿದನು. ಅದರಲ್ಲಿ ೪೫-೪೬ ಗ್ರಂಥಗಳನ್ನು ಸಂಕಲನ ಮಾಡಲಾಯಿತು. ಆ ಗ್ರಂಥಗಳು ಇಂದಿನವರೆಗೂ ಪ್ರಚಾರದಲ್ಲಿವೆ. ಆ ಉಪಲಬ್ಧ ಆಗಮ ಸಾಹಿತ್ಯವು ಈ ಪ್ರಕಾರ ಇದೆ :—

**ಅರ್ಧಮಾಗಧೀ ಜೈನಾಗಮ—**

**(ಶ್ರುತಾಂಗ-೧೧)**

೧. **ಆಚಾರಾಂಗ (ಆಯಾರಂಗ)**—ಈ ಗ್ರಂಥದಲ್ಲಿ ಅದರ ಹೆಸರಿಗನುಸರಿಸಿ ಮುನಿಗಳ ಆಚಾರದ ವರ್ಣನೆಯು ಇದೆ. ಇದರ ಎರಡು ಶ್ರುತ-ಸ್ಕಂಧಗಳಿವೆ. ಪ್ರತಿಯೊಂದು ಶ್ರುತ-ಸ್ಕಂಧವು ಅಧ್ಯಯನಗಳಲ್ಲಿ ಮತ್ತು ಪ್ರತಿಯೊಂದು ಅಧ್ಯಯನವು ಉದ್ದೇಶ ಅಥವಾ ಚೂಲಿಕೆಗಳಲ್ಲಿ ವಿಭಾಗಗೊಂಡಿವೆ. ಈ ಪ್ರಕಾರ ಪ್ರಥಮ ಶ್ರುತಸ್ಕಂಧದಲ್ಲಿ ೯ ಅಧ್ಯಯನ ಮತ್ತು ೪೪ ಉದ್ದೇಶಗಳಿವೆ. ದ್ವಿತೀಯ ಶ್ರುತಸ್ಕಂಧದಲ್ಲಿ ಮೂರು ಚೂಲಿಕೆಗಳಿವೆ. ಅದು ಹದಿನಾರು ಅಧ್ಯಯನಗಳಲ್ಲಿ ವಿಭಾಗಗೊಂಡಿದೆ. ಈ ಪ್ರಕಾರ ದ್ವಿತೀಯ ಶ್ರುತಸ್ಕಂಧವು ಮೊದಲನೆಯದರ ಚೂಲಿಕೆಯ ರೂಪದಲ್ಲಿದೆ. ಭಾಷೆ, ಶೈಲಿ, ವಿಷಯಗಳ ದೃಷ್ಟಿಯಿಂದ ಸ್ಪಷ್ಟವಾಗಿಯೂ ಪ್ರಥಮ ಶ್ರುತಸ್ಕಂಧವು ಹೆಚ್ಚು ಪ್ರಾಚೀನವಾಗಿದೆ. ಇದರ ಹೆಚ್ಚು ಭಾಗವು ಗದ್ಯಾತ್ಮಕವಾಗಿದೆ. ನಡು-ನಡುವೆ ಪದ್ಯಗಳು ಅಲ್ಲಿ-ಇಲ್ಲಿ ಬರುತ್ತವೆ. ಅರ್ಧಮಾಗಧೀ-ಪ್ರಾಕೃತ ಭಾಷೆಯ ಸ್ವರೂಪವನ್ನು ತಿಳಿದುಕೊಳ್ಳುವುದಕ್ಕೆ ಈ ರಚನೆಯು ಬಹು ಮಹತ್ವಪೂರ್ಣದ್ದಾಗಿದೆ. ಏಳನೆಯ ಅಧ್ಯಯನದ ಹೆಸರು 'ಮಹಾಪರಿಜ್ಞಾ' ಎಂದು ನಿರ್ದಿಷ್ಟಗೊಳಿಸಲಾಗಿದೆ. ಆದರೆ ಅದರ ಪಾಠವು ಉಪಲಭ್ಯವಿಲ್ಲ. ಉಪಧಾನವೆಂಬ ಹೆಸರಿನ ಒಂಭತ್ತನೆಯ ಅಧ್ಯಯನದಲ್ಲಿ ಮಹಾವೀರನ ತಪಸ್ಸಿನ ವರ್ಣನೆಯು ಬಹು ಹೃದಯಸ್ಪರ್ಶಿಯಾಗಿ ಬಂದಿದೆ. ಅದರಲ್ಲಿ ಅವನು ಲಾಢ, ವಜ್ರಭೂಮಿ, ಶುಭ್ರಭೂಮಿಗಳಲ್ಲಿ ಮಾಡಿದ ವಿಹಾರ, ಅಲ್ಲಿ ಅವನು

ನಾನಾ ಪ್ರಕಾರದ ಉಪಸರ್ಗಗಳನ್ನು ಸಹನ ಮಾಡಿದುದರ ಉಲ್ಲೇಖಗಳು ಬಂದಿವೆ. ದ್ವಿತೀಯ ಶ್ರುತಸ್ಕಂಧದಲ್ಲಿ ಶ್ರಮಣರ ಭಿಕ್ಷೆ, ಆಹಾರ-ಪಾನ-ಶುದ್ಧಿ, ಶಯ್ಯಾ-ಸಂಸ್ತರಣ-ಗ್ರಹಣ, ವಿಹಾರ, ಚಾತುರ್ಮಾಸ, ಭಾಷಾ, ವಸ್ತ್ರ, ಪಾತ್ರಾದಿ ಉಪಕರಣ, ಮಲ-ಮೂತ್ರ-ತ್ಯಾಗ ಹಾಗೂ ವ್ರತಗಳು ಮತ್ತೂ ಇವುಗಳಿಗೆ ಸಂಬಂಧಿಸಿದ ಭಾವನೆಗಳ ಸ್ವರೂಪ, ನಿಯಮ-ಉಪನಿಯಮ ಇವೆಲ್ಲವುಗಳ ವರ್ಣನೆಯು ಇದೆ.

೨. **ಸೂತ್ರಕೃತಾಂಗ (ಸೂಯಗಡಂ)**—ಇದೂ ಎರಡು ಶ್ರುತಸ್ಕಂಧಗಳಲ್ಲಿ ವಿಭಕ್ತವಾಗಿದೆ. ಈ ವಿಭಾಗಗಳಲ್ಲಿ ಕ್ರಮದಿಂದ ೧೬ ಮತ್ತು ೭ ಅಧ್ಯಯನಗಳಿವೆ. ಮೊದಲನೆಯ ಶ್ರುತಸ್ಕಂಧವು ಪದ್ಯರೂಪದಲ್ಲಿದೆ, ಕೇವಲ ಒಂದು ಅಧ್ಯಯನದಲ್ಲಿಮಾತ್ರ ಗದ್ಯದ ಪ್ರಯೋಗವಾಗಿದೆ. ಎರಡನೆಯ ಶ್ರುತಸ್ಕಂಧದಲ್ಲಿ ಗದ್ಯ-ಪದ್ಯಗಳೆರಡೂ ಕಂಡು ಬರುತ್ತವೆ. ಇದರಲ್ಲಿ ಗಾಥಾ ಛಂದವಲ್ಲದೆ ಉಳಿದ ಛಂದಗಳ ಪ್ರಯೋಗವೂ ಆದದ್ದಿದೆ. ಇಂದ್ರವಜ್ರಾ, ವೈಕಾಲಿಕ, ಅನುಷ್ಟುಪ್ ಮೊದಲಾದುವು ಉಳಿದ ಛಂದಸ್ಸುಗಳಾಗಿವೆ. ಗ್ರಂಥದಲ್ಲಿ ಜೈನದರ್ಶನವಲ್ಲದೆ ಅನ್ಯಮತ ಹಾಗೂ ವಾದಗಳಾದ ಕ್ರಿಯಾವಾದ, ಅಕ್ರಿಯಾವಾದ, ನಿಯತಿವಾದ, ಅಜ್ಞಾನವಾದ, ಜಗತ್‌ಕರ್ತೃತ್ವವಾದ ಇತ್ಯಾದಿಗಳ ವಿವರವೂ ಬರುತ್ತದೆ. ಮುನಿಗಳ ಭಿಕ್ಷಾಚಾರದಲ್ಲಿ ಸತರ್ಕತೆ, ಪರೀಷಹಗಳ ಸಹನೆ, ನರಕದ ದುಃಖ, ಉತ್ತಮ ಸಾಧುಗಳ ಲಕ್ಷಣ ಬ್ರಾಹ್ಮಣ, ಶ್ರಮಣ, ಭಿಕ್ಷುಕ ಮತ್ತು ನಿರ್ಗ್ರಂಥ ಮೊದಲಾದ ಶಬ್ದಗಳ ಉತ್ಪತ್ತಿಯನ್ನು ಒಳ್ಳೆಯ ಉದಾಹರಣೆ ಹಾಗೂ ರೂಪಕಗಳ ಮುಖಾಂತರ ತಿಳಿಸಿಕೊಡಲಾಗಿದೆ. ದ್ವಿತೀಯ ಶ್ರುತಸ್ಕಂಧದಲ್ಲಿ ಜೀವ-ಶರೀರಗಳ ಏಕತ್ವ ಈಶ್ವರ-ಕರ್ತೃತ್ವ, ನಿಯತಿವಾದ ಮೊದಲಾದ ಮತಗಳ ಖಂಡನೆ ಮಾಡಲಾಗಿದೆ. ಆಹಾರ ಮತ್ತು ಭಿಕ್ಷೆಗಳ ದೋಷಗಳ ನಿರೂಪಣೆಯು ಇದೆ ಪ್ರಸಂಗವಶ ಭಾವೋತ್ಪಾದಾದಿ ಮಹಾ ನಿಮಿತ್ತಗಳ ಉಲ್ಲೇಖವೂ ಕಂಡು ಬರುತ್ತದೆ. ಪ್ರತ್ಯಾಖ್ಯಾನ ಕ್ರಿಯೆಯನ್ನೂ ಹೇಳಲಾಗಿದೆ. ಪಾಪ-ಪುಣ್ಯಗಳ ವಿವೇಕದ ವಿವರವೂ ಇದೆ. ಹಾಗೆಯೇ ಗೋಶಾಲಕ, ಶಾಕ್ಯಭಿಕ್ಷು ಮೊದಲಾದವರ ಕೂಡ ನಡೆದ ವಾದ-ವಿವಾದಗಳ ವಿಷಯವೂ ಬರುತ್ತದೆ. ಕೊನೆಯ ಅಧ್ಯಾಯವು ನಾಲಂದೀಯ ಎಂಬ ಹೆಸರಿನದಿದೆ. ಇದರಲ್ಲಿ ನಾಲಂದಾದಲ್ಲಿ ನಡೆದ ಗೌತಮ ಗಣಧರ ಮತ್ತು ಪಾರ್ಶ್ವ ನಾಥನ ಶಿಷ್ಯ ಉದಕ ಪೇಢಾಲಪುತ್ರನ ವಾರ್ತಾಲಾಪವಿದೆ. ಕೊನೆಗೆ ಪೇಢಾಲಪುತ್ರನು ಚಾತುರ್ಯಾಮವನ್ನು ತ್ಯಜಿಸಿ, ಪಂಚ ಮಹಾವ್ರತಗಳನ್ನು ಸ್ವೀಕರಿಸಿದ ವೃತ್ತಾಂತವು ಇದೆ. ಪ್ರಾಚೀನ ಮತಗಳ, ವಾದಗಳ ಮತ್ತು ದೃಷ್ಟಿಗಳ ಅಧ್ಯಯನದ ದೃಷ್ಟಿಯಿಂದ ಈ ಶ್ರುತಾಂಗವೂ ಬಹು ಮಹತ್ವಪೂರ್ಣವಾಗಿದೆ. ಭಾಷೆಯ ದೃಷ್ಟಿಯಿಂದಲೂ ಇದು ವಿಶೇಷವಾಗಿ ಪ್ರಾಚೀನವೆಂದು ಸಿದ್ಧವಾಗುತ್ತದೆ

೩. **ಸ್ಥಾನಾಂಗ (ಠಾಣಾಂಗ)**—ಈ ಶ್ರುತಾಂಗವು ಹತ್ತು ಅಧ್ಯಯನಗಳಲ್ಲಿ ವಿಭಾಗಗೊಂಡಿದೆ. ಇದರ ಸೂತ್ರಗಳ ಸಂಖ್ಯೆಯು ಸಾವಿರಕ್ಕೂ ಮಿಕ್ಕಿದೆ. ಇದರ ರಚನೆಯು ಮೇಲೆ ಹೇಳಿದ ಎರಡೂ ಶ್ರುತಾಂಗಗಳಿಗಿಂತ ಭಿನ್ನವಾಗಿದೆ. ಇದರಲ್ಲಿ ಪ್ರತಿ

ಯೊಂದು ಅಧ್ಯಯನದಲ್ಲಿಯೂ ಜೈನ ಸಿದ್ಧಾಂತಕ್ಕನುಸರಿಸಿ ವಸ್ತು ಸಂಖ್ಯೆಗಳ ಲೆಕ್ಕ ಮಾಡಲಾಗಿದೆ. ಮೊದಲನೆಯ ಅಧ್ಯಾಯದಲ್ಲಿ ಒಂದು ದರ್ಶನ, ಒಂದು ಚರಿತ್ರ, ಒಂದು ಸಮಯ, ಒಂದು ಪ್ರದೇಶ, ಒಂದು ಪರಮಾಣು, ಒಬ್ಬ ಸಿದ್ಧ ಇವರ ವಿವರ ಇದೆ. ಇದೇ ಪ್ರಕಾರ ಎರಡನೆಯ ಅಧ್ಯಯನದಲ್ಲಿ ಕ್ರಿಯೆಗಳೆರಡು–ಜೀವ–ಕ್ರಿಯಾ ಮತ್ತು ಅಜೀವ ಕ್ರಿಯಾ–ಇವುಗಳನ್ನು ವಿವರಿಸಲಾಗಿದೆ. ಜೀವ–ಕ್ರಿಯೆಗಳು ಪುನಃ ಸಮ್ಯಕ್ತ್ವಕ್ರಿಯೆ ಮತ್ತು ಮಿಥ್ಯಾತ್ವಕ್ರಿಯೆಯೆಂದು ಎರಡುವಿಧವಾಗಿವೆ. ಇದೇ ಪ್ರಕಾರ ಅಜೀವಕ್ರಿಯೆಯೂ ಕೂಡ ಈರ್ಯಾಪಥಿಕ ಮತ್ತು ಸಾಂಪ್ರದಾಯಿಕವೆಂದು ಎರಡು ಪ್ರಕಾರವಾಗಿದೆ ಇದೇ ಪ್ರಕಾರ ಹತ್ತನೆಯ ಅಧ್ಯಯನದಲ್ಲಿ ಇದೇ ಕ್ರಮ ದಿಂದ ವಸ್ತುಭೇದವು ಹತ್ತುಪ್ರಕಾರದ ವರೆಗೆ ಹೋಗಿದೆ. ಈ ದೃಷ್ಟಿಯಿಂದ ಈ ಶ್ರುತಾಂಗವು ಪಾಲೀ ಬೌದ್ಧ ಗ್ರಂಥವಾದ ಅಂಗುತ್ತರ ನಿಕಾಯದೊಡನೆ ತುಲನೆ ಮಾಡುವಂತಿದೆ. ಇಲ್ಲಿ ವಿವಿಧ ಪ್ರಕಾರದ ವಸ್ತು ನಿರ್ದೇಶವು ತಮ್ಮ ತಮ್ಮ ದೃಷ್ಟಿ ಯಿಂದ ಬಹು ಮಹತ್ವಪೂರ್ಣವೆನಿಸಿವೆ. ಯಥಾಸ್ಥಾನದಲ್ಲಿ ಋಗ್, ಯಜು ಮತ್ತು ಸಾಮ ಈ ಮೂರು ವೇದಗಳ ವಿಷಯ ಹೇಳಿದೆ. ಧರ್ಮ, ಅರ್ಥ, ಕಾಮ ಈ ಮೂರು ಪ್ರಕಾರದ ಕಥೆಗಳನ್ನು ಸಹ ಹೇಳಿದೆ. ವೃಕ್ಷಗಳೂ ಕೂಡ ಪತ್ರೋಪೇತ, ಪುಷ್ಪೋಪೇತ, ಫಲೋಪೇತವೆಂದು ಮೂರು ಪ್ರಕಾರವಾಗಿವೆ. ಪುರುಷರೂ ಕೂಡ ನಾನಾ ದೃಷ್ಟಿ ಯಿಂದ ನಾಮಪುರುಷ, ದ್ರವ್ಯಪುರುಷ ಮತ್ತು ಭಾವಪುರುಷ; ಇಲ್ಲವೆ ಜ್ಞಾನಪುರುಷ, ದರ್ಶನಪುರುಷ ಮತ್ತು ಚರಿತ್ರ ಪುರುಷ; ಅಥವಾ ಉತ್ತಮ ಪುರುಷ, ಮಧ್ಯಮ ಪುರುಷ ಮತ್ತು ಜಘನ್ಯ ಪುರುಷ ಎಂದು ಮೂರು ವಿಧವಾಗಿರುತ್ತಾರೆ. ಉತ್ತಮ ಪುರುಷರೂ ಕೂಡ ಧರ್ಮಪುರುಷ, ಭೋಗಪುರುಷ ಮತ್ತು ಕರ್ಮಪುರುಷ ಎಂದು ಮೂರು ವಿಧವಾಗಿದ್ದಾರೆ. ಅರ್ಹಂತರು ಧರ್ಮಪುರುಷರು; ಚಕ್ರವರ್ತಿಗಳು ಭೋಗ ಪುರುಷರು; ವಾಸುದೇವರು ಕರ್ಮಪುರುಷರು. ಧರ್ಮವೂ ಕೂಡ ಶ್ರುತಧರ್ಮ, ಚರಿತ್ರಧರ್ಮ ಮತ್ತು ಅಸ್ತಿಕಾಯಧರ್ಮವೆಂದು ಮೂರು ಪ್ರಕಾರವೆಂದು ಹೇಳಿದೆ. ನಾಲ್ಕು ಪ್ರಕಾರದ ಅಂತ ಕ್ರಿಯೆಗಳನ್ನು ಹೇಳಲಾಗಿದೆ. ಅವುಗಳಿಗೆ ದೃಷ್ಟಾಂತ ಸ್ವರೂಪವೆಂದು ಭರತ ಚಕ್ರವರ್ತಿ, ಗಜಕುಮಾರ, ಸನತ್ಕುಮಾರ ಮತ್ತು ಮರುದೇವಿ ಇವರ ಹೆಸರನ್ನು ಸೂಚಿಸಿದೆ. ಆದಿ ಹಾಗೂ ಅಂತಿಮ ತೀರ್ಥಂಕರರನ್ನುಳಿದು ನಡು ವಿನ ಇಪ್ಪತ್ತೆರಡು ತೀರ್ಥಂಕರರು ಚಾತುರ್ಯಾಮ ಧರ್ಮದ ಪ್ರಜ್ಞಾಪಕರೆಂದು ಹೇಳಿದೆ. ಆಜೀವಕರ ತಪಸ್ಸನ್ನು ಉಗ್ರತಪ, ಘೋರತಪ, ರಸನಿರ್ಯೂಯಣತೆ ಮತ್ತು ಜಿಹ್ವೇಂದ್ರಿಯ ಪ್ರತಿಸಂಲೀನತೆಯೆಂದು ನಾಲ್ಕು ವಿಧದಲ್ಲಿ ವಿಂಗಡಿಸಲಾಗಿದೆ. ಶೂರ ವೀರರನ್ನೂ ಸಹ ಕ್ಷಮಾಶೂರ, ತಪಶೂರ ದಾನಶೂರ ಮತ್ತು ಯುದ್ಧಶೂರ ಎಂದು ನಾಲ್ಕುಪ್ರಕಾರವಾಗಿ ವಿಂಗಡಿಸಿದೆ. ಆಚಾರ್ಯರು ವೃಕ್ಷದಂತೆ ನಾಲ್ಕು ಪ್ರಕಾರ ವೆಂದು ಹೇಳಿದೆ. ಅವರ ಲಕ್ಷಣವನ್ನು ಸಹ ನಾಲ್ಕು ಗಾಥೆಗಳಲ್ಲಿ ಪ್ರಕಟಗೊಳಿಸಲಾ ಗಿದೆ. ಕೆಲವೊಂದು ಆಚಾರ್ಯರೂ ಅವರ ಶಿಷ್ಯಪರಿವಾರವೂ ಶಾಲವೃಕ್ಷಕ್ಕೆ ಸಮಾನ

ರಾಗಿ ಮಹಾನ್ ಆಗಿರುತ್ತಾರೆ. ಇನ್ನು ಕೆಲವು ಆಚಾರ್ಯರು ಶಾಲ ವೃಕ್ಷದಂತೆ ಮಹಿಮಾ ಸಂಪನ್ನರಾಗಿದ್ದರೂ ಅವರ ಶಿಷ್ಯರು ಜೌಡಲ ಗಿಡದಂತೆ ಆಗಿರುತ್ತಾರೆ. ಮತ್ತೆ ಕೆಲವೆಡೆಯಲ್ಲಿ ಶಿಷ್ಯರೇ ಶಾಲ ವೃಕ್ಷದಂತೆ ಮಹಾನ್ ಪುರುಷರಾಗಿರುತ್ತಾರೆ. ಆದರೆ ಅವರ ಆಚಾರ್ಯಪುರುಷರು ಮಾತ್ರ ಜೌಡಲಗಿಡದಂತೆ ಕಳಾಹೀನರಾಗಿರುವುದೂ ಉಂಟು. ಇನ್ನೊಂದೆಡೆಗೆ ಆಚಾರ್ಯರೂ ಅವರ ಶಿಷ್ಯರೂ ಸಹ ಜೌಡಲ ಗಿಡದಂತೆ ಇರುತ್ತಾರೆ. ಸಪ್ತಸ್ವರಗಳ ಪ್ರಸಂಗದಲ್ಲಿ ಬಹುತರ ಗೀತಶಾಸ್ತ್ರದ ಪೂರ್ಣ ನಿರೂಪಣೆಯು ಬಂದು ಹೋಗಿದೆ. ಇಲ್ಲಿ ಭಾಷೆಯನ್ನು ಸಂಸ್ಕೃತ ಪ್ರಾಕೃತವೆಂದು ಎರಡು ವಿಧವಾಗಿ ವಿಂಗಡಿಸಿದೆ. ಅಲ್ಲದೆ ಪ್ರಾಕೃತವು ಆಡು ನುಡಿ—ಬಾಯಿಮಾತು—ಎಂದು ಉಲ್ಲೇಖಿಸಿದ್ದಾಗಿದೆ. ಇನ್ನು ಮಹಾವೀರನ ತೀರ್ಥದಲ್ಲಿ ಆದ ಬಹುರತ ಮೊದಲಾದ ಏಳು ನಿಹ್ನವರು, ಜಾಮಾಲಿ ಮೊದಲಾದ ಅವುಗಳ ಸ್ಥಾಪಕರು ಹಾಗೂ ಅವುಗಳ ಉತ್ಪತ್ತಿ ಸ್ಥಾನಗಳಾದ ಶ್ರಾವಸ್ತಿ ಮೊದಲಾದ ನಗರಗಳನ್ನೂ ಸಹ ಉಲ್ಲೇಖಿಸಲಾಗಿದೆ. ಮಹಾವೀರನ ತೀರ್ಥದಲ್ಲಿ ತೀರ್ಥಂಕರ ಗೋತ್ರದ ಬಂಧವಾದ ಒಂಭತ್ತು ಜನರ ಹೆಸರುಗಳು ಹೀಗಿವೆ:—ಶ್ರೇಣಿಕ, ಸುಪಾರ್ಶ್ವ, ಉದಯನ, ಪೊಟ್ಟಿಲ, ದೃಢಾಯು, ಶಂಖ, ಸಜಗ ಅಥವಾ ಶತಕ(ನಯಯ), ಸುಲಸಾ ಮತ್ತು ರೇವತಿ. ಈ ಪ್ರಕಾರ ಈ ಶ್ರುತಾಂಗದಲ್ಲಿ ನಾನಾ ಪ್ರಕಾರದ ವಿಷಯಗಳ ವರ್ಣನೆಯು ಲಭಿಸುತ್ತದೆ. ಅದು ಅನೇಕ ದೃಷ್ಟಿಯಿಂದ ಮಹತ್ವಪೂರ್ಣವಾಗಿದೆ.

೪. ಸಮವಾಯಾಂಗ—ಈ ಶ್ರುತಾಂಗದಲ್ಲಿ ೨೭೫ ಸೂತ್ರಗಳಿವೆ: ಉಳಿದ ಯಾವ ಪ್ರಕಾರದ ಸ್ಕಂಧ, ಅಧ್ಯಯನ ಅಥವಾ ಉದ್ದೇಶಕ ಇತ್ಯಾದಿ ರೂಪಗಳಲ್ಲಿ ವಿಭಾಗಿಸಲಾಗಿಲ್ಲ. ಸ್ಥಾನಾಂಗದಂತೆ ಇದರಲ್ಲಿಯೂ ಸಂಖ್ಯಾಕ್ರಮದಿಂದ ವಸ್ತುಗಳ ನಿರ್ದೇಶ, ಕೆಲವೊಂದೆಡೆಗಳಲ್ಲಿ ಅವುಗಳ ಸ್ವರೂಪ ಕಥನ, ಭೇದೋಪಭೇದಗಳ ವರ್ಣನೆಯನ್ನು ಸಹ ಮಾಡಲಾಗಿದೆ. ಆತ್ಮಾ ಒಂದು ಇದೆ, ಲೋಕವು ಒಂದು ಇದೆ; ಧರ್ಮ—ಅಧರ್ಮಗಳೂ ಒಂದೊಂದಾಗಿಯೇ ಇವೆ, ಈ ಕ್ರಮದಿಂದ ೨, ೩, ೪, ವಸ್ತುಗಳನ್ನು ಲೆಕ್ಕ ಹಾಕುತ್ತ ಮುಂದರಿದು ೧೦೦ನೆಯ ಸೂತ್ರದಲ್ಲಿ (ನೂರರ ವರೆಗೂ ಆ ಸಂಖ್ಯೆಯು ಹೋಗಿ ತಲುಪಿದೆ. ಅಲ್ಲಿಯ ವಿವರ ಹೀಗಿದೆ:—ಶತ ವಿಷಾ ನಕ್ಷತ್ರದಲ್ಲಿ ನೂರು ತಾರೆಗಳಿವೆ; ಪಾರ್ಶ್ವ ಅರಹಂತ ಹಾಗೂ ಸುಧರ್ಮಾಚಾರ್ಯನ ಪೂರ್ಣಾಯುಷ್ಯವು ನೂರು ವರ್ಷ ಇತ್ತು. ಇತ್ಯಾದಿ, ಇದರ ತರುವಾಯ ೨೦೦, ೩೦೦ ಆದಿ ಕ್ರಮದಿಂದ ವಸ್ತು ನಿರ್ದೇಶವು ಮುಂದೆ ಬೆಳೆಯುತ್ತ ಹೋಗಿದೆ. ಶ್ರಮಣ ಭಗವಾನ್ ಮಹಾವೀರನಿಗೆ ಮುನ್ನೂರು ಜನ ಶಿಷ್ಯರು ಹದಿನಾಲ್ಕು ಪೂರ್ವಗಳನ್ನೆಲ್ಲ ತಿಳಿದವರಿದ್ದರೆಂದೂ ನಾಲ್ಕುನೂರು ವಾದಿಗಳಿದ್ದರೆಂದೂ ಇದರಲ್ಲಿ ಹೇಳಲಾಗಿದೆ. ಇದೇ ಪ್ರಕಾರ ನೂರರ ಕ್ರಮದಲ್ಲಿ ೧೫೧ನೆಯ ಸೂತ್ರದ ಮೇಲೆ ಸಂಖ್ಯೆಯು ಹತ್ತುಸಾವಿರದ ವರೆಗೆ ಹೋಗಿ ತಲುಪಿದೆ. ತರುವಾಯ ಈ ಸಂಖ್ಯೆಯು ಶತಸಹಸ್ರಗಳ (ಲಕ್ಷ) ಕ್ರಮದಿಂದ ಬೆಳೆಯುತ್ತ ಹೋಗಿದೆ. ಅರಹಂತ ಪಾರ್ಶ್ವನಿಗೆ ಮೂರು ಶತಸಹಸ್ರ ಮತ್ತು ಇಪ್ಪ

ತ್ರೀಳುನಾವಿರ ಉತ್ಕೃಷ್ಟ ಶ್ರಾವಿಕೆಯರ ಸಂಘವಿತ್ತು. ಈ ಪ್ರಕಾರ ೨೦೮ನೆಯ ಸೂತ್ರದ ವರೆಗೆ ದಶ-ಶತ-ಸಹಸ್ರಗಳವರೆಗೆ ತಲುಪಿದೆ. ಮುಂದೆ ಕೋಟಿ ಕ್ರಮದಿಂದ ಕಥನ ಮಾಡುತ್ತ ೨೧೦ನೆಯ ಸೂತ್ರದಲ್ಲಿ ಭಗವಾನ್ ಋಷಭದೇವನಿಂದ ಅಂತಿಮ ತೀರ್ಥಂಕರ ಭಗವಾನ್ ವರ್ಧಮಾನ ಮಹಾವೀರನವರೆಗೆ ಅಂತರಕಾಲವು ಒಂದು ಸಾಗರೋಪಮ ಕೋಟಾಕೋಟಿ ಎಂದು ನಿರ್ದಿಷ್ಟಗೊಳಿಸಲಾಗಿದೆ. ತರುವಾಯ ೨೧೧ನೆಯ ಸೂತ್ರದಿಂದ ೨೨೭ನೆಯ ಸೂತ್ರದ ವರೆಗೆ ಆಚಾರಾಂಗವೇ ಮೊದಲಾದ ಹನ್ನೆರಡು ಅಂಗಗಳ ವಿಭಜನೆ ಮತ್ತು ವಿಷಯಗಳ ಸಂಕ್ಷಿಪ್ತ ಪರಿಚಯಗಳನ್ನು ಕೊಡಲಾಗಿದೆ. ಇಲ್ಲಿ ಈ ರಚನೆಗಳಿಗೆ ದ್ವಾದಶ ಗಣಿಪಿಟಕಗಳೆಂದು ಹೇಳಿದೆ. ಇದರ ನಂತರ ಜೀವ ರಾಶಿಯ ವಿವರಣವನ್ನು ಮಾಡುತ್ತ ಸ್ವರ್ಗ ಮತ್ತು ನರಕ ಭೂಮಿಗಳ ವರ್ಣನೆಯನ್ನು ಮಾಡಿದ್ದು ಕಂಡುಬರುತ್ತದೆ. ೨೪೭ನೆಯ ಸೂತ್ರದಿಂದ ಕೊನೆಯ ೨೭೫ನೆಯ ಸೂತ್ರದ ವರೆಗೆ ಕುಲಂಕರ, ತೀರ್ಥಂಕರ, ಚಕ್ರವರ್ತಿ, ಬಲದೇವ ಮತ್ತು ವಾಸುದೇವ ಹಾಗೂ ಅವರ ಪ್ರತಿ ಶತ್ರುಗಳು (ಪ್ರತಿ ವಾಸುದೇವ) ಅವರ ತಂದೆ, ತಾಯಿ, ಜನ್ಮಸ್ಥಳ, ದೀಕ್ಷಾಸ್ಥಾನ ಮೊದಲಾದವುಗಳನ್ನು ನಾಮಾವಲೀ ಕ್ರಮದಿಂದ ವಿವರಿಸಲಾಗಿದೆ. ಈ ಭಾಗಕ್ಕೆ ನಾವು ಸಂಕ್ಷಿಪ್ತ ಜೈನ ಪುರಾಣವೆಂದು ಹೇಳುತ್ತೇವೆ. ೧೩೨ನೆಯ ಸೂತ್ರದಲ್ಲಿ ಉತ್ತಮ—ಶಲಾಕಾ-ಪುರುಷರ ಸಂಖ್ಯೆಯು ೫೪ ಎಂದು ನಿರ್ದಿಷ್ಟಗೊಳಿಸಲಾಗಿದೆ. ಅರವತ್ತುಮೂರು ಅಲ್ಲ. ಈ ಮಾತಿನ ಕಡೆಗೆ ವಿಶೇಷ ಲಕ್ಷ ಪೂರೈಸುವಂತಿದೆ. ಇಲ್ಲಿ ಒಂಭತ್ತು ಜನ ಪ್ರತಿ ವಾಸುದೇವರನ್ನು ಶಲಾಕಾಪುರುಷರೆಂದು ಸ್ವೀಕರಿಸಿಲ್ಲ. ಇನ್ನು ೪೬ ಸಂಖ್ಯೆಯ ಪ್ರಸಂಗದಲ್ಲಿ ದೃಷ್ಟಿವಾದ ಅಂಗದ ಮಾತೃಕೆಯ ಪದ ಹಾಗೂ ಬ್ರಾಹ್ಮಿಲಿಪಿಯ ನಲವತ್ತಾರು ಮಾತೃಕಾ ಅಕ್ಷರಗಳ ಉಲ್ಲೇಖವಾಗಿದೆ. ೧೨೪ನೆಯ ಸೂತ್ರದಿಂದ ೧೩೦ನೆಯ ಸೂತ್ರದ ವರೆಗೆ ಮೋಹನೀಯ ಕರ್ಮದ ೫೨ ಪರ್ಯಾಯ ವಾಚಿ ಹೆಸರುಗಳ ಲೆಕ್ಕವನ್ನು ಕೊಡಲಾಗಿದೆ. ಅವುಗಳ ಕ್ರಮ ಹೀಗಿದೆ: ಕ್ರೋಧ, ಕೋಪ, ರೋಷ, ದ್ವೇಷ, ಅಕ್ಷಮ, ಸಂಜ್ವಲನ, ಕಲಹ ಮೊದಲಾದುವುಗಳು. ಅನೇಕ ಸ್ಥಳಗಳಲ್ಲಿ—ಸೂತ್ರ ೧೪೧, ೧೬೨—ಅರಹಂತನಾದ ಋಷಭನಿಗೆ ' ಕೋಸಲೀಯ ' ಎಂಬ ವಿಶೇಷಣವನ್ನು ಉಪಯೋಗಿಸಲಾಗಿದೆ. ಇದು ಅವನು ಕೋಸಲದೇಶದವನೆಂಬುದಕ್ಕೆ ಸೂಚಕವಾಗಿದೆ. ಇದರಿಂದ, ಭಗವಾನ್ ಮಹಾವೀರನಿಗೆ ಅನೇಕ ಕಡೆಗೆ ಬಳಸಿದ ' ವೇಸಾಲೀಯ ' ವಿಶೇಷಣವು ಅವನು ವೈಶಾಲಿಯ ನಾಗರಿಕನೆಂಬುದಕ್ಕಾಗಿಯೇ ಇದೆ ಎಂಬುದು ಸ್ಪಷ್ಟವಾಗುತ್ತದೆ. ೧೫೦ನೆಯ ಸೂತ್ರದಲ್ಲಿ ಲೇಖ, ಗಣಿತ, ರೂಪ, ನಾಟ್ಯ, ಗೀತ, ವಾದಿತ್ರ ಮೊದಲಾದ ಎಪ್ಪತ್ತೆರಡು ಕಲೆಗಳ ಹೆಸರುಗಳನ್ನು ನಿರ್ದಿಷ್ಟಗೊಳಿಸಲಾಗಿದೆ. ಈ ಪ್ರಕಾರ ಜೈನ ಸಿದ್ಧಾಂತ ಮತ್ತು ಇತಿಹಾಸ ಪರಂಪರೆಗಳ ಅಧ್ಯಯನದ ದೃಷ್ಟಿಯಿಂದ ಈ ವೃತ್ತಾಂಗವು ಮಹತ್ವಪೂರ್ಣವಾಗಿದೆ. ಇದರ ಹೆಚ್ಚು ಭಾಗವು ಗದ್ಯರೂಪದಲ್ಲಿದೆ. ಆದರೂ ನಡು ನಡುವೆ ನಾಮಾವಲಿಗಳನ್ನೂ ಮತ್ತು ಅನ್ಯ ವಿವರಣಗಳನ್ನೂ ಗಾಥೆಗಳ ಮೂಲಕವೂ ಪ್ರಸ್ತಾಪಿಸಲಾಗಿದೆ.

೫. ಭಗವತೀ ವ್ಯಾಖ್ಯಾಪ್ರಜ್ಞಪ್ತಿ (ವಿಯಾಹ-ಪಣ್ಣತ್ತಿ)—ಇದನ್ನು
ಸಂಕ್ಷೇಪ ರೂಪದಲ್ಲಿ ಕೇವಲ ಭಗವತೀ ಎಂಬ ಹೆಸರಿನಿಂದಲೂ ಉಲ್ಲೇಖಿಸಲಾಗುತ್ತಿದೆ.
ಇದರಲ್ಲಿ ೪೧ ಶತಕಗಳಿವೆ. ಪ್ರತಿಯೊಂದು ಶತಕವು ಅನೇಕ ಉದ್ದೇಶಗಳಲ್ಲಿ ವಿಭಾಗ
ಗೊಂಡಿದೆ. ಮೊದಲಿನ ಎಂಟು ಶತಕಗಳು, ೧೨–೧೩–೧೪ ಹಾಗೂ ೧೮–೧೯–೨೦
ಈ ಹದಿನಾಲ್ಕು ಶತಕಗಳು ಪ್ರತಿಯೊಂದು ಹತ್ತು ಉದ್ದೇಶಗಳಿಂದ ಕೂಡಿವೆ. ಉಳಿದ
ಶತಕಗಳಲ್ಲಿ ಉದ್ದೇಶಕಗಳ ಸಂಖ್ಯೆಯು ಹೆಚ್ಚು ಕಡಿಮೆ ಪ್ರಮಾಣದಲ್ಲಿ ಇದೆ. ಹದಿ
ನೈದನೆಯ ಶತಕದಲ್ಲಿ ಉದ್ದೇಶಕಗಳು ಇಲ್ಲ, ಅದು ಅಖಂಡರೂಪದಲ್ಲಿದೆ. ಇದರಲ್ಲಿ
ಮಂಖಲೀಗೋಶಾಲನ ಚರಿತ್ರವು ಸ್ವತಂತ್ರ ಗ್ರಂಥದಂತೆ ಇದೆ. ಕೆಲವೊಂದೆಡೆಯಲ್ಲಿ
ಉದ್ದೇಶಕಗಳ ಸಂಖ್ಯೆಯು ವಿಶೇಷ ಪ್ರಕಾರದ ವಿಭಾಗಗಳಿಗನುಸರಿಸಿ ಗುಣಿತ ಕ್ರಮ
ದಿಂದ ಹೇಳಲಾಗಿದೆ, ಹೇಗೆಂದರೆ ೪೧ನೆಯ ಶತಕದಲ್ಲಿ ೨೮ ಪ್ರಕಾರದ ಪ್ರರೂಪಣಾ
ಗಳ ಗುಣಾ ಮಾತ್ರದಿಂದ ಉದ್ದೇಶಕಗಳ ಸಂಖ್ಯೆಯು ೧೯೬ ಆಗಿದೆ. ೩೩ನೆಯ ಶತಕ
ದಲ್ಲಿ ೧೨ ಅಂತರ್ಗತ ಶತಕಗಳಿವೆ. ಇವುಗಳಲ್ಲಿ ಮೊದಲಿನ ಎಂಟು, ೧೧ರಿಂದ ಗುಣಿ
ಸುವ ಕ್ರಮದಿಂದ ೮೮ ಉದ್ದೇಶಕಗಳೂ ಉಳಿದ ನಾಲ್ಕನ್ನು ಒಂಭತ್ತು ಉದ್ದೇಶ
ಸಂಖ್ಯೆಯಿಂದ ಗುಣಿಸುವುದರಿಂದ ೩೬ ಉದ್ದೇಶಕಗಳೂ ಉಂಟಾಗುತ್ತವೆ. ಎರಡೂ
ಸೇರಿ ಸಂಪೂರ್ಣ ಉದ್ದೇಶಕಗಳ ಸಂಖ್ಯೆಯು ೧೨೪ ಆಗುತ್ತದೆ. ಈ ನಮೂನೆ ರಚನೆ
ಯನ್ನು ಸೂತ್ರ ಕ್ರಮದಿಂದಲೂ ವಿಭಜನೆಗೊಳಿಸಿದ್ದು ಕಂಡುಬರುತ್ತದೆ. ಅದಕ್ಕನು
ಸರಿಸಿ ಒಟ್ಟು ಸೂತ್ರಗಳ ಸಂಖ್ಯೆಯು ೮೬೭ ಆಗುತ್ತದೆ. ಈ ಪ್ರಕಾರ ಇದು ಅನ್ಯ
ಶ್ರುತಾಂಗಗಳಿಗಿಂತ ಬಹಳಷ್ಟು ವಿಶಾಲವಾಗಿದೆ. ಇದರಲ್ಲಿ ವಿಷಯ ವಿವರಣೆಯ
ರೀತಿಯು ಪ್ರಶ್ನೋತ್ತರ ರೂಪದಲ್ಲಿದೆ, ಗೌತಮ ಗಣಧರರು ಜಿಜ್ಞಾಸಾ ಭಾವದಿಂದ
ಪ್ರಶ್ನೆಗಳನ್ನು ಕೇಳುವವರು, ಸ್ವತಃ ತೀರ್ಥಂಕರ ಮಹಾವೀರರು ಉತ್ತರ ಕೊಡುವರು.
ಟೀಕಾಕಾರನಾದ ಅಭಯದೇವನು ಈ ಪ್ರಶ್ನೋತ್ತರಗಳ ಸಂಖ್ಯೆಯನ್ನು ೩೬೦೦೦
ಎಂದು ಹೇಳಿದ್ದಾನೆ. ಪ್ರಶ್ನೋತ್ತರಗಳು ಕೆಲವೊಂದೆಡೆಯಲ್ಲಿ ಬಹು ಚಿಕ್ಕ ಚಿಕ್ಕವೂ
ಇವೆ. ಮಾದರಿಗೆಂದು ಇವನ್ನು ನೋಡಬಹುದು :—ಭಗವನ್ ಜ್ಞಾನದ ಫಲವು
ಏನಿದೆ ?—ವಿಜ್ಞಾನ. ವಿಜ್ಞಾನದ ಫಲವೇನು ?—ಪ್ರತ್ಯಾಖ್ಯಾನ. ಪ್ರತ್ಯಾಖ್ಯಾನದ
ಫಲವೇನು ?—ಸಂಯಮ ; ಹೀಗೆ ಮುಂದರಿದಿದೆ. ಇಂಥ ಪ್ರಶ್ನೆಗಳಲ್ಲಿಯೇ ಒಂದೇ
ಪ್ರಶ್ನೆಯ ಉತ್ತರವೆಂದು ಮಂಖಲಿಗೋಶಾಲನ ಚರಿತ್ರವನ್ನೆಲ್ಲ ಹದಿನೈದನೆಯ ಶತಕದ
ತುಂಬ ವಿವರಿಸಲಾಗಿದೆ. ಈ ಪ್ರಶ್ನೋತ್ತರಗಳಲ್ಲಿ ಜೈನ ಸಿದ್ಧಾಂತ ಮತ್ತು ಇತಿಹಾಸ
ಅಲ್ಲದೆ ಅನ್ಯ ಸಾಮಯಿಕ ಘಟನೆಗಳು ಹಾಗೂ ವ್ಯಕ್ತಿಗಳು ಇವೆಲ್ಲದರ ವಿಪುಲ ಸಂಗ್ರಹ
ವಿದೆ. ಅದರಿಂದ ಇದನ್ನು ಪ್ರಾಚೀನ ಜೈನ-ಕೋಶವೆಂದು ಹೇಳಿದರೆ ಅನುಚಿತವಾಗ
ಲಾರದು. ಅಲ್ಲಲ್ಲಿ ಪಣ್ಣವಣಾ, ಜೀವಾಭಿಗಮ, ಉವವಾಇಯ, ರಾಯಪಸೇಣಿಜ್ಜ,
ಣಂದಿ ಮೊದಲಾದ ಅನ್ಯ ಗ್ರಂಥಗಳನ್ನು ಉಲ್ಲೇಖಿಸಿ, ಸಂಕ್ಷಿಪ್ತಗೊಳಿಸಿ, ಇದೇ
ಪ್ರಕಾರ ಉದ್ದೇಶಕ್ಕೆ ಉದ್ದೇಶವನ್ನೇ ಪೂರ್ಣಮಾಡಿದ್ದೂ ಉಂಟು. ಇಲ್ಲಿ ಹೀಗೆ

ಉಲ್ಲೇಖಗೊಂಡ ಗ್ರಂಥಗಳು ನಿಶ್ಚಯವಾಗಿಯೂ ಹನ್ನೊಂದು ಶ್ರುತಾಂಗಗಳ ರಚನಾ ಕಾಲದ ತರುವಾಯ ರೂಪುಗೊಂಡವುಗಳಾಗಿವೆ, ನಂದಿ ಸೂತ್ರವಂತೂ ವಲ್ಲಭೀವಾಚನದ ನಾಯಕನಾದ ದೇವರ್ಧಿಗಣಿ ಕ್ಷಮಾಶ್ರಮಣನ ರಚನೆಯೆಂದು ಮನ್ನಿಸಲಾಗುತ್ತದೆ. ಇದೂ ಕೂಡ ಈ ಗ್ರಂಥದಲ್ಲಿ ಉಲ್ಲೇಖಗೊಳ್ಳುವುದರಿಂದಲೂ ಇಲ್ಲಿಯ ವಿಷಯ ವಿವರಣೆಯನ್ನು ಪೂರ್ಣಗೊಳಿಸುವ ರೀತಿಯಿಂದಲೂ ಈ ಶ್ರುತಾಂಗವು ಈಗಿರುವ ತನ್ನ ರೂಪದಲ್ಲಿ ನಂದಿಸೂತ್ರದ ತರುವಾಯ ಸಿದ್ಧವಾಯಿತೆಂದು ನಿಶ್ಚಿತವಾಗುತ್ತದೆ. ಆ ಕಾಲವು ವೀರ ನಿರ್ವಾಣದಿಂದ ಸುಮಾರು ೧೦೦೦ ವರ್ಷ ಈಚಿನದೆಂದು ಗೊತ್ತಾಗುತ್ತದೆ. ಇದೇ ಮಾತು ಬಹುತರ ಅನ್ಯ ಶ್ರುತಾಂಗಗಳ ವಿಷಯದಲ್ಲಿಯೂ ಸಂಬಂಧಿಸುತ್ತದೆ. ಆದರೂ ವಿಷಯ ವರ್ಣನೆಗಳು ಪ್ರಾಚೀನವಾಗಿವೆ, ಆಚಾರ್ಯ ಪರಂಪರೆಯಿಂದ ಬಂದುದಾಗಿವೆ—ಇದರಲ್ಲಿ ಯಾವ ಸಂದೇಹವೂ ಇಲ್ಲ. ಇದರಲ್ಲಿ ನಮಗೆ ಮಹಾವೀರನ ಜೀವನವಲ್ಲದೆ, ಅವನ ಅನೇಕ ಶಿಷ್ಯರು, ಗೃಹಸ್ಥರು, ಅನುಯಾಯಿಗಳು, ಅನ್ಯ ತೀರ್ಥಕರು ಇವರೆಲ್ಲರ ಪರಿಚಯವು ಲಭಿಸುತ್ತದೆ. ಅದು ಐತಿಹಾಸಿಕ ದೃಷ್ಟಿಯಿಂದ ಬಹು ಮಹತ್ವ ಪೂರ್ಣವಾಗಿದೆ. ಆಜೀವಕ ಸಂಪ್ರದಾಯದ ಸಂಸ್ಥಾಪಕನಾದ ಮಂಖಲಿಗೋಶಾಲನ ಜೀವನ ಚರಿತ್ರೆಯು ಇದರಲ್ಲಿ ವಿಸ್ತೃತ ರೂಪದಲ್ಲಿ ದೊರೆಯುತ್ತದೆ. ಇಷ್ಟು ಇನ್ನೆಲ್ಲಿಯೂ ಲಭಿಸುವುದಿಲ್ಲ. ಅಲ್ಲಲ್ಲಿ ಪಾರ್ಶ್ವಾಪತ್ಯ ಅರ್ಥಾತ್ ಪಾರ್ಶ್ವನಾಥನ ಅನುಯಾಯಿಗಳು ಹಾಗೂ ಅವರಿಂದ ಮನ್ನಿಸಲ್ಪಡುವ ಚಾತುರ್ಯಾಮ ಧರ್ಮದ ಉಲ್ಲೇಖವು ಬರುತ್ತದೆ. ಇದರಿಂದ ಮಹಾವೀರನ ಕಾಲದಲ್ಲಿ ಈ ನಿರ್ಗ್ರಂಥ ಸಂಪ್ರದಾಯವು ಸ್ವತಂತ್ರರೂಪದಲ್ಲಿ ಪ್ರಚಲಿತವಿತ್ತೆಂದು ಸ್ಪಷ್ಟವಾಗುತ್ತದೆ. ಇದರ ಸಂಬಂಧವು ಮಹಾವೀರನಿಂದ ಪ್ರತಿಪಾದಿತವಾದ ಪಂಚಮಹಾವ್ರತ ರೂಪ ಧರ್ಮದ ಕೂಡ ಬಹು ಹತ್ತಿರದಾಗಿತ್ತು. ಅಲ್ಲದೆ ಆಜೀವಕ ಸಂಪ್ರದಾಯವು ಕ್ರಮದಿಂದ ಮಹಾವೀರನ ಸಂಪ್ರದಾಯದಲ್ಲಿ ಸಮಾವೇಶಗೊಳ್ಳುತ್ತ ಹೋದುದೂ ಕಂಡು ಬರುತ್ತದೆ. ಐತಿಹಾಸಿಕ ಮತ್ತು ರಾಜನೈತಿಕ ದೃಷ್ಟಿಯಿಂದ ಏಳನೆಯ ಶತಕದಲ್ಲಿ ಉಲ್ಲೇಖಿತ, ವೈಶಾಲಿಯಲ್ಲಿ ಆದ ಮಹಾಶಿಲಾಷ್ಟಕ ಸಂಗ್ರಾಮ ಹಾಗೂ ರಥಮುಸಲ ಸಂಗ್ರಾಮ, ಈ ಎರಡು ಮಹಾಯುದ್ಧಗಳ ವರ್ಣನೆಯು ಅಪೂರ್ವವಾಗಿದೆ. ಈ ಯುದ್ಧಗಳಲ್ಲಿ ಒಂದು ಪಕ್ಷಕ್ಕೆ ವಜ್ಜೀ ಹಾಗೂ ವಿದೇಹ ಪುತ್ರರು ಇದ್ದರು. ಇನ್ನೊಂದು ಪಕ್ಷದಲ್ಲಿ ಒಂಭತ್ತು ಮಲ್ಲರಾಜರು, ಒಂಭತ್ತು ಲಿಚ್ಛವಿ ಅರಸರು, ಕಾಶಿ, ಕೋಸಲ ಮೊದಲಾದ ಹದಿನೆಂಟು ಜನ ಗಣರಾಜರಿದ್ದರು. ಈ ಯುದ್ಧಗಳಲ್ಲಿ ವಜ್ಜೀ ವಿದೇಹಪುತ್ರ ಕುಣಿಕ (ಅಜಾತಶತ್ರು) ಇವರಿಗೆ ಗೆಲುವು ದೊರೆಯಿತು. ಮೊದಲನೆಯ ಯುದ್ಧದಲ್ಲಿ ೮೪ ಮತ್ತು ಎರಡನೆಯ ಯುದ್ಧದಲ್ಲಿ ೯೬ ಲಕ್ಷ ಜನರು ಮಡಿದರು. ೨೧, ೨೨, ೨೩ನೆಯ ಶತಕಗಳು ವನಸ್ಪತಿ ಶಾಸ್ತ್ರದ ಅಧ್ಯಯನ ದೃಷ್ಟಿಯಿಂದ ಬಹು ಮಹತ್ವಪೂರ್ಣವಾಗಿವೆ. ಅದರಲ್ಲಿ ವಿವಿಧ ಪ್ರಕಾರದ ವನಸ್ಪತಿಗಳ ವರ್ಗೀಕರಣವನ್ನು ಮಾಡಲಾಗಿದೆ. ಅವುಗಳಲ್ಲಿ ಕಂದ, ಮೂಲ, ಸ್ಕಂಧ, ತ್ವಚಾ, ಶಾಖಾ, ಪ್ರವಾಲ, ಪತ್ರ, ಪುಷ್ಪ, ಫಲ

ಮತ್ತು ಬೀಜಗಳ ಸಜೀವತ್ವ ನಿರ್ಜೀವತ್ವಗಳ ದೃಷ್ಟಿಯಿಂದ ವಿಚಾರ ಮಾಡಲಾಗಿದೆ.

೬. ಜ್ಞಾತೃಧರ್ಮ ಕಥಾ (ನಾಯೆಧಮ್ಮಕಹಾಓ)— ಈ ಆಗಮವು ಎರಡು ಶ್ರುತಸ್ಕಂಧಗಳಲ್ಲಿ ವಿಭಾಜಿತಗೊಂಡಿದೆ. ಮೊದಲನೆಯ ಶ್ರುತಸ್ಕಂಧದಲ್ಲಿ ೧೯ ಅಧ್ಯಾಯಗಳಿವೆ. ಇದರ ಹೆಸರಿನ ಸಾರ್ಥಕತೆಯನ್ನು ಎರಡು ದೃಷ್ಟಿಗಳಿಂದ ತಿಳಿಯಲಾಗುತ್ತಿದೆ. ಮೊದಲನೆಯದು, ಸಂಸ್ಕೃತ ರೂಪಾಂತರವಾದ ಜ್ಞಾತೃ ಧರ್ಮ ಕಥೆಗೆ ಅನುಸರಿಸಿ, ಈ ಶ್ರುತಾಂಗದಲ್ಲಿ ಜ್ಞಾತೃ ಅರ್ಥಾತ್ ಜ್ಞಾತೃ ಪುತ್ರ ಭಗವಾನ್ ಮಹಾವೀರನಿಂದ ಉಪದೇಶಿಸಲ್ಪಟ್ಟ ಕಥೆಗಳ ಪ್ರರೂಪಣೆಯು ಇದೆಯೆಂದು ಪ್ರಕಟ ವಾಗುತ್ತದೆ, ಇನ್ನೊಂದು ಸಂಸ್ಕೃತ ರೂಪಾಂತರ ನ್ಯಾಯಧರ್ಮ ಕಥೆಯೂ ಸಂಭವ ನೀಯವಾಗಿದೆ. ಅದಕ್ಕನುಸರಿಸಿ ಇದರಲ್ಲಿ ನ್ಯಾಯ ಅರ್ಥಾತ್ ಜ್ಞಾನ ಮತ್ತು ನೀತಿಗೆ ಸಂಬಂಧಿಸಿದ ಸಾಮಾನ್ಯ ನಿಯಮ ಮತ್ತು ಅವುಗಳನ್ನು ದೃಷ್ಟಾಂತಗಳ ಮೂಲಕ ತಿಳಿಸಿ ಹೇಳುವ ಕಥೆಗಳು ಸಮಾವೇಶವಾಗುತ್ತವೆ. ರಚನೆಯ ಸ್ವರೂಪವನ್ನು ನಿರೀಕ್ಷಿಸಿ ದಲ್ಲಿ ಇದು ಎರಡನೆಯ ಮಾದರಿಯ ಸಂಸ್ಕೃತ ರೂಪಾಂತರವಾಗಿರುವುದೇ ಉಚಿತ ವೆಂದು ತೋರುತ್ತದೆ ಆದರೂ ಪ್ರಚಲಿತವಾಗಿರುವ ಹೆಸರು ಜ್ಞಾತೃ ಧರ್ಮ ಕಥಾ ಎಂಬುದೇ ಕಂಡುಬರುತ್ತದೆ. ಮೊದಲನೆಯ ಅಧ್ಯಾಯದಲ್ಲಿ ರಾಜಗೃಹದ ರಾಜನಾದ ಶ್ರೇಣಿಕನ ರಾಣಿಯಾದ ಧಾರಿಣೀದೇವಿಯಿಂದ ಜನಿಸಿದ ರಾಜಪುತ್ರ ಮೇಘಕುಮಾರನ ಕಥಾನಕವಿದೆ. ಈ ರಾಜಕುಮಾರನು ವೈಭವದಿಂದ ಬಾಲ್ಯ ಕಾಲವನ್ನು ಕಳೆಯು ತ್ತಾನೆ; ಸಮಸ್ತ ವಿದ್ಯೆಗಳನ್ನೂ ಕಲೆಗಳನ್ನೂ ಕಲಿಯುತ್ತಾನೆ, ಯುವಾವಸ್ಥೆಯನ್ನು ಹೊಂದುತ್ತಾನೆ; ಅವನೊಡನೆ ಅನೇಕ ರಾಜಕನ್ಯೆಯರ ವಿವಾಹವಾಗುತ್ತದೆ. ಒಂದು ಸಲ ಮಹಾವೀರನ ಉಪದೇಶವನ್ನು ಕೇಳಿ ಮೇಘಕುಮಾರನಿಗೆ ಮುನಿ ದೀಕ್ಷೆಯನ್ನು ಧಾರಣ ಮಾಡುವ ಇಚ್ಛೆಯು ಉಂಟಾಯಿತು.. ತಾಯಿಯು ಬಹಳಷ್ಟು ತಿಳಿಸಿ ಹೇಳಿ ದಳು. ಆದರೆ ರಾಜಪುತ್ರನು ಕೇಳಲಿಲ್ಲ. ಅವನು ಪ್ರವ್ರಜ್ಯೆಯನ್ನು ಗ್ರಹಣ ಮಾಡಿಯೇ ತೀರಿದನು. ಮುನಿ ಧರ್ಮವನ್ನು ಪಾಲನೆ ಮಾಡುವಾಗ ಅವನ ಹೃದಯದಲ್ಲಿ ಒಮ್ಮೆ ಕೆಲವೊಂದು ಕ್ಷೋಭೆಯು ಉಂಟಾಯಿತು. ತಾನು ರಾಜ್ಯವನ್ನು ತ್ಯಜಿಸಿ, ಮುನಿದೀಕ್ಷೆ ಯನ್ನು ಸ್ವೀಕರಿಸಿದ್ದು ತಪ್ಪಾಯಿತೆಂದು ಆಗ ಅವನಿಗೆ ಅನಿಸಿತು. ಆ ಸಂದರ್ಭದಲ್ಲಿ ಭಗವಾನ್ ಮಹಾವೀರನು ಅವನ ಪೂರ್ವ ಭವದ ವೃತ್ತಾಂತವನ್ನು ವಿವರಿಸಿ ಹೇಳಲು ಅವನ ಚಿತ್ತವು ಪುನಃ ಮುನಿ ಧರ್ಮಾಚರಣೆಯಲ್ಲಿ ಸ್ಥಿರಗೊಂಡಿತು. ಇದೇ ಪ್ರಕಾರ ಭಿನ್ನಭಿನ್ನ ಅಧ್ಯಾಯಗಳಲ್ಲಿ ಬೇರೆ ಬೇರೆ ಕಥಾನಕಗಳೂ ಅವುಗಳ ಮುಖಾಂತರ ತಪ, ತ್ಯಾಗ, ಸಂಯಮಗಳಿಗೆ ಸಂಬಂಧಿಸಿದ ನೀತಿ ಮತ್ತು ನ್ಯಾಯದ ಸ್ಥಾಪನೆಯನ್ನು ಮಾಡ ಲಾಗಿದೆ. ಎಂಟನೆಯ ಅಧ್ಯಾಯದಲ್ಲಿ ವಿದೇಹ ರಾಜಕನ್ಯೆಯಾದ ಮಲ್ಲಿ ಹಾಗೂ ಹದಿ ನಾರನೆಯ ಅಧ್ಯಾಯದ ದ್ರೌಪದಿಯ ಪೂರ್ವ ಜನ್ಮ ಕಥೆಗಳು ವಿಶೇಷ ಧ್ಯಾನ ಕೊಡ ಲಿಕ್ಕೆ ಯೋಗ್ಯವಾಗಿವೆ. ವ್ರತ-ಕಥೆಗಳಲ್ಲಿ ಸುಪ್ರಚಲಿತವಾದ ಸುಗಂಧ-ದಶಮೀ ಕಥೆಯ ಮೂಲಾಧಾರವು ದ್ರೌಪದಿಯ ಪೂರ್ವಭವವಾದ ನಾಗಶ್ರೀ ಮತ್ತು ಸುಕುಮಾ

ಲಿಯೂ ಇವರ ಚರಿತ್ರವೆಂದು ಸಿದ್ಧವಾಗತ್ತದೆ. ದ್ವಿತೀಯ ಶ್ರುತಸ್ಕಂಧವು ಹತ್ತು ವರ್ಗ ಗಳಲ್ಲಿ ವಿಭಜನೆಗೊಂಡಿದೆ. ಪ್ರತಿಯೊಂದು ವರ್ಗದಲ್ಲಿಯೂ ಪುನಃ ಅನೇಕ ಅಧ್ಯಯನ ಗಳಿವೆ. ಈ ವರ್ಗಗಳಲ್ಲಿ ಬಹುತರ ಸ್ವರ್ಗಗಳ ಇಂದ್ರರಂಧವರು, ಚಮರೇಂದ್ರ, ಅಸು ರೇಂದ್ರ, ವಾಣವ್ಯಂತರೇಂದ್ರ, ಚಂದ್ರ ಸೂರ್ಯ, ಶಕ್ರ ಮತ್ತು ಈಶಾನನ ಅಗ್ರ ಮಹಿ ಷಿಯ ರೂಪದಿಂದ ಹುಟ್ಟುವ ಪುಣ್ಯಶಾಲಿ ಸ್ತ್ರೀಯರ ಕಥೆಗಳಿವೆ. ಮೂರನೆಯ ವರ್ಗ ದಲ್ಲಿ ಬರುವ ದೇವಕಿಯ ಪುತ್ರನಾದ ಗಜಸುಕುಮಾಲನ ಕಥಾನಕವು ವಿಶೇಷ ಉಲ್ಲೇಖ ನೀಯವಾಗಿದೆ. ಈ ಕಥೆಯು ಮುಂದಿನ ಸಾಹಿತ್ಯದಲ್ಲಿ ಪಲ್ಲವಿತವಾಗಿ ಅವತರಿಸುತ್ತ ಹೋಗಿದೆ. ಇದೇ ಕಥಾನಕವು ಪಾಲೀ ಮಹಾವಗ್ಗದಲ್ಲಿ ಯಸ ಪಬ್ಬಜ್ಜಾ ರೂಪದಲ್ಲಿ ನಮಗೆ ಲಭಿಸುತ್ತದೆ.

೭. ಉಪಾಸಕಾಧ್ಯಯನ (ಉವಾಸಗದಸಾಓ)—ಈ ಶ್ರುತಾಂಗದಲ್ಲಿ ಹೆಸರಿನಲ್ಲಿಯೇ ಸೂಚಿತಗೊಂಡಂತೆ, ದಶ ಅಧ್ಯಯನಗಳಿವೆ. ಇವುಗಳಲ್ಲಿ ಕ್ರಮವಾಗಿ ಆನಂದ, ಕಾಮದೇವ, ಚುಲನೀಪ್ರಿಯ, ಸುರಾದೇವ, ಚುಲ್ಲಶತಕ, ಕುಂಡಕೋಲಿಯ, ಸದ್ದಾಲಪುತ್ರ, ಮಹಾಶತಕ, ನಂದಿನೀಪ್ರಿಯ ಮತ್ತು ಸಾಲಹೀಪ್ರಿಯ ಈ ಹತ್ತು ಜನ ಉಪಾಸಕರ ಕಥಾನಕಗಳಿವೆ. ಈ ಕಥಾನಕಗಳ ಮುಖಾಂತರ ಜೈನ ಗೃಹಸ್ಥರ ಧಾರ್ಮಿಕ ನಿಯಮಗಳನ್ನು ತಿಳಿಸಿ ಹೇಳಲಾಗಿದೆ. ಇದರಲ್ಲಿ ಉಪಾಸಕರು ತಮ್ಮ ಧರ್ಮ ಪರಿಪಾ ಲನೆಯಲ್ಲಿ ಹೇಗೆ ಹೇಗೆ ವಿಘ್ನಗಳನ್ನೂ ಪ್ರಲೋಭನಗಳನ್ನೂ ಎದುರಿಸಬೇಕಾಗುತ್ತ ದೆಂಬುದನ್ನೂ ವಿವರಿಸಲಾಗಿದೆ. ಮೊದಲನೆಯ ಆನಂದ ಎಂಬ ಅಧ್ಯಯನದಲ್ಲಿ ಐದು ಅಣುವ್ರತಗಳು, ಮೂರು ಗುಣವ್ರತಗಳು ಮತ್ತು ನಾಲ್ಕು ಶಿಕ್ಷಾವ್ರತಗಳು—ಈ ಹನ್ನೆ ರಡು ವ್ರತ ಹಾಗು ಅತಿಚಾರಗಳ ಸ್ವರೂಪವನ್ನು ವಿಸ್ತಾರವಾಗಿ ವರ್ಣಿಸಿ ತಿಳಿಸಿಕೊಡ ಲಾಗಿದೆ. ಇವನ್ನು ವಿಧಿಪೂರ್ವಕವಾಗಿ ಪಾಲಿಸಿದವನು ವಾಣಿಜ್ಯಗ್ರಾಮದ ಜೈನ ಗೃಹ ಸ್ಥನಾದ ಆನಂದನು. ಆನಂದನು ಬಹು ಸಿರಿವಂತ ಗೃಹಸ್ಥನು. ಅವನ ಧನ-ಧಾನ್ಯ ಸಂಪತ್ತು ಕೋಟ್ಯಾವಧಿ ಸುವರ್ಣ ಮುದ್ರೆಗಳ ಪರಿಮಾಣದಲ್ಲಿತ್ತು. ಆನಂದನು ಸ್ವತಃ ಭಗವಾನ್ ಮಹಾವೀರನಿಂದ ಗೃಹಸ್ಥ-ವ್ರತವನ್ನು ಸ್ವೀಕರಿಸಿ, ತನ್ನ ಸಮಸ್ತ ಪರಿಗ್ರಹ ಮತ್ತು ಭೋಗೋಪಭೋಗಗಳ ಪರಿಮಾಣವನ್ನು ಸೀಮಿತಗೊಳಿಸಿದ್ದನು. ಅವನು ಕ್ರಮದಿಂದ ತನ್ನ ಧರ್ಮ ಸಾಧನೆಯನ್ನು ಬೆಳೆಯಿಸಿ, ಇಪ್ಪತ್ತು ವರ್ಷಗಳಲ್ಲಿ ಅವಧಿ ಜ್ಞಾನವನ್ನೂ ಸಂಪಾದಿಸಿದ್ದನು. ಇವನ ವಿಷಯದಲ್ಲಿ ಸ್ವತಃ ಗೌತಮ ಗಣಧರನಿಗೆ ಕೆಲವೊಂದು ಸಂಶಯಗಳು ನಿರ್ಮಾಣವಾದುವು. ಸ್ವತಃ ಭಗವಾನ್ ಮಹಾವೀರರು ಅವುಗಳನ್ನು ನಿವಾರಿಸಿದರು. ಈ ಕಥಾನಕಕ್ಕೆ ಅನುಸರಿಸಿ ವಾಣಿಜ್ಯ ಗ್ರಾಮ ಮತ್ತು ಕೊಲ್ಲಾಗ ಸನ್ನಿವೇಶಗಳು ಸಮ-ಸಮೀಪದಲ್ಲಿದ್ದುವು. ಕೊಲ್ಲಾಗ ಸನ್ನಿವೇಶದಲ್ಲಿ ಜ್ಞಾತೃಕುಲದ ಔಷಧಶಾಲೆ ಇತ್ತು. ಅಲ್ಲಿಯ ಕೋಲಾಹಲವು ವಾಣಿಜ್ಯ ಗ್ರಾಮದ ವರೆಗೆ ಕೇಳಿಬರುತ್ತಲಿತ್ತು. ವೈಶಾಲಿಯ ಸಮೀಪದಲ್ಲಿ ಈಗ ಬನಿಯಾ ಮತ್ತು ಕೊಲುಆ ಎಂಬ ಹೆಸರಿನ ಗ್ರಾಮಗಳಿವೆ. ಅವೇ ಪ್ರಾಚೀನ ಕಾಲದ ವಾಣಿಜ್ಯ ಗ್ರಾಮ ಮತ್ತು

ಕೊಲ್ಲಾಗ ಸನ್ನಿವೇಶಗಳೆಂದು ಸಿದ್ಧವಾಗುತ್ತದೆ. ಮುಂದಿನ ನಾಲ್ಕು ಅಧ್ಯಾಯಗಳಲ್ಲಿ ಧರ್ಮದ ಪರಿಪಾಲನೆಯಲ್ಲಿ ಹೊರಗಿನ ಎಂಥ ಎಂಥ ವಿಘ್ನಗಳೂ ಬಾಧೆಗಳೂ ಬರುತ್ತವೆಂಬುದನ್ನು ಉದಾಹರಣೆ ಸಹಿತ ವಿವರಿಸಲಾಗಿದೆ. ದ್ವಿತೀಯ ಅಧ್ಯಯನದಲ್ಲಿ ಒಬ್ಬ ಮಿಥ್ಯಾದೃಷ್ಟಿ ದೇವನು ಪಿಶಾಚ ಮೊದಲಾದ ನಾನಾ ರೂಪಗಳನ್ನು ಧರಿಸಿ, ಕಾಮದೇವನ ಉಪಾಸಕರಿಗೆ ತಮ್ಮ ಸಾಧನೆಯನ್ನು ಬಿಟ್ಟುಕೊಡುವುದಕ್ಕೆ ಹೆದರಿಕೆ ಬೆದರಿಕೆ ಹಾಕುವುದನ್ನು ಸುಂದರವಾಗಿ ಚಿತ್ರಿಸಲಾಗಿದೆ. ಇಂಥ ಚಿತ್ರಗಳೇ ಮೂರನೆಯ, ನಾಲ್ಕನೆಯ ಮತ್ತು ಐದನೆಯ ಅಧ್ಯಯನಗಳಲ್ಲಿಯೂ ಕಂಡು ಬರುತ್ತವೆ. ಆರನೆಯ ಅಧ್ಯಯನದಲ್ಲಿ ಉಪಾಸಕರ ಸಮ್ಮುಖದಲ್ಲಿ ಗೋಸಾಲ ಮಂಖಲಿ ಪುತ್ರನ ಸಿದ್ಧಾಂತಗಳನ್ನು ಒಬ್ಬ ದೇವನ ವ್ಯಾಖ್ಯಾನ ಮೂಲಕ ಮಂಡಿಸಿ, ಅವನ ಧರ್ಮ ಶ್ರದ್ಧೆಯನ್ನು ಅಸ್ಥಿರಗೊಳಿಸುವ ಪ್ರಯತ್ನ ಮಾಡಲಾಗಿದೆ. ಆದರೂ ಅವನು ತನ್ನ ಶ್ರದ್ಧೆಯಲ್ಲಿ ದೃಢವಾಗಿ ನಿಲ್ಲುತ್ತಾನೆ. ಅಲ್ಲದೆ ತನ್ನ ಪ್ರತ್ಯುತ್ತರಗಳಿಂದ ಎದುರಾಳಿಯನ್ನು ಸೋಲಿಸುತ್ತಾನೆ. ಈ ಸಮಾಚಾರವನ್ನು ತಿಳಿದು ಮಹಾವೀರನು ಅವನನ್ನು ಪ್ರಶಂಸಿಸುತ್ತಾನೆ. ಈ ಪ್ರಸಂಗದಲ್ಲಿ ಗೋಸಾಲ ಮಂಖಲೀ ಪುತ್ರನ ನಿಯತಿವಾದದ ಪ್ರರೂಪಣೆಯನ್ನು ಮಾಡಲಾಗಿದೆ. ಏಳನೆಯ ಅಧ್ಯಯನದಲ್ಲಿ ಭಗವಾನ್ ಮಹಾವೀರನು ಆಜೀವಕ ಸಂಪ್ರದಾಯದ ಉಪಾಸಕನಾದ ಸದ್ದಾಲಪುತ್ರನನ್ನು ಸಂಬೋಧಿಸಿ, ಅವನನ್ನು ತನ್ನ ಅನುಯಾಯಿಯನ್ನಾಗಿ ಮಾಡಿಕೊಳ್ಳುತ್ತಾನೆ. (ಇಲ್ಲಿ ಮಹಾವೀರನಿಗೆ ಅವನ ಮಹಾ ಪ್ರವೃತ್ತಿಗಳನ್ನು ಗಮನಿಸಿ, ಮಹಾ ಬ್ರಾಹ್ಮಣ, ಮಹಾ ಗೋಪ, ಮಹಾಸಾರ್ಥವಾಹ ಮಹಾ ಧರ್ಮಕಥಿಕ ಮತ್ತು ಮಹಾ ನಿರ್ಯಾಪಕ ಎಂಬ ಉಪಾಧಿಗಳನ್ನು ಉಪಯೋಗಿಸಲಾಗಿದೆ.) ತರುವಾಯ ಅವನಿಗೆ ಮೇಲೆ ಹೇಳಿದ ಪ್ರಕಾರ ದೈವೀ ಉಪಸರ್ಗವು ಪ್ರಾಪ್ತವಾಗುತ್ತದೆ. ಆದರೆ ಅವನು ತನ್ನ ಶ್ರದ್ಧೆಯಿಂದ ಅಜಿಂಕ್ಯನೆನಿಸುತ್ತಾನೆ. ಅಲ್ಲದೆ ಕೊನೆಯವರೆಗೂ ಧರ್ಮವನ್ನು ಪಾಲಿಸಿ ಸ್ವರ್ಗವಾಸಿಯಾಗುತ್ತಾನೆ. ಎಂಟನೆಯ ಅಧ್ಯಯನದಲ್ಲಿ ಉಪಾಸಕನಿಗೆ ಅವನ ಪತ್ನಿಯಿಂದ—ಮಾಂಸಲೋಲುಪಳೂ ಅಧಾರ್ಮಿಕಳೂ ಆದುದರಿಂದ-ಧರ್ಮದಲ್ಲಿ ಬಾಧೆಯು ಉಂಟಾಗುತ್ತದೆ. ಕೊನೆಯ ಕಥಾನಕವು ಬಹಳ ಸಂಗ್ರಹ ರೂಪದಲ್ಲಿ ಶಾಂತಿಪೂರ್ವಕ ಧರ್ಮಪಾಲನೆಗೆ ಉದಾಹರಣೆಯೆಂದು ಇದೆ. ಗ್ರಂಥದ ಕೊನೆಯಲ್ಲಿ ಹನ್ನೆರಡು ಗಾಹೆಗಳಲ್ಲಿ ಈ ರಚನೆಯಲ್ಲಿ ಬರುವ ಹತ್ತು ಕಥಾನಕಗಳ ನಗರಾದಿಗಳ ಉಲ್ಲೇಖದಿಂದ ಸಾರವನ್ನು ಪ್ರಕಟಿಸಲಾಗಿದೆ. ಈ ಪ್ರಕಾರ ಈ ಶ್ರುತಾಂಗವು ಆಚಾರಾಂಗಕ್ಕೆ ಪರಿಪೂರಕವಾಗಿದೆ. ಯಾಕೆಂದರೆ ಆಚಾರಾಂಗದಲ್ಲಿ ಮುನಿಧರ್ಮದ ನಿರೂಪಣೆಯಿದ್ದೆ, ಇದರಲ್ಲಿ ಗೃಹಸ್ಥ ಧರ್ಮವನ್ನು ವಿವರಿಸಲಾಗಿದೆ. ಆನಂದ ಮೊದಲಾದ ಮಹಾ ಸಂಪತ್ತಿವಾನ್ ಗೃಹಸ್ಥರ ಜೀವನ ಚಿತ್ರಣದ ಪರಿಚಯವು ಈ ಗ್ರಂಥದಿಂದ ನಮಗೆ ಚೆನ್ನಾಗಿ ಆಗುತ್ತದೆ.

೮. ಅಂತಕೃದ್ದಶಾ—(ಅಂತಗಡ ದಸಾಓ)—ಈ ಶ್ರುತಾಂಗದಲ್ಲಿ ಎಂಟು ವರ್ಗಗಳಿವೆ. ಅವು ಕ್ರಮದಿಂದ ೧೦, ೮, ೧೩, ೧೦, ೧೦, ೧೬, ೧೩ ಮತ್ತು ೧೦

ಅಧ್ಯಯನಗಳಲ್ಲಿ ವಿಭಜನೆಗೊಂಡಿವೆ. ಇವರಲ್ಲಿ ಮಹಾಪುರುಷರ ಕಥಾನಕಗಳಿವೆ. ಆ ಮಹಾಪುರುಷರೆಲ್ಲ ಘೋರ ತಪಸ್ಸನ್ನು ಆಚರಿಸಿ, ಕೊನೆಗೆ ನಿರ್ವಾಣ ಪದವನ್ನು ಹೊಂದಿದವರು. ಇದೇ ಕಾರಣದಿಂದ ಅವರನ್ನು ಅಂತಕೃತ್ ಎಂದು ಹೇಳಲಾಗಿದೆ. ಇಲ್ಲಿಯ ಯಾವ ಕಥಾನಕವೂ ತನ್ನ ರೂಪದಲ್ಲಿ ಪೂರ್ಣವಾಗಿ ವರ್ಣಿತವಾದುದು ಕಂಡು ಬರುವುದಿಲ್ಲ. ಬಹಳಷ್ಟು ವರ್ಣನೆಗಳು ಬೇರೆಡೆಯಲ್ಲಿ ಬರುವ ವರ್ಣನೆಗಳಿಗೆ ಅನು ಸರಿಸಿ ಪೂರ್ಣ ಮಾಡಿಕೊಳ್ಳುವ ಸೂಚನೆಯನ್ನು ಮಾತ್ರ ಕೊಡುತ್ತವೆ. ಉದಾ ಹರಣೆಗೆಂದು ಮೊದಲನೆಯ ಅಧ್ಯಾಯದಲ್ಲಿ ಗೌತಮನ ಕಥಾನಕವು ದ್ವಾರಾವತೀ ನಗರದ ರಾಜನಾದ ಅಂಧಕವೃಷ್ಣಿಯ ರಾಣಿ ಧಾರಿಣೀದೇವಿಯ ಸ್ವಪ್ನಾವಸ್ಥೆಯನ್ನು ವರ್ಣಿಸಿ, ಮುಂದೆ ಹೀಗೆ ಹೇಳಿದೆ:—ಇಲ್ಲಿ ಸ್ವಪ್ನದರ್ಶನ, ಪುತ್ರಜನ್ಮ, ಅವನ ಬಾಲ್ಯ, ಕಲಾಗ್ರಹಣ, ಯೌವನ, ಪಾಣಿಗ್ರಹಣ, ವಿವಾಹ, ಪ್ರಾಸಾದ, ಭೋಗ ಗಳ ವರ್ಣನೆಯು, ಮಹಾಬಲನ ಕಥೆಯಲ್ಲಿ ಬೇರೆಡೆಗೆ (ಭಗವತೀಯಲ್ಲಿ) ಮಾಡಿ ದಂತೆಯೇ ಇಲ್ಲಿಯೂ ಇದೆಯೆಂದು ತಿಳಿಯಬೇಕು. ಮುಂದೆ ಮುಂದೆಯಂತೂ ಅಧ್ಯ ಯನಕ್ಕೆ ಅಧ್ಯಯನವೆಲ್ಲ ಕೇವಲ ಆಖ್ಯಾನದ ನಾಯಕ–ನಾಯಿಕೆಯರ ಹೆಸರುಗಳನ್ನು ಮಾತ್ರ ಉಲ್ಲೇಖಿಸಿ, ಉಳಿದ ಸಮಸ್ತ ವರ್ಣನೆಯನ್ನು ಅನ್ಯ ಆಖ್ಯಾನಗಳಿಂದ ಪೂರ್ಣ ಮಾಡಿಕೊಳ್ಳಲು ಸೂಚನೆಯನ್ನಿತ್ತು ಪೂರ್ಣಗೊಳಿಸಲಾಗಿದೆ. ಈ ಶ್ರುತಾಂಗದ ಹೆಸರನ್ನು ಗಮನಿಸಿದಲ್ಲಿ 'ಉವಾಸಗದಸಾವೊ'ದಂತೆ ಮೂಲದಲ್ಲಿ ಹತ್ತೇ ಅಧ್ಯಾಯ ಗಳು ಇದರಲ್ಲಿಯೂ ಇದ್ದಿರಬೇಕೆಂದು ಕಂಡುಬರುತ್ತದೆ. ತರುವಾಯ ವಿಕಾಸ ಹೊಂದಿ, ಅದರ ಈಗಿನ ರೂಪವು ಪ್ರಾಪ್ತವಾಯಿತು.

೮. ಅನುತ್ತರೋಪಪಾತಿಕ ದಶಾ (ಅಣುತ್ತರೋವವಾಇಯ ದಸಾಓ)—ಈ ಶ್ರುತಾಂಗದಲ್ಲಿ ಕೆಲವೊಂದು ಮಹಾಪುರುಷರ ಚರಿತ್ರೆಗಳಿವೆ. ಅವರು ತಮ್ಮ ಸಾಧನೆಯಿಂದ ಮರಣವನ್ನು ಹೊಂದಿ, ಅನುತ್ತರ ಸ್ವರ್ಗದ ವಿಮಾನದಲ್ಲಿ ಜನ್ಮವನ್ನು ಹೊಂದುತ್ತಾರೆ. ಅಲ್ಲಿಂದ ಪುನಃ ಒಂದೇ ಸಲ ಮಾತ್ರ ಮನುಷ್ಯ ಯೋನಿ ಯಲ್ಲಿ ಜನ್ಮತಾಳಿ, ಮೋಕ್ಷವನ್ನು ಹೊಂದುತ್ತಾರೆ. ಈ ಶ್ರುತಾಂಗವು ಮೂರು ವರ್ಗ ಗಳಲ್ಲಿ ವಿಭಾಜಿತವಾಗಿದೆ. ಪ್ರಥಮ ವರ್ಗದಲ್ಲಿ ೧೦, ದ್ವಿತೀಯದಲ್ಲಿ ೧೩, ತೃತೀಯ ವರ್ಗದಲ್ಲಿ ೧೦ ಅಧ್ಯಯನಗಳಿವೆ. ಆದರೆ ಇದರಲ್ಲಿ ಚರಿತ್ರೆಗಳ ಉಲ್ಲೇಖವು ಕೇವಲ ಸೂಚನಾ ಮಾತ್ರದಿಂದ ಪೂರ್ಣವಾಗುತ್ತದೆ. ಕೇವಲ ಪ್ರಥಮ ವರ್ಗದಲ್ಲಿ ಧಾರಣೀ ಪುತ್ರ ಜಾಲೀ ಹಾಗೂ ಮೂರನೆಯ ವರ್ಗದಲ್ಲಿ ಭದ್ರಾ ಪುತ್ರ ಧನ್ಯನ ಚರಿತ್ರವು ಸ್ವಲ್ಪ ವಿಸ್ತಾರವಾಗಿ ವರ್ಣಿತಗೊಂಡಿವೆ. ಇಲ್ಲಿ ಉಲ್ಲೇಖಗೊಂಡ ೩೩ ಅನುತ್ತರ ವಿಮಾನಗಾಮೀ ಪುರುಷರಲ್ಲಿ ಮೊದಲ ೨೩ ಜನರು ಶ್ರೇಣಿಕ ರಾಜನ ಧಾರಣೀ, ಚೇಲನಾ ಮತ್ತು ನಂದಾ ಈ ಮೂವರು ರಾಣಿಯರಿಂದ ಉತ್ಪನ್ನರಾದವರು. ಕೊನೆಯ ಧನ್ಯ ಮೊದಲಾದ ಹತ್ತು ಜನರು ಕಾಕಂದೀ ನಗರದ ಭದ್ರಾದೇವಿಯ ಪುತ್ರರು. ಮೂರನೆಯ ವರ್ಗದ ಮೊದಲನೆಯ ಅಧ್ಯಯನದಲ್ಲಿ ಧನ್ಯನ ಕಠೋರ ತಪಸ್ಸು ಮತ್ತು

ಅದರಿಂದ ಉಂಟಾದ ಅವನ ಅಂಗ, ಪ್ರತ್ಯಂಗಗಳ ಕ್ಷೀಣತೆಯ ವರ್ಣನೆವು ಬಹು ಮಾರ್ಮಿಕವಾಗಿದೆ, ವಿಸ್ತೃತವೂ ಇದೆ. ಈ ವರ್ಣನೆಯು ಪಾಲೀ ಗ್ರಂಥದಲ್ಲಿ ಬರುವ ಬುದ್ಧನ ತಪಸ್ಯೆಯಿಂದ ಉತ್ಪನ್ನವಾದ ದೇಹ ಕ್ಷೀಣತೆಯನ್ನು ಸ್ಮರಣೆಗೆ ತರುತ್ತದೆ.

೧೦. ಪ್ರಶ್ನವ್ಯಾಕರಣ (ಪಣ್ಹ–ವಾಗರಣ)—ಈ ಶ್ರುತಾಂಗವು ಎರಡು ಖಂಡಗಳಲ್ಲಿ ವಿಭಾಜಿತವಾಗಿದೆ. ಪ್ರಥಮ ಖಂಡದಲ್ಲಿ ಐದು ಆಸ್ರವದ್ವಾರಗಳ ವರ್ಣನೆಯು ಇದೆ. ಎರಡನೆಯದರಲ್ಲಿ ಸಂವರ ದ್ವಾರಗಳೈದರ ವಿವರವಿದೆ. ಐದು ಆಸ್ರವ ದ್ವಾರಗಳಲ್ಲಿ ಹಿಂಸೆಯೇ ಮೊದಲಾದ ಐದು ಪಾಪಗಳ ವಿವೇಚನೆಯು ಇದೆ. ಸಂವರ ದ್ವಾರಗಳಲ್ಲಿ ಅವುಗಳ ನಿಷೇಧರೂಪ ಅಹಿಂಸಾದಿ ವ್ರತಗಳ ನಿರೂಪಣೆಯು ಇದೆ. ಈ ಪ್ರಕಾರ ಇದರಲ್ಲಿ ಮೇಲೆ ಹೇಳಿದ ವ್ರತಗಳ ಸುವ್ಯವಸ್ಥಿತ ವರ್ಣನೆಯು ಕಂಡುಬರುತ್ತದೆ. ಆದರೆ ಈ ವಿಷಯ ವರ್ಣನೆಯಿಂದ ಶ್ರುತಾಂಗದ ಹೆಸರಿನ ಸಾರ್ಥಕತೆಯೇನೂ ಕಂಡುಬರುವುದಿಲ್ಲ. ಸ್ಥಾನಾಂಗ, ಸಮವಾಯಾಂಗ ಹಾಗೂ ನಂದಿಸೂತ್ರಗಳಲ್ಲಿ ಈ ಶ್ರುತಾಂಗದ ವಿಷಯ ಪರಿಚಯವು ಬರುತ್ತದೆ. ಅದರಿಂದ, ಈ ಪ್ರಶ್ನ ವ್ಯಾಕರಣ ಅಂಗದಲ್ಲಿ ಮೂಲತಃ ಸ್ವಸಮಯ ಮತ್ತು ಪರಸಮಯ ಸಮ್ಮತ ನಾನಾ ವಿದ್ಯೆ ಹಾಗೂ ಮಂತ್ರ ಮೊದಲಾದುವುಗಳನ್ನು ಪ್ರಶ್ನೋತ್ತರ ರೂಪದಿಂದ ವಿವೇಚನ ಮಾಡಿರ ಬೇಕೆಂದು ಗೊತ್ತಾಗುತ್ತದೆ. ಆದರೆ ಆ ವಿಷಯಗಳು ಈಗ ಈ ಗ್ರಂಥದಲ್ಲಿ ಲಭಿಸುವುದಿಲ್ಲ.

೧೧. ವಿಪಾಕಸೂತ್ರ (ವಿವಾಗ ಸುಯಂ)—ಈ ಶ್ರುತಾಂಗದಲ್ಲಿ ಎರಡು ಶ್ರುತಸ್ಕಂಧಗಳಿವೆ. ಮೊದಲನೆಯದು ದುಃಖ ವಿಪಾಕ ವಿಷಯಕವು, ಎರಡನೆಯದು ಸುಖ ವಿಪಾಕ ವಿಷಯವು. ಮೊದಲನೆಯ ಶ್ರುತಸ್ಕಂಧವು ಎರಡನೆಯದಕ್ಕಿಂತ ಬಹಳ ದೊಡ್ಡದಾಗಿದೆ. ಪ್ರತಿಯೊಂದರಲ್ಲಿಯೂ ಹತ್ತು ಹತ್ತು ಅಧ್ಯಯನಗಳಿವೆ. ಅವುಗಳಲ್ಲಿ ಕ್ರಮದಿಂದ ಜೀವದ ಕರ್ಮಾನುಸಾರ ದುಃಖ ಮತ್ತು ಸುಖ ರೂಪ ಕರ್ಮ ಫಲಗಳ ವರ್ಣನೆಯನ್ನು ಮಾಡಲಾಗಿದೆ. ಕರ್ಮ–ಸಿದ್ಧಾಂತವು ಜೈನ ಧರ್ಮದ ವಿಶೇಷ ಮಹತ್ವಪೂರ್ಣ ಅಂಗವಾಗಿದೆ. ಅದರ ಉದಾಹರಣೆಗಳಿಗಾಗಿ ಈ ಗ್ರಂಥವು ಬಹಳ ಉಪಯುಕ್ತವಾಗಿದೆ. ಇಲ್ಲಿ ಕೋಲನ್ನೂರುತ್ತ ನಡೆಯುವ ಭಿಕ್ಷುಕ, ಭಿಕ್ಷೆ ಬೇಡುವಿಕೆ, ಕೆಲವೊಂದು ಕುರುಡರು ಇವರ ದರ್ಶನವಾಗುತ್ತದೆ. ಕೆಲವೆಡೆ ಶ್ವಾಸ, ಕಫ, ಭಗಂದರ, ಕಜ್ಜಿ–ಹುರುಕು, ಕುಷ್ಟ ಮೊದಲಾದ ರೋಗಗಳಿಂದ ಪೀಡಿತ ಮನುಷ್ಯರ ದರ್ಶನವಾಗುವುದು, ನಾನಾ ರೋಗಗಳ ಔಷಧೋಪಚಾರಗಳ ವಿವರಣವೂ ಇಲ್ಲಿ ನೋಡಲು ಸಿಗುತ್ತದೆ. ಗರ್ಭಿಣೀ ಸ್ತ್ರೀಯರ ಬಯಕೆ, ಭ್ರೂಣಹತ್ಯಾ, ನರಬಲಿ, ಕ್ರೂರ ಅಮಾನುಷಿಕ ದಂಡ, ವೇಶ್ಯೆಯರ ಪ್ರಲೋಭನ, ವಿವಿಧ ಪ್ರಕಾರದ ಮಾಂಸ ಸಂಸ್ಕಾರ, ಕುದಿಸುವ ವಿಧಿ ಮೊದಲಾದುವುಗಳ ವರ್ಣನೆಯೂ ಇದರಲ್ಲಿದೆ. ಇವುಗಳಿಂದ ನಮಗೆ ಪ್ರಾಚೀನ ಕಾಲದ ವಿವಿಧ ಸಾಮಾಜಿಕ ವಿಧಾನಗಳೂ ಮಾನ್ಯತೆಗಳೂ ಅಂಧ ವಿಶ್ವಾಸಗಳೂ ಹೇಗಿದ್ದವೆಂಬುದರ ಪರಿಚಯವು ಚೆನ್ನಾಗಿಯೇ ಆಗುತ್ತದೆ. ಈ ಪ್ರಕಾರ ಸಾಮಾ

ಜಿಕ ಅಧ್ಯಯನದ ದೃಷ್ಟಿಯಿಂದ ಈ ಶ್ರುತಾಂಗವು ಮಹತ್ವಪೂರ್ಣವಾಗಿದೆ.

೧೨. ದೃಷ್ಟಿವಾದ (ದಿಟ್ಠಿವಾದ)—ಈ ಶ್ರುತಾಂಗವು ಈಗ ಲಭಿಸುವುದಿಲ್ಲ. ಸಮವಾಯಾಂಗದಲ್ಲಿ ಸೂಚಿಸಿದ ಪ್ರಕಾರ ಇದರಲ್ಲಿ ಪರಿಕರ್ಮ, ಸೂತ್ರ, ಪೂರ್ವಗತ, ಅನುಯೋಗ ಮತ್ತು ಚೂಲಿಕಾ ಎಂಬ ಐದು ವಿಭಾಗಗಳಿದ್ದುವು. ಈ ಐದರಲ್ಲಿಯೂ ವಿವಿಧ ಭೇದ ಪ್ರಭೇದಗಳ ಉಲ್ಲೇಖವೂ ಕಂಡುಬರುತ್ತದೆ. ಅವುಗಳನ್ನೆಲ್ಲ ವಿಚಾರಿಸಿದರೆ ಪರಿಕರ್ಮದಲ್ಲಿ ಲಿಪಿ-ವಿಜ್ಞಾನ ಮತ್ತು ಗಣಿತಗಳ ವಿವರಣೆಯು ಇತ್ತೆಂದು ಸ್ಪಷ್ಟವಾಗುತ್ತದೆ. ಸೂತ್ರ ಎಂಬ ವಿಭಾಗದಲ್ಲಿ ಛಿನ್ನ-ಛೇದನಯ, ಅಚ್ಛಿನ್ನ-ಛೇದನಯ, ತ್ರಿಕನಯ, ಚತುರ್ನಯಗಳ ಪರಿಪಾಟಿಗಳ ವಿವರಣವಿತ್ತು. ಛಿನ್ನ-ಛೇದ ಮತ್ತು ಚತುರ್ನಯ ಪರಿಪಾಟಿಗಳು ನಿರ್ಗ್ರಂಥರವು ; ಛೇದನಯ ಮತ್ತು ತ್ರಿಕನಯ ಪರಿಪಾಟಿಗಳು ಆಜೀವಕರವಾಗಿದ್ದುವು. ತರುವಾಯ ಇವೆಲ್ಲವುಗಳ ಸಮಾವೇಶವು ಜೈನ ನಯವಾದದಲ್ಲಿ ಆಗಿ ಹೋಯಿತು. ದೃಷ್ಟಿವಾದದ ಪೂರ್ವಗತ ವಿಭಾಗವು ಎಲ್ಲಕ್ಕೂ ಹೆಚ್ಚು ವಿಶಾಲವೂ ಮಹತ್ವಪೂರ್ಣವೂ ಆಗಿದೆ. ಇದರಲ್ಲಿ ಉತ್ಪಾದ ಅಗ್ರಾಯಣೀ, ವೀರ್ಯ ಪ್ರವಾದ ಮೊದಲಾದ ೧೪ ಪೂರ್ವಗಳಿದ್ದುವು. ಅವುಗಳ ಪರಿಚಯವನ್ನು ಹಿಂದೆ ಮಾಡಿಕೊಡಲಾಗಿದೆ. ಅನುಯೋಗ ಎಂಬ ಹೆಸರಿನ ದೃಷ್ಟಿವಾದದ ನಾಲ್ಕನೆಯ ಭೇದದಲ್ಲಿ ಮೂಲ ಪ್ರಥಮಾನುಯೋಗ ಮತ್ತು ಗಂಡಿಕಾನುಯೋಗ—ಎಂಬ ಎರಡು ಭೇದಗಳನ್ನು ಹೇಳಲಾಗಿದೆ ಮೊದಲನೆಯದರಲ್ಲಿ ಅರಹಂತರ ಗರ್ಭ, ಜನ್ಮ, ತಪ, ಜ್ಞಾನ ಮತ್ತು ನಿರ್ವಾಣಕ್ಕೆ ಸಂಬಂಧಿಸಿದ ಇತಿವೃತ್ತಗಳು ಸಮಾವೇಶಗೊಂಡಿವೆ. ಎರಡನೆಯದರಲ್ಲಿ ಕುಲಂಕರ, ಚಕ್ರವರ್ತಿ, ಬಲದೇವ ವಾಸುದೇವ ಮೊದಲಾದ ಅನ್ಯ ಮಹಾಪುರುಷರ ಚರಿತ್ರಗಳಿವೆ. ಈ ಪ್ರಕಾರ ಅನುಯೋಗಗಳಿಗೆ ಪ್ರಾಚೀನ ಜೈನ ಪುರಾಣಗಳೆಂದು ಕರೆಯಲಾಗುತ್ತದೆ ದಿಗಂಬರ ಜೈನ ಪರಂಪರೆಯಲ್ಲಿ ಈ ಭೇದಕ್ಕೆ ಸಾಮಾನ್ಯವಾಗಿ ಪ್ರಥಮಾನುಯೋಗವೆಂದು ಹೆಸರು ಇದ್ದುದು ಕಂಡುಬರುತ್ತದೆ. ಐದನೆಯ ಭೇದವಾದ ಚೂಲಿಕೆಯ ವಿಷಯದಲ್ಲಿ ಸಮವಾಯಾಂಗದಲ್ಲಿ ಕೇವಲ ಈ ಸೂಚನೆಯು ಇದೆ :—ಪ್ರಥಮ ನಾಲ್ಕು ಪೂರ್ವಗಳಿಗೆ ಯಾವ ಚೂಲಿಕೆಗಳನ್ನು ಸಮಾವೇಶಗೊಳಿಸಲಾಗಿದೆಯೋ ಅವೇ ಇಲ್ಲಿ ಸಮಾವಿಷ್ಟವಾಗಿವೆ. ಇನ್ನು ದಿಗಂಬರ ಪರಂಪರೆಯಲ್ಲಿ ಚೂಲಿಕೆಗೆ ಜಲಗತ, ಸ್ಥಲಗತ, ಮಾಯಾಗತ, ರೂಪಗತ ಮತ್ತು ಆಕಾಶಗತ ಎಂಬ ಐದುಭೇದಗಳನ್ನು ಹೇಳಿದೆ. ಈ ಹೆಸರುಗಳಿಂದ ಇವುಗಳಲ್ಲಿ ಇಂದ್ರಜಾಲ ಮತ್ತು ಮಂತ್ರ-ತಂತ್ರಾತ್ಮಕ ವಿಷಯಗಳಿದ್ದವೆಂಬುದು ತಿಳಿಯುತ್ತದೆ ಜೈನ ಧರ್ಮದ ತಾತ್ವಿಕ ಹಾಗೂ ಸಮೀಕ್ಷಾತ್ಮಕ ದೃಷ್ಟಿಯು ಮುಂದೆ ಬಹುಕಾಲದವರೆಗೆ ತಾಳಿ ಬಾಳಿ ಬರಲಿಲ್ಲ.

**ಉಪಾಂಗ–೧೨ :—**

ಮೇಲೆ ಹೇಳಿದ ಶ್ರುತಾಂಗಗಳಲ್ಲದೆ ವಲ್ಲಭೀವಾಚನದಲ್ಲಿ ೧೨ ಉಪಾಂಗಗಳು, ೬ ಛೇದ ಸೂತ್ರಗಳು, ೪ ಮೂಲ ಸೂತ್ರಗಳು, ೧೦ ಪ್ರಕೀರ್ಣಕಗಳು ಮತ್ತು ೨

ಚೂಲಿತಾ ಸೂತ್ರಗಳು ಸಹ ಸಂಗ್ರಹಿಸಲ್ಪಟ್ಟಿವು.

೧. ಒಂದನೆಯ ಉಪಾಂಗವಾದ ಜೀವಪಾತಿಕದಲ್ಲಿ ನಾನಾ ವಿಚಾರ, ಭಾವನೆ, ಸಾಧನೆಗಳಿಂದ ಮರಣ ಹೊಂದುವ ಜೀವಗಳು ಪುನರ್ ಜನ್ಮವನ್ನು ಹೇಗೆ ಹೊಂದುತ್ತವೆಂಬುದನ್ನು ಉದಾಹರಣೆ ಸಹಿತ ನಿವರಿಸಲಾಗಿದೆ. ಇದರಲ್ಲಿ ನಗರ, ಚೈತ್ಯ ರಾಜ ಮತ್ತು ರಾಣಿ ಮೊದಲಾದವರ ವರ್ಣನೆಯು ಸಂಪೂರ್ಣ ರೂಪದಲ್ಲಿ ಇರುವುದು ಇದರ ವಿಶೇಷತೆಯಾಗಿದೆ. ಈ ವರ್ಣನೆಗಳ ಉಲ್ಲೇಖವನ್ನು ಅನ್ಯ ಶ್ರುತಾಂಗಗಳು ಮಾಡಿ ಮುಂದರಿಯುತ್ತವೆ.

೨. ಎರಡನೆಯ ಉಪಾಂಗದ ಹೆಸರು 'ರಾಯ-ಪಸೇಣಿಯಂ' ಎಂದಿದೆ, ಇದರ ಸಂಸ್ಕೃತ ರೂಪಾಂತರವು 'ರಾಜ-ಪ್ರಶ್ನೀಯ' ಎಂದು ಆಗುತ್ತದೆನ್ನುವರು. ಏಕೆಂದರೆ ಇದರ ಮುಖ್ಯ ವಿಷಯವು ರಾಜಾಃಪಏಸೀ (ಪ್ರದೇಶೀ)ಯು ಮಾಡಿದ ಪ್ರಶ್ನೆಗಳಿಗೆ ಕೇಶೀ ಮುನಿಯು ಹೇಳಿದ ಸಮಾಧಾನವಾಗಿದೆ. ಈ ಗ್ರಂಥದ ನಿಜವಾದ ನಾಯಕನು ಕೋಸಲದ ಇತಿಹಾಸ ಪ್ರಸಿದ್ಧ ರಾಜನಾದ ಪಸೇಣಿ (ಸಂಸ್ಕೃತ : ಪ್ರಸೇನ ಜಿತ್) ಆಗಿದ್ದಾನೆಂದರೆ ಆಶ್ಚರ್ಯದ ಸಂಗತಿಯಲ್ಲ. ಅದನ್ನನುಸರಿಸಿ ಈ ಗ್ರಂಥದ ಹೆಸರು ಸಂಸ್ಕೃತ ರೂಪಾಂತರದಲ್ಲಿ 'ರಾಜಾ ಪ್ರಸೇನಜಿತ್ ಸೂತ್ರ' ಎಂದಿರುವುದು ಉಚಿತವಾಗಿತ್ತು. ಇದರ ಪ್ರಥಮ ಭಾಗದಲ್ಲಿಯಂತೂ ಸೂರ್ಯಾಭದೇವನ ವರ್ಣನೆಯು ಇದೆ. ಎರಡನೆಯ ಭಾಗದಲ್ಲಿ ಆ ದೇವನ ಪೂರ್ವಭವದ ವೃತ್ತಾಂತವಿದೆ. ರಾಜಾ ಪ್ರದೇಶಿಯು ಪೂರ್ವಭವವೊಂದರಲ್ಲಿ ಸೂರ್ಯಾಭಿಯಾಗಿದ್ದನು. ಆಗ ಪಾರ್ಶ್ವನಾಥನ ಪರಂಪರೆಯ ಮುನಿಯಾದ ಕೇಶೀ ಮುನಿಯನ್ನು ಸಂಧಿಸಿದ್ದನು. ಆಗ ಆತ್ಮನ ಸತ್ತೆ ಮತ್ತು ಅದರ ಸ್ವರೂಪಗಳ ವಿಷಯದಲ್ಲಿ ನಾನಾ ಪ್ರಕಾರದಿಂದ ತನ್ನ ಭೌತಿಕವಾದದ ದೃಷ್ಟಿಯಿಂದ ಪ್ರಶ್ನೆಗಳನ್ನು ಕೇಳಿದ್ದನು. ಕೊನೆಗೆ ಕೇಶೀ ಮುನಿಯ ಉಪದೇಶದಿಂದ ಅವನು ಸಮ್ಯಗ್ ದೃಷ್ಟಿಯಾದನು. ಇದರ ಪ್ರಭಾವದಿಂದಲೇ ಎರಡನೆಯ ಜನ್ಮದಲ್ಲಿ ಮಹಾಸಮೃದ್ಧಿಶಾಲಿಯಾದ ಸೂರ್ಯಾಭದೇವನಾದನು. ಈ ಗ್ರಂಥವು ಜಡವಾದ ಮತ್ತು ಅಧ್ಯಾತ್ಮವಾದ ಇವುಗಳ ಪ್ರಾಚೀನ ಪರಂಪರೆಗಳ ಅಧ್ಯಯನ ದೃಷ್ಟಿಯಿಂದ ಮಹತ್ವಪೂರ್ಣವಂತೂ ಆಗಿದೆ. ಅಲ್ಲದೆ ಸಾಹಿತ್ಯಿಕ ದೃಷ್ಟಿಯಿಂದಲೂ ಸುಂದರವಾಗಿದೆ.

೩. ಮೂರನೆಯ ಉಪಾಂಗವಾದ ಜೀವಾಜೀವಾಭಿಗಮದಲ್ಲಿ ಇಪ್ಪತ್ತು ಉದ್ದೇಶಗಳಿದ್ದುವು. ಆದರೆ ಉಪಲಬ್ಧ ಸಂಸ್ಕರಣದಲ್ಲಿ ಒಂಭತ್ತು ಪ್ರತಿಪತ್ತಿಗಳು—ಪ್ರಕರಣಗಳು ಮಾತ್ರ ಇವೆ. ಅದರಲ್ಲಿ ೨೭೨ ಸೂತ್ರಗಳಿವೆ. ಇದರಲ್ಲಿ ಇದರ ಹೆಸರಿಗೆ ಅನುಸರಿಸಿ ಜೀವ-ಅಜೀವಗಳ ಭೇದ-ಪ್ರಭೇದಗಳ ವಿವರಣವು ಮಹಾವೀರ ಹಾಗೂ ಗೌತಮರ ನಡುವೆ ಪ್ರಶ್ನೋತ್ತರ ರೂಪದಲ್ಲಿ ಬರುತ್ತದೆ. ಮೂರನೆಯ ಪ್ರಪತ್ತಿಯಲ್ಲಿ ದ್ವೀಪ—ಸಾಗರಗಳ ವಿಸ್ತಾರವಾದ ವರ್ಣನೆಯ ಕಂಡು ಬರುತ್ತದೆ. ಇಲ್ಲಿ ಪ್ರಸಂಗವಶ ಲೋಕೋತ್ಸವಗಳು, ಯಾನಗಳು, ಅಲಂಕಾರಗಳು ಮತ್ತು-ಮಿಷ್ಟಾನ್ನಗಳು ಮೊದಲಾ

ದವುಗಳ ಉಲ್ಲೇಖವೂ ಬರುತ್ತದೆ. ಅದು ಪ್ರಾಚೀನ ಲೋಕ ಜೀವನ ದೃಷ್ಟಿಯಿಂದ ಮಹತ್ವಪೂರ್ಣವಾಗಿದೆ.

೪. ನಾಲ್ಕನೆಯ ಉಪಾಂಗವಾದ ಪ್ರಜ್ಞಾಪನಾ (ಪಣ್ಣವಣಾ) ದಲ್ಲಿ ಮೂವತ್ತಾರು ಪದ–ಪರಿಚ್ಛೇದಗಳು ಇವೆ. ಇವುಗಳಲ್ಲಿ ಕ್ರಮದಿಂದ ಜೀವದೊಡನೆ ಸಂಬಂಧ ಬರುವ ಪ್ರಜ್ಞಾಪನಾ, ಸ್ಥಾನ, ಬಹುವಕ್ತವ್ಯ, ಸ್ಥಿತಿ ಹಾಗೂ ಕಷಾಯ, ಇಂದ್ರಿಯ, ಲೇಶ್ಯೆ, ಕರ್ಮ, ಉಪಯೋಗ, ವೇದನ, ಸಮುದ್‌ಘಾತ ಮೊದಲಾದ ವಿಷಯಗಳ ಪ್ರರೂಪಣೆಯು ಇದೆ. ಜೈನ ದರ್ಶನದ ದೃಷ್ಟಿಯಿಂದ ಈ ರಚನೆಯು ಬಹು ಮಹತ್ವಪೂರ್ಣವಾಗಿದೆ. ಅಂಗಗಳಲ್ಲಿ ಭಗವತೀ ಸೂತ್ರಕ್ಕೆ ಯಾವ ಸ್ಥಾನವಿದೆಯೋ ಅದೇ ಸ್ಥಾನವು ಉಪಾಂಗಗಳಲ್ಲಿ ಈ ಸೂತ್ರಕ್ಕೆ ಇದೆ. ಇದಕ್ಕೆ ಜೈನ ಸಿದ್ಧಾಂತದ ಜ್ಞಾನ ಕೋಶವೆಂದು ಹೇಳಲಾಗುತ್ತಿದೆ. ಈ ರಚನೆಯಲ್ಲಿ ಇದರ ಕರ್ತೃವಾದ ಆರ್ಯಶ್ಯಾಮನ ಉಲ್ಲೇಖವೂ ಕಂಡುಬರುತ್ತದೆ. ಇವನ ಸಮಯವು ಸುಧರ್ಮಸ್ವಾಮಿಯಿಂದ ಇಪ್ಪತ್ತು ಮೂರನೆಯ ತಲೆಮಾರಿನದು. ಅದು ವೀರನಿರ್ವಾಣರ ತರುವಾಯ ೩೭೬ ವರ್ಷಗಳ ಕಾಲವಾಗುತ್ತದೆ. ಅರ್ಥಾತ್ ಅದು ಕ್ರಿ. ಶ. ಪೂರ್ವ ಎರಡನೆಯ ಶತಮಾನವಾಗಿದೆ

೫. ಐದನೆಯ ಉಪಾಂಗವು ಸೂರ್ಯಪ್ರಜ್ಞಪ್ತಿ (ಸೂರಿಯಪಣ್ಣತ್ತಿ). ಇದರಲ್ಲಿ ಇಪ್ಪತ್ತು ಪಾಹುಡಗಳಿವೆ. ಅವುಗಳಲ್ಲಿ ಇರುವ ೧೦೮ ಸೂತ್ರಗಳಲ್ಲಿ ಸೂರ್ಯ. ಚಂದ್ರ ಮತ್ತು ನಕ್ಷತ್ರಗಳ ಗತಿಗಳು ಇವನ್ನು ವಿಸ್ತಾರವಾಗಿ ವರ್ಣಿಸಿದೆ. ಪ್ರಾಚೀನ ಭಾರತೀಯ ಜ್ಯೋತಿಷ್ಯಕ್ಕೆ ಸಂಬಂಧಿಸಿದ ಮಾನ್ಯತೆಗಳ ಬಗ್ಗೆ ಅಧ್ಯಯನ ಮಾಡಲು ಈ ರಚನೆಯು ಮಹತ್ವಪೂರ್ಣವಾಗಿದೆ.

೬. ಆರನೆಯ ಉಪಾಂಗವು ಜಂಬೂದ್ವೀಪ–ಪ್ರಜ್ಞಪ್ತಿ (ಜಂಬೂದೀವ ಪಣ್ಣತ್ತಿ) ಎಂಬುದಿದೆ. ಇದರಲ್ಲಿ ಪೂರ್ವಾರ್ಧ, ಉತ್ತರಾರ್ಧ ಎಂದು ಎರಡು ವಿಭಾಗಗಳು. ಮೊದಲನೆಯ ಭಾಗದ ನಾಲ್ಕು ವಕ್ಷಕಾರಗಳಲ್ಲಿ (ಪರಿಚ್ಛೇದ) ಜಂಬೂದ್ವೀಪ ಮತ್ತು ಭರತಕ್ಷೇತ್ರ ಹಾಗೂ ಅವುಗಳ ಪರ್ವತ. ನದಿಗಳ ವರ್ಣನೆ ಇದೆ. ಉತ್ಸರ್ಪಿಣಿ ಮತ್ತು ಅವಸರ್ಪಿಣಿ ಕಾಲವಿಭಾಗ, ಕುಲಂಕರರು, ತೀರ್ಥಂಕರರು ಚಕ್ರವರ್ತಿ ಇವರ ವರ್ಣನೆಗಳು ಬರುತ್ತವೆ.

೭. ಏಳನೆಯ ಉಪಾಂಗವು ಚಂದ್ರಪ್ರಜ್ಞಪ್ತಿ (ಚಂದ ಪಣ್ಣತ್ತಿ) ಇದು ತನ್ನ ವಿಷಯ ವಿಭಜನೆ ಹಾಗು ಪ್ರತಿಪಾದನೆಯ ದೃಷ್ಟಿಯಿಂದ ಸೂರ್ಯ ಪ್ರಜ್ಞಪ್ತಿಯನ್ನೇ ಹೋಲುತ್ತದೆ. ಮೂಲದಲ್ಲಿ ಇವೆರಡೂ ತಮ್ಮ ತಮ್ಮ ವಿಷಯದಲ್ಲಿ ಭಿನ್ನ ಭಿನ್ನವಾಗಿಯೇ ಇರಬೇಕು. ಮುಂದೆ ಅವುಗಳ ಮಿಶ್ರಣವಾಗಿ ಇವೂ ಬಹುತರ ಒಂದಾಗಿರಬೇಕು.

೮. ಎಂಟನೆಯ ಉಪಾಂಗವು ಕಲ್ಪಿಕಾ (ಕಪ್ಪಿಯಾ) ಇದರಲ್ಲಿ ಹತ್ತು ಅಧ್ಯಯನಗಳಿವೆ. ಅವುಗಳಲ್ಲಿ ಕುಣಿಕ ಅಜಾತಶತ್ರುವು ತನ್ನ ತಂದೆಯಾದ ಶ್ರೇಣಿಕ ಬಿಂಬಿಸಾರನನ್ನು ಕಾರಾಗೃಹದಲ್ಲಿ ಹಾಕಿದ್ದು, ಶ್ರೇಣಿಕನ ಆತ್ಮ ಹತ್ಯೆ ಹಾಗೂ ಕುಣಿಕನು ವೈಶಾ

ಲಿಯ ರಾಜನಾದ ಚೇಟಕನೊಡನೆ ಮಾಡಿದ ಯುದ್ಧ—ಇವುಗಳ ವರ್ಣನೆಯು ಇದೆ. ಇದರಿಂದ ಮಗಧದ ಪ್ರಾಚೀನ ಇತಿಹಾಸದಮೇಲೆ ವಿಶೇಷ ಬೆಳಕು ಬೀಳುವಂತೆ ಇದೆ.

೯. ಒಂಬತ್ತನೆಯ ಉಪಾಂಗವು ಕಲ್ಪಾವತಂಸಿಕಾ (ಕಪ್ಪಾವಡಂಸಿಯಾಓ) ಇದರಲ್ಲಿ ಶ್ರೇಣಿಕನ ಹತ್ತು ಜನ ಮೊಮ್ಮಕ್ಕಳ ಕಥೆಗಳು ಇವೆ. ಇವರೆಲ್ಲ ತಮ್ಮ ಸತ್ ಕರ್ಮಗಳಿಂದ ಸ್ವರ್ಗಗಾಮಿಗಳಾದರು.

೧೦-೧೧. ಹತ್ತನೆಯ ಮತ್ತು ಹನ್ನೊಂದನೆಯ ಉಪಾಂಗಗಳು ಪುಷ್ಪಿಕಾ (ಪುಪ್ಫಿಯಾಓ) ಮತ್ತು ಪುಷ್ಪಚೂಲಾ (ಪುಪ್ಫಚೂಲಾಓ) ಇವುಗಳಲ್ಲಿ ಹತ್ತು ಹತ್ತು ಅಧ್ಯಯನಗಳಿವೆ. ಧಾರ್ಮಿಕ ಸಾಧನೆಗಳಿಂದ ಸ್ವರ್ಗಗಾಮಿಗಳಾದಂಥ ಸ್ತ್ರೀಪುರುಷರ ಕಥೆಗಳು ಇವುಗಳಲ್ಲಿ ಇವೆ. ಈ ಧಾರ್ಮಿಕ ವ್ಯಕ್ತಿಗಳ ದೇವತೆಗಳಾಗಿ ತಮ್ಮ ವಿಮಾನ ಗಳ ಮುಂಖಾಂತರ ಮಹಾವೀರನ ವಂದನೆಗೆ ಬಂದರು.

೧೨. ಹನ್ನೆರಡನೆಯ ಉಪಾಂಗವು ವೃಷ್ಣಿದಶಾ (ವಣ್ಹಿದಸಾ) ಇದರಲ್ಲಿ ಹನ್ನೆರಡು ಅಧ್ಯಯನಗಳಿವೆ. ಇದರೊಳಗೆ ದ್ವಾರಾವತಿ (ದ್ವಾರಕಾ)ಯ ರಾಜನಾದ ಕೃಷ್ಣ ವಾಸುದೇವ ಹಾಗು ಇಪ್ಪತ್ತೆರಡನೆಯ ತೀರ್ಥಂಕರ ಅರಿಷ್ಟನೇಮಿಯ ರೈವತಕ ಪರ್ವತದ ಮೇಲಿನ ವಿಹಾರವನ್ನು ವರ್ಣಿಸಲಾಗಿದೆ. ಅಲ್ಲದೆ ವೃಷ್ಣಿ ವಂಶದ ಹನ್ನೆರಡು ಜನ ರಾಜಕುಮಾರರು ದೀಕ್ಷೆಯನ್ನು ಸ್ವೀಕರಿಸುವುದನ್ನು ವಿವರಿಸಲಾಗಿದೆ.

ಎಂಟರಿಂದ ಹನ್ನೆರಡರ ವರೆಗಿನ ಐದು ಉಪಾಂಗಗಳನ್ನು ಸಾಮೂಹಿಕ ರೂಪ ದಿಂದ ನಿರಯಾವಲಿಯಾಓ ಎಂದೂ ಹೆಸರನ್ನು ಹೊಂದಿವೆ. ಅವುಗಳಲ್ಲಿ ಉಪಾಂಗಗ ಳೆಂದು ಅವುಗಳನ್ನು ನಿರ್ದಿಷ್ಟವನ್ನು ಮಾಡಿದ್ದುಂಟು. ಪ್ರಾರಂಭದಲ್ಲಿ ಇವ್ವೈದೇ ಉಪಾಂ ಗಗಳು ಇರಬೇಕು. ಅವು ತಮ್ಮ ತಮ್ಮ ವಿಷಯಕ್ಕೆ ಅನುಸರಿಸಿ ಅಂಗಗಳ ಕೂಡ ಸಂಬಂಧಿಸಿದ್ದೂ ಇರಬೇಕು—ಹೀಗೆ ಹೇಳಿದರೆ ಆಶ್ಚರ್ಯಕರವೇನೂ ಅಲ್ಲ. ತರು ವಾಯ ದ್ವಾದಶಾಂಗಗಳನ್ನು ಕಂಡು ಉಪಾಂಗಗಳ ಸಂಖ್ಯೆಯನ್ನೂ ಹನ್ನೆರಡರ ವರೆಗೆ ಏರಿಸಿಬಿಟ್ಟಿರಬೇಕು.

## ಛೇದ ಸೂತ್ರ ೬ :—

ಆರು ಛೇದ ಸೂತ್ರಗಳ ಹೆಸರುಗಳು ಕ್ರಮದಿಂದ ಹೀಗಿವೆ :—(೧) ನಿಶೀಥ (ನಿಸೀಹ) (೨) ಮಹಾನಿಶೀಥ (ಮಹಾನಿಸೀಹ) (೩) ವ್ಯವಹಾರ (ವಿವಹಾರ) (೪) ಆಚಾರದಶಾ (ಆಚಾರದಸಾ) (೫) ಕಲ್ಪಸೂತ್ರ (ಕಪ್ಪಸುತ್ತ) ಮತ್ತು (೬) ಪಂಚಕಲ್ಪ (ಪಂಚಕಪ್ಪ) ಅಥವಾ ಜೀತಕಲ್ಪ (ಜೀತಕಪ್ಪ) ಇವುಗಳಲ್ಲಿ ಬಹು ವಿಸ್ತಾರವಾಗಿ ಜೈನಮುನಿಗಳ ಬಾಹ್ಯ ಹಾಗೂ ಅಭ್ಯಂತರ ಸಾಧನೆಗಳನ್ನು ವಿವರ ವಿವ ರವಾಗಿ ವರ್ಣಿಸಲಾಗಿದೆ. ಅಲ್ಲದೆ ವಿಶೇಷ ನಿಯಮಗಳಿಗೆ ಭಂಗವಾದಲ್ಲಿ ಸಮುಚಿತ ಪ್ರಾಯಶ್ಚಿತ್ತದ ವಿಧಾನವನ್ನೂ ವಿವರಿಸಿದೆ. ಪ್ರಸಂಗಕ್ಕನುಸರಿಸಿ ಇಲ್ಲಿ ನಾನಾ ತೀರ್ಥಂಕರ ಹಾಗೂ ಗಣಧರರ ಜೀವನಕ್ಕೆ ಸಂಬಂಧಿಸಿದ ಘಟನೆಗಳನ್ನೂ ಉಲ್ಲೇಖಿ-

ಸಲಾಗಿದೆ. ಈ ರಚನೆಗಳಲ್ಲಿ ಕಲ್ಪಸೂತ್ರವು ವಿಶೇಷರೀತಿಯಿಂದ ಪ್ರಸಿದ್ಧವಾಗಿದೆ. ಸಾಧುಗಳಲ್ಲಿ ಇದರ ಪಠನ-ಪಾಠನಗಳ ಪರಂಪರೆಯು ಇಂದಿನವರೆಗೂ ಸುಪ್ರಚಲಿತ ವಿದೆ. ಮುನಿಗಳ ವೈಯಕ್ತಿಕ ಮತ್ತು ಸಾಮೂಹಿಕ ಜೀವನ ಹಾಗೂ ಅವರ ಸಮಸ್ಯೆ ಗಳ ಸಮುಚಿತ್ವ ಜ್ಞಾನವನ್ನು ಹೊಂದುವುದಕ್ಕೆ ಈ ಕೃತಿಗಳು ಬಹುಮಹತ್ವಪೂರ್ಣ ವೆನಿಸುತ್ತವೆ.

### ಮೂಲ ಸೂತ್ರ ೪ :—

ನಾಲ್ಕು ಮೂಲ ಸೂತ್ರಗಳ ಹೆಸರುಗಳು ಹೀಗಿವೆ :—ಉತ್ತರಾಧ್ಯಯನ (ಉತ್ತರಜ್ಝಯಣ), ಆವಶ್ಯಕ (ಆವಸ್ಸಯ) ದಶವೈಕಾಲಿಕ (ದಸವೇಯಾಲಿಯ) ಮತ್ತು ಪಿಂಡನಿರ್ಯುಕ್ತಿ (ಪಿಂಡಣಿಜ್ಜುತ್ತಿ). ಈ ನಾಲ್ಕು ಸೂತ್ರಗಳು ಮುನಿಗಳ ಅಧ್ಯಯನ ಮತ್ತು ಚಿಂತನಕ್ಕೆಂದು ವಿಶೇಷ ರೂಪದಿಂದ ಮಹತ್ವವನ್ನು ಹೊಂದಿವೆ. ಯಾಕೆಂದರೆ ಇವುಗಳಲ್ಲಿ ಜೈನ ಧರ್ಮದ ಮೂಲಸಿದ್ಧಾಂತಗಳ. ವಿಚಾರಗಳ, ಭಾವನೆ ಗಳ ಮತ್ತು ಸಾಧನೆಗಳ ಪ್ರತಿಪಾದನವಿದೆ. ಆವಶ್ಯಕ ಸೂತ್ರದಲ್ಲಿ ಸಾಧುಗಳ ನಿತ್ಯಕ್ರಿಯೆಗಳಾದ ಸಾಮಾಯಿಕ, ಚತುರ್ವಿಂಶತಿಸ್ತವ, ವಂದನಾ, ಪ್ರತಿಕ್ರಮಣ, ಕಾಯೋತ್ಸರ್ಗ ಮತ್ತು ಪ್ರತ್ಯಾಖ್ಯಾನಗಳನ್ನು ತಿಳಿಸಿಕೊಡಲಾಗಿದೆ. ಪಿಂಡನಿರ್ಯುಕ್ತಿ ಯಲ್ಲಿ ಅದರ ಹೆಸರಿಗೆ ಅನುಸರಿಸಿ ಪಿಂಡ ಅರ್ಥಾತ್ ಮುನಿಗೆ ಸ್ವೀಕರಿಸಲು ತಕ್ಕ ಆಹಾರದ ಸ್ವರೂಪದ ಬಗ್ಗೆ ವಿವೇಚನೆಯನ್ನು ಮಾಡಿದೆ. ಇದರಲ್ಲಿ ಎಂಟು ಅಧಿಕಾರ ಗಳಿವೆ—ಉದ್ಗಮ, ಉತ್ಪಾದನ, ಏಷಣಾ, ಸಂಯೋಜನಾ, ಪ್ರಮಾಣ ಅಂಗಾರ, ಧೂಮ ಮತ್ತು ಕಾರಣ ಇವುಗಳ ಮುಖಾಂತರ ಆಹಾರದಲ್ಲಿ ಉತ್ಪನ್ನವಾಗುವ ದೋಷಗಳ ವಿವೇಚನೆಯನ್ನು ಮಾಡಲಾಗಿದೆ. ಅಲ್ಲದೆ ಅವುಗಳನ್ನು ಸಾಧುಗಳು ನಿವಾರಿಸುವ ಬಗೆಯನ್ನು ಹೇಳಿದೆ. ನಿರ್ಯುಕ್ತಿಯೆಂದು ಆಗಮಗಳ ಮೇಲಿನ ಎಲ್ಲಕ್ಕೂ ಪ್ರಾಚೀನ ಟೀಕೆಯೆಂದು ಹೇಳಲಾಗುತ್ತಿದೆ. ಇದರ ಕರ್ತೃವು ಭದ್ರಬಾಹುವೆಂದು ಹೇಳು ತ್ತಾರೆ. ಪಿಂಡನಿರ್ಯುಕ್ತಿಯು ಸಹಜವಾಗಿಯೂ ದಶವೈಕಾಲಿಕದಲ್ಲಿ ಸೇರಿದ ಪಿಂಡ ಏಷಣಾ ಎಂಬ ಹೆಸರಿನ ಐದನೆಯ ಅಧ್ಯಯನದ ಇಂಥದೇ ಆದ ಪ್ರಾಚೀನ ಟೀಕೆ ಯಾಗಿದೆ. ಆದರೆ ಇದು ತನ್ನ ವಿಷಯದ ಮಹತ್ವ ಮತ್ತು ವಿಸ್ತಾರಗಳಿಂದ ಆಗಮ ಗಳಲ್ಲಿ ಒಂದು ಸ್ವತಂತ್ರ ಸ್ಥಾನವನ್ನು ಪಡೆದಿದೆ. ಉಳಿದ ಎರಡು ಮೂಲ ಸೂತ್ರಗಳು —ಉತ್ತರಾಧ್ಯಯನ ಮತ್ತು ದಶವೈಕಾಲಿಕ-ವಿಶೇಷ ಮಹತ್ವಪೂರ್ಣವೂ, ಸುಪ್ರಚ ಲಿತ ಮತ್ತು ಲೋಕಪ್ರಿಯ ರಚನೆಗಳಾಗಿವೆ. ಇವು ಭಾಷೆ, ಸಾಹಿತ್ಯ, ಸಿದ್ಧಾಂತ ಈ ಮೂರೂ ದೃಷ್ಟಿಗಳಿಂಧಲೂ ವಿಶೇಷತೆಯನ್ನು ಹೊಂದಿವೆ. ಉತ್ತರಾಧ್ಯಯನದಲ್ಲಿ ೩೬ ಅಧ್ಯಯನಗಳಿವೆ. ಪರಂಪರಾನುಸಾರ ಮಹಾವೀರನು ತನ್ನ ಜೀವನದ ಉತ್ತರ ಕಾಲದಲ್ಲಿ, ನಿರ್ವಾಣ ಹೊಂದುವ ಪೂರ್ವದಲ್ಲಿ ಈ ಉಪದೇಶಗಳನ್ನು ಇತ್ತನು. ಈ ಮೂವತ್ತಾರು ಅಧ್ಯಯನಗಳನ್ನು ಸೈದ್ಧಾಂತಿಕ, ನೈತಿಕ ಮತ್ತು ಸುಭಾಷಿತಾತ್ಮಕ,

ಕಥಾತ್ಮಕ ಎಂಬ ಮೂರು ವಿಭಾಗಗಳಲ್ಲಿ ವಿಭಜಿಸಲಾಗಿದೆ. ಈ ಮೂರೂ ಪ್ರಕಾರದ ವಿಷಯಗಳನ್ನು ತರುವಾಯದ ಕಾಲದ ಸಾಹಿತ್ಯದಲ್ಲಿ ಬಹಳಷ್ಟು ಅನುಸರಿಸಲಾಗಿದೆ. ಟೀಕೆ ಟಿಪ್ಪಣಿಗಳಿಂದಲೂ ವಿಸ್ತರಿಸಲಾಗಿದೆ. ದಶವೈಕಾಲಿಕ ಸೂತ್ರದಲ್ಲಿ ಹನ್ನೆರಡು ಅಧ್ಯಯನಗಳಿವೆ. ಇವುಗಳಲ್ಲಿ ವಿಶೇಷವಾಗಿ ಮುನಿ ಆಚಾರದ ಪ್ರರೂಪಣೆಯು ಇದೆ. ಇವೆರಡು ರಚನೆಗಳೂ ಹೆಚ್ಚಾಗಿ ಪದ್ಯರೂಪದಲ್ಲಿವೆ. ಸುಭಾಷಿತ, ನ್ಯಾಯ, ರೂಪಕ ಗಳೂ ವಿಪುಲವಾಗಿವೆ. ಇವುಗಳ ಭಾಷೆಯು ಆಚಾರಾಂಗ ಮತ್ತು ಸೂತ್ರಕೃತಾಂಗ ಗಳಂತೆ ಅಪೇಕ್ಷೆಗಿಂತಲೂ ಹೆಚ್ಚು ಪ್ರಾಚೀನ ವೆನಿಸುತ್ತದೆ. ಈ ಎರಡು ಸೂತ್ರಗಳ ಉಲ್ಲೇಖವು ದಿಗಂಬರ ಶಾಸ್ತ್ರಗಳಲ್ಲಿಯೂ ಕಂಡುಬರುತ್ತದೆ.

ಪ್ರಕೀರ್ಣಕ ೧೦ :—

ದನಪಇಣ್ಣಾ—ಎಂಬ ಹೆಸರಿನ ಗ್ರಂಥದ ರಚನೆಯ ವಿಷಯದಲ್ಲಿ ಟೀಕಾಕಾರರು ಹೀಗೆ ಹೇಳಿದ್ದಾರೆ:—ತೀರ್ಥಂಕರರು ಮಾಡಿದ ಉಪದೇಶಗಳ ಆಧಾರದ ಮೇಲೆ ನಾನಾಶ್ರಮಣರು ರಚಿಸಿದ ಗ್ರಂಥಗಳು ಪ್ರಕೀರ್ಣಕಗಳೆನಿಸುತ್ತವೆ. ಇಂಥ ಪ್ರಕೀರ್ಣಕಗಳ ಸಂಖ್ಯೆಯು ಸಾವಿರಾರು ಎಂದು ಹೇಳಿದೆ. ಆದರೆ ಯಾವ ರಚನೆ ಗಳನ್ನು ವಲ್ಲಭೀವಾಚನದ ಕಾಲಕ್ಕೆ ಆಗಮಗಳೆಂದು ಸ್ವೀಕರಿಸಲಾಗಿದೆಯೋ ಅವು ಹತ್ತು ಮಾತ್ರ ಇವೆ. ಅವುಗಳ ಹೆಸರುಗಳು ಹೀಗಿವೆ :—(೧) ಚತುಃಶರಣ (ಚಉ ಸರಣ), (೨) ಆತುರ-ಪ್ರತ್ಯಾಖ್ಯಾನ (ಆತುರ ಪಚ್ಚಕ್ಖಾಣ), (೩) ಮಹಾ ಪ್ರತ್ಯಾಖ್ಯಾನ (ಮಹಾ-ಪಚ್ಚಕ್ಖಾಣ), (೪) ಭಕ್ತಪರಿಜ್ಞಾ (ಭತ್ತಪರಿಣ್ಣಾ) (೫) ತಂಡುಲ ವೈಚಾರಿಕ (ತಂದುಲ ವೇಯಾಲಿಯ), (೬) ಸಂಸ್ತಾರಕ (ಸಂಥಾ ರಗ), (೭) ಗಚ್ಛಾಚಾರ (ಗಚ್ಛಾಯಾರ), (೮) ಗಣಿವಿದ್ಯಾ (ಗಣಿವಿಜ್ಜಾ), (೯) ದೇವೇಂದ್ರಸ್ತವ (ದೇವಿಂದತ್ಥವ) ಮತ್ತು (೧೦) ಮರಣ ಸಮಾಧಿ (ಮರಣ ಸಮಾಹಿ). ಈ ರಚನೆಗಳೆಲ್ಲವೂ ಬಹಳಷ್ಟು ಪದ್ಯಾತ್ಮಕವಾಗಿವೆ. (೧) ಚತುಃಶರಣದಲ್ಲಿ ಆರಂಭದೊಳಗೆ ಆರು ಆವಶ್ಯಕಗಳ ಉಲ್ಲೇಖ ಮಾಡಲಾಗಿದೆ. ಕೊನೆಗೆ ಅರಹಂತ, ಸಿದ್ಧ, ಸಾಧು, ಮತ್ತು ಜಿನಧರ್ಮ ಈ ನಾಲ್ಕಕ್ಕೆ ಶರಣ್ಯವೆಂದು ಮನ್ನಿಸಲಾಗಿದೆ. ಅಲ್ಲದೆ ದುಷ್ಕೃತದ (ಪಾಪ) ವಿಷಯದಲ್ಲಿ ನಿಂದೆಯನ್ನೂ ಸುಕೃತದ (ಪುಣ್ಯ) ವಿಷಯದಲ್ಲಿ ಅನುರಾಗವನ್ನೂ ಪ್ರಕಟಗೊಳಿಸಲಾಗಿದೆ. ಇದರಲ್ಲಿ ಅರವತ್ತು ಮೂರು ಗಾಹೆಗಳು ಮಾತ್ರ ಇವೆ. ಕೊನೆಯ ಗಾಹೆಯಲ್ಲಿ ಕರ್ತೃವಿನ ಹೆಸರೆಂದು ವೀರಭದ್ರನ ಉಲ್ಲೇಖವಿದೆ. (೨) ಆತುರ-ಪ್ರತ್ಯಾಖ್ಯಾನದಲ್ಲಿ ಬಾಲ-ಮರಣ ಮತ್ತು ಪಂಡಿತ ಮರಣ ಇವರಲ್ಲಿ ಭೇದವನ್ನು ಸ್ಥಾಪಿಸಲಾಗಿದೆ. ಪ್ರತ್ಯಾಖ್ಯಾನ ಅರ್ಥಾತ್ ಪರಿತ್ಯಾಗವು ಮೋಕ್ಷಪ್ರಾಪ್ತಿಯ ಸಾಧನೆಯೆಂದು ಹೇಳಿದೆ. ಇದರಲ್ಲಿ ಕೇವಲ ಎಪ್ಪತ್ತು ಗಾಹೆಗಳು ಇವೆ. ಕೆಲವೊಂದು ಅಂಶ ಗದ್ಯವೂ ಇದೆ. (೩) ಮಹಾ ಪ್ರತ್ಯಾಖ್ಯಾನದಲ್ಲಿ ಒಂದುನೂರಾ ನಲವತ್ತೆರಡು ಅನುಷ್ಟುಪ್ ಛಂದದ ಗಾಹೆಗಳಿಂದ

ದುಶ್ಚರಿತವನ್ನು ನಿಂದಾಪೂರ್ವಕವಾಗಿಯೂ ಸಚ್ಚಾರಿತ್ರಾತ್ಮಕ ಭಾವನೆ, ವ್ರತ, ಆರಾಧನಾ ಮತ್ತು ಕೊನೆಗೆ ಪ್ರತ್ಯಾಖ್ಯಾನದ ಪರಿಪಾಲನೆಗಳ ಮೇಲೆ ಜೋರು ಕೊಡಲಾಗಿದೆ. ಈ ಪ್ರಕಾರ ಈ ರಚನೆಯು ಪೂರ್ವವತ್ ಆತುರ-ಪ್ರತ್ಯಾಖ್ಯಾನದ ಪೂರಕ ಸ್ವರೂಪದಲ್ಲಿದೆ. (೪) ಭಕ್ತ-ಪರಿಜ್ಞಾದಲ್ಲಿ ಒಂದನೂರ ಎಪ್ಪತ್ತೆರಡು ಗಾಹೆಗಳಿವೆ. ಇವುಗಳಿಂದ ಭಕ್ತ-ಪರಿಜ್ಞಾ, ಪಾದೋಪಗಮನ ರೂಪ ಮರಣಗಳ ಭೇದದ ಸ್ವರೂಪವನ್ನು ಹೇಳಿದೆ. ವಿವಿಧ ದೃಷ್ಟಾಂತಗಳಿಂದ ಮನಸ್ಸನ್ನು ಸಂಯಮ ಗೊಳಿಸುವ ಉಪದೇಶವನ್ನು ಮಾಡಲಾಗಿದೆ. ಮನಸ್ಸಿಗೆ ಮಂಗನ ಉಪಮೆಯನ್ನು ಕೊಡಲಾಗಿದೆ. ಅದು ಸ್ವಭಾವತಃ ಚಂಚಲವಾಗಿರುತ್ತದೆ. ಒಂದು ಕ್ಷಣವೂ ಕೂಡ ಶಾಂತವಾಗಿರುವುದಿಲ್ಲ. (೫) ತಂದುಲ ವೈಚಾರಿಕ ಇಲ್ಲವೆ ವೈಕಾಲಿಕವು ೧೩೩ ಗಾಥಾಯುಕ್ತ ಗದ್ಯಪದ್ಯ ಮಿಶ್ರಿತ ರಚನೆಯಾಗಿದೆ. ಇದರಲ್ಲಿ ಗೌತಮ ಮತ್ತು ಮಹಾವೀರನ ನಡುವೆ ನಡೆದ ಪ್ರಶ್ನೋತ್ತರ ರೂಪದ ಚರ್ಚೆಯಿದೆ. ಅದರ ವಿಷಯವು ಜೀವದ ಗರ್ಭಾವಸ್ಥೆ, ಆಹಾರವಿಧಿ, ಬಾಲಜೀವನ, ಕ್ರೀಡೆ ಮೊದಲಾದ ಅವಸ್ಥೆಗಳ ವರ್ಣನೆಯಿದೆ. ಪ್ರಸಂಗಾನುಸಾರ ಇದರಲ್ಲಿ ಶರೀರದ ಅಂಗ ಪ್ರತ್ಯಂಗಗಳ ಮತ್ತು ಅವುಗಳ ಅಪವಿತ್ರತೆಗಳ ವರ್ಣನೆಯು ಇದೆ. ಅಲ್ಲದೆ ಸ್ತ್ರೀಯರ ಪ್ರಕೃತಿ ಮತ್ತು ಅದರಿಂದ ಉತ್ಪನ್ನವಾಗುವ ಸಾಧುಗಳ ಭಯ ಮೊದಲಾದವುಗಳನ್ನು ವಿಸ್ತಾರ ರೂಪ ದಲ್ಲಿ ವರ್ಣಿಸಿದೆ. (೬) ಸಂಸ್ತಾರಕದಲ್ಲಿ ೧೨೨ ಗಾಹೆಗಳಿವೆ. ಇದರಲ್ಲಿ ಸಾಧುಗಳ ಅಂತ್ಯ ಸಮಯದಲ್ಲಿ ಹುಲ್ಲಿನ ಆಸನವನ್ನು (ಸಂಥಾರಾ) ಗ್ರಹಣ ಮಾಡುವ ವಿಧಿಯನ್ನು ಹೇಳಲಾಗಿದೆ. ಅದರ ಮೇಲೆ ಅವಿಚಲ ರೂಪದಿಂದ ಸ್ಥಿರವಾಗಿದ್ದು, ಅವರು ಪಂಡಿತ ಮರಣವನ್ನು ಹೊಂದಿ, ಸದ್ಗತಿಯನ್ನು ಹೊಂದಲು ಸಾಧ್ಯವಿದೆ. ಈ ಪ್ರಸಂಗದಲ್ಲಿ ದೃಷ್ಟಾಂತವೆಂದು ಸುಬಂಧು ಮತ್ತು ಚಾಣಕ್ಯರ ಹೆಸರುಗಳ ಉಲ್ಲೇಖವಿದೆ. (೭) ಗಚ್ಛಾಚಾರದಲ್ಲಿ ೧೩೭ ಗಾಹೆಗಳಿದ್ದು, ಅವುಗಳಿಂದ ಮುನಿ ಹಾಗೂ ಆರ್ಯಿಕೆಯರು ಗಚ್ಛದಲ್ಲಿ ಇರುವುದನ್ನು ಅದಕ್ಕೆ ಸಂಬಂಧಿಸಿದ ವಿನಯ ಮತ್ತು ನಿಯಮ-ಉಪ ನಿಯಮಗಳ ಪಾಲನೆಯನ್ನೂ ಅದರ ವಿಧಿಗಳನ್ನೂ ಹೇಳಿದೆ. ಇದರಲ್ಲಿ ಮುನಿಗಳು ಮತ್ತು ಸಾಧ್ವಿಯರು ಪರಸ್ಪರ ಸತರ್ಕ ರೀತಿಯಿಂದ ಇದ್ದು, ತಮ್ಮ ಕಾಮವಾಸನೆಯು ಜಾಗೃತವಾಗದಂತೆ ಎಚ್ಚರ ವಹಿಸಬೇಕೆಂಬುದರ ವಿಷಯದಲ್ಲಿ ಚೆನ್ನಾಗಿ ಎಚ್ಚರಿಕೆಯ ನ್ನಿತ್ತಿದೆ. (೮) ಗಣಿವಿದ್ಯಾದಲ್ಲಿ ೮೬ ಗಾಥೆಗಳಿಂದ ದಿವಸ, ತಿಥಿ, ನಕ್ಷತ್ರ, ಯೋಗ, ಕರಣ, ಮುಹೂರ್ತ ಮೊದಲಾದವುಗಳನ್ನು ಜ್ಯೋತಿಷ್ಯದ ರೀತಿಯಲ್ಲಿ ವಿಚಾರಮಾಡ ಲಾಗಿದೆ. ಇದರಲ್ಲಿ ಹೋರಾ ಶಬ್ದವೂ ಬಂದಿದೆ. (೯) ದೇವೇಂದ್ರಸ್ತವದಲ್ಲಿ ೩೦೭ ಗಾಹೆಗಳಿವೆ. ಇದರಲ್ಲಿ ಇಪ್ಪತ್ನಾಲ್ಕು ತೀರ್ಥಂಕರರ ಸ್ತುತಿಯನ್ನು ಮಾಡ ಲಾಗಿದೆ. ಸ್ತುತಿಕಾರನು ಒಂದು ಪ್ರಶ್ನೆಗೆ ಉತ್ತರವನ್ನು ಕೊಡುತ್ತ ಕಲ್ಪ ಹಾಗೂ ಕಲ್ಪಾತೀತ ದೇವರ ವರ್ಣನೆಯನ್ನು ಮಾಡಿದ್ದಾನೆ. ಈ ಕೃತಿಯನ್ನೂ ಕೂಡ ವೀರಭದ್ರ ಕೃತವೆಂದು ತಿಳಿಯುತ್ತಾರೆ. (೧೦) ಮರಣ ಸಮಾಧಿಯಲ್ಲಿ ೬೬೩ ಗಾಹೆಗಳಿವೆ.

ಇವುಗಳಲ್ಲಿ ಆರಾಧನಾ, ಆರಾಧಕ, ಆಲೋಚನ, ಸಲ್ಲೇಖನ, ಕ್ಷಮಾಪನ ಮೊದಲಾದ ಹದಿನಾಲ್ಕು ದ್ವಾರಗಳಿಂದ ಸಮಾಧಿ ಮರಣದ ವಿಧಿಯನ್ನು ತಿಳಿಸಿ ಹೇಳಲಾಗಿದೆ. ಅಲ್ಲದೆ ನಾನಾ ದೃಷ್ಟಾಂತಗಳಿಂದ ಪರೀಷಹಗಳನ್ನು ಸಹನ ಮಾಡುವ ಆವಶ್ಯಕತೆ ಯನ್ನು ತಿಳಿಸಲಾಗಿದೆ. ಕೊನೆಯಲ್ಲಿ ಹನ್ನೆರಡು ಭಾವನೆಗಳ ನಿರೂಪಣೆಯನ್ನು ಸಹ ಮಾಡಲಾಗಿದೆ. ಈ ಹತ್ತೂ ಪ್ರಕೀಣಕಗಳ ವಿಷಯಗಳ ಬಗ್ಗೆ ವಿಚಾರಿಸಿದಲ್ಲಿ ಮುಖ್ಯ ವಾಗಿ ಒಂದು ಮಾತು ಸ್ಪಷ್ಟವಾಗುತ್ತದೆ. ಮುನಿಗಳು ತಮ್ಮ ಕೊನೆಯ ಸಮಯದಲ್ಲಿ ಮನಸ್ಸನ್ನು ಧಾರ್ಮಿಕ ಭಾವನೆಗಳ ಕಡೆಗೆ ಹಚ್ಚಿ. ಶಾಂತಿ ಮತ್ತು ನಿರಾಕುಲತಾ ಪೂರ್ವಕ ಶರೀರ ಪರಿತ್ಯಾಗ ಮಾಡುವ ವಿಧಿಯನ್ನು ತಿಳಿಸಿ ಹೇಳಿದೆ.

### ಚೂಲಿಕಾ ಸೂತ್ರ ೨ :—

ಕೊನೆಯ ಎರಡು ಚೂಲಿಕಾ ಸೂತ್ರಗಳು ನಂದಿ ಮತ್ತು ಅನುಯೋಗದ್ವಾರ ಗಳೆಂದು ಇವೆ. ಅವು ಮನಃಪೂರ್ವಕವಾಗಿಯೇ ಹಿಂದಿನಿಂದ ರಚಿಸಿದ ಕೃತಿಗಳಾಗಿವೆ. ನಂದಿಸೂತ್ರದ ಕರ್ತೃವಂತೂ ಒಂದು ಅಭಿಪ್ರಾಯಕ್ಕನುಸರಿಸಿ, ವಲ್ಲಭೀ ವಾಚನದ ಪ್ರಧಾನ ನಾಯಕನಾದ ದೇವರ್ಧಿಗಣೀ ಕ್ಷಮಾಶ್ರಮಣನೇ ಆಗಿದ್ದಾನೆ. ನಂದಿಸೂತ್ರ ದಲ್ಲಿ ೯೦ ಗಾಹೆಗಳೂ ಮತ್ತು ೫೯ ಸೂತ್ರಗಳೂ ಇವೆ. ಇದರಲ್ಲಿ ಭಗವಾನ್ ಮಹಾ ವೀರ ಹಾಗೂ ಅವನ ಸಂಘದಲ್ಲಿದ್ದ ಶ್ರಮಣರು ಮತ್ತು ಪರಂಪರಾಗತವಾಗಿ ಭದ್ರ ಬಾಹು, ಸ್ಥೂಲಭದ್ರ ಮಹಾಗಿರಿ ಮೊದಲಾದ ಆಚಾರ್ಯರ ಸ್ತುತಿಯನ್ನು ಮಾಡ ಲಾಗಿದೆ. ತರುವಾಯ ಜ್ಞಾನದ ಐದು ಭೇದಗಳ ವಿವೇಚನೆಯನ್ನು ಮಾಡಿದೆ. ಅಲ್ಲದೆ ಆಚಾರಾಂಗವೇ ಮೊದಲಾದ ಹನ್ನೆರಡು ಅಂಗಗಳ ಸ್ವರೂಪವನ್ನು ವಿವರಿಸಿದೆ. ಇದ ರಲ್ಲಿ ಭಾರತ, ರಾಮಾಯಣ, ಕೌಟಿಲ್ಯ, ಪಾತಂಜಲ ಮೊದಲಾದ ಶಾಸ್ತ್ರಪುರಾಣಗಳೂ ಹಾಗೂ ವೇದ ಮೊದಲಾದ ಎಪ್ಪತ್ತೆರಡು ಕಲೆಗಳೂ ಉಲ್ಲೇಖಗೊಂಡಿವೆ. ಇವು ಮುನಿಗಳ ಅಧ್ಯಯನಕ್ಕೆ ವರ್ಜ್ಯವೆಂದೂ ಹೇಳಿದೆ. (೨) ಅನುಯೋಗದ್ವಾರವು ಆರ್ಯ ರಕ್ಷಿತ ಕೃತವೆಂದೂ ಮನ್ನಿಸಲಾಗಿದೆ. ಇದರಲ್ಲಿ ಪ್ರಶ್ನೋತ್ತರ ರೂಪದಿಂದ ಪಲ್ಯೋಪಮಾದಿ ಉಪಮಾ ಪ್ರಮಾಣಗಳ ಸ್ವರೂಪವನ್ನು ತಿಳಿಸಿ ಹೇಳಲಾಗಿದೆ. ಅದರಂತೆ ನಯಗಳ ಪ್ರರೂಪಣೆಯೂ ಸಹ ಇದೆ. ಇದಲ್ಲದೆ ಕಾವ್ಯಕ್ಕೆ ಸಂಬಂಧಿಸಿದ ನವರಸ, ಸ್ವರ, ಗ್ರಾಮ, ಮೂರ್ಛನಾ ಮೊದಲಾದ ಲಕ್ಷಣಗಳನ್ನೂ ಹೇಳಿದೆ. ಇಲ್ಲಿ ಚರಕ, ಗೌತಮ ಮೊದಲಾದ ಅನ್ಯ ಶಾಸ್ತ್ರಗಳ ಉಲ್ಲೇಖವೂ ಸಹ ಬಂದಿದೆ. ಇದರ ಮೇಲೆ ಹರಿಭದ್ರನು ವಿವೃತ್ತಿಯನ್ನೂ ಕೂಡ ಬರೆದಿದ್ದಾನೆ.

### ಅರ್ಧಮಾಗಧೀ ಭಾಷೆ :—

ಮೇಲೆ ವಿವರಿಸಿದ ೪೫ ಆಗಮ ಗ್ರಂಥಗಳ ಭಾಷೆಯು ಅರ್ಧಮಾಗಧಿಯೆಂದು ತಿಳಿಯಲಾಗುತ್ತದೆ. ' ಅರ್ಧಮಾಗಧಿ ' ಎಂಬುದರ ಅರ್ಥವನ್ನು ವಿವಿಧ ರೀತಿಯಿಂದ

ಮಾಡಲಾಗುತ್ತದೆ. ಒಂದು, ಯಾವ ಭಾಷೆಯು ಮಗಧದ ಅರ್ಧ ಭಾಗದಲ್ಲಿ ಮಾತ ನಾಡುವ ಭಾಷೆಯಾಗಿತ್ತೋ ಅದು ಅರ್ಧಮಾಗಧೀ ಭಾಷೆಯು. ಇನ್ನೊಂದು ಅರ್ಧ ದಲ್ಲಿ ಯಾವ ಭಾಷೆಯಲ್ಲಿ ಮಾಗಧೀ ಭಾಷೆಯ ಅರ್ಧ ಪ್ರವೃತ್ತಿಗಳು ಕಂಡು ಬರು ತ್ತಿದ್ದುವೋ ಅದು ಅರ್ಧಮಾಗಧಿಯಾಗಿದೆ. ನಿಜವಾಗಿಯೂ ಈ ಎರಡೂ ಉತ್ಪತ್ತಿ ಗಳು ಸಾರ್ಥಕವೆನಿಸಿವೆ. ಈ ಭಾಷೆಯ ಐತಿಹಾಸಿಕ ಸ್ವರೂಪವನ್ನು ಇವು ಸೂಚಿಸು ತ್ತವೆ. ಮಾಗಧೀ ಭಾಷೆಗೆ ಮುಖ್ಯವಾಗಿ ಮೂರು ವಿಶೇಷತೆಗಳಿದ್ದುವು: (೧) ಅದ ರಲ್ಲಿ 'ರ' ಉಚ್ಚಾರವು 'ಲ' ಎಂದಾಗುತ್ತಿತ್ತು. (೨) ಮೂರೂ ಪ್ರಕಾರದ ಊಷ್ಮ ಷ, ಸ, ಶ ವರ್ಣಗಳ ಸ್ಥಾನದಲ್ಲಿ 'ಶ' ವೇ ಕಂಡು ಬರುತ್ತಿತ್ತು. (೩) ಅಕಾರಾಂತ ಕರ್ತಾಕಾರಕ ಏಕ ವಚನದ ರೂಪವನ್ನು 'ಓ' ದ ಸ್ಥಾನದಲ್ಲಿ 'ಏ' ಪ್ರತ್ಯಯವನ್ನು ಹಚ್ಚಿ ರೂಪಿಸಲಾಗುತ್ತಿತ್ತು. ಈ ಮೂರು ಮುಖ್ಯ ಪ್ರವೃತ್ತಿಯಿಂದಲೇ ಅರ್ಧ ಮಾಗಧಿಯಲ್ಲಿ ಕರ್ತೃವಿನ ಕಾರಕಕ್ಕೆ 'ಎ' ಕಾರದ ಪ್ರಯೋಗವೇ ಹೆಚ್ಚಾಗಿ ಇದೆ. 'ರ'ದ 'ಲ'ವು ಕ್ವಚಿತ್ತವೇ ಆಗುತ್ತದೆ. ಮೂರೂ ಸಕಾರಗಳ ಸ್ಥಾನದಲ್ಲಿ ತಾಲವ್ಯ 'ಶ' ಕಾರವಾಗದೆ ದಂತ್ಯ 'ಸ' ಕಾರವೇ ಆಗುತ್ತದೆ. ಈ ಪ್ರಕಾರ ಈ ಭಾಷೆಯಲ್ಲಿ ಮಾಗಧಿಯ ಅರ್ಧ ಪ್ರವೃತ್ತಿಗಳು ಇವೆಯೆಂದು ಹೇಳಲಾಗುತ್ತದೆ. ಇದರ ಉಳಿದ ಪ್ರವೃತ್ತಿಗಳು ಶೌರಸೇನೀ ಪ್ರಾಕೃತಕ್ಕೆ ಹೊಂದುತ್ತವೆ. ಈ ಭಾಷೆಯ ಪ್ರಚಾರವು ಮಗಧದ ಪಶ್ಚಿಮ ಭಾಗದಲ್ಲಿ ಇತ್ತೆಂದು ಇದರಿಂದ ಅನುಮಾನಿಸಲಾಗುತ್ತದೆ. ಮೂಲ ದಲ್ಲಿ ಮಹಾವೀರ ಹಾಗೂ ಬುದ್ಧ ಇಬ್ಬರ ಉಪದೇಶದ ಭಾಷೆಯು ಆ ಕಾಲದಲ್ಲಿ ಅರ್ಧ ಮಾಗಧಿಯೇ ಇದ್ದಿರಬೇಕೆಂದು ವಿದ್ವಾಂಸರ ಮತವೂ ಇದೆ. ಆದರಿಂದ ಆ ಉಪದೇಶ ಗಳು ಪೂರ್ವ ಹಾಗೂ ಪಶ್ಚಿಮದ ಜನತೆಗೆ ಸಮಾನ ರೂಪದಿಂದ ಸುಬೋಧವಾಗಲು ಸಾಧ್ಯವಾಯಿತು. ಆದರೆ ಈ ಮೊದಲು ವಿವರಿಸಿದ ಉಪಲಬ್ಧ ಆಗಮಗ್ರಂಥಗಳಲ್ಲಿ ನಮಗೆ ಪ್ರಾಚೀನ ಅರ್ಧಮಾಗಧೀ ಭಾಷೆಯ ಸ್ವರೂಪ ನೋಡಲಿಕ್ಕೆ ಸಿಕ್ಕುವುದಿಲ್ಲ. ಆ ಕಾಲದ ಮಧ್ಯಯುಗದ ಆರ್ಯ ಭಾಷೆಯಲ್ಲಿ ಸಂಯುಕ್ತ ವ್ಯಂಜನಗಳ ಸಮೀಕರಣ ಅಥವಾ ಸ್ವರ–ಭಕ್ತಿ ಮೊದಲಾದವುಗಳ ವಿಧಿಯಿಂದ ಭಾಷೆಯನ್ನು ಸರಳಗೊಳಿಸುವ ದಂತೂ ಪ್ರಾರಂಭವಾಗಿ ಹೋಗಿತ್ತು. ಆದರೆ ಅವುಗಳಲ್ಲಿ ಕ–ಗ, ತ–ದಗಳಂಥ ವರ್ಣ ಗಳ ಲೋಪದ ಪ್ರಕ್ರಿಯೆಯು ಆರಂಭವಾಗಿರಲಿಲ್ಲ; ಈ ಪ್ರಕ್ರಿಯೆಯು ಮಧ್ಯಯುಗದ ಆರ್ಯಭಾಷೆಯ ಎರಡನೆಯ ಸ್ತರದಿಂದ ಆರಂಭವಾಯಿತೆಂದು ಮನ್ನಿಸಲಾಗುತ್ತಿದೆ. ಈ ಕಾಲವು ಸುಮಾರು ಕ್ರಿ.ಶ. ಎರಡನೆಯ ಶತಮಾನವೆಂದು ಸಿದ್ಧವಾಗುತ್ತದೆ. ಉಪ ಲಬ್ಧ ಆಗಮ ಗ್ರಂಥಗಳು ಇದೇ ಸ್ತರದ ಪ್ರವೃತ್ತಿಯಿಂದ ಪ್ರಭಾವಿತವಾದದ್ದು ಕಂಡು ಬರುತ್ತದೆ. ಈ ಪ್ರವೃತ್ತಿಗಳು ಸ್ಪಷ್ಟವಾಗಿಯೂ ಕಾಲಕ್ರಮದಿಂದ ಅವುಗಳ ಮೌಖಿಕ ಪರಂಪರೆಯೇ ಕಾರಣವಾಗಿ ಅವುಗಳಲ್ಲಿ ಸಮಾವೇಶವಾಗಿ ಹೋದುವು.

**ಸೂತ್ರ ಇಲ್ಲವೆ ಸೂಕ್ತ :—**

ಈ ಆಗಮಗಳ ವಿಷಯದಲ್ಲಿ ಇನ್ನೂ ಒಂದು ಸಂಗತಿಯು ವಿಚಾರಣೀಯವಾಗಿದೆ. ಇವುಗಳನ್ನು ಬಹಳಷ್ಟು ಸೂತ್ರ ಎಂಬ ಹೆಸರಿನಿಂದ ಉಲ್ಲೇಖ ಮಾಡಲಾಗುತ್ತದೆ. ಉದಾಹರಣೆಗೆಂದು ಆಚಾರಾಂಗ ಸೂತ್ರ, ಉತ್ತರಾಧ್ಯಯನ ಸೂತ್ರ ಮೊದಲಾದವುಗಳನ್ನು ನೋಡಬಹುದು. ಆದರೆ ಸಂಸ್ಕೃತ ಭಾಷೆಯಲ್ಲಿ ಯಾವ ಅರ್ಥದಲ್ಲಿ ಸೂತ್ರ ಶಬ್ದದ ಪ್ರಯೋಗವು ಕಂಡು ಬರುತ್ತದೆಯೋ, ಆ ಅರ್ಥದಲ್ಲಿ ಈ ರಚನೆಗಳು ಸೂತ್ರವೆಂದು ಸಿದ್ಧವಾಗುವುದಿಲ್ಲ, ಸೂತ್ರದ ಮುಖ್ಯ ಲಕ್ಷಣವು ಸಂಕ್ಷಿಪ್ತ ವಾಕ್ಯದಲ್ಲಿ ಹೆಚ್ಚಿಗೆ ಹೆಚ್ಚು ಅರ್ಥ ವ್ಯಕ್ತಮಾಡುವುದೆಂದಿದೆ. ಅಲ್ಲದೆ ಅವುಗಳಲ್ಲಿ ಪುನರಾವೃತ್ತಿಯು ದೋಷವೆನಿಸುತ್ತದೆ, ಅಂದಮೇಲೆ ಈ ಜೈನ ಶ್ರುತಾಂಗಗಳು ಅಂಥ ಸಂಕ್ಷಿಪ್ತ ರಚನೆಗಳಾಗಿಲ್ಲ. ಇವುಗಳಲ್ಲಿ ವಿಷಯ ವಾಕ್ಯಗಳ ಪುನರಾವೃತ್ತಿಯೂ ವಿಶೇಷವಾಗಿದೆ. ಹೀಗಾಗಿ ಇವುಗಳನ್ನು ಸೂತ್ರವೆಂದು ಹೇಳುವುದು ಅನುಚಿತವೆನಿಸುತ್ತದೆ. ತಮ್ಮ ಪ್ರಾಕೃತ ಹೆಸರಿಗನುಸರಿಸಿ ಈ ರಚನೆಗಳಿಗೆ ಸುತ್ತವೆಂದು ಹೇಳಲಾಗುತ್ತದೆ. ಮಾದರಿಗಾಗಿ ಆಯಾರಂಗ ಸುತ್ತ, ಉತ್ತರಧ್ಯಯನ ಸುತ್ತ ಇತ್ಯಾದಿ. ಈ ಸುತ್ತವನ್ನು ಸಂಸ್ಕೃತದಲ್ಲಿ ಸೂತ್ರವೆಂದು ಹೇಳುವುದು ಒಂದು ಭ್ರಮೆಯಾಗಿದೆ. ಅದರ ಉಚಿತವಾದ ಸಂಸ್ಕೃತ ರೂಪವು ಸೂಕ್ತವೆಂಬುದೇ ಹೆಚ್ಚು ಸಯುಕ್ತಿಕವೆನಿಸುತ್ತದೆ. ಮಹಾವೀರನ ಕಾಲದಲ್ಲಿ ಸೂತ್ರ ಶೈಲಿಯ ಪ್ರಾರಂಭವೂ ಕೂಡ ಆಗಿರಲಿಲ್ಲ. ಆಗ ವೇದಗಳ ಸೂಕ್ತಗಳ ಪ್ರಚಾರವೇ ವಿಶೇಷವಾಗಿತ್ತು. ಆದರಿಂದ ಬಹಳ ಮಾಡಿ ಅದೇ ಹೆಸರನ್ನು ಮೂಲದಲ್ಲಿ ಈ ರಚನೆಗಳಿಗೆ ಹಾಗೂ ಬೌದ್ಧ ಸಾಹಿತ್ಯದ ಸುತ್ತಗಳಿಗೆ ಪ್ರಾಕೃತ ರೂಪದಲ್ಲಿ ಕೊಡಲಾಯಿತು.

**ಆಗಮಗಳ ಟೀಕಾ ಸಾಹಿತ್ಯ :—**

ಮೇಲೆ ಹೇಳಿದ ಆಗಮ ಗ್ರಂಥಗಳಿಗೆ ಸಂಬಂಧಿಸಿದ ಅನೇಕ ಗ್ರಂಥಗಳು ತರುವಾಯದ ಕಾಲದಲ್ಲಿ ನಿರ್ಮಾಣವಾಗಿವೆ. ಅವುಗಳ ಉದ್ದೇಶವೂ ಆಗಮದ ವಿಷಯವನ್ನು ಸಂಕ್ಷೇಪಿಸಿ ಇಲ್ಲವೆ ವಿಸ್ತರಿಸಿ ತಿಳಿಸಿ ಹೇಳುವುದಾಗಿದೆ. ಇಂಥ ರಚನೆಗಳು ನಿರ್ಯುಕ್ತಿ (ಣಿಜ್ಜುತ್ತಿ), ಭಾಷ್ಯ (ಭಾಸ), ಚೂರ್ಣಿ (ಚುಣ್ಣಿ) ಮತ್ತು ಟೀಕಾ ಎಂದು ನಾಲ್ಕು ವಿಧವಾಗಿವೆ. ಈ ರಚನೆಗಳನ್ನು ಆಗಮದ ಅಂಗಗಳೆಂದು ಮನ್ನಿಸಲಾಗುತ್ತದೆ. ಇವುಗಳ ಸಹಿತ ಈ ಸಾಹಿತ್ಯವು ಪಂಚಾಂಗಿ ಆಗಮವೆಂದು ಹೇಳಲಾಗುತ್ತದೆ. ಇವುಗಳಲ್ಲಿ ನಿರ್ಯುಕ್ತಿಗಳು ತಮ್ಮ ಭಾಷೆ, ಶೈಲಿ, ವಿಷಯಗಳ ದೃಷ್ಟಿಯಿಂದ ಸರ್ವ ಪ್ರಾಚೀನವೆನಿಸುತ್ತವೆ. ಇವು ಪ್ರಾಕೃತ ಪದ್ಯಗಳಲ್ಲಿದ್ದು, ವಿಷಯವನ್ನು ಸಂಗ್ರಹ ರೂಪದಿಂದ ನಿರೂಪಿಸುತ್ತವೆ. ಇವುಗಳಲ್ಲಿ ಪ್ರಸಂಗಕ್ಕನುಸರಿಸಿ ವಿವಿಧ ಕಥೆ ಮತ್ತು ದೃಷ್ಟಾಂತಗಳ ಸಂಕೇತವು ದೊರೆಯುತ್ತದೆ. ಅವುಗಳ ವಿಸ್ತೃತರೂಪವು ನಮಗೆ ಟೀಕಾ ಗ್ರಂಥಗಳಲ್ಲಿ ದೊರೆಯುತ್ತದೆ. ಸಧ್ಯಕ್ಕೆ ಆಚಾರಾಂಗ, ಸೂತ್ರಕೃತಾಂಗ, ಸೂರ್ಯಪ್ರಜ್ಞಪ್ತಿ, ವ್ಯವಹಾರ, ಕಲ್ಪ, ದಶಾಶ್ರುತಸ್ಕಂಧ, ಉತ್ತರಾಧ್ಯಯನ,

ಆವಶ್ಯಕ ಮತ್ತು ದಶವೈಕಾಲಿಕ ಈ ಒಂಭತ್ತು ಆಗಮಗಳ ಮೇಲೆ ನಿರ್ಯುಕ್ತಿಗಳು ಉಪಲಬ್ಧವಿವೆ. ಇವು ಭದ್ರಬಾಹುಕೃತವೆಂದು ಮನ್ನಿಸಲಾಗುತ್ತದೆ. ಹತ್ತನೆಯದಾದ 'ಋಷಿಭಾಷಿತ ನಿರ್ಯುಕ್ತಿ'ಯ ಉಲ್ಲೇಖವಿದೆ. ಆದರೆ ಅದು ಉಪಲಬ್ಧವಿಲ್ಲ. ಇವುಗಳಲ್ಲಿ ಪಿಂಡನಿರ್ಯುಕ್ತಿ, ಓಘ ನಿರ್ಯುಕ್ತಿಗಳಂಥವು ಕೆಲವೊಂದು ಪ್ರಕರಣಗಳುಳ್ಳ ನಿರ್ಯುಕ್ತಿಗಳು. ಇವುಗಳನ್ನು ಮುನಿಗಳ ಆಚಾರದ ವಿಷಯದಲ್ಲಿ ಬಹಳ ಮಹತ್ವಪೂರ್ಣವಾದವುಗಳೆಂದು ತಿಳಿದು, ಸ್ವತಂತ್ರ ರೂಪದಲ್ಲಿ ಆಗಮ ಸಾಹಿತ್ಯದಲ್ಲಿ ಸಮಾವೇಶಗೊಳಿಸಿಕೊಳ್ಳಲಾಯಿತು.

ಭಾಷ್ಯಗಳೂ ಕೂಡ ಪ್ರಾಕೃತ ಗಾಥೆಗಳಲ್ಲಿ ರಚಿಸಿದ ಸಂಕ್ಷಿಪ್ತ ಪ್ರಕರಣಗಳಾಗಿವೆ, ಇವು ತಮ್ಮ ಶೈಲಿಯಿಂದ ನಿರ್ಯುಕ್ತಿಗಳ ಕೂಡ ಬಹಳ ಹೊಂದಿಕೊಳ್ಳುತ್ತವೆ. ಬಹುತರವಾಗಿ ಇವೆರಡೂ ಒಂದರೊಳಗೊಂದು ಮಿಶ್ರಣಗೊಂಡಿವೆ. ಅವುಗಳನ್ನು ಪ್ರಥಕ್ಕರಣ ಮಾಡುವುದು ಅಸಂಭವವೆನಿಸುತ್ತದೆ. ಕಲ್ಪ, ಪಂಚಕಲ್ಪ, ಜೀತಕಲ್ಪ, ಉತ್ತರಾಧ್ಯಯನ, ಆವಶ್ಯಕ, ದಶವೈಕಾಲಿಕ, ನಿಶೀಥ ಮತ್ತು ವ್ಯವಹಾರ ಇವುಗಳ ಭಾಷ್ಯಗಳು ದೊರೆಯುತ್ತವೆ. ಇವುಗಳಲ್ಲಿ ಕಥೆಗಳು ಸ್ವಲ್ಪ ವಿಸ್ತಾರವಾಗಿ ಬಂದಿರುತ್ತವೆ. ನಿಶೀಥ ಭಾಷ್ಯದಲ್ಲಿ ಶಶ ಮೊದಲಾದ ನಾಲ್ಕು ಧೂರ್ತರ ಕಥೆಯು ರೋಚಕ ರೂಪದಲ್ಲಿ ವರ್ಣಿಸಿದೆ. ಇದನ್ನು ಹರಿಭದ್ರಸೂರಿಯು ತನ್ನ ಧೂರ್ತಾಖ್ಯಾನ ಎಂಬ ಹೆಸರಿನ ಗ್ರಂಥದಲ್ಲಿ ಸರಸವಾಗಿ ವಿಸ್ತರಿಸಿ ವರ್ಣಿಸಿದ್ದಾನೆ. ಕಲ್ಪ, ವ್ಯವಹಾರ, ನಿಶೀಥ ಭಾಷ್ಯಗಳ ಕರ್ತೃವು ಸಂಘದಾಸಗಣಿಯೆಂದು ತಿಳಿಯಲಾಗುತ್ತದೆ. ವಿಶೇಷಾವಶ್ಯಕ ಭಾಷ್ಯವು ಜಿನಭದ್ರಸೂರಿಯದಾಗಿದೆ. ಇದರ ಕಾಲವು ಕ್ರಿ.ಶ. ೬೦೯ ಇದೆ. ಇದರಲ್ಲಿ ೩೬೦೦ ಗಾಥೆಗಳಿವೆ. ಜ್ಞಾನ, ನಯನಿಕ್ಷೇಪ, ಆಚಾರಾದಿ ಸರ್ವ ವಿಷಯಗಳ ವಿವೇಚನೆಯು ಇದರಲ್ಲಿದೆ. ಇದರ ಮೇಲೆ ಸ್ವೋಪಜ್ಞ ಟೀಕೆಯೂ ಇದೆ.

ಚೂರ್ಣಿಗಳು ಭಾಷೆ ಮತ್ತು ರಚನಾ ಶೈಲಿಗಳ ದೃಷ್ಟಿಯಿಂದ ವಿಶೇಷತೆಯನ್ನು ಕಾಯ್ದುಕೊಂಡಿವೆ. ಇವು ಗದ್ಯದಲ್ಲಿವೆ. ಭಾಷೆಯು ಪ್ರಾಕೃತ-ಸಂಸ್ಕೃತ ಮಿಶ್ರವಾಗಿದೆ. ಆದರೂ ಇವುಗಳಲ್ಲಿ ಪ್ರಾಕೃತವೇ ಪ್ರಧಾನವಾಗಿದೆ. ಆಚಾರಾಂಗ, ಸೂತ್ರಕೃತಾಂಗ, ನಿಶೀಥ, ದಶಾಶ್ರುತಸ್ಕಂಧ, ಜೀತಕಲ್ಪ, ಉತ್ತರಾಧ್ಯಯನ, ಆವಶ್ಯಕ, ದಶವೈಕಾಲಿಕ, ನಂದಿ ಮತ್ತು ಅನುಯೋಗದ್ವಾರಗಳ ಮೇಲೆ ಚೂರ್ಣಿಗಳಿದ್ದುದು ಕಂಡುಬರುತ್ತದೆ. ಐತಿಹಾಸಿಕ, ಸಾಮಾಜಿಕ ಮತ್ತು ಕಥಾತ್ಮಕ ಸಾಮಗ್ರಿಗಾಗಿ ನಿಶೀಥ ಮತ್ತು ಆವಶ್ಯಕಗಳ ಚೂರ್ಣಿಗಳು ಬಹಳ ಮಹತ್ವಪೂರ್ಣವಾಗಿವೆ. ಸಾಮಾನ್ಯರೂಪದಿಂದ ಚೂರ್ಣಿಗಳ ಕರ್ತೃವೆಂದು ಜಿನದಾಸಗಣಿಯು ಮಹತ್ವವನ್ನು ಪಡೆದಿದ್ದಾನೆ. ಇವನ ಕಾಲವು ಕ್ರಿ.ಶ. ೬-೭ನೆಯ ಶತಮಾನವೆಂದು ತಿಳಿಯಲಾಗಿದೆ.

ಟೀಕೆಗಳು ತಮ್ಮ ಹೆಸರಿಗನುಸರಿಸಿ ಗ್ರಂಥಗಳನ್ನು ತಿಳಿದುಕೊಳ್ಳಲಿಕ್ಕೂ ತಿಳಿಸಿಕೊಡಲಿಕ್ಕೂ ವಿಶೇಷ ಉಪಯೋಗ ಉಳ್ಳವುಗಳಾಗಿವೆ. ಇವುಗಳನ್ನು ಸಂಸ್ಕೃತದಲ್ಲಿ ವಿಸ್ತಾರ ರೂಪದಲ್ಲಿ ಬರೆಯಲಾಗಿದೆ. ಕೆಲವೊಂದೆಡೆಗೆ ಹೆಚ್ಚಾಗಿ ಕಥೆಗಳಲ್ಲಿ

ಪ್ರಾಕೃತದ ಆಶ್ರಯವನ್ನೂ ಸಹ ಹೊಂದಲಾಗಿದೆ. ಯಾವ ಕಥೆಗಳು ಪ್ರಾಕೃತದಲ್ಲಿ ಪ್ರಚಲಿತವಾಗಿದ್ದವೋ ಅವುಗಳನ್ನು ಇದ್ದಕ್ಕೆ ಇದ್ದಂತೆ ಇಲ್ಲಿ ಕೊಡಲಾಗಿದೆ. ಆವಶ್ಯಕ, ದಶವೈಕಾಲಿಕ, ನಂದೀ ಮತ್ತು ಅನುಯೋಗದ್ವಾರಗಳ ಮೇಲೆ ಹರಿಭದ್ರ ಸೂರಿಯ (ಕ್ರಿ.ಶ. ೭೫೦) ಟೀಕೆಗಳು ಉಪಲಬ್ಧವಿರುತ್ತವೆ. ಅವನ ತರುವಾಯ ಆಚಾರಾಂಗ ಮತ್ತು ಸೂತ್ರಕೃತಾಂಗಗಳ ಮೇಲೆ ಶೀಲಾಂಕ ಆಚಾರ್ಯನು (ಕ್ರಿ. ಶ. ೮೭೬) ಟೀಕೆಗಳನ್ನು ಬರೆದನು. ೧೧ ನೆಯ ಶತಮಾನದಲ್ಲಿ ವಾದಿವೇತಾಳ ಶಾಂತಿಸೂರಿಯಿಂದ ಉತ್ತರಾಧ್ಯಯನದ ಶಿಷ್ಯಹಿತಾ ಟೀಕೆಯೂ ಪ್ರಾಕೃತದಲ್ಲಿ ರಚಿತವಾಗಿದೆ. ಇದು ಬಹು ಮಹತ್ವಪೂರ್ಣ ಗ್ರಂಥವಾಗಿದೆ. ಇದೇ ಶತಮಾನದಲ್ಲಿ ಉತ್ತರಾಧ್ಯಯನದ ಮೇಲೆ ದೇವೇಂದ್ರ ಗಣಿ ನೇಮಿಚಂದ್ರನು ಸುಖಬೋಧಾ ಎಂಬ ಹೆಸರಿನ ಟೀಕೆಯನ್ನು ಬರೆದನು, ಇದರಲ್ಲಿ ಬರುವ ಬ್ರಹ್ಮದತ್ತ, ಅಗಡದತ್ತ ಮೊದಲಾದ ಕಥೆಗಳು ಪ್ರಾಕೃತ ಕಥಾ ಸಾಹಿತ್ಯದ ಮಹತ್ವಪೂರ್ಣ ಅಂಗಗಳಾಗಿವೆ. ಇವುಗಳ ಸಂಕಲನವನ್ನು ಡಾ. ಹರ್ಮನ್ ಯಾಕೋಬಿಯು ತನ್ನ ಒಂದು ಸ್ವತಂತ್ರ ಗ್ರಂಥದಲ್ಲಿ ಸಂಗ್ರಹಿಸಿದನು. ಅದನ್ನು ಪ್ರಾಕೃತ ಕಥಾ ಸಂಗ್ರಹವೆಂದು ಮುನಿ ಜಿನವಿಜಯಿಯೂ ಕೂಡ ಪ್ರಕಟಿಸಿದನು. ಉತ್ತರಾಧ್ಯಯನದ ಮೇಲೆ ಇನ್ನೂ ಹಲವು ಜನ ಆಚಾರ್ಯರು ಟೀಕೆಗಳನ್ನು ರಚಿಸಿದ್ದಾರೆ. ಅವರಲ್ಲಿ ಅಭಯದೇವ, ದ್ರೋಣಾಚಾರ್ಯ, ಮಲಯಗಿರಿ, ಮಲಧಾರೀ ಹೇಮಚಂದ್ರ. ಕ್ಷೇಮಕೀರ್ತಿ, ಶಾಂತಿಚಂದ್ರ ಮೊದಲಾದವರು ಹೆಸರಾಗಿದ್ದಾರೆ. ಟೀಕೆಗಳ ಈ ವಿಪುಲತೆಯು ಉತ್ತರಾಧ್ಯಯನದ ಮಹತ್ವವನ್ನೂ ಲೋಕಪ್ರಿಯತೆಯನ್ನೂ ಸ್ಪಷ್ಟವಾಗಿ ಪ್ರಕಟಿಸುತ್ತವೆ, ಪ್ರಮಾಣವನ್ನು ನೀಡುತ್ತವೆ.

### ಶೌರಸೇನೀ ಜೈನಾಗಮ :—

ಮೇಲೆ ವಿವರಿಸಿದ ಉಪಲಬ್ಧ ಆಗಮ ಸಾಹಿತ್ಯವು ಜೈನ ಶ್ವೇತಾಂಬರ ಸಂಪ್ರದಾಯದಲ್ಲಿ ಸುಪ್ರಚಲಿತವಾಗಿದೆ. ಆದರೆ ದಿಗಂಬರ ಸಂಪ್ರದಾಯವು ಇವುಗಳನ್ನು ಪ್ರಾಮಾಣಿಕವೆಂದು ಮನ್ನಿಸುವುದಿಲ್ಲ. ಈ ಮಾನ್ಯತೆಗನುಸರಿಸಿ ಮೂಲ ಆಗಮ ಗ್ರಂಥಗಳು ಕ್ರಮದಿಂದ ಲೋಪವಾಗಿ ಹೋಗಿವೆ. ಅದನ್ನೂ ಈ ಮೊದಲೇ ಹೇಳಲಾಗಿದೆ. ಆ ಆಗಮಗಳ ಕೆಲವೊಂದು ಭಾಗಗಳ ಜ್ಞಾನವು ಮುನಿ ಪರಂಪರೆಯಿಂದ ಸುರಕ್ಷಿತವಾಗಿತ್ತು. ಪೂರ್ವಗಳ ಏಕದೇಶ ಜ್ಞಾನಿಯಾದ ಆಚಾರ್ಯನು ಧರಸೇನನೆಂದು ತಿಳಿಯಲಾಗುತ್ತದೆ. ಅವನ ತನ್ನ ಈ ಜ್ಞಾನವನ್ನು ತನ್ನ ಶಿಷ್ಯರಾದ ಪುಷ್ಪದಂತ ಹಾಗೂ ಭೂತಬಲಿಗಳಿಗೆ ನೀಡಿದನು. ಅವರು ಆ ಜ್ಞಾನದ ಆಧಾರದಿಂದ ಷಟ್ ಖಂಡಾಗಮವನ್ನು ಸೂತ್ರರೂಪದಿಂದ ರಚಿಸಿದರು. ಈ ರಚನೆಯು ಉಪಲಬ್ಧವಿದೆ. ಈಗದು ಒಳ್ಳೆಯ ರೂಪದಿಂದ ಟೀಕೆ, ಅನುವಾದ ಸಹಿತ ೨೩ ಭಾಗಗಳಲ್ಲಿ ಪ್ರಕಟವೂ ಆಗಿದೆ. ಇದರ ಟೀಕಾಕಾರನಾದ ವೀರಸೇನಾಚಾರ್ಯನು ಪ್ರಾರಂಭದಲ್ಲಿಯೇ ಈ ಕೃತಿಯ ರಚನೆಯ ವಿಷಯವನ್ನು ಕುರಿತು ವಿವರಿಸಿದ್ದಾನೆ. ಅದರಿಂದ ನಮಗೆ ಪೂರ್ವಗಳ ವಿಷಯ

ವಿಸ್ತಾರದ ಕಲ್ಪನೆಯೂ ಸಹ ಉಂಟಾಗುತ್ತದೆ. ಪೂರ್ವಗಳಲ್ಲಿ ಎರಡನೆಯ ಪೂರ್ವದ ಹೆಸರು ಆಗ್ರಾಯಣೀಯ ಎಂದಿತ್ತು. ಅದರಲ್ಲಿ ಪೂರ್ವಾಂತ, ಅಪರಾಂತ ಮೊದಲಾದ ಹದಿನಾಲ್ಕು ಪ್ರಕರಣಗಳಿದ್ದುವು. ಇವುಗಳಲ್ಲಿ ಐದನೆಯ ಪ್ರಕರಣದ ಹೆಸರು ಚ್ಯಯನ-ಲಬ್ಧಿ ಎಂದಿತ್ತು. ಅದರಲ್ಲಿ ಇಪ್ಪತ್ತು ಪಾಹುಡಗಳಿದ್ದುವು. ಅವುಗಳಲ್ಲಿ ನಾಲ್ಕನೆಯ ಪಾಹುಡದ ಹೆಸರು ಕರ್ಮ-ಪ್ರಕೃತಿ ಎಂದಿತ್ತು. ಈ ಕರ್ಮ ಪ್ರಕೃತಿ ಪಾಹುಡದಲ್ಲಿ ಕೃತಿ, ವೇದನಾ ಮೊದಲಾದ ಇಪ್ಪತ್ನಾಲ್ಕು ಅನುಯೋಗ ದ್ವಾರಗಳಿದ್ದುವು. ಇವುಗಳ ವಿಷಯವನ್ನು ತೆಗೆದುಕೊಂಡು ಷಟ್-ಖಂಡಾಗಮದ ಆರು ಖಂಡಗಳನ್ನು ರಚಿಸಲಾಯಿತು. ಆ ಖಂಡಗಳು ಜೀವಟ್ಠಾಣ, ಖುದ್ದಾಬಂಧ, ಬಂಧ ಸ್ವಾಮಿತ್ವ-ವಿಚಯ, ವೇದನಾ, ವರ್ಗಣಾ ಮತ್ತು ಮಹಾಬಂಧಗಳಾಗಿವೆ. ಇವುಗಳಲ್ಲಿಯ ಕೆಲವೊಂದು ಅಂಶಗಳು ಅರ್ಥಾತ್ ಸಮ್ಯಕ್ತ್ವೋತ್ಪತ್ತಿ ಎಂಬ ಹೆಸರಿನ ಜೀವಸ್ಥಾನದ ಎಂಟನೆಯ ಚೂಲಿಕೆಯು ಹನ್ನೆರಡನೆಯ ಅಂಗವಾದ ದೃಷ್ಟಿವಾದದ ದ್ವಿತೀಯ ಭೇದವಾದ ಸೂತ್ರದಿಂದ ಉತ್ಪನ್ನವಾಯಿತೆಂದು ಹೇಳಲಾಗಿದೆ. ಅದರಂತೆಯೇ ಗತಿ-ಪ್ರಗತಿ ಎಂಬ ಹೆಸರಿನ ಒಂಬತ್ತನೆಯ ಚೂಲಿಕೆಯು ವ್ಯಾಖ್ಯಾಪ್ರಜ್ಞಪ್ತಿಯಿಂದ ಉತ್ಪನ್ನವಾಯಿತು. ಇದೇ ಆಗಮವನ್ನು ದಿಗಂಬರ ಸಂಪ್ರದಾಯದಲ್ಲಿ ಎಲ್ಲಕ್ಕೂ ಪ್ರಾಚೀನವೆಂದು ತಿಳಿಯುತ್ತಾರೆ. ಇದರ ರಚನಾ ಕಾಲವು ಕ್ರಿ. ಶ. ಎರಡನೆಯ ಶತಮಾನವೆಂದು ನಿರ್ಣಯವಾಗಿದೆ. ಇದರ ರಚನೆಯು ಜ್ಯೇಷ್ಠ ಶುಕ್ಲ ಪಂಚಮಿಯ ದಿನ ಪೂರ್ಣವಾಗಿತ್ತು. ಆ ದಿನವನ್ನು ಜೈನ ಸಂಘದಲ್ಲಿ ಶ್ರುತ-ಪೂಜೆಯ ಮಹಾನ್ ಉತ್ಸವದ ದಿನವೆಂದು ಮನ್ನಿಸಲಾಗಿದೆ. ಅದನ್ನು ಪರಂಪರಾಗತವಾಗಿ ಶ್ರುತ ಪಂಚಮಿ ಹಬ್ಬವೆಂದು ದಿಗಂಬರ ಸಂಪ್ರದಾಯದಲ್ಲಿ ಈಗಲೂ ಆಚರಿಸುತ್ತ ಇದ್ದಾರೆ. ಈ ಆಗಮದ ಪರಂಪರೆಯಲ್ಲಿ ಯಾವ ಸಾಹಿತ್ಯವು ನಿರ್ಮಾಣವಾಯಿತೋ ಅದನ್ನು ನಾಲ್ಕು ಅನುಯೋಗಗಳಲ್ಲಿ ವಿಭಾಗಿಸಲಾಗುತ್ತಿದೆ. ಅವುಗಳನ್ನೇ ಪ್ರಥಮಾನುಯೋಗ, ಕರುಣಾನುಯೋಗ, ಚರಣಾನುಯೋಗ ಮತ್ತು ದ್ರವ್ಯಾನುಯೋಗವೆಂದು ಹೇಳುವರು. ಪ್ರಥಮಾನುಯೋಗದಲ್ಲಿ ಪುರಾಣ, ಚರಿತ್ರ, ಕಥೆಗಳು ಸಮಾವೇಶವಾಗುತ್ತವೆ. ಇವು ಆಖ್ಯಾನಾತ್ಮಕ ಗ್ರಂಥಗಳು. ಕರಣಾನುಯೋಗದಲ್ಲಿ ಜ್ಯೋತಿಷ, ಗಣಿತ ಮೊದಲಾದ ವಿಷಯಕ್ಕೆ ಸಂಬಂಧಿಸಿದ ಗ್ರಂಥಗಳು ಬರುತ್ತವೆ. ಚರಣಾನುಯೋಗದಲ್ಲಿ ಮುನಿಗಳು ಹಾಗೂ ಗೃಹಸ್ಥರು ಪಾಲಿಸಬೇಕಾದ ಯೋಗ್ಯ ನಿಯಮೋಪನಿಯಮಗಳಿಗೆ ಸಂಬಂಧಿಸಿದ ಆಚಾರ ವಿಷಯದ ಗ್ರಂಥಗಳು ಸೇರುತ್ತವೆ. ದ್ರವ್ಯಾನುಯೋಗದಲ್ಲಿ ಜೀವ-ಅಜೀವ ಮೊದಲಾದ ತತ್ತ್ವ ಚಿಂತನೆಗೆ ಸಂಬಂಧಿಸಿದ ದಾರ್ಶನಿಕ ಕರ್ಮ ಸಿದ್ಧಾಂತಕ್ಕೆ ಸಂಬಂಧವುಳ್ಳ ಹಾಗೂ ನಯ-ನಿಕ್ಷೇಪ ಮೊದಲಾದ ವಿಷಯದ ಸೈದ್ಧಾಂತಿಕ ಗ್ರಂಥಗಳೆಲ್ಲ ಸಮಾವೇಶವಾಗುತ್ತವೆ.

ಈ ಧಾರ್ಮಿಕ ಸಾಹಿತ್ಯದಲ್ಲಿ ದ್ರವ್ಯಾನುಯೋಗಕ್ಕೆ ಪ್ರಾಧಾನ್ಯತೆಯು ಇದೆ. ಈ ವಿಭಾಗದ ರಚನೆಯು ಬಹು ಪ್ರಾಚೀನವೂ ಬಹಳ ವಿಶಾಲವೂ ಮತ್ತು ಲೋಕಪ್ರಿಯವೂ

ಆಗಿದೆ. ಇವುಗಳಲ್ಲಿ ಎಲ್ಲಕ್ಕೂ ಪ್ರಥಮ ಸ್ಥಾನವು ಈಗಾಗಲೇ ಉಲ್ಲೇಖಿಸಿದಂತೆ ಷಟ್ ಖಂಡಾಗಮಕ್ಕೇ ಇದೆ. ಈ ಗ್ರಂಥವು ಪ್ರಕಟವಾದ ಸಂಗತಿಯ ಇತಿಹಾಸವೂ ಕೂಡ ಬಹು ರೋಚಕವಾಗಿದೆ. ಈ ಗ್ರಂಥದ ಪ್ರಚಾರವು ಸಾಹಿತ್ಯಕಾರರ ಮುಖಾಂತರ ಕೇವಲ ೧೧-೧೨ನೆಯ ಶತಮಾನಗಳವರೆಗೆ ಆಗುತ್ತ ಹೋಯಿತು. ಅಂಥವರಲ್ಲಿ ಗೊಮ್ಮಟಸಾರದ ಕರ್ತೃವಾದ ಆಚಾರ್ಯ ನೇಮಿಚಂದ್ರ ಮತ್ತು ಅವನ ಟೀಕಾ ಕಾರರು ಪ್ರಮುಖವಾಗಿ ಕಂಡು ಬರುತ್ತಾರೆ. ಆ ಮೇಲಿನ ಲೇಖಕನಿಗೆ ಈ ಗ್ರಂಥದ ಹೆಸರು ಮಾತ್ರ ಪರಿಚಿತವಿರುವಂತೆ ತೋರುತ್ತದೆ. ಈ ಗ್ರಂಥದ ಎರಡು ಸಂಪೂರ್ಣ ಹಾಗೂ ಒಂದು ತ್ರುಟಿತ ಹೀಗೆ ಮೂರು ಪ್ರತಿಗಳು ಪ್ರಾಚೀನ ಕನ್ನಡ ಲಿಪಿಯಲ್ಲಿ ತಾಡ ಪತ್ರಗಳ ಮೇಲೆ ಬರೆದದ್ದು ಇವೆ. ಅವು ಮೈಸೂರು ರಾಜ್ಯದ ಮೂಡಬಿದ್ರಿಯ ಸಿದ್ಧಾಂತ ಬಸ್ತಿ ಎಂಬ ಮಂದಿರದಲ್ಲಿ ಸುರಕ್ಷಿತವಾಗಿದ್ದುವು; ಅಡಗಿದ್ದುವು. ಅಲ್ಲಿಯೂ ಕೂಡ ಅವುಗಳ ಉಪಯೋಗವು ಕೇವಲ ದರ್ಶನಕ್ಕೆಂದು ಮಾತ್ರ ಆಗುತ್ತಿತ್ತವೇ ಹೊರ ತಾಗಿ ಸ್ವಾಧ್ಯಾಯಕ್ಕೆಂದು ಅಲ್ಲ. ಇಷ್ಟರಿಂದಲೇ ಪುಣ್ಯೋಪಾರ್ಜನೆಯನ್ನು ಮಾಡುವ ಪರಿಪಾಠವು ನಡೆದು ಬಂದಿತ್ತು. ಈ ಪ್ರತಿಗಳು ದಿನ ದಿನಕ್ಕೆ ಜೀರ್ಣವಾಗುತ್ತಿದ್ದುದನ್ನು ಕಂಡು, ಸಮಾಜದ ಕೆಲವೊಂದು ಪ್ರಮುಖರಿಗೆ ಚಿಂತೆಯು ಉಂಟಾಯಿತು. ಆಗ ಕ್ರಿ.ಶ. ೧೮೯೬ ರಲ್ಲಿ ಅವುಗಳನ್ನು ಕಾಗದದ ಮೇಲೆ ಪ್ರತಿ ಲಿಪಿ ಮಾಡಿ ಇಡುವ ನಿಶ್ಚಯ ಮಾಡಲಾಯಿತು. ಪ್ರತಿಲೇಖನ ಕಾರ್ಯವು ಕ್ರಿ.ಶ. ೧೯೨೨ ರವರೆಗೆ ಸಾವಕಾಶವಾಗಿ ನಡೆದು ೨೬-೨೭ ವರ್ಷಗಳಲ್ಲಿ ಪೂರ್ಣವಾಯಿತು. ಆದರೆ ಈ ಮಧ್ಯದಲ್ಲಿ ಇದರ ಒಂದು ಪ್ರತಿ ಲಿಪಿಯು ಗುಪ್ತರೂಪದಿಂದ ಹೊರಬಿದ್ದು, ಸಹರಾನಪುರಕ್ಕೆ ತಲುಪಿತು. ಈ ಪ್ರತಿಲಿಪಿಯೂ ಕೂಡ ಕನ್ನಡ ಲಿಪಿಯಲ್ಲಿಯೇ ಇತ್ತು. ಆದರಿಂದ ಅದನ್ನು ನಾಗರಿ ಲಿಪಿಯಲ್ಲಿ ಬರೆಯುವ ಯೋಜನೆಯನ್ನೂ ಕೈಕೊಳ್ಳಲಾಯಿತು. ಅದು ೧೯೨೪ ರಲ್ಲಿ ಪೂರ್ಣವಾಯಿತು. ಈ ಕಾರ್ಯವು ನಡೆಯುತ್ತಿರುವಾಗಲೇ ಅದರ ಇನ್ನೊಂದು ಪ್ರತಿಯು ಗುಪ್ತರೂಪದಿಂದ ಹೊರಗೆ ಬಂದುಬಿಟ್ಟಿತು. ಅದರ ಪ್ರತಿಲಿಪಿಗಳೇ ಅಮರಾ ವತೀ, ಕಾರಂಜಾ, ಸಾಗರ ಮತ್ತು ಆರಾಗಳಲ್ಲಿ ಪ್ರತಿಷ್ಠಿತವಾದುವು. ಇವೇ ಗುಪ್ತ ರೂಪದಿಂದ ಪ್ರಕಟವಾದ ಪ್ರತಿಗಳ ಆಧಾರದಿಂದಲೇ ಇದರ ಸಂಪಾದನ ಕಾರ್ಯವು ಪ್ರಸ್ತುತ ಲೇಖಕನಿಂದ (ಡಾ. ಹೀರಾಲಾಲ ಜೈನ ಇವರಿಂದ) ಕ್ರಿ ಶ. ೧೯೩೮ ರಲ್ಲಿ ಪ್ರಾರಂಭವಾಯಿತು. ಅದು ಕ್ರಿ. ಶ. ೧೯೫೮ ರಲ್ಲಿ ಪೂರ್ಣವಾಯಿತು. ಇದರ ಮೊದಲ ಎರಡು ಭಾಗಗಳು ಪ್ರಕಟವಾದ ಮೇಲೆಯೇ ಮೂಡಬಿದ್ರಿಯ ಸಿದ್ಧಾಂತ ಬಸ್ತಿಯ ಅಧಿ ಕಾರಿಗಳು ಮೂಲ ಪ್ರತಿಗಳನ್ನು ಒದಗಿಸುವ ಅನುಕೂಲತೆಯನ್ನೂ ಸಹ ಕಲ್ಪಿಸಿ ಕೊಟ್ಟದ್ದು ಸಂತೋಷದ ಸಂಗತಿಯಾಗಿದೆ. ಇದರಿಂದ ಈ ಮಹಾನ್ ಗ್ರಂಥದ ಸಂಪಾ ದನ-ಪ್ರಕಾಶನ ಕಾರ್ಯಗಳು ಪ್ರಾಮಾಣಿಕ ರೂಪದಿಂದ ಆಗುವುದು ಸಾಧ್ಯವಾಯಿತು.

**ಷಟ್ ಖಂಡಾಗಮ ಟೀಕಾ :—**

ಷಟ್ ಖಂಡಾಗಮದ ಮೇಲೆ ಹೇಳಿದ ಆರು ಖಂಡಗಳಲ್ಲಿ ಸೂತ್ರ ರೂಪದಿಂದ ಜೀವದ್ವಾರಾ ಕರ್ಮಬಂಧ ಮತ್ತು ಅದರಿಂದ ಉತ್ಪನ್ನವಾಗುವ ನಾನಾ ಜೀವ ಪರಿಣಾಮಗಳನ್ನು ಬಹು ವ್ಯವಸ್ಥಿತವಾಗಿಯೂ ಸೂಕ್ಷ್ಮವಾಗಿಯೂ ವಿಸ್ತಾರವಾಗಿಯೂ ವಿವೇಚಿಸಲಾಗಿದೆ. ಈ ವಿವೇಚನೆಯು ಮೊದಲ ಮೂರು ಖಂಡಗಳಲ್ಲಿ ಜೀವದ ಕರ್ತೃತ್ವದ ಅಪೇಕ್ಷೆಯಿಂದ ನಡೆದಿದೆ. ಅಂತಿಮ ಮೂರು ಖಂಡಗಳಲ್ಲಿ ಕರ್ಮ ಪ್ರಕೃತಿಯ ಸ್ವರೂಪದ ಅಪೇಕ್ಷೆಯಿಂದ ನಡೆದಿದೆ. ಇದೇ ವಿಭಾಗಕ್ಕೆ ಅನುಸರಿಸಿ ನೇಮಿಚಂದ್ರಾಚಾರ್ಯನು ಇವುಗಳನ್ನೇ ಸಂಕ್ಷೇಪ ರೂಪದಲ್ಲಿ ಗೊಮ್ಮಟಸಾರ ಗ್ರಂಥದ ಜೀವಕಾಂಡ ಹಾಗೂ ಕರ್ಮಕಾಂಡ ವಿಭಾಗಗಳನ್ನಾಗಿ ರಚಿಸಿದನು. ಶ್ರುತಾವತಾರ ಕಥೆಗನುಸರಿಸಿ ಷಟ್ ಖಂಡಾಗಮದ ಮೇಲೆ ಟೀಕಾಗ್ರಂಥಗಳನ್ನು ಕ್ರಮದಿಂದ ಕುಂದಕುಂದ, ಶ್ಯಾಮಕುಂದ, ತುಂಬುಲೂರ, ಸಮಂತಭದ್ರ ಮತ್ತು ಬಪ್ಪದೇವ ಬರೆದರೆಂದು ಉಲ್ಲೇಖಗಳು ದೊರೆಯುತ್ತವೆ. ಆದರೆ ಆ ಟೀಕೆಗಳು ಉಪಲಬ್ಧವಿಲ್ಲ. ಯಾವ ಟೀಕೆಯು ಈ ಗ್ರಂಥದ ಈ ಪ್ರತಿಯಿಂದ ಲಭಿಸಿದೆಯೋ ಅದು ವೀರಸೇನಾಚಾರ್ಯನ 'ಧವಲ' ಎಂಬ ಹೆಸರಿನ ಕೃತಿಯಾಗಿದೆ. ಇದೇ ಕಾರಣದಿಂದ ಈ ಗ್ರಂಥದ ಖ್ಯಾತಿಯು ಧವಲ ಸಿದ್ಧಾಂತವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವುದು ಕಂಡುಬರುತ್ತದೆ. ಟೀಕಾಕಾರನು ಗ್ರಂಥದ ಕೊನೆಯಲ್ಲಿ ತನ್ನ ಪ್ರಶಸ್ತಿರೂಪದ ವಿವರಣೆಯಲ್ಲಿ ಈ ಗ್ರಂಥವು ಶಕ ಸಂವತ್ಸರದ ೭೩೮ = (ಕ್ರಿ.ಶ. ೮೧೬ ರ) ಕಾರ್ತಿಕ ಶುಕ್ಲ ತ್ರಯೋದಶಿ ದಿನ ಪೂರ್ಣವಾಯಿತೆಂದು ಹೇಳಿದ್ದಾನೆ. ಈ ಪ್ರಶಸ್ತಿಯಲ್ಲಿ ವೀರಸೇನನು ತನ್ನ ಪಂಚಸ್ತೂಪ ಅನ್ವಯವನ್ನೂ ವಿದ್ಯಾಗುರು ಏಲಾಚಾರ್ಯರನ್ನೂ ಹಾಗೆಯೇ ದೀಕ್ಷಾಗುರು ಆರ್ಯನಂದಿ ಮತ್ತು ಗುರುಬಂಧು ಚಂದ್ರಸೇನರನ್ನು ಕೂಡ ಉಲ್ಲೇಖಿಸಿದ್ದಾನೆ. ಇಂದ್ರನಂದಿಯ ಶ್ರುತಾವತಾರ ಕಥೆಗನುಸರಿಸಿ ಏಲಾಚಾರ್ಯನು ಚಿತ್ರಕೂಟ ಪುರದಲ್ಲಿ ಇದ್ದು, ವೀರಸೇನನಿಗೆ ಸಿದ್ಧಾಂತದ ಅಭ್ಯಾಸಮಾಡಿಸಿದ್ದನು, ತರುವಾಯ ವೀರಸೇನನು ವಾಟಗ್ರಾಮಕ್ಕೆ ಹೋಗಿ, ತನ್ನ ಟೀಕಾ ಗ್ರಂಥವನ್ನು ಬರೆದನು. ವೀರಸೇನನ ಟೀಕೆಯು ಪ್ರಮಾಣವು ಎಪ್ಪತ್ತೆರಡು ಸಾವಿರ ಶ್ಲೋಕವೆಂದು ಅನುಮಾನ ಮಾಡಲಾಗುತ್ತದೆ.

**ಶೌರಸೈನೀ ಆಗಮದ ಭಾಷೆ :—**

ಧವಲ ಟೀಕೆಯ ಭಾಷೆಯು ಗದ್ಯಾತ್ಮಕ ಪ್ರಾಕೃತವಾಗಿದೆ. ಆದರೆ ಅಲ್ಲಲ್ಲಿ ಸಂಸ್ಕೃತದ ಪ್ರಯೋಗವೂ ಇದೆ. ಈ ಶೈಲಿಯು ಜೈನ ಸಾಹಿತ್ಯಕಾರರಲ್ಲಿ ಸುಪ್ರಚಲಿತವಾಗಿದೆ. ಇದಕ್ಕೇನೇ ಮಣಿಪ್ರವಾಳ ಶೈಲಿಯೆಂದು ಹೇಳುವರು. ಟೀಕೆಯಲ್ಲಿ ನಡುನಡುವೆ ಪ್ರಮಾಣರೂಪವೆಂದು ಪ್ರಾಚೀನ ಗಾಥೆಗಳನ್ನೂ ಉದ್ ಧೃತಗೊಳಿಸಿದೆ. ಈ ಪ್ರಕಾರ ಭಾಷಾಶಾಸ್ತ್ರದ ದೃಷ್ಟಿಯಿಂದ ಗ್ರಂಥದಲ್ಲಿ ನಮಗೆ ಪ್ರಾಕೃತದ ಮೂರು ಸ್ತರಗಳು ನೋಡಲಿಕ್ಕೆ ಸಿಗುತ್ತವೆ. ಒಂದು ಸೂತ್ರಗಳ ಪ್ರಾಕೃತವು. ಇದು ಸ್ಪಷ್ಟವಾಗಿಯೂ

ಪ್ರಾಚೀನವಾಗಿದೆ. ಶೌರಸ್ಯೆನೀಯ ವಿಶೇಷತೆಗಳಿಗಾಗಿಯೂ ಕೆಲವೊಂದೆಡೆಗಳಲ್ಲಿ ಅರ್ಧ ಮಾಗಧಿಯಿಂದ ಪ್ರಭಾವಿತವಾಗಿದೆ. ಇನ್ನೊಂದು ಸ್ತರವು ಶೌರಸ್ಯೆನೀ ಪ್ರಾಕೃತ ದ್ದಾಗಿದೆ. ಇದು ನಮಗೆ ಉದ್‌ಧೃತ ಗಾಥೆಗಳಲ್ಲಿ ದೊರೆಯುತ್ತದೆ. ಇನ್ನು ಮೂರ ನೆಯ ಸ್ತರವು ಟೀಕಾಕಾರನ ಗದ್ಯ ರಚನೆಯದಾಗಿದೆ. ಇಲ್ಲಿ ಉದಹರಿಸಿದ ಗಾಥೆಗಳಲ್ಲಿ ಹಲವು ಗೊಮ್ಮಟಸಾರದಲ್ಲಿಯೂ ಇದ್ದಕ್ಕಿದ್ದಂತೆ ಎತ್ತಿಕೊಂಡುದು ಕಂಡುಬರುತ್ತದೆ. ಆದರೆ ಅಲ್ಲಿ ಶೌರಸ್ಯೆನೀ ಮಹಾರಾಷ್ಟ್ರೀಯ ಪ್ರವೃತ್ತಿಗಳು ಕೆಲವೊಂದು ಹೆಚ್ಚು ಪ್ರಮಾಣ ದಲ್ಲಿ ಮಿಶ್ರಣವಾದುದು ಕಂಡುಬರುತ್ತದೆ. ಇದೊಂದು ವಿಶೇಷತೆಯೇ ಆಗಿದೆ.

ಇಲ್ಲಿ ಪ್ರಾಕೃತ ಭಾಷೆಯ ಐತಿಹಾಸಿಕ ವಿಕಾಸದ ಸಂಬಂಧದಲ್ಲಿ ಕೆಲವೊಂದು ಸಂಗತಿಗಳನ್ನು ಸ್ಪಷ್ಟಗೊಳಿಸುವ ಆವಶ್ಯಕತೆಯು ಕಂಡುಬರುತ್ತದೆ. ಪ್ರಾಚೀನತಮ ಪ್ರಾಕೃತ ಸಾಹಿತ್ಯ ಹಾಗೂ ಪ್ರಾಕೃತ ವ್ಯಾಕರಣಗಳಲ್ಲಿ ನಮಗೆ ಮುಖ್ಯವಾಗಿ ಮೂರು ಭಾಷೆಗಳ ಸ್ವರೂಪವು ಅವುಗಳ ವಿಶೇಷ ಲಕ್ಷಣಗಳ ಸಹಿತ ದೃಷ್ಟಿ ಗೋಚರವಾಗು ತ್ತದೆ. ಅವು ಮಾಗಧಿ, ಅರ್ಧಮಾಗಧಿ ಮತ್ತು ಶೌರಸ್ಯೆನಿಗಳಾಗಿವೆ. ಮಾಗಧಿ ಮತ್ತು ಅರ್ಧಮಾಗಧಿಗಳ ಸಂಬಂಧದಲ್ಲಿ ಈ ಮೊದಲೇ ಹೇಳಲಾಗಿದೆ. ಶೌರಸ್ಯೆನಿಯ ಪ್ರಾಚೀನ ತಮ ರೂಪವು ನಮಗೆ ಅಶೋಕನು (ಕ್ರಿ.ಶ. ಪೂರ್ವ ೩ನೆಯ ಶತಮಾನ) ಗಿರನಾರ ಶಿಲೆಯ ಮೇಲೆ ಕೆತ್ತಿದ ಹದಿನಾಲ್ಕನೆಯ ಧರ್ಮಶಾಸನದಲ್ಲಿ ದೃಷ್ಟಿ ಗೋಚರವಾಗು ತ್ತದೆ. ಇದರಲ್ಲಿ ಕಾರಕ ಮತ್ತು ಕ್ರಿಯಾರೂಪಗಳನ್ನು ಸರಳಗೊಳಿಸಲಾಗಿದೆ. ಅಲ್ಲದೆ ಸಂಸ್ಕೃತದ ಧ್ವನಿಗಳಲ್ಲಿ ಸರಳತೆಗಾಗಿ ಉತ್ಪನ್ನವಾದ ಹೆಚ್ಚು ಕಡಿಮೆಗಳೂ ಕೂಡ ಕಂಡುಬರುತ್ತವೆ. ಅವುಗಳಲ್ಲಿ ಮುಖ್ಯ ಪರಿವರ್ತನಗಳು ಹೀಗಿವೆ :—ಸಂಯುಕ್ತ ವ್ಯಂಜನಗಳ ಸಮೀಕರಣ ಇಲ್ಲವೆ ಒಂದು ವರ್ಣದ ಲೋಪ. ಉದಾಹರಣೆಗೆ ಧರ್ಮವು ಧಮ್ಮ, ಕರ್ಮವು ಕಮ್ಮ, ಪಶ್ಯತಿಯು ಪಸತಿ, ಪುತ್ರವು ಪುತ್ತ, ಕಲ್ಯಾಣದ ಕಲಾಣ ಮೊದಲಾದವುಗಳನ್ನು ನೋಡಬಹುದು. ತರುವಾಯ ಅಶ್ವಘೋಷನ(ಕ್ರಿ ಶ. ಮೊದಲ ನೆಯ ಶತಮಾನ) ನಾಟಕಗಳಲ್ಲಿ ವ್ಯಕ್ತವಾಗಿರುವ ಪರಿವರ್ತನವಲ್ಲದೆ ನಮಗೆ ಅಘೋಷ ವರ್ಣಗಳ ಸ್ಥಾನದಲ್ಲಿ ಅವುಗಳಿಗೆ ಅನುರೂಪವಾದ ಸಘೋಷ ವರ್ಣದ ಆದೇಶಗಳು ಕಂಡುಬರುತ್ತವೆ. ಉದಾಹರಣೆಗಾಗಿ ಕ ವು ಗ, ಚ ವು ಜ, ತ ವು ದ ಮತ್ತು ಥ ವು ಧ ಆದುದನ್ನು ಕಾಣುತ್ತೇವೆ. ಇದರ ತರುವಾಯದ ಕಾಲದಲ್ಲಿ ಯಾವ ಪ್ರವೃತ್ತಿಗಳು ಭಾಸ, ಕಾಲಿದಾಸ ಮೊದಲಾದವರ ನಾಟಕಗಳಲ್ಲಿ ಬರುವ ಪ್ರಾಕೃತದಲ್ಲಿ ಕಂಡುಬರು ತ್ತವೆಯೋ ಅವು ಹೀಗಿವೆ :— ಮಧ್ಯವರ್ತಿ ಅಸಂಯುಕ್ತ ವರ್ಣಗಳ ಲೋಪ ಹಾಗೂ ಮಹಾಪ್ರಾಣ ವರ್ಣಗಳ ಸ್ಥಾನದಲ್ಲಿ 'ಹ'ವು ಆದೇಶವಾಗುತ್ತದೆ. ಇದೇ ಪ್ರವೃತ್ತಿ ಯನ್ನು ಮಹಾರಾಷ್ಟ್ರೀ ಪ್ರಾಕೃತದ ಲಕ್ಷಣವೆಂದು ಮನ್ನಿಸಲಾಗಿದೆ. ಇದರ ಪ್ರಾದು ರ್ಭಾವವು ಮೊದಲನೆಯ ಶತಮಾನದ ತರುವಾಯ ಆದುದೆಂದು ಸ್ವೀಕರಿಸಲಾಗುತ್ತದೆ. ದಂಡಿಯ ಉಲ್ಲೇಖಕ್ಕೆ ಅನುಸರಿಸಿ ಪ್ರಾಕೃತವು (ಶೌರಸೇನೀ) ಮಹಾರಾಷ್ಟ್ರದಲ್ಲಿ ಪ್ರವೇಶಿಸಿದ ಮೇಲೆ ಯಾವ ರೂಪವನ್ನು ಧಾರಣ ಮಾಡಿತೋ ಅದೇ ಉತ್ಕೃಷ್ಟ

ಪ್ರಾಕೃತ ಮಹಾರಾಷ್ಟ್ರೀ ಎಂದು ಹೇಳಲಾಯಿತು. (ಮಹಾರಾಷ್ಟ್ರಾಶ್ರಯಾಂ ಭಾಷಾಂ ಪ್ರಕೃಷ್ಟಂ ಪ್ರಾಕೃತಂ ವಿದುಃ— ಕಾವ್ಯಾದರ್ಶ) ಮತ್ತು ಇದೇ ಮಹಾರಾಷ್ಟ್ರೀ ಪ್ರಾಕೃತದಲ್ಲಿ 'ಸೇತುಬಂಧ'ವೇ ಮೊದಲಾದ ಕಾವ್ಯಗಳು ಜನಿಸಿವೆ. ಅರ್ಧ ಮಾಗಧೀ ಆಗಮಗಳಲ್ಲಿಯೂ ಕೂಡ ಮಹಾರಾಷ್ಟ್ರೀ ಪ್ರಾಕೃತದ ಪ್ರವೃತ್ತಿಗಳು ಪ್ರವಿಷ್ಟ ವಾದುದು ಕಂಡುಬರುತ್ತದೆಂದು ಈ ಮೊದಲೇ ಹೇಳಲಾಗಿದೆ. ಭಾರತದ ಉತ್ತರ ಮತ್ತು ಪಶ್ಚಿಮ ಪ್ರದೇಶಗಳಲ್ಲಿ ರಚಿತವಾದ ಪ್ರಾಕೃತ ಗ್ರಂಥಗಳಲ್ಲಿಯೂ ಈ ಪ್ರವೃತ್ತಿಗಳ ಕೆಲವೊಂದು ಅಂಶಗಳನ್ನು ಕಂಡು, ಪಾಶ್ಚಾತ್ಯ ವಿದ್ವಾಂಸರು ಅವುಗಳ ಭಾಷೆಗಳಿಗೆ 'ಜೈನ ಮಹಾರಾಷ್ಟ್ರೀ' ಎಂದು ಹೆಸರನ್ನು ಇಟ್ಟರು. ಆದರೆ ಮೇಲೆ ವಿವರಿಸಿದ ಷಟ್ ಖಂಡ ಆಗಮಾದಿಗಳಲ್ಲಿ ಪ್ರಧಾನರೂಪದಿಂದ ಶೌರಸೇನಿಯ ಮೂಲ ಪ್ರವೃತ್ತಿಗಳೇ ಕಂಡುಬರುತ್ತವೆ. ಮತ್ತು ಮಹಾರಾಷ್ಟ್ರೀಯ ಪ್ರವೃತ್ತಿಗಳು ಗೌಣ ರೂಪದಿಂದ ಉತ್ತರೋತ್ತರ ಬೆಳೆಯುತ್ತ ಹೋದುದು ಕಂಡುಬರುತ್ತದೆ. ಈ ಕಾರಣದಿಂದ ಈ ಕೃತಿಗಳ ಭಾಷೆಯನ್ನು 'ಜೈನ ಶೌರಸೇನಿ' ಎಂದು ಹೇಳಲಾಗಿದೆ. ಇಲ್ಲಿ ಇನ್ನೊಂದು ಪ್ರಶ್ನೆಯು ಉತ್ಪನ್ನವಾಗುತ್ತದೆ. ಮಹಾರಾಷ್ಟ್ರ ಪ್ರದೇಶ ಮತ್ತು ಅದರ ಉತ್ತರದ ಭಾಷೆಗಳಲ್ಲಿ ಮಹಾರಾಷ್ಟ್ರೀ ಪ್ರಾಕೃತದ ಪ್ರವೃತ್ತಿಗಳು ಪೂರ್ಣ ಇಲ್ಲ ಬಹಳಷ್ಟು ಪ್ರವೇಶಿಸಿದುವು. ಆಗ ಮಹಾರಾಷ್ಟ್ರದಿಂದ ಬಹುದೂರ ಇರುವ ದಕ್ಷಿಣ ಪ್ರದೇಶದಲ್ಲಿ ಬರೆಯಲ್ಪಟ್ಟ ಗ್ರಂಥಗಳು ಈ ಪ್ರವೃತ್ತಿಯಿಂದ ಹೇಗೆ ದೂರ ಉಳಿದುವು ? ಇಲ್ಲವೆ ಬುದ್ಧಿಪೂರ್ವಕವಾಗಿಯೇ ಪ್ರಭಾವಿತವಾದುವೋ ? ಈ ಪ್ರಶ್ನೆಗೆ ಒಂದು ಸಮಾಧಾನವನ್ನು ಅನುಮಾನಿಸಲಾಗುತ್ತಿದೆ: ಯಾವ ಮುನಿ ಸಂಪ್ರದಾಯದಲ್ಲಿ ಈ ಗ್ರಂಥಗಳನ್ನು ಬರೆದರೋ ಆ ಮುನಿ ಸಂಘಗಳ ಆಗಮನವು ದಕ್ಷಿಣ ಪ್ರದೇಶಕ್ಕೆ ಆದ ಮೇಲೆ ಈ ಮಹಾರಾಷ್ಟ್ರೀ ಪ್ರವೃತ್ತಿಗಳು ಉತ್ಪನ್ನವಾದುವು. ಮತ್ತು ಆರ್ಯೇತರ ಭಾಷೆಗಳಲ್ಲಿ ಲೇಖಕನು ಅಭ್ಯಾಸ ಮಾಡುವಾಗ ತನ್ನ ಪ್ರಾಂತೀಯ ಭಾಷೆಯ ರೂಪಗಳನ್ನೇ ಅಭ್ಯಾಸ ಮಾಡುತ್ತಿದ್ದನು. ಆದರಿಂದ ಮಹಾರಾಷ್ಟ್ರೀಯ ಬೆಳೆಯುತ್ತಿರುವ ಪ್ರಭಾವದಿಂದ ಅವು ದೂರ ಉಳಿದವು. ಇಲ್ಲವೆ ಕಡಿಮೆ ಪ್ರಭಾವಿತವಾದುವು. ಇದೇ ಭಾಷಾ ವಿಕಾಸ ಕ್ರಮದ ಕೆಲವೊಂದು ಸ್ವರೂಪಗಳು ನಮಗೆ ಉಕ್ತ ಸ್ತರಗಳಲ್ಲಿ ಕಂಡುಬರುತ್ತವೆ.

ಷಟ್ ಖಂಡಾಗಮದ ಟೀಕಾಕಾರನ ಎದುರಿಗೆ ಜೈನ ಸಿದ್ಧಾಂತ ವಿಷಯದ ವಿಶಾಲ ಸಾಹಿತ್ಯವು ಉಪಸ್ಥಿತವಾಗಿತ್ತು. ಅವನು ಸ್ವಂತ ಕಮ್ಮ ಪಾಹುಡ, ಕಷಾಯ ಪಾಹುಡ, ಸಮ್ಮತಿ ಸುತ್ತ. ತಿಲೋಯ ಪಣ್ಣತ್ತಿ, ಸುತ್ತ, ಪಂಚತ್ಥಿ ಪಾಹುಡ, ತತ್ವಾರ್ಥ ಸುತ್ತಲ, ಆಚಾರಾಂಗ, ವಟ್ಟಕೇರಕೃತ ಮೂಲಾಚಾರ, ಪೂಜ್ಯಪಾದ ಕೃತ ಸಾರಸಂಗ್ರಹ, ಅಂಕಲಂಕ ಕೃತ ತತ್ವಾರ್ಥ ಭಾಷ್ಯ, ತತ್ವಾರ್ಥ ರಾಜವಾರ್ತಿಕ, ಜೀವ ಸಮಾಸ, ಛೇದ ಸೂತ್ರ. ಕರ್ಮ ಪ್ರವಾದ, ದಶಕರಣೀ ಸಂಗ್ರಹ ಮೊದಲಾದುವುಗಳನ್ನು ಉಲ್ಲೇಖಿಸಿದ್ದಾನೆ. ಇವುಗಳಲ್ಲಿ ಕೆಲವೊಂದು ಗ್ರಂಥಗಳಂತೂ ಸುಪ್ರಸಿದ್ಧವಾಗಿವೆ. ಆದರೆ ಕೆಲವು ಎಂದರೆ ಪೂಜ್ಯಪಾದ ಕೃತ ಸಾರಸಂಗ್ರಹ, ಜೀವಸಮಾಸ, ಛೇದಸೂತ್ರ, ಕರ್ಮ ಪ್ರವಾದ

ಮತ್ತು ದಶಕರಣೀ ಸಂಗ್ರಹಗಳು ಗೊತ್ತಾಗುವುದಿಲ್ಲ. ಇದೇ ಪ್ರಕಾರ ಅವನು ತನ್ನ ಗಣಿತ ವಿಷಯಕ್ಕೆ ಸಂಬಂಧಿಸಿದ ವಿವೇಚನೆಯಲ್ಲಿ ಪರಿಕರ್ಮದ ಉಲ್ಲೇಖನವನ್ನೂ ಮಾಡಿದ್ದಾನೆ. ಹಾಗೆಯೇ ವ್ಯಾಕರಣಾತ್ಮಕ ವಿವೇಚನೆಯಲ್ಲಿ ಕೆಲವೊಂದು ಸೂತ್ರ ಹಾಗೂ ಗಾಥೆಗಳನ್ನೂ ಉಲ್ಲೇಖಿಸಿದ್ದಾನೆ. ಅವುಗಳಿದ ಈಗ ಉಪಲಬ್ಧವಿಲ್ಲದ ಒಂದು ಪದ್ಯಾತ್ಮಕ ಪ್ರಾಕೃತ ವ್ಯಾಕರಣವು ಅವನ ಮುಂದೆ ಇತ್ತೆಂದು ಗೊತ್ತಾಗುತ್ತದೆ. ಸ್ವತಃ ಷಟ್ ಖಂಡಾಗಮ ಸೂತ್ರಗಳ ಅನೇಕ ಪ್ರತಿಗಳು ಅವನ ಸಮ್ಮುಖದಲ್ಲಿ ಇದ್ದವೆಂದು ಗೊತ್ತಾಗುತ್ತದೆ. ಅವುಗಳಲ್ಲಿ ಪಾಠ ಭೇದಗಳೂ ಸಹ ಇದ್ದುವು. ಅವುಗಳ ಉಲ್ಲೇಖ ವನ್ನೂ ಅವನು ಹಲವು ಸ್ಥಳಗಳಲ್ಲಿ ಮಾಡಿದ್ದಾನೆ. ಕೆಲವೊಂದೆಡೆಗಳಲ್ಲಿ ಸೂತ್ರ ಸೂತ್ರ ಗಳಲ್ಲಿ ಪರಸ್ಪರ ವಿರೋಧವು ಕಂಡುಬಂದಲ್ಲಿ ಟೀಕಾಕಾರನು ಸತ್ಯಾ ಸತ್ಯಗಳ ನಿರ್ಣಯ ಮಾಡುವುದರಲ್ಲಿ ತನ್ನ ಅಸಮರ್ಥತೆಯನ್ನು ವ್ಯಕ್ತಗೊಳಿಸಿದ್ದಾನೆ. ಅಲ್ಲದೆ ಇವುಗಳಲ್ಲಿ ಯಾವುದು ಸೂತ್ರವಿದೆ, ಯಾವುದು ಅಸೂತ್ರವಿದೆ-ಎಂಬುದರ ನಿರ್ಣಯವನ್ನು ಆಗಮ ದಲ್ಲಿ ನಿಷ್ಣಾತರಾದ ನಿಪುಣ ಆಚಾರ್ಯರೇ ಮಾಡಬಲ್ಲರೆಂದು ಸ್ಪಷ್ಟವಾಗಿ ಹೇಳಿದ್ದಾನೆ. ಕೆಲವೊಂದೆಡೆಯಲ್ಲಿ ಹೀಗೂ ಹೇಳಿದ್ದಾನೆ :— ಇದರ ನಿರ್ಣಯವನ್ನಂತೂ ಚತುರ್ದಶ ಪೂರ್ವಧಾರೀ ಅಥವ ಕೇವಲ ಜ್ಞಾನಿಯೇ ಮಾಡಲು ಸಾಧ್ಯವಿದೆ; ಆದರೆ ವರ್ತಮಾನ ಕಾಲದಲ್ಲಿ ಅವರಂತೂ ಇಲ್ಲ ; ಅವರ ಹತ್ತಿರ ಅಭ್ಯಾಸ ಮಾಡಿದ ವಿದ್ವಾಂಸರೂ ಸಹ ಯಾರೂ ಇಲ್ಲ. ಅದರಿಂದ ಸೂತ್ರಗಳ ಪ್ರಾಮಾಣಿಕತೆಯನ್ನು ನಷ್ಟಗೊಳಿಸಲು ಹೆದ ರುವ ಆಚಾರ್ಯರು ಎರಡು ಸೂತ್ರಗಳ ವ್ಯಾಖ್ಯಾನ ಮಾಡಲುಬೇಕು. ಕೆಲವೆಡೆಗಳಲ್ಲಿ ಸೂತ್ರಗಳ ಮೇಲೆ ಉಂಟಾದ ಶಂಕೆಗಳಿಗೆ ಉತ್ತರಿಸುತ್ತ ಅವನು ವಿಷಯಗಳ ವಿವರಣೆ ಯನ್ನು ಗೌತಮ ಗಣಧರರಿಗೆ ಕೇಳಲಿಕ್ಕೆ ಬೇಕು, ನಾವಂತೂ ಅವರ ಅಭಿಪ್ರಾಯವನ್ನು ಹೇಳಿಬಿಟ್ಟೆವು—ಎಂದು ಹೇಳುವವರೆಗೂ ಅವರು ಮುಂದರಿದಿದ್ದಾರೆ. ಟೀಕೆಯೊಳಗಿನ ಅನೇಕ ಉಲ್ಲೇಖಗಳ ಮೇಲಿಂದ ಸೂತ್ರಗಳ ಅಧ್ಯಯನವು ಅನೇಕ ಪ್ರಕಾರದಿಂದ ನಡೆ ಯುತ್ತಿತ್ತೆಂದು ಗೊತ್ತಾಗುತ್ತದೆ. ಕೆಲವರು ಸೂತ್ರಾಚಾರ್ಯರಿದ್ದರು, ಇನ್ನು ಕೆಲವರು ನಿಕ್ಷೇಪಾಚಾರ್ಯರಿದ್ದರು. ಹಲವರು ವ್ಯಾಖ್ಯಾನಾಚಾರ್ಯರಿದ್ದರು ; ಇವರಲ್ಲಿಯೂ ಮಹಾ ವಾಚಕರ ಪದವೂ ಮೇಲಿನದಾಗಿತ್ತು. ಕಷಾಯ–ಪ್ರಾಭೃತದ ಪ್ರಕಾಂಡ ಜ್ಞಾನಿಯಾದ ಆರ್ಯ ಮಂಕ್ಷು ಮತ್ತು ನಾಗಹಸ್ತಿ ಇವರನ್ನು ಅನೇಕ ಸ್ಥಳಗಳಲ್ಲಿ 'ಮಹಾವಾಚಕ'ರೆಂದು ಸಂಬೋಧಿಸಿದ್ದಾರೆ. ಆರ್ಯ ನಂದಿಯೂ ಮಹಾವಾಚಕನಿದ್ದ ಬಗ್ಗೆ ಉಲ್ಲೇಖವೂ ಇದೆ. ಸೈದ್ಧಾಂತಿಕ ಮತಭೇದದಪ್ರಸಂಗದಲ್ಲಿ ಟೀಕಾಕಾರನು ಅನೇಕ ಸ್ಥಳಗಳಲ್ಲಿ ಉತ್ತರ ಪ್ರತಿಪತ್ತಿ ಹಾಗೂ ದಕ್ಷಿಣ ಪ್ರತಿಪತ್ತಿಗಳ ಉಲ್ಲೇಖ ಮಾಡಿ ದ್ದಾನೆ. ಅದರಲ್ಲಿ ಅವನು ಸ್ವತಃ ದಕ್ಷಿಣದ ಪ್ರತಿಪತ್ತಿಯನ್ನು ಸ್ವೀಕರಿಸುತ್ತಿದ್ದನು. ಯಾಕಂದರೆ ಅದು ಸರಳ, ಸುಸ್ಪಷ್ಟ ಮತ್ತು ಆಚಾರ್ಯ ಪರಂಪರಾಗತವಾಗಿರುತ್ತಿತ್ತು. ಕೆಲವೊಂದು ಪ್ರಸಂಗದಲ್ಲಿ ಅವನಿಗೆ ಸ್ಪಷ್ಟ ಆಗಮ ಪರಂಪರೆಯು ಲಭಿಸಲಿಲ್ಲ. ಆಗ ಅವನು ತನ್ನ ಸ್ವಂತ ಅಭಿಪ್ರಾಯವನ್ನೂ ಸ್ಪಷ್ಟವಾಗಿ ಹೇಳಿದ್ದಾನೆ. ಅಂಥಲ್ಲಿ ಶಾಸ್ತ್ರ

ಪ್ರಮಾಣದ ಅಭಾವವಿದ್ದಲ್ಲಿ ತನ್ನ ಯುಕ್ತಿಬಲದಿಂದ ಕೆಲ ಮಾತನ್ನು ಸಿದ್ಧಮಾಡಿದ್ದಾನೆ. ವಿಷಯವು ದಾರ್ಶನಿಕವಿರಲಿ, ಇಲ್ಲವೆ ಗಣಿತದಂಥ ಶಾಸ್ತ್ರೀಯವಿರಲಿ, ಅವನು ಅದರ ಮೇಲೆ ಪೂರ್ಣ ವಿವೇಚನೆ ಮಾಡಿ, ಸ್ಪಷ್ಟ ನಿರ್ಣಯವನ್ನು ಸ್ವೀಕರಿಸದ ಹೊರತಾಗಿ ಮುಂದರಿಯುತ್ತಿದ್ದಿಲ್ಲ. ಇದೇ ಕಾರಣದಿಂದ ಅವನ ಇಂಥ ಅಸಾಧಾರಣ ಪ್ರತಿಭೆಯನ್ನು ಕಂಡೇ ಅವನ ವಿದ್ವಾನ್ ಶಿಷ್ಯನಾದ ಆಚಾರ್ಯ ಜಿನಸೇನನು ಅವನ ವಿಷಯದಲ್ಲಿ ಹೀಗೆ ಹೇಳಿದ್ದಾನೆ :—

> ಯಸ್ಯ ನೈಸರ್ಗಿಕೀಂ ಪ್ರಜ್ಞಾಂ ದೃಷ್ಟ್ವಾ ಸರ್ವಾರ್ಥಗಾಮಿನೀಮ್ ।
> ಜಾತಾಃ ಸರ್ವಜ್ಞ-ಸದ್‌ಭಾವೆ ನಿರಾರೇಕಾ ಮನಸ್ವಿನಃ ॥

ಅರ್ಥಾತ್ ಅವನ ಸ್ವಾಭಾವಿಕ ಸರ್ವಾರ್ಥಗಾಮಿನೀ ಪ್ರಜ್ಞೆಯನ್ನು ಕಂಡು, ವಿದ್ವಜ್ಜನರು ಸರ್ವಜ್ಞನ ಸದ್ಭಾವದ ವಿಷಯದಲ್ಲಿ ನಿಸ್ಸಂದೇಹವಾಗಿ ಬಿಡುತ್ತಿದ್ದರು. ಈ ಟೀಕೆಯ ಅಭ್ಯಾಸದಿಂದ ನಮಗೆ ಆ ಕಾಲದ ಸೈದ್ಧಾಂತಿಕ ವಿವೇಚನ, ವಾದ-ವಿವಾದ ಮತ್ತು ಗುರು-ಶಿಷ್ಯ ಪರಂಪರೆಯಿಂದ ಅಧ್ಯಯನ ಅಧ್ಯಾಪನಗಳ ಪ್ರಣಾಲಿಗಳ ಜ್ಞಾನ ಬಹಳಷ್ಟು ಆಗುತ್ತದೆ.

### ನೇಮಿಚಂದ್ರನ (೧೧ ನೆಯ ಶತಮಾನ) ರಚನೆಗಳು :—

ಮೇಲೆ ವಿವರಿಸಿದ ಷಟ್ ಖಂಡಾಗಮ ಹಾಗೂ ಅದರ ಧವಲ ಟೀಕೆಯ ಆಧಾರದ ಮೇಲೆ ಗೊಮ್ಮಟಸಾರದ ರಚನೆಯಾಯಿತು. ಅದರ ಜೀವಕಾಂಡದಲ್ಲಿ ೭೩೩ ಗಾಥೆಗಳೂ ಕರ್ಮಕಾಂಡದಲ್ಲಿ ೯೭೨ ಗಾಥೆಗಳೂ ಇವೆ. ಆಗಮದ ಸಮಸ್ತ ಕರ್ಮ ಸಿದ್ಧಾಂತಕ್ಕೆ ಸಂಬಂಧಿಸಿದ ಸಾರವನ್ನು ಇದರಲ್ಲಿ ಚೆನ್ನಾಗಿ ಸಂಗ್ರಹಿಸಲಾಗಿದೆ. ಈ ಗ್ರಂಥದ ಪ್ರಚಾರದಿಂದ ಮೂಲ ಷಟ್ ಖಂಡಾಗಮದ ಅಧ್ಯಯನ-ಅಧ್ಯಾಪನ ಪ್ರಣಾಲಿಯು ಕಟ್ಟಾಯಿತೆಂದು ಅನುಮಾನ ಮಾಡಲಾಗಿದೆ. ಗೊಮ್ಮಟಸಾರದ ಕರ್ತೃವಾದ ನೇಮಿಚಂದ್ರಾಚಾರ್ಯನು ತನ್ನ ಕೃತಿಯ ಕೊನೆಯಲ್ಲಿ ಗರ್ವದಿಂದ ಹೀಗೂ ಹೇಳಿಕೊಂಡಿದ್ದಾನೆ :—ಯಾವ ಪ್ರಕಾರ ಚಕ್ರವರ್ತಿಯು ಷಟ್‌ಖಂಡ ಪೃಥ್ವಿಯನ್ನು ತನ್ನ ಚಕ್ರದ ಮುಖಾಂತರ ಸಿದ್ಧಿಸುವನೋ, ಅದೇ ಪ್ರಕಾರ ನಾನು ನನ್ನ ಬುದ್ಧಿರೂಪೀ ಚಕ್ರದಿಂದ ಷಟ್‌ಖಂಡಾಗಮವನ್ನು ಸಾಧಿಸಿ, ನನ್ನ ಈ ಕೃತಿಯನ್ನು ಪೂರ್ಣಗೊಳಿಸಿದೆನು. ಇದೇ ಸಫಲ ಸೈದ್ಧಾಂತಿಕ ರಚನೆಯಿಂದ್ದಲೇ ಅವನು 'ಸಿದ್ಧಾಂತ ಚಕ್ರವರ್ತಿ' ಎಂಬ ಪದವಿಯನ್ನು ಹೊಂದಿದನು. ತರುವಾಯದ ಕಾಲದಲ್ಲಿ ಈ ಪದವಿಯನ್ನು ಅನೇಕ ಆಚಾರ್ಯರ ಹೆಸರುಗಳ ಜೊತೆಗೆ ಇದ್ದುದನ್ನು ಕಾಣುತ್ತೇವೆ. ಬಹುತರ 'ತ್ರೈವಿದ್ಯದೇವ' ಎಂಬ ಪದವಿಯನ್ನು ಹೊಂದಿದ ಆಚಾರ್ಯರು ಷಟ್‌ಖಂಡಾಗಮದ ಮೊದಲಿನ ಮೂರು ಖಂಡಗಳ ಪಾರಗಾಮಿಗಳಾಗಿರುತ್ತಿದ್ದರು. ಈ ಪದವಿಗಳು ಧವಲಾಕಾರನ ಪೂರ್ವದಲ್ಲಿದ್ದ ಸೂತ್ರಾಚಾರ್ಯ ಮೊದಲಾದ ಪದವಿಗಳಿಗೆ ಲೋಪವನ್ನೂ ತಂದುವು. ಅವನು ತನ್ನ

ಈ ಕೃತಿಯನ್ನು ಗೊಮ್ಮಟರಾಯನಿಗಾಗಿ ನಿರ್ಮಾಣ ಮಾಡಿದ್ದನು. ಗೊಮ್ಮಟ ಎಂಬುದು ಗಂಗರಾಜ ರಾಚಮಲ್ಲನ ಮಂತ್ರಿಯಾದ ಚಾಮುಂಡರಾಯನ ಉಪನಾಮವೇ ಆಗಿದೆ. ಅದರ ಅರ್ಥವು ಸುಂದರ, ರೂಪವಾನ್ ಎಂದಾಗುತ್ತದೆ. ಇದೇ ಚಾಮುಂಡರಾಯನು ಮೈಸೂರು ರಾಜ್ಯದ ಶ್ರವಣ ಬೆಳ್ಗೊಳದಲ್ಲಿ ವಿಂಧ್ಯಗಿರಿಯ ಮೇಲೆ ಬಾಹುಬಲಿಯ ಜಗತ್ ಪ್ರಸಿದ್ಧ ಮೂರ್ತಿಯನ್ನು ಉದ್ಘಾಟಿಸಿದನು. ಅದು ತನ್ನ ವಿಶಾಲತೆ ಮತ್ತು ಕಲಾತ್ಮಕ ಸೌಂದರ್ಯಕ್ಕಾಗಿ ಉಪಮಾತೀತವಾಗಿದೆ. ಸಮಸ್ತ ಉಪಲಬ್ಧ ಪ್ರಮಾಣಗಳಿಂದ ಈ ಮೂರ್ತಿಯ ಪ್ರತಿಷ್ಠೆಯು ರವಿವಾರ ದಿನಾಂಕ ೨೩ ಮಾರ್ಚ್ ೧೦೨೮ ಕ್ರಿ. ಶ. ದಂದು ಆಯಿತು. ಅದು ಶಕ ಸಂವತ್ಸರದ ೯೫೧ ಚೈತ್ರ ಶುಕ್ಲ ಪಂಚಮಿಯಾಗುತ್ತದೆ. ಕರ್ಮಕಾಂಡದ ರಚನೆ ಹಾಗೂ ಈ ಪ್ರತಿಷ್ಠೆಯ ಉಲ್ಲೇಖವು ಕರ್ಮಕಾಂಡದ ೯೬೮ ನೆಯ ಗಾಥೆಯಲ್ಲಿ ಜೊತೆಯಾಗಿ ಬರುತ್ತದೆ. ಅದರಿಂದ ಸುಮಾರು ಇದೇ ಕಾಲವನ್ನು ಗೊಮ್ಮಟಸಾರದ ರಚನಾ ಕಾಲವೆಂದು ಮನ್ನಿಸಲಾಗುತ್ತದೆ. ಈ ರಚನೆಯಿಂದ ಷಟ್‌ಖಂಡಾಗಮದ ವಿಷಯದ ಅಧ್ಯಯನವು ಸುಲಭವಾಯಿತು. ಅದೇ ಪ್ರಕಾರ ಮೇಲೆ ಉಲ್ಲೇಖಿಸಿದ ನಿರ್ಯುಕ್ತಿ ಮತ್ತು ಭಾಷ್ಯಗಳಿಂದ ಶ್ರುತಾಂಗಗಳ ಅಭ್ಯಾಸವು ಸುಲಭವಾಯಿತು. ಗೊಮ್ಮಟಸಾರದ ಮೇಲೆ ಸಂಸ್ಕೃತದಲ್ಲಿ ಎರಡು ವಿಸ್ತಾರವಾದ ಟೀಕಾ ಗ್ರಂಥಗಳು ಉತ್ಪನ್ನವಾಗಿವೆ. ಒಂದು ಕೇಶವವರ್ಣಿಯ **ಜೀವ ಪ್ರಬೋಧಿನೀ**; ಇನ್ನೊಂದು ಶ್ರೀಮದಭಯಚಂದ್ರ ಸಿದ್ಧಾಂತ ಚಕ್ರವರ್ತಿಯ **ಮಂದ ಪ್ರಬೋಧಿನೀ** ಎಂಬುದಾಗಿದೆ. ಕೆಲವೊಂದು ಸಂಕೇತಗಳ ಆಧಾರದಿಂದ ಗೊಮ್ಮಟಸಾರದ ಮೇಲೆ ಚಾಮುಂಡರಾಯನೂ ಕೂಡ ಕನ್ನಡದಲ್ಲಿ ಒಂದು ವೃತ್ತಿಯನ್ನು ಬರೆದಿದ್ದನೆಂದು ತಿಳಿಯುತ್ತದೆ. ಈಗ ಅದು ಉಪಲಬ್ಧವಿಲ್ಲ. ಇದರ ಆಧಾರದಿಂದ ಹಿಂದಿಯಲ್ಲಿ 'ಸಮ್ಯಜ್ಞಾನ ಚಂದ್ರಿಕಾ' ಎಂಬ ಹೆಸರಿನ ವಚನಿಕೆಯನ್ನು ಪಂಡಿತ ತೋಡರಮಲ್ಲನು ಸು. ೧೭೧೮ರಲ್ಲಿ ಬರೆದು ಮುಗಿಸಿದನು. ಗೊಮ್ಮಟಸಾರಕ್ಕೆ ಸಂಬಂಧಿಸಿದ ಲಬ್ಧಿಸಾರ ಎಂಬುದು ಕೃತಿಯಾಗಿದೆ. ಇದರಲ್ಲಿ ಆತ್ಮಶುದ್ಧಿರೂಪ ಲಬ್ಧಿಗಳನ್ನು ಪಡೆಯುವ ವಿಧಿಯನ್ನು ತಿಳಿಸಿ ಹೇಳಲಾಗಿದೆ. **ದ್ರವ್ಯ ಸಂಗ್ರಹ** ಎಂಬ ಹೆಸರಿನ ೫೮ ಗಾಥೆಗಳಿಂದ ಕೂಡಿದ ನೇಮಿಚಂದ್ರನ ಇನ್ನೊಂದು ಕೃತಿಯು ಪ್ರಸಿದ್ಧವಾಗಿದೆ. ಅದು ಜೀವ, ಅಜೀವ ತತ್ವಗಳನ್ನು ವಿಧಿ ಪ್ರಕಾರ ತಿಳಿಸಿಕೊಟ್ಟು ಸಂಪೂರ್ಣ ಜೈನ ತತ್ವ ಜ್ಞಾನವನ್ನೂ ಪ್ರತಿಪಾದನ ಮಾಡುವ ಚಿಕ್ಕ ಕೃತಿಯಾಗಿದೆ. ಲಬ್ಧಿಸಾರದ ಜೊತೆಯಲ್ಲಿಯೇ ಕ್ಷಪಣಾಸಾರವೂ ದೊರೆಯುತ್ತದೆ. ಇದರಲ್ಲಿ ಕರ್ಮಗಳನ್ನು ಕ್ಷಪಣ ಮಾಡುವ ವಿಧಿಯನ್ನು ಹೇಳಿದೆ. ಇದರ ಪ್ರಶಸ್ತಿಗನುಸರಿಸಿ ಇದನ್ನು ಮಾಧವಚಂದ್ರ ತ್ರೈವಿದ್ಯನು ಬಾಹುಬಲಿ ಮಂತ್ರಿಯ ಪ್ರಾರ್ಥನೆಯಿಂದ ಬರೆದು ಶಕ ಸು. ೧೧೨೫ ರಲ್ಲಿ (ಕ್ರಿ. ಶ. ೧೨೦೩) ಪೂರ್ಣಗೊಳಿಸಿದನು.

ಷಟ್‌ಖಂಡಾಗಮದ ಪರಂಪರೆಯ ಇನ್ನೊಂದು ಮಹತ್ವಪೂರ್ಣ ರಚನೆಯು **ಪಂಚಸಂಗ್ರಹ** ವಾಗಿದೆ. ಅದು ಇದೀಗ ಪ್ರಕಟವಾಗಿದೆ. ಇದರಲ್ಲಿ ಹೆಸರಿಗೆ ಅನು

ಸೇರಿಸಿ ಐದು ಅಧಿಕಾರ (ಪ್ರಕರಣ) ಗಳಿವೆ. ಅವು ಜೀವಸಮಾಸ, ಪ್ರಕೃತಿಸಮುತ್ಕೀರ್ತನ, ಕರ್ಮಸ್ತವ, ಶತಕ ಮತ್ತು ಸತ್ತರಿ ಅರ್ಥಾತ್ ಸಪ್ತತಿಕಾ ಎಂದಿವೆ. ಇವುಗಳಲ್ಲಿ ಕ್ರಮದಿಂದ ೨೦೬, ೧೨, ೭೭, ೧೦೫ ಮತ್ತು ೭೦ ಗಾಥೆಗಳಿವೆ. ಪ್ರಕೃತಿಸಮುತ್ಕೀರ್ತನವಲ್ಲಿ ಕೆಲವೊಂದು ಭಾಗವು ಗದ್ಯಾತ್ಮಕವೂ ಇದೆ. ಇದರೊಳಗಿನ ಬಹಳಷ್ಟು ಗಾಥೆಗಳು ಧವಲಾ ಹಾಗೂ ಗೊಮ್ಮಟಸಾರಗಳಲ್ಲಿದ್ದಂಥವೇ ಇವೆ. ಕೊನೆಯ ಎರಡು ಪ್ರಕರಣಗಳ ಮೇಲೆ ಗಾಥಾಬದ್ಧ ಭಾಷ್ಯವೂ ಕೂಡಾ ಇದೆ. ಅದರ ಗಾಥೆಗಳೂ ಸಹ ಗೊಮ್ಮಟಸಾರದೊಡನೆ ಹೊಂದುತ್ತವೆ. ಈ ಭಾಷ್ಯದ ಗಾಥೆಗಳು ಮೂಲ ಗ್ರಂಥದಲ್ಲಿ ಮಿಶ್ರಿತಗೊಂಡಂತಿವೆ. ಶತಕ ಎಂಬ ಪ್ರಕರಣದ ಆದಿಯಲ್ಲಿ ಕರ್ತೃವು, 'ನಾನು ಇಲ್ಲಿಯ ಕೆಲವು ಗಾಥೆಗಳನ್ನು ದೃಷ್ಟಿವಾದದಿಂದ ಎತ್ತಿಕೊಂಡು ಹೇಳುತ್ತೇನೆ —(ವೋಚ್ಛಂ ಕದಿವಇ ಗಾಹಾಓ ದಿಟ್ಠಿವಾದಾಓ) ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಶತಕದ ಕೊನೆಯಲ್ಲಿ ೧೦೩ನೆಯ ಗಾಥೆಯಲ್ಲಿ ಹೀಗೆ ಹೇಳಿದೆ:— ಇಲ್ಲಿ ಬಂಧ–ಸಮಾಸದ ವರ್ಣನೆಯನ್ನು ಕರ್ಮ–ಪ್ರವಾದ ಎಂಬ ಶ್ರುತಸಾರದ ರಸವನ್ನು ಮಾತ್ರ ಗ್ರಹಣಮಾಡಿ ಮಾಡಿದೆ. ಕರ್ಮಪ್ರವಾದವು ದೃಷ್ಟಿವಾದದಲ್ಲಿ ಬರುವ ಹದಿನಾಲ್ಕು ಪೂರ್ವಗಳಲ್ಲಿ ಎಂಟನೆಯದಾಗಿದೆ. ಅದೇ ಪ್ರಕಾರ ಸತ್ತರಿಯ ಪ್ರಾರಂಭದಲ್ಲಿ ಹೀಗೆ ಹೇಳಿದೆ:—ನಾನು ಇಲ್ಲಿ ದೃಷ್ಟಿವಾದದ ಸಾರವನ್ನು ಸಂಗ್ರಹಿಸಿ ಹೇಳಿರುವೆ. (ವೋಚ್ಛಂ ಸಂಖೇವೇಣಂ ನಿಸ್ಸಂದಂ ದಿಟ್ಠಿವಾದಾದೊ) ಪ್ರತಿಯೊಂದು ಪ್ರಕರಣವು ಮಂಗಲಾಚರಣ ಮತ್ತು ಪ್ರತಿಜ್ಞಾತ್ಮಕ ಗಾಥೆಗಳಿಂದ ಪ್ರಾರಂಭವಾಗುತ್ತವೆ. ಅಲ್ಲದೆ ಅವು ತಮ್ಮ ತಮ್ಮ ರೂಪಗಳಲ್ಲಿ ಪರಿಪೂರ್ಣವೂ ಇವೆ. ಇದರಿಂದ ಒಂದು ಸಂಗತಿಯು ಸ್ಪಷ್ಟವಾಗುತ್ತದೆ. ಆರಂಭದಲ್ಲಿ ಈ ಐದು ಪ್ರಕರಣಗಳು ಸ್ವತಂತ್ರ ರಚನೆಗಳಾಗಿರಬೇಕು. ಇವುಗಳ ಮೇಲೆ ಒಂದು ಸಂಸ್ಕೃತ ಟೀಕೆಯೂ ಇದೆ. ಅದರ ಕರ್ತೃವು ತನ್ನ ರಚನೆಯ ಶತಕದ ಕೊನೆಯ ಗಾಥೆಯಲ್ಲಿ ಟೀಕಾರೂಪದಿಂದ ಹೀಗೆ ಹೇಳಿದ್ದಾನೆ:—ತಾನು ಮೂಲಸಂಘದ ವಿದ್ಯಾನಂದಿ ಗುರುವು, ಭಟ್ಟಾರಕ ಮಲ್ಲಿಭೂಷಣ, ಮುನಿ ಲಕ್ಷ್ಮೀಚಂದ್ರ ಮತ್ತು ವೀರಚಂದ್ರ ಅವರ ಪಟ್ಟದಲ್ಲಿರುವ ಜ್ಞಾನಭೂಷಣ ಗಣಿ ಮತ್ತು ಅವರ ಶಿಷ್ಯ ಪ್ರಭಾಚಂದ್ರಯತಿಯ ಹೆಸರನ್ನು ಎತ್ತಿದ್ದಾನೆ. ಈ ಪ್ರಭಾಚಂದ್ರನೇ ಈ ಟೀಕೆಯ ಕರ್ತೃವೆಂದು ಪ್ರತೀತಿಯಿದೆ. ಈ ಆಚಾರ್ಯ ಪರಂಪರೆಯಲ್ಲಿರುವ ಪ್ರಭಾಚಂದ್ರನ ಕಾಲವು ಸಂವತ್ಸರ ೧೬೨೫ ರಿಂದ ೧೬೭೭ ರ ವರೆಗಿನದೆಂದು ಗೊತ್ತಾಗುತ್ತದೆ. ಈ ಪ್ರಶಸ್ತಿಯ ಕೊನೆಯ ಪುಷ್ಪಿಕೆಯಲ್ಲಿ ಮೂಲ ಗ್ರಂಥಕ್ಕೆ ಪಂಚಸಂಗ್ರಹ ಅಲ್ಲದೆ ಇನ್ನೊಂದು ಹೆಸರು 'ಲಘುಗೊಮ್ಮಟಸಾರ ಸಿದ್ಧಾಂತ' ಎಂದು ಹೇಳಿದೆ. ಇದರಿಂದ ಮೂಲ ಶತಕ ಅಥವಾ ಅದರ ಭಾಷ್ಯದ ಗಾಥೆಗಳ ಸಂಗ್ರಹವನ್ನು ಗೊಮ್ಮಟಸಾರದಿಂದ ಮಾಡಲಾಗಿದೆಯೆಂದು ಅನುಮಾನವುಂಟಾಗುತ್ತದೆ. ಇದೇ ಪಂಚಸಂಗ್ರಹದ ಆಧಾರದಿಂದ ಅಮಿತಗತಿಯು ಸಂಸ್ಕೃತ ಶ್ಲೋಕಬದ್ಧ ಪಂಚಸಂಗ್ರಹದ ರಚನೆಯನ್ನು ಮಾಡಿದನು. ಅದರ ಪ್ರಶಸ್ತಿಗೆ ಅನುಸರಿಸಿ, ವಿಕ್ರಮ

ಸಂವತ್ಸರ ೧೦೭೩ (ಕ್ರಿ.ಶ. ೧೦೧೬) ದಲ್ಲಿ ಮಸೂರಿಕಾಪುರ ಎಂಬ ಹೆಸರಿನ ಸ್ಥಾನದಲ್ಲಿ ಇದನ್ನು ಪೂರ್ಣಗೊಳಿಸಲಾಗಿದೆ. ಇದರಲ್ಲಿ ಐದು ಅಧಿಕಾರಗಳ ಹೆಸರುಗಳು ಮೊದಲಿನವುಗಳಂತೆಯೇ ಇವೆ. ದೃಷ್ಟಿವಾದ ಮತ್ತು ಕರ್ಮವಾದದ ಉಲ್ಲೇಖಗಳೂ ಕೂಡ ಮುಂಚಿನಂತೆಯೇ ಇವೆ. ಇದರ ಆಧಾರವೆಂದು ಪ್ರಾಕೃತ ಪಂಚಸಂಗ್ರಹವನ್ನು ತಿಳಿಯದೆ ಹೋದರೆ ಇಲ್ಲಿಯ ಶತಕ ಮತ್ತು ಸಪ್ತತಿ ಎಂಬ ಹೆಸರಿನ ಅಧಿಕಾರಗಳಿಗೆ ಯಾವ ಸಾರ್ಥಕತೆಯೂ ಸಿದ್ಧವಾಗುವುದಿಲ್ಲ. ಯಾಕೆಂದರೆ ಇವುಗಳಲ್ಲಿ ಶ್ಲೋಕಸಂಖ್ಯೆಯು ಅವುಗಳಿಗಿಂತ ಬಹಳ ಹೆಚ್ಚಾಗಿದೆ. ಆದರೆ ಸಂಸ್ಕೃತ ರೂಪಾಂತರಕಾರನು ಯಾವಾಗ ಅಧಿಕಾರಗಳ ಹೆಸರುಗಳನ್ನು ಅವುಗಳನ್ನೇ ಇಟ್ಟಿರುವನೋ, ಆಗ ಅವನೂ ಮೂಲ ಮತ್ತು ಭಾಷ್ಯ ಆಧಾರಿತ ಶ್ಲೋಕಗಳನ್ನೂ ಭಿನ್ನ ಭಿನ್ನ ಇಟ್ಟಿರುವುದರಲ್ಲಿ ಆಶ್ಚರ್ಯವಿಲ್ಲ. ಪ್ರಾಕೃತ ಮೂಲ ಮತ್ತು ಭಾಷ್ಯಗಳನ್ನು ಎದುರಿಗೆ ಇಟ್ಟುಕೊಂಡು, ಶ್ಲೋಕಗಳನ್ನು ಈ ಪ್ರಕಾರ ಪೃಥಕತ್ವಗೈಯ್ಯುತ್ತ ಹೋಗುವ ಸಂಭವವಿದೆ.

ಶ್ವೇತಾಂಬರ ಸಂಪ್ರದಾಯದಲ್ಲಿಯೂ ಒಂದು ಪ್ರಾಕೃತ **ಪಂಚಸಂಗ್ರಹವು** ಕಂಡು ಬರುತ್ತದೆ. ಇದರ ಕರ್ತೃವು ಪಾರ್ಶ್ವರ್ಷಿಯ ಶಿಷ್ಯನಾದ ಚಂದ್ರರ್ಷಿಯಾಗಿದ್ದಾನೆ. ಅವನ ಕಾಲವು ಆರನೆಯ ಶತಮಾನವೆಂದು ಊಹಿಸಲಾಗುತ್ತದೆ. ಈ ಗ್ರಂಥದಲ್ಲಿ ೯೬೩ ಗಾಥೆಗಳು ಇವೆ. ಅವುಗಳನ್ನು ಶತಕ, ಸಪ್ತತಿ, ಕಷಾಯ ಪಾಹುಡ, ಷಟ್‌ಕರ್ಮ ಮತ್ತು ಕರ್ಮಪ್ರಕೃತಿ ಎಂಬ ಹೆಸರಿನ ಐದು ದ್ವಾರಗಳಲ್ಲಿ ವಿಭಾಗಿಸಲಾಗಿದೆ. ಈ ಗ್ರಂಥದ ಮೇಲೆ ಮಲಯಗಿರಿಯ ಟೀಕೆಯು ಉಪಲಬ್ಧವಿದೆ.

ಶಿವಶರ್ಮಕೃತ ಕರ್ಮಪ್ರಕೃತಿ (ಕಮ್ಮಪಯಡಿ)ಯಲ್ಲಿ ೪೧೫ ಗಾಥೆಗಳು ಇವೆ. ಅವುಗಳನ್ನು ಬಂಧನ, ಸಂಕ್ರಮಣ, ಉದ್ವರ್ತನ, ಅಪವರ್ತನ ಉದೀರಣಾ, ಉಪಶಮನಾ, ಉದಯ ಮತ್ತು ಸತ್ತಾ ಈ ಎಂಟು ಕರಣಗಳಲ್ಲಿ (ಅಧ್ಯಾಯಗಳಲ್ಲಿ) ವಿಭಾಗಿಸಲಾಗಿದೆ. ಇದರ ಮೇಲೆ ಒಂದು ಚೂರ್ಣಿಯೂ ಮಲಯಗಿರಿ ಮತ್ತು ಯಶೋವಿಜಯರ ಟೀಕೆಯೂ ಉಪಲಬ್ಧವಿವೆ.

ಶಿವಶರ್ಮನ ಇನ್ನೊಂದು ರಚನೆಯು ಶತಕ ಎಂಬ ಹೆಸರಿನದಿದೆ. ಗರ್ಗರ್ಷಿಕೃತ **ಕರ್ಮವಿಪಾಕ** (ಕಮ್ಮ-ವಿವಾಗ) ಹಾಗೂ ಜಿನವಲ್ಲಭಗಣಿ ಕೃತ **ಷಡಶೀತಿ** (ಸಡಸೀಇ), **ಕರ್ಮಸ್ತವ** (ಕಮ್ಮತ್ಥವ), **ಬಂಧಸ್ವಾಮಿತ್ವ** (ಸಾಮಿತ್ತ) ಮತ್ತು **ಸಪ್ತತಿಕಾ** (ಸತ್ತರೀ) ಇವು ಉಪಲಬ್ಧವಿವೆ. ಇವುಗಳ ಕರ್ತೃಗಳು ಅನಿಶ್ಚಿತ ಇದ್ದಾರೆ. ಇವುಗಳಲ್ಲಿ ಕರ್ಮಸಿದ್ಧಾಂತದ ಭಿನ್ನ ಭಿನ್ನ ಪ್ರಕರಣಗಳನ್ನು ಅತಿ ಸಂಗ್ರಹ ರೂಪದಲ್ಲಿಯೂ ಸುವ್ಯವಸ್ಥಿತವಾಗಿಯೂ ವರ್ಣನೆಯನ್ನು ಮಾಡಲಾಗಿದೆ. ಈ ಆರೂ ರಚನೆಗಳು ಪ್ರಾಚೀನ ಕರ್ಮಗ್ರಂಥದ ಹೆಸರಿನಿಂದ ಪ್ರಸಿದ್ಧವಾಗಿವೆ. ಅವುಗಳ ಮೇಲೆ ವಿವಿಧ ಕೃರ್ತೃಗಳ ಚೂರ್ಣಿ, ಭಾಷ್ಯ, ವೃತ್ತಿ, ಟಿಪ್ಪಣಿ ಮೊದಲಾದ ರೂಪಗಳಲ್ಲಿ ಟೀಕೆಗಳು ಕಂಡುಬರುತ್ತವೆ. ಸತ್ತರಿಯ ಮೇಲೆ ಅಭಯದೇವ ಸೂರೀಕೃತ ಭಾಷ್ಯ ಹಾಗೂ ಮೇರುತುಂಗನ ವೃತ್ತಿ (೧೪ ನೆಯ ಶತಮಾನ) ಇವು ಉಪಲಬ್ಧವಿರುತ್ತವೆ.

ಕ್ರಿ.ಶ. ಹದಿಮೂರನೆಯ ಶತಮಾನದಲ್ಲಿ ಜಗಚ್ಚಂದ್ರ ಸೂರಿಯ ಶಿಷ್ಯನಾದ ದೇವೇಂದ್ರಸೂರಿಯು ಕರ್ಮವಿಪಾಕ (೬೦ ಗಾಥೆ) ಕರ್ಮಸ್ತವ (೩೪ ಗಾಥೆ), ಬಂಧ ಸ್ವಾಮಿತ್ವ (೨೪ ಗಾಥೆ) ಷಡಶೀತಿ (೮೬ ಗಾಥೆ) ಮತ್ತು ಶತಕ (೧೦೦ ಗಾಥೆ) ಈ ಐದು ಗ್ರಂಥಗಳನ್ನೂ ರಚಿಸಿದನು. ಇವು ನವೀನ ಕರ್ಮಗ್ರಂಥಗಳು ಎಂಬ ಹೆಸರಿನಿಂದ ಪ್ರಸಿದ್ಧವಾಗಿವೆ. ಇವುಗಳ ಮೇಲೆ ಅವನು ಸ್ವತಃ ವಿವರಣವನ್ನು ಕೂಡ ಬರೆದಿದ್ದಾನೆ. ಆರನೆಯದಾದ ನವ್ಯ ಕರ್ಮಗ್ರಂಥವು ಪ್ರಕೃತಿ ಬಂಧದ ವಿಷಯದಲ್ಲಿ ೭೨ ಗಾಥೆಗಳಲ್ಲಿ ಬರೆಯಲಾಗಿದೆ. ಇದರ ಕರ್ತೃವಿನ ವಿಷಯದಲ್ಲಿ ಏನೂ ಗೊತ್ತಾಗುವುದಿಲ್ಲ. ಇದರ ಮೇಲೆ ಮಲಯಗಿರಿ ಕೃತ ಟೀಕೆಯೊಂದು ಲಭಿಸುತ್ತದೆ.

ಜಿನಭದ್ರಗಣೀ ಕೃತ **ವಿಶೇಷಣವತೀ** (೬ನೆಯ ಶತಮಾನ)ಯಲ್ಲಿ ೪೦೦ ಗಾಥೆಗಳು ಇವೆ. ಇವುಗಳಿಂದ ಜ್ಞಾನ, ದರ್ಶನ, ಜೀವ, ಅಜೀವ ಮೊದಲಾದ ನಾನಾ ವಿಧದ ದ್ರವ್ಯ ನಿರೂಪಣೆಯನ್ನು ಮಾಡಲಾಗಿದೆ.

ಜಿನವಲ್ಲಭ ಸೂರೀಕೃತ **ಸಾರ್ಥಶತಕ**ದ ಇನ್ನೊಂದು ಹೆಸರು 'ಸೂಕ್ಷ್ಮಾರ್ಥ-ವಿಚಾರಸಾರ' ಎಂದಿದೆ. ಇದರಲ್ಲಿ ಸಿದ್ಧಾಂತದ ಕೆಲವೊಂದು ವಿಷಯಗಳ ಮೇಲೆ ಸೂಕ್ಷ್ಮ ರೀತಿಯಿಂದ ವಿಚಾರ ಮಾಡಲಾಗಿದೆ. ಇದರ ಮೇಲೆ ಒಂದು ಭಾಷ್ಯ, ಮುನಿಚಂದ್ರಕೃತ ಚೂರ್ಣಿ ಹಾಗೂ ಹರಿಭದ್ರ, ಧನೇಶ್ವರ ಮತ್ತು ಚಕ್ರೇಶ್ವರಕೃತ ಚೂರ್ಣಿಗಳ ಉಲ್ಲೇಖವು ದೊರೆಯುತ್ತದೆ. ಮೂಲ ಗ್ರಂಥದ ಕಾಲವು ಸುಮಾರು ಕ್ರಿ. ಶ. ೧೧೦೦ ಇರಬೇಕೆನಿಸುತ್ತದೆ.

**ಜೀವಸಮಾಸ** ಎಂಬ ಹೆಸರಿನ ಗ್ರಂಥವೊಂದು ೨೮೬ ಗಾಥೆಗಳಲ್ಲಿ ಪೂರ್ಣಗೊಂಡಿದೆ. ಅದರಲ್ಲಿ ಸತ್, ಸಂಖ್ಯಾ ಮೊದಲಾದ ಏಳು ಪ್ರರೂಪಣೆಗಳಿಂದ ಜೀವಾದಿ ದ್ರವ್ಯಗಳ ಸ್ವರೂಪವನ್ನು ತಿಳಿಸಿ ಹೇಳಲಾಗಿದೆ. ಈ ಗ್ರಂಥದ ಮೇಲೆ ಒಂದು ಬೃಹದ್ ವೃತ್ತಿಯು ಲಭಿಸುತ್ತದೆ. ಅದು ಮಲಧಾರಿ ಹೇಮಚಂದ್ರನಿಂದ ಕ್ರಿ.ಶ. ೧೧೦೭ ರಲ್ಲಿ ನಿರ್ಮಾಣವಾಗಿದೆ. ಇದರಲ್ಲಿ ೭೦೦೦ ಶ್ಲೋಕಗಳು ಇವೆ.

ಜೈನ ಸಿದ್ಧಾಂತದಲ್ಲಿ ಮನ, ವಚನ ಮತ್ತು ಕಾಯ ಯೋಗಗಳ ಭೇದ ಪ್ರಭೇದಗಳ ವರ್ಣನೆಯು ಬರುತ್ತದೆ. ಗೊಮ್ಮಟಸಾರವೇ ಮೊದಲಾದ ಗ್ರಂಥಗಳಲ್ಲಿ ಇದು ಕಂಡುಬರುತ್ತದೆ. ಯಶೋವಿಜಯ ಉಪಾಧ್ಯಾಯನು (೧೮ ನೆಯ ಶತಮಾನ) ತನ್ನ ಭಾಷಾರಹಸ್ಯ ಪ್ರಕರಣದ ೧೦೧ ಗಾಥೆಗಳಲ್ಲಿ ದ್ರವ್ಯ ಮತ್ತು ಭಾವಾತ್ಮಕ ಭಾಷೆಯ ಸ್ವರೂಪ ಹಾಗೂ ಸತ್ಯಭಾಷೆಯ ಜನಪದ ಸತ್ಯ, ಸಮ್ಮತ ಸತ್ಯ, ನಾಮ ಸತ್ಯ ಮೊದಲಾದ ಹತ್ತು ಭೇದಗಳ ನಿರೂಪಣೆಯನ್ನು ಮಾಡಿದ್ದಾನೆ.

ಷಟ್‌ಖಂಡಾಗಮ ಸೂತ್ರಗಳ ರಚನೆಯ ಕಾಲದಲ್ಲಿಯೇ ಗುಣಧರ ಆಚಾರ್ಯನು **ಕಸಾಯ ಪಾಹುಡ**ವನ್ನು ರಚಿಸಿದನು. ಧರಸೇನ ಮತ್ತು ಗುಣಧರ ಆಚಾರ್ಯರಲ್ಲಿ ಯಾರು ಮೊದಲು ಆದರೆಂಬುದನ್ನು ನಿಜವಾಗಿಯೂ ಹೇಳಲಿಕ್ಕೆ ಆಗುವುದಿಲ್ಲ. ಶ್ರುತಾವತಾರದ ಕರ್ತೃವು ಈ ಆಚಾರ್ಯರ ಪೂರ್ವ ಪರಂಪರೆಯ ವಿಷಯ

ದಲ್ಲಿ ಏನೂ ಗೊತ್ತಾಗುವುದಿಲ್ಲವೆಂದು ಹೇಳಿದ್ದಾನೆ. ಅವನಿಗೆ ಯಾವ ಪ್ರಮಾಣಗಳೂ ಲಭಿಸಿಲ್ಲ. ಕಸಾಯಪಾಹುಡದ ರಚನೆಯು ಷಟ್ ಖಂಡಾಗಮದಂತೆ ಸೂತ್ರರೂಪದಲ್ಲಿ ಇಲ್ಲ; ಅದು ಪದ್ಯರೂಪದಲ್ಲಿದೆ. ಇದರಲ್ಲಿ ೨೩೩ ಮೂಲ ಗಾಥೆಗಳು ಇವೆ. ಇವುಗಳ ವಿಷಯವು ಕಷಾಯ ಅರ್ಥಾತ್ ಕ್ರೋಧ, ಮಾನ, ಮಾಯಾ ಮತ್ತು ಲೋಭದ ಸ್ವರೂಪದ ವಿವೇಚನೆಯಿದೆ. ಅಲ್ಲದೆ ಅವು ಕರ್ಮಬಂಧಕ್ಕೆ ಕಾರಣೀಭೂತವಾಗುವ ಪ್ರಕ್ರಿಯೆಗಳ ವಿವರಣೆಯೂ ಬಂದಿದೆ. ಈ ನಾಲ್ಕು ಕಷಾಯಗಳು ಪುನಃ ಎರಡು ವರ್ಗಗಳಲ್ಲಿ ವಿಭಾಗಗೊಂಡಿವೆ :— ಪ್ರೇಯಸ್ (ರಾಗ) ಮತ್ತು ದ್ವೇಷ. ಇದೇ ಕಾರಣದಿಂದ ಗ್ರಂಥದ ಇನ್ನೊಂದು ಹೆಸರು ಪೆಜ್ಜದೋಸಪಾಹುಡ ಎಂದು ಆಗಿದೆ. ಈ ಪಾಹುಡವನ್ನು ಆರ್ಯಮಕ್ಷು ಮತ್ತು ನಾಗಹಸ್ತಿಗಳು ಕಲಿತು, ಯತಿವೃಷಭಾಚಾರ್ಯನು ಇದರ ಮೇಲೆ ಆರು ಸಾವಿರ ಶ್ಲೋಕಗಳುಳ್ಳ ವೃತ್ತಿಸೂತ್ರವನ್ನು ಬರೆದನು, ಅದನ್ನು ಉಚ್ಚಾರಣಾಚಾರ್ಯನು ಪುನಃ ವಿಸ್ತರಿಸಿದನು. ಇದರ ಮೇಲೆ ವೀರಸೇನಾಚಾರ್ಯನು ತನ್ನ ಜಯಧವಲಾ ಟೀಕೆಯನ್ನು ಬರೆದನು. ಅದರಲ್ಲಿ ಅವನು ಇಪ್ಪತ್ತು ಸಾವಿರ ಶ್ಲೋಕಗಳನ್ನು ಬರೆದು ಸ್ವರ್ಗವಾಸಿಯಾದನು. ಮುಂದೆ ಅವನ ಶಿಷ್ಯನಾದ ಜಿನಸೇನಾಚಾರ್ಯನು ನಲವತ್ತು ಸಾವಿರ ಶ್ಲೋಕಗಳನ್ನು ಬರೆದು, ಆ ಟೀಕಾ ಗ್ರಂಥವನ್ನು ಪೂರ್ಣಗೊಳಿಸಿದನು. ಈ ಗ್ರಂಥವು ಶಕ ಸಂವತ್ಸರ ೭೫೯ (ಕ್ರಿ.ಶ. ೮೩೭)ರಲ್ಲಿ ಪೂರ್ಣವಾಯಿತು. ಆಗ ರಾಷ್ಟ್ರಕೂಟ ರಾಜನಾದ ಅಮೋಘವರ್ಷನ ರಾಜ್ಯಕಾಲವಾಗಿತ್ತು. ಈ ಟೀಕೆಯ ರಚನೆಯೂ ಕೂಡ ಧವಲದಂತೆ ಮಣಿ-ಪ್ರವಾಳ ನ್ಯಾಯದಿಂದ ಬಹಳಷ್ಟು ಪ್ರಾಕೃತ, ಆದರೆ ಅಲ್ಲಲ್ಲಿ ಸಂಸ್ಕೃತ ಮಿಶ್ರಿತವೂ ಆಗಿದೆ. ಈ ಗ್ರಂಥವನ್ನು ಮೂಡಬಿದ್ರಿಯ ಸಿದ್ಧಾಂತ ಬಸ್ತಿಯಿಂದ ಹೊರಗೆ ತಂದುದರ ಇತಿಹಾಸವು ಷಟ್ ಖಂಡಾಗಮದ ಇತಿಹಾಸದಂತೆಯೇ ಇದೆ.

**ಕುಂದ ಕುಂದರ ಗ್ರಂಥಗಳು :—**

ಪ್ರಾಕೃತ ಪಾಹುಡಗಳ ರಚನಾ ಪರಂಪರೆಯಲ್ಲಿ ಕುಂದ ಕುದಾಚಾರ್ಯರ ಹೆಸರು ಸುವಿಖ್ಯಾತವಾಗಿದೆ. ನಿಜವಾಗಿಯೂ ದಿಗಂಬರ ಪರಂಪರೆಯಲ್ಲಿ ಅವರಿಗೆ ಇರುವ ಸ್ಥಾನವು ಇನ್ನಾವ ಗ್ರಂಥಕಾರನಿಗೂ ಲಭಿಸಲಿಲ್ಲ. ಅವರ ಹೆಸರು ಒಂದು ಮಂಗಲ ಪದ್ಯದಲ್ಲಿ ಭಗವಾನ್ ಮಹಾವೀರ ಮತ್ತು ಗೌತಮ ಗಣಧರರ ತರುವಾಯ ಮೂರನೆಯ ಸ್ಥಾನದಲ್ಲಿದೆ.

" ಮಂಗಲಂ ಭಗವಾನ್ ವೀರೋ ಮಂಗಲಂ ಗೌತಮೋ ಗಣೀ ।
ಮಂಗಲಂ ಕುಂದಕುಂದಾರ್ಯೋ ಜೈನಧರ್ಮೋಸ್ತು ಮಂಗಲಮ್ "

ದಕ್ಷಿಣ ಭಾರತದ ಶಿಲಾಲೇಖಗಳಲ್ಲಿ ಇವನ ಹೆಸರು ಕೊಂಡಕುಂದವೆಂದು ಉಲ್ಲೇಖಗೊಂಡಿದೆ. ಇದರಿಂದ ಈತನು ತಮಿಳ ದೇಶವಾಸಿಯೆಂದು ಅನುಮಾನಿಸಲಾಗುತ್ತಿದೆ.

ಶ್ರುತಾವತಾರದ ಕರ್ತೃವು ಈತನನ್ನು ಕೊಂಡಕುಂಡಪುರ ನಿವಾಸಿಯೆಂದು ಹೇಳಿದ್ದಾನೆ. ಮದ್ರಾಸ ರಾಜ್ಯದಲ್ಲಿ ಗುಂಟಕಲ್ಲದ ಸಮೀಪದಲ್ಲಿ ಕುಂಡ ಕುಂಡೀ ಎಂಬ ಹೆಸರಿನ ಗ್ರಾಮವಿದೆ. ಇಲ್ಲಿಯ ಗುಹೆಗಳಲ್ಲಿ ಕೆಲವೊಂದು ಜೈನಮೂರ್ತಿಗಳು ಸ್ಥಾಪಿತವಾಗಿವೆ. ಇದೇ ಕುಂದ ಕುಂದಾಚಾರ್ಯರ ಮೂಲಸ್ಥಾನವೂ ತಪಸ್ಯಾ ಭೂಮಿಯೂ ಆಗಿರ ಬೇಕೆಂದು ಪ್ರತೀತಿಯು ಉಂಟಾಗುತ್ತದೆ. ಈ ಆಚಾರ್ಯನು ತನ್ನ ಗ್ರಂಥದಲ್ಲಿ ತನ್ನ ಯಾವ ಪರಿಚಯವನ್ನೂ ಕೊಟ್ಟಿಲ್ಲ. ಕೇವಲ ಬಾರಸಅಣುವೆಕ್ಖಾದ ಒಂದು ಪ್ರತಿಯ ಕೊನೆಯಲ್ಲಿ ಅದರ ಕರ್ತೃವು ಶ್ರುತಕೇವಲೀ ಭದ್ರಬಾಹುವಿನ ಶಿಷ್ಯನೆಂದು ಹೇಳಿದೆ. ಇದಕ್ಕೆ ಅನುಸರಿಸಿ ಈತನ ಕಾಲವು ಕ್ರಿ. ಪೂ. ಮೂರನೆಯ ನಾಲ್ಕನೆಯ ಶತಾಬ್ದಿ ಯೆಂದು ಮನ್ನಿಸಬೇಕಾಗುತ್ತದೆ. ಆದರೆ ವೀರ ನಿರ್ವಾಣ ಕಾಲದಿಂದ ೬೮೩ ವರ್ಷ ಗಳ ವರೆಗಿನ ಆಚಾರ್ಯ ಪರಂಪರೆಯು ಸುಸಂಬದ್ಧ ಹಾಗೂ ಸರ್ವಮಾನ್ಯವಾದದ್ದು ಉಪಲಬ್ಧವಿದೆ. ಇದರಲ್ಲಿ ಕುಂದ ಕುಂದರ ಹೆಸರು ಎಲ್ಲಿಯೂ ಬರುವುದಿಲ್ಲ. ಅಲ್ಲದೆ ಭಾಷೆಯ ದೃಷ್ಟಿಯಿಂದಲೂ ಅವರ ಗ್ರಂಥಗಳು ಅಷ್ಟು ಪ್ರಾಚೀನವೆಂದು ಸಿದ್ಧವಾಗುವು ದಿಲ್ಲ. ಅದರಲ್ಲಿ ಅಘೋಷ ವರ್ಣಗಳ ಲೋಪವೂ ಯ-ಶ್ರುತಿಯ ಆಗಮನ ಮೊದ ಲಾದ ಪ್ರವೃತ್ತಿಗಳು ಕಂಡುಬರುತ್ತವೆ. ಅವು ಕ್ರಿ.ಶ. ಕ್ಕೆ ಮೊದಲಿನವಲ್ಲ; ತರುವಾಯದ ಕಾಲದವುಗಳೆಂದು ಅವುಗಳಿಂದ ಸಿದ್ಧವಾಗುತ್ತದೆ. ಐದನೆಯ ಶತಮಾನದಲ್ಲಿ ಆಗಿ ಹೋದ ಆಚಾರ್ಯ ದೇವನಂದಿ ಪೂಜ್ಯಪಾದನು ತನ್ನ ಸರ್ವಾರ್ಥ ಸಿದ್ಧಿಯ ಟೀಕೆಯಲ್ಲಿ ಕೆಲವೊಂದು ಗಾಹೆಗಳನ್ನು ಉದ್ಧರಿಸಿದ್ದಾನೆ. ಅವು ಕುಂದಕುಂದರ 'ಬಾರಸ ಅಣುವೆಕ್ಖಾ' ದಲ್ಲಿಯೂ ನೋಡಲು ಸಿಕ್ಕುತ್ತವೆ. ಅಲ್ಲಿಂದಲೇ ಅವುಗಳನ್ನು ದೇವನಂದಿ ಆಚಾರ್ಯರು ತಕ್ಕೊಂಡಿರಬೇಕೆಂದೆನ್ನಿಸುತ್ತದೆ. ಆಯಿತು; ಇದೇ ಕುಂದ ಕುಂದರ ಕಾಲದ ಅಂತಿಮ ಸೀಮೆಯೆಂದು ಹೇಳಲಾಗುತ್ತಿದೆ. ಮಡಿಕೇರಿಯ ಶಕ ಸಂವತ್ ೩೮೮ರ ತಾಮ್ರ ಪತ್ರದಲ್ಲಿ ಅವರ ಆಮ್ನಾಯದ ಹೆಸರು ಕಂಡುಬರುತ್ತದೆ. ಆದರೆ ಅನೇಕ ಪ್ರಬಲ ಕಾರಣಗಳಿಂದ ಆ ತಾಮ್ರ ಪತ್ರವು ಅರ್ವಾಚೀನವೆಂದು ಸಿದ್ಧವಾಗುತ್ತದೆ. ಉಳಿದ ಶಿಲಾಲೇಖಗಳಲ್ಲಿ, ಈ ಆಮ್ನಾಯದ ಉಲ್ಲೇಖವು ಏಳನೆಯ ಎಂಟನೆಯ ಶತಮಾನ ಗಳಿಗಿಂತ ಪೂರ್ವದಲ್ಲಿದ್ದುದು ಕಂಡುಬರುವುದಿಲ್ಲ. ಒಟ್ಟಿನಲ್ಲಿ ಈಗ ಉಪಲಬ್ಧವಿರುವ ಪ್ರಮಾಣಗಳ ಆಧಾರದಿಂದ ಕುಂದಕುಂದಾಚಾರ್ಯರು ಕ್ರಿ.ಶ. ಐದನೆಯ ಶತಮಾನದ ಪ್ರಾರಂಭದಲ್ಲಿ-ಅಥವಾ ಅದಕ್ಕೂ ಪೂರ್ವದಲ್ಲಿ ಇದ್ದರೆಂದು ನಿಶ್ಚಿತವಾಗಿ ಹೇಳಬಹುದಾ ಗಿದೆ.

ಪರಂಪರೆಗೆ ಅನುಸರಿಸಿ ಕುಂದಕುಂದಾಚಾರ್ಯರು ಯಾವ ಯಾವುದೋ ಎಂಭತ್ತುನಾಲ್ಕು ಪಾಹುಡಗಳನ್ನು ರಚಿಸಿದ್ದರು. ಆದರೆ ಈಗ ಕೆಳಗೆ ಕಾಣಿಸಿದ ಅವರ ರಚನೆಗಳು ಉಪಲಬ್ಧ ಇವೆ:—(೧) ಸಮಯಸಾರ (೨) ಪ್ರವಚನಸಾರ (೩) ಪಂಚಾಸ್ತಿಕಾಯ (೪) ನಿಯಮಸಾರ (೫) ರಯಣಸಾರ (೬) ದಶಭಕ್ತಿ (೭) ಅಷ್ಟ ಪಾಹುಡ ಮತ್ತು (೮) ಬಾರಸ ಅಣುವೆಕ್ಖಾ. ಸಮಯಸಾರವು ಜೈನ ಅಧ್ಯಾತ್ಮದ

ಒಂದು ಬಹು ದೊಡ್ಡ ರಚನೆಯೆಂದು ಮನ್ನಿಸಲಾಗುತ್ತಿದೆ. ಜೈನರ ಎಲ್ಲ ಸಂಪ್ರದಾಯ ಗಳಲ್ಲಿಯೂ ಸಮಯ ಎಂಬ ರೂಪದಿಂದ ಇದನ್ನು ಆದರದಿಂದ ಕಾಣುತ್ತಾರೆ. ಇದರಲ್ಲಿ ಆತ್ಮನ ಗುಣಧರ್ಮಗಳನ್ನು ನಿಶ್ಚಯ ಮತ್ತು ವ್ಯವಹಾರ ದೃಷ್ಟಿಗಳಿಂದ ವಿವೇಚನೆ ಮಾಡಲಾಗಿದೆ. ಹಾಗೂ ಅದರ ಸ್ವಾಭಾವಿಕ ಮತ್ತು ವೈಭಾವಿಕ ಪರಿಣತಿಗಳ ಸುಂದರ ನಿರೂಪಣೆಯನ್ನು ಅನೇಕ ದೃಷ್ಟಾಂತ, ಉದಾಹರಣೆ ಮತ್ತು ಉಪಮೆಗಳ ಸಹಿತ ೪೧೫ ಗಾಹೆಗಳಲ್ಲಿ ಮಾಡಲಾಗಿದೆ. ಪ್ರವಚನ ಸಾರದ ೨೭೫ ಗಾಹೆಗಳು ಜ್ಞಾನ, ಜ್ಞೇಯ, ಚಾರಿತ್ರ ಎಂಬ ಹೆಸರಿನ ಮೂರು ಶ್ರುತಸ್ಕಂಧಗಳಲ್ಲಿ ವಿಭಾಜಿತವಾಗಿವೆ. ಇದರಲ್ಲಿ ಆಚಾರ್ಯರು ಆತ್ಮನ ಮೂಲಗುಣವಾದ ಜ್ಞಾನದ ಸ್ವರೂಪವನ್ನು ಸೂಕ್ಷ್ಮರೂಪದಿಂದ ವಿವೇಚಿಸಿದ್ದಾರೆ. ಅಲ್ಲದೆ ಜೀವದ ಪ್ರವೃತ್ತಿಗಳು ಶುಭವಾಗುವುದರಿಂದ ಪುಣ್ಯಬಂಧನ ಮಾಡುವಂಥವೂ, ಅಶುಭವಾಗುವುದರಿಂದ ಪಾಪಕರ್ಮ ಬಂಧಕವೂ, ಶುದ್ಧವಾಗುವುದ ರಿಂದ ಕರ್ಮಬಂಧದಿಂದ ಮುಕ್ತಗೊಳಿಸುವಂಥವೂ ಆಗುತ್ತವೆಂದು ಹೇಳಿದ್ದಾರೆ. ಜ್ಞೇಯ ತತ್ವಾಧಿಕಾರದಲ್ಲಿ ಗುಣ ಹಾಗೂ ಪರ್ಯಾಯಗಳ ಭೇದ, ಹಾಗೂ ವ್ಯಾವಹಾ ರಿಕ ಜೀವನದಲ್ಲಿ ಆಗುವ ಆತ್ಮ ಮತ್ತು ಪುದ್ಗಲಗಳ ಸಂಬಂಧದ ವಿವೇಚನೆಯನ್ನು ಮಾಡಲಾಗಿದೆ. ಚಾರಿತ್ರಾಧಿಕಾರದಲ್ಲಿ ಶ್ರಮಣರ ದೀಕ್ಷೆ ಮತ್ತು ಅವರ ಮಾನಸಿಕ ಹಾಗೂ ದೈಹಿಕ ಸಾಧನೆಗಳ ಸ್ವರೂಪವನ್ನೂ ವಿವರಿಸಲಾಗಿದೆ. ಈ ಪ್ರಕಾರ ಈ ಗ್ರಂಥವು ತನ್ನ ಹೆಸರಿಗೆ ತಕ್ಕಂತೆ ಜೈನ ಪ್ರವಚನದ ಸಾರವೆಂದು ಸಿದ್ಧವಾಗುತ್ತದೆ. ಕುಂದ ಕುಂದರ ರಚನೆಗಳಲ್ಲಿ ಇದೊಂದು ಗ್ರಂಥದ ಅಭ್ಯಾಸವು—ಭಾಷಾತ್ಮಕ ಮತ್ತು ವಿಷ ಯಾತ್ಮಕ ಸಂಪಾದನ ಮತ್ತು ಅಧ್ಯಯನಗಳು—ಆಧುನಿಕ ಸಮಾಲೋಚನಾತ್ಮಕ ಪದ್ಧತಿಯಿಂದ ಇಲ್ಲಿಯವರೆಗೆ ಆದದ್ದುಂಟು.

ಪಂಚಾಸ್ತಿಕಾಯದ ೧೭೧ ಗಾಥೆಗಳು ಎರಡು ಶ್ರುತಸ್ಕಂಧಗಳಲ್ಲಿ ವಿಭಾಜಿತ ಗೊಂಡಿವೆ. ಮೊದಲನೆಯ ಶ್ರುತಸ್ಕಂಧವು ೧೧೧ ಗಾಥೆಗಳಲ್ಲಿ ಪೂರ್ಣಗೊಂಡಿದೆ. ಇದ ರಲ್ಲಿ ಆರು ದ್ರವ್ಯಗಳಲ್ಲಿಯ ಪಂಚಾಸ್ತಿಕಾಯ ಅರ್ಥಾತ್ ಜೀವ, ಪುದ್ಗಲ, ಧರ್ಮ, ಅಧರ್ಮ ಮತ್ತು ಆಕಾಶಗಳ ಸ್ವರೂಪವನ್ನು ತಿಳಿಸಿ ಹೇಳಲಾಗಿದೆ. ಕೊನೆಯ ಎಂಟು ಗಾಹೆಗಳು ಚೂಲಿಕಾರೂಪದಲ್ಲಿವೆ. ಇವುಗಳಲ್ಲಿ ಸಾಮಾನ್ಯ ರೂಪದಿಂದ ದ್ರವ್ಯ ಮತ್ತು ವಿಶೇಷವಾಗಿ ಕಾಲದ ಸ್ವರೂಪದ ಮೇಲೆಯೂ ಸ್ವಲ್ಪ ಪ್ರಕಾಶ ಬೀರಲಾಗಿದೆ. ಎರಡ ನೆಯ ಶ್ರುತಸ್ಕಂಧವು ಮಹಾವೀರನಿಗೆ ನಮಸ್ಕಾರ ಮಾಡುವ ಮಂಗಲ ಶ್ಲೋಕದಿಂದ ಪ್ರಾರಂಭವಾಗಿದೆ. ಇದರಲ್ಲಿ ಒಂಬತ್ತು ಪದಾರ್ಥಗಳ ಸ್ವರೂಪದ ಮೇಲೆ ಪ್ರಕಾಶವನ್ನು ಬೀರಲಾಗಿದೆ. ಹಾಗೆಯೇ ದರ್ಶನ, ಜ್ಞಾನ, ಚಾರಿತ್ರಗಳಿಗೆ ಮೋಕ್ಷಮಾರ್ಗವೆಂದು ಹೇಳಿ, ಇವುಗಳನ್ನು ಆಚರಿಸುವುದಕ್ಕೆ ಒತ್ತಿ ಹೇಳಲಾಗಿದೆ. ಪಂಚಾಸ್ತಿಕಾಯಗಳ ಸಮವಾಯಕ್ಕೇನೇ ಲೇಖಕನು ಸಮಯವೆಂದು ಹೇಳಿದ್ದಾನೆ. ಒಟ್ಟಿನಲ್ಲಿ ತನ್ನ ರಚನೆ ಯನ್ನು ಸಂಗ್ರಹ ಸೂತ್ರ (ಗಾಹೆ ೧೦೧, ೧೭೦) ಎಂದು ಹೇಳಿದ್ದಾನೆ.

ಸಮಯಸಾರ, ಪ್ರವಚನಸಾರ ಮತ್ತು ಪಂಚಾಸ್ತಿಕಾಯಗಳ ಮೇಲೆ ಎರಡು

ಟೀಕೆಗಳು ಸುಪ್ರಸಿದ್ಧವಾಗಿವೆ. ಒಂದು ಅಮೃತಚಂದ್ರಸೂರಿಯದು. ಇನ್ನೊಂದು ಜಯಸೇನನದು. ಅಮೃತಚಂದ್ರನ ಕಾಲವು ಹದಿಮೂರನೆಯ ಶತಮಾನದ ಪೂರ್ವಾರ್ಧವಾಗಿದೆ. ಜಯಸೇನನದು ಹತ್ತನೆಯ ಶತಮಾನದ ಅಂತಿಮ ಭಾಗವೆಂದು ಸಿದ್ಧವಾಗುತ್ತದೆ. ಈ ಎರಡು ಟೀಕೆಗಳೂ ಬಹಳ ವಿದ್ವತ್ಪೂರ್ಣವಾಗಿವೆ. ಮೂಲ ಗ್ರಂಥಗಳ ಮರ್ಮವನ್ನೂ ಜೈನ ಸಿದ್ಧಾಂತಕ್ಕೆ ಸಂಬಂಧಿಸಿದ ಅನೇಕ ಮಾತುಗಳನ್ನೂ ಸ್ಪಷ್ಟವಾಗಿ ತಿಳಿದುಕೊಳ್ಳಲು ಸಹಾಯಕವಾಗುತ್ತವೆ. ಅಮೃತಚಂದ್ರರ ಸಮಯಸಾರ ಟೀಕೆಯು ವಿಶೇಷ ಮಹತ್ವಪೂರ್ಣವಾಗಿದೆ. ಅದರಲ್ಲಿ ಅವರು ಈ ಗ್ರಂಥಕ್ಕೆ ಸಂಸಾರದ ನಿಜವಾದ ಸಾರವನ್ನು ಪ್ರದರ್ಶಿಸುವ ನಾಟಕವೆಂದು ಸಂಬೋಧಿಸಿದ್ದಾನೆ. ಇದರಿಂದ ಈ ಗ್ರಂಥ ಒಂದೇ ಅಲ್ಲ, ಉಳಿದ ಮೂರು ಗ್ರಂಥಗಳಿಗೂ ಸಹ ನಾಟಕ–ತ್ರಯ ಎಂದು ಹೆಸರು ಪ್ರಖ್ಯಾತವಾಗಿದೆ. ಆದರೆ ರಚನೆಯ ದೃಷ್ಟಿಯಿಂದ ಇವು ನಾಟಕಗಳಾಗಿಲ್ಲ. ಅಮೃತಚಂದ್ರರ ಸಮಯಸಾರ ಟೀಕೆಯಲ್ಲಿ ಬಂದ ಶ್ಲೋಕಗಳ ಸಂಗ್ರಹದಿಂದ '**ಸಮಯಸಾರ ಕಲಶ**' ಎಂಬ ಹೆಸರಿನ ಸ್ವತಂತ್ರ ಗ್ರಂಥವನ್ನೂ ರೂಪಿಸಲಾಗಿದೆ. ಇದರ ಮೇಲೆ ಶುಭಚಂದ್ರ ಕೃತ ಟೀಕೆಯೂ ಇದೆ. ಇದೇ ಕಲಶದ ಮೇಲೆ ಹಿಂದಿಯಲ್ಲಿ ಬನಾರಸೀದಾಸನು ತನ್ನ '**ಸಮಯಸಾರ ನಾಟಕ**' ವೆಂಬ ಹೆಸರಿನ ಆಧ್ಯಾತ್ಮಿಕ ಕಾವ್ಯವನ್ನು ರಚಿಸಿದ್ದಾನೆ. ಅದರ ವಿಷಯದಲ್ಲಿ ಅವನು '**ನಾಟಕವನ್ನು ಓದುತ್ತ ಹೋದಂತೆ ಬಾಗಿಲವು ತೆರೆದು ಬಿಡುತ್ತದೆ**'—ಎಂದು ಹೇಳಿದ್ದಾನೆ. ಅಮೃತಚಂದ್ರರ ಎರಡು ಸ್ವತಂತ್ರ ಗ್ರಂಥಗಳೂ ಕೂಡ ಇವೆ. ಒಂದು '**ಪುರುಷಾರ್ಥ ಸಿದ್ಧ್ಯುಪಾಯ**', ಎಂಬುದಾಗಿದೆ. ಇದಕ್ಕೆ ಪ್ರವಚನ ರಹಸ್ಯ ಕೋಶವೆಂದೂ ಹೇಳುತ್ತಾರೆ. ಇನ್ನೊಂದು **ತತ್ತ್ವಾರ್ಥಸಾರವು**. ಇದು ತತ್ತ್ವಾರ್ಥಸೂತ್ರದ ಪದ್ಯಾತ್ಮಕ ರೂಪಾಂತರವಾಗಿದೆ. ಇದಕ್ಕೆ ಭಾಷ್ಯವೆಂದರೂ ನಲ್ಲುವುದು. ಕೆಲವೊಂದು ಉಲ್ಲೇಖ ಹಾಗೂ ಅವತರಣಗಳಿಂದ ಅವರದೊಂದು ಪ್ರಾಕೃತ ಪದ್ಯಾತ್ಮಕ ಗ್ರಂಥವು—ಬಹುತರ ಶ್ರಾವಕಾಚಾರವು ಇರಬಹುದೆಂದು ಊಹಿಸಲಾಗುತ್ತದೆ. ಆದರೆ ಅದು ಇನ್ನೂ ಉಪಲಬ್ಧವಿಲ್ಲ.

ಅಮೃತಚಂದ್ರ ಹಾಗೂ ಜಯಸೇನರ ಟೀಕೆಗಳಲ್ಲಿ ಮೂಲ ಗ್ರಂಥಗಳ ಗಾಹೆಗಳ ಸಂಖ್ಯೆಯೂ ಭಿನ್ನ ಭಿನ್ನವಾಗಿ ಕಂಡು ಬರುತ್ತದೆ. ಅಮೃತಚಂದ್ರನಿಗೆ ಅನುಸರಿಸಿ ಪಂಚಾಸ್ತಿಕಾಯದಲ್ಲಿ ೧೭೩; ನವಯಸಾರದಲ್ಲಿ ೪೧೫, ಮತ್ತು ಪ್ರವಚನಸಾರದಲ್ಲಿ ೨೭೫ ಗಾಹೆಗಳು ಇವೆ. ಜಯಸೇನನಿಗೆ ಅನುಸರಿಸಿ ಅವುಗಳ ಸಂಖ್ಯೆಯು ಕ್ರಮದಿಂದ ೧೮೧, ೪೩೯ ಮತ್ತು ೩೧೧ ಎಂದಿದೆ.

ಈ ಮೂರು ಗ್ರಂಥಗಳ ಮೇಲೆ ಬಾಲಚಂದ್ರದೇವ ಕೃತ ಕನ್ನಡ ಟೀಕೆಗಳೂ ಸಹ ಇವೆ. ಇವು ೧೨ನೆಯ ೧೩ನೆಯ ಶತಮಾನದಲ್ಲಿ ಬರೆಯಲ್ಪಟ್ಟಿವೆ. ಇವು ಜಯಸೇನನ ಟೀಕೆಯಿಂದ ಪ್ರಭಾವಿತವಾಗಿವೆ. ಪ್ರವಚನಸಾರದ ಮೇಲೆ ಪ್ರಭಾಚಂದ್ರರು ಬರೆದ ಸರೋಜ–ಭಾಸ್ಕರ ಎಂಬ ಹೆಸರಿನ ಟೀಕೆಯೂ ಇದೆ. ಅದು ಸುಮಾರು ಹದಿನಾಲ್ಕನೆಯ ಶತಮಾನದ್ದಾಗಿದೆ. ಇದು ಉಳಿದ ಟೀಕೆಗಳಿಗಿಂತ ಹೆಚ್ಚು ಸಂಕ್ಷಿಪ್ತ

ವಾಗಿದೆ.

ಕುಂದ ಕುಂದರ ಉಳಿದ ಕೃತಿಗಳ ಪರಿಚಯವು ಚರಣಾನುಯೋಗ ವಿಷಯದ ಸಾಹಿತ್ಯದಲ್ಲಿ ಬರುತ್ತದೆ.

## ದ್ರವ್ಯಾನುಯೋಗ ವಿಷಯದ ಸಂಸ್ಕೃತ ಗ್ರಂಥಗಳು :—

ಉಮಾಸ್ವಾತಿಯ ತತ್ವಾರ್ಥಸೂತ್ರದಿಂದ ಸಂಸ್ಕೃತದಲ್ಲಿ ದ್ರವ್ಯಾನುಯೋಗ ವಿಷಯದ ಗ್ರಂಥಗಳ ರಚನೆಗೆ ಪ್ರಾರಂಭವಾಗುತ್ತದೆ. ಇದರ ರಚನಾ ಕಾಲವು ನಿಶ್ಚಿತವಿಲ್ಲ. ಇದರ ಮೇಲಿನ ಮೊಟ್ಟ ಮೊದಲಿನ ಟೀಕಾಗ್ರಂಥವು ಐದನೆಯ ಶತಮಾನದಲ್ಲಿ ರಚಿತವಾದದ್ದಿದೆ. ಅದರಿಂದ ಮೂಲ ಗ್ರಂಥದ ರಚನೆಯು ಅದಕ್ಕೂ ಪೂರ್ವದಲ್ಲಿ ಯಾವಾಗಲೋ ಆದದ್ದಿದೆ. ಇದೊಂದು ಅದ್ವಿತೀಯ ಗ್ರಂಥವಾಗಿದೆ. ಇದರ ಮೇಲೆ ದಿಗಂಬರ ಶ್ವೇತಾಂಬರ ಸಂಪ್ರದಾಯದವರಿಬ್ಬರೂ ವಿವಿಧ ಪ್ರಕಾರದ ಟೀಕಾ ಗ್ರಂಥಗಳನ್ನು ರಚಿಸಿದ್ದಾರೆ. ಈ ಗ್ರಂಥದ ರಚನೆಯು ಸೂತ್ರರೂಪದಲ್ಲಿದೆ. ಅದು ಹತ್ತು ಅಧ್ಯಾಯಗಳಲ್ಲಿ ವಿಭಾಗಗೊಂಡಿದೆ. ಮೊದಲನೆಯ ಅಧ್ಯಾಯದ ೩೩ ಸೂತ್ರಗಳಲ್ಲಿ ಸಮ್ಯಗ್ದರ್ಶನಾದಿ ರತ್ನತ್ರಯಗಳ ಉಲ್ಲೇಖ ಮಾಡಿ, ಸಮ್ಯಗ್ದರ್ಶನದ ಪರಿಭಾಷೆ, ಏಳು ತತ್ವಗಳ ನಾಮನಿರ್ದೇಶ, ಪ್ರಮಾಣ ಮತ್ತು ನಯಗಳ ಉಲ್ಲೇಖ ಹಾಗೂ ಮತಿ, ಶ್ರುತ ಮೊದಲಾದ ಐದು ಜ್ಞಾನಗಳ ಸ್ವರೂಪವನ್ನು ಹೇಳಿದೆ. ಎರಡನೆಯ ಅಧ್ಯಾಯದಲ್ಲಿ ೫೩ ಸೂತ್ರಗಳಿವೆ. ಇವುಗಳಿಂದ ಜೀವಗಳ ಭೇದೋಪಭೇದಗಳನ್ನು ವಿವರಿಸಿದೆ. ಮೂರನೆಯ ಅಧ್ಯಾಯದ ೩೯ ಸೂತ್ರಗಳಿಂದ ಅಧೋಲೋಕ ಮತ್ತು ಮಧ್ಯಲೋಕದ ವರ್ಣನೆಯನ್ನು ಮಾಡಲಾಗಿದೆ ನಾಲ್ಕನೆಯ ಅಧ್ಯಾಯದ ೪೨ ಸೂತ್ರಗಳಿಂದ ದೇವಲೋಕವನ್ನು ವರ್ಣಿಸಲಾಗಿದೆ. ಐದನೆಯ ಅಧ್ಯಾಯದಲ್ಲಿ ಆರು ದ್ರವ್ಯಗಳನ್ನು ೪೨ ಸೂತ್ರಗಳಿಂದ ವಿವರಿಸಲಾಗಿದೆ. ಅದರಲ್ಲಿಯೇ ಏಳು ತತ್ವಗಳಲ್ಲಿಯ ಮೊದಲಿನ ಎರಡು ತತ್ವಗಳಾದ ಜೀವ ಮತ್ತು ಅಜೀವ ತತ್ವದ ಪ್ರರೂಪಣೆಯನ್ನೂ ಕೂಡ ಮಾಡಲಾಗಿದೆ. ಆರನೆಯ ಅಧ್ಯಾಯದ ೨೭ ಸೂತ್ರಗಳಿಂದ ಆಸ್ರವ ತತ್ವದ ನಿರೂಪಣೆಯನ್ನು ಪೂರ್ಣಗೊಳಿಸಿದ್ದಾನೆ. ಅದರಲ್ಲಿ ಶುಭಾಶುಭ ಪರಿಣಾಮಗಳಿಂದ ಆಗುವ ಪುಣ್ಯ ಪಾಪರೂಪ ಕರ್ಮಾಸ್ರವದ ವರ್ಣನೆಯಿದೆ. ಏಳನೆಯ ಅಧ್ಯಾಯದಲ್ಲಿ ಅಹಿಂಸಾದಿ ವ್ರತಗಳು ಹಾಗೂ ಅದಕ್ಕೆ ಸಂಬಂಧಿಸಿದ ಭಾವನೆಗಳನ್ನು ೩೯ ಸೂತ್ರಗಳಲ್ಲಿ ವರ್ಣಿಸಲಾಗಿದೆ. ಎಂಟನೆಯ ಅಧ್ಯಾಯದ ೨೬ ಸೂತ್ರಗಳಲ್ಲಿ ಕರ್ಮಬಂಧದ ಮಿಥ್ಯಾದರ್ಶನಾದಿ ಕಾರಣಗಳನ್ನೂ ಪ್ರಕೃತಿ, ಸ್ಥಿತಿ ಆದಿ ವಿಧಿಗಳನ್ನು ಜ್ಞಾನಾವರಣೀಯವೇ ಮೊದಲಾದ ಎಂಟುಕರ್ಮಗಳನ್ನೂ ಅವುಗಳ ಉಪಭೇದಗಳನ್ನೂ ಸ್ಪಷ್ಟಗೊಳಿಸಲಾಗಿದೆ. ಒಂಭತ್ತನೆಯ ಅಧ್ಯಾಯದಲ್ಲಿ ೪೭ ಸೂತ್ರಗಳಿಂದ ಹಿಂದಿನ ಕರ್ಮಗಳನ್ನು ತಡೆಯುವ ಉಪಾಯ ರೂಪ ಸಂವರ ಹಾಗೂ ಕಟ್ಟಿದ ಕರ್ಮಗಳನ್ನು ವಿನಾಶಗೊಳಿಸುವ ನಿರ್ಜರಾ ತತ್ವಗಳನ್ನು ತಿಳಿಸಿಕೊಡಲಾಗಿದೆ. ಹತ್ತನೆಯ ಅಧ್ಯಾಯದ ಒಂಭತ್ತು ಸೂತ್ರಗಳಿಂದ

ಕರ್ಮದ ಕ್ಷಯದಿಂದ ಉತ್ಪನ್ನವಾಗುವ ಮೋಕ್ಷದ ಸ್ವರೂಪವನ್ನು ವಿವರಿಸಿದೆ. ಈ ಪ್ರಕಾರ ಚಿಕ್ಕ ಚಿಕ್ಕ ೩೫೭ ಸೂತ್ರಗಳಿಂದ ಜೈನಧರ್ಮದ ಮೂಲಭೂತ ಏಳು ತತ್ವಗಳ ವಿಧಿಪೂರ್ವಕ ನಿರೂಪಣೆಯನ್ನು ಈ ಗ್ರಂಥದಲ್ಲಿ ಮಾಡಿದೆ. ಇದರಿಂದ ಈ ಗ್ರಂಥಕ್ಕೆ ಸಮಸ್ತ ಜೈನ ಸಿದ್ಧಾಂತದ ಪುಂಜವೆಂದು ಹೇಳುತ್ತಾರೆ. ಇದೇ ಕಾರಣದಿಂದ ಈ ಗ್ರಂಥವು ಲೋಕಪ್ರಿಯತೆ ಹಾಗೂ ಸುವಿಸ್ತೃತ ಪ್ರಚಾರದ ದೃಷ್ಟಿಯಿಂದ ಜೈನ ಸಾಹಿತ್ಯದಲ್ಲಿ ಅದ್ವಿತೀಯವೆನಿಸಿದೆ. ದಿಗಂಬರ ಪರಂಪರೆಯಲ್ಲಿ ಇದರ ಮೇಲೆ ದೇವನಂದಿ ಪೂಜ್ಯಪಾದ ಕೃತ 'ಸರ್ವಾರ್ಥ ಸಿದ್ಧಿ' (೫ನೆಯ ಶತಮಾನ). ಅಕಲಂಕ ಕೃತ 'ತತ್ವಾರ್ಥ ರಾಜವಾರ್ತಿಕ' (ಎಂಟನೆಯ ಶತಮಾನ) ಹಾಗೂ ವಿದ್ಯಾನಂದಿ ಕೃತ 'ತಾತ್ವಾರ್ಥ ಶ್ಲೋಕವಾರ್ತಿಕ' (ಒಂಭತ್ತನೆಯ ಶತಮಾನ). ಇವಲ್ಲದೆ ಶ್ವೇತಾಂಬರ ಪರಂಪರೆಯಲ್ಲಿ ಸ್ವೋಪಜ್ಞಭಾಷ್ಯ, ಮತ್ತು ಸಿದ್ಧಸೇನ ಗಣಿಕೃತ ಟೀಕೆ (೮ನೆಯ ಶತಮಾನ) ಇವೆ. ಈ ಟೀಕೆಗಳ ಮುಖಾಂತರ ಮೂಲ ಗ್ರಂಥದಲ್ಲಿ ಸೂತ್ರಗಳಿಂದ ಸಂಗ್ರಹವಾಗಿ ಸೂಚಿಸಿದ ವಿಷಯಗಳನ್ನು ಚೆನ್ನಾಗಿ ವಿಸ್ತರಿಸಲಾಗಿದೆ. ಇದರ ಹೊರತಾಗಿಯೂ ಕೂಡ ಈ ಗ್ರಂಥದ ಮೇಲೆ ಅನೇಕ ಚಿಕ್ಕ ದೊಡ್ಡ ಟೀಕಾ ಗ್ರಂಥಗಳು ಇತ್ತೀಚಿನ ಕಾಲದಲ್ಲಿ ನಿರ್ಮಾಣವಾಗಿವೆ. ತತ್ವಾರ್ಥಸೂತ್ರದ ವಿಷಯಗಳನ್ನು ತಕ್ಕೊಂಡು ಅದಕ್ಕೆ ಭಾಷ್ಯವೆನಿಸುವಂತೆ ಪದ್ಯ ಗ್ರಂಥಗಳನ್ನೂ ಸಹ ರಚಿಸಲಾಗಿದೆ. ಇಂಥವುಗಳಲ್ಲಿ ಅಮೃತ ಚಂದ್ರಸೂರಿ ಕೃತ ತತ್ವಾರ್ಥಸಾರವು ವಿಶೇಷ ಉಲ್ಲೇಖನೀಯವಾಗಿದೆ.

**ನ್ಯಾಯ ವಿಷಯದ ಪ್ರಾಕೃತ ಜೈನ ಸಾಹಿತ್ಯ :—**

ಜೈನ ಆಗಮ ಸಮ್ಮತ ತತ್ವಜ್ಞಾನದ ದೃಷ್ಟಿಯನ್ನು ಅನೇಕ ಪ್ರಕಾರದ ನ್ಯಾಯ ಶೈಲಿಯಲ್ಲಿ ಮಾಡಲಾಗಿದೆ. ಅದನ್ನೂ ಸ್ಯಾದ್ವಾದ, ಅನೇಕಾಂತವಾದ, ನಯವಾದ ಮೊದಲಾದ ಹೆಸರುಗಳಿಂದ ಸೂಚಿಸಲಾಗುತ್ತದೆ. ಈ ನ್ಯಾಯ ಶೈಲಿಗಳ ಉಲ್ಲೇಖವು ಸ್ಫುಟ ರೂಪದಿಂದ ಜೈನ ಸಾಹಿತ್ಯದಲ್ಲಿ ಅಲ್ಲಲ್ಲಿ ಆದದ್ದು ಕಂಡು ಬರುತ್ತದೆ. ಆದರೆ ಈ ವಿಷಯದ ಮೇಲೆ ಸ್ವತಂತ್ರ ಗ್ರಂಥಗಳು ನಾಲ್ಕನೆಯ ಐದನೆಯ ಶತಮಾನಗಳಲ್ಲಿ ರಚಿಸಿದ್ದು ದೊರೆಯುತ್ತವೆ. ಜೈನ ನ್ಯಾಯವನ್ನು ಪ್ರಾಕೃತ ಭಾಷೆಯಲ್ಲಿ ಪ್ರತಿಪಾದನ ಮಾಡುವ ಎಲ್ಲಕ್ಕೂ ಮೊದಲಿನ ಗ್ರಂಥವು ಸಿದ್ಧಸೇನ ಕೃತ 'ಸಮ್ಮಇಸುತ್ತ' (ಸನ್ಮತಿ ಅಥವಾ ಸಮ್ಮತಿ ತರ್ಕ) ಅಥವಾ ಸನ್ಮತಿ ಪ್ರಕರಣವಾಗಿದೆ. ಸನ್ಮತಿ ತರ್ಕಕ್ಕೂ ಕೂಡ ದಿಗಂಬರ ಹಾಗೂ ಶ್ವೇತಾಂಬರ ಸಂಪ್ರದಾಯಗಳೆರಡರಲ್ಲಿಯೂ ಆಚಾರ್ಯರ ಮನ್ನಣೆಯಿದೆ; ಪ್ರಮಾಣ ಗ್ರಂಥವೆಂದು ಸ್ವೀಕರಿಸಿದ್ದಾರೆ. ಷಟ್ ಖಂಡಾಗಮದ ಧವಲ ಟೀಕೆಯಲ್ಲಿ ಇದರ ಉಲ್ಲೇಖವು ಲಭಿಸುತ್ತದೆ ; ಉದ್ಧರಣಗಳೂ ದೊರೆಯುತ್ತವೆ. ಹಾಗೆಯೇ ವಾದಿರಾಜನೂ ತನ್ನ ಪಾರ್ಶ್ವನಾಥ ಚರಿತ (ಶಕ ೯೪೭)ದಲ್ಲಿ ಇದರ ಮತ್ತು ಇದರ ಮೇಲಿನ ಸನ್ಮತಿ (ಸುಮತಿದೇವ) ಕೃತ ವಿವೃತ್ತಿಯ ಉಲ್ಲೇಖ ಮಾಡಲಾಗಿದೆ. ಇದರ ರಚನಾ ಕಾಲವು ಕ್ರಿ. ಶ. ನಾಲ್ಕನೆಯ ಐದನೆಯ ಶತಮಾನವಾಗಿದೆ. ಇದರಲ್ಲಿ ಮೂರು

ಕಾಂಡಗಳಿವೆ. ಅದರಲ್ಲಿ ಕ್ರಮವಾಗಿ ೫೪, ೪೩ ಮತ್ತು ೬೯ ಅಥವಾ ೭೦ ಗಾಹೆಗಳು ಇವೆ. ಇದರ ಮೇಲೆ ಅಭಯದೇವ ಕೃತ ೨೫೦೦೦ ಶ್ಲೋಕ ಪ್ರಮಾಣ 'ತತ್ವಬೋಧ ವಿಧಾಯಿನಿ' ಎಂಬ ಹೆಸರಿನ ಟೀಕೆಯಿದೆ. ಇದರಲ್ಲಿ ಜೈನ ನ್ಯಾಯದ ಜೊತೆಯಲ್ಲಿಯೇ ಜೈನ ದರ್ಶನದ ಸುಂದರ ಪ್ರತಿಪಾದನೆಯೂ ಇದೆ. ಇದಕ್ಕೂ ಮುಂಚಿನ ಮಲ್ಲವಾದಿ ಕೃತ ಟೀಕೆಯ ಉಲ್ಲೇಖವೂ ದೊರೆಯುತ್ತದೆ. ಪ್ರಾಕೃತದಲ್ಲಿ ಸ್ಯಾದ್ವಾದ ಮತ್ತು ನಯದ ಪ್ರರೂಪಣೆಯನ್ನು ಮಾಡುವಂಥ ಇನ್ನೊಬ್ಬ ಆಚಾರ್ಯನು ದೇವಸೇನನಾಗಿದ್ದಾನೆ. ಇವನು ಹತ್ತನೆಯ ಶತಮಾನದವನು. ಇವನ ಎರಡು ಕೃತಿಗಳು ಉಪಲಬ್ಧವಾಗಿವೆ. ಒಂದು ' ಲಘು-ನಯಚಕ್ರ '. ಇದರಲ್ಲಿ ೮೭ ಗಾಹೆಗಳಿಂದ ದ್ರವ್ಯಾರ್ಥಿಕ ಮತ್ತು ಪರ್ಯಾರ್ಥಿಕ ಈ ಎರಡು ಹಾಗೂ ಅವುಗಳ ನೈಗಮಾದಿ ಒಂಬತ್ತು ನಯಗಳನ್ನು ಭೇದೋಪಭೇದಗಳನ್ನು ಉದಾಹರಣೆ ಸಹಿತ ತಿಳಿಸಿಕೊಡಲಾಗಿದೆ. ಇವನ ಇನ್ನೊಂದು ಕೃತಿಯು ಬೃಹನ್ ನಯಚಕ್ರವಾಗಿದೆ. ಇದರಲ್ಲಿ ೪೨೩ ಗಾಹೆಗಳಿವೆ. ಇದರಲ್ಲಿ ನಯ ಮತ್ತು ನಿಕ್ಷೇಪಗಳ ಸ್ವರೂಪವನ್ನು ವಿಸ್ತಾರವಾಗಿ ವಿವೇಚಿಸಲಾಗಿದೆ. ಈ ಗ್ರಂಥದ ಕೊನೆಯ ೬–೭ ಗಾಹೆಗಳಲ್ಲಿ ಲೇಖಕನು ಒಂದು ಮಹತ್ವಪೂರ್ಣವಾದ ಸಂಗತಿಯನ್ನು ಹೇಳಿದ್ದಾನೆ:— ಆರಂಭದಲ್ಲಿ ಅವನು ' ದವ್ವ-ಸಹಾವ-ಪಯಾಸ ' (ದ್ರವ್ಯ ಸ್ವಭಾವ ಪ್ರಕಾಶ) ಎಂಬ ಹೆಸರಿನಿಂದ ಈ ಗ್ರಂಥದ ರಚನೆಯನ್ನು ದೋಹಾ ಬಂಧದಲ್ಲಿ ಮಾಡಿದ್ದನು. ಆದರೆ ಅವನ ಮಿತ್ರನಾದ ಶುಭಂಕರನು ಇದನ್ನು ಕೇಳಿ ನಕ್ಕು ನುಡಿದನು–' ಈ ವಿಷಯವು ಈ ಛಂದದಲ್ಲಿ ಶೋಭಿಸುವದಿಲ್ಲ, ಇದನ್ನು ಗಾಹೆಗಳ ರೂಪದಲ್ಲಿ ರಚಿಸು.' ಹೀಗಾಗಿ ಅದನ್ನು ಅವನ ಮಾಇಲ್ಲ–ಧವಲ ಎಂಬ ಹೆಸರಿನ ಶಿಷ್ಯನು ಗಾಹೆಗಳ ರೂಪದಲ್ಲಿ ಪರಿವರ್ತಿಸಿಬಿಟ್ಟನು. ಸ್ಯಾದ್ವಾದ ಮತ್ತು ನಯವಾದದ ಸ್ವರೂಪ, ಅವುಗಳ ಪಾರಿಭಾಷಿಕ ರೂಪದಲ್ಲಿ, ವ್ಯವಸ್ಥಿತವಾಗಿ ತಿಳಿದುಕೊಳ್ಳಲಿಕ್ಕೆ ದೇವಸೇನನ ಈ ಕೃತಿಗಳು ಬಹು ಉಪಯುಕ್ತವಾಗಿವೆ. ಇವನ ನ್ಯಾಯ ವಿಷಯದ ಇನ್ನೊಂದು ರಚನೆಯು ' ಆಲಾಪ-ಪದ್ಧತಿ ' ಎಂಬುದಾಗಿದೆ. ಇದು ಸಂಸ್ಕೃತ ಗದ್ಯದಲ್ಲಿ ಇದೆ. ಜೈನ ನ್ಯಾಯದಲ್ಲಿ ಸರಳ ರೂಪದಿಂದ ಪ್ರವೇಶ ಹೊಂದಲಿಕ್ಕೆ ಈ ಚಿಕ್ಕ ಗ್ರಂಥ ಬಹಳ ಸಹಾಯಕವೆಂದು ಸಿದ್ಧವಾಗಿವೆ. ಇದರ ರಚನೆಯು ನಯಚಕ್ರದ ತರುವಾಯ ನಯಗಳ ಸುಬೋಧ ವ್ಯಾಖ್ಯಾನ ರೂಪದಲ್ಲಿ ಆಗಿದೆ.

### ನ್ಯಾಯ ವಿಷಯದ ಸಂಸ್ಕೃತ ಜೈನ ಸಾಹಿತ್ಯ :—

ಜೈನ ನ್ಯಾಯದ ಈ ಪ್ರಾಚೀನ ಶೈಲಿಯನ್ನು ಪರಿಪುಷ್ಟಗೊಳಿಸಿದ ಶ್ರೇಯವು ಆಚಾರ್ಯ ಸಮಂತಭದ್ರನಿಗೆ (೫ನೆಯ ೬ನೆಯ ಶತಮಾನ) ಇದೆ. 'ಇವನ ನ್ಯಾಯ ವಿಷಯಕ್ಕೆ ಸಂಬಂಧಿಸಿದ ಆಪ್ತಮೀಮಾಂಸಾ (೧೧೪ ಶ್ಲೋಕ) ಗ್ರಂಥಕ್ಕೆ ದೇವಾಗಮ ಸ್ತೋತ್ರವೆಂದೂ ಹೆಸರಿದೆ. ಇವನ ಇನ್ನೊಂದು ಕೃತಿಯು ' ಯುಕ್ತ್ಯನುಶಾಸನ ' (೬೪ ಶ್ಲೋಕ)ವು. ಈ ಎರಡೂ ಕೃತಿಗಳೂ ಉಪಲಬ್ಧವಿವೆ. ಇವೆರಡು ಕೃತಿಗಳನ್ನು

ಸ್ತುತಿಗಳ ರೂಪದಲ್ಲಿ ರಚಿಸಲಾಗಿದೆ. ಇವುಗಳಲ್ಲಿ ವಿಷಯದ ಊಹಾಪೋಹವನ್ನೂ ಖಂಡನ-ಮಂಡನವನ್ನೂ ಸ್ಯಾದ್ವಾದದ ಸಪ್ತಭಂಗೀ ಹಾಗೂ ನಯಗಳ ಆಶ್ರಯದಿಂದ ಮಾಡಲಾಗಿದೆ. ಅದರಲ್ಲಿ ವಿಶೇಷವಾಗಿ ಏಕಾಂತವಾದದ ಖಂಡನವನ್ನು ಮಾಡಿ, ಅನೇಕಾಂತವಾದವನ್ನು ಪುಷ್ಟೀಕರಿಸಲಾಗಿದೆ. ಇದೇ ಅನೇಕಾಂತವಾದದ ಆಧಾರದ ಮೇಲೆ ಯುಕ್ತ್ಯನುಶಾಸನದಲ್ಲಿ ಮಹಾವೀರನ ಶಾಸನವನ್ನು ಸರ್ವೋದಯ ತೀರ್ಥವೆಂದು ಹೇಳಿದ್ದಾನೆ. ದಿಗಂಬರ ಸಂಪ್ರದಾಯದಲ್ಲಿ ಈ ಗ್ರಂಥಕ್ಕೆ ಬಹಳ ಗೌರವದ ಸ್ಥಾನವಿದೆ. ಇದರ ಮೇಲೆ ವಿಸ್ತಾರವಾದ ಟೀಕಾ ಗ್ರಂಥಗಳೂ ಕೂಡ ನಿರ್ಮಾಣವಾಗಿವೆ. ಎಲ್ಲಕ್ಕೂ ಪ್ರಾಚೀನವಾದ ಟೀಕೆಯು ಭಟ್ಟಾಕಲಂಕ ಕೃತ ಅಷ್ಟಶತೀ ಎಂಬುದಾಗಿದೆ. ಇದನ್ನು ಆತ್ಮಸಾತ್ ಮಾಡಿಕೊಳ್ಳುತ್ತ ವಿದ್ಯಾನಂದಿ ಆಚಾರ್ಯನು ತನ್ನ ಅಷ್ಟಸಹಸ್ರೀ ಎಂಬ ಟೀಕಾ ಗ್ರಂಥವನ್ನು ರಚಿಸಿದನು. ಈ ಟೀಕೆಗೆ ಆಪ್ತಮೀಮಾಂಸಾಲಂಕೃತಿ ಮತ್ತು ದೇವಾಗಮಾಲಂಕೃತಿ ಎಂಬ ಹೆಸರುಗಳು ಸಹ ಕಂಡು ಬರುತ್ತವೆ. ಉಳಿದ ಕೆಲವು ಟೀಕೆಗಳು ವಸುನಂದಿ ಕೃತ ದೇವಾಗಮ ವೃತ್ತಿ (೧೧ನೆಯ ಶತಮಾನ) ಹಾಗೂ ಲಘು ಸಮಂತಭದ್ರ ಕೃತ ಅಷ್ಟ ಸಹಸ್ರೀ ವಿಷಮಪದ-ತಾತ್ಪರ್ಯ ಟೀಕಾ (೧೩ನೆಯ ಶತಮಾನ) ಇವು ಇವೆ. ಇನ್ನೊಂದು ಉಪಾಧ್ಯಾಯ ಯಶೋವಿಜಯ ಕೃತ ಟಿಪ್ಪಣಿಯೂ ಉಪಲಬ್ಧವಿದೆ. ಯುಕ್ತ್ಯನುಶಾಸನದ ಮೇಲೆ ವಿದ್ಯಾನಂದೀ ಆಚಾರ್ಯ ಕೃತ ಟೀಕೆಯೊಂದು ಕಂಡು ಬರುತ್ತದೆ. ಈ ಟೀಕೆಯ ಪ್ರಸ್ತಾವನೆಯಲ್ಲಿ, ಸಮಂತ ಭದ್ರಸ್ವಾಮಿಯು "ಆಪ್ತಮೀಮಾಂಸೆಯಲ್ಲಿ 'ಅನ್ಯಯೋಗ-ವ್ಯವಚ್ಛೇದ'ದ ಮೂಲಕ ತೀರ್ಥಂಕರ ಭಗವಾನ್‌ನನ್ನು ವ್ಯವಸ್ಥಾಪಿತಗೊಳಿಸಿದನು, ಆ ಮೇಲೆ ಯುಕ್ತ್ಯನುಶಾಸನದ ರಚನೆಯನ್ನೂ ಮಾಡಿದನು"—ಎಂದು ಹೇಳಿದೆ. ಇದರಿಂದ ನಮಗೆ ಆ ಎರಡು ಗ್ರಂಥಗಳ ರಚನಾಕ್ರಮವು ತಿಳಿದುಬರುತ್ತದೆ. ವಿದ್ಯಾನಂದಿಯು ಇಲ್ಲಿ ಯಾವ ಉದ್ದೇಶದಿಂದ ಅನ್ಯಯೋಗ-ವ್ಯವಚ್ಛೇದ ಪದವನ್ನೂ ಆಪ್ತಮೀಮಾಂಸೆಯ ಸಂಬಂಧದಲ್ಲಿ ಪ್ರಯೋಗಿಸಿದ್ದಾನೆಯೋ ಅದರ ಪ್ರಭಾವವು ಮುಂದಿನ ಕಾಲದಲ್ಲಿ ಬಹಳವಾಯಿತು. ಹೇಮಚಂದ್ರನಂತೂ ತನ್ನ ಒಂದು ಸ್ತುತಿರೂಪ ರಚನೆಗೆ ಇದೇ ಹೆಸರನ್ನು ಇಟ್ಟಿದ್ದಾನೆ. ಅದರ ಮೇಲೆ ಮಲ್ಲಿಷೇಣನು ಸ್ಯಾದ್ವಾದ ಮಂಜರೀ ಎಂಬ ಟೀಕೆಯನ್ನು ಬರೆದನು. ತನ್ನ ಇನ್ನೊಂದು ಸ್ತುತಿರೂಪ ಗ್ರಂಥಕ್ಕೆ ಹೇಮಚಂದ್ರನು 'ಅಯೋಗ ವ್ಯವಚ್ಛೇದಿಕಾ' ಎಂಬ ಹೆಸರನ್ನು ಕೊಟ್ಟನು. ಸಮಂತ ಭದ್ರನು ರಚಿಸಿದ ಜೀವಸಿದ್ಧಿ ಮತ್ತು ತತ್ತ್ವಾನುಶಾಸನ ಎಂಬ ಇನ್ನೆರಡು ಗ್ರಂಥಗಳು ಇರಬೇಕು. ಅವುಗಳ ಹೆಸರಿನ ಉಲ್ಲೇಖವು ಮಾತ್ರ ಲಭಿಸುತ್ತದೆ. ಗ್ರಂಥಗಳು ದೊರೆತಿಲ್ಲ.

ಸಂಸ್ಕೃತದಲ್ಲಿ ಜೈನ ನ್ಯಾಯ ವಿಷಯಕ್ಕೆ ಸಂಕ್ಷಿಪ್ತತಮ ರಚನೆಯು ಸಿದ್ಧಸೇನ ಕೃತ ನ್ಯಾಯಾವತಾರವು ಉಪಲಬ್ಧವಾಗಿದೆ. ಇದರಲ್ಲಿ ಪ್ರತ್ಯಕ್ಷ, ಅನುಮಾನ ಮೊದಲಾದ ಪ್ರಮಾಣ ಭೇದಗಳ ಪ್ರತಿಪಾದನೆಯಿಂದ ಜೈನನ್ಯಾಯಕ್ಕೆ ಒಂದು ಹೊಸ ತಿರುವನ್ನೂ ಕೊಡಲಾಗಿದೆ. ಇದಕ್ಕೂ ಪೂರ್ವದಲ್ಲಿ ಪ್ರಮಾಣರೂಪದಲ್ಲಿ ಮತಿ, ಶ್ರುತ,

ಅವಧಿ, ಮನಃ ಪರ್ಯಾಯ ಮತ್ತು ಕೇವಲ ಈ ಐದು ಜ್ಞಾನಭೇದಗಳನ್ನು 'ಮಾಡ ಲಾಗುತ್ತಿತ್ತು. ಇವುಗಳಲ್ಲಿ ಮೊದಲಿನವೆರಡು ಪರೋಕ್ಷ ಮತ್ತು ಉಳಿದುವು ಮೂರು ಪ್ರತ್ಯಕ್ಷ ಎಂದು ಮನ್ನಿಸಲಾಗಿತ್ತು. ಇದಕ್ಕನುಸರಿಸಿ ಇಂದ್ರಿಯಜನ್ಯ ಸಮಸ್ತ ಜ್ಞಾನವು ಪರೋಕ್ಷವೆಂದು ತಿಳಿಯುತ್ತಿದ್ದರು. ಆದರೆ ವೈದಿಕ ಮತ್ತು ಬೌದ್ಧ ಪರಂ ಪರೆಗೆ ಅನುಸರಿಸಿ ನ್ಯಾಯ ಶಾಸ್ತ್ರಗಳಲ್ಲಿ ಇಂದ್ರಿಯ ಮತ್ತು ಪದಾರ್ಥಗಳ ಸನ್ನಿಕರ್ಷ -ದಿಂದ ಉತ್ಪನ್ನವಾಗುವ ಜ್ಞಾನಕ್ಕೂ ಕೂಡ ಪ್ರತ್ಯಕ್ಷವೆಂದು ತಿಳಿದು ಮುನ್ನಡೆಯ ಲಾಗಿದೆ. ಈ ಜ್ಞಾನಕ್ಕೆ ಬಹುತರವಾಗಿ ಜಿನಭದ್ರಗಣಿಯು ತನ್ನ ವಿಶೇಷಾವಶ್ಯಕ ಭಾಷ್ಯದಲ್ಲಿ ಮೊಟ್ಟ ಮೊದಲಸಲ ಪರೋಕ್ಷ ಎನ್ನುವ ಸ್ಥಾನದಲ್ಲಿ 'ಸಾಂವ್ಯವಹಾರಿಕ ಪ್ರತ್ಯಕ್ಷ' ವೆಂದು ಸಂಜ್ಞೆಯನ್ನು ನೀಡಿದ್ದುಂಟು. ಇದೇ ಆಧಾರದ ಮೇಲೆ ತರುವಾ ಯದ ನ್ಯಾಯಗ್ರಂಥಗಳಲ್ಲಿ ಪ್ರಮಾಣವನ್ನು ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಈ ಮೂರು ಅಥವಾ ಉಪಮಾನವನ್ನೂ ಸೇರಿಸಿ ನಾಲ್ಕು ಭೇದಗಳಲ್ಲಿ ವಿಭಜಿಸಿ ವಿವೇಚನೆ ಯನ್ನು ಮಾಡಲು ಪ್ರಾರಂಭಿಸಿದ್ದುಂಟು. ನ್ಯಾಯಾವತಾರದಲ್ಲಿ ಒಟ್ಟು ೩೨ ಕಾರಿಕೆ ಗಳು ಇವೆ. ಇವುಗಳಿಂದ ಮೇಲ್ಕಾಣಿಸಿದ ಮೂರು ಪ್ರಮಾಣಗಳನ್ನೂ ಸಂಗ್ರಹವಾಗಿ ಪ್ರತಿವಾದಿಸಲಾಗಿದೆ ಇದೇ ವಿಷಯದ ವಿಸ್ತಾರವು, ನ್ಯಾಯಾವತಾರದ ಹರಿಭದ್ರ ಸೂರಿಕೃತ (೮ನೆಯ ಶತಮಾನ) ವೃತ್ತಿ, ಸಿದ್ಧರ್ಷಿಗಣೀಕೃತ (೧೦ನೆಯ ಶತಮಾನ) ಟೀಕಾ, ಹಾಗೂ ದೇವಭದ್ರಸೂರಿ ಕೃತ (೧೨ನೆಯ ಶತಮಾನ) ಟಿಪ್ಪಣಿಗಳಲ್ಲಿ ನಮಗೆ ಕಂಡುಬರುತ್ತದೆ. ಶಾಂತಿಸೂರಿಯು (೧೧ನೆಯ ಶತಮಾನ) ನ್ಯಾಯಾವತಾ ರದ ಪ್ರಥಮ ಕಾರಿಕೆಯ ಮೇಲೆ ಸಟೀಕಾ ಪದ್ಯ ಬಂಧ ವಾರ್ತಿಕವನ್ನು ರಚಿಸಿ ದ್ದಾನೆ. ಇದೇ ಪ್ರಥಮ ಕಾರಿಕೆಯ ಮೇಲೆ ಜಿನೇಶ್ವರಸೂರಿಯು (೧೧ನೆಯ ಶತ ಮಾನ) ತನ್ನ ಪದ್ಯಬಂಧ ಪ್ರಮಾಲಕ್ಷಣ ಎಂಬ ಹೆಸರಿನ ಗ್ರಂಥವನ್ನು ಬರೆದನು, ಸ್ವತಃ ಅದರ ಮೇಲೆ ವ್ಯಾಖ್ಯೆಯನ್ನೂ ಕೂಡ ನಿರ್ಮಿಸಿದನು.

ಜೈನ ನ್ಯಾಯಕ್ಕೆ ಅಕಲಂಕನ ಕೊಡುಗೆಯು ಬಹು ಮಹತ್ವಪೂರ್ಣವಾದು ದಾಗಿದೆ. ಅನೇಕ ಶಿಲಾಲೇಖ ಹಾಗು ಪ್ರಶಸ್ತಿಗಳ ಆಧಾರದಿಂದ ಅಕಲಂಕನ ಕಾಲವು ಕ್ರಿ ಶ. ಎಂಟನೆಯ ಶತಮಾನದ ಉತ್ತರಾರ್ಧ, ವಿಶೇಷವಾಗಿ ಕ್ರಿ. ಶ. ೭೨೦–೭೮೦ ಎಂದು ಸಿದ್ಧವಾಗಿದೆ. ಅವನು ತತ್ವಾರ್ಥಸೂತ್ರ ಹಾಗೂ ಆಪ್ತಮೀಮಾಂಸಾ ಗ್ರಂಥ ಗಳ ಮೇಲೆ ಬರೆದ ಟೀಕೆಗಳ ಉಲ್ಲೇಖವನ್ನು ಮೇಲೆ ಮಾಡಲಾಗಿದೆ. ಆ ಗ್ರಂಥಗಳಲ್ಲಿ ನಮಗೆ ಒಬ್ಬ ಬಹು ದೊಡ್ಡ ನೈಯಾಯಿಕನ ತರ್ಕ ಶೈಲಿಯ ಸ್ಪಷ್ಟ ದರ್ಶನವು ಆಗು ತ್ತದೆ. ಅಕಲಂಕನ ನ್ಯಾಯ ವಿಷಯದ ನಾಲ್ಕು ಕೃತಿಗಳು ಉಪಲಬ್ಧವಾಗಿವೆ. ಮೊದ ಲನೆಯ ಕೃತಿಯಾದ **ಲಘೀಯಸ್ತ್ರಯದಲ್ಲಿ** ಪ್ರಮಾಣ ಪ್ರವೇಶ, ನಯಪ್ರವೇಶ, ಪ್ರವಚನ–ಪ್ರವೇಶ ಎಂಬ ಹೆಸರಿನ ಮೂರು ಪ್ರಕರಣಗಳಿವೆ. ಇವು ಮೊದಲು ಮೂರೂ ಸ್ವತಂತ್ರ ಗ್ರಂಥಗಳಿದ್ದುವು. ಮುಂದೆ ಮೂರನ್ನೂ ಏಕತ್ರಿತ ಗ್ರಥಿತಗೊಳಿಸಿ ಲಘೀಯಸ್ತ್ರಯವೆಂಬ ಹೆಸರಿನಿಂದ ಪ್ರಸಿದ್ಧಿಸಲಾಯಿತು. ಪ್ರಮಾಣ, ನಯ ಮತ್ತು

ನಿಕ್ಷೇಪ ಈ ಮೂರನ್ನೂ ತಾರ್ಕಿಕ ಶೈಲಿಯಿಂದ ಒತ್ತಟ್ಟಿಗೆ ವಿವರಿಸುವ ಗ್ರಂಥವು ಇದೇ ಮೊದಲಿನದಾಗಿದೆ. ಈ ಗ್ರಂಥದಲ್ಲಿ ಅವನು ಪ್ರತ್ಯಕ್ಷದ ಸ್ವತಂತ್ರ ಲಕ್ಷಣವನ್ನು ಸ್ಥಿರಗೊಳಿಸಿದನು. (೧, ೩) ತಾರ್ಕಿಕ ವರೆಗಲ್ಲಿನಿಂದ ಕ್ಷಣಿಕವಾದದ ಖಂಡನ ಮಾಡಿದನು. (೨, ೧) ತರ್ಕದ ವಿಷಯ, ಸ್ವರೂಪ, ಉಪಯೋಗ ಮೊದಲಾದವುಗಳನ್ನು ಸ್ಥಿರಗೊಳಿಸಿದನು ; ಇತ್ಯಾದಿ. ಇದರ ಮೇಲೆ ಸ್ವತಃ ಕರ್ತೃವಿನದೇ ವಿವೃತ್ತಿ ಎಂಬ ಹೆಸರಿನ ಟೀಕೆಯು ದೊರೆಯುತ್ತದೆ. ಇದರ ಮೇಲೆಯೇ ಪ್ರಭಾಚಂದ್ರನು **ಲಘೀಯಸ್ತ್ರಯಾಲಂಕಾರ** ಎಂಬ ಹೆಸರಿನ ವಿಸ್ತಾರವಾದ ಟೀಕೆಯನ್ನು ಬರೆದನು. ಅದು **ನ್ಯಾಯಕುಮುದ ಚಂದ್ರ** ಎಂದು ಪ್ರಸಿದ್ಧವಿದೆ. ಇದು ಜೈನ ನ್ಯಾಯದ ಬಹು ದೊಡ್ಡ ಪ್ರಾಮಾಣಿಕ ಗ್ರಂಥವೆಂದು ಮನ್ನಣೆಗೆ ಪಾತ್ರವಾಗಿದೆ. ಇದರ ಕಾಲವು ಕ್ರಿ.ಶ. ೧೧ನೆಯ ಶತಮಾನದ್ದಾಗಿದೆ. ಅಕಲಂಕನ ಎರಡನೆಯ ಗ್ರಂಥವು ' ನ್ಯಾಯ ವಿನಿಶ್ಚಯ ' ಎಂದಿದೆ. ಇದರ ಮೇಲೆಯೂ ಕೂಡ ಸ್ವತಃ ಲೇಖಕನು ವೃತ್ತಿಯೊಂದನ್ನು ಬರೆದಿದ್ದಾನೆ. ಮೂಲ ರಚನೆಯ ಸ್ವತಂತ್ರ ಪ್ರತಿಯು ಯಾವುದೂ ಲಭ್ಯವಿಲ್ಲ. ಆದರೆ ಅದರ ಉದ್ಧಾರವನ್ನು ವಾದಿರಾಜಸೂರಿಯು (೧೩ ನೆಯ ಶತಮಾನ) ರಚಿಸಿದ ಅದರ ಮೇಲಿನ ವಿವರಣ ಎಂಬ ಟೀಕಾಗ್ರಂಥದಿಂದ ಮಾಡಬಹುದಾಗಿದೆ. ಇದರಲ್ಲಿ ಪ್ರತ್ಯಕ್ಷ, ಅನುಮಾನ ಮತ್ತು ಪ್ರವಚನ ಎಂಬ ಹೆಸರಿನ ಮೂರು ಪ್ರಕರಣಗಳಿವೆ. ಇವುಗಳ ತುಲನೆಯನ್ನು ಸಿದ್ಧಸೇನನು ನ್ಯಾಯಾವತಾರದಲ್ಲಿ ಸ್ಥಾಪಿಸಿದ ಪ್ರತ್ಯಕ್ಷ, ಅನುಮಾನ ಮತ್ತು ಶ್ರುತ ಹಾಗೂ ಬೌದ್ಧ ಗ್ರಂಥಕಾರನಾದ ಧರ್ಮಕೀರ್ತಿಯ ಪ್ರತ್ಯಕ್ಷ, ಸ್ವಾರ್ಥಾನುಮಾನ ಮತ್ತು ಪರಾರ್ಥಾನುಮಾನಗಳೊಡನೆ ಮಾಡುವುದು ಯೋಗ್ಯವಾಗಿದೆ. ಮೂರನೆಯ ಕೃತಿಯಾದ ' **ಸಿದ್ಧಿವಿನಿಶ್ಚಯ** 'ದಲ್ಲಿ ಪ್ರತ್ಯಕ್ಷಸಿದ್ಧಿ, ಪ್ರಮಾಣಾಂತರ ಸಿದ್ಧಿ ಮತ್ತು ಜೀವಸಿದ್ಧಿ ಮೊದಲಾದ ಹನ್ನೆರಡು ಪ್ರಸ್ತಾವಗಳಿಂದ ಪ್ರಮಾಣ, ನಯ, ನಿಕ್ಷೇಪಗಳ ವಿವೇಚನೆಯನ್ನು ಮಾಡಲಾಗಿದೆ. ಇದರ ಮೇಲೆ ಅನಂತವೀರ್ಯಕೃತ (೧೧ ನೆಯ ಶತಮಾನ) ವಿಸ್ತಾರವಾದ ಟೀಕೆಯಿದೆ. ಈತನ ನಾಲ್ಕನೆಯ ಗ್ರಂಥವು **ಪ್ರಮಾಣ ಸಂಗ್ರಹ** ಎಂಬುದಾಗಿದೆ. ಇದರಲ್ಲಿ ೮೭-೮೮ ಕಾರಿಕೆಗಳು ಒಂಭತ್ತು ಪ್ರಸ್ತಾವಗಳಲ್ಲಿ ವಿಭಾಜಿತಗೊಂಡಿವೆ. ಇದರ ಮೇಲೆ ಕರ್ತೃವೇ ರಚಿಸಿದ ವೃತ್ತಿಯೂ ಇದೆ. ಅದು ಗದ್ಯಮಿಶ್ರಿತ ಶೈಲಿಯಲ್ಲಿದೆ. ಇದರಲ್ಲಿ ಪ್ರತ್ಯಕ್ಷ, ಅನುಮಾನ ಮೊದಲಾದವುಗಳ ಸ್ವರೂಪ, ಹೇತು ಹಾಗೂ ಹೇತ್ವಾಭಾಸಗಳ ನಿರೂಪಣವಿದೆ. ಅಲ್ಲದೆ ವಾದದ ಲಕ್ಷಣ, ಪ್ರವಚನದಲಕ್ಷಣ, ಸಪ್ತಭಂಗೀ-ಮತ್ತು ನೈಗಮಾದಿ ಏಳು ನಯಗಳ ಕಥನ, ಒಟ್ಟಿನಲ್ಲಿ ಪ್ರಮಾಣ, ನಯ ಮತ್ತು ನಿಕ್ಷೇಪಗಳ ನಿರೂಪಣೆಯನ್ನು ಬಹು ಪ್ರೌಢ ಹಾಗೂ ಗಂಭೀರ ಶೈಲಿಯಲ್ಲಿ ಮಾಡಲಾಗಿದೆ. ಇದನ್ನು ಅವಲೋಕಿಸಿದರೆ ಇದೇ ಅಕಲಂಕನ ಅಂತಿಮ ಕೃತಿಯಾಗಿರಬೇಕೆಂಬು ತಿಳಿಯುತ್ತದೆ. ಇದರ ಮೇಲೆ ಅನಂತವೀರ್ಯ ಕೃತ '**ಪ್ರಮಾಣಸಂಗ್ರಹ ಭಾಷ್ಯ**' ಅಥವಾ '**ಪ್ರಮಾಣಸಂಗ್ರಹಅಲಂಕಾರಕಾ ಟೀಕಾ**' ಉಪಲಬ್ಧವಿದೆ. ಈ ಗ್ರಂಥಗಳಿಂದ ಅಕಲಂಕನು ಜೈನ

ನ್ಯಾಯವನ್ನು ಬಹಳಷ್ಟು ಪುಷ್ಟಗೊಳಿಸಿದನು. ಅದಕ್ಕೆ ಉಚ್ಚ ಪ್ರತಿಷ್ಠೆಯನ್ನು ಸಂಪಾದಿಸಿ ಕೊಟ್ಟನು.

ಅಕಲಂಕನ ತರುವಾಯ ಜೈನ ನ್ಯಾಯ ವಿಷಯಕ ಸಾಹಿತ್ಯವನ್ನು ವಿಶೇಷ ರೂಪ ದಿಂದ ಪರಿಪೋಷಿಸಿದ ಶ್ರೇಯಸ್ಸು ಆಚಾರ್ಯ ವಿದ್ಯಾನಂದಿಗಿದೆ. ಇವನ ಕಾಲವು ಕ್ರಿ.ಶ. ೭೭೫ ರಿಂದ ೮೪೦ ರ ವರೆಗಿನದೆಂದು ಸಿದ್ಧವಾಗುತ್ತದೆ. ಇವನ ರಚನೆಗಳು ಎರಡು ವಿಧವಾಗಿ ಇದ್ದುದು ಕಂಡುಬರುತ್ತದೆ. ಪೂರ್ವಕಾಲದ ಮಹತ್ವದ ಸೈದ್ಧಾಂತಿಕ ಗ್ರಂಥಗಳ ಮೇಲಿನ ಟೀಕಾ ಗ್ರಂಥಗಳು ಒಂದು ಪ್ರಕಾರದುವಾದರೆ ಅವನ ಸ್ವತಂತ್ರ ಕೃತಿಗಳು ಕೆಲವು. ಅವನ ಉಮಾಸ್ವಾತಿಯ ತತ್ವಾರ್ಥಸೂತ್ರದ ಮೇಲಿನ 'ಶ್ಲೋಕ ವಾರ್ತಿಕ'ಎಂಬ ಹೆಸರಿನ ಟೀಕೆಯೂ ಸಮಂತಭದ್ರನ ಯುಕ್ತ್ಯನುಶಾಸನದ ಟೀಕೆಯೂ ಹಾಗೂ ಆಪ್ತಮೀಮಾಂಸೆಯ ಮೇಲಿನ 'ಅಷ್ಟಸಹಸ್ರೀ' ಟೀಕೆಯೂಪ್ರಸಿದ್ಧವಾ ಗಿವೆ. ಇವುಗಳನ್ನು ಹಿಂದೆ ಯಥಾಸ್ಥಾನದಲ್ಲಿ ಉಲ್ಲೇಖಿಸಲಾಗಿದೆ. ಈ ಟೀಕಾ ಗ್ರಂಥ ಗಳಲ್ಲಿಯೂ ಸಹ ಅವನ ಸೈದ್ಧಾಂತಿಕ ಪ್ರತಿಭೆಯೂ ನ್ಯಾಯದ ತರ್ಕಶೈಲಿಯ ದರ್ಶನವು ಹೆಜ್ಜೆ ಹೆಜ್ಜೆಗೂ ಆಗುತ್ತದೆ ಇವನ ನ್ಯಾಯ ವಿಷಯದ ಸ್ವತಂತ್ರ ಗ್ರಂಥಗಳು ಆಪ್ತ ಪರೀಕ್ಷಾ, ಪ್ರಮಾಣ ಪರೀಕ್ಷಾ, ಪತ್ರ ಪರೀಕ್ಷಾ ಮತ್ತು ಸತ್ಯಶಾಸನ ಪರೀಕ್ಷಾ ಎಂದು ನಾಲ್ಕು ಇವೆ. ಆಪ್ತ ಪರೀಕ್ಷೆಯನ್ನು ಸರ್ವಾರ್ಥಸಿದ್ಧಿಯ 'ಮೋಕ್ಷ ಮಾರ್ಗಸ್ಯ ನೇತಾರಂ' ಮೊದಲಾದ ಪ್ರಥಮ ಶ್ಲೋಕಗಳ ಭಾಷ್ಯರೂಪದಲ್ಲಿ ಬರೆಯಲಾಗಿದೆ. ವಿದ್ಯಾನಂದಿಯು ತನ್ನ ಪ್ರಮಾಣ ಪರೀಕ್ಷಾದಿ ಗ್ರಂಥಗಳಲ್ಲಿ ಉಪಯೋಗಿಸಿದ ವರ್ಣ ನೆಯ ಶೈಲಿಯು ಅದಕ್ಕನುಸರಿಸಿ ಪ್ರತಿಪಾದಿಸುವ ಅನ್ಯಗ್ರಂಥಗಳ ವ್ಯಾಖ್ಯಾ ರೂಪ ದಲ್ಲಿ ಇಲ್ಲ; ಆದರೆ ವಿಷಯವನ್ನು ವಿವರಿಸುವ ಧಾರಾವಾಹಿಯಾದ ಸ್ವತಂತ್ರ ಶೈಲಿ ಯಾಗಿದೆ. ಈ ಎಲ್ಲ ಗ್ರಂಥಗಳಲ್ಲಿ ಕರ್ತೃವು ಅಕಲಂಕನ ನ್ಯಾಯವನ್ನು ಮತ್ತೂ ಹೆಚ್ಚಾಗಿ ಪರಿಮಾರ್ಜಿತಗೊಳಿಸಿ, ಪ್ರಕಾಶಿಸುವಂತೆ ಮಾಡಿದ್ದಾನೆ. ಅವನ ಇನ್ನೊಂದು ಗ್ರಂಥವು ವಿದ್ಯಾನಂದ ಮಹೋದಯ ಎಂಬುದು. ಇದರ ಉಲ್ಲೇಖವು ತತ್ವಾರ್ಥ ಶ್ಲೋಕವಾರ್ತಿಕದಲ್ಲಿ ಹಾಗೂ ವಾದಿದೇವ ಸೂರಿಯ 'ಸ್ಯಾದ್ವಾದ ರತ್ನಾಕರ' ದಲ್ಲಿ ದೊರೆಯುತ್ತದೆ. ಆದರೆ ಅದು ಇನ್ನೂ ಉಪಲಬ್ಧವಾಗಿಲ್ಲ.

ವಿದ್ಯಾನಂದಿಯ ತರುವಾಯ ವಿಶೇಷ ಉಲ್ಲೇಖನೀಯ ನೈಯಾಯಿಕರು ಅನಂತ ಕೀರ್ತಿ (೧೦ನೆಯ ಶತಮಾನ) ಮತ್ತು ಮಾಣಿಕ್ಯನಂದಿ (೧೧ನೆಯ ಶತಮಾನ) ಇವರು ಕಂಡುಬರುತ್ತಾರೆ. ಅನಂತಕೀರ್ತಿಯ 'ಬೃಹತ್ ಸರ್ವಜ್ಞ ಸಿದ್ಧಿ' ಮತ್ತು 'ಲಘು ಸರ್ವಜ್ಞಸಿದ್ಧಿ'ಗಳೆಂಬ ಎರಡು ಕೃತಿಗಳು ಪ್ರಕಟವಾಗಿ ಬಿಟ್ಟಿವೆ. ಮಾಣಿಕ್ಯನಂದಿ ಕೃತ ಪರೀಕ್ಷಾಮುಖದಲ್ಲಿ ನಮಗೆ ಅನುಮಾನದ ಪ್ರತಿಜ್ಞಾ, ಹೇತು, ದೃಷ್ಟಾಂತ, ಉಪನಯ ಮತ್ತು ನಿಗಮನ ಈ ಐದು ಅವಯವಗಳ ಪ್ರಯೋಗದ ಸ್ವೀಕೃತಿಯು ಕಂಡುಬರುತ್ತದೆ (೩, ೨೭-೪೬) ಇಲ್ಲಿ ಅನುಪಲಬ್ಧಿಗೆ ಒಂದು ಮಾತ್ರ ಪ್ರತಿಷೇಧ ವಲ್ಲ ಆದರೆ ವಿಧಿ-ನಿಷೇಧ ಎರಡನ್ನೂ ಸಾಧಕವೆಂದು ಹೇಳಲಾಗಿದೆ (೩, ೫೭ ಮೊದ

ಲಾದವು) ಈ ಗ್ರಂಥವು ಪ್ರಭಾಚಂದ್ರಕೃತ 'ಪ್ರಮೇಯ ಕಮಲ–ಮಾರ್ತಂಡ' ಎಂಬ ಹೆಸರಿನ ಟೀಕೆಯಿಂದ ವಿಶೇಷ ಪ್ರಖ್ಯಾತವಾಗಿದೆ. ಪ್ರಭಾಚಂದ್ರಕೃತ 'ನ್ಯಾಯ ಕುಮುದ ಚಂದ್ರ' ಎಂಬ ಗ್ರಂಥದ ಉಲ್ಲೇಖವನ್ನು ಈಗಾಗಲೇ ಮಾಡಲಾಗಿದೆ. ಪ್ರಭಾಚಂದ್ರನ ಕಾಲವು ಕ್ರಿ.ಶ. ೧೧ನೆಯ ಶತಮಾನವೆಂದು ಸಿದ್ಧವಾಗುತ್ತದೆ. ೧೨ನೆಯ ಶತಮಾನ ದಲ್ಲಿ ಅನಂತವೀರ್ಯನು 'ಪ್ರಮೇಯರತ್ನಮಾಲಾ' ೧೫ ನೆಯ ಶತಮಾನದಲ್ಲಿ ಧರ್ಮಭೂಷಣನು 'ನ್ಯಾಯದೀಪಿಕಾ', ವಿಮಲದಾಸನು 'ಸಪ್ತಭಂಗೀ– ತರಂಗಿಣೀ', ಶುಭಚಂದ್ರನು 'ಸಂಶಯವದನ ವಿದಾರಣ', ಹಾಗೂ ಅನೇಕ ಆಚಾರ್ಯರು ಹಿಂದಿನ ಗ್ರಂಥಗಳ ಮೇಲೆ ಟೀಕೆ, ವೃತ್ತಿ, ಟಿಪ್ಪಣಿಗಳ ರೂಪದಲ್ಲಿ ಸ್ವತಂತ್ರ ಪ್ರಕರಣಗಳನ್ನು ಬರೆದು ಸಂಸ್ಕೃತದಲ್ಲಿ ನ್ಯಾಯಶಾಸ್ತ್ರದ ಪರಂಪರೆಯನ್ನು ೧೭–೧೮ ನೆಯ ಶತಮಾನಗಳ ವರೆಗೆ ಪ್ರಚಲಿತಗೊಳಿಸಿದರು, ಮತ್ತು ಅದರ ಅಧ್ಯಯನ–ಅಧ್ಯಾಪನಗಳನ್ನು ಉತ್ತರೋತ್ತರ ಸರಳ ಮತ್ತು ಸುಬೋಧಗೊಳಿಸಲು ಪ್ರಯತ್ನ ಮಾಡಿದರು.

ಯಾವ ಪ್ರಕಾರ ದಿಗಂಬರ ಸಂಪ್ರದಾಯದಲ್ಲಿ ಮೇಲೆ ವಿವರಿಸಿದಂತೆ ನ್ಯಾಯ ವಿಷಯದ ಗ್ರಂಥಗಳ ರಚನೆಯಾಯಿತೋ, ಅದೇ ಪ್ರಕಾರ ಶ್ವೇತಾಂಬರ ಸಂಪ್ರ ದಾಯದಲ್ಲಿಯೂ ಸಿದ್ಧಸೇನನ ತರುವಾಯ ಸಂಸ್ಕೃತದಲ್ಲಿ ನಾನಾ ನ್ಯಾಯ ವಿಷಯಕ ಗ್ರಂಥಗಳ ರಚನೆಯ ಪರಂಪರೆಯು ೧೮ ನೆಯ ಶತಮಾನದ ವರೆಗೆ ನಡೆದು ಬಂದುದು ಕಂಡುಬರುತ್ತದೆ. ಮುಖ್ಯ ನೈಯಾಯಿಕರು ಮತ್ತು ಅವರ ಗ್ರಂಥಗಳು ಈ ಪ್ರಕಾರ ಇವೆ:—ಮಲ್ಲವಾದಿಯು ಆರನೆಯ ಶತಮಾನದಲ್ಲಿ 'ದ್ವಾದಶಾರ ನಯ ಚಕ್ರ' ಎಂಬ ಹೆಸರಿನ ಗ್ರಂಥದ ರಚನೆಯನ್ನು ಮಾಡಿದನು. ಇದರ ಮೇಲೆ ಸಿಂಹಸೂರೀ ಗಣಿಯ ವೃತ್ತಿಯು ಇದೆ. ಇದೇ ವೃತ್ತಿಯ ಆಧಾರದಿಂದಲೇ ಈ ಗ್ರಂಥದ ಉದ್ಧಾರ ಗೈಯಲಾಗಿದೆ. ಇದರಲ್ಲಿ ಸಿದ್ಧಸೇನನ ಉದ್ಧರಣಗಳೂ ಕಂಡುಬರುತ್ತವೆ. ಹಾಗೆಯೇ ಭರ್ತೃಹರಿ ಮತ್ತು ದಿಙನಾಗರ ಮತಗಳ ಉಲ್ಲೇಖವೂ ಕೂಡ ಆಗಿದೆ. ಈ ನಯ ಚಕ್ರದ ಕೆಲವೊಂದು ಉದ್ಧರಣಗಳು ಅಕಲಂಕನ ತತ್ವಾರ್ಥವಾರ್ತಿಕದಲ್ಲಿಯೂ ಕಂಡು ಬರುತ್ತವೆ. ಎಂಟನೆಯ ಶತಮಾನದಲ್ಲಿ ಹರಿಭದ್ರಾಚಾರ್ಯನು ಕೇವಲ ಜೈನ ನ್ಯಾಯವನ್ನಷ್ಟೇ ಅಲ್ಲ, ಜೈನ ಸಿದ್ಧಾಂತವನ್ನೂ ಸಹ ತನ್ನ ವಿಪುಲ ಕೃತಿಗಳಿಂದ ಪರಿಪುಷ್ಟಗೊಳಿಸಿದನು. ಅದರಂತೆ ಕಥಾ ಸಾಹಿತ್ಯವನ್ನೂ ಸಹ ರಚಿಸಿದನು. ಅವನ ಗ್ರಂಥಗಳಲ್ಲಿ ಅನೇಕಾಂತ ಜಯಪತಾಕಾ (ಸ್ವೋಪಜ್ಞ ವೃತ್ತಿ ಸಹಿತ), 'ಅನೇ– ಕಾಂತವಾದ ಪ್ರವೇಶ' ಹಾಗೂ 'ಸರ್ವಜ್ಞ ಸಿದ್ಧಿ' ಇವು ಜೈನ ನ್ಯಾಯದ ದೃಷ್ಟಿ ಯಿಂದ ಉಲ್ಲೇಖನೀಯವಾಗಿವೆ.

ಅನೇಕಾಂತ ಜಯಪತಾಕಾದಲ್ಲಿ ಆರು ಅಧಿಕಾರಗಳಿವೆ. ಅವುಗಳಲ್ಲಿ ಕ್ರಮ ವಾಗಿ ಸದಸದ್‌ರೂಪ-ವಸ್ತು, ನಿತ್ಯಾನಿತ್ಯ ವಸ್ತು, ಸಾಮಾನ್ಯ-ವಿಶೇಷ, ಅಭಿಲಾಪ್ಯಾ ನಭಿಲಾಪ್ಯ, ಯೋಗಾಚಾರ ಮತ ಮತ್ತು ಮುಕ್ತಿ ಈ ವಿಷಯಗಳ ಮೇಲೆ ಗಂಭೀರವೂ

ವಿಸ್ತೃತವೂ ಆಗುವಂತೆ ನ್ಯಾಯಶೈಲಿಯಲ್ಲಿ ವಿವೇಚನವಿದೆ. ಮೇಲಿನ ವಿಷಯಗಳಲ್ಲಿ ಯೋಗಾಚಾರ ಮತ ಒಂದನ್ನುಳಿದು ಉಳಿದ ಐದು ವಿಷಯಗಳ ಮೇಲೆ ಹರಿಭದ್ರನು 'ಅನೇಕಾಂತವಾದ-ಪ್ರವೇಶ' ಎಂಬ ಹೆಸರಿನ ಗ್ರಂಥವನ್ನು ಸಂಸ್ಕೃತದಲ್ಲಿ ಬರೆದಿದ್ದಾನೆ. ಅದು ಭಾಷೆ, ಶೈಲಿ, ವಿಷಯಗಳ ದೃಷ್ಟಿಯಿಂದ ಅನೇಕಾಂತ ಜಯಪತಾಕಾದ ಸಂಕ್ಷಿಪ್ತರೂಪವೆಂದು ಕಂಡುಬರುತ್ತದೆ. ಈ ಗ್ರಂಥವು ಒಂದು ಟಿಪ್ಪಣಿ ಸಹಿತ ಪ್ರಕಟವಾಗಿದೆ. (ಪಾಟನ ೧೯೧೨). ಇವನ 'ಅಷ್ಟಪ್ರಕರಣ' ಎಂಬ ಹೆಸರಿನ ಗ್ರಂಥದಲ್ಲಿ ಎಂಟೆಂಟು ಪದ್ಯಗಳ ೩೨ ಪ್ರಕರಣಗಳಿವೆ ಇದರಲ್ಲಿ ಆತ್ಮನಿತ್ಯವಾದ, ಕ್ಷಣಿಕವಾದ, ನಿತ್ಯಾನಿತ್ಯ ಮೊದಲಾದ ವಿಷಯಗಳ ನಿರೂಪಣೆಯು ಕಂಡುಬರುತ್ತದೆ. ಇದರ ಮೇಲೆ ಜಿನೇಶ್ವರ ಸೂರಿಯು (೧೧ ನೆಯ ಶತಮಾನ) ಬರೆದ ಟೀಕೆಯಿದೆ. ಈ ಟೀಕೆಯಲ್ಲಿ ಕೆಲವೊಂದು ಅಂಶ ಪ್ರಾಕೃತದಲ್ಲಿದೆ. ಅದರ ಸಂಸ್ಕೃತ ರೂಪಾಂತರವನ್ನೂ ಟೀಕಾಕಾರನ ಶಿಷ್ಯನಾದ ಅಭಯದೇವಸೂರಿಯು ಮಾಡಿದ್ದಾನೆ. ಅವನ ಉಳಿದ ದಾರ್ಶನಿಕ ರಚನೆಗಳು ಇಂತಿವೆ :—ಷಡ್‌ದರ್ಶನ-ಸಮುಚ್ಚಯ, ಶಾಸ್ತ್ರವಾರ್ತಾಸಮುಚ್ಚಯ (ಸಟೀಕ), ಧರ್ಮಸಂಗ್ರಹಣೀ, ತತ್ವತರಂಗಿಣೀ ಮತ್ತು ಪರಲೋಕಸಿದ್ಧಿ ಮೊದಲಾದವುಗಳು. ಧರ್ಮಸಂಗ್ರಹಣಿಯಲ್ಲಿ ೧೩೯೬ ಗಾಹೆಗಳು ಇವೆ. ಅವುಗಳಿಂದ ಧರ್ಮದ ಸ್ವರೂಪವನ್ನು ನಿಕ್ಷೇಪಗಳ ಮುಖಾಂತರ ಪ್ರರೂಪಣ ಮಾಡಲಾಗಿದೆ. ಪ್ರಸಂಗವಶವಾಗಿ ಇದರಲ್ಲಿ ಚಾರ್ವಾಕಮತದ ಖಂಡನವೂ ಸಹ ಬಂದಿದೆ. ಇದರ ಮೇಲೆ ಮಲಯಗಿರಿಕೃತ ಸಂಸ್ಕೃತ ಟೀಕೆಯೂ ಉಪಲಬ್ಧವಿದೆ. ಇವನ ಯೋಗ ವಿಷಯಕ್ಕೆ ಸಂಬಂಧಿಸಿದ ಯೋಗಬಿಂದು, ಯೋಗದೃಷ್ಟಿ-ಸಮುಚ್ಚಯ, ಯೋಗಶತಕ, ಯೋಗವಿಂಶತಿಕಾ (ವಿಂಶಿತಿ ವಿಂಶಿಕಾದಲ್ಲಿ ೧೭ನೆಯ ವಿಂಶಿಕಾ) ಹಾಗೂ ಷೋಡಶಕ (೧೫ನೆಯ ಹದಿನಾರನೆಯ ಷೋಡಶಕ) ಎಂಬ ಹೆಸರಿನ ಗ್ರಂಥಗಳು ಪಾತಂಜಲ ಯೋಗಶಾಸ್ತ್ರದ ತುಲನಾತ್ಮಕವಾಗಿ ಯೋಗ ವಿಷಯದ ಜ್ಞಾನ ವಿಸ್ತಾರದ ದೃಷ್ಟಿಯಿಂದ—ಅಧ್ಯಯನ ಮಾಡಲು ಯೋಗ್ಯವಾಗಿವೆ. ಅನ್ಯಮತಗಳ ವಿವೇಚನೆಯ ದೃಷ್ಟಿಯಿಂದ ಇವನ 'ದ್ವಿಜವದನಚಪೇಟಾ' ಎಂಬ ಹೆಸರಿನ ಗ್ರಂಥವು ಉಲ್ಲೇಖನೀಯವಾಗಿದೆ. ಇವನು ಬೌದ್ಧಾಚಾರ್ಯ ದಿಗ್ನಾಗನ (೫ನೆಯ ಶತಮಾನ) ನ್ಯಾಯಪ್ರವೇಶದ ಮೇಲೆ ತಾನು ಟೀಕೆಯನ್ನು ಬರೆದು, ಮೂಲಗ್ರಂಥದ ವಿಷಯವನ್ನು ವಿಸ್ತಾರ ರೂಪದಲ್ಲಿ ಸುಸ್ಪಷ್ಟಗೊಳಿಸಿದನು. ಅಲ್ಲದೆ ಆ ಗ್ರಂಥದಿಂದ ಜೈನ ಸಂಪ್ರದಾಯದಲ್ಲಿ ಬೌದ್ಧ ನ್ಯಾಯದ ಅಧ್ಯಯನದ ಪರಂಪರೆಯನ್ನು ಪ್ರಾರಂಭಿಸಿದನು. ಇದು ವಿಶೇಷ ಲಕ್ಷ ಸೆಳೆಯುವ ಸಂಗತಿಯಾಗಿದೆ. ಮುಂದಿನ ಕಾಲದ ರಚನೆಗಳಲ್ಲಿ ವಾದಿದೇವ ಸೂರಿ ಕೃತ (೧೨ನೆಯ ಶತಮಾನ) ಪ್ರಮಾಣ ನಯತತ್ವಾಲೋಕಾಲಂಕಾರ, ಸ್ಯಾದ್ವಾದ ರತ್ನಾಕರ, ಹೇಮಚಂದ್ರಕೃತ (೧೨ನೆಯ ಶತಮಾನ) ಪ್ರಮಾಣ ಮೀಮಾಂಸಾ, ಮತ್ತು ಅನ್ಯಯೋಗ ವ್ಯವಚ್ಛೇದಿಕಾ, ಜಯಸಿಂಹಸೂರಿಕೃತ (೧೫ನೆಯ ಶತಮಾನ) ನ್ಯಾಯಸಾರ ದೀಪಿಕಾ, ಶುಭವಿಜಯಕೃತ (೧೭ನೆಯ ಶತಮಾನ) ಸ್ಯಾದ್ವಾದ

ಮಾಲಾ, ವಿನಯ ವಿಜಯಕೃತ (೧೭ನೆಯ ಶತಮಾನ) ನಯಕರ್ಣಿಕಾ ಇವು ಉಲ್ಲೇಖನೀಯವಾಗಿವೆ.

ಸಮಂತಭದ್ರನ ಯುಕ್ತ್ಯನುಶಾಸನದ ಟೀಕೆಯಲ್ಲಿ ವಿದ್ಯಾನಂದಿಯು ಆಪ್ತ ಮೀಮಾಂಸೆಗೆ 'ಅನ್ಯಯೋಗ ವ್ಯವಚ್ಛೇದಕ' ಎಂದು ಕರೆದಿದ್ದಾನೆಂದು ಹೇಳಿದೆಯಷ್ಟೆ. ಮತ್ತು ಅದಕ್ಕನುಸರಿಸಿ ಹೇಮಚಂದ್ರನು ತನ್ನ 'ಅನ್ಯಯೋಗ ವ್ಯವಚ್ಛೇದಿಕಾ' ಮತ್ತು ಅಯೋಗ ವ್ಯವಚ್ಛೇದ ಈ ಎರಡು ದ್ವಾತ್ರಿಂಶಿಕೆಗಳನ್ನು ಬರೆದನು. ಅನ್ಯಯೋಗ ವ್ಯವಚ್ಛೇದಿಕೆಯ ಮೇಲೆ ಮಲ್ಲಿಷೇಣ ಸೂರಿಯು ಒಂದು ವಿಸ್ತಾರವಾದ ಟೀಕೆಯನ್ನು ಬರೆದನು. ಅದರ ಹೆಸರು ಸ್ಯಾದ್ವಾದ ಮಂಜರಿ ಎಂದಿದೆ. ಇದನ್ನು ಅವನು ತನ್ನ ಪ್ರಶಸ್ತಿಗೆ ಅನುಸರಿಸಿ ಜಿನಪ್ರಭಸೂರಿಯ ಸಹಾಯದಿಂದ ಶಕ ಸಂವತ್ಸರ ೧೨೧೪ ರಲ್ಲಿ (ಕ್ರಿ.ಶ. ೧೨೯೨) ಸಮಾಪ್ತಗೊಳಿಸಿದನು. ಇದರಲ್ಲಿ ನ್ಯಾಯ, ವೈಶೇಷಿಕ, ಪೂರ್ವ ಮೀಮಾಂಸಾ, ವೇದಾಂತ, ಬೌದ್ಧ ಮತ್ತು ಚಾರ್ವಾಕ ಮತಗಳ ಪರಿಚಯ ಮತ್ತು ಅವುಗಳ ಮೇಲೆ ಟೀಕಾಕಾರರ ಸಮಾಲೋಚನಾತ್ಮಕ ವಿಚಾರಗಳು ಲಭಿಸುತ್ತವೆ. ಇದೇ ಕಾರಣದಿಂದ ಈ ಗ್ರಂಥವು ಜೈನದರ್ಶನ ಹಾಗೂ ಇತರ ದರ್ಶನಗಳ ತುಲನಾತ್ಮಕ ಅಧ್ಯಯನಕ್ಕಾಗಿ ವಿಶೇಷ ಉಪಯುಕ್ತವೆಂದು ಸಿದ್ಧವಾಗಿದೆ.

ಹದಿನೆಂಟನೆಯ ಶತಮಾನದಲ್ಲಿ ಆಚಾರ್ಯ ಯಶೋವಿಜಯನು ಆಗಿ ಹೋದನು. ಅವನು ಜೈನ ನ್ಯಾಯ ಮತ್ತು ಸಿದ್ಧಾಂತಗಳನ್ನು ತನ್ನ ಕೃತಿಗಳಿಂದ ಬಹಳಷ್ಟು ಪರಿಪುಷ್ಟಗೊಳಿಸಿದನು. ನ್ಯಾಯದ ದೃಷ್ಟಿಯಿಂದ ಅವನ 'ಅನೇಕಾಂತ–ವ್ಯವಸ್ಥಾ', 'ಜೈನ ತರ್ಕಭಾಷಾ', 'ಸಪ್ತಭಂಗೀ–ನಯ–ಪ್ರದೀಪ', 'ನಯಪ್ರದೀಪ', 'ನಯೋಪದೇಶ', 'ನಯ ರಹಸ್ಯ' ಮತ್ತು 'ಜ್ಞಾನಸಾರ–ಪ್ರಕರಣ', 'ಅನೇಕಾಂತ ಪ್ರವೇಶ', 'ಅನೇಕಾಂತ ವ್ಯವಸ್ಥಾ' ಮತ್ತು 'ವಾದಮಾಲಾ' ಇವು ಉಲ್ಲೇಖನೀಯವಾಗಿವೆ. ತರ್ಕಭಾಷಾ ಎಂಬುದರಲ್ಲಿ ಅವನು ಅಕಲಂಕನ ಲಘೀಯಸ್ತ್ರಯ ಹಾಗೂ ಪ್ರಮಾಣ ಸಂಗ್ರಹಗಳಿಗೆ ಅನುಸರಿಸಿ ಪ್ರಮಾಣ, ನಯ, ನಿಕ್ಷೇಪ ಈ ಮೂರು ವಿಷಯಗಳನ್ನು ಪ್ರತಿಪಾದಿಸಿದ್ದಾನೆ. ಬೌದ್ಧ ಪರಂಪರೆಯಲ್ಲಿ ಮೋಕ್ಷಾಕರ ಕೃತ ತರ್ಕಭಾಷಾ (೧೨ನೆಯ ಶತಮಾನ) ಮತ್ತು ವೈದಿಕ ಪರಂಪರೆಯಲ್ಲಿ ಕೇಶವ ಮಿಶ್ರಕೃತ ತರ್ಕಭಾಷಾ (೧೩–೧೪ನೆಯ ಶತಮಾನ) ಇವುಗಳ ಹೆಸರುಗಳನ್ನು ಅನುಸರಿಸಿಯೇ ಈ ಗ್ರಂಥದ ಹೆಸರನ್ನು 'ಜೈನತರ್ಕಭಾಷಾ' ಎಂದು ರೂಪಿಸಿಕೊಂಡದ್ದಿರಬೇಕು. ಇವನು ಜ್ಞಾನಬಿಂದು, ನ್ಯಾಯಖಂಡಖಾದ್ಯ ಹಾಗೂ ನ್ಯಾಯಾಲೋಕಗಳನ್ನು ಹೊಸ ಶೈಲಿಯಲ್ಲಿ ಬರೆದು, ಜೈನನ್ಯಾಯದ ಅಧ್ಯಯನಕ್ಕೆ ನವೀನ ಮಾರ್ಗವನ್ನು ನಿರ್ಮಿಸಿಕೊಟ್ಟನು. ಜ್ಞಾನಬಿಂದುವಿನಲ್ಲಿ ಇವನು ಪ್ರಾಚೀನ ಮತಿಜ್ಞಾನದ ವ್ಯಂಜನಾವಗ್ರಹವನ್ನು ಕಾರಣಾಂಶ, ಅರ್ಥಾವಗ್ರಹ ಮತ್ತು ಈಹಾವನ್ನು ವ್ಯಾಪಾರಾಂಶ, ಅವಾಯವನ್ನು ಫಲಾಂಶ ಮತ್ತು ಧಾರಣಾವನ್ನು ಪರಿಪಾಕಾಂಶವೆಂದು ಹೇಳಿ, ಜೈನಪರಿಭಾಷೆಗಳನ್ನು ನ್ಯಾಯ ಮೊದಲಾದ ದರ್ಶನ

ಗಳಲ್ಲಿ ನಿರ್ದಿಷ್ಟಗೊಂಡು ಪ್ರತ್ಯಕ್ಷಜ್ಞಾನದ ಪ್ರಕ್ರಿಯೆಗಳ ಜೊತೆಯಲ್ಲಿಟ್ಟು ತೋರಿಸಿದೆನು.

**ಕರಣಾನುಯೋಗ ಸಾಹಿತ್ಯ:—**

ಮೇಲೆ ಹೇಳಿದ ವಿಭಾಗಕ್ಕನುಸರಿಸಿ ದ್ರವ್ಯಾನುಯೋಗದ ತರುವಾಯ ಕರಣಾನುಯೋಗವು ಜೈನಸಾಹಿತ್ಯದ ಎರಡನೆಯ ವಿಷಯವಾಗಿದೆ. ಈ ವಿಭಾಗದಲ್ಲಿ ಸಮಾವೇಶವಾಗುವ ಗ್ರಂಥಗಳಲ್ಲಿ ಊರ್ಧ್ವ, ಮಧ್ಯ ಮತ್ತು ಅಧೋಲೋಕಗಳನ್ನೂ ದ್ವೀಪಸಾಗರಗಳನ್ನೂ ಕ್ಷೇತ್ರ, ಪರ್ವತ, ನದಿ ಮೊದಲಾದವುಗಳನ್ನೂ ಅವುಗಳ ಪರಿಮಾಣ ವಿಸ್ತಾರ ಸಹಿತ, ಗಣಿತದ ಪ್ರಕ್ರಿಯೆಗಳ ಆಧಾರದಿಂದ ಸಹಿತ ವರ್ಣಿಸಲಾಗಿದೆ. ಇಂಥ ಅನೇಕ ರಚನೆಗಳ ಉಲ್ಲೇಖವನ್ನು ಮೇಲೆ ವರ್ಣಿಸಿದ ಜೈನ ಆಗಮಗಳಲ್ಲಿ ಮಾಡಲಾಗಿದೆ. ಅವುಗಳಲ್ಲಿ ಸೂರ್ಯ–ಪ್ರಜ್ಞಪ್ತಿ, ಚಂದ್ರ-ಪ್ರಜ್ಞಪ್ತಿ, ಜಂಬೂದ್ವೀಪ-ಪ್ರಜ್ಞಪ್ತಿ. ದ್ವೀಪಸಾಗರ–ಪ್ರಜ್ಞಪ್ತಿ ಇವು ಕೆಲವು ಆಗಿವೆ. ಈ ಪ್ರಜ್ಞಪ್ತಿಗಳಲ್ಲಿ ಸಮಗ್ರ ವಿಶ್ವವನ್ನು ಲೋಕಾಕಾಶ ಮತ್ತು ಅಲೋಕಾಕಾಶ ಎಂದು ಎರಡು ವಿಭಾಗಗಳಲ್ಲಿ ವಿಂಗಡಿಸಲಾಗಿದೆ. ಅಲೋಕಾಕಾಶವು ವಿಶ್ವದ ಒಂದು ಅನಂತ ಭಾಗವಾಗಿದೆ. ಅಲ್ಲಿ ಆಕಾಶದ ಹೊರತಾಗಿ ಇನ್ನಾವ ಜಡ ಇಲ್ಲವೆ ಚೇತನ ದ್ರವ್ಯಗಳು ಕಂಡುಬರುವುದಿಲ್ಲ. ಕೇವಲ ಲೋಕಾಕಾಶವೇ ವಿಶ್ವದ ಒಂದು ಭಾಗವಾಗಿದೆ. ಅದರಲ್ಲಿ ಜೀವ ಮತ್ತು ಪುದ್ಗಲ ಹಾಗೂ ಇವುಗಳ ಗಮನಾಗಮನಕ್ಕೆ ಸಹಾಯಕವಾದ ಧರ್ಮ ಮತ್ತು ಅಧರ್ಮಗಳು ಅದರಂತೆ ದ್ರವ್ಯಪರಿವರ್ತನದಲ್ಲಿ ನಿಮಿತ್ತಭೂತವಾದ ಕಾಲ ಈ ಐದು ದ್ರವ್ಯಗಳು ಕಂಡುಬರುತ್ತವೆ. ಈ ದ್ರವ್ಯಲೋಕದಲ್ಲಿ ಊರ್ಧ್ವ, ಮಧ್ಯ, ಅಧೋಲೋಕವೆಂದು ಮೂರು ವಿಭಾಗಗಳಿವೆ. ಮಧ್ಯಲೋಕದಲ್ಲಿ ನಮ್ಮ ಈ ಪೃಥ್ವಿಯಿದೆ. ಇದರ ಮೇಲೆ ನಾವು ವಾಸಮಾಡುತ್ತೇವೆ. ಈ ಪೃಥ್ವಿಯು ಗೋಲಾಕಾರ ಅಸಂಖ್ಯ ದ್ವೀಪ–ಸಾಗರಗಳಿಂದ ವಿಭಾಜಿತವಾಗಿದೆ. ಅದರ ಮಧ್ಯದಲ್ಲಿ ಒಂದುಲಕ್ಷ ಯೋಜನ ವಿಸ್ತಾರವುಳ್ಳ ಜಂಬೂದ್ವೀಪವಿದೆ. ಇದನ್ನು ವಲಯಾಕಾರದಲ್ಲಿ ಸುತ್ತಿದ ಎರಡುಲಕ್ಷ ಯೋಜನ ವಿಸ್ತಾರವುಳ್ಳ ಲವಣ ಸಮುದ್ರವಿದೆ. ಲವಣ ಸಮುದ್ರಕ್ಕೆ ನಾಲ್ಕುಲಕ್ಷ ಯೋಜನ ವಿಸ್ತಾರವುಳ್ಳ ಧಾತಕೀಖಂಡ ದ್ವೀಪವು ಸುತ್ತುವರಿದಿದೆ, ಮತ್ತು ಅದನ್ನು ಸುತ್ತುವರಿದ ಎಂಟುಲಕ್ಷ ಯೋಜನ ವಿಸ್ತಾರವುಳ್ಳ ಕಾಲೋದಧಿ ಸಮುದ್ರವಿದೆ. ಕಾಲೋದಧಿಯ ಸಮೀಪದಲ್ಲಿ ೧೬ಲಕ್ಷ ಯೋಜನವುಳ್ಳ ವಿಸ್ತಾರವಾದ ಪುಷ್ಕರವರ ದ್ವೀಪವಿದೆ. ಅದರ ಮುಂದೆ ಮೇಲೆ ಉಲ್ಲೇಖಿಸಿದ ಕ್ರಮದಿಂದ ಎರಡೆರಡರಷ್ಟು ವಿಸ್ತಾರವಾಗುತ್ತ ಹೋಗುವ ಅಸಂಖ್ಯ ಸಾಗರ ಹಾಗೂ ದ್ವೀಪಗಳಿವೆ. ಪುಷ್ಕರವರ ದ್ವೀಪದ ಮಧ್ಯದಲ್ಲಿ ಒಂದು ಮಹಾನ್ ದುರ್ಲಂಘ್ಯ ಪರ್ವತವಿದೆ. ಇದಕ್ಕೆ ಮಾನುಷೋತ್ತರವೆಂದು ಹೆಸರು. ಯಾಕಂದರೆ ಇದನ್ನು ದಾಟಿ ಆಚೆಗೆ ಹೋಗುವ ಸಾಮರ್ಥ್ಯವು ಮನುಷ್ಯರಿಗೆ ಇಲ್ಲ. ಈ ಪ್ರಕಾರ ಜಂಬೂ

ದ್ವೀಪ, ಧಾತಕೀಖಂಡ ಮತ್ತು ಪುಷ್ಕರಾರ್ಧ -ಈ ಎರಡೂವರೆ ದ್ವೀಪಗಳು ಸೇರಿ ಮನುಷ್ಯಲೋಕವಾಗುತ್ತದೆ. ಜಂಬೂದ್ವೀಪವು ಏಳು ಕ್ಷೇತ್ರಗಳಲ್ಲಿ ವಿಭಾಜಿತ ವಾಗಿದೆ. ಅವುಗಳ ಸೀಮೆಯನ್ನು ನಿರ್ಧರಿಸುವ ಆರು ಕುಲಪರ್ವತಗಳಿವೆ. ಕ್ಷೇತ್ರಗಳ ಹೆಸರುಗಳು ಭರತ, ಹೈಮವತ, ಹರಿ, ವಿದೇಹ. ರಮ್ಯಕ, ಹೈರಣ್ಯವತ ಮತ್ತು ಐರಾವತ ಎಂದಿವೆ. ಇವುಗಳನ್ನು ವಿಭಾಜಿಸುವ ಪರ್ವತಗಳು ಕ್ರಮದಿಂದ ಹಿಮವಾನ್, ಮಹಾಹಿಮವಾನ್, ನಿಷಧ ನೀಲ, ರುಕ್ಮಿ ಮತ್ತು ಶಿಖರಿ ಎಂದಿವೆ. ಇವುಗಳಲ್ಲಿ ಮಧ್ಯವರ್ತಿಯೆನಿಸುವ ವಿದೇಹ ಕ್ಷೇತ್ರವು ಎಲ್ಲಕ್ಕೂ ವಿಸ್ತಾರವಾಗಿದೆ. ಇದರ ಮಧ್ಯ ದಲ್ಲಿ ಮೇರು ಪರ್ವತವಿದೆ. ಭರತ ಕ್ಷೇತ್ರದಲ್ಲಿ ಹಿಮಾಲಯದಿಂದ ಹೊರಟು ಗಂಗಾ ನದಿಯು ಪೂರ್ವ ಸಮುದ್ರದ ಕಡೆಗೂ ಸಿಂಧುವು ಪಶ್ಚಿಮ ಸಮುದ್ರದ ಕಡೆಗೂ ಹರಿಯುತ್ತದೆ. ಮಧ್ಯದಲ್ಲಿ ವಿಂಧ್ಯ ಪರ್ವತವಿದೆ. ಈ ನದಿ ಹಾಗೂ ಪರ್ವತಗಳಿಂದ ಭರತ ಕ್ಷೇತ್ರವು ಆರು ಖಂಡಗಳಾಗಿದೆ. ಇವುಗಳನ್ನೆಲ್ಲ ಗೆದ್ದು. ತನ್ನ ವಶಕ್ಕೆ ತೆಗೆದು ಕೊಂಡ ಸಮ್ರಾಟನೇ ಷಟ್‌ಖಂಡ ಚಕ್ರವರ್ತಿ ಎನಿಸುತ್ತಾನೆ.

ಮಧ್ಯಲೋಕದಲ್ಲಿ ಮೇಲ್ಕಾಣಿಸಿದ ಅಸಂಖ್ಯ ದ್ವೀಪ-ಸಾಗರಗಳ ಪರಂಪರೆಯು ಸ್ವಯಂಭೂರಮಣ ಸಮುದ್ರದ ಹತ್ತಿರ ಸಮಾಪ್ತಿಗೊಳ್ಳುತ್ತದೆ. ಮಧ್ಯಲೋಕದ ಈ ಅಸಂಖ್ಯ ಯೋಜನ ವಿಸ್ತಾರದ ಪ್ರಮಾಣವನ್ನು ಒಂದು ರಜ್ಜುವೆಂದು ಮನ್ನಿಸ ಲಾಗಿದೆ. ಈ ಪ್ರಮಾಣದಿಂದ ಏಳು ರಜ್ಜು ಮೇಲಿನ ಕ್ಷೇತ್ರವಾದ ಊರ್ಧ್ವಲೋಕವು ಏಳು ರಜ್ಜು ಕೆಳಗಿನ ಕ್ಷೇತ್ರವು ಅಧೋಲೋಕವು ಇರುತ್ತವೆ. ಊರ್ಧ್ವಲೋಕದಲ್ಲಿ ಮೊದಲು ಜ್ಯೋತಿರ್ಲೋಕವು ಬರುತ್ತದೆ. ಇದರಲ್ಲಿ ಸೂರ್ಯ, ಚಂದ್ರ. ಗ್ರಹ, ನಕ್ಷತ್ರ ಮತ್ತು ತಾರೆಗಳ ಸ್ಥಿತಿಯನ್ನು ಹೇಳಲಾಗಿದೆ. ಅವುಗಳ ಮೇಲೆ ಸೌಧರ್ಮ, ಈಶಾನ. ಸನತ್ಕುಮಾರ, ಮಾಹೇಂದ್ರ. ಬ್ರಹ್ಮ. ಬ್ರಹ್ಮೋತ್ತರ, ಲಾಂತವ ಕಾಪಿಷ್ಟ, ಶುಕ್ರ, ಮಹಾಶುಕ್ರ ಶತಾರ. ಸಹಸ್ರಾರ ಆನತ. ಪ್ರಾಣತ, ಆರಣ ಮತ್ತು ಅಚ್ಯುತ ಈ ಹದಿನಾರು ಸ್ವರ್ಗಗಳಿವೆ. ಇವುಗಳಿಗೆ ಕಲ್ಪ ಎಂದೂ ಹೇಳಲಾಗುತ್ತದೆ. ಯಾಕೆಂದರೆ ಇವುಗಳಲ್ಲಿ ಇರುವಂಥ ದೇವ ಇಂದ್ರ, ಸಾಮಾನಿಕ, ತ್ರಾಯಸ್ತ್ರಿಂಶ, ಪಾರಿಷದ, ಆತ್ಮ ರಕ್ಷ ಲೋಕಪಾಲ, ಅನೀಕ. ಪ್ರಕೀರ್ಣಕ, ಆಭಿಯೋಗ್ಯ ಮತ್ತು ಕಿಲ್ಬಿಷಿಕ -ಈ ಹತ್ತು ಉತ್ತರೋತ್ತರ ಹೀನ ಪದರೂಪಕಲ್ಪಗಳಲ್ಲಿ (ಭೇದಗಳಲ್ಲಿ) ವಿಭಾಗ ಮಾಡ ಲಾಗಿದೆ. ಈ ಹದಿನಾರು ಸ್ವರ್ಗಗಳ ಮೇಲೆ ಒಂಭತ್ತು ಗ್ರೈವೇಯಕ ಮತ್ತು ಅವುಗಳ ಮೇಲೆ ವಿಜಯ, ವೈಜಯಂತ, ಜಯಂತ, ಅಪರಾಜಿತ ಮತ್ತು ಸರ್ವಾರ್ಥಸಿದ್ಧಿ ಈ ಐದು ಕಲ್ಪಾತೀತ ದೇವ ವಿಮಾನಗಳಿವೆ. ಸರ್ವಾರ್ಥಸಿದ್ಧಿಯ ಮೇಲೆ ಲೋಕದ ಅಗ್ರತಮ ಭಾಗವಿದೆ. ಅಲ್ಲಿ ಮುಕ್ತಾತ್ಮರು ಹೋಗಿ ನೆಲಸುತ್ತಾರೆ. ಇದರ ಮುಂದೆ ಧರ್ಮ ದ್ರವ್ಯದ ಅಭಾವವಾಗಿರುವುದರಿಂದ ಯಾವ ಜೀವ ಅಥವಾ ಅನ್ಯದ್ರವ್ಯಗಳೂ ಪ್ರವೇಶವನ್ನು ಹೊರಲಾರವು. ಅಧೋಲೋಕದಲ್ಲಿ ಕ್ರಮದಿಂದ ರತ್ನ ; ಶರ್ಕರಾ, ವಾಲುಕಾ, ಪಂಕ, ಧೂಮ, ತಮ ಮತ್ತು ಮಹಾತಮಪ್ರಭಾ ಎಂಬ ಹೆಸರಿನ ಏಳು

ಉತ್ತರೋತ್ತರ ಕೆಳಗೆ ಹೋಗುವ ನರಕಗಳಿವೆ.

ಜಂಬೂದ್ವೀಪದ ಭರತಕ್ಷೇತ್ರದಲ್ಲಿ ಅವಸರ್ಪಿಣೀ ಮತ್ತು ಉತ್ಸರ್ಪಿಣೀ ರೂಪ ದಿಂದ ಕಾಲಚಕ್ರವೂ ತಿರುಗುತ್ತಿರುತ್ತದೆ. ಅದಕ್ಕೆ ಅನುಸರಿಸಿ ಸುಷಮಾ-ಸುಷಮಾ, ಸುಷಮಾ, ಸುಷಮಾ-ದುಷಮಾ, ದುಷಮಾ-ಸುಷಮಾ, ದುಷಮಾ ಮತ್ತು ದುಃಷಮಾ-ದುಷಮಾ ಇವು ಆರು ಅವಸರ್ಪಿಣಿಯ ಹಾಗೂ ಇವೇ ವಿರುದ್ಧ ಕ್ರಮದಿಂದ ಉತ್ಸರ್ಪಿ ಣಿಯ ವಿಭಾಗಗಳಾಗುತ್ತವೆ. ಮೊದಲನೆಯ ಮೂರು ಕಾಲವಿಭಾಗಗಳಲ್ಲಿ ಭೋಗ ಭೂಮಿಯ ರಚನೆಯು ಇರುತ್ತದೆ. ಆಗ ಮನುಷ್ಯನು ತನ್ನ ಅನ್ನ. ವಸ್ತ್ರ ಮೊದಲಾದ ಸಮಸ್ತ ಅವಶ್ಯಕತೆಗಳನ್ನು ಕಲ್ಪವೃಕ್ಷಗಳಿಂದಲೇ ಪೂರ್ಣಮಾಡಿಕೊಳ್ಳುತ್ತಿದ್ದನು. ಅವನು ಕೃಷಿ ಮೊದಲಾದ ಉದ್ಯೋಗ-ವ್ಯವಸಾಯಗಳಿಗೆ ಅನಭಿಜ್ಞನಾಗಿದ್ದನು. ಸುಷಮಾ-ಸುಷಮಾ ಕಾಲದ ಅಂತಿಮ ಭಾಗದಲ್ಲಿ ಕ್ರಮಶಃ ಭೋಗ-ಭೂಮಿಯ ವ್ಯವಸ್ಥೆಯು ಸಮಾಪ್ತವಾಗುತ್ತದೆ, ಕರ್ಮಭೂಮಿಯ ರಚನೆಯು ಪ್ರಾರಂಭವಾಗು ತ್ತದೆ. ಈ ಕಾಲದಲ್ಲಿ ಕರ್ಮಭೂಮಿಗೆ ಸಂಬಂಧಿಸಿದ ಯುಗಧರ್ಮವನ್ನು ತಿಳಿಸಿ-ಕೊಡುವಂಥ ಕುಲಂಕರರು ಹದಿನಾಲ್ಕು ಜನರು ಕ್ರಮದಿಂದ ಜನಿಸುತ್ತಾರೆ. ಸದ್ಯಕ್ಕೆ ನಡೆಯುವ ಅವಸರ್ಪಿಣಿ ಕಾಲದ ಸುಷಮಾ-ದುಷಮಾ ಕಾಲದ ಕೊನೆಯ ಭಾಗದಲ್ಲಿ ಪ್ರತಿಶ್ರುತಿ, ಸನ್ಮತಿ, ಕ್ಷೇಮಂಕರ, ಕ್ಷೇಮಂಧರ, ಸೀಮಂಕರ, ಸೀಮಂಧರ, ವಿಮಲ-ವಾಹನ, ಚಕ್ಷುಷ್ಮಾನ್, ಯಶಸ್ವೀ, ಅಭಿಚಂದ್ರ, ಚಂದ್ರಾಭಿ, ಮರುದೇವ, ಪ್ರಸೇನ ಜಿತ್ ಮತ್ತು ನಾಭಿರಾಜ ಈ ಹದಿನಾಲ್ಕು ಜನ ಕುಲಂಕರರು ಮತ್ತು ಅಂತಿಮ ಕುಲಂಕರ ನಾಭಿರಾಜನು ಅಸಿ, ಮಸಿ, ಕೃಷಿ, ವಿದ್ಯಾ-ವಾಣಿಜ್ಯ, ಶಿಲ್ಪ ಮತ್ತು ಉದ್ಯೋಗ ಈ ಷಟ್‌ಕರ್ಮಗಳ ವ್ಯವಸ್ಥೆಯನ್ನು ನಿರ್ಮಾಣ ಮಾಡಿದರು. ಇವರ ತರುವಾಯ ಋಷಭ ಮೊದಲಾದ ೨೪ ತೀರ್ಥಂಕರ, ೧೨ ಚಕ್ರವರ್ತಿ, ೯ ಬಲದೇವ, ೯ ವಾಸುದೇವ ಮತ್ತು ೯ ಪ್ರತಿವಾಸುದೇವ ಈ ೬೩ ಜನ ಶಲಾಕಾಪುರುಷರು ದುಷಮಾ-ಸುಷಮಾ ಎಂಬ ಹೆಸರಿನ ನಾಲ್ಕನೆಯ ಕಾಲದಲ್ಲಿ ಆಗಿಹೋದರು. ಅಂತಿಮ ತೀರ್ಥಂಕರನಾದ ಭಗವಾನ್ ಮಹಾವೀರನ ನಿರ್ವಾಣದ ತರುವಾಯ ಪಂಚಮಕಾಲವು ದುಷಮಾ—ಪ್ರಾರಂಭವಾಯಿತು. ಅದು ಈಗ ನಡೆಯುತ್ತಿದೆ. ಇದೇ ಸಾಮಾನ್ಯವಾಗಿ ಕರಣಾನುಯೋಗದ ಗ್ರಂಥಗಳಲ್ಲಿ ವರ್ಣಿತ ವಿಷಯದ ಸಂಕ್ಷಿಪ್ತ ಪರಿಚಯವಾಗಿದೆ. ಕೆಲವೊಂದು ಗ್ರಂಥಗಳಲ್ಲಿ ಈ ಸಂಪೂರ್ಣ ವಿಷಯಗಳನ್ನು ವರ್ಣಿಸಿದೆ. ಕೆಲವುಗಳಲ್ಲಿ ಹಲ-ಕೆಲವು ವಿಷಯಗಳು ಮಾತ್ರ ಇವೆ. ಆದರೆ ಈ ವಿಷಯಗಳ ವಿವರಣೆಯಲ್ಲಿ ಗಣಿತದ ಪ್ರಕ್ರಿಯೆಗಳನ್ನು ಬಳಸಿದ್ದು ವಿಶೇಷ ಸಂಗತಿಯಾಗಿದೆ. ಅದರಿಂದ ಈ ಗ್ರಂಥ ಗಳು ಪ್ರಾಚೀನ ಗಣಿತದ ಸೂತ್ರಗಳನ್ನೂ ಅವುಗಳ ಕ್ರಮ-ವಿಕಾಸವನ್ನೂ ತಿಳಿದು ಕೊಳ್ಳುವುದಕ್ಕೆ ಬಹಳ ಸಹಾಯಕವಾಗುತ್ತವೆ. ಈ ವಿಷಯದ ಮುಖ್ಯ ಗ್ರಂಥಗಳು ಹೀಗಿವೆ—

ದಿಗಂಬರ ಪರಂಪರೆಯಲ್ಲಿ ಈ ವಿಷಯದ ಪ್ರಥಮ ಗ್ರಂಥವು ಲೋಕವಿಭಾಗ

ಎಂಬುದಿದೆ. ಆದರೆ ಈ ಮೂಲ ಗ್ರಂಥವು ಉಪಲಬ್ಧವಿಲ್ಲ. ಆದರೆ ಅದು ಇದರ ತರುವಾಯದ ಕಾಲದಲ್ಲಿ ರೂಪುಗೊಂಡ ಸಂಸ್ಕೃತ ಪದ್ಯಾತ್ಮಕ ರೂಪಾಂತರವಾದ ಸಿಂಹಸೂರಿ ಕೃತ ಲೋಕವಿಭಾಗದಲ್ಲಿ-ದೊರೆಯುತ್ತದೆ. ಸಿಂಹಸೂರಿಯು ತನ್ನ ಪ್ರಶಸ್ತಿಯಲ್ಲಿ, "ತೀರ್ಥಂಕರ ಮಹಾವೀರನು ಜಗತ್ತಿನ ವಿಧಾನವನ್ನು ಹೇಳಿದ್ದಾನೆ, ಅದನ್ನು ಸುಧರ್ಮ ಸ್ವಾಮಿ ಮೊದಲಾದವರು ತಿಳಿದರು. ಅದನ್ನೇ ಆಚಾರ್ಯ ಪರಂಪರೆಯಿಂದ ಸಂಪಾದಿಸಿ, ಸಿಂಹಸೂರಿ ಋಷಿಯು ಭಾಷಾತ್ಮಕ ಪರಿವರ್ತನೆಗೊಳಿಸಿ ರಚಿಸಿದನು "—ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಅವನು ಯಾವ ಮೂಲ ಗ್ರಂಥದ ಭಾಷಾ ಪರಿವರ್ತನ ಮಾಡಿದನೋ ಅದರ ಪರಿಚಯವನ್ನು ಸಹ ಅವನು ಮಾಡಿಕೊಟ್ಟಿದ್ದಾನೆ. "ಆ ಗ್ರಂಥವು ಕಾಂಚಿಯರಾಜನಾದ ಸಿಂಹವರ್ಮನ ಇಪ್ಪತ್ತೆರಡನೆಯ ಸಂವತ್ಸರದಲ್ಲಿ-ಅದಕ್ಕನುಸರಿಸಿ ಶಕ ಸಂವತ್ಸರ ೩೮೦ ನೆಯ ವರ್ಷದಲ್ಲಿ-ಸರ್ವನಂದಿ ಮುನಿಯು ಪಾಂಡ್ಯರಾಷ್ಟ್ರದ ಪಾಟಲಿಕ ಗ್ರಾಮದಲ್ಲಿ ಬರೆಸಿದ್ದನು." ಶಕ ಸಂವತ್ಸರದ ೩೮೦ ರಲ್ಲಿ ಪಲ್ಲವ ವಂಶದ ರಾಜನು ರಾಜ್ಯವಾಳುತ್ತಿದ್ದನೆಂದು ಇತಿಹಾಸ ಸಿದ್ಧವಿದೆ. ಇವನ ರಾಜಧಾನಿಯು ಕಾಂಚಿಯಾಗಿತ್ತು. ಈ ಮೂಲ ಗ್ರಂಥವು ಬಹುಶಃ ಪ್ರಾಕೃತದಲ್ಲಿಯೇ ಇರಬೇಕು. ಕುಂದಕುಂದರ ನಿಯಮಸಾರದ ೧೭ ನೆಯ ಗಾಥೆಯಲ್ಲಿ "ಲೋಯವಿಭಾಗೇ ಸುಣಾದೆವ್ವಂ" ಎಂಬ ರೂಪದಲ್ಲಿ ಉಲ್ಲೇಖವಿದೆ. ಇದು ಸರ್ವನಂದಿ ಕೃತ ಲೋಕವಿಭಾಗದ ಸೂಚನೆಯೇ ಆಗಿರಬೇಕು. ಮುಂದಿನ ಕಾಲದ ತಿಲೋಯ ಪಣ್ಣತ್ತಿಯಲ್ಲಿ ಲೋಕವಿಭಾಗ ಗ್ರಂಥದ ಉಲ್ಲೇಖವು ಹಲವೆಡೆಗೆ ಬಂದಿದೆ.

ಸಿಂಹಸೂರಿಯು ತನ್ನ ರೂಪಾಂತರವು ಲೋಕವಿಭಾಗದ ಸಾರ ಸಂಗ್ರಹ ರೂಪದಲ್ಲಿದೆ—ಎಂದೂ ಹೇಳಿದ್ದಾನೆ. ಈಗ ಯಾವ ರೂಪದಲ್ಲಿ ಈ ಕೃತಿಯು ಲಭಿಸಿದೆಯೋ ಹಾಗೆ ಇದರಲ್ಲಿ ೨೨೩೦ ಶ್ಲೋಕಗಳು ಕಂಡುಬರುತ್ತವೆ. ಅದು ಜಂಬೂದ್ವೀಪ, ಲವಣಸಮುದ್ರ, ಮಾನುಷಕ್ಷೇತ್ರ, ದ್ವೀಪ-ಸಮುದ್ರ, ಕಾಲ, ಜ್ಯೋತಿರ್ಲೋಕ, ಭವನವಾಸೀ ಲೋಕ, ಅಧೋಲೋಕ, ವ್ಯಂತರಲೋಕ, ಸ್ವರ್ಗಲೋಕ ಮತ್ತು ಮೋಕ್ಷ ಈ ಹನ್ನೊಂದು ವಿಭಾಗದಲ್ಲಿ-ವಿವರಿಸಲಾಗಿದೆ. ಗ್ರಂಥದಲ್ಲಿ ಅಲ್ಲಲ್ಲಿ ತಿಲೋಯಪಣ್ಣತ್ತಿ, ಆದಿಪುರಾಣ, ತ್ರಿಲೋಕಸಾರ ಮತ್ತು ಜಂಬೂದ್ವೀಪ ಪ್ರಜ್ಞಪ್ತಿ ಈ ಗ್ರಂಥಗಳ ಉಲ್ಲೇಖಗಳೂ ಅವತರಣಗಳೂ ಲಭಿಸುತ್ತವೆ. ಅದರಿಂದ ಈ ಗ್ರಂಥದ ರಚನೆಯು ೧೧ ನೆಯ ಶತಮಾನದ ತರುವಾಯದ್ದೆಂದು ಕಂಡುಬರುತ್ತದೆ.

ಮೂರು ಲೋಕಗಳಿಗೆ ಸಂಬಂಧಿಸಿದ ಸಮಸ್ತ ವಿಷಯಗಳನ್ನೂ ಪರಿಪೂರ್ಣ ಹಾಗೂ ಸುವ್ಯವಸ್ಥೆಯಿಂದ ಪ್ರತಿಪಾದಿಸುವ ಉಪಲಬ್ಧ ಪ್ರಥಮ ಗ್ರಂಥವು ತಿಲೋಯಪಣ್ಣತ್ತಿಯಾಗಿದೆ. ಈ ಗ್ರಂಥದ ರಚನೆಯು ಪ್ರಾಕೃತ ಗಾಥಾರೂಪದಲ್ಲಿದೆ. ಅಲ್ಲಲ್ಲಿ ಪ್ರಾಕೃತ ಗದ್ಯವೂ ಸಹ ಕಂಡಬರುತ್ತದೆ. ಬಹಳಷ್ಟು ಅಂಕಾತ್ಮಕ ಸಂದೃಷ್ಟಿಯು ಇದರಲ್ಲಿದೆ. ಈ ಗ್ರಂಥವು ಸಾಮಾನ್ಯಲೋಕ, ನಾರಕಲೋಕ, ಭವನವಾಸೀಲೋಕ, ಮನುಷ್ಯಲೋಕ, ತಿರ್ಯಕ್‌ಲೋಕ, ವ್ಯಂತರಲೋಕ, ಜ್ಯೋತಿರ್ಲೋಕ, ದೇವ

ಲೋಕ ಮತ್ತು ಸಿದ್ಧಲೋಕ ಈ ಒಂಭತ್ತು ಮಹಾಧಿಕಾರಗಳಲ್ಲಿ ವಿಭಾಗಗೊಂಡಿದೆ. ಗ್ರಂಥದಲ್ಲಿ ಒಟ್ಟು ಗಾಹೆಗಳ ಸಂಖ್ಯೆಯು ೫೬೭೭ ಇದೆ. ನಡು-ನಡುವೆ ಇಂದ್ರವಜ್ರಾ, ಸ್ರಗ್ಧರಾ, ಉಪಜಾತಿ, ದೋಧಕ, ಶಾರ್ದೂಲವಿಕ್ರೀಡಿತ, ವಸಂತತಿಲಕಾ ಮತ್ತು ಮಾಲಿನೀ ಛಂದಸ್ಸುಗಳ ಪ್ರಯೋಗವೂ ಸಹ ಇದ್ದುದು ತಿಳಿಯುತ್ತದೆ. ಗ್ರಂಥಗಳ ಉಲ್ಲೇಖಗಳಲ್ಲಿ ಅಗ್ಗಾಯಣೀ, ಸಂಗೋಯಣೀ, ಸಂಗಾಹಣೀ, ದಿಟ್ಠಿವಾದ, ಪರಿ ತಮ್ಮ, ಮೂಲಾಯಾರ, ಲೋಯುವಿಣಿಚ್ಛಯ, ಲೋಗಾಇಣೀ ಮತ್ತು ಲೋಕ ವಿಭಾಗಗಳ ಹೆಸರುಗಳು ಕಂಡುಬರುತ್ತವೆ. ಮನುಷ್ಯ ಲೋಕಾಂತರ್ಗತ ತ್ರಿಷಷ್ಠಿ ಶಲಾಕಾ ಪುರುಷರ ಐತಿಹಾಸಿಕ ಹಾಗೂ ರಾಜವಂಶೀಯ ಪರಂಪರೆಯನ್ನು ಮಹಾ ವೀರ ನಿರ್ವಾಣದ ನಂತರ ೧೦೦೦ ವರ್ಷದ ಮೇಲೆ ಆದ ಚತುರ್ಮುಖ ಕಲ್ಕಿಯ ಕಾಲದವರೆಗೆ ವರ್ಣಿಸಲಾಗಿದೆ. ಷಟ್‌ಖಂಡಾಗಮದ ವೀರಸೇನಕೃತ ಧವಲಾ ಟೀಕೆ ಯಲ್ಲಿ ತಿಲೋಯಪಣ್ಣತ್ತಿಯ ಉಲ್ಲೇಖವು ಅನೇಕ ಸಲ ಬರುತ್ತದ. ಈ ಉಲ್ಲೇಖ ಗಳಿಂದ ಈ ಗ್ರಂಥದ ರಚನೆಯು ಮೂಲದಲ್ಲಿ ಕ್ರಿ.ಶ. ೫೦೦ ರಿಂದ ೮೦೦ ಮಧ್ಯದಲ್ಲಿ ಆದುದು ಸಿದ್ಧವಾಗುತ್ತದೆ. ಆದರೆ ಉಪಲಬ್ಧ ಗ್ರಂಥದಲ್ಲಿ ಕೆಲವೊಂದು ಪ್ರಕರಣಗಳು ವೀರಸೇನನ ಧವಲ ಟೀಕೆಯಿಂದ ಎತ್ತಿಕೊಂಡಂಥವೂ ಸಹ ಕಂಡುಬರುತ್ತವೆ. ಈ ಗ್ರಂಥದ ಕರ್ತೃವು ಯತಿ ವೃಷಭಾಚಾರ್ಯನಾಗಿದ್ದಾನೆ. ಇವನು ಕಷಾಯ ಪ್ರಾಭೃ ತದ ಚೂರ್ಣಿಯ ಲೇಖಕನೇ ಆಗಿದ್ದಾನೆಂದು ಗೊತ್ತಾಗುತ್ತದೆ.

ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿ ಕೃತ ತ್ರಿಲೋಕಸಾರದಲ್ಲಿ ೧೦೧೮ ಪ್ರಾಕೃತ ಗಾಹೆಗಳಿವೆ. ಇದರಲ್ಲಿ ಅಧ್ಯಾಯಗಳ ವಿಭಜನೆಯು ಕಂಡು ಬರುವುದಿಲ್ಲ. ಆದರೆ ವಿಷಯಗಳನ್ನು ಆರಂಭಿಸುವಾಗ ಆಯಾ ವಿಷಯಗಳ ಸೂಚನೆಯುಳ್ಳ ಪ್ರತಿಜ್ಞಾ ಗಾಹೆಗಳು ಪ್ರಾರಂಭದಲ್ಲಿವೆ. ಅದಕ್ಕನುಸರಿಸಿ ವರ್ಣನೆಯಿದೆ. ಇದನ್ನು ನಿರೀಕ್ಷಿಸಿದಲ್ಲಿ ಲೋಕ–ಸಾಮಾನ್ಯ ಹಾಗೂ ಭವನ, ವ್ಯಂತರ, ಜ್ಯೋತಿಷ, ವೈಮಾನಿಕ ಮತ್ತು ನರ-ತಿರ್ಯಕ್ ಲೋಕ ಈ ಪ್ರಕಾರ ಆರು ಅಧಿಕಾರಗಳು ಕಂಡು ಬರುತ್ತವೆ. ವಿಷಯ ವರ್ಣನೆಯು ಬಹಳಷ್ಟು ತ್ರಿಲೋಕಪ್ರಜ್ಞಪ್ತಿಗೆ ಅನುಸರಿಸಿ ಸಂಕ್ಷಿಪ್ತ ರೂಪದಲ್ಲಿ ಇದೆ. ಈ ಗ್ರಂಥದ ರಚನಾ ಕಾಲವು ಕ್ರಿ.ಶ. ೧೧ನೆಯ ಶತಮಾನವಾಗಿದೆ.

ಪದ್ಮನಂದಿ ಮುನಿ ಕೃತ ಜಂಬೂದ್ವೀವ ಪಣ್ಣತ್ತಿಯಲ್ಲಿ ೨೩೮೯ ಪ್ರಾಕೃತ ಗಾಹೆಗಳಿವೆ. ಇದರ ರಚನೆಯು ತಿಲೋಯ ಪಣ್ಣತ್ತಿಯ ಆಧಾರದಿಂದ ಆದದ್ದು ಸ್ಪಷ್ಟ ಕಂಡು ಬರುತ್ತದೆ. ಇದರ ಹದಿಮೂರು ಉದ್ದೇಶಗಳು ಹೀಗಿವೆ — ಉಪೋದ್ಘಾತ; ಭರತ-ಐರಾವತ ವರ್ಷ, ಶೈಲ-ನಂದೀ-ಭೋಗ ಭೂಮಿ; ಸುದರ್ಶನ ಮೇರು, ಮಂದರ ಜಿನ ಭವನ, ದೇವೋತ್ತರ ಕುರು, ಕಕ್ಷಾ ವಿಜಯ, ಪೂರ್ವ ವಿದೇಹ, ಅಪರ ವಿದೇಹ, ಲವಣ ಸಮುದ್ರ, ದ್ವೀಪ ಸಾಗರ-ಅಧಃ ಊರ್ಧ್ವ ಸಿದ್ಧಲೋಕ; ಜ್ಯೋತಿರ್ಲೋಕ ಮತ್ತು ಪ್ರಮಾಣ ಪರಿಚ್ಛೇದ. ಗ್ರಂಥದ ಕೊನೆಯಲ್ಲಿ ಕರ್ತೃವು ತಾನು ಜಿನಾಗಮದ ಋಷಿ ವಿಜಯ ಗುರುವಿನ ಸಾಂನಿಧ್ಯದಲ್ಲಿ ಕೇಳಿಕೊಂಡು, ಅವನ ಪ್ರಸಾದದಿಂದ ಈ

ರಚನೆಯನ್ನು ಮಾಘನಂದಿಯ ಪ್ರಶಿಷ್ಯ ಹಾಗೂ ಸಕಲಚಂದ್ರನ ಶಿಷ್ಯ ಶ್ರೀನಂದಿ ಗುರುವಿನ ನಿಮಿತ್ತದಿಂದ ಮಾಡಿದೆ—ಎಂದೂ ಹೇಳಿಕೊಂಡಿದ್ದಾನೆ. ಅವನು ಸ್ವತಃ ತನ್ನನ್ನು ವೀರನಂದಿಯ ಪ್ರಶಿಷ್ಯ ಮತ್ತು ಬಲನಂದಿಯ ಶಿಷ್ಯನೆಂದು ಹೇಳಿಕೊಂಡಿದ್ದಾನೆ; ಹಾಗೂ ಗ್ರಂಥರಚನೆಯ ಸ್ಥಾನವು ಪಾರಿಯಾತ್ರ ದೇಶಾಂತರ್ಗತ ವಾರಾನಗರ ಹಾಗೂ ಅಲ್ಲಿಯ ರಾಜನಾದ ಸಂತಿ ಅಥವಾ ಸತ್ತಿಯ ಉಲ್ಲೇಖವನ್ನು ಮಾಡಿರುವನು.

ಶ್ವೇತಾಂಬರ ಪರಂಪರೆಯಲ್ಲಿ ಈ ವಿಷಯದ ಆಗಮಾಂತರ್ಗತ ಸೂರ್ಯ, ಚಂದ್ರ ಮತ್ತು ಜಂಬೂದ್ವೀಪ ಪ್ರಜ್ಞಪ್ತಿಗಳಲ್ಲದೆ ಜಿನಭದ್ರಗಣೀ ಕೃತ ಎರಡು ಕೃತಿಗಳು ಕ್ಷೇತ್ರ ಸಮಾಸ ಮತ್ತು ಸಂಗ್ರಹಣೀ ಇವು ಉಲ್ಲೇಖನೀಯವಾಗಿವೆ. ಈ ಎರಡೂ ರಚನೆಗಳ ಪರಿಮಾಣದಲ್ಲಿ ಕ್ರಮದಿಂದ ಬಹಳಷ್ಟು ಪರಿವರ್ಧನಗಳಾಗಿವೆ. ಮತ್ತು ಅವುಗಳ ಲಘು ಹಾಗೂ ಬೃಹದ್ ರೂಪ ಸಂಸ್ಕರಣ ಉಲ್ಲೇಖವನ್ನು ಟೀಕಾಕಾರರು ಮುಂದಿಟ್ಟಿದ್ದಾರೆ. ಉಪಲಬ್ಧ ಬೃಹತ್ ಕ್ಷೇತ್ರಸಮಾಸದಲ್ಲಿ—ಇದರ ಇನ್ನೊಂದು ಹೆಸರು ತ್ರೈಲೋಕ್ಯ ದೀಪಿಕಾ ಎಂದಿದೆ–೬೫೬ ಗಾಹೆಗಳು ಇವೆ. ಇದು ಐದು ಅಧಿಕಾರಗಳಲ್ಲಿ ವಿಭಾಗಗೊಂಡಿದೆ. ಜಂಬೂದ್ವೀಪ, ಲವಣೋದಧಿ, ಧಾತಕೀಖಂಡ, ಕಾಲೋದಧಿ ಮತ್ತು ಪುಷ್ಕರಾರ್ಧ ಎಂದು ಆ ವಿಭಾಗಗಳಾಗಿವೆ. ಇದರ ಪ್ರಕಾರ ಇದರಲ್ಲಿ ಮನುಷ್ಯ ಲೋಕದ ವರ್ಣನೆಯು ಮಾತ್ರ ಇದೆ. ಉಪಲಬ್ಧ ಬೃಹತ್ ಸಂಗ್ರಹಣೀ-ಯ ಸಂಕಲನ ಕರ್ತೃವು ಮಲಧಾರೀ ಹೇಮಚಂದ್ರಸೂರಿಯ ಶಿಷ್ಯನಾದ ಚಂದ್ರಸೂರಿ (೧೨ನೆಯ ಶತಮಾನ)ಯು ಆಗಿದ್ದಾನೆ. ಇದರಲ್ಲಿ ೩೪೯ ಗಾಹೆಗಳು ಇವೆ. ಅವು ದೇವ, ನರಕ, ಮನುಷ್ಯ ಮತ್ತು ತಿರ್ಯಂಚ ಈ ನಾಲ್ಕು ಗತಿಗಳೆಂಬ ಹೆಸರಿನ ಅಧಿಕಾರಗಳಲ್ಲಿಯೂ ಹಾಗೂ ಅವುಗಳ ನಾನಾ ವಿಕಲ್ಪಗಳು—ಸ್ಥಿತಿ, ಅವಗಾಹನಾ ಮೊದಲಾದ ಪ್ರರೂಪಕಗಳು—ಹೀಗೆ ನಾನಾ ವಿಭಾಗಗಳಲ್ಲಿ ವಿಭಾಗಿಸಲಾಗಿದೆ. ಇದರಲ್ಲಿ ಲೋಕಗಳಿಗಿಂತ ಹೆಚ್ಚಾಗಿ ಆಯಾ ಲೋಕಗಳಲ್ಲಿ ನಿಲ್ಲುವ ಜೀವಗಳ ವಿಷಯದಲ್ಲಿಯೇ ಹೆಚ್ಚಾಗಿ ವಿವರಿಸಲಾಗಿದೆ; ವಿಸ್ತಾರವಾಗಿ ವರ್ಣಿಸಲಾಗಿದೆ. ಇನ್ನೊಂದು ಲಘು ಕ್ಷೇತ್ರ ಸಮಾಸವೆಂಬುದು ರತ್ನಶೇಖರಸೂರೀ ಕೃತ (೧೫ನೆಯ ಶತಮಾನ) ೨೬೨ ಗಾಹೆಗಳಲ್ಲಿಯೂ ಬೃಹತ್ ಕ್ಷೇತ್ರ ಸಮಾಸವೆಂಬುದು ಸೋಮಶೇಖರಸೂರೀಕೃತ (೧೫ನೆಯ ಶತಮಾನ) ೪೮೯ ಗಾಹೆಗಳಲ್ಲಿಯೂ ಇದ್ದುದು ಕಂಡು ಬರುತ್ತದೆ. ಇವುಗಳಲ್ಲಿಯೂ ಎರಡುವರೆ ದ್ವೀಪ ಪ್ರಮಾಣ ಮನುಷ್ಯಲೋಕದ ವರ್ಣನೆಯಿದೆ. ವಿಚಾರಸಾರ- ಪ್ರಕರಣದ ಕರ್ತೃವು ದೇವಸೂರಿಯ ಶಿಷ್ಯನಾದ ಪ್ರದ್ಯುಮ್ನಸೂರಿ (೧೩ನೆಯ ಶತಮಾನ) ಯಾಗಿದ್ದಾನೆ. ಇದರಲ್ಲಿ ೯೦೦ ಗಾಹೆಗಳಿಂದ ಕರ್ಮಭೂಮಿ, ಭೋಗಭೂಮಿ, ಆರ್ಯ ಮತ್ತು ಅನಾರ್ಯ ದೇಶ, ರಾಜಧಾನಿಗಳು, ತೀರ್ಥಂಕರರ ಪೂರ್ವಭವ, ತಂದೆ-ತಾಯಂದಿರು, ಸ್ವಪ್ನ, ಜನ್ಮ, ಸಮವಸರಣ, ಗಣಧರ, ಅಷ್ಟಮಹಾಪ್ರಾತಿಹಾರ್ಯ, ಕಲ್ಕಿ, ಶಕ ಮತ್ತು ವಿಕ್ರಮಕಾಲಗಣನೆ, ದಶನಿನ್ಹವ, ೮೪ ಲಕ್ಷ ಯೋನಿಗಳೂ ಮತ್ತು ಸಿದ್ಧ ಈ ಪ್ರಕಾರ ನಾನಾ ವಿಷಯಗಳ ವರ್ಣನೆಯು ಇದೆ. ಇದರ ಮೇಲೆ ಮಾಣಿಕ್ಯಸಾಗರ ಕೃತ

ಸಂಸ್ಕೃತ ಛಾಯೆಯು ಉಪಲಬ್ಧವಿದೆ. (ಆ. ಸ. ಭಾವನಗರ - ೧೯೮೩)

ಮೇಲ್ಕಾಣಿಸಿದ ಸಮಸ್ತ ರಚನೆಗಳಿಗಿಂತಲೂ ಪ್ರಾಚೀನವಾದ ಜ್ಯೋತಿಷ ಕರಂಡಕ ಎಂಬ ಹೆಸರಿನ ಗ್ರಂಥವು ಇದೆ. ಇದರ ಮುದ್ರಿತ ಪ್ರತಿಯಲ್ಲಿ 'ಪೂರ್ವ ಭೃದ್ ವಾಲಭ್ಯ ಪ್ರಾಚೀನ ತರಾಚಾರ್ಯಕೃತ' ಎಂದು ಹೇಳಿದೆ. (ಪ್ರ. ರತಲಾಮ ೧೯೨೮). ಇದರ ಮೇಲೆ ಪಾದಲಿಪ್ತಸೂರಿಕೃತ ಟೀಕೆಯ ಉಲ್ಲೇಖವೂ ಕೂಡ ಇದೆ. ಉಪಲಬ್ಧ ಜ್ಯೋತಿಷಕರಂಡಕ-ಪ್ರಕೀರ್ಣಕದಲ್ಲಿ ೩೭೬ ಗಾಹೆಗಳು ಇವೆ. ಇದರ ಭಾಷೆ ಮತ್ತು ಶೈಲಿಗಳು ಜೈನ ಮಹಾರಾಷ್ಟ್ರೀ ಪ್ರಾಕೃತ ಗ್ರಂಥಗಳ ಕೂಡ ಹೋಲುತ್ತವೆ. ಗ್ರಂಥದ ಆದಿಯಲ್ಲಿ ಸೂರ್ಯ ಪ್ರಜ್ಞಪ್ತಿಯಲ್ಲಿ ವಿಸ್ತಾರದಿಂದ ವರ್ಣಿಸಿದ ವಿಷಯವನ್ನು ಇಲ್ಲಿ ಸಂಗ್ರಹರೂಪದಿಂದ ಪೃಥಕ್‌ವಾಗಿ ವರ್ಣಿಸಲಾಗಿದೆ ಎಂದು ಹೇಳಿದೆ. ಗ್ರಂಥದಲ್ಲಿ ಕಾಲಪ್ರಮಾಣ, ಮಾಸ, ಅಧಿಕಮಾಸ ನಿಷ್ಪತ್ತಿ, ತಿಥಿ-ನಿಷ್ಪತ್ತಿ, ಓಮರತ್ತ (ಹೀನರಾತ್ರಿ) ನಕ್ಷತ್ರ ಪರಿಮಾಣ, ಚಂದ್ರ-ಸೂರ್ಯ-ಪರಿಮಾಣ, ನಕ್ಷತ್ರ-ಚಂದ್ರ-ಸೂರ್ಯ-ಗತಿ, ನಕ್ಷತ್ರಯೋಗ, ಮಂಡಲ ವಿಭಾಗ, ಅಯನ, ಆವೃತ್ತಿ, ಮುಹೂರ್ತ ಗತಿ, ಋತು, ವಿಷುವತ್ (ಅಹೋರಾತ್ರಿ ಸಮತ್ವ), ವ್ಯತಿಪಾತ, ತಾಪ, ದಿವಸವೃದ್ಧಿ, ಅಮಾವಾಸ-ಪೌರ್ಣಿಮಾಸೀ, ಪ್ರನಷ್ಟ ಪರ್ವ ಮತ್ತು ಪೌರೂಷೀ ಈ ಇಪ್ಪತ್ತೊಂದು ಪಾಹುಡಗಳಿವೆ.

ಸಂಸ್ಕೃತ ಮತ್ತು ಅಪಭ್ರಂಶ ಪುರಾಣಗಳಲ್ಲಿ-ಹರಿವಂಶಪುರಾಣ, ಮಹಾಪುರಾಣ, ತ್ರಿಷಷ್ಠಿ ಶಲಾಕಾಪುರುಷ ಚರಿತ್ರ, ತಿಸಟ್ಠಿಮಹಾಪುರಿಸ ಗುಣಾಲಂಕಾರಗಳಲ್ಲಿ—ಸಹ ತ್ರಿಲೋಕದ ವರ್ಣನೆಗಳು ಕಂಡುಬರುತ್ತವೆ. ಇವುಗಳಲ್ಲಿ ವಿಶೇಷವಾಗಿ ಜಿನಸೇನ ಕೃತ ಸಂಸ್ಕೃತ ಹರಿವಂಶ ಪುರಾಣವು (೮ನೆಯ ಶತಮಾನ) ಈ ವಿಷಯಕ್ಕಾಗಿ ಪ್ರಾಚೀನತೆ ಮತ್ತು ವಿಷಯ ವಿಸ್ತಾರದ ದೃಷ್ಟಿಯಿಂದ ಉಲ್ಲೇಖನೀಯವಾಗಿವೆ. ಇದರಲ್ಲಿ ನಾಲ್ಕರಿಂದ ಏಳನೆಯ ಸರ್ಗದವರೆಗೆ ಕ್ರಮವಾಗಿ ಅಧೋಲೋಕ, ತಿರ್ಯಗ್‌ಲೋಕ, ಊರ್ಧ್ವಲೋಕ ಮತ್ತು ಕಾಲಗಳ ವಿಸ್ತಾರವಾದ ವರ್ಣನೆಯಿದೆ. ಇದು ತಿಲೋಯಪಣ್ಣತ್ತಿಯ ವಿಷಯವನ್ನು ಹೋಲುತ್ತದೆ.

**ಚರಣಾನುಯೋಗ-ಸಾಹಿತ್ಯ :—**

ಜೈನ ಸಾಹಿತ್ಯದ ಚರಣಾನುಯೋಗ ವಿಭಾಗದಲ್ಲಿ ಬರುವ ಗ್ರಂಥಗಳೊಳಗೆ ಆಚಾರ ಧರ್ಮದ ಪ್ರತಿಪಾದನವಿದೆ. ದ್ವಾದಶಾಂಗ ಆಗಮಗಳಲ್ಲಿಯೇ ಪ್ರಥಮ ಆಚಾರಾಂಗದಲ್ಲಿ ಮುನಿಧರ್ಮದ ಹಾಗೂ ಏಳನೆಯ ಅಂಗದಲ್ಲಿ—ಉಪಾಸಕಾಧ್ಯಯನದಲ್ಲಿ-ಗೃಹಸ್ಥರ ಆಚಾರದ ವರ್ಣನೆಯನ್ನು ಮಾಡಿದೆಯೆಂದು ಹಿಂದೆ ಹೇಳಲಾಗಿದೆ. ತೆರುವಾಯದ ಕಾಲದಲ್ಲಿ ರೂಪುಗೊಂಡ ಸಾಹಿತ್ಯದಲ್ಲಿ ಈ ಎರಡೂ ಪ್ರಕಾರದ ಆಚಾರವನ್ನು ವಿವರಿಸುವ ಅನೇಕ ಗ್ರಂಥಗಳು ನಿರ್ಮಾಣವಾಗಿವೆ.

ಮುನಿ ಆಚಾರ— ಪ್ರಾಕೃತ :—

ಮೊಟ್ಟ ಮೊದಲು ಕುಂದಕುಂದಾಚಾರ್ಯರ ಗ್ರಂಥಗಳಲ್ಲಿ ನಮಗೆ ಮುನಿ ಮತ್ತು ಶ್ರಾವಕರ ಆಚಾರಗಳ ಭಿನ್ನ-ಭಿನ್ನ ನಿರೂಪಣೆಯು ನೋಡಲಿಕ್ಕೆ ಸಿಗುತ್ತದೆ. ಅವರ ಪ್ರವಚನಸಾರದ ಮೂರನೆಯ ಶ್ರುತಸ್ಕಂಧವು ನಿಜವಾಗಿಯೂ ಮುನಿ ಆಚಾರಕ್ಕೆ ಸಂಬಂಧಿಸಿದ ಒಂದು ಸ್ವತಂತ್ರ ರಚನೆಯಾಗಿದೆ. ಇದರಲ್ಲಿ ಸಿದ್ಧರು, ತೀರ್ಥಂಕರರು ಮತ್ತು ಶ್ರಮಣರು ಇವರಿಗೆ ನಮಸ್ಕಾರಮಾಡಿ, ಶ್ರಾಮಣ್ಯದ ನಿರೂಪಣೆಯನ್ನು ಮಾಡಲಾಗಿದೆ. ಇದರಲ್ಲಿ ೭೫ ಗಾಹೆಗಳಿಂದ ಶ್ರಮಣನ ಲಕ್ಷಣ, ಪ್ರವ್ರಜ್ಯಾ ಹಾಗೂ ಉಪಸ್ಥಾಪನಾತ್ಮಕ ದೀಕ್ಷಾ, ಇಪ್ಪತ್ತೆಂಟು ಮೂಲ ಗುಣಗಳ ನಿರ್ದೇಶ, ಛೇದದ ಸ್ವರೂಪ, ಉತ್ಸರ್ಗ ಮತ್ತು ಅಪವಾದ ಮಾರ್ಗದ ನಿರೂಪಣ, ಜ್ಞಾನಸಾಧನಾ, ಶುಭೋಪಯೋಗ, ಸಂಯಮ ವಿರೋಧಿ ಪ್ರವೃತ್ತಿಗಳ ನಿಷೇಧ ಹಾಗೂ ಶ್ರಾಮಣ್ಯದ ಪೂರ್ಣತೆಯ ಮೂಲಕ ಮೋಕ್ಷ ತತ್ವದ ಸಾಧನೆ ಇವುಗಳ ಪ್ರರೂಪಣೆಯನ್ನು ಮಾಡಿದೆ. ಕೊನೆಯ ಗಾಹೆಯಲ್ಲಿ, ಯಾರು ಸಾಗಾರ ಅಥವಾ ಅನಾಗಾರ ಆಚಾರದಿಂದ ಕೂಡಿದ್ದು, ಈ ಶಾಸನವನ್ನು ತಿಳಿದುಕೊಳ್ಳುವರೋ ಅವರು ಅಲ್ಪಕಾಲದಲ್ಲಿ ಪ್ರವಚನದ ಸಾರವನ್ನು ಸಂಪಾದಿಸಿಕೊಳ್ಳುತ್ತಾರೆ ಎಂದು ಹೇಳಿದೆ.

ನಿಯಮಸಾರದಲ್ಲಿ ೧೮೭ ಗಾಹೆಗಳಿವೆ. ಯಾವುದು ನಿಯಮದಿಂದ ಮಾಡಲ್ಪಡುವುದೋ ಅದೇ ನಿಯಮವಾಗಿದೆ. ಅದು ಜ್ಞಾನ, ದರ್ಶನ, ಚಾರಿತ್ರರೂಪವಾಗಿದೆ—ಇದನ್ನು ಪ್ರಾರಂಭದಲ್ಲಿಯೇ ಲೇಖಕರು ಸ್ಪಷ್ಟಗೊಳಿಸಿದ್ದಾರೆ. 'ಸಾರ' ಶಬ್ದದ ತಾತ್ಪರ್ಯವಿಷ್ಟೆ: ಮೇಲ್ಕಾಣಿಸಿದ ನಿಯಮಗಳಿಗೆ ವಿಪರೀತವಾದ ಸಂಗತಿಗಳನ್ನು ಪರಿಹಾರ ಗೈಯಲಾಗುವುದು. ಆ ಮೇಲೆ ಗ್ರಂಥದಲ್ಲಿ ಈ ಮೂರರ ಸ್ವರೂಪವನ್ನು ವಿವೇಚಿಸಲಾಗಿದೆ. ೭೭ ರಿಂದ ೧೫೭ ರ ವರೆಗಿನ ೮೧ ಗಾಹೆಗಳಲ್ಲಿ ಆವಶ್ಯಕಗಳ ಸ್ವರೂಪವನ್ನು ವಿಸ್ತಾರವಾಗಿ ತಿಳಿಸಿಕೊಡಲಾಗಿದೆ. ಇದಕ್ಕೆ ಅವನು ಮುನಿಗಳ ನಿಶ್ಚಯಾತ್ಮಕ ಚಾರಿತ್ರವೆಂದು ಹೇಳಿದ್ದಾನೆ. ಇಲ್ಲಿ ಷಡಾವಶ್ಯಕಗಳ ಕ್ರಮ ಹಾಗೂ ಅವುಗಳ ಹೆಸರುಗಳು ಬೇರೆಡೆಗಿಂತ ಭಿನ್ನವಾಗಿವೆ. ಇದರಲ್ಲಿ ಪ್ರತಿಕ್ರಮಣ, ಪ್ರತ್ಯಾಖ್ಯಾನ, ಆಲೋಚನಾ, ಕಾಯೋತ್ಸರ್ಗ, ಸಾಮಾಯಿಕ ಮತ್ತು ಪರಮಭಕ್ತಿ ಈ ಆವಶ್ಯಕತೆಗಳ ವರ್ಣನೆಯಿದೆ. ಜಿನವರ-ನಿರ್ದಿಷ್ಟ ಸೂತ್ರಗಳಲ್ಲಿ (ಗಾಹೆ ೮೯) ವರ್ಣಿಸಿದ್ದು ಮತ್ತು ಅದರ ಸ್ವರೂಪವು ಪ್ರತಿಕ್ರಮಣ ಎಂಬ ಸೂತ್ರದಲ್ಲಿ (ಗಾಹೆ ೯೪) ಹೇಳದೇ ಇದೆ—ಅದಕ್ಕೇನೇ ಪ್ರತಿಕ್ರಮಣವೆಂದು ಹೇಳಲಾಗುತ್ತದೆ—ಎಂದು ಅವನೂ ಸ್ಪಷ್ಟಗೊಳಿಸಿದ್ದಾನೆ. ಇಲ್ಲಿ ಆವಶ್ಯಕ ನಿರ್ಯುಕ್ತಿಯ ಸ್ವರೂಪವನ್ನೂ ಸಹ ತಿಳಿಸಿಕೊಡಲಾಗಿದೆ. ಯಾವುದು ತನ್ನ ವಶವೇ- ಸ್ವೇಚ್ಛೆಯ ಮೇಲೆ ಆಧಾರಿಸದೆ ಇರುವುದೋ- ಅದು ಅವಶವು. ಅವಶ-ಆಗಿ ಮಾಡುವ ಯೋಗ್ಯ ಕಾರ್ಯವು ಆವಶ್ಯಕವಾಗಿದೆ. ಯುಕ್ತಿಯ ಅರ್ಥವು ಉಪಾಯ ಎಂದಿದೆ. ಅದನ್ನೇ ನಿರವಯವ ಅರ್ಥಾತ್ ಸಮಷ್ಟಿ ರೂಪದಿಂದ ನಿರ್ಯುಕ್ತಿ ಎಂದು ಹೇಳಲಾಗುತ್ತದೆ. ಇದರಿಂದ, ಲೇಖಕನ ಎದುರಿಗೆ ಆವಶ್ಯಕ

ನಿರ್ಯುಕ್ತಿ ಎಂಬ ಹೆಸರಿನ ರಚನೆಯು ಇರಬೇಕು ; ಅವನು ಅದನ್ನು ಪ್ರಾಮಾಣಿಕ ವೆಂದು ಪನ್ನಿಸುತ್ತಿದ್ದನು–ಎಂಬುದು ಸ್ಪಷ್ಟವಾಗುತ್ತದೆ. (ಗಾಹೆ ೧೪೨) ಆವಶ್ಯಕ ಗಳ ಮುಖಾಂತರವೇ ಶ್ರಾಮಣ್ಯಗುಣದ ಪೂರ್ತಿಯು ಆಗುತ್ತದೆ. ಅದರಿಂದ ಯಾವ ಶ್ರಮಣನು ಆವಶ್ಯಕ ಹೀನನಾಗಿರುವನೋ ಅವನು ಚಾರಿತ್ರ ಭ್ರಷ್ಟನಾಗಿರುವನು. (೧೪೭–೪೮) ಆವಶ್ಯಕಗಳನ್ನು ಆಚರಿಸಿಯೇ ಪುರಾಣ ಪುರುಷರು ಕೇವಲಿಗಳಾಗಿ ದ್ದಾರೆ. ಈ ಪ್ರಕಾರ ಗ್ರಂಥದ ಬಹುಭಾಗವು ಆವಶ್ಯಕಗಳ ಮಹತ್ವ ಮತ್ತು ಅವುಗಳ ಸ್ವರೂಪವನ್ನು ಒಳಗೊಂಡಿದೆ. ಮುಂದಿನ ೧೦, ೧೨ ಗಾಹೆಗಳಲ್ಲಿ ಕೇವಲಿಗಳ ಜ್ಞಾನ, ದರ್ಶನ ಹಾಗೂ ಅವರ ಕ್ರಮದಿಂದ ಪರ–ಪ್ರಕಾಶಕತ್ವ ಮತ್ತು ಸ್ವಪ್ರಕಾಶಕತ್ವ ಈ ವಿಷಯಗಳ ಮೇಲೆ ಆಚಾರ್ಯರು ತಮ್ಮ ಆಲೋಚನಾತ್ಮಕ ವಿಚಾರಗಳನ್ನು ಪ್ರಕಟ ಸಿದ್ದಾರೆ. ಈ ಪ್ರಕರಣವು ಷಟ್‌ಖಂಡಾಗಮದ ಧವಲ ಟೀಕೆಯಲ್ಲಿ ಜ್ಞಾನ ಮತ್ತು ದರ್ಶನಗಳನ್ನು ವಿವೇಚಿಸುವ ವಿಷಯಗಳುಳ್ಳ ಪ್ರಕರಣಗಳಲ್ಲಿ ಸಮಾವೇಶ ಮಾಡಲು ಯೋಗ್ಯವಾಗಿದೆ. ಕೊನೆಯಲ್ಲಿ ಮೋಕ್ಷದ ಸ್ವರೂಪದ ಮೇಲೆ ಸ್ವಲ್ಪ ವಿಚಾರಗಳನ್ನು ಪ್ರಕಟಿಸಲಾಗಿದೆ. ನಿಯಮಸಾರದ ರಚನೆಯನ್ನು ನಿಜಭಾವನೆಯ ನಿಮಿತ್ತ ಮಾಡಲಾಗಿದೆ ಎಂದು ಹೇಳಿ ಗ್ರಂಥವನ್ನು ಸಮಾಪ್ತಗೊಳಿಸಿದೆ. ಈ ಗ್ರಂಥದ ೧೭ ನೆಯ ಗಾಹೆಯಲ್ಲಿ ಮನುಷ್ಯ, ನಾರಕಿ, ತಿರ್ಯಂಚ ಮತ್ತು ದೇವ ಇವರಲ್ಲಿರುವ ಭೇದ ವನ್ನು ವಿಸ್ತಾರವಾಗಿ ಲೋಕವಿಭಾಗದಿಂದ ತಿಳಿಯಬೇಕೆಂದು ಹೇಳಿದೆ. ಈ ಉಲ್ಲೇಖದ ವಿಷಯದಲ್ಲಿ ವಿದ್ವಾಂಸರಲ್ಲಿ ಮತ ಭೇದಗಳು ಇವೆ :– ಕೆಲವು ಜನರು ಲೋಕವಿಭಾಗ ಎಂಬ ಹೆಸರಿನ ಒಂದು ವಿಶೇಷ ಗ್ರಂಥದ ಉಲ್ಲೇಖವಿದು ಎನ್ನುವರು ಇನ್ನೂ ಕೆಲವರು ಲೋಕವಿಭಾಗ ವಿಷಯಕ್ಕೆ ಸಂಬಂಧಿಸಿದ ಸಾಮಾನ್ಯ ಗ್ರಂಥರಾಶಿಯನ್ನು ಇದು ಸೂಚಿಸುತ್ತದೆನ್ನುವರು. ಈ ಗ್ರಂಥದ ಟೀಕಾಕಾರನಾದ ಮಲಧಾರಿದೇವನು ಮೇಲೆ ಹೇಳಿದ ಪ್ರಕಾರ ಜೀವಗಳ ಭೇದವನ್ನು ಲೋಕವಿಭಾಗ ಎಂಬ ಹೆಸರಿನ ಪರಮಾಗಮ ದಲ್ಲಿ ನೋಡಬೇಕೆಂದು ಸ್ಪಷ್ಟವಾಗಿ ಹೇಳಿದ್ದಾನೆ. (ಲೋಕವಿಭಾಗಾಭಿಧಾನ–ಪರ ಮಾಗಮೆ ದ್ರಷ್ಟವ್ಯಃ) ಲೋಕವಿಭಾಗ ಎಂಬ ಹೆಸರಿನ ಸಂಸ್ಕೃತ ಗ್ರಂಥವೊಂದು ದೊರೆಯುತ್ತದೆ. ಇದರ ಕರ್ತೃವಾದ ಸಿಂಹಸೂರಿಯೂ ಆದರಲ್ಲಿ ಸರ್ವನಂದಿಯೂ ಬರೆದ–ಶಕ ಸಂವತ್ಸರ ೩೮೦ (ಕ್ರಿ.ಶ. ೪೫೮) ರಲ್ಲಿ ರಚಿತವಾದ–ಪ್ರಾಕೃತ ಲೋಕ ವಿಭಾಗದ ಉಲ್ಲೇಖವನ್ನು ಮಾಡಿದ್ದಾನೆ. ಇದೇ ಲೋಕವಿಭಾಗವು ನಿಯಮಸಾರ ಲೇಖಕನ ದೃಷ್ಟಿಯಲ್ಲಿ ಇತ್ತೆಂದು ಹೇಳಿದರೆ ಆಶ್ಚರ್ಯಪಡುವ ಕಾರಣವಿಲ್ಲ. ಇನ್ನಾವ ಬಾಧಕ ಪ್ರಮಾಣಗಳು ಇಲ್ಲದೆ ಇದ್ದಲ್ಲಿ ಈ ಕಾಲವು ಕುಂದ ಕುಂದಾಚಾರ್ಯರ ಕಾಲದ ಪೂರ್ವಾವಧಿ ಎಂದು ಮನ್ನಿಸಿದರೆ ಅನುಚಿತವೆಂದೂ ಎನಿಸಲಾರದು.

ನಿಯಮಸಾರದ ಮೇಲೆ ಸಂಸ್ಕೃತ ಟೀಕೆಯು ಪದ್ಮಪ್ರಭ ಮಲಧಾರಿದೇವ ಕೃತ 'ತಾತ್ಪರ್ಯವೃತ್ತಿ'ಯು ಕಂಡುಬರುತ್ತದೆ. ಈ ಟೀಕೆಯ ಪ್ರಾರಂಭದಲ್ಲಿ ಹಾಗೂ ಐದನೆಯ ಶ್ರುತಸ್ಕಂಧದ ಕೊನೆಯಲ್ಲಿ ಕರ್ತೃವು ವೀರನಂದಿ ಮುನಿಯನ್ನು ವಂದಿಸಿ

ದ್ದಾನೆ. ಚಾಲುಕ್ಯರಾಜ ತ್ರಿಭುವನಮಲ್ಲ ಸೋಮೇಶ್ವರ ದೇವನ ಕಾಲದ ಶಕ ಸಂವತ್ಸರ ೧೧೧೭ ರ ಒಂದು ಶಿಲಾಲೇಖವು (ಎಪಿ. ಇಂಡಿ. ೧೯೧೬-೧೭) ಪದ್ಮಪ್ರಭ ಮಲಧಾರಿದೇವ ಮತ್ತು ಅವನ ಗುರು ವೀರನಂದಿ ಸಿದ್ಧಾಂತಚಕ್ರವರ್ತಿಯನ್ನು ಉಲ್ಲೇಖಿಸುತ್ತದೆ. ಇದೇ ಪದ್ಮಪ್ರಭನು ಈ ಟೀಕೆಯ ಕರ್ತೃವೆಂದು ತಿಳಿಯುತ್ತದೆ.

ನಿಯಮಸಾರದಲ್ಲಿ ೧೩೪ ರಿಂದ ೧೪೦ ಗಾಹೆಗಳವರೆಗೆ ಪರಮ ಭಕ್ತಿರೂಪ ಆವಶ್ಯಕ ಕ್ರಿಯೆಗಳ ನಿರೂಪಣವಿದೆ. ಇದರಲ್ಲಿ ಸಮ್ಯಕ್ತ್ವ, ಜ್ಞಾನ ಮತ್ತು ಚರಣದಲ್ಲಿ ಭಕ್ತಿ, ನಿರ್ವಾಣಭಕ್ತಿ, ಮೋಕ್ಷಗತ ಪುರುಷರ ಭಕ್ತಿ ಮತ್ತು ಯೋಗಭಕ್ತಿಗಳ ಉಲ್ಲೇಖ ಮಾಡಲಾಗಿದೆ. ಕೊನೆಯಲ್ಲಿ ಯೋಗ ಭಕ್ತಿಯಿಂದಲೇ ಋಷಭಾದಿ ಜಿನೇಂದ್ರರು ನಿರ್ವಾಣ ಸುಖವನ್ನು ಪಡೆದರೆಂದು (ಗಾಹೆಗಳಲ್ಲಿ) ಹೇಳಿದೆ. ಈ ಪ್ರಸಂಗಕ್ಕನುಸರಿಸಿ ಕುಂದಕುಂದ ರಿಂದ ಸ್ವತಃ ಪೃಥಕ್ ರೂಪದಿಂದ-ಭಕ್ತಿಗಳ ನಿರೂಪಣೆಯಾದದ್ದು ಸಾರ್ಥಕವೆನಿಸುತ್ತದೆ. ಕುಂದಕುಂದ ಕೃತ ಉಪಲಬ್ಧ ದಶ ಭಕ್ತಿಗಳ ಹೆಸರುಗಳು ಹೀಗಿವೆ:- ತೀರ್ಥಂಕರಭಕ್ತಿ (ಗಾಹೆ ೮), ಸಿದ್ಧಭಕ್ತಿ (ಗಾಹೆ ೧೧), ಶ್ರುತಭಕ್ತಿ (ಗಾಹೆ ೧೧), ಚಾರಿತ್ರಭಕ್ತಿ (ಗಾಹೆ ೧೨), ಅನಗಾರ ಭಕ್ತಿ (ಗಾಹೆ ೨೩), ಆಚಾರ್ಯ ಭಕ್ತಿ (ಗಾಹೆ ೧೮), ನಿರ್ವಾಣ ಭಕ್ತಿ (ಗಾಹೆ ೨೭), ಪಂಚಪರಮೇಷ್ಠಿ ಭಕ್ತಿ (ಗಾಹೆ ೭), ನಂದೀಶ್ವರ ಭಕ್ತಿ ಮತ್ತು ಶಾಂತಿ ಭಕ್ತಿ. ಈ ಭಕ್ತಿಗಳು ಅವುಗಳ ಹೆಸರಿಗೆ ಅನುಸರಿಸಿ ವಂದನಾತ್ಮಕ ಮತ್ತು ಭಾವನಾತ್ಮಕವಾಗಿವೆ. ಸಿದ್ಧಭಕ್ತಿಯ ಗಾಹೆಗಳ ಸಂಖ್ಯೆಯು ಕೆಲವೊಂದು ಅನಿಶ್ಚಿತವಾಗಿದೆ. ಕೊನೆಯವೆರಡು ನಂದೀಶ್ವರ ಭಕ್ತಿ ಮತ್ತುಶಾಂತಿ ಭಕ್ತಿಗಳು ಈಗ ದೊರೆಯುವ ರೂಪದಲ್ಲಿ ಕೊನೆಯ ಕೆಲವು ವಾಕ್ಯಗಳು ಪ್ರಾಕೃತ ರೂಪದಲ್ಲಿ ಇವೆ. ಅವುಗಳ ಪೂರ್ಣ ಪ್ರಾಕೃತ ಪಾಠವು ಲಭಿಸಿಲ್ಲ. ಇವುಗಳ ಪ್ರಾಚೀನ ಪ್ರತಿಗಳನ್ನು ಏಕತ್ರಿತಗೊಳಿಸಿ, ಸಂಶೋಧನೆಯನ್ನು ಮಾಡುವ ಅವಶ್ಯಕತೆಯು ಇದೆ. ಈ ಭಕ್ತಿಗಳು ಪ್ರಭಾಚಂದ್ರ ಕೃತ ಸಂಸ್ಕೃತ ಟೀಕೆಸಹಿತ 'ಕ್ರಿಯಾಕಲಾಪ' ಎಂಬ ಹೆಸರಿನಿಂದ ಪ್ರಕಟಿತವಾಗಿವೆ (ಪ್ರ. ಸೊಲ್ಲಾಪುರ ೧೯೨೧).

ಧರ್ಮಾಚರಣೆಯ ಮುಖ್ಯ ಉದ್ದೇಶವು ಮೋಕ್ಷ ಪ್ರಾಪ್ತಿಯಾಗಿದೆ. ಮೋಕ್ಷ ಮಾರ್ಗವು ಸಮ್ಯಗ್ ದರ್ಶನ, ಜ್ಞಾನ ಮತ್ತು ಚಾರಿತ್ರಗಳಾಗಿವೆ. ಈ ಮೂರರ ಪ್ರತಿಪಾದನೆಯನ್ನೇ ಕುಂದ ಕುಂದಾಚಾರ್ಯರು ಕ್ರಮವಾಗಿ ತಮ್ಮ ದರ್ಶನ ಸೂತ್ರ ಮತ್ತು ಚಾರಿತ್ರ ಪಾಹುಡಗಳಲ್ಲಿ ಮಾಡಿದ್ದಾರೆ. ಅವರು ದರ್ಶನ ಪಾಹುಡದ ೧೫ ನೆಯ ಗಾಹೆಯಲ್ಲಿ "ಸಮ್ಯಕ್ತ್ವದಿಂದ (ದರ್ಶನ) ಜ್ಞಾನ ಮತ್ತು ಜ್ಞಾನದಿಂದ ಎಲ್ಲ ಭಾವಗಳ ಉಪಲಬ್ಧ ಹಾಗೂ ಶ್ರೇಯ-ಅಶ್ರೇಯಗಳ ತಿಳುವಳಿಕೆಯಾಗುತ್ತದೆ; ಅದರಿಂದ ಶೀಲವು ಲಭಿಸಿ, ಕೊನೆಯಲ್ಲಿ ನಿರ್ವಾಣವು ಪ್ರಾಪ್ತವಾಗುತ್ತದೆ"-ಎಂದು ಹೇಳಿದ್ದಾರೆ. ಅವರು ಆರು ದ್ರವ್ಯ ಮತ್ತು ಒಂಭತ್ತು ಪದಾರ್ಥ ಹಾಗೂ ಐದು ಅಸ್ತಿಕಾಯ ಮತ್ತು ಏಳು ತತ್ವಗಳ ಸ್ವರೂಪದಲ್ಲಿ ಶ್ರದ್ಧೆಯನ್ನು ಇಡುವವರಿಗೆ ವ್ಯವಹಾರದಿಂದ ಸಮ್ಯಗ್ದೃಷ್ಟಿ ಹಾಗೂ ಆತ್ಮಶ್ರದ್ಧೆಯುಳ್ಳವರಿಗೆ ನಿಶ್ಚಯ ಸಮ್ಯಗ್ದೃಷ್ಟಿ ಎಂದು ಹೇಳಿದ್ದಾರೆ. (ಗಾಹೆ

೧೯-೨೦).

ಸೂತ್ರಪಾಹುಡದಲ್ಲಿ ಹೀಗೆ ಹೇಳಿದ್ದಾರೆ :—ಯಾವುದರ ಅರ್ಥದ ಉಪದೇಶವು ಅರ್ಹತ್ (ತೀರ್ಥಂಕರ) ರಿಂದಲೂ ಗ್ರಂಥರಚನೆಯು ಗಣಧರರಿಂದಲೂ ಆಗಿರುವುದೋ ಅದೇ ಸೂತ್ರವೆನಿಸುತ್ತದೆ. ಇದರ ಮೂಲಕ ಶ್ರಮಣನು ಪರಮಾರ್ಥದ ಸಾಧನೆಯನ್ನು ಮಾಡುತ್ತಾನೆ (ಗಾಹೆ ೧). ಸೂತ್ರವನ್ನು ಹಿಡಿದು ನಡೆಯುವಂಥ ಪುರುಷನೇ ಭ್ರಷ್ಟ ನಾಗದೆ ಸಂಸಾರದ ಆಚೆಯ ದಡವನ್ನು ಸೇರುತ್ತಾನೆ. ಯಾವ ಪ್ರಕಾರ ಸೂತ್ರದಿಂದ (ನೂಲಿನಿಂದ) ಪವಣಿಸದ ಸೂಜಿಯು ಸುರಕ್ಷಿತವಾಗಿರುತ್ತದೆ ; ಸೂತ್ರವಿಲ್ಲದುದು ಕಳೆದು ಹೋಗುತ್ತದೆ. ಹಾಗೆ (ಗಾಹೆ ೩-೪). ಮುಂದೆ ಜಿನೇಶ್ವರನು ಹೇಳಿದ ಸೂತ್ರದ ಜ್ಞಾನ ದಿಂದಲೇ ಒಳ್ಳೆಯ ದೃಷ್ಟಿಯ ಉತ್ಪತ್ತಿಯು, ಅದರಿಂದಲೇ ವ್ಯವಹಾರ ಪರಮಾರ್ಥಗಳ ಸಾಧನೆಯೂ ಸಾಧ್ಯವೆಂದು ಹೇಳಿದೆ. ಸೂತ್ರಾರ್ಥ ಪಥದಿಂದ ಭ್ರಷ್ಟನಾದ ಸಾಧಕ ನನ್ನು ಮಿಥ್ಯಾದೃಷ್ಟಿಯೆಂದು ತಿಳಿಯಲಡ್ಡಿಯಿಲ್ಲ (ಗಾಹೆ ೫-೭). ಸೂತ್ರಕ್ಕೆ ಸಂಬಂಧಿ ಸಿದ ಈ ಉಲ್ಲೇಖಗಳಿಂದ ಕುಂದಕುಂದರ ಎದುರಿಗೆ ಜಿನಾಗಮ ಸೂತ್ರಗಳಿದ್ದವೆಂದೂ ಅವುಗಳ ಅಧ್ಯಯನ, ಅದಕ್ಕನುಸರಿಸಿದ ವರ್ಣನೆ, ಇವು ಮುನಿಗಳಿಗೆ ಅವಶ್ಯಕವೆಂದು ತಿಳಿಯುತ್ತಿದ್ದರೆಂದು ಸ್ಪಷ್ಟವಾಗುತ್ತದೆ. ಮುಂದಿನ ಗಾಹೆಗಳಲ್ಲಿ ಮುನಿಗಳ ನಗ್ನತ್ವ, ಎಳ್ಳಷ್ಟೂ ಸಂಗ್ರಹ ಇರದಿರುವುದು, ಇವುಗಳನ್ನು ಪ್ರತಿಪಾದಿಸಿ, ಸ್ತ್ರೀಯರಿಗೆ ಪ್ರವ್ರಜ್ಯೆ ಯನ್ನು ನಿಷೇಧಿಸಲಾಗಿದೆ. ಇದರಿಂದ ಕುಂದಕುಂದರ ಕಾಲದಲ್ಲಿ ದಿಗಂಬರ-ಶ್ವೇತಾಂಬರ ಸಂಪ್ರದಾಯಗಳು ಸ್ಥಿರಗೊಂಡಿದ್ದವೆಂಬುದು ಸಿದ್ಧವಾಗುತ್ತದೆ.

ಚಾರಿತ್ರಪಾಹುಡದ ಪ್ರಾರಂಭದಲ್ಲಿಯೇ ಹೀಗೆ ಹೇಳಿದೆ :— ಯಾವುದು ತಿಳುವಳಿಕೆಯೋ ಅದು ಜ್ಞಾನವೆನಿಸುತ್ತದೆ. ಯಾವುದು ಕಾಣಿಸುವುದೋ ಅದು ದರ್ಶನವು. ಇವೆರಡರ ಸಂಯೋಗದಿಂದ ಉತ್ಪನ್ನವಾಗುವ ಭಾವವೇ ಚಾರಿತ್ರವು. ಹಾಗೆಯೇ ಜ್ಞಾನದರ್ಶನ ಮತ್ತು ಕ್ರಿಯೆಯೇ ಸಮ್ಯಕ್ ಚಾರಿತ್ರವೆನಿಸುತ್ತದೆ. ಜೀವದ ಈ ಮೂರು ಭಾವಗಳೇ ಅಕ್ಷಯ ಮತ್ತು ಅನಂತವಾಗಿವೆ. ಇವುಗಳ ಶೋಧನೆ ಕ್ಕಾಗಿಯೇ ಜಿನೇಂದ್ರ ದೇವನು ಎರಡು ಪ್ರಕಾರದ ಚಾರಿತ್ರಗಳನ್ನು ಹೇಳಿದ್ದಾನೆ, ಒಂದು ದರ್ಶನಾತ್ಮಕ ಸಮ್ಯಕ್ತ್ವ ಚಾರಿತ್ರ, ಇನ್ನೊಂದು ಸಂಯಮ ಚಾರಿತ್ರ (ಗಾಹೆ ೩-೫). ಮುಂದೆ ಸಮ್ಯಕ್ತ್ವದ ನಿಃಶಂಕ-ಮೊದಲಾದ ಎಂಟು-ಅಂಗ (ಗಾಹೆ ೭), ಸಂಯಮ ಚಾರಿತ್ರದ ಸಾಗಾರ ಮತ್ತು ಅನಗಾರ ರೂಪದ ಎರಡು ಭೇದಗಳು (ಗಾಹೆ ೨೧), ದರ್ಶನ, ವ್ರತ ಮೊದಲಾದ ದೇಶವ್ರತಿಯ ಹನ್ನೊಂದು ಪ್ರತಿಮೆಗಳು (ಗಾಹೆ ೨೨), ಅಣುವ್ರತ, ಗುಣವ್ರತ ಮತ್ತು ಶಿಕ್ಷಾವ್ರತ, ಇವುಗಳಿಂದಾದ ಹನ್ನೆರಡು ಪ್ರಕಾರದ ಸಾಗಾರ ಧರ್ಮ (ಗಾಹೆ ೨೩-೨೭) ಹಾಗೂ ಪಂಚೇಂದ್ರಿಯ ಸಂವರ ಮತ್ತು ಐದು ವ್ರತಗಳೂ ಅವುಗಳ ಮೂವತ್ತೈದು ಕ್ರಿಯೆಗಳು ಸಹಿತ, ಐದು ಸಮಿತಿ ಮತ್ತು ಮೂರು ಗುಪ್ತಿರೂಪ ಅನಗಾರ ಸಂಯಮದ ಪ್ರರೂಪಣೆಯನ್ನು ಮಾಡಿದೆ. (ಗಾಹೆ ೨೮ ಆದಿ) ಶ್ರಾವಕರ ಹನ್ನೆರಡು ವ್ರತಗಳ ಸಂಬಂಧದಲ್ಲಿ ಗಮನಿಸತಕ್ಕ

ಸಂಗತಿಯು ಇಂತಿದೆ:—ಇಲ್ಲಿ ದಿಶಾ–ವಿದಿಶಾ ಪ್ರಮಾಣ, ಅನರ್ಥದಂಡ ವರ್ಜನ, ಭೋಗೋಪ ಭೋಗ ಪ್ರಮಾಣ ಈ ಮೂರು ಗುಣವ್ರತಗಳು; ಹಾಗೂ ಸಾಮಾಯಿಕ, ಪ್ರೋಷಥ, ಅತಿಥಿಪೂಜಾ ಮತ್ತು ಸಲ್ಲೇಖನಾ ಇವು ನಾಲ್ಕು ಶಿಕ್ಷಾವ್ರತಗಳೆಂದು ಹೇಳಿದೆ. ಈ ನಿರ್ದೇಶವು ತತ್ವಾರ್ಥ ಸೂತ್ರದಲ್ಲಿ (೭, ೨೧) ನಿರ್ದಿಷ್ಟಗೊಳಿಸಿದ ವ್ರತಗಳಿಂದ ಮೂರು ಸಂಗತಿಗಳಲ್ಲಿ ಭಿನ್ನವಾಗಿದೆ: ಒಂದನೆಯದಾಗಿ ಇಲ್ಲಿ ಭೋಗೋಪ ಭೋಗ ಪರಿಮಾಣವನ್ನು ಅನರ್ಥದಂಡ ವ್ರತದ ಜೊತೆಯಲ್ಲಿ ಗುಣವ್ರತಗಳಲ್ಲಿ ಕೂಡಿಸ ಲಾಗಿದೆ. ಎರಡನೆಯದಾಗಿ ದೇಶವ್ರತವನ್ನು ಉಲ್ಲೇಖಿಸಿಯೇ ಇಲ್ಲ. ಮತ್ತು ಮೂರ ನೆಯದಾಗಿ ಶಿಕ್ಷಾವ್ರತದಲ್ಲಿ ಸಲ್ಲೇಖನದ ನಿರ್ದೇಶವು ತೀರ ಹೊಸದಾಗಿದೆ. ಇಲ್ಲಿ ಇನ್ನೊಂದು ಸಂಗತಿಯನ್ನು ನಾವು ಲಕ್ಷದಲ್ಲಿ ಇಡಬೇಕು. ತತ್ವಾರ್ಥಸೂತ್ರದಲ್ಲಿ (೭–೨೧) ದಿಗ್‌ದೇಶಾದಿ ಏಳು ವ್ರತಗಳನ್ನು ಒಂದೇಸವನೆ ನಿರ್ದೇಶಿಸಲಾಗಿದೆ. ಅದರಲ್ಲಿ ಗುಣವ್ರತ ಮತ್ತು ಶಿಕ್ಷಾವ್ರತಗಳನ್ನು ವಿಭಜಿಸಿ ವಿವರಿಸಿಲ್ಲ. ಇವುಗಳನ್ನು ವಿಭಾಗಿಸಿ ನಿರ್ದೇಶಿಸಿದ್ದು, ಕುಂದಕುಂದಾಚಾರ್ಯರ ಈ ಪಾಹುಡದಲ್ಲಿ ಮೊಟ್ಟ ಮೊದಲಿನದಾಗಿ ಕಂಡುಬರುತ್ತದೆ. ಹರಿಭದ್ರಕೃತ 'ಶ್ರಾವಕ–ಪ್ರಜ್ಞಪ್ತಿ' ಯಲ್ಲಿ ಗುಣವ್ರತಗಳ ನಿರ್ದೇಶವು ಕುಂದಕುಂದರಂತೆ ಇದೆ. ಆದರೆ ಶಿಕ್ಷಾವ್ರತಗಳಲ್ಲಿ ಅಲ್ಲಿ ಸಲ್ಲೇಖನದ ಉಲ್ಲೇಖವಾಗದೆ ದೇಶಾವಕಾಶಿಕದ್ದೇ ನಿರ್ದೇಶವಿದೆ. ಅನಗಾರ ಸಂಯಮದ ಸಂಬಂಧದಲ್ಲಿ ಇಪ್ಪತ್ತೈದು ಕ್ರಿಯೆಗಳು ಮತ್ತು ಮೂರು ಗುಪ್ತಿಗಳೂ ಇಲ್ಲಿ ಸಮಾವೇಶಗೊಂಡುದು ವಿಶೇಷ ಉಲ್ಲೇಖನೀಯವಾಗಿದೆ. ಹಾಗೆಯೇ ಇದರಲ್ಲಿ ಲೋಚ ಮೊದಲಾದ ಏಳು ವಿಶೇಷ ಗುಣಗಳ ನಿರ್ದೇಶವು ಕಂಡುಬರುವುದಿಲ್ಲ. ಆಂದರೂ ಪ್ರವಚನಸಾರ (ಗಾಹೆ ೩, ೮)ದಲ್ಲಿ ಈ ಏಳೂ ಉಲ್ಲೇಖಿಸಲ್ಪಟ್ಟಿವೆ; ಆದರೆ ಮೂರು ಗುಪ್ತಿಗಳ ಉಲ್ಲೇಖ ಮಾತ್ರವಿಲ್ಲ.

**ಬೋಧಪಾಹುಡದಲ್ಲಿ** (ಗಾಹೆ ೬-೨) ಆಯತನ ಚೈತ್ಯಗೃಹ. ಪ್ರತಿಮಾ, ದರ್ಶನ, ಬಿಂಬ, ಜಿನಮುದ್ರಾ, ಜ್ಞಾನ, ದೇವ ತೀರ್ಥ. ಅರ್ಹತ್ ಮತ್ತು ಪ್ರವ್ರಜ್ಯಾ ಈ ಹನ್ನೊಂದರ ನಿಜಸ್ವರೂಪವನ್ನು ವಿವರಿಸಲಾಗಿದೆ. ಅಲ್ಲದೆ ಪಂಚಮಹಾ ವ್ರತಧಾರಿ ಮಹರ್ಷಿಗಳಿಗೆ ನಿಜವಾದ ಆಯತನ, ಅವರಿಗೇನೇ ಚೈತ್ಯ–ಗೃಹ. ವಂದನೀಯ ಪ್ರತಿಮಾ; ಸಮ್ಯಕ್ತ್ವ, ಜ್ಞಾನ ಮತ್ತು ಸಂಯಮರೂಪ ಮೋಕ್ಷ ಮಾರ್ಗದರ್ಶನ ಮಾಡಿಸುವ ನಿಜವಾದ ದರ್ಶನ, ಇವರಿಗೇ ತಪ ಮತ್ತು ವ್ರತಗುಣಗಳಿಂದ ಕೂಡಿದ ನಿಜವಾದ ಅರ್ಹಂತ ಮುದ್ರೆ; ಅವನದೇ ಧ್ಯಾನ ಯೋಗಗಳಲ್ಲಿ ಕೂಡಿದ ಜ್ಞಾನಕ್ಕೇನೇ ನಿಜವಾದ ಜ್ಞಾನ; ಆವನೇ ಅರ್ಥ, ಧರ್ಮ, ಕಾಮ ಮತ್ತು ಪ್ರವ್ರಜ್ಯೆಗಳನ್ನು ಕೊಡುವಂಥ ನಿಜವಾದ ದೇವ; ಅವನ ನಿರ್ಮಲ ಧರ್ಮ, ಸಮ್ಯಕ್ತ್ವ ಸಂಯಮ, ತಪ ಮತ್ತು ಜ್ಞಾನಗಳಿಗೆ ನಿಜವಾದ ತೀರ್ಥವೆಂದು ಹೇಳಿದೆ. ಅವನು ಮುಪ್ಪು, ಬೇನೆ, ಹುಟ್ಟು, ಸಾವು, ನಾಲ್ಕು ಗತಿಗಳಲ್ಲಿ ಸುತ್ತುವಿಕೆ, ಪುಣ್ಯ ಮತ್ತು ಪಾಪ ಒಟ್ಟ ನಲ್ಲಿ ಸಮಸ್ತ ದೋಷ ಹಾಗೂ ಕರ್ಮಗಳನ್ನು ನಾಶಮಾಡಿ ತನ್ನನ್ನು ಜ್ಞಾನಮಯ

ವನ್ನಾಗಿ ಮಾಡಿಕೊಂಡಿದ್ದಾನೆ. ಅವನೇ ಅರ್ಹಂತನು. ಅವನಲ್ಲಿ ಮನೆ ಮತ್ತು ಪರಿಗ್ರಹಗಳ ಮೋಹದಿಂದ ಮುಕ್ತಿ, ಇಪ್ಪತ್ತೆರಡು ಪರೀಷಹಗಳು ಹಾಗೂ ಹದಿನಾರು ಕಷಾಯಗಳ ಮೇಲೆ ವಿಜಯ, ಅದರಂತೆ ಪಾಪಾರಂಭದಿಂದ ವಿಮುಕ್ತಿಯು ಕಂಡು ಬರುತ್ತವೆ. ಇವೇ ಪ್ರವ್ರಜ್ಯಾ ಆಗಿವೆ. ಇವನಲ್ಲಿ ಶತ್ರು ಮತ್ತು ಮಿತ್ರ, ಹೊಗಳಿಕೆ ಮತ್ತು ನಿಂದೆ, ಲಾಭ ಮತ್ತು ಅಲಾಭ, ತೃಣ ಮತ್ತು ಕಾಂಚನ-ಇವುಗಳ ಬಗ್ಗೆ ಸಮಭಾವವು ವ್ಯಕ್ತವಾಗುತ್ತದೆ. ಉತ್ತಮ ಅಥವಾ ಮಧ್ಯಮ, ದರಿದ್ರ ಅಥವಾ ಸಿರಿವಂತ ಇವರಲ್ಲಿ ನಿರಪೇಕ್ಷ ಭಾವದಿಂದ ಆಹಾರವನ್ನು ಸ್ವೀಕರಿಸುತ್ತಾನೆ. ಹುಟ್ಟಿದಾಗಿರುವಂಥ (ನಗ್ನ ದಿಗಂಬರ) ಮುದ್ರೆಯನ್ನು ಧರಿಸಿರುವನು. ಶರೀರ ಸಂಸ್ಕಾರಗಳನ್ನು ಬಿಟ್ಟಿರುವನು. ಕ್ಷಪಣ, ಮಾರ್ದವ ಮೊದಲಾದ ಭಾವಗಳನ್ನು ಧಾರಣ ಮಾಡಿರುವನು. ಈ ಪಾಹುಡದ ಕರ್ತೃವು ಛಕ್ಕಾಯಿ ಸುಹಂಕರಂ (ಷಟ್‌ಕಾಯ ಜೀವಗಳ ಸಲುವಾಗಿ ಸುಖಕರವೂ ಹಿತಕರವೂ) ಎಂದು ಹೇಳಿದ್ದಾನೆ. ಬಹಳ ಮಾಡಿ ಇದೇ ಪಾಹುಡದ ಕರ್ತೃವು ಇದಕ್ಕೆ ಇಟ್ಟ ನಿರ್ದಿಷ್ಟ ಹೆಸರಾಗಿರಬೇಕು. ಇದನ್ನು ಅವನು ಭವ್ಯ ಜನರ ಬೋಧನಾರ್ಥವಾಗಿ ರಚಿಸಿದನು. ಈ ಪಾಹುಡದಲ್ಲಿ ಪ್ರರೂಪಿಸಿದ ಈ ಹನ್ನೊಂದು ವಿಷಯಗಳನ್ನು ಓದಿದಲ್ಲಿ, ಆ ಕಾಲದಲ್ಲಿ ನಾನಾ ಪ್ರಕಾರದ ಆಯತನಗಳು ರೂಢಿಯಲ್ಲಿದ್ದುವು. ವಿವಿಧ ಪ್ರಕಾರದ ಚೈತ್ಯಗಳು, ಮಂದಿರಗಳು, ಮೂರ್ತಿಗಳು ಮತ್ತು ಬಿಂಬಗಳ ಪೂಜೆಗಳಾಗುತ್ತಿದ್ದುವು. ಉಳಿದ ಮುದ್ರೆಗಳ ಸಾಧುಗಳು ಕಂಡುಬರುತ್ತಿದ್ದರು. ಅದರಂತೆ ದೇವ, ತೀರ್ಥ ಮತ್ತು ಪ್ರವ್ರಜ್ಯೆಗಳಲ್ಲಿಯೂ ವಿವಿಧ ಪ್ರಕಾರಗಳು ಕಂಡುಬರುತ್ತಿದ್ದವೆಂದು ತಿಳಿಯುತ್ತದೆ. ಈ ಲೋಕ ಪ್ರಚಲಿತ ಸಮಸ್ತ ವಿಷಯಗಳ ಮೇಲೆ ಪ್ರಕಾಶ ಬೀರುವ ಅವಶ್ಯಕತೆಯಿದೆಯೆಂದು ಕುಂದಕುಂದಾಚಾರ್ಯರು ತಿಳಿದಿದ್ದರು. ಇದನ್ನೇ ಈ ಪಾಹುಡದಿಂದ ಅವರು ಮಾಡಿದರು.

ಭಾವಪಾಹುಡ : (ಗಾಹೆ ೧೬೫) ಇದರಲ್ಲಿ ದ್ರವ್ಯಲಿಂಗಿ ಮತ್ತು ಭಾವಲಿಂಗಿ ಶ್ರಮಣರಲ್ಲಿ ಭೇದಮಾಡಲಾಗಿದೆ. ಮುನಿಯ ವೇಷವನ್ನು ಧರಿಸುವುದು, ವ್ರತ ಮತ್ತು ತಪಗಳ ಅಭ್ಯಾಸ ಮಾಡುವುದು, ಶಾಸ್ತ್ರಜ್ಞಾನವನ್ನು ಪ್ರಾಪ್ತಮಾಡಿಕೊಳ್ಳುವುದರಿಂದ ಮಾತ್ರವೇ ಆತ್ಮನ ಕಲ್ಯಾಣವಾಗುವುದಿಲ್ಲವೆಂಬ ಮಾತಿನ ಮೇಲೆ ಕರ್ತೃವು ಬಹಳಷ್ಟು ಜೋರು ಮಾಡಿ ಪ್ರತಿಪಾದಿಸಿದ್ದಾನೆ. ಪರಿಣಾಮಗಳಲ್ಲಿ ಶುದ್ಧಿಯು ಉಂಟಾದಲ್ಲಿಯೇ 'ಆತ್ಮ' ಕಲ್ಯಾಣವಾಗುವುದು, ಆಗ ರಾಗ, ದ್ವೇಷಾದಿ ಕಷಾಯ ಭಾವಗಳು ತೊಲಗಿರುವವು; ಆತ್ಮವು ಆತ್ಮನಲ್ಲಿ ರಮಮಾಣಗೊಳ್ಳುವುದು. ಆಗಲೇ ಆತ್ಮ ಕಲ್ಯಾಣವಾಗುವುದು'(ಗಾಹೆ-೫೬ ೫೯). ಈ ವಿಷಯದಲ್ಲಿ ಅವನು ಪೂರ್ವಕಾಲದ ಅನೇಕ ದ್ರವ್ಯ ಮತ್ತು ಭಾವಶ್ರಮಣರ ಉಲ್ಲೇಖವನ್ನು ಮಾಡಿದ್ದಾನೆ. ಬಾಹುಬಲಿಯು ಶರೀರಾದಿಗಳಿಂದ ವಿರಕ್ತನಾದ ಮೇಲೆಯೂ ಮಾನ ಕಷಾಯದ ಕಾರಣದಿಂದ ದೀರ್ಘಕಾಲದ ವರೆಗೂ ಸಿದ್ಧಿಯನ್ನು ಹೊಂದಲಿಲ್ಲ, ಹೊಂದುವುದು ಸಾಧ್ಯವಾಗಲಿಲ್ಲ (ಗಾಹೆ ೪೪). ಮಧುಪಿಂಗ ಹಾಗೂ ವಶಿಷ್ಟ ಮುನಿಗಳು ಆಹಾರಾದಿಗಳನ್ನು ತ್ಯಾಗಮಾಡಿಯೂ ಕೂಡ

ಚಿತ್ತದಲ್ಲಿ ನಿದಾನ (ಶಲ್ಯ) ಇರುವುದರಿಂದ ಶ್ರಮಣತ್ವವನ್ನು ಹೊಂದಲಿಕ್ಕೆ ಆಗಲಿಲ್ಲ (ಗಾಹೆ ೪೫-೪೬). ಜಿನಲಿಂಗಿಯಾದ ಬಾಹುಮುನಿಯು ಆಂತರಿಕ ದೋಷದ ಕಾರಣ ದಿಂದ ಸಮಸ್ತದಂಡಕ ನಗರವನ್ನು ಭಸ್ಮಮಾಡಿ ರೌರವ ನರಕವನ್ನು ಹೊಂದಿದನು (ಗಾಹೆ ೪೯). ದ್ರವ್ಯ ಶ್ರಮಣನಾದ ದ್ವೀಪಾಯನನು ಸಮ್ಯಗ್‌ದರ್ಶನ, ಜ್ಞಾನ ಮತ್ತು ಚಾರಿತ್ರಗಳಿಂದ ಭ್ರಷ್ಟನಾಗಿ ಅನಂತ ಸಂಸಾರಿಯಾದನು. ಭವ್ಯಸೇನನು ಹನ್ನೆರಡು ಅಂಗ ಮತ್ತು ಹದಿನಾಲ್ಕು ಪೂರ್ವಗಳನ್ನು ಓದಿ. ಸಕಲ ಶ್ರುತಜ್ಞಾನಿಯಾದನು. ಆದರೂ ಅವನು ಭಾವ ಶ್ರಮಣತ್ವವನ್ನು ಸಂಪಾದಿಸಲಿಕ್ಕೆ ಸಮರ್ಥನಾಗಲಿಲ್ಲ (ಗಾಹೆ ೫೨). ಇದಕ್ಕೆ ವಿಪರೀತವಾಗಿ ಭಾವ ಶ್ರಮಣನಾದ ಶಿವಕುಮಾರನು ಯುವತಿಯರಿಂದ ಸುತ್ತುವರಿಯಲ್ಪಟ್ಟಿದ್ದರೂ ಸಹ ವಿಶುದ್ಧ ಪರಿಣಾಮದಿಂದ ಸಂಸಾರ ಸಮುದ್ರವನು ದಾಟಲು ಸಮರ್ಥನಾದನು. ಹಾಗೆಯೇ ಶಿವಭೂತಿ ಮುನಿಯು ಉದ್ದಿನ ಸೊಪ್ಪೆ ಹಾಗೂ ಅದಲ್ಲಿರುವ ಬೇಳೆಗಳು ಭಿನ್ನವಿರುವಂತೆ ದೇಹ ಮತ್ತು ಆತ್ಮಗಳು ಭಿನ್ನ ಭಿನ್ನವೆಂಬ ಭಾವ ವಿಶುದ್ಧಿಯನ್ನು ಹೊಂದಿ ಕೇವಲ ಜ್ಞಾನಿಯಾದನು. ಪ್ರಸಂಗವಶ ೧೮೦ ಕ್ರಿಯಾ ವಾದಿ, ೮೪ ಅಕ್ರಿಯಾವಾದಿ, ೬೭ ಅಜ್ಞಾನಿ ೩೨ ವೈನಯಿಕ ಈ ಪ್ರಕಾರ ೩೬೩ ಪಾಷಂಡೀ ಮತಗಳ ಉಲ್ಲೇಖವು ಬಂದಿದೆ (ಗಾಹೆ ೧೩೭ ರಿಂದ ೧೪೨). ಈ ಪಾಹುಡ ದಲ್ಲಿ ಸಾಹಿತ್ಯಿಕ ಗುಣವೂ ಸಹ ಅನ್ಯ ಪಾಹುಡಗಳಿಗಿಂತ ಹೆಚ್ಚಾಗಿ ಕಂಡುಬರುತ್ತದೆ. ಯಾರ ಮತಿರೂಪೀಧನುಷ್ಯವೂ ಶ್ರುತರೂಪೀ ಗುಣವೂ ರತ್ನತ್ರಯರೂಪೀ ಬಾಣಗಳೂ ಸ್ಥಿರವಾಗಿರುವವೋ ಅವನು ಪರಮಾರ್ಥರೂಪೀ ಗುರಿಯನ್ನು ಎಂದೂ ತಲುಪದೆ ಇರು ವುದಿಲ್ಲ (ಗಾಹೆ ೨೩). ಅದಕ್ಕಾಗಿ ಜಿನಧರ್ಮವು ಎಲ್ಲ ಧರ್ಮಗಳಲ್ಲಿ ಶ್ರೇಷ್ಠವಾಗಿದೆ. ರತ್ನಗಳಲ್ಲಿ ವಜ್ರ, ವೃಕ್ಷಗಳಲ್ಲಿ ಚಂದನ ಶ್ರೇಷ್ಠವಿರುವಂತೆ (ಗಾಹೆ ೮೨). ಗರ್ಭಗೃಹದಲ್ಲಿ ದೀಪವು ಸ್ಥಿರದಿಂದ ಉರಿಯುವಂತೆ ರಾಗದ್ವೇಷರೂಪೀ ಗಾಳಿಯ ಹೊಡೆತದಿಂದ ದೂರ ವಿರುವ ಧ್ಯಾನರೂಪೀ ದೀಪವು ಪ್ರದೀಪವಾಗಿರುತ್ತದೆ (ಗಾಹೆ ೧೨೩). ಯಾವ ಪ್ರಕಾರ ಬೀಜವು ದಗ್ಧವಾಗಿ ಹೋದಮೇಲೆ ಅದರಿಂದ ಅಂಕುರವು ತಿರುಗಿ ಹುಟ್ಟಲಾರದೋ ಹಾಗೆಯೇ ಭಾವ ಶ್ರಮಣನ ಕರ್ಮ ಬೀಜವು ದಗ್ಧವಾಗಿರುವುದರಿಂದ ಭವರೂಪೀ ಅಂಕುರವು (ಪುನರ್‌ಜನ್ಮ) ಉತ್ಪನ್ನವಾಗುವುದಿಲ್ಲ. ಈ ಪಾಹುಡದ ಅವಲೋಕನ ದಿಂದ ಇದರ ಕರ್ತೃವಿನ ಕಾಲದಲ್ಲಿ ಸಾಧುಗಳು ಬಾಹ್ಯವೇಶ ಹಾಗೆಯೇ ಜಪ, ತಪ, ವ್ರತ ಮೊದಲಿದ್ದ ಬಾಹ್ಯ ಕ್ರಿಯೆಗಳಲ್ಲಿ ಹೆಚ್ಚು-ತನ್ಮಯರಾಗಿರುತ್ತಿದ್ದರು. ನಿಜವಾದ ಆಂತರಿಕ ಶುದ್ಧಿಯ ಕಡೆಗೆ ಹೆಚ್ಚು ಧ್ಯಾನವೀಯುತ್ತಿರಲಿಲ್ಲವೆಂದು ಕಂಡುಬರುತ್ತದೆ. ಈ ಬಾಹ್ಯಾಡಂಬರದಿಂದ ಭಾವಶುದ್ಧಿಯ ಕಡೆಗೆ ಸಾಧುಗಳ ಚಿತ್ತವೃತ್ತಿಯನ್ನು ಹೊರಳಿಸುವುದಕ್ಕಾಗಿಯೇ ಈ ಭಾವ ಪಾಹುಡವನ್ನು ಬರೆದರು. ಇದೇ ಅಭಿಪ್ರಾಯ ದಿಂದ ಅವರು ಬೇರೆಯಾಗಿ ಲಿಂಗಪಾಹುಡವನ್ನು ಸಹ ಒಂದನ್ನು ರಚಿಸಿದರು.

**ಲಿಂಗಪಾಹುಡ :** (ಗಾಹೆ-೨೨) ಮುನಿಗಳ ಶ್ರಮಣತ್ವವು ಯಾವ ಆಚರಣೆ ಯಿಂದ ದೂಷಿತವಾಗುವುದೋ ಅಂಥ ಆಚರಣೆಗಳನ್ನೂ ಪ್ರವೃತ್ತಿಗಳನ್ನೂ ಇದರಲ್ಲಿ

ನಿಂದಿಸಲಾಗಿದೆ. ಕೆಲವು ಶ್ರಮಣರು ಕುಣಿಯುವರು, ಹಾಡುವರು ಮತ್ತು ವಾದ್ಯಗಳನ್ನು ಬಾರಿಸುವರು (ಗಾಹೆ ೪). ಕೆಲವರು ಸಂಗ್ರಹ ಮಾಡುವರು, ಕಾಯ್ದು ಇಡುವರು ಮತ್ತು ಆರ್ತಧ್ಯಾನದಲ್ಲಿ ಮಗ್ನರಾಗುವರು (ಗಾಹೆ ೫). ಕೆಲವರು ವಾದ, ದ್ಯೂತ, ಕಲಹಗಳಲ್ಲಿ ಅನುರಕ್ತರಾಗಿರುವರು (ಗಾಹೆ ೬). ಇನ್ನು ಕೆಲವರು ವಿವಾಹವನ್ನು ಹೊಂದಿಸುವರು, ಕೃಷಿಕರ್ಮ, ವಾಣಿಜ್ಯಗಳಿಂದ ಹಿಂಸೆಯನ್ನು ಮಾಡುವರು. (ಗಾಹೆ ೯). ಕೆಲವರು ಕಳ್ಳ ಕಾಕರರ, ಲಂಪಟರ ಗೂಢವಾದ-ವಿವಾದಗೈಯ್ಯುವರು (ಗಾಹೆ ೧೦). ಕೆಲವರು ಊಟದಲ್ಲಿ ರಸಪದಾರ್ಥಗಳನ್ನು ಅಪೇಕ್ಷಿಸುವರು, ಕಾಮಕ್ರೀಡೆಯಲ್ಲಿಯೂ ಪ್ರವೃತ್ತರಾಗುವರು. (ಗಾಹೆ ೧೨). ಕೊಡದೆ ಇದ್ದ ವಸ್ತುಗಳನ್ನು ಸಹ ಕೆಲವರು ಎತ್ತಿಹಾಕುವರು (ಗಾಹೆ ೧೪) ಈರ್ಯಾಪಥ ಸಮಿತಿಯನ್ನು ಉಲ್ಲಂಘಿಸಿ ಕೆಲವರು ನೆಲವನ್ನು ಅಗಿಯುವರು. ಓಡುವರು ಬೀಳುವರು (ಗಾಹೆ ೧೫). ಹಲ-ಕೆಲವರು ಬೆಳೆಗಳನ್ನು ಕೊಯ್ಯುವರು ಕದಿಯುವರು (ಗಾಹೆ ೧೬). ಕೆಲವರು ಮಹಿಳೆಯರಿಗೆ ಆಶ್ರಯಕೊಡುವರು. ಪ್ರವ್ರಜ್ಯಾಹೀನ ಗೃಹಸ್ಥ ಶಿಷ್ಯರೊಡನೆ ಅತ್ಯಂತ ಸ್ನೇಹವನ್ನು ಬೆಳೆಯಿಸುವರು (ಗಾಹೆ ೧೮). ಇಂಥ ಶ್ರಮಣರು ಬಹು ಜ್ಞಾನಿಗಳಾಗಿದ್ದರೂ ಸಹ ಭಾವವು ನಷ್ಟವಾಗಿರುವುದರಿಂದ ಶ್ರಮಣರೆನಿಸುವದಿಲ್ಲ. ಇವರು ಮರಣದ ತರುವಾಯ ಸ್ವರ್ಗದ ಅಧಿಕಾರಿಗಳಾಗುವುದಿಲ್ಲ. ನರಕದಲ್ಲಿ ಬೀಳುವರು ತಿರ್ಯಂಚ ಯೋನಿಯಲ್ಲಿ ಜನಿಸುವರು. ಇಂಥ ಭಾವವು ನಷ್ಟವಾಗಿರುವ ಶ್ರಮಣರನ್ನು ಪಾಸತ್ಥ (ಪಾರ್ಶ್ವಸ್ಥ)ರಿಗಿಂತಲೂ ನಿಕೃಷ್ಟವೆಂದು ಹೇಳುತ್ತಾನೆ (ಗಾಹೆ ೨೦). ಕೊನೆಗೆ ಭಾವಪಾಹುಡ ದಂತೆಯೇ ಈ ಲಿಂಗಪಾಹುಡವೂ ಕೂಡ ಜಿನಪಾದ ಬುದ್ಧನಿಂದ (ಸರ್ವಜ್ಞ) ಉಪದೇಶಿಸಲ್ಪಟ್ಟದ್ದೆಂದು ಹೇಳಿದ್ದಾನೆ. ಕರ್ತೃವಿನ ಕಾಲದಲ್ಲಿ ಮುನಿಸಂಪ್ರದಾಯದಲ್ಲಿ ಮೇಲ್ಕಾಣಿಸಿದ ದೋಷಗಳು ಕಂಡುಬರುತ್ತಿದ್ದುವು. ಆದರಿಂದ ಗ್ರಂಥಕರ್ತೃವು ಈ ಕೃತಿಯಿಂದ ಅಂಥವರನ್ನು ಜಾಗೃತಗೊಳಿಸಬೇಕಾಯಿತು ಇದು ಅವಶ್ಯಕವೂ ಆಗಿತ್ತು.

ಶೀಲಪಾಹುಡ: ಗಾಹೆ (೪೪) ಇದೂ ನಹ ಒಂದು ಪ್ರಕಾರದಿಂದ ಭಾವ ಮತ್ತು ಲಿಂಗಪಾಹುಡಗಳ ವಿಷಯಗಳಿಗೇನೇ ಪೂರಕವಾಗಿರುತ್ತದೆ. ಇದರಲ್ಲಿ ಧರ್ಮ ಸಾಧನೆಯಲ್ಲಿ ಶೀಲದ ಮಹತ್ವವನ್ನು ಒತ್ತಿ ಹೇಳಲಾಗಿದೆ. ಶೀಲವಿಲ್ಲದೆ ಇದ್ದರೆ ವಿಶಾಲ ಜ್ಞಾನದ ಪ್ರಾಪ್ತಿಯೂ ವ್ಯರ್ಥವಾಗಿದೆ. ಇಲ್ಲಿ ಸಚ್ಚಇಪುತ್ತ (ಸಾತ್ಯಕಿ ಪುತ್ರ)ನ ದೃಷ್ಟಾಂತವನ್ನು ಈ ವಿಷಯದಲ್ಲಿ ಕೊಡಲಾಗಿದೆ. ಅವನು ದಶಪೂರ್ವಗಳ ಜ್ಞಾನಿಯಾಗಿಯೂ ಕೂಡ ವಿಷಯ ಲಂಪಟನಾದುದರಿಂದ ನರಕಗಾಮಿಯಾದನು (ಗಾಹೆ ೩೦-೩೧). ವ್ಯಾಕರಣ, ಛಂದ, ವೈಶೇಷಿಕ, ವ್ಯವಹಾರ ಹಾಗೂ ನ್ಯಾಯಶಾಸ್ತ್ರದ ಜ್ಞಾನದ ಸಾರ್ಥಕತೆಯು ಶೀಲವಿದ್ದರೇನೇ ಲಗುತ್ತದೆ (ಗಾಹೆ ೧೬). ಶೀಲದ ಪೂರ್ಣತೆಯು ಸಮ್ಯಗ್ದರ್ಶನದ ಜೊತೆಯಲ್ಲಿ ಜ್ಞಾನ, ಧ್ಯಾನ, ಯೋಗ, ವಿಷಯಗಳಿಂದ ವಿರಕ್ತಿ ಮತ್ತು ತಪ ಇವುಗಳ ಸಾಧನೆಯಲ್ಲಿಯೇ ಇದೆಯೆಂದು ಹೇಳಿದೆ. ಇಂಥ ಶೀಲರೂಪದ ಜಲದಿಂದ ಸ್ನಾನಮಾಡಿದಂಥವನು ಸಿದ್ಧಾಲಯವನ್ನು ಸೇರುವನು (ಗಾಹೆ

೩೭-೩೮).

ಮೇಲೆ ಉಲ್ಲೇಖಿಸಿದ ಕುಂದಕುಂದರ ಗ್ರಂಥಗಳಲ್ಲಿ 'ಬಾರಹ ಅಣುವೆಕ್ಖಾ', ಲಿಂಗ ಮತ್ತು ಶೀಲ ಪಾಹುಡಗಳನ್ನುಳಿದು ಬೇರೆ ಗ್ರಂಥಗಳ ಮೇಲೆ ಟೀಕೆಗಳು ಲಭಿಸುತ್ತವೆ. ದರ್ಶನ ಮೊದಲಾದ ಆರು ಪಾಹುಡಗಳ ಮೇಲೆ ಶ್ರುತಸಾಗರ ಕೃತ ಸಂಸ್ಕೃತ ಟೀಕೆಗಳು ದೊರೆಯುತ್ತವೆ. ಇವುಗಳ ಏಕತ್ರಿತ ಪ್ರತಿಗಳನ್ನು ಕಂಡಲ್ಲಿ ಅವುಗಳ ಸಾಮೂಹಿಕ ಹೆಸರು ಷಟ್‌ಪ್ರಾಭೃತ (ಛಪ್ಪಾಹುಡ) ಎಂದೂ ಪ್ರಸಿದ್ಧವಾಗಿದೆ. ಶ್ರುತಸಾಗರನು ದೇವೇಂದ್ರಕೀರ್ತಿಯ ಪ್ರಶಿಷ್ಯ ಹಾಗೂ ವಿದ್ಯಾನಂದಿಯ ಶಿಷ್ಯನಾಗಿದ್ದನು. ಅಂತೂ ಅವನ ಕಾಲವು ಕ್ರಿ.ಶ. ೧೫-೧೬ನೆಯ ಶತಮಾನವೆಂದು ಸಿದ್ಧವಾಗುತ್ತದೆ.

ರಯಣಸಾರ : (ಗಾಹೆ ೧೬೭) ಇದರಲ್ಲಿ ಶ್ರಾವಕ ಹಾಗೂ ಮುನಿಗಳ ಆಚಾರದ ವರ್ಣನೆಯಿದೆ. ಪ್ರಾರಂಭದಲ್ಲಿ ಸಮ್ಯಗ್ದರ್ಶನದ ಅವಶ್ಯಕತೆಯನ್ನು ಹೇಳಿ ಅದರ ೭೦ ಗುಣಗಳನ್ನೂ ೪೪ ದೋಷಗಳನ್ನೂ ನಿರ್ದೇಶಗೊಳಿಸಿದೆ. (ಗಾಹೆ ೭-೮) ದಾನ ಮತ್ತು ಪೂಜೆಗಳು ಗೃಹಸ್ಥನಿಗಾಗಿಯೂ ಧ್ಯಾನ ಮತ್ತು ಸ್ವಾಧ್ಯಾಯಗಳು ಮುನಿಗಳಿಗಾಗಿಯೂ ಆವಶ್ಯಕವೆಂದು ಹೇಳಿದೆ. (ಗಾಹೆ-೧೧ ಆದಿ), ಹಾಗೆಯೇ ಸುಪಾತ್ರದಾನದ ಮಹಿಮೆಯನ್ನು ವಿವರಿಸಿದೆ (ಗಾಹೆ ೧೭ ಆದಿ). ಮುಂದೆ ಶುಭ ಹಾಗೂ ಅಶುಭ ಭಾವನೆಗಳ ನಿರೂಪಣೆಯಿದೆ. ಗುರುಭಕ್ತಿಯ ಮೇಲೆ ಜೋರು ಕೊಟ್ಟು ಹೇಳಿದೆ. ಆತ್ಮತತ್ವ ಪ್ರಾಪ್ತಿಗಾಗಿ ಶ್ರುತಾಭ್ಯಾಸಮಾಡುವ ಆದೇಶವನ್ನು ನೀಡಲಾಗಿದೆ. ತರುವಾಯ ಸ್ವೇಚ್ಛಾಚಾರಿ ಮುನಿಗಳ ನಿಂದೆಯನ್ನು ಮಾಡಲಾಗಿದೆ. ಅಲ್ಲದೆ ಬಹಿರಾತ್ಮ ಭಾವದಿಂದ ದೂರ ಉಳಿಯಲು ಉಪದೇಶಮಾಡಲಾಗಿದೆ. ಕೊನೆಯಲ್ಲಿ ಗಣಗಚ್ಛಗಳಿಗೇನೆ ರತ್ನತ್ರಯ ರೂಪ, ಸಂಘಕ್ಕೇನೇ ನಾನಾ ಗುಣರೂಪ, ಶುದ್ಧಾತ್ಮಕ್ಕೇನೇ ಸಮಯ ಎಂದು ಹೇಳಿದೆ. ಈ ಪಾಹುಡವನ್ನು ಇಲ್ಲಿಯವರೆಗೆ ಸಾವಧಾನದಿಂದ ಸಂಪಾದನ ಮಾಡಲಾಗಿಲ್ಲ. ಇದರಲ್ಲಿ ಒಂದು ದೋಹಾ ಹಾಗೂ ಆರು ಪದ್ಯಗಳು ಅಪಭ್ರಂಶ ಭಾಷೆಯಲ್ಲಿವೆ. ಇಲ್ಲಿ ಇವು ಪ್ರಕ್ಷಿಪ್ತವಾಗಿರಬೇಕು. ಇಲ್ಲವೆ ಈ ರಚನೆಯು ಕುಂದಕುಂದ ಕೃತವಾಗಿರದೆ ತರುವಾಯದ ಕಾಲದ ಯಾವನೋ ಒಬ್ಬ ಲೇಖಕನದೂ ಆಗಿರಬಹುದು. ಗಣಗಚ್ಛಾದಿಗಳ ಉಲ್ಲೇಖವೂ ಸಹ ಅದನ್ನು ಹಿಂದಿನ ರಚನೆಯೆಂದು ಸಿದ್ಧ ಮಾಡುತ್ತವೆ.

ವಟ್ಟಕೇರ ಸ್ವಾಮೀಕೃತ ಮೂಲಾಚಾರವು ದಿಗಂಬರ ಸಂಪ್ರದಾಯದಲ್ಲಿ ಮುನಿಧರ್ಮವನ್ನು ವಿವರಿಸುವ ಸರ್ವ ಪ್ರಥಮ ಗ್ರಂಥವಾಗಿದೆ. ಕೆಲ ಕೆಲವೆಡೆಗಳಲ್ಲಿ ಇದು ಕುಂದಕುಂದ ಕೃತವೆಂದೂ ಹೇಳಿದೆ. ಆದರೆ ಈ ಮಾತು ಸಿದ್ಧವಾಗುವುದಿಲ್ಲ. ಆದರೂ ಈ ಗ್ರಂಥದ ವಿಷಯದಲ್ಲಿ ಸಮಾಜದ ಆದರ ಬುದ್ಧಿಯು ಇದರಿಂದ ವ್ಯಕ್ತವಾಗುತ್ತದೆ. ಧವಲಾಕಾರನಾದ ವೀರಸೇನನು ಇದನ್ನು ಆಚಾರಾಂಗ ಎಂಬ ಹೆಸರಿನಿಂದ ಉದ್ಧೃತ ಮಾಡಿದ್ದಾನೆ. ಇದರಲ್ಲಿ ಒಟ್ಟು ೧೨೪೩ ಗಾಹೆಗಳು ಇವೆ. ಅವು ಮೂಲಗುಣ, ಬೃಹತ್ ಪ್ರತ್ಯಾಖ್ಯಾನ, ಸಂಕ್ಷೇಪ ಪ್ರತ್ಯಾಖ್ಯಾನ, ಸಾಮಾಚಾರ, ಪಂಚಾಚಾರ, ಪಿಂಡಶುದ್ಧಿ, ಷಡಾವಶ್ಯಕ, ದ್ವಾದಶಾನುಪ್ರೇಕ್ಷಾ, ಅನಗಾರಭಾವನಾ,

ಸಮಯಸಾರ, ಶೀಲಗುಣ ಪ್ರಸ್ತಾರ ಮತ್ತು ಪರ್ಯಾಪ್ತಿ ಈ ಹನ್ನೆರಡು ಅಧಿಕಾರ ಗಳಲ್ಲಿ ವಿಭಾಗಗೊಂಡಿವೆ. ಇವೆಲ್ಲವೂ ನಿಜವಾಗಿ ಮುನಿಯ ಇಪ್ಪತ್ತೆಂಟು ಗುಣಗಳ ವಿಸ್ತೃತ ರೂಪವೇ ಆಗಿವೆ. ಮೊದಲನೆಯ ಅಧಿಕಾರದಲ್ಲಿ ಅವುಗಳನ್ನು ಸಂಗ್ರಹ ರೂಪ ದಲ್ಲಿ ವರ್ಣಿಸಿಯೂ ಆಗಿದೆ. ಷಡಾವಶ್ಯಕ ಅಧಿಕಾರದ ೮೦ ಗಾಹೆಗಳು ಆವಶ್ಯಕ ನಿರ್ಯುಕ್ತಿ ಮತ್ತು ಅದರ ಭಾಷ್ಯದಿಂದ ಇದ್ದಕ್ಕಿದ್ದಂತೆ ಬಂದಂತಿವೆ. ಇದರ ಮೇಲೆ ವಸುನಂದಿ ಕೃತ ಟೀಕೆಯೂ ಸಹ ದೊರೆಯುತ್ತದೆ. ಬಹುತರ ಟೀಕಾಕಾರನು ಪ್ರಾಕೃತ ಉಪಾಸಕಾಧ್ಯಯನದ (ಶ್ರಾವಕಾಚಾರ) ಟೀಕಾಕಾರನೇ ಆಗಿದ್ದಾನೆ.

ಮುನಿ ಆಚಾರದ ಮೇಲೆ ಶಿವಾರ್ಯನು ರಚಿಸಿದ ಭಗವತೀ ಆರಾಧನಾ ಎಂಬ ಗ್ರಂಥವಿದೆ. ಇವನು ಗ್ರಂಥದ ಕೊನೆಯಲ್ಲಿ, ತಾನು ಆರ್ಯಜಿನನಂದಿಗಣಿ, ಸರ್ವ ಗುಪ್ತಗಣಿ ಮತ್ತು ಮಿತ್ರನಂದಿಯ ಸಾನ್ನಿಧ್ಯದಲ್ಲಿ ಸೂತ್ರ ಮತ್ತು ಅವುಗಳ ಅರ್ಥ ವನ್ನು ಚೆನ್ನಾಗಿ ಅಭ್ಯಾಸ ಮಾಡಿ, ಜ್ಞಾನ ಸಂಪಾದಿಸಿದೆ. ಪೂರ್ವಾಚಾರ್ಯ ನಿಬದ್ಧ ರಚನೆಯ ಆಶ್ರಯದಿಂದ ತನ್ನ ಶಕ್ತಿಗೆ ಅನುಸರಿಸಿ ಈ ಆರಾಧನೆಯನ್ನು ರಚಿಸಿದೆನು. —ಎಂದೂ ಹೇಳಿಕೊಂಡಿದ್ದಾನೆ. ಇದರಿಂದ ಇವನ ಎದುರಿಗೆ ಯಾವುದಾದರೊಂದು ಈ ವಿಷಯದ ಪ್ರಾಚೀನ ಗ್ರಂಥವು ಇದ್ದಿರಬೇಕೆಂದು ಗೊತ್ತಾಗುತ್ತದೆ. ಕಲ್ಪ ಸೂತ್ರದ ಸ್ಥವಿರಾವಲಿಯಲ್ಲಿ ಒಬ್ಬ ಶಿವಭೂತಿಯ ಉಲ್ಲೇಖವು ಬಂದಿದೆ. ಹಾಗೆಯೇ ಆವಶ್ಯಕ ಮೂಲಭಾಷ್ಯದಲ್ಲಿ ಶಿವಭೂತಿಯು ವೀರ ನಿರ್ವಾಣದ ತರುವಾಯ ೬೦೯ ವರ್ಷಗಳ ಮೇಲೆ ದಿಗಂಬರ ಸಂಘದ ಸಂಸ್ಥಾಪಕನೆಂದು ಹೇಳಲಾಗಿದೆ. ಕುಂದ ಕುಂದಾಚಾರ್ಯರು ತಮ್ಮ ಭಾವಪಾಹುಡದಲ್ಲಿ ಶಿವಭೂತಿಯು ಭಾವವಿಶುದ್ಧಿಯಿಂದ ಕೇವಲ ಜ್ಞಾನವನ್ನು ಸಂಪಾದಿಸಿದನೆಂದು ಹೇಳಿದ್ದಾನೆ. ಜಿನಸೇನನು ತನ್ನ ಹರಿವಂಶ ಪುರಾಣದಲ್ಲಿ ಲೋಹಾರ್ಯನ ತರುವಾಯ ಆದ ಆಚಾರ್ಯರಲ್ಲಿ ಶಿವಗುಪ್ತ ಮುನಿ ಯನ್ನು ಉಲ್ಲೇಖಿಸಿದ್ದಾನೆ. ಅವನು ತನ್ನ ಗುಣಗಳಿಂದ ಅರ್ಹದ್ ಬಲಿಯ ಸ್ಥಾನ ವನ್ನು ಪಡೆದಿದ್ದನು. ಆದಿಪುರಾಣದಲ್ಲಿ ಶಿವಕೋಟಿ ಮುನೀಶ್ವರ ಮತ್ತು ಅವನ ಚತುಷ್ಟಯ ಮೋಕ್ಷಮಾರ್ಗದ ಆರಾಧನಾ ರೂಪ ಹಿತಕರ ವಾಣಿಯ ಉಲ್ಲೇಖವಿದೆ. ಪ್ರಭಾಚಂದ್ರನ ಆರಾಧನಾ ಕಥಾಕೋಶ ಮತ್ತು ದೇವಚಂದ್ರನ 'ರಾಜಾವಳಿ ಕಥೆ' ಗಳಲ್ಲಿ ಶಿವಕೋಟಿ ಸ್ವಾಮಿಯನ್ನು ಸಮಂತಭದ್ರನ ಶಿಷ್ಯನೆಂದು ಹೇಳಿದೆ. ಈ ಎಲ್ಲ ಉಲ್ಲೇಖಗಳು ಭಗವತೀ ಆರಾಧನದ ಕರ್ತೃವಾದ ಶಿವಕೋಟಿಯನ್ನೇ ಕುರಿತು ಇವೆಯೆಂದರೆ ಆಶ್ಚರ್ಯಪಡುವ ಕಾರಣವಿಲ್ಲ. ಈ ಗ್ರಂಥವು ಬಹುತರ ಕ್ರಿ.ಶ. ಪ್ರಾರಂ ಭದ ಶತಮಾನಗಳಿಗೆ ಸೇರಿದುದಾಗಿರಬೇಕು. ಈ ಗ್ರಂಥದಲ್ಲಿ ದಿಗಂಬರ ಸಂಪ್ರದಾಯದ ಅಚೇಲಕತ್ವ ಹಾಗೂ ಶ್ವೇತಾಂಬರರ ಸ್ತ್ರೀ ಮುಕ್ತಿಗಳನ್ನು ಮನ್ನಿಸುವುದರಿಂದ ಇದು ಯಾಪನೀಯ ಸಂಘದ ರಚನೆಯಾಗಿರಬೇಕೆಂದು ಕೆಲವರ ಮತವಾಗಿದೆ. ಈ ಗ್ರಂಥ ದಲ್ಲಿ ೨೧೬೬ ಗಾಹೆಗಳು ಇವೆ. ಇದರಲ್ಲಿ ಬಹು ವಿಸ್ತಾರವಾಗಿಯೂ ವಿಶದವಾಗಿಯೂ ದರ್ಶನ, ಜ್ಞಾನ, ಚಾರಿತ್ರ ಮತ್ತು ತಪ ಈ ನಾಲ್ಕು ಆರಾಧನೆಗಳ ವರ್ಣನೆಯು ಇದೆ

ಇದರ ಉಲ್ಲೇಖವು ಕುಂದಕುಂದರ ಗ್ರಂಥಗಳಲ್ಲಿ ಹಲವೆಡೆಗೆ ಬಂದಿದೆ. ಪ್ರಸಂಗಕ್ಕನುಸರಿಸಿ ಜೈನಧರ್ಮಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳೂ ಇದರಲ್ಲಿ ಸಂಕ್ಷೇಪವಾಗಿಯೂ ವಿಸ್ತಾರವಾಗಿಯೂ ವರ್ಣಿತವಾಗಿವೆ. ದಿಗಂಬರ ಪರಂಪರೆಯ ಬೇರೆ ಗ್ರಂಥಗಳಲ್ಲಿ ನೋಡಲಿಕ್ಕೆ ದೊರೆಯದಂಥ ಮುನಿಗಳ ಸಾಧನೆ ಹಾಗೂ ವೃತ್ತಿಗಳಿಗೆ ಸಂಬಂಧಿಸಿದ ವಿಷಯಗಳು ಇದರಲ್ಲಿ ಬಂದಿವೆ. ೧೬೨೧ ರಿಂದ ೧೯೪೧ ರ ವರೆಗಿನ ೩೭೧ ಗಾಹೆಗಳಲ್ಲಿ ಆರ್ತ, ರೌದ್ರ, ಧರ್ಮ ಮತ್ತು ಶುಕ್ಲ ಈ ನಾಲ್ಕು ಧ್ಯಾನಗಳನ್ನು ವಿಸ್ತಾರವಾಗಿ ವರ್ಣಿಸಿದೆ. ಆವಶ್ಯಕ ನಿರ್ಯುಕ್ತಿ, ಬೃಹತ್‌ಕಲ್ಪ ಭಾಷ್ಯ ಮತ್ತು ನಿಶೀಥ ಮೊದಲಾದ ಪ್ರಾಚೀನ ಗ್ರಂಥಗಳಿಂದ ಇದರಲ್ಲಿ ಅನೇಕ ಗಾಥೆಗಳೂ ವೃತ್ತಾಂತಗಳೂ ಲಭಿಸುತ್ತವೆ. ಇದರ ಮೇಲೆ ಅಪರಾಜಿತ ಸೂರಿಕೃತ ವಿಜಯೋದಯಾ ಮತ್ತು ಪಂಡಿತ ಆಶಾಧರಕೃತ ಮೂಲಾರಾಧನಾದರ್ಪಣ ಎಂಬ ಎರಡು ಟೀಕೆಗಳು ವಿಸ್ತಾರವಾಗಿದ್ದು, ಸುಪ್ರಸಿದ್ಧವಾಗಿವೆ. ಅಪರಾಜಿತ ಸೂರಿಯ ಸಮಯವು ಸುಮಾರು ಕ್ರಿ.ಶ. ೭ನೆಯ ೮ನೆಯ ಶತಮಾನವಾಗಿದೆ. ಪಂಡಿತ ಆಶಾಧರನು ಕ್ರಿ.ಶ. ೧೩ ನೆಯ ಶತಮಾನದವನೆಂದು ಕಂಡುಬರುತ್ತದೆ. ಇದರ ಮೇಲೆ ಒಂದು ಪಂಜಿಕಾ ಹಾಗೂ ಭಾವಾರ್ಥದೀಪಿಕಾ ಎಂಬ ಹೆಸರಿನ ಎರಡು ಟೀಕೆಗಳೂ ಸಹ ಲಭಿಸುತ್ತವೆ.

ಮುನಿ ಆಚಾರದ ಮೇಲೆ ಶ್ವೇತಾಂಬರ ಸಂಪ್ರದಾಯದಲ್ಲಿ ಹರಿಭದ್ರಸೂರಿಯು ರಚಿಸಿದ (೮ನೆಯ ಶತಮಾನ) ಪಂಚವತ್ಥುಗ (ಪಂಚವಸ್ತುಕ) ಎಂಬ ಗ್ರಂಥವು ಉಪಲಬ್ಧವಿದೆ. ಇದರಲ್ಲಿ ೧೭೧೪ ಪ್ರಾಕೃತ ಗಾಹೆಗಳು ಇವೆ. ಅವುಗಳನ್ನು ವಿಷಯಕ್ಕೆ ಅನುಸರಿಸಿ (೧) ಮುನಿದೀಕ್ಷಾ, (೨) ಯತಿ ದಿನಕೃತ್ಯ, (೩) ಗಚ್ಛಾಚಾರ, (೪) ಅನುಜ್ಞಾ ಮತ್ತು (೫) ಸಲ್ಲೇಖನಾ ಎಂಬ ಐದು ಅಧಿಕಾರಗಳು ಇವೆ. ಇದರಲ್ಲಿ ಮುನಿಧರ್ಮಕ್ಕೆ ಸಂಬಂಧಿಸಿದ ಸಾಧನೆಗಳನ್ನು ವಿಸ್ತಾರವಾಗಿ ಊಹಾಪೋಹಪೂರ್ವಕ ವರ್ಣಿಸಲಾಗಿದೆ. (ಪ್ರಕಾಶನ ೧೯೨೭; ಗುಜರಾಥಿ ಅನುವಾದ, ರತಲಾಮ, ೧೯೩೨). ಈ ಗ್ರಂಥದ ಮೇಲೆ ಸ್ವೋಪಜ್ಞ ಟೀಕೆಯೂ ಇದೆ. ಹರಿಭದ್ರಕೃತ ಸಮ್ಯಕ್ತ್ವಸಪ್ತತಿಯಲ್ಲಿ ಹನ್ನೆರಡು ಅಧಿಕಾರಗಳಿವೆ. ಅವುಗಳಿಂದ ಸಮ್ಯಕ್ತ್ವದ ಸ್ವರೂಪವನ್ನು ತಿಳಿಸಿ ಹೇಳಿದೆ. ಅಲ್ಲದೆ ಸಮ್ಯಕ್ತ್ವ ಪ್ರಭಾವನೆಯನ್ನು ಹೆಚ್ಚಿಸುವವರಲ್ಲಿ ವಜ್ರಸ್ವಾಮಿ, ಮಲ್ಲವಾದಿ, ಭದ್ರಬಾಹು, ಪಾದಲಿಪ್ತ, ಸಿದ್ಧಸೇನ ಮೊದಲಾದವರ ಚರಿತ್ರಗಳನ್ನು ವರ್ಣಿಸಿದೆ.

ಜೀವಾನುಶಾಸನದಲ್ಲಿ ೩೨೩ ಗಾಹೆಗಳು ಇವೆ. ಮುನಿಸಂಘ, ಮಾಸಕಲ್ಪ, ವಂದನಾ ಮೊದಲಾದ ಮುನಿಚಾರಿತ್ರಕ್ಕೆ ಸಂಬಂಧಿಸಿದ ವಿಷಯಗಳ ಮೇಲೆ ವಿಚಾರ ಮಾಡಲಾಗಿದೆ. ಪ್ರಸಂಗಕ್ಕನುಸರಿಸಿ ಬಿಂಬ ಪ್ರತಿಷ್ಠೆಯ ವರ್ಣನೆಯೂ ಕೂಡ ಬಂದಿದೆ. ಈ ಗ್ರಂಥದ ರಚನೆಯನ್ನು ವೀರಚಂದ್ರಸೂರಿಯ ಶಿಷ್ಯನಾದ ದೇವಸೂರಿಯು ವಿ. ಸಂ. ೧೧೬೨ (ಕ್ರಿ.ಶ. ೧೧೦೫)ರಲ್ಲಿ ಮಾಡಿದನು.

ನೇಮಿಚಂದ್ರಸೂರಿ (೧೩ನೆಯ ಶತಮಾನ) ಕೃತ ಪ್ರವಚನಸಾರೋದ್ಧಾರ

ದಲ್ಲಿ ಸುಮಾರು ೧೬೦೦ ಗಾಹೆಗಳು ಇವೆ. ಇವು ೧೭೬ ದ್ವಾರಗಳಲ್ಲಿ ವಿಭಾಗಗೊಂಡಿವೆ. ಇದರಲ್ಲಿ ವಂದನಾ, ಪ್ರತಿಕ್ರಮಣ, ಪ್ರತ್ಯಾಖ್ಯಾನ, ಕಾಯೋತ್ಸರ್ಗ, ಮಹಾವ್ರತ, ಪರೀಷಹ ಇವೇ ಮೊದಲಾದ ಹಲವು ಮುನಿಚರಿತಕ್ಕೆ ಸಂಬಂಧಿಸಿದ ವಿಷಯಗಳ ವರ್ಣನೆಯು ಇದೆ. ಪೂಜೆ ಅರ್ಚನೆಗಳ ಸಂಬಂಧದಲ್ಲಿ ತೀರ್ಥಂಕರರ ಲಾಂಛನ, ಯಕ್ಷ-ಯಕ್ಷಿಣಿ, ಅತಿಶಯ, ಜಿನಕಲ್ಪ ಮತ್ತು ಸ್ಥವಿರಕಲ್ಪ ಮೊದಲಾದವುಗಳ ವಿವರಣವೂ ಇದರಲ್ಲಿ ಆಗ ಪ್ರಚಾರದಲ್ಲಿ ಇದ್ದಂತೆ ಬಂದಿದೆ. ಜೈನ ಕ್ರಿಯಾಕಾಂಡವನ್ನು ತಿಳಿದುಕೊಳ್ಳುವುದಕ್ಕಾಗಿ ಈ ಗ್ರಂಥವು ವಿಶೇಷ ರೂಪದಿಂದ ಉಪಯುಕ್ತವಾಗಿದೆ. ಇದರ ಮೇಲೆ ದೇವಭದ್ರನ ಶಿಷ್ಯನಾದ ಸಿದ್ಧಸೇನಸೂರಿಯು (೧೩ನೆಯ ಶತಮಾನ) 'ತತ್ತ್ವಜ್ಞಾನ ವಿಕಾಸಿನೀ' ಎಂಬ ಹೆಸರಿನ ಸಂಸ್ಕೃತ ಟೀಕೆಯನ್ನು ಬರೆದಿದ್ದಾನೆ.

ಜಿನವಲ್ಲಭಸೂರೀಕೃತ (೧೧-೧೨ನೆಯ ಶತಮಾನ) ದ್ವಾದಶಕುಲಕದಲ್ಲಿ ಸಮ್ಯಕ್ತ್ವ ಮತ್ತು ಮಿಥ್ಯಾತ್ವದ ಭೇದ ಹಾಗೂ ಕ್ರೋಧಾದಿ ಕಷಾಯಗಳ ಪರಿತ್ಯಾಗ ಇವುಗಳ ಉಪದೇಶವು ಕಂಡುಬರುತ್ತದೆ. ಇದರ ಮೇಲೆ ಜಿನಪಾಲಕೃತ ವೃತ್ತಿಯಿದೆ. ಇದು ವಿಕ್ರಮ ಸಂವತ್ಸರ ೧೨೯೩ರಲ್ಲಿ (ಮುಂಬೈ, ಸನ್ ೧೨೩೭) ಪೂರ್ಣಗೊಂಡಿದೆ.

### ಮುನಿ ಆಚಾರ-ಸಂಸ್ಕೃತ :—

ಪ್ರಶಮರತಿ ಪ್ರಕರಣವು ಉಮಾಸ್ವಾತಿ ಕೃತವೆಂದು ಮನ್ನಿಸಲಾಗುತ್ತದೆ. ಇದರಲ್ಲಿ ೩೧೩ ಪದ್ಯಗಳು ಇವೆ. ಅವುಗಳಿಂದ ಜೈನತತ್ವಜ್ಞಾನ, ಕರ್ಮಸಿದ್ಧಾಂತ, ಸಾಧು ಮತ್ತು ಗೃಹಸ್ಥರ ಆಚಾರ, ಅನಿತ್ಯಾದಿ ಹನ್ನೆರಡು ಭಾವನೆಗಳು, ಉತ್ತಮ ಕ್ಷಮಾದಿ ದಶಧರ್ಮಗಳು, ಧರ್ಮಧ್ಯಾನ, ಕೇವಲ ಜ್ಞಾನ, ಅಯೋಗಿ ಮತ್ತು ಸಿದ್ಧರ ಸ್ವರೂಪ ಇವುಗಳನ್ನೆಲ್ಲ ಸರಳ ಹಾಗೂ ಸುಂದರ ಶೈಲಿಯಲ್ಲಿ ವರ್ಣಿಸಲಾಗಿದೆ. ಟೀಕಾಕಾರನಾದ ಹರಿಭದ್ರಸೂರಿಯು ಇದನ್ನು ವಿಷಯದ ದೃಷ್ಟಿಯಿಂದ ೨೨ ಅಧಿಕಾರಗಳಲ್ಲಿ ವಿಭಜನೆ ಗೈದಿದ್ದಾನೆ. (ಸಟೀಕ ಹಿಂದಿ ಅನುವಾದ ಸಹಿತ ಪ್ರಕಾಶನ ಮುಂಬೈ ೧೯೫೦)

ಮುನಿ ಆಚಾರದ ಮೇಲೆ ಒಂದು ಚಾರಿತ್ರಸಾರ ಎಂಬ ಹೆಸರಿನ ಸಂಸ್ಕೃತ ಗ್ರಂಥವಿದೆ. ಈ ಗ್ರಂಥದ ಪುಷ್ಪಿಕೆಯಲ್ಲಿ ಹೀಗೆ ಹೇಳಿದೆ: "ಈ ಗ್ರಂಥವನ್ನು ಅಜಿತ್‌ಸೇನ ಭಟ್ಟಾರಕರ ಚರಣ ಕಮಲಗಳ ಪ್ರಸಾದದಿಂದ ನಾಲ್ಕು ಅನುಯೋಗ ರೂಪ ಸಮುದ್ರದ ಪಾರಗಾಮಿಯಾದ ಧರ್ಮ ವಿಜಯ ಚಾಮುಂಡರಾಯನು ರಚಿಸಿದನು." ಇದೇ ಪುಷ್ಪಿಕೆಯಲ್ಲಿ ಈ ಸಂಗತಿಯು ಪೂರ್ವದಲ್ಲಿ ಈ ವಿವರವಿದೆ : "ಇದರಲ್ಲಿ ಅನುಯೋಗವೇದೀ ರಣರಂಗ ಸಿಂಹನ ತತ್ವಾರ್ಥ ಸಿದ್ಧಾಂತ; ಬಹುತರ ತತ್ವಾರ್ಥ (ರಾಜವಾರ್ತಿಕ), ಮಹಾಪುರಾಣ ಹಾಗೂ ಆಚಾರ ಶಾಸ್ತ್ರಗಳಲ್ಲಿ ವಿಸ್ತಾರದಿಂದ ವರ್ಣಿಸಿದ ಚಾರಿತ್ರಸಾರವನ್ನು ಸಂಗ್ರಹ ರೂಪದಲ್ಲಿ ಇಲ್ಲಿ ವರ್ಣಿಸಲಾಗಿದೆ." ಕರ್ತೃ

ವಿನ ಈ ಪರಿಚಯದಿಂದ ಶ್ರವಣ ಬೆಳ್ಗೊಳದಲ್ಲಿ ಬಾಹುಬಲಿ ಮೂರ್ತಿಯನ್ನು ಪ್ರತಿಷ್ಠಾಪಿಸಿದ ಚಾಮುಂಡರಾಯನೇ ಈತನೆಂದು ಸುಸ್ಪಷ್ಟವಾಗುತ್ತದೆ. ಈತನ ನಿಮಿತ್ತದಿಂದಲೇ ನೇಮಿಚಂದ್ರ ಸಿದ್ಧಾಂತ ಚಕ್ರವರ್ತಿಯು ಗೊಮ್ಮಟಸಾರದ ರಚನೆಯನ್ನು ಮಾಡಿದ್ದನು. ಈ ಚಾರಿತ್ರಸಾರವು ಚಾಮುಂಡರಾಯನ ರಚನೆಯಾಗಿರಲಿ ಅಥವಾ ಅವನ ಹೆಸರಿನಿಂದ ಇನ್ನಾರಾದರೂ ಸಂಗ್ರಹಿಸಿದ್ದಿರಲಿ ಇರಬೇಕು. ಇದರ ರಚನಾ ಕಾಲವು ೧೧ನೆಯ ಶತಮಾನವೆಂದು ನಿಶ್ಚಿತವಿದೆ. ಗ್ರಂಥದ ಪುಷ್ಪಿಕೆಯ ಕೊನೆಯಲ್ಲಿ ಹೀಗೆ ಹೇಳಿದೆ: ' ಭಾವನಾಸಾರ ಸಂಗ್ರಹೇ ಚಾರಿತ್ರಸಾರೇ ಅನಗಾರ ಧರ್ಮಃ ಸಮಾಪ್ತಃ ' ಇದರ ಮೇಲಿಂದ ಗ್ರಂಥದ ಇನ್ನೊಂದು ಹೆಸರು ' ಭಾವನಾ ಸಾರ ಸಂಗ್ರಹ 'ವೆಂದೂ ಗೊತ್ತಾಗುತ್ತದೆ.

ಆಚಾರ ವಿಷಯದ ಗ್ರಂಥಗಳಲ್ಲಿ ಅಮೃತಚಂದ್ರ ಸೂರಿಕೃತ ' ಪುರುಷಾರ್ಥ ಸಿದ್ಧ್ಯುಪಾಯ 'ವು ಇದರ ಇನ್ನೊಂದು ಹೆಸರು ' ಜಿನ-ಪ್ರವಚನ-ರಹಸ್ಯ-ಕೋಶ ವೆಂದಿದೆ—ಕೆಲವೊಂದು ಸಂಗತಿಗಳಲ್ಲಿ ತನ್ನ ವೈಶಿಷ್ಟ್ಯವನ್ನು ಕಾಯ್ದುಕೊಂಡಿದೆ. ಇದು ೨೨೬ ಸಂಸ್ಕೃತ ಪದ್ಯಗಳಲ್ಲಿ ರತ್ನತ್ರಯದ ವ್ಯಾಖ್ಯಾನ ಮಾಡುತ್ತದೆ. ಇದರಲ್ಲಿ ಕ್ರಮವಾಗಿ ಚಾರಿತ್ರ ವಿಷಯದ ಅಹಿಂಸಾದಿ ಐದು ವ್ರತಗಳು, ಏಳು ಶೀಲ (೩ ಗುಣವ್ರತ-೪ ಶಿಕ್ಷಾವ್ರತ). ಸಲ್ಲೇಖನಾ, ಸಮ್ಯಕ್ತ್ವ ಮತ್ತು ಸಲ್ಲೇಖನ ಸಹಿತ ಹದಿನಾಲ್ಕು ವ್ರತಶೀಲಗಳ ೭೦ ಅತಿಚಾರ ಹಾಗೂ ಅವುಗಳ ಸ್ವರೂಪವನ್ನು ತಿಳಿಸಿ ಹೇಳಿದೆ. ಅಲ್ಲದೆ ೧೨ ತಪ, ೬ ಆವಶ್ಯಕ, ೩ ದಂಡ, ೫ ಸಮಿತಿ, ೧೦ ಧರ್ಮ, ೧೨ ಭಾವನಾ ಮತ್ತು ೩೨ ಪರೀಷಹ ಈ ಎಲ್ಲವುಗಳ ನಿರ್ದೇಶ ಮಾಡಲಾಗಿದೆ. ಇದರಲ್ಲಿ ಹಿಂಸೆ ಮತ್ತು ಅಹಿಂಸೆಗಳ ಸ್ವರೂಪದ ಬಗ್ಗೆ ಸೂಕ್ಷ್ಮ ಮತ್ತು ವಿಸ್ತಾರವಾದ ವಿವೇಚನೆಯೂ ಇದೆ. ಇಂಥ ವಿವರವು ಬೇರೆಡೆಗೆ ನೋಡಲು ಸಿಗುವಂತಿಲ್ಲ. ಇದಿಷ್ಟೇ ಅಲ್ಲ, ಉಳಿದ ವ್ರತ ಹಾಗೂ ಶೀಲಗಳಲ್ಲಿಯೂ ಕೂಡ ಮೂಲದಲ್ಲಿ ಅಹಿಂಸಾ ಭಾವನೆಯನ್ನೇ ಸ್ಥಾಪಿಸಲಾಗಿದೆ. ಆರಂಭದಲ್ಲಿ ಆತ್ಮನಿಗೇನೇ ಪುರುಷ ಮತ್ತು ಪರಿಣಾಮೀ ನಿತ್ಯನೆಂದು ಹೇಳಿ, ಅವನ ಮುಖಾಂತರ ಸಮಸ್ತ ವಿವರ್ತಗಳನ್ನೆಲ್ಲ ದಾಟಿ, ಪೂರ್ಣ ಸ್ವಚೈತನ್ಯವನ್ನು ಪಡೆಯುವುದೇ ಅರ್ಥಸಿದ್ಧಿಯೆಂದು ಹೇಳಿದೆ. ಇದರಲ್ಲಿಯೇ ಗ್ರಂಥದ ಹೆಸರಿನ ಸಾರ್ಥಕತೆಯೂ ಇದೆ. ಗ್ರಂಥದ ಕೊನೆಯಲ್ಲಿ ಅವನು ಒಂದು ಪದ್ಯದಲ್ಲಿ ಜೈನ ಅನೇಕಾಂತ ನೀತಿಯನ್ನು ಗೋಪಿಯರ ಉಪಮೆಯಿಂದ ಬಹು ಸುಂದರವಾಗಿ ಸ್ಪಷ್ಟಗೊಳಿಸಿದ್ದಾನೆ. ಗ್ರಂಥದ ಶೈಲಿಯು ಆರಂಭದಿಂದ ಕೊನೆಯವರೆಗೂ ವಿಶದ ಹಾಗೂ ವಿವೇಚನಾತ್ಮಕವಾಗಿದೆ. ಈ ಗ್ರಂಥದ ಸುಮಾರು ೬೦-೭೦ ಪದ್ಯಗಳು ಜಯಸೇನಕೃತ ಧರ್ಮ-ರತ್ನಾಕರ ದಲ್ಲಿ ಉದ್ಧರಿಸಿದ್ದು ಕಂಡುಬರುತ್ತದೆ. ಧರ್ಮರತ್ನಾಕರದ ರಚನೆಯ ಸಮಯವು ಸ್ವಯಂ ಅದರ ಪ್ರಶಸ್ತಿಗೆ ಅನುಸರಿಸಿ ವಿ.ಸಂ. ೧೦೫೫—ಕ್ರಿ.ಶ. ೯೯೮-ಎಂದಾಗುತ್ತದೆ. ಅಂತೂ ಇದೇ ಪುರುಷಾರ್ಥ ಸಿದ್ಧ್ಯುಪಾಯದ ರಚನಾಕಾಲದ ಉತ್ತರಾವಧಿಯಾಗಿದೆ.

ವೀರನಂದಿ ಕೃತ ಆಚಾರ ಸಾರದಲ್ಲಿ ಸುಮಾರು ೧೦೦೦ ಸಂಸ್ಕೃತ ಶ್ಲೋಕಗಳು ಇವೆ. ಇದರಲ್ಲಿ ಮುನಿಯ ಮೂಲ ಹಾಗೂ ಉತ್ತರ ಗುಣಗಳ ವರ್ಣನೆಯನ್ನು ಮಾಡಲಾಗಿದೆ. ಇದರಲ್ಲಿ ಹನ್ನೆರಡು ಅಧಿಕಾರಗಳಿವೆ. ಮೂಲಗುಣ, ಸಾಮಾಚಾರ, ದರ್ಶನಾಚಾರ, ಜ್ಞಾನಾಚಾರ, ಚಾರಿತ್ರಾಚಾರ, ತಪಾಚಾರ, ವೀರ್ಯಾಚಾರ, ಶುದ್ಧ್ಯಷ್ಟಕ, ಷಡಾವಶ್ಯಕ, ಧ್ಯಾನ, ಜೀವಕರ್ಮ ಮತ್ತು ದಶಧರ್ಮಶೀಲ ಎಂದು ಆ ಅಧಿಕಾರಗಳ ಹೆಸರುಗಳು. ಇದರ ರಚನೆಯು ವಟ್ಟಕೇರ ಕೃತ ಮೂಲಾಚಾರದ ಆಧಾರದಿಂದ ಆದುದು ಕಂಡುಬರುತ್ತದೆ. ಗ್ರಂಥ ಕರ್ತೃವು ತನ್ನ ಗುರುವಿನ ಹೆಸರು ಮೇಘಚಂದ್ರನೆಂದು ಹೇಳಿದ್ದಾನೆ. ಶ್ರವಣ ಬೆಳ್ಗೊಳದ ಶಿಲಾಲೇಖ ನಂ. ೫೦ ರಲ್ಲಿ ಈ ಇಬ್ಬರೂ ಗುರು-ಶಿಷ್ಯರ ಉಲ್ಲೇಖವಿದೆ. ಶಿಲಾಲೇಖ ನಂ. ೪೭ ರಲ್ಲಿ ಮೇಘಚಂದ್ರ ಮುನಿಗೆ ಶಕ ಸಂವತ್ ೧೦೩೭ (ಕ್ರಿ.ಶ. ೧೧೧೫) ರಲ್ಲಿ ಸಮಾಧಿ ಮರಣವಾದುದರ ಉಲ್ಲೇಖವಿದೆ. ಇದರ ಮೇಲಿಂದ ಈ ಗ್ರಂಥದ ರಚನಾ ಕಾಲವು ಈ ಸಮಯದ ಸುಮಾರಿನಲ್ಲಿಯೇ ಇರಬೇಕೆಂದು ಗೊತ್ತಾಗುತ್ತದೆ. ಮೇಲಿನ ಲೇಖನದಲ್ಲಿ ವೀರನಂದಿಯನ್ನು ಸಿದ್ಧಾಂತವೇದೀ ಮತ್ತು ಲೋಕಪ್ರಸಿದ್ಧ, ಅಮಲಚರಿತ, ಯೋಗಿ-ಜಿನಾಗ್ರಣೀ ಮೊದಲಾದ ಉಪಾಧಿಗಳಿಂದ ವರ್ಣಿಸಲಾಗಿದೆ.

ಸೋಮಪ್ರಭಕೃತ ಸಿಂದೂರಪ್ರಕರ, ಮತ್ತು ಶೃಂಗಾರ ವೈರಾಗ್ಯ ತರಂಗಿಣೀ (೧೨-೧೩ ನೆಯ ಶತಮಾನ) ಇವೆರಡು ನೈತಿಕ ಉಪದೇಶಗಳಿಂದ ಕೂಡಿದ ಗ್ರಂಥಗಳಾಗಿವೆ. ಇವುಗಳಲ್ಲಿ ಎರಡನೆಯ ಕೃತಿಯು ವಿಶೇಷವಾಗಿ ಪ್ರೌಢವೂ ಕಾವ್ಯಾತ್ಮಕವೂ ಆಗಿದೆ. ಇದರಲ್ಲಿ ಕಾಮಶಾಸ್ತ್ರಕ್ಕೆ ಅನುಸರಿಸಿ ಸ್ತ್ರೀಯರ ಹಾವ-ಭಾವ ಮತ್ತು ಲೀಲೆಗಳ ವರ್ಣನೆಯು ಇದೆ. ಅವರ ಕೂಡ ತರ್ಕ-ಪೂರ್ಣ ವರ್ತನೆಯು ಇರುವ ಬಗ್ಗೆ ಉಪದೇಶವನ್ನು ಮಾಡಲಾಗಿದೆ.

**ಶ್ರಾವಕಾಚಾರ-ಪ್ರಾಕೃತ :—**

ಪ್ರಾಕೃತದಲ್ಲಿ ಶ್ರಾವಕಧರ್ಮವನ್ನು ವಿವರಿಸುವ ಮೊಟ್ಟ ಮೊದಲಿನ ಸ್ವತಂತ್ರ ಗ್ರಂಥವು ಸಾವಯ ಪಣ್ಣತ್ತಿಯಾಗಿದೆ. ಇದರಲ್ಲಿ ೪೦೧ ಗಾಹೆಗಳು ಇವೆ. ಅವುಗಳಿಂದ ಐದು ಅಣುವ್ರತ, ಮೂರು ಗುಣವ್ರತ ಮತ್ತು ನಾಲ್ಕು ಶಿಕ್ಷಾವ್ರತ ಈ ಹನ್ನೆರಡು ವ್ರತಗಳ ಪ್ರರೂಪಣೆಯನ್ನು ಮಾಡಲಾಗಿದೆ. ಮೊದಲನೆಯ ವ್ರತವಾದ ಅಹಿಂಸೆಯನ್ನು ಎಲ್ಲಕ್ಕೂ ವಿಸ್ತಾರವಾಗಿ ೧೦೭ ರಿಂದ ೨೫೯ ಗಾಹೆಗಳ ವರೆಗೆ ವರ್ಣಿಸಲಾಗಿದೆ. ಈ ಗ್ರಂಥದ ಕರ್ತೃತ್ವದ ವಿಷಯದಲ್ಲಿ ಮತಭೇದವಿದೆ. ಕೆಲವರು ಇದನ್ನು ಉಮಾಸ್ವಾತಿ ಕೃತವೆಂದು ಮನ್ನಿಸುವರು. ಇನ್ನು ಕೆಲವರು ಹರಿಭದ್ರಕೃತವೆನ್ನುವರು. ಉಮಾಸ್ವಾತಿ ಕರ್ತೃತ್ವದ ಸಮರ್ಥನೆಯು ಅಭಯದೇವ ಸೂರಿಯು ರಚಿಸಿದ ಪಂಚಾಶತ ಟೀಕೆಯಲ್ಲಿ ಬರುವ ಉಲ್ಲೇಖದಿಂದ ಆಗುತ್ತದೆ. ಅದರಲ್ಲಿ ಅವನು 'ವಾಚಕತಿಲಕೇನ ಶ್ರೀಮದುಮಾಸ್ವಾತಿವಾಚಕೇನ ಶ್ರಾವಕಪ್ರಜ್ಞಪ್ತೌ ಸಾಮ್ಯತ್ವಾದಿಃ ಶ್ರಾವಕ

ಧರ್ಮೋ ವಿಸ್ತಾರೇಣ ಅಭಿಹಿತ ಃ' ಎಂದು ಹೇಳಿದ್ದಾನೆ. ಉಮಾಸ್ವಾತಿ ಕೃತ ಶ್ರಾವಕ ಪ್ರಜ್ಞಪ್ತಿಯ ಉಲ್ಲೇಖಕ ಯಶೋವಿಜಯನ ಧರ್ಮಸಂಗ್ರಹ ಹಾಗೂ ಮುನಿಚಂದ್ರ ಸೂರಿ ಕೃತ ಧರ್ಮಬಿಂದು ಟೀಕೆಯಲ್ಲಿ ಹನ್ನೆರಡನೆಯ ವ್ರತದ ಸಂಬಂಧದಲ್ಲಿ ಬರುತ್ತದೆ. ಆದರೆ ಸ್ವತಃ ಅಭಯದೇವ ಸೂರಿಯು ಹರಿಭದ್ರಸೂರೀ ಕೃತ ಪಂಚಾಶಕದ ವೃತ್ತಿಯಲ್ಲಿಯೇ—'ಸಂಪತ್ತದಂಸಣಾಇ'—ಎಂಬ ಎರಡನೆಯ ಗಾಹೆಯಲ್ಲಿ—ಹರಿಭದ್ರ ಸೂರಿಯನ್ನೇ ನಿರ್ದೇಶಪೂರ್ವಕ ಉದ್ಧೃತಗೊಳಿಸಿದ್ದುಂಟು. ಇದರಿಂದ ಈ ಪ್ರಾಕೃತ ಗ್ರಂಥವಂತೂ ಹರಿಭದ್ರಕೃತವೇ ಆಗಿದೆಯೆಂದು ಗೊತ್ತಾಗುತ್ತದೆ. ಇನ್ನು ಉಮಾಸ್ವಾತಿ ಕೃತ ಇನ್ನಾವುದಾದರೂ ಶ್ರಾವಕ-ಪ್ರಜ್ಞಪ್ತಿಯು ಇದ್ದದ್ದೇ ಆದರೆ ಅದು ಸಂಸ್ಕೃತದಲ್ಲಿ ಇರುವ ಸಂಭವವಿದೆ. ಈ ಸಂಗತಿಯು ಪ್ರಸ್ತುತ ಗ್ರಂಥದ ಅಂತಃಪರೀಕ್ಷಣ ದಿಂದಲೂ ಸಿದ್ಧವಾಗುತ್ತದೆ. ಈ ಗ್ರಂಥದಲ್ಲಿ ೨೮೦ ರಿಂದ ೩೨೮ ರ ವರೆಗಿನ ಗಾಹೆಗಳ ಮಧ್ಯದಲ್ಲಿ ಗುಣವ್ರತ ಮತ್ತು ಶಿಕ್ಷಾವ್ರತಗಳ ನಿರ್ದೇಶವು ಕ್ರಮದಿಂದ ಇರುವುದನ್ನು ಕಾಣಲಾಗುತ್ತದೆ. ಅವು ತತ್ವಾರ್ಥಸೂತ್ರ (೭, ೨೧) ದಲ್ಲಿ ನಿರ್ದಿಷ್ಟ ಕ್ರಮದಿಂದ ಭಿನ್ನವಾಗಿವೆ. ತತ್ವಾರ್ಥಸೂತ್ರದಲ್ಲಿ ದಿಗ್, ದೇಶ ಮತ್ತು ಅನರ್ಥದಂಡ ಈ ಮೂರು ಗುಣವ್ರತಗಳು ಹಾಗೆಯೇ ಸಾಮಾಯಿಕ, ಪ್ರೋಷಧೋಪವಾಸ, ಭೋಗೋಪ-ಭೋಗ ಪರಿಮಾಣ ಮತ್ತು ಅತಿಥಿ ಸಂವಿಭಾಗ ಈ ನಾಲ್ಕು ಶಿಕ್ಷಾವ್ರತಗಳನ್ನು ನಿರ್ದಿಷ್ಟಗೊಳಿಸಲಾಗಿದೆ. ಆದರೆ ಇಲ್ಲಿ ದಿಗ್‌ವ್ರತ, ಭೋಗೋಪಭೋಗ ಪರಿಮಾಣ ಅನರ್ಥದಂಡ ವಿರತಿ ಇವು ಗುಣವ್ರತ ಹಾಗೂ ಸಾಮಾಯಿಕ, ದೇಶಾವಕಾಶಿಕ, ಪ್ರೋಷಧೋಪವಾಸ, ಅತಿಥಿಸಂವಿಭಾಗ ಇವು ನಾಲ್ಕು ಶಿಕ್ಷಾವ್ರತಗಳೆಂದು ಹೇಳಿದೆ. ಇವು ಹರಿಭದ್ರ ಕೃತ 'ಸಮರಾಇಚ್ಚಕಹಾ' ಗ್ರಂಥದ ಪ್ರಥಮ ಭವದಲ್ಲಿ ವರ್ಣಿಸಿದ ವ್ರತಗಳ ಕ್ರಮವನ್ನೇ ಹೊಂದುತ್ತದೆ. ಇಷ್ಟೇ ಅಲ್ಲ, ಸಮರಾಇಚ್ಚಕಹಾದ ಮೇಲ್ಕಾಣಿಸಿದ ಪ್ರಕರಣವು ಶ್ರಾವಕ ಪ್ರಜ್ಞಪ್ತಿಯ ಪ್ರರೂಪಣಕ್ಕೆ ಬಹಳಷ್ಟು ಹೋಲುತ್ತದೆ. ಅದು ಎಷ್ಟೆಂದರೆ ಸಮ್ಯಕ್ತ್ವೋತ್ಪತ್ತಿಯ ಸಂಬಂಧದಲ್ಲಿ ಯಾವ ಘಂಸಣ-ಘೋಲನಗಳ ನಿಮಿತ್ತದ ಉಲ್ಲೇಖವು ಶ್ರಾವಕ ಪ್ರಜ್ಞಪ್ತಿಯ ೩೧ ನೆಯ ಗಾಹೆಯಲ್ಲಿ ಇದೆಯೋ, ಅದೇ ಸಮರಾ ಇಚ್ಚಕಹಾದ ಸಮ್ಯಕ್ತ್ವೋತ್ಪತ್ತಿ ಪ್ರಕರಣದಲ್ಲಿಯೂ ಪ್ರಾಕೃತ ಗದ್ಯ ದಲ್ಲಿಇದ್ದಕ್ಕಿದ್ದಂತೆ ದೊರೆಯುತ್ತದ. ಇದರಿಂದ ಈ ಕೃತಿಯು ಹರಿಭದ್ರ ಕೃತವೆಂದು ಸಿದ್ಧವಾಗುತ್ತದೆ. ಇದರ ಮೇಲೆ ಅವನದೇ ಆದ ಸಂಸ್ಕೃತ ಸ್ವೋಪಜ್ಞಟೀಕೆಯೂ ಉಪಲಬ್ಧವಿದೆ.

ಶ್ರಾವಕಧರ್ಮದ ಪ್ರಾರಂಭವು ಸಮ್ಯಕ್ತ್ವದ ಪ್ರಾಪ್ತಿಯಿಂದಲೇ ಆಗುತ್ತದೆ. ಶ್ರಾವಕಪ್ರಜ್ಞಪ್ತಿಯ ಆದಿಯಲ್ಲಿ (ಗಾಹೆ ೨) ಶ್ರಾವಕನ ಲಕ್ಷಣವನ್ನು ಹೀಗೆ ಹೇಳಲಾಗಿದೆ: ಸಮ್ಯಗ್ದರ್ಶನವನ್ನು ಸಂಪಾದಿಸಬೇಕು; ಪ್ರತಿದಿನವೂ-ಯತಿಗಳ ಸಾನ್ನಿಧ್ಯದಲ್ಲಿ ಸದಾಚಾರದ ಉಪದೇಶವನ್ನು ಕೇಳಬೇಕು, ಇಂಥವನೇ ಶ್ರಾವಕನು. ಆ ಮೇಲೆ ಸಮ್ಯಗ್ದರ್ಶನದ ಉತ್ಪತ್ತಿಯನ್ನು ವಿಧಿಪೂರ್ವಕ ತಿಳಿಸಿ ಹೇಳಲಾಗಿದೆ. ಹರಿಭದ್ರನ

ಇನ್ನೊಂದು ಕೃತಿಯಾದ ದಂಸಣಸತ್ತರೀ—ಇದರ ಇನ್ನೊಂದು ಹೆಸರು ಸಮ್ಮತ್ತ-ಸತ್ತರೀ ಅಥವಾ 'ದಂಸಣಸುದ್ಧಿ' ಯಲ್ಲಿಯೂ ೭೦ ಗಾಹೆಗಳಿಂದ ಸಮ್ಯಗ್ದರ್ಶನದ ಸ್ವರೂಪವನ್ನು ವಿವರಿಸಲಾಗಿದೆ. ಇದರ ಮೇಲೆ ಸಂಘತಿಲಕ ಸೂರಿಯ ಟೀಕೆಯು (೧೪ನೆಯ ಶತಮಾನ) ಉಪಲಬ್ಧವಿದೆ. (ಪ್ರಕಾಶಿತ ೧೯೧೬) ಹರಿಭದ್ರನ ಇನ್ನೊಂದು ಪ್ರಾಕೃತ ಕೃತಿಯು 'ಸಾವಯಧಮ್ಮವಿರಹಿ' ಎಂಬ ಹೆಸರಿನದು ಅದೆ. ಇದರಲ್ಲಿ ೧೨೦ ಗಾಹೆಗಳಿಂದ ಶ್ರಾವಕಾಚಾರದ ವರ್ಣನೆಯನ್ನು ಮಾಡಲಾಗಿದೆ. ಇದರ ಮೇಲೆ ಮಾನದೇವ ಕೃತ ವಿವೃತ್ತಿಯಿದೆ. (ಭಾವನಗರ ೧೯೨೪) ಹರಿಭದ್ರಕೃತ ೧೯ ಪ್ರಕರಣ ಎಂಬುದಿದೆ. ಇದರಲ್ಲಿ ಪ್ರತಿಯೊಂದರಲ್ಲಿಯೂ ೫೦ ಗಾಹೆಗಳು ಇವೆ. ಇದನ್ನು ಸಮಷ್ಟಿ ರೂಪದಿಂದ 'ಪಂಚಾಸಗ' ಎಂದು ಹೇಳಲಾಗುತ್ತದೆ. ಇದರ ಪ್ರಕರಣಗಳ ವಿವರ ಹೀಗಿದೆ:—(೧) ಶ್ರಾವಕಧರ್ಮ (೨) ದೀಕ್ಷಾವಿಧಾನ (೩) ವಂದನವಿಧಿ (ಚೈತ್ಯ ವಂದನ) (೪) ಪೂಜಾವಿಧಿ (೫) ಪ್ರತ್ಯಾಖ್ಯಾನವಿಧಿ (೬) ಸ್ತವವಿಧಿ (೭) ಜಿನಭವನ ಕರಣವಿಧಿ (೮) ಪ್ರತಿಷ್ಠಾವಿಧಿ (೯) ಯಾತ್ರಾವಿಧಿ (೧೦) ಉಪಾಸಕ ಪ್ರತಿಮಾ ವಿಧಿ (೧೧) ಸಾಧುಧರ್ಮ (೧೨) ಸಾಮಾಚಾರೀ (೧೩) ಪಿಂಡವಿಧಿ (೧೪) ಶೀಲಾಂಗವಿಧಿ (೧೫) ಆಲೋಚನಾವಿಧಿ (೧೬) ಪ್ರಾಯಶ್ಚಿತ್ತ (೧೭) ಸ್ಥಿತಾಸ್ಥಿತ ವಿಧಿ (೧೮) ಸಾಧು ಪ್ರತಿಮಾ ಮತ್ತು (೧೯) ತಪೋವಿಧಿ. ಈ ಪ್ರಕರಣಗಳಲ್ಲಿ ಶ್ರಾವಕ ಮತ್ತು ಮುನಿ ಆಚಾರಕ್ಕೆ ಸಂಬಂಧಿಸಿದ ಬಹುತರ ಎಲ್ಲ ವಿಷಯಗಳ ಸಮಾವೇಶವಾಗಿದೆ. ಪಂಚಾಸಗದ ಮೇಲೆ ಅಭಯದೇವ ಸೂರಿಕೃತ ಶಿಷ್ಯಹಿತಾ ಎಂಬ ಹೆಸರಿನ ಸಂಸ್ಕೃತ ಟೀಕೆಯಿದೆ. (ಭಾವನಗರ . ೧೯೧೨ , ರತಲಾಮ ೧೯೪೧) ಪಂಚಾಸಗಕ್ಕೆ ಸಮನಾದ ಅನ್ಯ ಇಪ್ಪತ್ತು ಪ್ರಕರಣಗಳು ಇವೆ. ಅವುಗಳಲ್ಲಿ ಪ್ರತಿಯೊಂದರಲ್ಲಿಯೂ ಇಪ್ಪತ್ತು ಗಾಹೆಗಳು ಇವೆ. ಈ ಸಂಗ್ರಹವು ವೀಸವೀಸೀಓ (ವಿಂಶತಿ ವಿಂಶಿಕಾ) ಎಂಬ ಹೆಸರಿನಿಂದ ಪ್ರಸಿದ್ಧವಿದೆ. ಈ ವಿಂಶಿಕೆಗಳ ಹೆಸರುಗಳು ಹೀಗಿವೆ:—(೧) ಅಧಿಕಾರ (೨) ಅನಾದಿ (೩) ಕುಲನೀತಿ (೪) ಚರಮ ಪರಿವರ್ತ (೫) ಬೀಜಾದಿ (೬) ಸದ್ಧರ್ಮ (೭) ದಾನ (೮) ಪೂಜಾವಿಧಿ (೯) ಶ್ರಾವಕ ಧರ್ಮ (೧೦) ಶ್ರಾವಕ ಪ್ರತಿಮಾ (೧೧) ಯತಿಧರ್ಮ (೧೨) ಶಿಕ್ಷಾ (೧೩) ಭಿಕ್ಷಾ (೧೪) ತದಂತರಾಯ ಶುದ್ಧಿಲಿಂಗ (೧೫) ಆಲೋಚನಾ (೧೬) ಪ್ರಾಯಶ್ಚಿತ್ತ (೧೭) ಯೋಗ ವಿಧಾನ (೧೮) ಕೇವಲಜ್ಞಾನ (೧೯) ಸಿದ್ಧವಿಭಕ್ತಿ (೨೦) ಸಿದ್ಧಸುಖ. ಈ ವಿಂಶಿಕೆಗಳಲ್ಲಿಯೂ ಶ್ರಾವಕ ಮತ್ತು ಮುನಿಧರ್ಮಗಳ ಸಾಮಾನ್ಯ ನಿಯಮ ಹಾಗೂ ನಾನಾ ವಿಧಾನ ಮತ್ತು ಸಾಧನಗಳ ನಿರೂಪಣೆಯು ಇದೆ. ಈ ಗ್ರಂಥದ ಮೇಲೆ ಆನಂದ ಸಾಗರ ಸೂರಿಯಿಂದ ಒಂದು ಟೀಕೆಯು ಬರೆಯಲ್ಪಟ್ಟಿದೆ. ೧೭ನೆಯದಾದ ಯೋಗ ವಿಧಾನ ಎಂಬ ಹೆಸರಿನ ವಿಂಶಿಕೆಯ ಮೇಲೆ ಶ್ರೀ ನ್ಯಾಯಾಚಾರ್ಯ ಯಶೋವಿಜಯ ಗಣೀಕೃತ ಟೀಕೆಯೂ ಇದೆ. (ಪ್ರಕಾಶನ ಮೂಲ ಮಾತ್ರ, ಪುಣೆ ೧೯೩೨).

ಶಾಂತಿಸೂರಿಕೃತ (೧೨ ನೆಯ ಶತಮಾನ) ಧರ್ಮರತ್ನಪ್ರಕರಣದಲ್ಲಿ ೧೪೧

ಗಾಹೆಗಳಿವೆ. ಇದರಲ್ಲಿ ಶ್ರಾವಕಪದ ಪ್ರಾಪ್ತಿಗಾಗಿ ಸೌಮ್ಯತೆ, ಪಾಪಭೀರುತ್ವ ಮೊದ ಲಾದ ೨೧ ಆವಶ್ಯಕ ಗುಣಗಳ ವರ್ಣನೆಯನ್ನು ಮಾಡಲಾಗಿದೆ. ಅಲ್ಲದೆ ಭಾವಶ್ರಮ ಣನ ಲಕ್ಷಣ ಮತ್ತು ಶೀಲಗಳ ನಿರೂಪಣೆಯೂ ನಹ ಇದೆ. ಇದರ ಮೇಲೆ ಸ್ವೋಪಜ್ಞ ವೃತ್ತಿಯೂ ಇದೆ.

ಪ್ರಾಕೃತ ಗಾಹೆಗಳಿಂದ ಶ್ರಾವಕಧರ್ಮವನ್ನು ನಿರೂಪಿಸುವಂಥ ಎರಡನೆಯ ಗ್ರಂಥವು ವಸುನಂದಿಕೃತ ಉಪಾಸಕಾಧ್ಯಯನವಾಗಿದೆ (ಶ್ರಾವಕಾಚಾರವಿದು). ಇದರಲ್ಲಿ ೫೪೬ ಗಾಹೆಗಳು ಇವೆ. ಇವುಗಳಿಂದ ಶ್ರಾವಕರ ಹನ್ನೊಂದು ಪ್ರತಿಮೆ ಗಳನ್ನೂ ಅರ್ಥಾತ್ ತರಗತಿಗಳನ್ನು ವಿಸ್ತಾರವಾಗಿ ವರ್ಣಿಸಲಾಗಿದೆ. ಕರ್ತೃವು ತನ್ನ ಪರಿಚಯವನ್ನು ಗ್ರಂಥದ ಪ್ರಶಸ್ತಿಯಲ್ಲಿ ಕೊಟ್ಟಿದ್ದಾನೆ. ಅದಕ್ಕನುಸರಿಸಿ ಅವನ ಗುರು ಪರಂಪರೆಯು, ಕುಂದಕುಂದಾಮ್ನಾಯದಲ್ಲಿ ಕ್ರಮದಿಂದ ಶ್ರೀನಂದಿ, ನಯನಂದಿ, ನೇಮಿಚಂದ್ರ ಮತ್ತು ವಸುನಂದಿ ಈ ಪ್ರಕಾರ ಇದ್ದುದು ಕಂಡುಬರುತ್ತದೆ. "ತಾನು ತನ್ನ ಗುರುವಾದ ನೇಮಿಚಂದ್ರನ ಪ್ರಸಾದದಿಂದ ಆಚಾರ್ಯ ಪರಂಪರಾಗತವಾಗಿ ಬಂದ ಉಪಾಸಕಾಧ್ಯಯನವನ್ನು ವಾತ್ಸಲ್ಯ ಹಾಗೂ ಆದರ ಭಾವದಿಂದ ಭವ್ಯರಿಗಾಗಿ ರಚಿಸಿ ದೆನು"—ಎಂದೂ ನಹ ಹೇಳಿಕೊಂಡಿದ್ದಾನೆ. ಗ್ರಂಥದ ಆದಿಯಲ್ಲಿ, ಅವನು 'ವಿಪುಲಾ ಚಲ ಪರ್ವತದಲ್ಲಿ ಇಂದ್ರಭೂತಿಯು ಶ್ರೇಣಿಕನಿಗೆ ಉಪದೇಶವಿತ್ತುದನ್ನೇ ಗುರು ಪರಂಪರೆಯಿಂದ ಈಗ ನಾನು ಹೇಳುತ್ತಿರುವೆ ಕೇಳಿರಿ'—ಎಂದೂ ಹೇಳಿದ್ದಾನೆ. ಇದ ರಿಂದ ದ್ವಾದಶಾಂಗದಲ್ಲಿ ಏಳನೆಯ ಶ್ರುತಾಂಗವಾದ 'ಉಪಾಸಕದಶಾ' ಎಂಬುದರಲ್ಲಿ ನಮಗೆ ಈ ಹನ್ನೊಂದು ಶ್ರಾವಕರ ಪ್ರತಿಮೆಗಳು ನೋಡಲಿಕ್ಕೆ ಸಿಗುತ್ತವೆಂಬುದನ್ನೂ ನಾವಿಲ್ಲಿ ಗಮನಿಸಬೇಕು. ಭೇದವಿಷ್ಟೆ, ಅಲ್ಲಿ ಅದು ಆನಂದ ಶ್ರಾವಕನ ಕಥಾನಕದಲ್ಲಿ ನೇರ್ಪಡೆಯಾಗಿದೆ, ಇಲ್ಲಿ ಸ್ವತಂತ್ರ ರೂಪದಿಂದ ಬಂದಿವೆ. ಇದರಲ್ಲಿ ೨೬೫ ರಿಂದ ೩೦೧ ರ ವರೆಗಿನ ಹಾಗೂ ಇದರ ಮೊದಲಿನ ಕೆಲವೊಂದು ಗಾಹೆಗಳು ಶ್ರಾವಕ ಪ್ರತಿ ಕ್ರಮಣಸೂತ್ರದಲ್ಲಿ ಇದ್ದಂತೆಯೇ ಇವೆ. ಕುಂದ ಕುಂದಾಚಾರ್ಯಕೃತ ಚಾರಿತ್ರ ಪಾಹುಡದಲ್ಲಿ (ಗಾಹೆ ೨೨) ಹನ್ನೊಂದು ಪ್ರತಿಮೆಗಳ ಹೆಸರುಗಳು ಮಾತ್ರ ಉಲ್ಲೇಖ ಗೊಂಡಿವೆ. ಅವುಗಳ ಕೆಲವೊಂದು ವಿಸ್ತಾರವಾದ ವರ್ಣನೆಯು ಕಾರ್ತಿಕೆಯಾನುಪ್ರೇ ಕ್ಷಾದ ೩೦೫ರಿಂದ ೩೯೧ ರ ವರೆಗಿನ ೮೬ ಗಾಹೆಗಳಲ್ಲಿ ಬರುತ್ತದೆ. ಇವೆಲ್ಲವುಗಳಿಗಿಂತ ಬೇರೆಯಾದ ವಿಧಾನವನ್ನು ವಸುನಂದಿಯು ಸೂಚಿಸಿದ್ದಾನೆ. ಇವನು ರಾತ್ರಿ ಭೋಜನ –ತ್ಯಾಗವನ್ನು ಮೊದಲನೆಯದಾದ ದರ್ಶನ ಪ್ರತಿಮೆಯಲ್ಲಿಯೇ ಆವಶ್ಯಕವೆಂದು ಹೇಳಿ, ಆರನೆಯ ಪ್ರತಿಮೆಯಲ್ಲಿ ಅದರ ಸ್ಥಾನದಲ್ಲಿ ದಿವಾ–ಬ್ರಹ್ಮಚರ್ಯದ ವಿಧಾನ ಮಾಡಿ ದ್ದಾನೆ. ಗ್ರಂಥ ರಚನೆಯ ಕಾಲವು ನಿಶ್ಚಿತವಿಲ್ಲ. ಆದರೂ ಈ ಗ್ರಂಥದ ಅನೇಕ ಗಾಹೆ ಗಳು ದೇವಸೇನಕೃತ ಭಾವಸಂಗ್ರಹದ ಆಧಾರದಿಂದ ಬರೆದದ್ದು ತಿಳಿಯುತ್ತದೆ. ಅದ ರಿಂದ ಇದರ ರಚನಾಕಾಲವು ವಿ.ಸಂ. ೯೯೦ ರ (ಕ್ರಿ.ಶ. ೯೩೩) ಪೂರ್ವದ್ದಲ್ಲವೆಂದು ಅನುಮಾನ ಮಾಡಲು ಬರುತ್ತದೆ. ಆಶಾಧರ ಕೃತ ಸಾಗಾರ–ಧರ್ಮಾಮೃತ ಟೀಕೆಯಲ್ಲಿ

ವಸುನಂದಿಯ ಉಲ್ಲೇಖವು ಸ್ಪಷ್ಟವಾಗಿದೆ. ಅದರಿಂದ ಅವನ ಕಾಲದ ಉತ್ತರಾವಧಿಯು ವಿ.ಸಂ ೧೨೯೬ (ಕ್ರಿ.ಶ. ೧೨೩೯) ಎಂದು ಸಿದ್ಧವಾಗುತ್ತದೆ. ಈ ಕಾಲಾವಧಿಯ ಮಧ್ಯದಲ್ಲಿ–ಬಹುತರ ೧೧-೧೨ ನೆಯ ಶತಮಾನದಲ್ಲಿ—ಈ ಗ್ರಂಥದ ರಚನೆಯಾಗಿರಬೇಕು.

ಅಪಭ್ರಂಶ ಭಾಷೆಯಲ್ಲಿ ಶ್ರಾವಕಾಚಾರ ವಿಷಯಕ್ಕೆ 'ಸಾವಯಧಮ್ಮದೋಹಾ' ಎಂಬ ಗ್ರಂಥವಿದೆ. ಇದರಲ್ಲಿ ೨೨೪ ಗಾಹೆಗಳಿಂದ ಶ್ರಾವಕರ ಹನ್ನೊಂದು ಪ್ರತಿಮೆಗಳನ್ನೂ ಹನ್ನೆರಡು ವ್ರತಗಳನ್ನೂ ವಿವರಿಸಲಾಗಿದೆ. ಹನ್ನೆರಡು ವ್ರತಗಳ ಹೆಸರುಗಳು ಕುಂದಕುಂದರ ವಿವರಣೆಗೆ ಅನುಸರಿಸಿ ಇವೆ. ಆದರೆ ಇವುಗಳಲ್ಲಿ ದೇಶವ್ರತವು ಸಮಾವೇಶವಾಗಿರದೆ ಸಲ್ಲೇಖನವು ಸಮ್ಮಿಲಿತವಾಗಿದೆ. ಸಪ್ತವ್ಯಸನಗಳು ಅಭಕ್ಷ್ಯಗಳು ಹಾಗೂ ಕುಸಂಗತಿ, ಅನ್ಯಾಯ, ಹೆಚ್ಚು-ಚುಚ್ಚುವಿಕೆ, ಅಸತ್ಯವ್ಯವಹಾರ ಮೊದಲಾದ ದುರ್ಗುಣಗಳ ಪರಿತ್ಯಾಗದ ಉಪದೇಶವನ್ನೂ ಮಾಡಲಾಗಿದೆ. ಶೈಲಿಯು ಬಹು ಸರಳ ಸುಂದರ, ಕಾವ್ಯ ಗುಣಾತ್ಮಕವಾಗಿದೆ. ಬಹುತರ ಪ್ರತಿಯೊಂದು ಗಾಹೆಯಲ್ಲಿಯೂ ಒಂದು ಪಂಕ್ತಿಯಲ್ಲಿ ಧರ್ಮೋಪದೇಶ, ಇನ್ನೊಂದರಲ್ಲಿ ಸುಂದರವೂ ಮನೋಹರವೂ ಆದ ಒಂದು ದೃಷ್ಟಾಂತವನ್ನೂ ಕೊಡಲಾಗಿದೆ. ಈ ಗ್ರಂಥದ ಕರ್ತೃತ್ವದ ವಿಷಯದಲ್ಲಿ ಕೆಲವೊಂದು ವಾದಗಳು ಇವೆ. ಪ್ರಕಟವಾದ ಗ್ರಂಥದ (ಕಾರಂಜಾ ೧೯೩೨) ಭೂಮಿಕೆಯಲ್ಲಿ ಊಹಾಪೋಹ ಗೈದು ಇದರ ಕರ್ತೃವು ದೇವಸೇನನೆಂದೂ ಅವನ ಕಾಲವು ಹತ್ತನೆಯ ಶತಮಾನವೆಂದೂ ಸಿದ್ಧಮಾಡಲಾಗಿದೆ. ಆದರೆ ಕೆಲವೊಂದು ಹಸ್ತಲಿಖಿತ ಪ್ರಾಚೀನ ಪ್ರತಿಗಳಲ್ಲಿ ಇದು ಯೋಗೀಂದ್ರ ಕೃತವೆಂದೂ ಹೇಳಿದೆ. ಇನ್ನು ಕೆಲವುಗಳಲ್ಲಿ—ಲಕ್ಷ್ಮೀಚಂದ್ರ ಕೃತ ಶ್ರುತಸಾಗರ ಕೃತ ಷಟ್‌ಪಾಹುಡ ಟೀಕೆಗಳಲ್ಲಿ—ಈ ಗ್ರಂಥದ ಕೆಲವು ದೋಹಾಗಳು ಉದ್ಧೃತವಾದದ್ದು ಕಂಡು ಬರುತ್ತದೆ. ಅವು ಲಕ್ಷ್ಮೀಚಂದ್ರ ಕೃತವೆಂದು ಹೇಳುವರು. ಒಂದು ವೇಳೆ ಪೂರ್ಣ ಗ್ರಂಥದ ಕರ್ತೃವು ಲಕ್ಷ್ಮೀಚಂದ್ರನೆಂದೇ ಆದಲ್ಲಿ ಅದು ೧೫ನೆಯ ಶತಮಾನದ ಗ್ರಂಥವೆಂದು ಸಿದ್ಧವಾಗುತ್ತದೆ. ಗ್ರಂಥದ ಮೇಲೆ ಯೋಗೀಂದ್ರ ಕೃತ ಪರಮಾತ್ಮ ಪ್ರಕಾಶ ಹಾಗೂ ದೇವಸೇನ ಕೃತ ಭಾವಸಂಗ್ರಹಗಳ ಪ್ರಭಾವವು ಬಹಳಷ್ಟು ಕಂಡುಬರುತ್ತದೆ. ಇದರ ಪ್ರಾಚೀನ ಪ್ರತಿಯೊಂದು ಜಯಪುರದ ಪಾಟೋದೀ ಜೈನಮಂದಿರದಲ್ಲಿ ವಿ. ಸಂ. ೧೫೫೫ (ಕ್ರಿ.ಶ. ೧೪೯೮) ರಲ್ಲಿ ಮಾಡಿದ್ದು ಇದೆ. ಆದರ ಪುಷ್ಪಿಕೆಯಲ್ಲಿ "ಇತಿ ಉಪಾಸಕಾಚಾರೆ ಆಚಾರ್ಯ ಶ್ರೀ ಲಕ್ಷ್ಮೀಚಂದ್ರವಿರಚಿತೇ ದೋಹಕ-ಸೂತ್ರಾಣಿ ಸಮಾಪ್ತಾನಿ" ಹೀಗೆ ಉಲ್ಲೇಖವಿದೆ.

**ಶ್ರಾವಕಾಚಾರ—ಸಂಸ್ಕೃತ :—**

ರತ್ನಕರಂಡ-ಶ್ರಾವಕಾಚಾರ— ಇದು ಸಂಸ್ಕೃತದಲ್ಲಿ ಶ್ರಾವಕ ಧರ್ಮದ ವಿಷಯದಲ್ಲಿ ಬಹು ಪ್ರಸಿದ್ಧ ಗ್ರಂಥವಾಗಿದೆ. ಇದರ ೧೫೦ ಶ್ಲೋಕಗಳಲ್ಲಿ ಕ್ರಮವಾಗಿ

ಸಮ್ಯಗ್ದರ್ಶನ, ಜ್ಞಾನ ಮತ್ತು ಚಾರಿತ್ರದ ನಿರೂಪಣೆಯನ್ನು ಮಾಡಲಾಗಿದೆ. ಚಾರಿತ್ರ ದಲ್ಲಿ ಐದು ಅಣುವ್ರತ, ಮೂರು ಗುಣವ್ರತ ಮತ್ತು ನಾಲ್ಕು ಶಿಕ್ಷಾವ್ರತಗಳನ್ನು ವಿಸ್ತಾರ ವಾಗಿ ವರ್ಣಿಸಲಾಗಿದೆ. ತರುವಾಯ ಸಲ್ಲೇಖನವನ್ನು ನಿರೂಪಿಸಲಾಗಿದೆ. ಕುಂದ ಕುಂದರ ನಿರ್ದೇಶಕ್ಕನುಸರಿಸಿ (ಚಾರಿತ್ರ ಪಾಹುಡ ಗಾಹೆ ೨೫—೨೬) ಸಲ್ಲೇಖನ ವನ್ನೂ ಕೂಡ ಶ್ರಾವಕರ ವ್ರತಗಳಲ್ಲಿ ಸ್ವೀಕರಿಸಲಾಗಿದೆ. ಕೊನೆಯಲ್ಲಿ ಹನ್ನೊಂದು ಶ್ರಾವಕ ಪದಗಳ—ಪ್ರತಿಮೆಗಳ—ನಿರೂಪಣೆಯೂ ಇದೆ. ಈ ಪ್ರಕಾರ ಇದರಲ್ಲಿ ಶ್ರಾವಕ ಧರ್ಮದ ಪ್ರರೂಪಣ—ನಿರೂಪಣಗಳು ಎರಡೂ ಪದ್ಧತಿಗಳಿಗೆ ಅನುಸರಿಸಿ ಮಾಡಲ್ಪಟ್ಟಿವೆ. ಗ್ರಂಥ ಕರ್ತೃವು ಈ ಕೃತಿಯಲ್ಲಿ ತನ್ನ ಹೆಸರನ್ನು ಪ್ರಕಟಗೊಳಿಸಿಲ್ಲ. ಆದರೆ ಟೀಕಾಕಾರನಾದ ಪ್ರಭಾಚಂದ್ರನು ಸಮಂತಭದ್ರ ಕೃತವೆಂದು ಹೇಳಿದ್ದಾನೆ. ಇದೇ ಆಧಾರದಿಂದ ಇದನ್ನು ಸ್ವಾಮೀ ಸಮಂತಭದ್ರ ಕೃತವೆಂದು ಮನ್ನಿಸಲಾಗುತ್ತಿದೆ. ಇವನು ಆಪ್ತ ಮೀಮಾಂಸಾದಿ, ಗ್ರಂಥಗಳ ರಚನೆಯನ್ನು ಮಾಡಿದ್ದಾನೆ. ಭಾಷಾ ಶೈಲಿಯೇ ಮೊದಲಾದ ಭೇದಗಳನ್ನು ಬದಿಗಿಟ್ಟರೂ ಕೂಡ ಇದರಲ್ಲಿ ಆಪ್ತಮೀಮಾಂಸಾ ಸಮ್ಮತ ಆಪ್ತನ ಲಕ್ಷಣದೊಡನೆ ಭಿನ್ನತೆಯು ಕಂಡುಬರುತ್ತದೆ. ಇನ್ನೊಂದು ವಾದಿರಾಜ ಸೂರಿಯ ಪಾರ್ಶ್ವನಾಥ ಚರಿತ್ರೆಯ ಉತ್ಥಾನಿಕೆಯಲ್ಲಿ ಈ ರಚನೆಯು ಸ್ಪಷ್ಟವಾಗಿ ಸಮಂತಭದ್ರನಿಂದ ಭಿನ್ನನಾದ 'ಯೋಗೀಂದ್ರ'ನದೆಂದು ಹೇಳಲಾಗಿದೆ. ಇದಕ್ಕೂ ಪೂರ್ವದಲ್ಲಿ ಈ ಗ್ರಂಥದ ಯಾವ ಉಲ್ಲೇಖವೂ ದೊರೆಯುವುದಿಲ್ಲ. ಅಲ್ಲದೆ ಸ್ವತಃ ಗ್ರಂಥದ ಉಪಾಂತ್ಯ ಶ್ಲೋಕದಲ್ಲಿ 'ವೀತಕಲಂಕ', 'ವಿದ್ಯಾ' ಮತ್ತು 'ಸರ್ವಾರ್ಥ ಸಿದ್ಧಿ' ಶಬ್ದಗಳ ಉಪಯೋಗವನ್ನೂ ಮಾಡಲಾಗಿದೆ. ಇದರಿಂದ ಅಕಲಂಕಕೃತ ರಾಜ ವಾರ್ತಿಕ ಮತ್ತು ವಿದ್ಯಾನಂದಿ ಕೃತ ಶ್ಲೋಕವಾರ್ತಿಕ ಹಾಗೂ ಪೂಜ್ಯವಾದ ಕೃತ ಸರ್ವಾರ್ಥಸಿದ್ಧಿ ಈ ಮೂರೂ ಟೀಕೆಗಳು ಗ್ರಂಥಕಾರನಿಗೆ ಪರಿಚಿತವಿದ್ದವೆಂದೂ ಅವನು ಉಪಕೃತನೂ ಇದ್ದನೆಂದೂ ಗೊತ್ತಾಗುತ್ತದೆ. ಇದಕ್ಕನುಸರಿಸಿ ಈ ಗ್ರಂಥವು ವಿದ್ಯಾ ನಂದಿ ಮತ್ತು ವಾದಿರಾಜರ ಕಾಲದ ಮಧ್ಯದಲ್ಲಿ – ಎಂಟರಿಂದ ಹತ್ತು–ಹನ್ನೊಂದನೆಯ ಶತಮಾನಗಳವರೆಗೆ—ಯಾವ ಕಾಲಕ್ಕಾದರೂ ರಚಿತವಾಗಿರಬೇಕು.

ಸೋಮದೇವ ಕೃತ ಯಶಸ್ತಿಲಕಚಂಪೂವಿನ ಐದರಿಂದ ಎಂಟನೆಯ ಆಶ್ವಾಸ ಗಳಲ್ಲಿ ಚಾರಿತ್ರದ ವರ್ಣನೆಯು ಕಂಡುಬರುತ್ತದೆ. ವಿಶೇಷವಾಗಿ ಇದರ ಏಳನೆಯ ಎಂಟನೆಯ ಆಶ್ವಾಸಗಳಲ್ಲಿ ಶ್ರಾವಕರ ಹನ್ನೆರಡು ವ್ರತಗಳನ್ನು ವಿಸ್ತಾರವಾಗಿ ಪ್ರೌಢ ಶೈಲಿಯಲ್ಲಿ ವರ್ಣಿಸಲಾಗಿದೆ. ಈ ಗ್ರಂಥವು ಶಕ ಸಂ. ೮೮೧ (ಕ್ರಿ.ಶ. ೯೫೯) ರಲ್ಲಿ ಸಮಾಪ್ತವಾಗಿತ್ತು.

ಅಮಿತಗತಿ ಕೃತ ಶ್ರಾವಕಾಚಾರವು ಸುಮಾರು ೧೫೦೦ ಸಂಸ್ಕೃತ ಪದ್ಯಗಳಲ್ಲಿ ಪೂರ್ಣವಾಗಿದೆ. ಇದರಲ್ಲಿ ಹದಿನೈದು ಅಧ್ಯಾಯಗಳು ಇವೆ. ಅವುಗಳಲ್ಲಿ ಧರ್ಮದ ಸ್ವರೂಪ, ಮಿಥ್ಯಾತ್ವ ಮತ್ತು ಸಮ್ಯಕ್ತ್ವದ ಭೇದ, ಸಪ್ತತತ್ವ, ಅಷ್ಟ ಮೂಲಗುಣ, ಹನ್ನೆರಡು ವ್ರತ ಮತ್ತು ಅವುಗಳ ಅತಿಚಾರ, ಸಾಮಾಯಿಕವೇ ಮೊದಲಾದ ಆರು

ಆವಶ್ಯಕ, ದಾನ, ಪೂಜಾ ಮತ್ತು ಉಪವಾಸ ಹಾಗೂ ಹನ್ನೆರಡು ಭಾವನೆಗಳ ಸುವಿಸ್ತೃತ ವರ್ಣನೆಯು ಕಂಡುಬರುತ್ತದೆ. ಕೊನೆಯ ಅಧ್ಯಾಯದಲ್ಲಿ ಧ್ಯಾನದ ವರ್ಣನೆಯನ್ನು ೧೧೪ ಪದ್ಯಗಳಲ್ಲಿ ಮಾಡಿದೆ. ಇದರಲ್ಲಿ ಧ್ಯಾನ, ಧ್ಯಾನಿಸುವವ, ಧ್ಯೇಯ ಮತ್ತು ಧ್ಯಾನಫಲ ಇವುಗಳ ನಿರೂಪಣೆಯು ಇದೆ. ಅಮಿತಗತಿಯು ತನ್ನ ಅನೇಕ ಗ್ರಂಥಗಳಲ್ಲಿ ಅವುಗಳ ರಚನಾ ಕಾಲದ ಉಲ್ಲೇಖವನ್ನೂ ಮಾಡಿದ್ದಾನೆ. ಅವುಗಳಲ್ಲಿ ವಿ. ಸಂ. ೧೦೫೦ ರಿಂದ ೧೦೭೩ ರ ವರೆಗಿನ ಉಲ್ಲೇಖಗಳು ದೊರೆಯುತ್ತವೆ. ಅಂದ ಮೇಲೆ ಈ ಗ್ರಂಥದ ರಚನಾ ಕಾಲವು ಸುಮಾರು ಕ್ರಿ.ಶ. ೧೦೦೦ ವೆಂದು ಸಿದ್ಧವಾಗುತ್ತದೆ.

ಆಶಾಧರಕೃತ ಸಾಗಾರ ಧರ್ಮಾಮೃತವು ಸುಮಾರು ೫೦೦ ಸಂಸ್ಕೃತ ಪದ್ಯಗಳಲ್ಲಿ ಪೂರ್ಣವಾಗಿದೆ. ಇದರಲ್ಲಿ ಎಂಟು ಅಧ್ಯಾಯಗಳು ಇವೆ. ಅವುಗಳಲ್ಲಿ ಶ್ರಾವಕ ಧರ್ಮದ ಸಾಮಾನ್ಯ ವರ್ಣನೆಯೂ ಅಷ್ಟ ಮೂಲ ಗುಣಗಳೂ, ಹನ್ನೊಂದು ಪ್ರತಿಮೆಗಳೂ ವರ್ಣನೆಗೊಂಡಿವೆ. ವ್ರತ ಪ್ರತಿಮೆಯಲ್ಲಿ ಹನ್ನೆರಡು ವ್ರತಗಳಲ್ಲದೆ ಶ್ರಾವಕರ ದಿನಚರ್ಯೆಯನ್ನು ಸಹ ವಿವರಿಸಿದೆ. ಕೊನೆಯ ಅಧ್ಯಾಯದ ೧೧೦ ಶ್ಲೋಕಗಳಲ್ಲಿ ಸಮಾಧಿ ಮರಣದ ವಿಸ್ತಾರವಾದ ವರ್ಣನೆಯು ಇದೆ ರಚನಾಶೈಲಿಯು ಕಾವ್ಯಾತ್ಮಕವಾಗಿದೆ. ಗ್ರಂಥದ ಮೇಲೆ ಕರ್ತೃವಿನ ಸ್ವೋಪಜ್ಞ ಟೀಕೆಯು ಉಪಲಬ್ಧವಿದೆ. ಅದರಲ್ಲಿ ಇದರ ಸಮಾಪ್ತಿಯ ಸಮಯವು ವಿ ಸಂ. ೧೨೯೬ ಅರ್ಥಾತ್ ಕ್ರಿ ಶ. ೧೨೩೯ ಎಂದು ಉಲ್ಲೇಖಗೊಂಡಿದೆ. (ಪ್ರಕಾಶನ ಮುಂಬಯಿ ೧೯೧೫)

ಗುಣಭೂಷಣ ಕೃತ ಶ್ರಾವಕಾಚಾರಕ್ಕೆ ಕರ್ತೃವು ಭವ್ಯ ಜನ-ಚಿತ್ತವಲ್ಲಭ ಶ್ರಾವಕಾಚಾರವೆಂದು ಕರೆದಿದ್ದಾನೆ ಇದರಲ್ಲಿ ೩೯೭ ಶ್ಲೋಕಗಳಿವೆ. ಅವುಗಳಿಂದ ದರ್ಶನ, ಜ್ಞಾನ ಮತ್ತು ಶ್ರಾವಕಧರ್ಮ ಎಂಬ ಮೂರು ಉದ್ದೇಶಗಳಲ್ಲಿ ಸರಳ ರೀತಿಯ ನಿರೂಪಣವಿದೆ ಇದರ ರಚನಾ ಕಾಲವು ನಿಶ್ಚಿತವಿಲ್ಲ. ಆದರೆ ಇದರ ಮೇಲೆ ರತ್ನಕರಂಡ, ವಸುನಂದಿ ಶ್ರಾವಕಾಚಾರ ಮೊದಲಾದವುಗಳ ಪ್ರಭಾವವು ಕಂಡುಬರುತ್ತದೆ. ಸುಮಾರು ೧೪ ನೆಯ ೧೫ ನೆಯ ಶತಮಾನದ ಗ್ರಂಥವು ಇದಾಗಿರಬೇಕೆಂದು ಅನುಮಾನ ಮಾಡಲಾಗುತ್ತದೆ.

ಶ್ರಾವಕ ಧರ್ಮಕ್ಕೆ ಸಂಬಂಧಿಸಿದ ಗ್ರಂಥಗಳ ಪರಂಪರೆಯು ಅವಿಚ್ಛಿನ್ನವಾಗಿ ನಡೆಯುತ್ತ ಬಂದಿದೆ. ಇದರಲ್ಲಿ ಹದಿನೇಳನೆಯ ಶತಮಾನದ ಅಕಬರನ ಕಾಲದಲ್ಲಿ ರಾಜಮಲ್ಲನಿಂದ ರಚಿತವಾದ ಲಾಟೀ ಸಂಹಿತಾ ಉಲ್ಲೇಖನೀಯವಾಗಿದೆ.

### ಧ್ಯಾನ ಮತ್ತು ಯೋಗ ಪ್ರಾಕೃತ :—

ಮುನಿಧರ್ಮದಲ್ಲಿ ತಪದ ಸ್ಥಾನವು ಬಹು ಮಹತ್ವಪೂರ್ಣವಾಗಿದೆ. ತಪಸ್ಸಿನಲ್ಲಿ ಬಾಹ್ಯ ಮತ್ತು ಅಭ್ಯಂತರವೆಂದು ಎರಡು ಭೇದಗಳಿವೆ. ಅಭ್ಯಂತರ ತಪದ ಪ್ರಾಯಶ್ಚಿತ್ತಾದಿ ಆರು ಪ್ರಭೇದಗಳಲ್ಲಿ ಅಂತಿಮ ತಪದ ಹೆಸರು ಧ್ಯಾನ ಎಂದಿದೆ. ಅರ್ಧಮಾಗಧೀ

ಆಗಮ ಗ್ರಂಥಗಳಲ್ಲಿ ಮತ್ತು ವಿಶೇಷವಾಗಿ ರಾಣಾಂಗದಲ್ಲಿ (ಅ. ೪. ಉ. ೧) ಆರ್ತ, ರೌದ್ರ, ಧರ್ಮ ಮತ್ತು ಶುಕ್ಲ ಈ ನಾಲ್ಕು ಧ್ಯಾನ ಮತ್ತು ಅವುಗಳ ಭೇದೋಪಭೇದ ಗಳ ನಿರೂಪಣೆಯನ್ನು ಮಾಡಲಾಗಿದೆ. ಇದೇ ಪ್ರಕಾರ ನಿರ್ಯುಕ್ತಿಗಳಲ್ಲಿ ಮತ್ತು ವಿಶೇಷವಾಗಿ ಆವಶ್ಯಕ ನಿರ್ಯುಕ್ತಿಯ ಕಾಯೋತ್ಸರ್ಗ ಅಧ್ಯಯನ (ಗಾಹೆ ೧೪೬೨–೮೬) ದಲ್ಲಿ ಧ್ಯಾನಗಳ ಲಕ್ಷಣ ಮತ್ತು ಭೇದ ಪ್ರಭೇದಗಳ ವರ್ಣನೆಯು ಕಂಡು ಬರುತ್ತದೆ. ಈ ಆಗಮ ಪ್ರಣಾಲಿಗೆ ಅನುಸರಿಸಿ ಧ್ಯಾನದ ನಿರೂಪಣೆಯನ್ನು ಜಿನಭದ್ರಗಣಿ ಕ್ಷಮಾಶ್ರಮಣನು ತನ್ನ ಧ್ಯಾನಶತಕ ಎಂಬ ಹೆಸರಿನ ಕೃತಿಯಲ್ಲಿ ಮಾಡಿದ್ದಾನೆ.

ವೈದಿಕ ಪರಂಪರೆಯಲ್ಲಿ ಧ್ಯಾನದ ನಿರೂಪಣೆಯು ಯೋಗದರ್ಶನದಲ್ಲಿ ಕಂಡು ಬರುತ್ತದೆ. ಇದರ ಆದಿ ಸಂಸ್ಥಾಪಕನು ಮಹರ್ಷಿ ಪತಂಜಲಿ (ಕ್ರಿ.ಪೂ. ೨ ನೆಯ ಶತ ಮಾನ) ಎಂದು ಮನ್ನಿಸಲಾಗುತ್ತದೆ. ಪಾತಂಜಲ " ಯೋಗಸೂತ್ರ " ದಲ್ಲಿ ಯೋಗದ ಲಕ್ಷಣವೆಂದು " ಚಿತ್ತ ವೃತ್ತಿ ನಿರೋಧ " ವನ್ನು ಸ್ವೀಕರಿಸಿದೆ. ಇದರ ಮೊದಲ ಅಂಗ ವಾದ ಯಮ ಎಂಬುದಕ್ಕೆ ಅಹಿಂಸಾದಿ ಐದು ಭೇದಗಳನ್ನು ಹೇಳಿದೆ. ಇದರ ಮೇಲೆ ಶ್ರಮಣ ಪರಂಪರೆಯ ಸಂಯಮ ವಿಧಿಯ ಪ್ರಭಾವವು ಸ್ಪಷ್ಟವಾಗಿ ಕಂಡುಬರುತ್ತದೆ. ಅಷ್ಟಾಂಗ ಯೋಗದ ಏಳನೆಯ ಅಂಗವು ಧ್ಯಾನವಾಗಿದೆ. ಇದರ ಮುಖಾಂತರ ಮುನಿಯು ತನ್ನ ಚಿತ್ತವನ್ನು ಬಾಹ್ಯ ವಿಷಯಗಳಿಂದ ಸೆಳೆದುಕೊಂಡು ಆತ್ಮ ಚಿಂತನ ದಲ್ಲಿ ತೊಡಗಿಸಲು ಪ್ರಯತ್ನಿಸುತ್ತಾನೆ. ಈ ಪ್ರಕ್ರಿಯೆಗೆ ಯೋಗ ಎಂಬ ಹೆಸರಿನಿಂದ ಉಲ್ಲೇಖಿಸಿದ್ದನ್ನು ನಾವು ಕುಂದಕುಂದ ಕೃತ ಮೋಕ್ಷ ಪಾಹುಡದಲ್ಲಿ ಕಾಣುತ್ತೇವೆ.

ಮೋಕ್ಷ ಪಾಹುಡ (ಗಾಹೆ ೧೦೬) ದಲ್ಲಿ ಕುಂದಕುಂದರು ಪ್ರಾರಂಭದಲ್ಲಿಯೇ ತನ್ನ ಕೃತಿಯನ್ನು ಪರಮ ಯೋಗಿಗಳು ಆ ಪರಮಾತ್ಮ ಸ್ವರೂಪದ ಪರಮಪದದ ವ್ಯಾಖ್ಯಾನ ಮಾಡುವಂಥದು ಎಂದು ಕರೆದಿದ್ದಾನೆ. ಇದನ್ನರಿತು ಹಾಗೂ ನಿರಂತರ ತಮ್ಮ ಸಾಧನೆಯಲ್ಲಿ ತನ್ಮಯರಾದಂಥ ಯೋಗಿಗಳು ಅವ್ಯಾಬಾಧ, ಅನಂತ ಮತ್ತು ಅನುಪಮ ನಿರ್ವಾಣವನ್ನು ಪಡೆಯುತ್ತಾರೆ. (ಗಾಹೆ ೨–೩) ಇಲ್ಲಿ ಆತ್ಮನಲ್ಲಿ ಬಹಿಃ, ಅಂತರ, ಪರಮ ಈ ಮೂರು ಭೇದಗಳನ್ನು ಮಾಡಲಾಗಿದೆ. ಇವುಗಳಿಗೆ ಕ್ರಮವಾಗಿ ಇಂದ್ರಿಯ ಪರಾಯಣತೆ, ಆತ್ಮಚೇತನಾ ಮತ್ತು ಕರ್ಮಗಳಿಂದ ಮುಕ್ತಿ ಇವು ಲಕ್ಷಣ ಗಳಾಗಿವೆ. (ಗಾಹೆ ೫) ಪರದ್ರವ್ಯದಲ್ಲಿ ರತಿಯು ಮಿಥ್ಯಾದೃಷ್ಟಿಯಾಗಿದೆ. ಇದರಿಂದ ಜೀವದ ದುರ್ಗತಿಯು ಉಂಟಾಗುತ್ತದೆ ಒಟ್ಟಿನಲ್ಲಿ ಸ್ವ-ದ್ರವ್ಯ (ಆತ್ಮಾ) ದಲ್ಲಿ ರತಿಯೇ ಸದ್ಗತಿಗೆ ಕಾರಣವಾಗಿದೆ. ಸ್ವ-ದ್ರವ್ಯರತ ಶ್ರಮಣನು ನಿಯಮದಿಂದ ಸಮ್ಯಗ್ದೃಷ್ಟಿ ಯಾಗುತ್ತಾನೆ. ತಪದಿಂದ ಕೇವಲ ಸ್ವರ್ಗವು ಮಾತ್ರ ಪ್ರಾಪ್ತವಾಗುತ್ತದೆ. ಆದರೆ ಶಾಶ್ವತ ಸುಖರೂಪ ನಿರ್ವಾಣದ ಪ್ರಾಪ್ತಿಯು ಧ್ಯಾನ ಯೋಗದಿಂದಲೇ ಸಂಭವವಿದೆ. (ಗಾಹೆ ೨೩) ಕಷಾಯ, ಮಾನ, ಮದ, ರಾಗ-ದ್ವೇಷ, ವ್ಯಾಮೋಹ, ಸಮಸ್ತಲೋಕ ವ್ಯವಹಾರದಿಂದ ಮುಕ್ತ ಮತ್ತು ವಿರಕ್ತನಾಗಿದ್ದು, ಆತ್ಮ ಧ್ಯಾನದಲ್ಲಿ ಪ್ರವೃತ್ತನಾಗಿ ಇರಲಾಗುತ್ತದೆ. (ಗಾಹೆ ೨೭) ಸಾಧಕನು ಮನ, ವಚನ, ಕಾಯಗಳಿಂದ ಮಿಥ್ಯಾತ್ವ,

ಅಜ್ಞಾನ, ಪುಣ್ಯ ಮತ್ತು ಪಾಪಗಳನ್ನು ಪರಿತ್ಯಜಿಸಿ, ಮೌನ ವ್ರತವನ್ನು ಧಾರಣ ಮಾಡಲಿಕ್ಕೆ ಬೇಕು. (ಗಾಹೆ ೨೮) ಯೋಗದ ಅವಸ್ಥೆಯಲ್ಲಿ ಸಮಸ್ತ ಆಸ್ರವಗಳ ನಿರೋಧವಾಗಿ, ಸಂಚಿತ ಕರ್ಮಗಳ ಕ್ಷಯವಾಗಲಿಕ್ಕೆ ಪ್ರಾರಂಭವಾಗುತ್ತದೆ. (ಗಾಹೆ ೩೦) ಲೋಕ ವ್ಯವಹಾರದ ಸಂಬಂಧದಲ್ಲಿ ಸುಷುಪ್ತಿ ಆಗುವುದರಿಂದಲೇ ಆತ್ಮ ಜಾಗ್ರ ತಿಯು ಉಂಟಾಗುತ್ತದೆ. (ಗಾಹೆ ೩೧) ಐದು ಮಹಾವ್ರತ, ಐದು ಸಮಿತಿ, ಮೂರು ಗುಪ್ತಿ ಮತ್ತು ರತ್ನತ್ರಯಗಳಿಂದ ಕೂಡಿದ್ದು, ಮುನಿಯು ಯಾವಾಗಲೂ ಧ್ಯಾನದಲ್ಲಿ ತನ್ಮಯನಾಗಿರತಕ್ಕದ್ದು. (ಗಾಹೆ ೩೩) ಆಗಲೇ ಅವನು ನಿಜವಾದ ಆರಾಧಕನೆನಿಸು ತ್ತಾನೆ; ಆರಾಧನೆಯ ವಿಧಾನವನ್ನು ಸಾಧಿಸುತ್ತಾನೆ, ಆರಾಧನೆಯ ಫಲವಾದ ಕೇವಲ ಜ್ಞಾನವನ್ನು ಪಡೆಯುತ್ತಾನೆ. (ಗಾಹೆ ೩೪) ಆದರೆ ಎಷ್ಟೋ ಜನ ಸಾಧಕರು ಆತ್ಮ ಜ್ಞಾನಿಗಳಾಗಿಯೂ ಸಹ ಪುನಃ ವಿಷಯ ಮೋಹಿತರಾಗಿ ಸದ್‌ಭಾವದಿಂದ ಭ್ರಷ್ಟ ರಾಗುತ್ತಾರೆ. ಯಾರು ವಿಷಯ ವಿರಕ್ತರಾಗಿರುತ್ತಾರೋ ಅವರು ಚತುರ್ಗತಿಯಿಂದ ಮುಕ್ತರಾಗಿ ಬಿಡುತ್ತಾರೆ. (ಗಾಹೆ ೬೭–೬೮) ಸಮ್ಯಕ್ತ್ವಹೀನ, ಚಾರಿತ್ರಹೀನ, ಅಭವ್ಯ ಮತ್ತು ಅಜ್ಞಾನಿಗಳೇ ಈ ದುಃಷಮಕಾಲವು ಧ್ಯಾನಮಾಡಲಿಕ್ಕೆ ಯೋಗ್ಯ ವಿಲ್ಲೆಂದು ಹೇಳುತ್ತಾರೆ. (ಗಾಹೆ ೭೪–೭೬) ಧ್ಯಾನವನ್ನು ಎರಡು ವಿಧದಿಂದ ಮಾಡ ಲಾಗುತ್ತದೆ. ಒಂದು ಶುದ್ಧ ಆತ್ಮಚಿಂತನವು. ಇದರಿಂದ ಯೋಗಿಯು ತನ್ನಲ್ಲಿ ತಾನು ಸುರಕ್ತನಾಗಿರುತ್ತಾನೆ. ಇದು ನಿಶ್ಚಯಾತ್ಮಕ ಧ್ಯಾನಾವಸ್ಥೆಯಾಗಿದೆ. ಇದರಲ್ಲಿ ಇಂಥ ಯೋಗ್ಯತೆಯು ಇರದವರು ಆತ್ಮವನ್ನು ಪುರುಷಾಕಾರ ರೂಪದಲ್ಲಿ ಧ್ಯಾನಿಸುವರು. (ಗಾಹೆ ೮೩–೮೪) ಈ ಧ್ಯಾನವು ಶ್ರಮಣರದಾಗಿದೆ. ಶ್ರಾವಕರು ತತ್ವ ಚಿಂತನರೂಪ ಸಮ್ಯಕ್ತ್ವವನ್ನು ನಿಷ್ಕಂಪ ರೂಪದಿಂದ ಧ್ಯಾನ ಮಾಡಲಿಕ್ಕೆ ಬೇಕು. (ಗಾಹೆ ೮೬) ಧ್ಯಾನಾಭ್ಯಾಸವಿಲ್ಲದೆ ಬಹಳಷ್ಟು ಶಾಸ್ತ್ರಗಳನ್ನು ಓದುವುದಾಗಲಿ, ನಾನಾವಿಧ ಚಾರಿತ್ರ ಗಳ ಪಾಲನವಾಗಲಿ, ಬಾಲ-ಶ್ರುತ, ಬಾಲ ಚಾರಿತ್ರಗಳೇ ಎನಿಸುತ್ತವೆ. (ಗಾಹೆ ೧೦೦) ಕೊನೆಯ ಎರಡು ಗಾಹೆಗಳಲ್ಲಿ (೧೦೪–೧೦೫) ಪಂಚಪರಮೇಷ್ಠಿ, ರತ್ನತ್ರಯ ಮತ್ತು ತಪಗಳ ಪ್ರತಿಷ್ಠೆಯು ಯಾವ ಆತ್ಮನಲ್ಲಿ ಇದೆಯೋ ಅದಕ್ಕೇನೇ ಶರಣು ಹೋಗಬೇಕೆ ನ್ನುವ ಭಾವನೆಯನ್ನು ನಿರೂಪಿಸಿ ಗ್ರಂಥವನ್ನು ಮುಗಿಸಲಾಗಿದೆ. ಈ ಪ್ರಕಾರ ಈ ಪಾಹುಡದಲ್ಲಿ ನಮಗೆ ಜೈನ ಯೋಗ ವಿಷಯದಲ್ಲಿ ಅತಿ ಪ್ರಾಚೀನ ವಿಚಾರಗಳು ಕಂಡು ಬರುತ್ತವೆ. ತರುವಾಯ ಬಂದ ಯೋಗ ವಿಷಯದ ಗ್ರಂಥಗಳೂ ಕೂಡ ತುಲನಾತ್ಮಕ ದೃಷ್ಟಿಯಿಂದ ಅಧ್ಯಯನ ಮಾಡಲು ಯೋಗ್ಯವಾಗಿದೆ. ನಿಜವಾಗಿಯೂ ಈ ಕೃತಿಯು ಯೋಗ ಶತಕ ರೂಪದಿಂದ ಬರೆದಂತೆ ತಿಳಿಯುತ್ತದೆ. ಇದಕ್ಕೆ 'ಯೋಗ–ಪಾಹುಡ' ವೆಂದೂ ಹೆಸರನ್ನು ಕೊಡಲಾಗುತ್ತದೆ. ಪಾತಂಜಲ ಯೋಗಶಾಸ್ತ್ರದಲ್ಲಿ ಯಾವ ಯಮ- ನಿಯಮಾದಿ ಎಂಟು ಅಂಗಗಳ ನಿರೂಪಣೆಯು ಇದೆಯೋ ಅವುಗಳಲ್ಲಿ ಪ್ರಾಣಾಯಾಮ ವನ್ನು ಬಿಟ್ಟು, ಉಳಿದ ಏಳು ವಿಷಯಗಳನ್ನು ಇಲ್ಲಿ ಸ್ಪಷ್ಟರೂಪದಿಂದ ಜೈನ ಪರಂಪರೆಗೆ ಅನುಸರಿಸಿ ವರ್ಣನೆ ಮಾಡಿದ್ದು ಕಂಡುಬರುತ್ತದೆ.

ಬಾರಸ ಅಣುವೆಕ್ಖಾ (ಗಾಹೆ ೯೧-೯೧) ಇದರಲ್ಲಿ ಅಧ್ರುವ, ಅಶರಣ, ಏಕತ್ವ, ಅನ್ಯತ್ವ, ಸಂಸಾರ, ಲೋಕ, ಅಶುಚಿತ್ವ, ಆಸ್ರವ, ಸಂವರ, ನಿರ್ಜರಾ, ಧರ್ಮ ಮತ್ತು ಬೋಧಿ ಈ ಹನ್ನೆರಡು ಭಾವನೆಗಳ ನಿರ್ದೇಶವನ್ನು ಆರಂಭದಲ್ಲಿ ಮಾಡಲಾಗಿದೆ. ಆಮೇಲೆ ಅವುಗಳ ಸ್ವರೂಪವನ್ನು ಕ್ರಮದಿಂದ ಸಂಕ್ಷೇಪವಾಗಿ ಹೇಳಲಾಗಿದೆ. ಹನ್ನೊಂದನೆಯದಾದ ಧರ್ಮಭಾವನೆಯ ನಿರೂಪಣೆಯಲ್ಲಿ ಶ್ರಾವಕರ ವ್ರತ, ದರ್ಶನ ಮೊದಲಾದ ಹನ್ನೊಂದು ಪ್ರತಿಮೆಗಳನ್ನು (ಗಾಹೆ ೬೯) ಹಾಗೂ ಮುನಿಗಳ ಉತ್ತಮ ಕ್ಷಮಾದಿ ದಶಧರ್ಮಗಳನ್ನು (ಗಾಹೆ ೭೦) ನಿರ್ದೇಶಿಸಲಾಗಿದೆ. ಆಮೇಲೆ ಒಂದೊಂದು ಗಾಹೆಯಲ್ಲಿ ಈ ಹತ್ತು ವಿಷಯಗಳ ಸ್ವರೂಪವನ್ನು ಹೇಳಲಾಗಿದೆ. ಕೊನೆಯ ೯೧ನೆಯ ಗಾಹೆಯಲ್ಲಿ ಕುಂದಕುಂದ ಮುನಿನಾಥನ ನಾಮೋಲ್ಲೇಖವಿದೆ. ಆದರೆ ಈ ಗಾಹೆಯು ಪ್ರಾಚೀನ ಕೆಲವೊಂದು ಪ್ರತಿಗಳಲ್ಲಿ ಲಭಿಸುವದಿಲ್ಲ ಇದರ ಕೆಲವೊಂದು ಗಾಹೆಗಳು ಮೂಲಾಚಾರ ಮತ್ತು ಸರ್ವಾರ್ಥಸಿದ್ಧಿಗಳಲ್ಲಿ ಇದ್ದುದು ಕಂಡುಬರುತ್ತದೆ. ಇದನ್ನು ಕುಂದಕುಂದರು ರಚಿಸಿರಲಿಕ್ಕಿಲ್ಲ ಎನ್ನುವ ಯಾವ ಮಾತೂ ಕೂಡ ಇದರಲ್ಲಿ ಕಂಡುಬರುವುದಿಲ್ಲ. ತತ್ವಾರ್ಥಸೂತ್ರಕ್ಕೆ ಅನುಸರಿಸಿ ಅನುಪ್ರೇಕ್ಷೆಗಳು ಧಾರ್ಮಿಕ ಸಾಧನೆಯ ಒಂದು ಆವಶ್ಯಕ ಅಂಗವೆನಿಸುತ್ತವೆ. ಅಲ್ಲಿ ಹನ್ನೆರಡು ಅನುಪ್ರೇಕ್ಷೆಗಳ ನಿರ್ದೇಶನವನ್ನು ಸಹ ಮಾಡಲಾಗಿದೆ. ಕುಂದಕುಂದನು ಚಾರಿತ್ರದ ಸಮಸ್ತ ವಿಷಯಗಳ ಮೇಲೆ ಬರೆದಿರುವನೆಂದಮೇಲೆ ಅವನು ಹನ್ನೆರಡು ಅನುಪ್ರೇಕ್ಷೆಗಳ ನಿರೂಪಣೆಯನ್ನೂ ಸಹ ಮಾಡಿರಬೇಕೆಂದು ಸ್ವಾಭಾವಿಕವಾಗಿಯೇ ಎನಿಸುತ್ತದೆ

ಈ ವಿವರಣದಿಂದ, ಕುಂದಕುಂದಾಚಾರ್ಯರ ಕೃತಿಗಳಲ್ಲಿ ಕೆಲವೊಂದು ಸಂಕ್ಷೇಪವಾಗಿಯೂ ಹಲವು ವಿಸ್ತಾರವಾಗಿಯೂ ಶ್ರಮಣ ಮತ್ತು ಶ್ರಾವಕರ ಚಾರಿತ್ರಕ್ಕೆ ಸಂಬಂಧಿಸಿದ ಬಹುತರ ಎಲ್ಲ ವಿಷಯಗಳ ನಿರ್ದೇಶ ಹಾಗೂ ನಿರೂಪಣೆಯು ಬಂದಿದೆ —ಎಂಬುದು ಸ್ಪಷ್ಟವಾಗುತ್ತದೆ. ಅವನ ಈ ಕೃತಿಗಳ ಪ್ರಭಾವವು ಮುಂದಿನ ಕಾಲದ ಸಾಹಿತ್ಯ ಕೃತಿಗಳ ಮೇಲೆ ಬಿದ್ದುದು ಕಂಡುಬರುತ್ತದೆ. ಅವುಗಳಲ್ಲಿ ಈ ವಿಷಯಗಳನ್ನು ತಕ್ಕೊಂಡು ಹೆಚ್ಚಿಗೆ ವಿವರಿಸಿದ್ದೂ ಸಹ ಉಂಟು

ಕತ್ತಿಗೆಯಾಣುವೆಕ್ಖಾ (ಕಾರ್ತಿಕೆಯಾನುಪ್ರೇಕ್ಷಾ) ಇದರಲ್ಲಿ ೪೯೧ ಗಾಹೆಗಳು ಇವೆ. ಅವೇ ಹನ್ನೆರಡು ಅನುಪ್ರೇಕ್ಷೆಗಳನ್ನೂ ವಿಸ್ತಾರದಿಂದ ವರ್ಣಿಸಲಾಗಿದೆ. ಇವುಗಳ ಸಂಕ್ಷಿಪ್ತ ನಿರೂಪಣೆಯು ನಮಗೆ ಕುಂದಕುಂದರ ಬಾರಸ ಅಣುವೆಕ್ಖಾದಲ್ಲಿ ಲಭಿಸುತ್ತದೆ. ಆದರೆ ಇಲ್ಲಿ ಅವುಗಳ ಕ್ರಮದಲ್ಲಿ ಕೆಲವೊಂದು ಅಂತರ ಇದ್ದುದು ಕಂಡುಬರುತ್ತದೆ. ಇಲ್ಲಿ ಸಂಸಾರಭಾವನೆಯು ಮೂರನೆಯದು, ಅಶುಚಿತ್ವ ಆರನೆಯದು, ಲೋಕ ಹತ್ತನೆಯ ಸ್ಥಾನದಲ್ಲಿ ಕಂಡುಬರುತ್ತವೆ. ಲೋಕಾನುಪ್ರೇಕ್ಷೆಯ ವರ್ಣನೆಯು ೧೧೫ರಿಂದ ೨೮೩ರ ವರೆಗಿನ ೧೬೯ ಗಾಹೆಗಳಲ್ಲಿ ಬಂದಿದೆ. ಇದರಲ್ಲಿ ಸಮಸ್ತ ತ್ರೈಲೋಕ್ಯದ ಸ್ವರೂಪ ಮತ್ತು ಅವುಗಳಲ್ಲಿ ವಾಸಿಸುವ ಜೀವಗಳು, ಜೀವಾದಿ ಆರು ದ್ರವ್ಯಗಳಲ್ಲಿ ದ್ರವ್ಯದ ಉತ್ಪಾದಾದಿ ಪರ್ಯಾಯಗಳು, ಮತಿ ಶ್ರುತಾದಿ

ಐದು ಜ್ಞಾನಗಳು ಇವೆಲ್ಲವುಗಳ ನಿರೂಪಣೆಯು ಇದೆ. ಹೀಗೆ ಈ ಪ್ರಕರಣವು ತ್ರಿಲೋಕ–ಪ್ರಜ್ಞಪ್ತಿಯ ಸಂಕ್ಷಿಪ್ತರೂಪವಾಗಿದೆ. ಇದೇ ಪ್ರಕಾರ ಧರ್ಮಾನುಪ್ರೇಕ್ಷೆಯ ವರ್ಣನೆಯು, ಗಾಹೆ ೩೦೨ರಿಂದ ೪೯೭ರ ವರೆಗೆ, ೧೮೬ ಗಾಹೆಗಳಲ್ಲಿ ಬಂದಿದೆ. ಇದರಲ್ಲಿ ಶ್ರಾವಕರ ಹನ್ನೊಂದು ಪ್ರತಿಮೆಗಳನ್ನೂ ಹನ್ನೆರಡು ವ್ರತಗಳನ್ನೂ (ಗಾಹೆ ೩೦೫–೩೯೧), ಸಾಧುಗಳ ಕ್ಷಮಾದಿ ದಶಧರ್ಮಗಳನ್ನೂ (ಗಾಹೆ ೩೯೨–೪೦೪), ಸಮ್ಯಕ್ತ್ವದ ಎಂಟು ಅಂಗಗಳನ್ನೂ (ಗಾಹೆ ೪೧೪–೪೨೩) ಹಾಗೂ ಅನಶನವೇ ಮೊದಲಾದ ಹನ್ನೆರಡು ತಪಗಳನ್ನೂ (ಗಾಹೆ ೪೪೧–೪೮೭) ಪರ್ಯಾಪ್ತ ರೂಪದಿಂದ ವರ್ಣಿಸಲಾಗಿದೆ. ಹನ್ನೆರಡು ವ್ರತಗಳ ನಿರೂಪಣದಲ್ಲಿ ಗುಣ ಮತ್ತು ಶಿಕ್ಷಾ ವ್ರತಗಳ ಕ್ರಮವು ಅದೇ ಇದೆ. ಅಂದರೆ ಕುಂದಕುಂದರ ಚಾರಿತ್ರಪಾಹುಡ (ಗಾಹೆ ೨೫–೨೬) ದಲ್ಲಿ ಇರುವಂತೆಯೇ ಇದೆ. ಆದರೆ ಭೇದವಿಷ್ಟೆ : ಅಂತಿಮ ಶಿಕ್ಷಾವ್ರತವು ಸಲ್ಲೇಖನವಾಗಿರದೆ ದೇಶಾವಕಾಶಿಕವೆಂದು ಸ್ವೀಕರಿಸಲಾಗಿದೆ. ಈ ಗುಣ ಮತ್ತು ಶಿಕ್ಷಾವ್ರತಗಳ ವ್ಯವಸ್ಥೆಯು ತತ್ತ್ವಾರ್ಥಸೂತ್ರದ ಸಂಖ್ಯಾಕ್ರಮದಿಂದ ಭಿನ್ನವಾಗಿದೆ. ಆದರೆ ಶ್ರಾವಕ–ಪ್ರಜ್ಞಪ್ತಿಯ ಸಂಖ್ಯೆಗಳ ಕೂಡ ಹೊಂದುತ್ತದೆ. ಗ್ರಂಥದ ಕೊನೆಯ ಮೂರು ಗಾಹೆಗಳಲ್ಲಿ ಕರ್ತೃವು ಗ್ರಂಥವನ್ನು ಮುಗಿಸುತ್ತ—"ಸ್ವಾಮಿ ಕುಮಾರನು ಈ ಅನುಪ್ರೇಕ್ಷೆಗಳ ರಚನೆಯನ್ನು ಪರಮ ಶ್ರದ್ಧೆಯಿಂದ ಜಿನವಚನಗಳ ಭಾವನೆ ಹಾಗೂ ಚಂಚಲ ಮನದ ಅವರೋಧಕ್ಕಾಗಿ ಜಿನಾಗಮಕ್ಕನುಸರಿಸಿ ಮಾಡಿದ್ದಾನೆ"—ಎಂದಿಷ್ಟೇ ಹೇಳಿದ್ದಾನೆ. ಕೊನೆಯ ಗಾಹೆಯಲ್ಲಿ ಅವನು ಕುಮಾರ ಕಾಲದಲ್ಲಿ ತಪಶ್ಚರಣವನ್ನು ಧಾರಣ ಮಾಡುವಂಥ ವಾಸುಪೂಜ್ಯ, ಮಲ್ಲಿ ಮತ್ತು ಕೊನೆಯ ಮೂವರು—ನೇಮಿ, ಪಾರ್ಶ್ವ, ಮಹಾವೀರ–ತೀರ್ಥಂಕರರನ್ನು ವಂದಿಸಿದ್ದಾನೆ. ಇದರ ಮೇಲಿಂದ ಗ್ರಂಥಕರ್ತೃವಿನ ವಿಷಯದಲ್ಲಿ ಸ್ವತಃ ಅವನು ಬ್ರಹ್ಮಚಾರಿಯಾಗಿದ್ದನು, ಅವನ ಹೆಸರು ಸ್ವಾಮಿ ಕುಮಾರ (ಕಾರ್ತಿಕೇಯ) ಎಂದಿತ್ತು–ಎಂದು ಮಾತ್ರ ಗೊತ್ತಾಗುತ್ತದೆ. ಗ್ರಂಥದ ರಚನಾ ಕಾಲದ ವಿಷಯದಲ್ಲಿ ಇನ್ನೂ ಯಾವ ನಿರ್ಣಯ ಮಾಡುವುದೂ ಸಾಧ್ಯವಾಗಿಲ್ಲ. ಗ್ರಂಥದ ಮೇಲೆ ಭಟ್ಟಾರಕ ಶುಭಚಂದ್ರ ಕೃತ ಸಂಸ್ಕೃತ ಟೀಕೆಯು (ವಿಕ್ರಮ ನಂ. ೧೬೧೩ ; ಕ್ರಿ. ಶ. ೧೫೫೬) ರಲ್ಲಿ ಸಮಾಪ್ತವಾದದ್ದು ಲಭಿಸುತ್ತದೆ.

ಕುಂದಕುಂದರ ತರುವಾಯ ಸ್ವತಂತ್ರ ರೂಪದಿಂದ ಯೋಗ ವಿಷಯಕ್ಕೆ ಗ್ರಂಥವನ್ನು ರಚಿಸಿದವರು ಆಚಾರ್ಯ ಹರಿಭದ್ರರಾಗಿದ್ದಾರೆ. ಇವರ ಯೋಗ ವಿಷಯದ ಮೂರು ಗ್ರಂಥಗಳು ಉಪಲಬ್ಧವಿವೆ. ಅವು ಯೋಗಶತಕ (ಪ್ರಾಕೃತ), ಯೋಗಬಿಂದು (ಸಂಸ್ಕೃತ) ಮತ್ತು ಯೋಗದೃಷ್ಟಿ ಸಮುಚ್ಚಯ (ಸಂಸ್ಕೃತ) ಎಂದಿವೆ. ಇದಲ್ಲದೆ ಅವರ ವಿಂಶತಿವಿಂಶಿಕಾದಲ್ಲಿ ೧೭ನೆಯ ವಿಂಶಿಕೆಯು ಹಾಗೂ ಷೋಡಶಕದಲ್ಲಿ ೧೪ನೆಯ ಮತ್ತು ೧೬ನೆಯದು ಹೀಗೆ ಮೂರು ಚಿಕ್ಕ ಚಿಕ್ಕ ಪ್ರಕರಣಗಳೂ ಸಹ ಇವೆ. ಯೋಗಶತಕದಲ್ಲಿ ೧೦೧ ಪ್ರಾಕೃತ ಗಾಹೆಗಳು ಇವೆ. ಅದರಲ್ಲಿ ಸಮ್ಯಗ್ದರ್ಶನವೇ ಮೊದಲಾದ ರೂಪ ನಿಶ್ಚಯ ಮತ್ತು ವ್ಯವಹಾರ

ಯೋಗದ ಸ್ವರೂಪ, ಯೋಗದ ಅಧಿಕಾರಿ, ಯೋಗಾಧಿಕಾರಿಯ ಲಕ್ಷಣ, ಧ್ಯಾನರೂಪ ಯೋಗಾವಸ್ಥಾ ಇವುಗಳನ್ನೆಲ್ಲ ಸಾಮಾನ್ಯ ರೂಪದಿಂದ ಜೈನಪರಂಪರೆಗೆ ಅನುಸರಿಸಿ ವರ್ಣಿಸಲಾಗಿದೆ. ಯೋಗವಿಂಶತಿಯ ಇಪ್ಪತ್ತು ಗಾಹೆಗಳಲ್ಲಿ ಅತಿ ಸಂಕ್ಷಿಪ್ತ ರೂಪ ದಿಂದ ಯೋಗದ ವಿಕಸಿತ ಅವಸ್ಥೆಗಳನ್ನು ನಿರೂಪಿಸಲಾಗಿದೆ. ಇದರಲ್ಲಿ ಕರ್ತೃವೂ ಕೆಲ ವೊಂದು ಪಾರಿಭಾಷಿಕ ಪದಗಳನ್ನು ಉಪಯೋಗಿಸಿದ್ದಾನೆ. ಇದರಲ್ಲಿ ಅವನು ಯೋಗದ ಐದು ಭೇದಗಳನ್ನೂ—ಅನುಷ್ಠಾನಗಳನ್ನೂ—ಸ್ಥಾನ, ಊರ್ಣ, ಅರ್ಥ, ಆಲಂಬನ ಮತ್ತು ಅಂತರಲಂಬನ ಎಂಬ ಸಂಜ್ಞೆಗಳನ್ನಿತ್ತು (ಗಾಹೆ ೨) ಮೊದಲಿನವೆರಡು ಕರ್ಮಯೋಗ ರೂಪ ಮತ್ತು ಉಳಿದ ಮೂರನ್ನು ಜ್ಞಾನಯೋಗ ರೂಪವೆಂದು ಹೇಳಿ ದ್ದಾನೆ (ಗಾಹೆ ೩). ತರುವಾಯ ಈ ಐದೂ ಯೋಗಭೇದಗಳಿಗೆ ಇಚ್ಛಾ, ಪ್ರವೃತ್ತಿ, ಸ್ಥಿರತಾ ಮತ್ತು ಸಿದ್ಧಿ ಈ ನಾಲ್ಕೂ ಯಮ ಎಂಬ ಹೆಸರಿನ ಪ್ರಭೇದಗಳನ್ನು ಮಾಡಿ ದ್ದಾನೆ. ಕೊನೆಯಲ್ಲಿ ಇವುಗಳಿಗೆ ಪ್ರೀತಿ, ಭಕ್ತಿ, ವಚನ ಮತ್ತು ಅಸಂಗ ಅನುಷ್ಠಾನ ಎಂಬ ಹೆಸರಿನ ನಾಲ್ಕು ಅವಸ್ಥೆಗಳನ್ನು ಸ್ಥಾಪಿಸಿ, ಆಲಂಬನ ಮತ್ತು ಅನಾಲಂಬನ ಯೋಗದ ಸ್ವರೂಪವನ್ನು ತಿಳಿಸಿ ಹೇಳಲಾಗಿದೆ.

### ಧ್ಯಾನ ಮತ್ತು ಯೋಗ—ಅಪಭ್ರಂಶ :—

ಇಲ್ಲಿ ಅಪಭ್ರಂಶ ಭಾಷೆಯ ಕೆಲವೊಂದು ಕೃತಿಗಳನ್ನು ಉಲ್ಲೇಖಿಸುವುದು ಉಚಿತವಾಗಿದೆ. ಯಾಕಂದರೆ ಅವು ಅಧ್ಯಾತ್ಮ ವಿಷಯದ ಗ್ರಂಥಗಳಾಗಿವೆ. ಯೋಗೀಂದ್ರ ಕೃತ ಪರಮಾತ್ಮ ಪ್ರಕಾಶವು ೩೪೫ ದೋಹಾಗಳಲ್ಲಿದೆ. ಅದರಂತೆ ಯೋಗ ಸಾರವು ೧೦೩ ದೋಹಾಗಳಲ್ಲಿ ಸಮಾಪ್ತಗೊಂಡಿದೆ. ಈ ಎರಡೂ ಕೃತಿಗಳಲ್ಲಿ ಕುಂದಕುಂದ ಕೃತ ಮೋಕ್ಷ ಪಾಹುಡಕ್ಕೆ ಅನುಸರಿಸಿ ಆತ್ಮನ ಬಹಿರಾತ್ಮ, ಅಂತರಾತ್ಮ ಮತ್ತು ಪರ ಮಾತ್ಮ ಈ ಮೂರು ಸ್ವರೂಪಗಳನ್ನು ವಿಸ್ತಾರ ರೂಪದಿಂದ ವರ್ಣಿಸಲಾಗಿದೆ. ಜೀವ ಗಳು ಸಂಸಾರದ ವಿಷಯದಿಂದ ಚಿತ್ತವನ್ನು ಪರಾಙ್ಮುಖಗೊಳಿಸಿ, ಅದನ್ನು ಆತ್ಮೋ ನ್ಮುಖಗೊಳಿಸುವದಕ್ಕೆ ವಿವಿಧ ಪ್ರಕಾರದ ಉಪದೇಶ ಮಾಡಲಾಗಿದೆ. ಈ ಎಲ್ಲ ಉಪ ದೇಶವನ್ನು ಯೋಗಿಂದ್ರನು ತನ್ನ ಶಿಷ್ಯನಾದ ಭಟ್ಟನೆಂಬವನ ಪ್ರಶ್ನೆಗೆ ಉತ್ತರವೆಂದು ಮಾಡಿದ್ದಾನೆ. ಈ ಗ್ರಂಥದ ಕಾಲವನ್ನು ಸಂಪಾದಕನು ಕ್ರಿ.ಶ. ಆರನೆಯ ಶತಮಾನ ವೆಂದು ಸೂಚಿಸಿದ್ದಾನೆ. (ಪ್ರಕಾಶಿತ, ಮುಂಬಯಿ ೧೯೩೭). ಪರಮಾತ್ಮ ಪ್ರಕಾಶದ ಕೆಲವೊಂದು ದೋಹಾಗಳು ಹೇಮಚಂದ್ರನ ಪ್ರಾಕೃತ ವ್ಯಾಕರಣದಲ್ಲಿ ಉದ್ಧೃತ ಗೊಂಡಿವೆ. ಇದರಿಂದ ಇದರ ರಚನಾ ಕಾಲವು ಹೇಮಚಂದ್ರನ ಪೂರ್ವದ್ದೆಂದು ಸುನಿಶ್ಚಯವಾಗುತ್ತದೆ.

ರಾಮಸಿಂಹ ಮುನಿ ಕೃತ ಪಾಹುಡ ದೋಹಾದಲ್ಲಿ ೨೨೨ ದೋಹಾ ಇವೆ. ಇದರಲ್ಲಿ ಯೋಗಿಯಾದ ಕರ್ತೃವು ಬಾಹ್ಯ ಕ್ರಿಯಾಕಾಂಡಗಳ ನಿಷ್ಫಲತೆಯನ್ನು ಸಾರಿ, ಆತ್ಮಸಂಯಮ ಮತ್ತು ಆತ್ಮದರ್ಶನದಲ್ಲಿ ನಿಜವಾದ ಕಲ್ಯಾಣವಿದೆ—ಎಂಬು ಉಪ

ದೇಶಿಸಿದ್ದಾನೆ. ಕಪಟಿ ಯೋಗಿಗಳನ್ನು ಗ್ರಂಥದಲ್ಲಿ ಬಹು ಹೀಯಾಳಿಸಿದ್ದಾನೆ. ದೇಹ ವನ್ನು ದೇವಾಲಯವೆಂದೂ ಆತ್ಮವನ್ನು ಶಿವನೆಂದೂ ಇಂದ್ರಿಯವೃತ್ತಿಗಳನ್ನು ಶಕ್ತಿ ರೂಪಗಳೆಂದೂ ಅನೇಕ ಸಲ ಸಂಬೋಧಿಸಿದ್ದಾನೆ. ಶೈಲಿಯಲ್ಲಿ ಈ ಗ್ರಂಥವು ಒಂದು ದೃಷ್ಟಿಯಿಂದ ಬೌದ್ಧ ದೋಹಾಕೋಶ ಮತ್ತು ಚರ್ಯಾಪಾದಗಳನ್ನು ಸರಿಗಟ್ಟುತ್ತದೆ. ಇನ್ನೊಂದು ದೃಷ್ಟಿಯಿಂದ ಕಬೀರರಂಥ ಸಂತವಾಣಿಗೆ ಸಮನಾಗಿದೆ. ಎರಡು ದೋಹಾ ಗಳು (೯೯–೧೦೦) ದೇಹ ಮತ್ತು ಆತ್ಮಾ ಅಥವಾ ಆತ್ಮಾ ಮತ್ತು ಪರಮಾತ್ಮಾ ಇವರನ್ನು ಪ್ರೇಯಸೀ ಹಾಗೂ ಪ್ರೇಮಿಗಳ ರೂಪಕದಿಂದ ವರ್ಣಿಸಿವೆ. ಇದು ಹಿಂದಿನ ಕಾಲದ ಸೂಫೀ ಸಂಪ್ರದಾಯದ ಕಾವ್ಯ ಪ್ರವಾಹವನ್ನು ಸ್ಮರಣೆಗೆ ತರುತ್ತದೆ. ಇದರ ೪, ೫ ದೋಹಾಗಳು ತೀರ ಸ್ವಲ್ಪ ಪರಿವರ್ತನದಿಂದ ಹೇಮಚಂದ್ರನು ತನ್ನ ಪ್ರಾಕೃತ ವ್ಯಾಕರಣದಲ್ಲಿ ಉದಹರಿಸಿದ್ದಾನೆ. ಅಂತೂ ಈ ಗ್ರಂಥದ ರಚನಾ ಕಾಲವು ಕ್ರಿ.ಶ. ೧೧೦೦ ಕ್ಕಿಂತಲೂ ಮುಂಚಿನದೆಂದು ಸಿದ್ಧವಾಗುತ್ತದೆ. (ಪ್ರಕಾಶಿತ, ಕಾರಂಜಾ ೧೯೩೩).

## ಧ್ಯಾನ ಮತ್ತು ಯೋಗ—ಸಂಸ್ಕೃತ :—

ಕುಂದಕುಂದರ ತರುವಾಯ ಪೂಜ್ಯಪಾದನು ರಚಿಸಿರುವ ಯೋಗ ವಿಷಯದ ಎರಡು ಸಂಕ್ಷಿಪ್ತ ಕೃತಿಗಳು ಇಲ್ಲಿ ಉಲ್ಲೇಖನೀಯವಾಗಿವೆ. ಅದರಲ್ಲಿ ಒಂದು ಇಷ್ಟೋಪದೇಶವು ೫೧ ಶ್ಲೋಕಗಳಲ್ಲಿದೆ. ಇದರಲ್ಲಿ ಯೋಗ ಸಾಧಕನ ಭಾವನೆ ಗಳ ನಿರೂಪಣೆಯಿದೆ. ಆ ಭಾವನೆಗಳ ಮುಖಾಂತರ ಇಂದ್ರಿಯಗಳನ್ನು ಸಾಂಸಾರಿಕ ವಿಷಯಗಳಿಂದ ಪರಾಙ್ಮುಖಗೊಳಿಸಿ ಮನಸ್ಸನ್ನು ಆತ್ಮಧ್ಯಾನದಲ್ಲಿ ಪ್ರವೃತ್ತಗೊಳಿಸ ಲಾಗುತ್ತದೆ. ಆಗ ಈ ಸಮಸ್ತ ಜಗತ್ತನ್ನೂ ಇಂದ್ರಜಾಲವೆಂದು ಭಾವಿಸುವಂಥ ಆಧ್ಯಾತ್ಮ ವೃತ್ತಿಯು ಜಾಗೃತಗೊಳ್ಳುತ್ತದೆ. ಏಕಾಂತವಾಸದ ಇಚ್ಛೆಯಾಗು ತ್ತದೆ. ಕಾರ್ಯಾಂತರದಿಂದ ಕೆಲವೊಂದನ್ನು ಹೇಳಿ ಕೂಡಲೆ ಮರೆಯಲಾಗುತ್ತದೆ. ಮಾತನಾಡುತ್ತಲಿದ್ದೂ ಮಾತನಾಡದೆ ಇರುವುದು. ನಡೆಯುತ್ತಿದ್ದೂ ನಡೆಯದಿರು ವುದು. ನೋಡುತ್ತಿದ್ದೂ ನೋಡದಿರುವುದು. ಇದು ಸ್ವತಃ ತನ್ನ ದೇಹದ ಪರಿವೆಯೂ ಇಲ್ಲದಿರುವ ಅವಸ್ಥೆಗೆ ಹೋಗಿ ತಲುಪುತ್ತದೆ (ಶ್ಲೋಕ ೩೯–೪೩). ಈ ಪ್ರಕಾರ ವ್ಯವಹಾರದಿಂದ ದೂರ ಸರಿದು, ಆತ್ಮಾನುಷ್ಠಾನದಲ್ಲಿ ಸ್ಥಿರವಾಗಿದ್ದು ಇರುವ ಯೋಗಿಗೆ ಪರಮಾನಂದವು ಪ್ರಾಪ್ತವಾಗುತ್ತದೆ (ಶ್ಲೋಕ ೪೭). ಈ ಯೋಗಾವಸ್ಥೆಯ ವರ್ಣ ನೆಯು ಜೀವನ್ಮುಕ್ತಾವಸ್ಥೆಯನ್ನು ಹೋಲುತ್ತದೆ.

ಪೂಜ್ಯಪಾದನ ಇನ್ನೊಂದು ಕೃತಿಯು **ಸಮಾಧಿಶತಕವಾಗಿದೆ**. ಇದರಲ್ಲಿ ೧೦೫ ಸಂಸ್ಕೃತ ಶ್ಲೋಕಗಳಿವೆ. ಇವುಗಳಿಂದ ಬಹಿರಾತ್ಮ, ಅಂತರಾತ್ಮ ಮತ್ತು ಪರ ಮಾತ್ಮನ ಸ್ವರೂಪವನ್ನು ಹೇಳಿದೆ. ಅಂತರಾತ್ಮನ ಮುಖಾಂತರ ಪರಮಾತ್ಮನ ಧ್ಯಾನದ ಸ್ವರೂಪವನ್ನು ವಿವರಿಸಿದೆ. ಧ್ಯಾನ–ಸಾಧನೆಯಲ್ಲಿ ಅವಿದ್ಯಾ, ಅಭ್ಯಾಸ, ಸಂಸ್ಕಾರ

ಗಳ ಕಾರಣದಿಂದ, ಅಥವಾ ಮೋಹೋತ್ಪನ್ನ ರಾಗ-ದ್ವೇಷಗಳಿಂದ ಚಿತ್ತದಲ್ಲಿ ವಿಕ್ಷೇಪ ಉತ್ಪನ್ನವಾಗುವುದರಿಂದ ಸಾಧಕನು ಪ್ರಯತ್ನಪೂರ್ವಕ ಮನವನ್ನು ಎಳೆದುಕೊಂಡು, ಆತ್ಮತತ್ವದಲ್ಲಿ ಲೀನಗೊಳಿಸುವ ಉಪದೇಶವನ್ನು ಮಾಡಲಾಗಿದೆ. ಸಾಧಕನಿಗೆ ಅವ್ರತಗಳನ್ನು ತ್ಯಾಗಮಾಡಿ ವ್ರತಗಳಲ್ಲಿ ನಿಷ್ಠಿತನಾಗಲಿಕ್ಕೂ ಆತ್ಮಪದವನ್ನು ಪಡೆದ ಮೇಲೆ ಆ ವ್ರತಗಳನ್ನೂ ನಹ ತ್ಯಜಿಸಲಿಕ್ಕೂ ಹೇಳಿದೆ (ಶ್ಲೋಕ ೮೪). ಲಿಂಗ ಮತ್ತು ಜಾತಿಗಳ ಆಗ್ರಹ ಹಿಡಿಯುವವರನ್ನು ಇಲ್ಲಿ ಪರಮಪದ ಪ್ರಾಪ್ತಿಗೆ ಅಯೋಗ್ಯರೆಂದು ಹೇಳಿದೆ (ಶ್ಲೋಕ ೮೯). ಆತ್ಮವು ತನ್ನಿಂದ ಭಿನ್ನವಾದ ಆತ್ಮನ ಉಪಾಸನೆಯನ್ನು ಮಾಡಿ, ಅದಕ್ಕೇನೇ ಸಮವಾದ ಪರಮಾತ್ಮವಾಗಿ ಹೋಗುತ್ತದೆ. ಇದು ಬತ್ತಿಯು ಇನ್ನೊಂದು ದೀಪದಿಂದ ಜ್ವಾಲೆಯನ್ನು ಸ್ವೀಕರಿಸಿ, ಅದರಂತೆಯೇ ಭಿನ್ನ ದೀಪವು ತಾನೂ ಆಗುವಂತೆ ಇರುತ್ತದೆ (ಶ್ಲೋಕ ೯೭). ಈ ಗ್ರಂಥದ ಸಂಬಂಧದಲ್ಲಿ, ವಿಷಯದ ದೃಷ್ಟಿಯಿಂದ ಕುಂದಕುಂದರ ಭಾವ ಪಾಹುಡದೊಡನೆ ಬಹಳಷ್ಟು ಸಾಮ್ಯವಿದೆಯೆಂಬು ದನ್ನು ಗಮನಿಸಬೇಕು. ಇಷ್ಟೇ ಅಲ್ಲ, ಅನೇಕ ಗಾಹೆಗಳನ್ನು ಇಲ್ಲಿ ಶಬ್ದಶಃ ಕಿಂಚಿತ್ ಭೇದ ಸಹಿತ ಅನುವದಿಸಿದ್ದು ಕಂಡು ಬರುತ್ತದೆ. ಮೋಕ್ಷ ಪಾಹುಡದ ಗಾಹೆ ೫, ೬, ೮, ೯, ೧೦, ೧೧, ೨೯, ೩೧, ೩೨, ೪೨ ಮತ್ತು ೬೨ ಇವುಗಳನ್ನು ಸಮಾಧಿ ಶತಕದ ಶ್ಲೋಕ ೫, ೬, ೭, ೧೦, ೧೧, ೧೨, ೧೮, ೭೮, ೪೮, ೮೩ ಮತ್ತು ೧೦೨ ಇವುಗಳೊಡನೆ ಕ್ರಮಶಃ ಹೋಲಿಸಿ ನೋಡಿದರೆ ಸ್ಪಷ್ಟವಾಗಿ ಇದು ಕಂಡುಬರುತ್ತದೆ.

ಆಚಾರ್ಯ ಹರಿಭದ್ರಕೃತ ಷೋಡಶಕದ ೧೪ನೆಯ ಪ್ರಕರಣದಲ್ಲಿ ೧೬ ಸಂಸ್ಕೃತ ಪದ್ಯಗಳಲ್ಲಿ ಯೋಗಸಾಧನೆಯಲ್ಲಿ ಬಾಧಕವಾಗುವ ಖೇದ, ಉದ್ವೇಗ, ಕ್ಷೇಪ, ಉತ್ಥಾನ, ಭ್ರಾಂತಿ, ಅನ್ಯಮುದ, ರುಗ್ ಮತ್ತು ಆಸಂಗ ಈ ಎಂಟು ಚಿತ್ತದೋಷ ಗಳ ನಿರೂಪಣೆಯನ್ನು ಮಾಡಲಾಗಿದೆ. ೧೬ನೆಯ ಪ್ರಕರಣದಲ್ಲಿ ಈ ಎಂಟು ದೋಷ ಗಳಿಗೆ ಪ್ರತಿಪಕ್ಷವೆನಿಸುವ ಅದ್ವೇಷ, ಜಿಜ್ಞಾಸಾ, ಸುಶ್ರೂಷಾ, ಶ್ರವಣ, ಬೋಧ, ಮೀಮಾಂಸಾ, ಪ್ರತಿಪತ್ತಿ ಮತ್ತು ಪ್ರವೃತ್ತಿ ಈ ಎಂಟು ಚಿತ್ತಗುಣಗಳ ನಿರೂಪಣ ವಿರುತ್ತದೆ. ಅಂತೂ ಯೋಗ ಸಾಧನೆಯ ಮುಖಾಂತರ ಕ್ರಮದಿಂದ ಸ್ವಾನುಭೂತಿ ರೂಪ ಪರಮಾನಂದ ಪ್ರಾಪ್ತಿಯ ನಿರೂಪಣೆಯನ್ನು ಮಾಡಲಾಗಿದೆ.

ಯೋಗಬಿಂದುವಿನಲ್ಲಿ ೫೨೭ ಸಂಸ್ಕೃತ ಪದ್ಯಗಳಿಂದ ಜೈನ ಯೋಗದ ವಿಸ್ತಾರ ವಾದ ಪ್ರರೂಪಣೆಯು ಇದೆ. ಇಲ್ಲಿ "ಮೋಕ್ಷ ಪ್ರಾಪ್ತಕ ಧರ್ಮ ವ್ಯಾಪಾರ"ಕ್ಕೆ ಯೋಗವೆಂದು ಹೇಳಿದೆ. ಮೋಕ್ಷವೇ ಯೋಗದ ಲಕ್ಷ್ಯವೆಂದು ಸಾರಿ, ಚರಮಪುದ್ಗಲ ಪರಾವರ್ತನ ಕಾಲದಲ್ಲಿ ಯೋಗದ ಸಂಭಾವನಾ, ಅಪುನರ್ಬಂಧಕ, ಭಿನ್ನಗ್ರಂಥಿ, ದೇಶ ವಿರತ ಮತ್ತು ಸರ್ವವಿರತ (ಸಮ್ಯಗ್‌ದೃಷ್ಟಿ) ಈ ನಾಲ್ಕು ಯೋಗಾಧಿಕಾರಿಗಳ ಸ್ತರ, ಪೂಜಾ, ಸದಾಚಾರ, ತಪ ಮೊದಲಾದ ಅನುಷ್ಠಾನ; ಅಧ್ಯಾತ್ಮ, ಭಾವನಾ, ಧ್ಯಾನ ಮೊದಲಾದ ಯೋಗದ ಐದು ಭೇದ; ವಿಷಗರಳಾದಿ ಐದು ಪ್ರಕಾರದ ಸದ್ ಮತ್ತು ಅಸದ್ ಅನುಷ್ಠಾನ; ಹಾಗೆಯೇ ಆತ್ಮನ ಸ್ವರೂಪ ಪರಿಣಾಮಿ ನಿತ್ಯವೆಂದು

ಹೇಳಿದೆ. ಇನ್ನು ಪ್ರಸಂಗಕ್ಕನುಸರಿಸಿ ಸಾಂಖ್ಯ, ಬೌದ್ಧ, ವೇದಾಂತ ಮೊದಲಾದ ದರ್ಶನಗಳ ಸಮಾಲೋಚನೆಯನ್ನೂ ಕೂಡ ಮಾಡಲಾಗಿದೆ. ಪಾತಂಜಲಯೋಗ ಮತ್ತು ಬೌದ್ಧ ಸಮ್ಮತ ಯೋಗ ಭೂಮಿಕೆಗಳೊಡನೆ ಜೈನ ಯೋಗದ ತುಲನೆಯನ್ನು ಮಾಡಿದ್ದು ವಿಶೇಷ ಉಲ್ಲೇಖನೀಯವಾಗಿದೆ.

ಯೋಗದೃಷ್ಟಿ ಸಮುಚ್ಚಯದಲ್ಲಿ ೨೨೭ ಸಂಸ್ಕೃತ ಪದ್ಯಗಳಿವೆ. ಇದರಲ್ಲಿ ಯೋಗಬಿಂದುವಿನಲ್ಲಿ ವರ್ಣಿಸಿದ ವಿಷಯಗಳನ್ನು ಸಂಕ್ಷೇಪದಲ್ಲಿ ಪುನರಾವೃತ್ತಿ ಗೊಳಿಸಲಾಗಿದೆ. ಕೆಲವೊಂದು ಸ್ಥಳದಲ್ಲಿ ನಾವೀನ್ಯತೆಯನ್ನೂ ತರಲು ಯತ್ನಿಸಿದೆ. ಇಲ್ಲಿ ಆಧ್ಯಾತ್ಮಿಕ ವಿಕಾಸದ ಭೂಮಿಕೆಗಳನ್ನೂ ಮೂರು ಪ್ರಕಾರದಿಂದ ವರ್ಗೀಕರಿಸ ಲಾಗಿದೆ:-ಒಂದು ಮಿತ್ರಾ, ತಾರಾ, ಬಲಾ, ದೀಪ್ರಾ, ಸ್ಥಿರಾ, ಕಾಂತಾ, ಪ್ರಭಾ ಮತ್ತು ಪರಾ ಎಂಬ ಹೆಸರಿನ ಎಂಟು ಯೋಗದೃಷ್ಟಿಗಳು. ಎರಡನೆಯದು ಇಚ್ಛಾ ಯೋಗ, ಶಾಸ್ತ್ರಯೋಗ, ಸಾಮರ್ಥ್ಯಯೋಗ ಈ ಮೂರು ಪ್ರಕಾರದ ಯೋಗಭೇದಗಳು. ಮೂರನೆಯದು ಗೋತ್ರಯೋಗೀ, ಕುಲಯೋಗೀ, ಪ್ರವೃತ್ತಚಕ್ರಯೋಗೀ ಮತ್ತು ಸಿದ್ಧಯೋಗೀ ಈ ನಾಲ್ಕು ಯೋಗ ಭೇದಗಳು. ಪ್ರಥಮ ವರ್ಗೀಕರಣದಲ್ಲಿ ನಿರ್ದಿಷ್ಟ ಗೊಳಿಸಿದ ಎಂಟು ಯೋಗದೃಷ್ಟಿಗಳಲ್ಲಿ ೧೪ ಗುಣಸ್ಥಾನಗಳ ಯೋಜನೆಯನ್ನು ಮಾಡಿ ಕೊಳ್ಳಲಾಗಿದೆ. ಮುಕ್ತ ತತ್ವವನ್ನು ವಿಸ್ತಾರದಿಂದ ವಿವೇಚಿಸಿದ್ದೂ ಆಗಿದೆ.

ಈ ರಚನೆಗಳ ಮೂಲಕ ಹರಿಭದ್ರನು ತನ್ನ ವಿಶೇಷ ಚಿಂತನ, ನವೀನ ವರ್ಗೀ ಕರಣ, ಅಪೂರ್ವ ಪಾರಿಭಾಷಿಕ ಶಬ್ದಾವಲಿ ಇವುಗಳಿಂದ ಜೈನ ಪರಂಪರೆಯ ಯೋಗಾ ತ್ಮಕ ವಿಚಾರಗಳನ್ನು ಕೆಲವೊಂದು ಹೊಸ ರೂಪದಲ್ಲಿ ಪ್ರಸ್ಥಾಪಿಸಿದ್ದಾನೆ; ಮತ್ತು ವೈದಿಕ ಹಾಗೂ ಬೌದ್ಧ ಪರಂಪರೆಗಳಿಗೆ ಸಮ್ಮತವಾದ ಯೋಗ ಪ್ರವಾಹಗಳೊಡನೆ ಮೇಳವಿಸುವ ಪ್ರಯತ್ನ ಮಾಡಿದ್ದಾನೆ. ಯೋಗದೃಷ್ಟಿ-ಸಮುಚ್ಚಯದ ಮೇಲೆ ಸ್ವಯಂ ಹರಿಭದ್ರ ಕೃತ ಹಾಗೂ ಯಶೋವಿಜಯಗಣೀಕೃತ ಟೀಕೆಗಳು ಉಪಲಬ್ಧ ವಿವೆ. ಇಷ್ಟೇ ಅಲ್ಲ, ಯಶೋವಿಜಯಜಿಯು ಮಿತ್ರಾ, ತಾರಾ ಮೊದಲಾದ ಎಂಟು ಯೋಗದೃಷ್ಟಿಗಳ ಮೇಲೆ ನಾಲ್ಕು ದ್ವಾತ್ರಿಂಶಿಕಾವ(೨೧-೨೪)ಗಳನ್ನೂ ಬರೆದಿದ್ದಾನೆ. ಅಲ್ಲದೆ ಸಂಕ್ಷೇಪವಾಗಿ ಗುಜರಾತಿಯಲ್ಲಿ ಒಂದು ಚಿಕ್ಕದಾದ ಸಜ್ಝಾಯವನ್ನೂ ಕೂಡ ರಚಿಸಿದ್ದಾನೆ.

ಗುಣಭದ್ರಕೃತ ಆತ್ಮಾನುಶಾಸನದಲ್ಲಿ ೨೭೦ ಸಂಸ್ಕೃತ ಪದ್ಯಗಳಿಂದ ಇಂದ್ರಿಯ ಹಾಗೂ ಮನಗಳ ಬಾಹ್ಯವೃತ್ತಿಗಳನ್ನು ತಡೆದು, ಆತ್ಮಧ್ಯಾನದಲ್ಲಿ ಮಗ್ನನಾಗಲು ಉಪ ದೇಶವೀಯಲಾಗಿದೆ. ಮತ್ತು ಈ ಪ್ರಕಾರ ಇದೇ ಯೋಗಾಭ್ಯಾಸದ ಪೂರ್ವ ಪೀಠಿಕೆ ಯೆಂದು ಹೇಳಲಾಗಿದೆ. ಈ ಕೃತಿ ರಚನೆಯಲ್ಲಿ ಕಾವ್ಯಗುಣವಿದೆ. ಇದರ ಕರ್ತೃವು ಗುಣಭದ್ರಾಚಾರ್ಯನೆಂದು ಮನ್ನಿಸಲಾಗುತ್ತದೆ. ಆತನು ಧವಲಾಕಾರನಾದ ವೀರ ಸೇನನ ಪ್ರಶಿಷ್ಯನೂ ಜಿನಸೇನನ ಶಿಷ್ಯನೂ ಆಗಿದ್ದನು. ಇವನು ಉತ್ತರಪುರಾಣ ವನ್ನು ಒಂಭತ್ತನೆಯ ಶತಮಾನದ ಮಧ್ಯಭಾಗದಲ್ಲಿ ಪೂರ್ಣಗೊಳಿಸಿದ್ದನು. ಅದರಿಂದ

'ಆತ್ಮಾನುಶಾಸನ'ದ ರಚನಾ ಕಾಲವೂ ಇದೇ ಸುಮಾರಿನದೆಂದು ಸಿದ್ಧವಾಗುತ್ತದೆ.

ಅಮಿತಗತಿ ಕೃತ ಸುಭಾಷಿತ-ರತ್ನ-ಸಂದೋಹವು (೧೦ ನೆಯ ೧೧ ನೆಯ ಶತಮಾನ) ಒಂದು ಸುಭಾಷಿತ ಸಂಗ್ರಹವಾಗಿದೆ. ಇದರಲ್ಲಿ ೩೨ ಅಧ್ಯಾಯಗಳಿವೆ. ಉತ್ತಮ ಕಾವ್ಯರೀತಿಯಿಂದ ನೈತಿಕ. ಧಾರ್ಮಿಕ ಉಪದೇಶಗಳ ಸಂಗ್ರಹವಿದು. ಪ್ರಸಂಗಕ್ಕನುಸರಿಸಿ ಅಲ್ಲಲ್ಲಿ ನಡು ನಡುವೆ ಅನ್ಯ ಧರ್ಮದ ಮಾನ್ಯತೆಗಳ ಮೇಲೆ ಆಲೋಚನಾತ್ಮಕ ವಿಚಾರಗಳನ್ನೂ ಪ್ರಕಟಿಸಲಾಗಿದೆ. ಅಮಿತಗತಿಯ ಇನ್ನೊಂದು ರಚನೆಯು ಯೋಗಸಾರವಾಗಿದೆ. ಇದರಲ್ಲಿ ೯ ಅಧ್ಯಾಯಗಳು ಇವೆ. ನೈತಿಕ ಹಾಗೂ ಆಧ್ಯಾತ್ಮಿಕ ಉಪದೇಶವುಳ್ಳ ಕೃತಿಯಿದು.

ಸಂಸ್ಕೃತದಲ್ಲಿ ಆಚಾರಕ್ಕೆ ಸಂಬಂಧಿಸಿದ ಹಾಗೂ ಪ್ರಸಂಗಾನುಸಾರ ಯೋಗವನ್ನು ವಿವರಿಸುವ ವಿಸ್ತಾರವಾದ ಗ್ರಂಥವು ಜ್ಞಾನಾರ್ಣವವಾಗಿದೆ. ಇದರ ಕರ್ತೃವು ಶುಭಚಂದ್ರನು. ಇವನು ರಾಜಾಭೋಜನ ಸಮಕಾಲೀನನಾಗಿ ೧೧ನೆಯ ಶತಮಾನದಲ್ಲಿ ಬಾಳಿದ್ದನೆಂದು ಮಾನ್ಯತೆ. ಈ ಗ್ರಂಥದ ಒಂದು ಹಸ್ತಲಿಖಿತ ಪ್ರತಿಯು ಪಾಟಣಾ ಭಂಡಾರದಿಂದ ಸಂ. ೧೨೮೪ ರಲ್ಲಿ ಬರೆದದ್ದು ಲಭಿಸಿದೆ. ಇದರಲ್ಲಿ ೨೦೦೦ಕ್ಕಿಂತ ಹೆಚ್ಚು ಶ್ಲೋಕಗಳು ಇವೆ. ಅವುಗಳನ್ನು ೪೨ ಪ್ರಕರಣಗಳಲ್ಲಿ ವಿಭಾಗಿಸಲಾಗಿದೆ. ಇದರಲ್ಲಿ ಜೈನಸಿದ್ಧಾಂತದ ಬಹುತರ ಎಲ್ಲ ವಿಷಯಗಳೂ ಸಂಕ್ಷೇಪ ಹಾಗೂ ವಿಸ್ತಾರವಾಗಿಯೂ ವರ್ಣಿಸಲಾಗಿದೆ. ಆಚಾರಕ್ಕೆ ಸಂಬಂಧಿಸಿದ ವ್ರತಗಳೂ ಮತ್ತು ಭಾವನೆಯೇ ಮೊದಲಾದವುಗಳ ವಿಸ್ತಾರವಾದ ಪ್ರರೂಪಣೆಯು ಬಂದಿದೆ. ಇದಲ್ಲದೆ ಆಸನ. ಪ್ರಾಣಾಯಾಮ ಇವೇ ಮೊದಲಾದ ಯೋಗದ ಹಾಗೂ ಧ್ಯಾನದ ಆಜ್ಞಾ. ವಿಪಾಕ ಮತ್ತು ಸಂಸ್ಥಾನ ವಿಷಯಗಳ ವರ್ಣನೆಯೂ ಬಂದಿದೆ. ಇಲ್ಲಿ ಧ್ಯಾನದ ನಿರೂಪಣೆಯಲ್ಲಿ ಪಿಂಡಸ್ಥ, ಪದಸ್ಥ, ರೂಪಸ್ಥ ಮತ್ತು ರೂಪಾತೀತ ಸಂಜ್ಞೆಗಳ ಪ್ರಯೋಗವು ಮೌಲಿಕವಾಗಿದೆ. ಈ ಧ್ಯಾನ ಭೇದಗಳ ಸ್ವರೂಪವೂ ಅಪೂರ್ವವಾಗಿದೆ. ಇಪ್ಪತ್ತೊಂದನೆಯ ಪ್ರಕರಣದಲ್ಲಿ ಶಿವತತ್ವ. ಗರುಡತತ್ವ ಮತ್ತು ಕಾಮತತ್ವದ ವರ್ಣನೆಯೂ ಈ ಗ್ರಂಥದ ವೈಶಿಷ್ಟ್ಯವಾಗಿದೆ. ಗ್ರಂಥಕರ್ತೃವು ಪ್ರಾಣಾಯಾಮದ ನಿರೂಪಣೆಯನ್ನು ಪರ್ಯಾಪ್ತಗೊಳಿಸಿದ್ದಾನೆ. ಆದರೆ ಅದು ಧ್ಯಾನದ ಸಿದ್ಧಿಯಲ್ಲಿ ಸಾಧಕವಲ್ಲ; ಒಂದು ಪ್ರಕಾರದಿಂದ ಬಾಧಕವೆಂದು ಹೇಳಿ ಅದನ್ನು ನಿಷೇಧಿಸಿದ್ದಾನೆ. ಈ ವರ್ಣನೆಯನ್ನು ಸಂಸ್ಕೃತ ಗದ್ಯವಲ್ಲಿ ಮಾಡಲಾಗಿದೆ. ಇದರ ಮೇಲೆ ಶ್ರುತಸಾಗರ ಕೃತ ಒಂದು ಸಂಸ್ಕೃತ ಟೀಕೆಯೂ ಉಪಲಬ್ಧವಿದೆ. ಇದರಲ್ಲಿ ವರ್ಣಿಸಿದ ವಿಷಯವು ಬಹಳಷ್ಟಿದೆ. ಅದು ಜ್ಞಾನಾರ್ಣವ ಹೆಸರನ್ನು ಸಾರ್ಥಕವೆನಿಸಿ ಸಿದ್ಧಗೊಳಿಸುತ್ತದೆ. ದಿಗಂಬರ ಪರಂಪರೆಯಲ್ಲಿ ಯೋಗವಿಷಯಕ್ಕೆ ಧ್ಯಾನಸಾರ ಮತ್ತು ಯೋಗಪ್ರದೀಪ ಎಂಬ ಎರಡು ಪದ್ಯಾತ್ಮಕ ಸಂಸ್ಕೃತ ಗ್ರಂಥಗಳೂ ಕೂಡ ಲಭಿಸುತ್ತವೆ.

ಹೇಮಚಂದ್ರನು (ಕ್ರಿ.ಶ. ೧೨ನೆಯ ಶತಮಾನ) ರಚಿಸಿದ ಯೋಗಶಾಸ್ತ್ರದಲ್ಲಿ ಸುಮಾರು ಒಂದು ಸಾವಿರ ಸಂಸ್ಕೃತ ಶ್ಲೋಕಗಳು ಇವೆ. ಇದರಲ್ಲಿ ಮುನಿ ಮತ್ತು

ಶ್ರಾವಕ ಧರ್ಮಗಳನ್ನೂ ಅವುಗಳಿಗೆ ಸಂಬಂಧಿಸಿದ ವ್ರತಗಳನ್ನೂ ಕ್ರಮದಿಂದ ವರ್ಣಿಸಲಾಗಿದೆ. ಆ ಮೇಲೆ ಇದರಲ್ಲಿ ಶ್ರಾವಕ ದಿನಚರ್ಯೆ ಕಷಾಯ ಜಯದಿಂದಾಗುವ ಮನಃಶುದ್ಧಿ, ಅನಿತ್ಯವೇ ಮೊದಲಾದ ಹನ್ನೆರಡು ಭಾವನೆಗಳ ಸ್ವರೂಪವನ್ನು ಹೇಳಿದೆ. ತರುವಾಯ ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣಾ; ಧ್ಯಾನದ ಪಿಂಡಸ್ಥ, ಪದಸ್ಥ, ರೂಪಸ್ಥ ಮತ್ತು ರೂಪಾತೀತ ಹಾಗೆಯೇ ಆಜ್ಞಾವಿಚಯ, ಅಪಾಯ ವಿಚಯ ಮೊದಲಾದ ಧರ್ಮಧ್ಯಾನ ಮತ್ತು ಶುಕ್ಲಧ್ಯಾನಗಳ ನಾಲ್ಕು ಭೇದ, ಕೇವಲೀ ಸಮುದ್ಘಾತ ಮತ್ತು ಮೋಕ್ಷಪ್ರಾಪ್ತಿಯ ವರ್ಣನೆಯನ್ನು ಮಾಡಲಾಗಿದೆ. ಇಲ್ಲಿಯ ಬಹುತರ ಸಮಸ್ತ ವರ್ಣನೆಯನ್ನು ಸ್ಪಷ್ಟವಾಗಿ ಶುಭಚಂದ್ರಕೃತ ಜ್ಞಾನಾರ್ಣವದಿಂದ ಕೆಲವೊಂದು ಸ್ಥಳದಲ್ಲಿ ಶಬ್ದಶಃ ಹಾಗೂ ಹಲವೆಡೆಗಳಲ್ಲಿ ಸ್ವಲ್ಪ ವ್ಯತ್ಯಾಸಗೊಳಿಸಿ—ಸಂಕೋಚ-ವಿಸ್ತಾರಪೂರ್ವಕ ಸ್ವೀಕರಿಸಲಾಗಿದೆ. ಅದು ಎಷ್ಟೆಂದರೆ ಪ್ರಾಣಾಯಾಮದ ವಿಷಯವನ್ನು ವಿಸ್ತಾರಪೂರ್ವಕ ೩೦೦ ಶ್ಲೋಕಗಳಲ್ಲಿ ಪ್ರರೂಪಿಸಿಯೂ ಕೂಡ ಅದನ್ನು ಜ್ಞಾನಾರ್ಣವಕ್ಕೆ ಸಮಾನವಾಗಿ ಮೋಕ್ಷಪ್ರಾಪ್ತಿಯಲ್ಲಿ ಬಾಧಕವೆಂದು ಹೇಳಿದೆ. ಶುಭಚಂದ್ರ ಮತ್ತು ಹೇಮಚಂದ್ರರ ಕಾಲದ ದೃಷ್ಟಿಯಿಂದ ಪೂರ್ವಾಪರತ್ವ ಹಾಗೂ ಒಬ್ಬರ ಮೇಲೆ ಇನ್ನೊಬ್ಬರ ಪ್ರಭಾವವು ಸುಸ್ಪಷ್ಟವಾಗಿದೆ. ಹೇಮಚಂದ್ರನು ಶುಭಚಂದ್ರನಿಗೆ ಋಣಿಯಲ್ಲ ಎನ್ನುವುದಕ್ಕೆ ಅವಕಾಶವೇ ಇಲ್ಲ.

ಆಶಾಧರಕೃತ ಅಧ್ಯಾತ್ಮರಹಸ್ಯವು ಇದೀಗ ಪ್ರಕಟವಾಗಿದೆ. ಇದರಲ್ಲಿ ೭೨ ಸಂಸ್ಕೃತ ಶ್ಲೋಕಗಳಿವೆ. ಇವುಗಳಿಂದ ಆತ್ಮಶುದ್ಧಿ ಮತ್ತು ಆತ್ಮದರ್ಶನ ಹಾಗೇ ಅನುಭೂತಿಯನ್ನು ಯೋಗದ ಭೂಮಿಕೆಯ ಮೇಲೆ ಪ್ರರೂಪಿಸಲಾಗಿದೆ. ಆಶಾಧರನು ತನ್ನ ಅನಗಾರ ಧರ್ಮಾಮೃತದ ಟೀಕೆಯ ಪ್ರಶಸ್ತಿಯಲ್ಲಿ ಈ ಗ್ರಂಥದ ಉಲ್ಲೇಖವನ್ನು ಮಾಡಿದ್ದಾನೆ. ಈ ಗ್ರಂಥದ ಪ್ರಾಚೀನ ಪ್ರತಿಯೊಂದರ ಪುಷ್ಪಿಕೆಯಲ್ಲಿ ಇದನ್ನು ಧರ್ಮಾಮೃತದ 'ಯೋಗೋದ್ದೀಪನ' ಎಂಬ ಹೆಸರಿನ ಹದಿನೆಂಟನೆಯ ಅಧ್ಯಾಯವೆಂದು ಹೇಳಿದೆ. ಇದರಿಂದ ಗೊತ್ತಾಗುವುದೇನೆಂದರೆ ಈ ಕೃತಿಯ ಇನ್ನೊಂದು ಹೆಸರು ಯೋಗೋದ್ದೀಪನವೂ ಇರಬೇಕು; ಅದನ್ನು ಅದರ ಕರ್ತೃವು ಧರ್ಮಾಮೃತದ ಹದಿನೆಂಟನೆಯ ಅಧ್ಯಾಯ ರೂಪದಲ್ಲಿ ಬರೆದಿದ್ದನು. ಸ್ವತಃ ಕರ್ತೃವಿನ ಶಬ್ದಗಳಲ್ಲಿ, ಅವನು ತನ್ನ ತಂದೆಯ ಆದೇಶದಂತೆ ಆರಬ್ಧಯೋಗಿಗಳಿಗಾಗಿ ಈ ಪ್ರಸನ್ನ, ಗಂಭೀರ ಮತ್ತು ಪ್ರಿಯಶಾಸ್ತ್ರದ ರಚನೆಯನ್ನು ಮಾಡಿದನೆಂಬ ಉಲ್ಲೇಖವಿದೆ.

**ಸ್ತೋತ್ರ ಸಾಹಿತ್ಯ :—**

ಜೈನ ಮುನಿಗಳ ಆರು ಆವಶ್ಯಕ ಕ್ರಿಯೆಗಳ ವಿಧಾನ ಮಾಡಲಾಗಿದೆಯಷ್ಟೆ? ಅವುಗಳಲ್ಲಿ ಚತುರ್ವಿಂಶತಿ-ಸ್ತವವೂ ಒಂದಾಗಿದೆ. ಆದರಿಂದ ಜೈನ ಸಂಘದ ಸುವ್ಯವಸ್ಥೆಯು ಎಷ್ಟು ಪ್ರಾಚೀನವಾಗಿರುವುದೋ ಅಷ್ಟೇ ಪ್ರಾಚೀನವಾಗಿದೆ, ತೀರ್ಥಂಕರರ ಸ್ತುತಿಯ ಪರಂಪರೆಯು. ಈ ಸ್ತುತಿಗಳು ಪೂರ್ವದಲ್ಲಿ ಭಕ್ತ್ಯಾತ್ಮಕ ವಿಚಾರಗಳ

ಪ್ರಕಾಶಕವೆಂದು ಮಾಡಲಾಗುತ್ತಿದ್ದುವು. ಇದನ್ನು ನಾವು ಈ ಮೊದಲೇ ಕುಂದ ಕುಂದಾಚಾರ್ಯರ ಪ್ರಾಕೃತ ಹಾಗೂ ಪೂಜ್ಯಪಾದಕೃತ ಸಂಸ್ಕೃತ ಭಕ್ತಿಗಳಲ್ಲಿ ಅವ ಲೋಕಿಸಿದ್ದೇವೆ. ಆ ಮೇಲೆ ಈ ಸ್ತುತಿಗಳ ಸ್ವರೂಪವು ಎರಡು ಪ್ರವಾಹಗಳಲ್ಲಿ ಮುಂದಾ ಯಿತು. ಒಂದೆಡೆಗೆ ಬುದ್ಧಿವಾದಿ ನೈಯಾಯಿಕರು ಇಂಥ ಸ್ತುತಿಗಳನ್ನು ರಚಿಸಿದರು. ಅವರು ತೀರ್ಥಂಕರರಲ್ಲಿ ಅನ್ಯ ದೇವರ ಅಪೇಕ್ಷೆಯಿಂದ ಇರುವ ಉತ್ಕೃಷ್ಟತೆ ಮತ್ತು ಗುಣಾತ್ಮಕ ವಿಶೇಷತೆಗಳನ್ನು ಪ್ರತಿಷ್ಠಿಸಿದರು. ಈ ಪ್ರಕಾರದ ಸ್ತುತಿಗಳು ಸಮಂತ ಭದ್ರಕೃತ ಆಪ್ತಮೀಮಾಂಸಾದಿಗಳು, ಸಿದ್ಧಸೇನಕೃತ 'ದ್ವಾತ್ರಿಂಶಿಕಾ'ಗಳು, ಹೇಮಚಂದ್ರಕೃತ ಅನ್ಯಯೋಗ ಮತ್ತು ಅಯೋಗ ವ್ಯವಚ್ಛೇದ ಕಾ ಮೊದಲಾದವು ಇವೆ. ಇವುಗಳ ಉಲ್ಲೇಖವನ್ನು ಹಿಂದೆ ಜೈನ ನ್ಯಾಯಪ್ರಕರಣದಲ್ಲಿ ಈಗಾಗಲೇ ಮಾಡಲಾಗಿದೆ.

ಇನ್ನೊಂದು ಪ್ರವಾಹದ ವಿಕಾಸವು, ಒಂದು ಕಡೆಗೆ ಇಪ್ಪತ್ನಾಲ್ಕು ತೀರ್ಥಂಕರರ ಹೆಸರಿನ ಉಲ್ಲೇಖ ಮತ್ತು ಅಲ್ಲಲ್ಲಿ ಗುಣಾತ್ಮಕ ವಿಶ್ಲೇಷಣದ ಯೋಜನೆ ಇವುಗಳಿಂದ ಕೂಡಿ ಆಯಿತು. ಈ ಪ್ರಕಾರದ ಅನೇಕ ಸ್ತುತಿಗಳು ನಮಗೆ ಪೂಜೆಗಳ ಜಯಮಾಲೆ ಗಳ ರೂಪದಲ್ಲಿ ದೊರೆಯುತ್ತವೆ. ಕ್ರಮಕ್ರಮದಿಂದ ಸ್ತೋತ್ರಗಳಲ್ಲಿ ವಿಶೇಷಣಗಳೂ ಪರ್ಯಾಯವಾಚಕ ಹೆಸರುಗಳೂ ಹೆಚ್ಚಾಗಿ ಪ್ರಚಾರದಲ್ಲಿ ಬಂದುವು. ಈ ಶೈಲಿಯ ಅಂತಿಮ ವಿಕಾಸದ ಉದಾಹರಣೆಯೆಂದು ಭಗವದ್ ಜಿನಸೇನಾಚಾರ್ಯರ (೯ ನೆಯ ಶತಮಾನ) 'ಜಿನ ಸಹಸ್ರನಾಮ ಸ್ತೋತ್ರ'ವನ್ನು ನಾವು ಕಾಣುತ್ತೇವೆ. ಈ ಸ್ತೋತ್ರದ ಪ್ರಾರಂಭದ ೩೪ ಶ್ಲೋಕಗಳಲ್ಲಿ ನಾನಾ ವಿಶೇಷಣಗಳಿಂದ ಪರಮಾತ್ಮನಾದ ತೀರ್ಥಂಕರನನ್ನು ನಮಸ್ಕರಿಸಲಾಗಿದೆ. ಇನ್ನು ಮರಳಿ ಹತ್ತು ಶತಕಗಳಲ್ಲಿ ಒಟ್ಟು ಜಿನೇಂದ್ರನ ೧೦೦೮ ಹೆಸರುಗಳನ್ನು ಸಮಾವೇಶಗೊಳಿಸಿದೆ. ಈ ಹೆಸರುಗಳಲ್ಲಿ ಬಹುತರ ಅನ್ಯಧರ್ಮದ ದೇವತೆಗಳ ಹೆಸರುಗಳೆನಿಸುವ ಬ್ರಹ್ಮ, ಶಿವ, ವಿಷ್ಣು, ಬುದ್ಧ, ಬೃಹ ಸ್ಪತಿ, ಇಂದ್ರ ಮೊದಲಾದ ಹೆಸರುಗಳೂ ಬಂದು ಹೋಗಿವೆ. ಇದನ್ನೇ ಅನುಸರಿಸಿ ಪಂ. ಆಶಾಧರ (೧೩ನೆಯ ಶತಮಾನ), ದೇವವಿಜಯಗಣಿ (೧೬ನೆಯ ಶತಮಾನ), ವಿನಯ ವಿಜಯ ಉಪಾಧ್ಯಾಯ (೧೭ನೆಯ ಶತಮಾನ) ಮತ್ತು ಸಕಲ ಕೀರ್ತಿಯೇ ಮೊದಲಾದವರು ರಚಿಸಿದ ಅನೇಕ ಜಿನಸಹಸ್ರನಾಮ ಸ್ತೋತ್ರಗಳು ಉಪಲಬ್ಧವಿವೆ. ಸಿದ್ಧಸೇನ ದಿವಾಕರಕೃತ ಜಿನಸಹಸ್ರನಾಮ ಸ್ತೋತ್ರದ ಉಲ್ಲೇಖವೂ ಕೂಡ ದೊರೆಯು ತ್ತದೆ.

ಇನ್ನೊಂದೆಡೆಗೆ ಕಾವ್ಯ ಪ್ರತಿಭಾಶಾಲಿಗಳಾದ ಸ್ತುತಿಕಾರರೂ ಸ್ತೋತ್ರಗಳನ್ನು ರಚಿಸಿದ್ದುಂಟು. ಅಂಥವುಗಳಲ್ಲಿ ತೀರ್ಥಂಕರರ ಗುಣಾನುವಾದವಾಗಿ ಭಕ್ತಿಭಾವ ಪೂರ್ಣವಾಗಿಯೂ ಛಂದ, ಅಲಂಕಾರ, ಲಾಲಿತ್ಯಗಳಿಂದ ಕೂಡಿದ ಕವಿತೆಗಳು ಕಂಡು ಬರುತ್ತವೆ. ಈ ಪ್ರಕಾರದ ರಚನೆಗಳು ಜೈನ ಸಾಹಿತ್ಯದಲ್ಲಿ ಗೀತಿಕಾವ್ಯದ ಸುಂದರ ಉದಾಹರಣೆಗಳಾಗಿವೆ. ಪ್ರಾಕೃತದಲ್ಲಿ ಈ ಪ್ರಕಾರದ ಅತಿಪ್ರಾಚೀನ ಕಾವ್ಯವು

ಉವಸಗ್ಗಹರ ಸ್ತೋತ್ರವಾಗಿದೆ. ಇದು ಭದ್ರಬಾಹು ಕೃತವೆಂದು ಹೇಳುತ್ತಾರೆ. ಇದರಲ್ಲಿ ಐದು ಗಾಹೆಗಳಿಂದ ಪಾರ್ಶ್ವನಾಥ ತೀರ್ಥಂಕರರ ಸ್ತುತಿಯನ್ನು ಮಾಡಲಾಗಿದೆ. ಧನಪಾಲಕೃತ ಋಷಭಪಂಚಾಶಿಕಾದಲ್ಲಿ ಐವತ್ತು ಪದ್ಯಗಳಿಂದ ಪ್ರಥಮ ತೀರ್ಥಂಕರರ ಜೀವನಕ್ಕೆ ಸಂಬಂಧಿಸಿದ ಉಲ್ಲೇಖಗಳು ಲಭಿಸುತ್ತವೆ. ಈ ಸ್ತುತಿಯು ಕಲಾಯುಕ್ತವೂ ಕಲ್ಪನಾಪೂರ್ಣವೂ ಆಗಿದೆ. ಇದರಲ್ಲಿ ಅಲಂಕಾರಗಳ ಒಳ್ಳೆಯ ಮಿಂಚಿದೆ. ಕವಿಯ ಶಬ್ದಗಳಲ್ಲಿ ಜೀವನವೊಂದು ಮಹಾಸಾಗರವಾಗಿದೆ. ಅದರಲ್ಲಿ ಋಷಭ ಭಗವಾನ್‌ನೇ ಒಂದು ನೌಕೆಯು. ಜೀವನವು ಒಂದು ಕಳ್ಳಕಾರರು ವ್ಯಾಪಿಸಿದ ಅರಣ್ಯವಾಗಿದೆ. ಅದರಲ್ಲಿ ಋಷಭನೇ ಒಬ್ಬ ರಕ್ಷಕನು. ಜೀವನವು ಮಿಥ್ಯಾತ್ವಮಯ ಒಂದು ಇರುಳಾಗಿದೆ. ಅದರಲ್ಲಿ ಋಷಭನೇ ಉದಯೋನ್ಮುಖ ಸೂರ್ಯನಾಗಿದ್ದಾನೆ. ಜೀವನವು ಒಂದು ರಂಗಭೂಮಿಯು, ಇಲ್ಲಿಂದ ಪ್ರತಿಯೊಂದು ಪಾತ್ರವೂ ಕೊನೆಯಲ್ಲಿ ಪ್ರಸ್ಥಾನಗೈಯಲೇಬೇಕು ; ಇತ್ಯಾದಿ. ಇದರ ಮೇಲೆ ಪ್ರಭಾಚಂದ್ರ, ನೇಮಿಚಂದ್ರ, ಮಹೀಮೇರು, ಧರ್ಮಶೇಖರ ಮೊದಲಾದವರು ಟೀಕೆಗಳನ್ನು ಬರೆದದ್ದು ಕಂಡುಬರುತ್ತದೆ. ಇದನ್ನು ಕ್ಲಾಟನು ಜರ್ಮನ್ ಭಾಷೆಯಲ್ಲಿಯೂ ಅನುವಾದಿಸಿದ್ದಾನೆ. ನಂದಿಷೇಣ (೯ ನೆಯಶತಮಾನ) ಕೃತ ಅಜಿಯ ಸಂತಿಥ್ಥವ (ಅಜಿತ-ಶಾಂತಿ-ಸ್ತವ) ದಲ್ಲಿ ಎರಡನೆಯ ಹಾಗೂ ಹದಿನಾರನೆಯ ತೀರ್ಥಂಕರರ ಸ್ತುತಿಯನ್ನು ಮಾಡಲಾಗಿದೆ. ಯಾಕೆಂದರೆ ಈ ಇಬ್ಬರು ತೀರ್ಥಂಕರರು, ಒಂದು ಪ್ರಾಚೀನ ಮಾನ್ಯತೆಗನುಸರಿಸಿ, ಶತ್ರುಂಜಯ ಪರ್ವತದ ಗುಹೆಯಲ್ಲಿ ವರ್ಷಾಕಾಲವನ್ನು ಕಳೆದಿದ್ದರು ; ಅಂತೂ ಟೀಕಾಕಾರರ ಹೇಳಿಕೆಗೆ ಅನುಸಾರ ಕವಿಯು ಈ ತೀರ್ಥ ಕ್ಷೇತ್ರದ ಯಾತ್ರೆಯಿಂದ ಪ್ರಭಾವಿತನಾಗಿ ಈ ಸ್ತೋತ್ರವನ್ನು ರಚಿಸಿದನೆಂದು ತಿಳಿಯುತ್ತದೆ. ಇದೇ ಇಬ್ಬರು ತೀರ್ಥಂಕರರ ಸ್ತುತಿಯನ್ನು ಜಿನವಲ್ಲಭಸು (೧೨ ನೆಯ ಶತಮಾನ) ಉಲ್ಲಾಸಿಕ್ಕಮಥಯ ದ್ವಾರಾ ಮಾಡಿದ್ದಾನೆ. ಸುಮತಿಗಣಿಯ ಹೇಳಿಕೆಗನುಸರಿಸಿ ಜಿನವಲ್ಲಭನು ಪಾಣಿನೀಯ ವ್ಯಾಕರಣ, ಮಹಾಕಾವ್ಯ, ಅಲಂಕಾರ ಶಾಸ್ತ್ರ, ನಾಟ್ಯ, ಸಾಹಿತ್ಯ, ಜ್ಯೋತಿಷ ಮತ್ತು ನ್ಯಾಯಗಳ ಮಹಾನ್ ಪಂಡಿತನಾಗಿದ್ದನು. ವೀರಗಣಿಯೂ ಕೂಡ ಒಂದು ಅಜಿಯ ಸಂತಿಥ್ಥಯ ಸ್ತೋತ್ರದ ರಚನೆಯನ್ನು ಮಾಡಿದ್ದನು. ಅಭಯದೇವ ಕೃತ (೧೧ನೆಯ ಶತಮಾನ) ಜಯತಿಹುಯಣ ಸ್ತೋತ್ರವೂ ಕೂಡ ಪ್ರಾಕೃತದಲ್ಲಿ ಲಾಲಿತ್ಯ ಹಾಗೂ ಭಕ್ತಿಪೂರ್ಣ ಸ್ತುತಿಯಾಗಿದೆ. ಈ ಸ್ತುತಿಕರ್ತನು ಒಮ್ಮೆ ಒಂದು ವ್ಯಾಧಿಗೆ ಒಳಗಾಗಿದ್ದು, ಈ ಸ್ತುತಿ ರಚನೆಯಿಂದ ಮುಕ್ತನಾದನೆಂದು ಇದರ ಫಲ ಸ್ವರೂಪದಲ್ಲಿ ಹೇಳಿದೆ. ನೇಮಿ ಜಿನಸ್ತವ ಎಂಬುದು ಚಿಕ್ಕವೊಂದು ಸ್ತೋತ್ರವಾಗಿದೆ. ಇದರಲ್ಲಿ ಲ ಮತ್ತು ಮ ಗಳನ್ನುಳಿದು ಬೇರೆ ವ್ಯಂಜನಗಳನ್ನು ಉಪಯೋಗಿಸಿಲ್ಲ. ಪ್ರಾಕೃತದಲ್ಲಿ ಮಹಾವೀರ ಸ್ತವವು ಶಬ್ದಾಲಂಕಾರಕ್ಕೆ ಸುಂದರ ಉದಾಹರಣೆಯಾಗಿದೆ. ಇದರ ಪ್ರತಿಯೊಂದು ಪದವೂ ಭಿನ್ನ ಭಿನ್ನ ಮೂರು ಅರ್ಥಗಳಲ್ಲಿ ಪ್ರಯೋಗಿಸಲ್ಪಟ್ಟಿದೆ. ಕೆಲವೊಂದು ಸ್ತುತಿಗಳು ಅನೇಕ ಭಾಷೆಗಳಿಂದ ಕೂಡಿದ್ದೂ ಸಹ ಇವೆ. ಇಂಥವುಗಳಲ್ಲಿ

ಧರ್ಮವರ್ಧನ ಕೃತ (೧೩ ನೆಯ ಶತಮಾನ) ಪಾರ್ಶ್ವಜಿನಸ್ತವನ ಹಾಗೂ ಜಿನಪದ್ಮ ಕೃತ (೧೪ ನೆಯ ಶತಮಾನ) ಶಾಂತಿನಾಥಸ್ತವನಗಳನ್ನು ಎತ್ತಿ ಹೇಳಬೇಕು. ಇವು ಗಳಲ್ಲಿ ಸಂಸ್ಕೃತ, ಮಹಾರಾಷ್ಟ್ರೀ, ಮಾಗಧೀ. ಶೌರಸೇನೀ, ಪೈಶಾಚೀ ಮತ್ತು ಅಪ ಭ್ರಂಶ ಈ ಆರು ಭಾಷೆಗಳ ಪದ್ಯಗಳನ್ನು ಸಮಾವೇಶಗೊಳಿಸಲಾಗಿದೆ. ಕೆಲವೊಂದೆಡೆ ಯಲ್ಲಿ ಒಂದೇ ಪದ್ಯವನ್ನು ಅರ್ಧ ಸಂಸ್ಕೃತ ಅರ್ಧ ಪ್ರಾಕೃತಗಳಲ್ಲಿ ರಚಿಸಿದ್ದುಂಟು. ಧರ್ಮಘೋಷ ಕೃತ ಇಸಿಮಂಡಲ (ಋಷಿಮಂಡಲ) ಸ್ತೋತ್ರದಲ್ಲಿ ಜಂಬೂಸ್ವಾಮಿ, ಸ್ವಯಂಭವ, ಭದ್ರಬಾಹು ಮೊದಲಾದ ಆಚಾರ್ಯರ ಸ್ತುತಿಯನ್ನು ಮಾಡಲಾಗಿದೆ. ಇನ್ನು ಸಮವಸರಣ ಸ್ತೋತ್ರಗಳು—೨೪ ಗಾಹೆಗಳಿಂದ ಕೂಡಿದುದು-ಒಂದು ಧರ್ಮಘೋಷಕೃತವೂ ಇನ್ನೊಂದು ೫೨ ಗಾಹೆಗಳಿಂದ ಕೂಡಿದುದು ಮಹಾಖ್ಯಕೃತವೂ ಲಭಿಸುತ್ತವೆ.

ಸಂಸ್ಕೃತದಲ್ಲಿ ಸಮಂತಭದ್ರನು ರಚಿಸಿದ ಕಾವ್ಯ ಶೈಲಿಯ ಸ್ತುತಿಗಳು ಎರಡು ಲಭಿಸಿವೆ. ಇವೇ ಎಲ್ಲಕ್ಕೂ ಪ್ರಾಚೀನವಾದವುಗಳು. ಇವುಗಳಲ್ಲಿ ಒಂದು ಬೃಹತ್ ಸ್ವಯಂಭೂ ಸ್ತೋತ್ರವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಯಾಕೆಂದರೆ ಇದು 'ಸ್ವಯಂಭುವಾ' ಶಬ್ದದಿಂದ ಪ್ರಾರಂಭವಾಗುತ್ತದೆ. ಇದರಲ್ಲಿ ಇಪ್ಪತ್ತುನಾಲ್ಕು ತೀರ್ಥಂಕರರ ಸ್ತುತಿಗಳು ಭಿನ್ನ ಭಿನ್ನವಾಗಿವೆ. ಹೆಚ್ಚಿನ ಸಂಖ್ಯೆಯಲ್ಲಿ ಈ ಸ್ತುತಿಗಳು ಐದೈದು ಪದ್ಯಗಳಿಂದ ಕೂಡಿದುದಾಗಿವೆ. ಒಟ್ಟು ಪದ್ಯಗಳ ಸಂಖ್ಯೆಯು ೧೪೩ ಇದೆ. ಇದರಲ್ಲಿ ವಂಶಸ್ಥ, ಇಂದ್ರವಜ್ರಾ, ವಸಂತತಿಲಕಾ ಇವೇ ಮೊದಲಾದ ೧೫, ೧೬ ಪ್ರಕಾರದ ಛಂದಸ್ಸನ್ನು ಉಪಯೋಗಿಸಲಾಗಿದೆ. ಅರ್ಥ ಹಾಗೂ ಶಬ್ದಾಲಂಕಾರಗಳೂ ಬಹಳಷ್ಟು ಬಂದಿವೆ. ತಾತ್ವಿಕ ವರ್ಣನವೂ ನೈತಿಕ ಮತ್ತು ಧಾರ್ಮಿಕ ಉಪದೇಶ ಗಳೂ ಸಾಕಷ್ಟು ಇವೆ. ಇದರ ಮೇಲೆ ಪ್ರಭಾಚಂದ್ರಕೃತ ಸಂಸ್ಕೃತ ಟೀಕೆಯೂ ದೊರೆ ತಿದೆ.

ಸಮಂತಭದ್ರ ಕೃತ ಸ್ತುತಿವಿದ್ಯಾ ಎಂಬುದು ಇನ್ನೊಂದು ಸ್ತೋತ್ರವಾಗಿದೆ. ಇದಕ್ಕೆ ಜಿನಶತಕ ಮತ್ತು ಜಿನಶತಕಾಲಂಕಾರ ಮೊದಲಾದ ಹೆಸರುಗಳು ಇದ್ದುದೂ ಕಂಡು ಬರುತ್ತದೆ. ಇದರಲ್ಲಿ ಕವಿಯ ಕಾವ್ಯ-ಕೌಶಲವು ಅತ್ಯಂತ ಉತ್ಕೃಷ್ಟ ಸೀಮೆಗೆ ಹೋಗಿ ತಲುಪಿದೆ. ಇದರಲ್ಲಿ ೧೧೬ ಪದ್ಯಗಳಿವೆ. ಅಲಂಕಾರ, ಚಿತ್ರಕಾವ್ಯಗಳಿಂದ ಅಲ್ಲಲ್ಲಿ ಬಹಳ ಜಟಿಲವೆನಿಸುತ್ತವೆ. ಅವುಗಳನ್ನು ಟೀಕೆ ಟಿಪ್ಪಣಿಗಳಿಲ್ಲದೆ ತಿಳಿದು ಕೊಳ್ಳುವುದು ತುಂಬ ಕಷ್ಟಸಾಧ್ಯವೆನಿಸುತ್ತದೆ. ಇದರ ಮೇಲೆ ವಸುನಂದಿ ಕೃತ ಟೀಕೆ ಯೊಂದು ಮಾತ್ರ ಇದ್ದುದು ಕಂಡುಬರುತ್ತದೆ. ಇದೇ ಸಾಲಿನಲ್ಲಿ ನಿಲ್ಲುವ ಪೂಜ್ಯ ಪಾದ ದೇವನಂದಿ ಕೃತ (೬ ನೆಯ ಶತಮಾನ) ಅಲಂಕಾರ ಪ್ರಚುರ ಸಿದ್ಧಪ್ರಿಯ ಸ್ತೋತ್ರವೂ ಒಂದಿದೆ. ಇದು ೨೬ ಪದ್ಯಗಳಲ್ಲಿ ಪೂರ್ಣಗೊಂಡಿದೆ. ಇದರಲ್ಲಿ ಇಪ್ಪತ್ತು ನಾಲ್ಕು ಜನ ತೀರ್ಥಂಕರರ ಸ್ತುತಿಯಿದೆ. ಇದು 'ಸಿದ್ಧಪ್ರಿಯ' ಎಂಬ ಪದದಿಂದ ಆರಂಭವಾಗುವುದರಿಂದ ಅದೇ ಹೆಸರಿನಿಂದ ಪ್ರಸಿದ್ಧವಾಗಿದೆ.

ಸಂಸ್ಕೃತದಲ್ಲಿ ಮಾನತುಂಗಾಚಾರ್ಯ (೫–೬ ನೆಯ ಶತಮಾನ) ಕೃತ ಭಕ್ತಾ-ಮರಸ್ತೋತ್ರವು ಬಹು ಲೋಕಪ್ರಿಯವಾಗಿದೆ. ಸುಪ್ರಚಲಿತವೂ ಇದೆ. ಇಷ್ಟೇಅಲ್ಲ, ಬಹುತರ ಪ್ರತಿಯೊಬ್ಬ ಜೈನನ ಜಿಹ್ವೆಯ ಮೇಲೆ ಕುಣಿಯುವಂಥದಾಗಿದೆ. ದಿಗಂಬರ ಪರಂಪರೆಗನುಸರಿಸಿ ಇದರಲ್ಲಿ ೪೮ ಹಾಗೂ ಶ್ವೇತಾಂಬರ ಪರಂಪರೆಗನುಸರಿಸಿ ೪೪ ಪದ್ಯ ಗಳು ಇದ್ದುದು ಕಂಡುಬರುತ್ತದೆ. ಸ್ತೋತ್ರದ ರಚನೆಯು ಸಿಂಹೋನ್ನತಾ ಛಂದದಲ್ಲಿ ಆಗಿದೆ. ಇದರಲ್ಲಿ ಸ್ವತಃ ಕರ್ತೃವಿನ ಅಭಿಪ್ರಾಯಕ್ಕನುಸಾರ ಪ್ರಥಮ ತೀರ್ಥಂಕರರಾದ ಋಷಭನಾಥನ ಸ್ತುತಿಯಿದೆ. ಆದರೆ ಸಮಗ್ರ ರಚನೆಯು ಯಾವ ತೀರ್ಥಂಕರರ ಸ್ತುತಿಯೂ ಇದಾಗಿರುವಂತೆ ಕಂಡುಬರುವ ಹಾಗಿದೆ. ಪ್ರತಿಯೊಂದು ಪದ್ಯದಲ್ಲಿಯೂ ಬಹು ಸುಂದರ ಉಪಮೆ ರೂಪಕ ಮೊದಲಾದ ಅಲಂಕಾರಗಳ ಸಮಾವೇಶವಿದೆ. ಹೇ ಭಗವನ್ ತಾವೊಂದು ಅದ್ಭುತ ಜಗತ್ ಪ್ರಕಾಶಕ ದೀಪದಂತಿರುವಿರಿ ! ಇದರಲ್ಲಿ ಎಣ್ಣೆ ಯಿಲ್ಲ, ಬತ್ತಿಯಿಲ್ಲ, ಹೊಗೆಯಿಲ್ಲ, ಇಷ್ಟೇ ಅಲ್ಲ, ಪರ್ವತವನ್ನೂ ನಡುಗಿಸುವಂಥ ಪ್ರಚಂಡ ವಾಯುವೂ ಕೂಡ ಈ ದೀಪವನ್ನು ಸೋಂಕದು. ಆದರೂ ಜಗತ್ತಿನ ತುಂಬ ಪ್ರಕಾಶವನ್ನು ಇದು ಬೀರುತ್ತದೆ. ಹೇ ಮುನೀಂದ್ರ, ತಮ್ಮ ಮಹಿಮೆಯು ಸೂರ್ಯನಿ ಗಿಂತಲೂ ಹೆಚ್ಚಿನದಾಗಿದೆ. ಯಾಕೆಂದರೆ ನಿಮಗೆಂದೂ ಅಸ್ತವಿಲ್ಲ ; ರಾಹುಗ್ರಹಣವಿಲ್ಲ, ತಮ್ಮ ಪ್ರಭಾವವನ್ನು ಮೋಡಗಳು ತಡೆಯಲಾರವು , ಒಮ್ಮೆಲೇ ಸಮಸ್ತ ಲೋಕದ ಸ್ವರೂಪವನ್ನು ಸುಸ್ಪಷ್ಟಗೊಳಿಸುವಿ. ಭಗವನ್ ನೀನೇ ಬುದ್ಧನು , ಯಾಕೆಂದರೆ ಬುದ್ಧಿ ಮತ್ತು ಬೋಧದ ಅರ್ಚನೆಯನ್ನು ವಿಬುಧ ಜನರೆಲ್ಲ ಮಾಡುತ್ತಾರೆ. ನೀನೇ ಶಂಕರ ನಾಗಿರುವಿ ; ಯಾಕೆಂದರೆ ತಾವು ಭುವನತ್ರಯದ ಶಮ ಅರ್ಥಾತ್ ಕಲ್ಯಾಣಗೈಯು ವಿರಿ, ಮತ್ತು ತಾವೇ ವಿಧಾತಾ–ಬ್ರಹ್ಮಾ–ಆಗಿರುವಿರಿ ; ಯಾಕೆಂದರೆ, ನೀನೇ ಶಿವ ಮಾರ್ಗದ–ಮೋಕ್ಷ ಮಾರ್ಗದ–ವಿಧಿಯ ವಿಧಾನವನ್ನು ನಿರೂಪಿಸಿರುವಿ ; ಇತ್ಯಾದಿ. ಇದರ ಸಂಪಾದನೆಯನ್ನೂ ಜರ್ಮನ ಭಾಷೆಯಲ್ಲಿ ಅನುವಾದವನ್ನೂ ಡಾ. ಯಾಕೋ-ಬಿಯು ಮಾಡಿದ್ದಾನೆ. ಈ ಸ್ತೋತ್ರದ ಆಧಾರದಿಂದ ವಿಶಾಲ ಸಾಹಿತ್ಯ ಪ್ರಪಂಚವೇ ನಿರ್ಮಾಣವಾಗಿದೆ. ಇದರ ಮೇಲೆ ೨೦, ೨೫ ಟೀಕೆಗಳಂತೂ ರಚನೆಯಾಗಿವೆ. ಅಲ್ಲದೆ ಭಕ್ತಾಮರಸ್ತೋತ್ರ ಕಥಾ ಮತ್ತು ಚರಿತ್ರ, ಛಾಯಾಸ್ತವನ, ಪಂಚಾಂಗವಿಧಿ, ಪಾದಪೂರ್ತಿಸ್ತವನ, ಪೂಜಾ, ಮಂತ್ರ, ಮಾಹಾತ್ಮ್ಯ, ವ್ರತೋದ್ಯಾಪನ ಮೊದಲಾದ ರಚನೆಗಳೂ ೨೦, ೨೫ ಕ್ಕಿಂತ ಕಡಿಮೆಯಿಲ್ಲ. ಪ್ರಾಕೃತದಲ್ಲಿಯೂ ಕೂಡ ಮಾನತುಂಗ ಕೃತ ಭಯಹರಸ್ತೋತ್ರವು ಪಾರ್ಶ್ವನಾಥನ ಸ್ತುತಿಯ ರೂಪದಲ್ಲಿ ರಚಿತವಾದದ್ದು ಕಂಡುಬರುತ್ತದೆ.

ಭಕ್ತಾಮರಕ್ಕೆ ಸರಿದೂಗುವ ಅದೇ ಛಂದ, ಅದೇ ಶೈಲಿಯಲ್ಲಿ ರಚಿತಗೊಂಡುದೂ ಅಷ್ಟೇ ಜನಪ್ರಿಯವಾದುದೂ ಆದ ಇನ್ನೊಂದು ಸ್ತೋತ್ರವು ಕಲ್ಯಾಣಮಂದಿರ ಸ್ತೋತ್ರವಾಗಿದೆ. ಇದರಲ್ಲಿ ೪೪ ಪದ್ಯಗಳಿವೆ. ಕೊನೆಯಲ್ಲಿರುವ ಬೇರೆ ಛಂದಸ್ಸಿನ ಪದ್ಯವೊಂದರಲ್ಲಿ ಇದನ್ನು ರಚಿಸಿದವನು ಕುಮುದಚಂದ್ರನೆಂದು ಸೂಚಿಸಲಾಗಿದೆ.

ಕೆಲವು ಜನರು ಸಿದ್ಧಸೇನನ (ಸುಮಾರು ೬ನೆಯ ಶತಮಾನ) ಇನ್ನೊಂದು ಹೆಸರೇ ಇದಾಗಿರಬೇಕೆಂದು ತಿಳಿಯುತ್ತಾರೆ. ಎರಡನೆಯ ಪದ್ಯಕ್ಕೆ ಅನುಸರಿಸಿ ಇದು ೨೩ನೆಯ ತೀರ್ಥಂಕರನಾದ ಪಾರ್ಶ್ವನಾಥನ ಸ್ತುತಿಯ ರೂಪದಲ್ಲಿ ರಚಿಸಿದ್ದೆಂದು ಗೊತ್ತಾಗುತ್ತದೆ. ಭಕ್ತಾಮರವನ್ನು ಹೋಲುತ್ತಿದ್ದರೂ ಕೂಡ ಈ ಸ್ತೋತ್ರವು ತನ್ನ ಕಾವ್ಯಕಲ್ಪನೆಗಳು ಮತ್ತು ಶಬ್ದಯೋಜನೆಗಳಲ್ಲಿ ಮೌಲಿಕವೇ ಆಗಿದೆ. ಹೇ ಜಿನೇಂದ್ರ, ನೀನು ಆ ಭವ್ಯ ಜನರನ್ನು ಸಂಸಾರದಿಂದ ಹೇಗೆ ಪಾರುಮಾಡುವಿ? ಯಾರು ನಿನ್ನ ಹೆಸರನ್ನು ತಮ್ಮ ಹೃದಯದಲ್ಲಿ ಧಾರಣಮಾಡುವರೋ ಅವರನ್ನೇ ಅಲ್ಲವೆ? ಒಂದು ಪಕಾಲಿಯೂ (ತೊಗಲಿನ ನೀರು ತುಂಬುವ ಚೀಲ) ಕೂಡ ನೀರಿನಲ್ಲಿ ತೇಲಿಹೋಗುತ್ತದೆ. ಅದರಲ್ಲಿ ತುಂಬಿದ ಹವೆಯ ಪ್ರಭಾವವೇ ಅದಾಗಿದೆ. ಎಲೈ ಜಿನೇಶ, ತಮ್ಮ ಧ್ಯಾನದಿಂದ ಭವ್ಯ ಪುರುಷರು ಒಂದು ಕ್ಷಣದಲ್ಲಿ ದೇಹವನ್ನು ಬಿಟ್ಟು ಪರಮಾತ್ಮ ಪದವನ್ನು ಪಡೆಯು ತ್ತಾರೆ. ಏಕೆ ಆಗಲಿಕ್ಕಿಲ್ಲ? ತೀವ್ರ ಅಗ್ನಿಯ ಪ್ರಭಾವದಿಂದ ವಿವಿಧ ಧಾತುಗಳೂ ತಮ್ಮ ಪಾಷಾಣ ಭಾವವನ್ನು ಬಿಟ್ಟು ಶುದ್ಧ ಸುವರ್ಣತ್ವವನ್ನು ಹೊಂದುತ್ತವೆ. ಡಾ. ಯಾಕೋಬಿಯು ಈ ಸ್ತೋತ್ರವನ್ನೂ ಸಹ ಸಂಪಾದಿಸಿ, ಜರ್ಮನ ಭಾಷೆಯಲ್ಲಿ ಅನು ವಾದಿಸಿದ್ದಾನೆ. ಭಕ್ತಾಮರ ಸ್ತೋತ್ರದಂತೆ ಇದರ ಮೇಲೆಯೂ ೨೦, ೩೫ ಟೀಕೆಗಳೂ ಛಾಯಾ ಸ್ತೋತ್ರಗಳೂ ಇದ್ದುದು ಕಂಡುಬರುತ್ತದೆ.

ಧನಂಜಯ (೭ನೆಯ ೮ನೆಯ ಶತಮಾನ) ಕೃತ ವಿಷಾಪಹಾರ ಸ್ತೋತ್ರ ದಲ್ಲಿ ೪೦ ಇಂದ್ರವಜ್ರಾವೃತ್ತದ ಪದ್ಯಗಳಿವೆ. ಅಂತಿಮ ಪದ್ಯದ ಛಂದವು ಭಿನ್ನ ವಾಗಿದೆ. ಅದರಲ್ಲಿ ಕರ್ತೃವು ತನ್ನ ಹೆಸರನ್ನು ಸೂಚಿಸಿದ್ದಾನೆ. ಸ್ತೋತ್ರದ ಎರಡನೆಯ ಪದ್ಯದಲ್ಲಿ ಈ ಸ್ತುತಿಯು ಪ್ರಥಮ ತೀರ್ಥಂಕರ ವೃಷಭದೇವನನ್ನು ಕುರಿತೆಂದು ಹೇಳಿದೆ. ಇದರಲ್ಲಿ ಅನ್ಯ ದೇವರಿಂದ ಭಿನ್ನ ಸ್ವರೂಪದಲ್ಲಿರುವ ತೀರ್ಥಂಕರರ ವಿಶೇಷ ಗುಣಗಳನ್ನು ವರ್ಣಿಸಲಾಗಿದೆ. ಹೇ ದೇವ, ಯಾರು ತಮ್ಮ ಗುಣಗಳನ್ನು ವರ್ಣಿಸುತ್ತ ತಾವು ಇಂಥವರ ಪುತ್ರರು, ಇಂಥವರ ತಂದೆಯು, ಇಂಥ ಕುಲವು ನಿಮ್ಮದು—ಎಂದು ವರ್ಣಿಸುವರೋ ಅವರು ನಿಜವಾಗಿಯೂ ತಮ್ಮ ಕೈಯಲ್ಲಿ ಸಿಕ್ಕ ಸುವರ್ಣವನ್ನು ಶಿಲೆ ಯೆಂದು ಬೀಸಾಡಿದಂತೆಯೇ ಸರಿ. ಎಲೈ ದೇವ, ನಾನು ಈ ಸ್ತುತಿಯನ್ನು ಮಾಡಿ, ತಮ್ಮ ಹತ್ತರ ದೀನತೆಯಿಂದ್ಯಾವ ವರವನ್ನೂ ಬೇಡುವುದಿಲ್ಲ. ಯಾಕೆಂದರೆ ತಾವು ಮಾಧ್ಯಸ್ಥ ಭಾವವುಳ್ಳವರು. ಯಾರು ನೆರಳಿದ್ದ ಮರದ ಆಶ್ರಯವನ್ನು ಹೊಂದುವರೋ ಅವರಿಗೆ ನೆರಳು ಸಿಕ್ಕೇ ಸಿಗುತ್ತದೆ. ತಿರುಗಿ ನೆರಳನ್ನು ಬೇಡುವುದ ರಿಂದ ಲಾಭವೇನು? ಎಲೈ ದೇವ, ನನಗೆ ತಾವು ಏನಾದರೂ ಕೊಡಬೇಕೆಂಬ ಅಪೇ ಕ್ಷೆಯೇ ಉಳ್ಳವರಾದರೆ ತಮ್ಮ ಭಕ್ತಿಯೇ ನನ್ನಲ್ಲಿ ದೃಢವಾಗುವದನ್ನು ವರರೂಪದಲ್ಲಿ ನೀಡಿರಿ. ಈ ಸ್ತೋತ್ರದ ಹೆಸರು ಇದರ ೧೪ನೆಯ ಪದ್ಯದ ಆದಿಯಲ್ಲಿ ಬರುವ ವಿಷಾಪಹಾರ ಪದದಿಂದ ರೂಢವಾಗಿದೆ. ಅದರಲ್ಲಿ ಹೀಗೆ ಹೇಳಿದೆ: ಹೇ ಭಗವನ್, ಜನರು ವಿಷಾಪಹಾರಕ್ಕಾಗಿ ಮಣಿ, ಔಷಧಿಗಳು, ಮಂತ್ರ ಮತ್ತು ರಸಾಯನಗಳ

ಶೋಧದಲ್ಲಿ ಸುತ್ತಿ ದಣಿಯುತ್ತಾರೆ. ಆದರೆ ಇವೆಲ್ಲ ತಮ್ಮ ಪರ್ಯಾಯವಾಚಿ ಹೆಸರು ಗಳೆಂಬುದನ್ನು ಅವರು ಅರಿತಿಲ್ಲ. ಈ ಸ್ತೋತ್ರದ ಮೇಲೆ ನಾಗಚಂದ್ರ ಮತ್ತು ಪಾರ್ಶ್ವನಾಥ ಗೊಮ್ಮಟ ಕೃತ ಟೀಕೆಗಳು ಇವೆ. ಅಲ್ಲದೆ ಅವಚೂರಿ ಹಾಗೂ ದೇವೇಂದ್ರ ಕೀರ್ತಿಕೃತ ವಿಷಾಪಹಾರ ವ್ರತೋದ್ಯಾಪನ ಎಂಬ ಹೆಸರಿನ ರಚನೆಗಳ ಉಲ್ಲೇಖವೂ ದೊರೆಯುತ್ತದೆ.

ವಾದಿರಾಜ (೧೧ನೆಯ ಶತಮಾನ) ಕೃತ ಏಕೀಭಾವ ಸ್ತೋತ್ರದಲ್ಲಿ ೨೬ ಪದ್ಯಗಳು ಮಂದಾಕ್ರಾಂತಾ ಛಂದದಲ್ಲಿವೆ. ಕೊನೆಯ ಭಿನ್ನ ಛಂದಾತ್ಮರ ಪದ್ಯದಲ್ಲಿ ಕರ್ತೃವಿನ ಹೆಸರಿನ ಜೊತೆಯಲ್ಲಿ ಅವನನ್ನು ಒಬ್ಬ ಉತ್ಕೃಷ್ಟ ಶಾಬ್ದಿಕ, ತಾರ್ಕಿಕ ಕಾವ್ಯ ಕೃತ್ ಮತ್ತು ಭವ್ಯ ಸಹಾಯಕ ಎಂದೂ ಹೇಳಿದೆ. ಈ ಸ್ತೋತ್ರದಲ್ಲಿ ಭಕ್ತನ ಮನ, ವಚನ ಮತ್ತು ಕಾಯಗಳನ್ನು ಸ್ವಸ್ಥ ಮತ್ತು ಶುದ್ಧಗೊಳಿಸುವ ತೀರ್ಥಂಕರರ ವಿಶೇಷ ಗುಣಗಳನ್ನು ಸ್ತುತಿರೂಪದಿಂದ ವಿವರಿಸಿದೆ. ಎಲೈ ಭಗವಂತನೆ, ಯಾರು ತಮ್ಮ ದರ್ಶನವನ್ನು ಮಾಡುವರೋ ಅವರು ವಚನರೂಪೀ ಅಮೃತವನ್ನು ಭಕ್ತಿರೂಪೀ ಪಾತ್ರದಿಂದ ಪಾನಗೈಯುವರು. ಹಾಗೆಯೇ ಕರ್ಮರೂಪೀ ಮನಸ್ಸಿನಿಂದ ತಾವು ಅಸಾಧಾರಣ ಆನಂದದ ಮನೆಯು, ದುರ್ವಾರ ಕಾಮದ ಮದಹರಣ ಮಾಡಿದವರು, ಮತ್ತು ಪ್ರಸಾದದ ಅದ್ವಿತೀಯ ಭೂಮಿರೂಪ ಪುರುಷದಲ್ಲಿ ಧ್ಯಾನದ ಮುಖಾಂತರ ಪ್ರವೇಶ ಗೈದವರು, ಇಂಥವರಿಗೆ ಕ್ರೂರ ಆಕಾರವುಳ್ಳ ರೋಗ ಹಾಗೂ ಕಂಟಕಗಳು ಹೇಗೆ ತೊಂದರೆಯನ್ನು ನೀಡಬಲ್ಲುವು ? ಹೇ ದೇವ, ತಮ್ಮಲ್ಲಿ ಕೋಪದ ಆವೇಶವಿಲ್ಲ, ಯಾರ ವಿಷಯದಲ್ಲಿಯೂ ಪ್ರಸನ್ನತೆ ಇಲ್ಲ , ತಮ್ಮ ಚಿತ್ತವು ಪರಮ ಉಪೇಕ್ಷೆಯಿಂದ ವ್ಯಾಪ್ತವಾಗಿದೆ. ಇಷ್ಟಾಗಿಯೂ ಲೋಕವೆಲ್ಲ ತಮ್ಮ ಆಜ್ಞೆಗೆ ವಶವಾಗಿದೆ. ತಮ್ಮ ಸಮೀಪಕ್ಕೆ ಬರುವುದರಿಂದಲೇ ವೈರವು ನಷ್ಟವಾಗಿ ಹೋಗುವುದು , ಇಂಥ ಲೋಕೋ ತ್ತರ ಪ್ರಭಾವವು ತಮ್ಮನ್ನುಳಿದು ಮತ್ತಾರಲ್ಲಿದೆ ? ಈ ಸ್ತೋತ್ರದ ಮೇಲೆ ಒಂದು ಸ್ವೋಪಜ್ಞ ಟೀಕೆಯೂ ಇನ್ನೊಂದು ಶ್ರುತಸಾಗರ ಕೃತ ಟೀಕೆಯೂ ಅಲ್ಲದೆ ಮತ್ತೊಂದು ಟೀಕೆಯೂ ದೊರೆಯುತ್ತವೆ. ಹಾಗೆಯೇ ಜಗತ್‌ಕೀರ್ತಿ ಕೃತ ವ್ರತೋ ದ್ಯಾಪನದ ಉಲ್ಲೇಖವೂ ಲಭಿಸುತ್ತದೆ.

ಇವಲ್ಲದೆ ಇನ್ನೂ ಅನೇಕ ಸ್ತೋತ್ರಗಳೂ ಇವೆ. ಅವುಗಳ ಸಂಖ್ಯೆಯು ನೂರಕ್ಕೂ ಮಿಕ್ಕುತ್ತದೆ. ಅವುಗಳ ವಿವಿಧ ಛಂದಸ್ಸು, ಶಬ್ದಯೋಜನಾ, ಅಲಂಕಾರ ಮತ್ತು ಭಕ್ತಿಭಾವಗಳು ವಿಶಿಷ್ಟವಾಗಿವೆ. ಇವು ತಮ್ಮ ತಮ್ಮ ವಿಶೇಷತೆಯನ್ನು ಪ್ರಕಟಿಸುತ್ತವೆ. ಇನ್ನುಳಿದವುಗಳಲ್ಲಿ ಕೆಲವುಗಳ ಹೆಸರುಗಳು ಹೀಗಿವೆ : (೧) ಬಪ್ಪ ಭಟ್ಟಿಕೃತ ಸರಸ್ವತೀ ಸ್ತೋತ್ರ (೯ನೆಯ ಶತಮಾನ), (೨) ಭೂಪಾಲಕೃತ ಜಿನ ಚತುರ್ವಿಂಶತಿಕಾ, (೩) ಹೇಮಚಂದ್ರ ವಿರಚಿತ ವೀತರಾಗ ಸ್ತೋತ್ರ (೧೩ನೆಯ ಶತಮಾನ), (೪) ಆಶಾಧರ ಕೃತ ಸಿದ್ಧಗುಣ ಸ್ತೋತ್ರ (೧೩ನೆಯ ಶತಮಾನ) ಸ್ವೋಪಜ್ಞ ಟೀಕಾ ಸಹಿತ, (೫) ಧರ್ಮಘೋಷ ರಚಿತ ಯಮಕಸ್ತುತಿ ಮತ್ತು

ಚತುರ್ವಿಂಶತಿ ಜಿನಸ್ತುತಿ, (೬) ಜಿನಪ್ರಭ ಸೂರಿಕೃತ ಚತುರ್ವಿಂಶತಿ ಜಿನಸ್ತುತಿ (೧೪ ನೆಯ ಶತಮಾನ), (೭) ಮುನಿಸುಂದರ ಕೃತ ಜಿನಸ್ತೋತ್ರ ರತ್ನಕೋಶ (೧೪ ನೆಯ ಶತಮಾನ), ಸೋಮತಿಲಕ ರಚಿತ ಸರ್ವಜ್ಞಸ್ತೋತ್ರ, (೯) ಕುಮಾರಪಾಲ, (೧೦) ಸೋಮಪ್ರಭ, (೧೧) ಜಯಾನಂದ ಮತ್ತು (೧೨) ರತ್ನಾಕರ ಕೃತ ಭಿನ್ನ ಭಿನ್ನ 'ಸಾಧಾರಣ, ಜಿನಸ್ತೋತ್ರ', (೧೩) ಜಿನವಲ್ಲಭ ವಿರಚಿತ ನಂದೀಶ್ವರ ಸ್ತವನ, (೧೪) ಶಾಂತಿಚಂದ್ರಗಣಿ (೧೬ ನೆಯ ಶತಮಾನ) ಕೃತ 'ಋಷಭ ಜಿನಸ್ತವ', ಮತ್ತು 'ಅಜಿತ ಶಾಂತಿಸ್ತವ' ಮೊದಲಾದವುಗಳು. ಇವಲ್ಲದೆ ಧರ್ಮಸಿಂಹಕೃತ ಸರಸ್ವತೀ ಭಕ್ತಾಮರ ಸ್ತೋತ್ರ ಹಾಗೂ ಭಾವರತ್ನ ಕೃತ ನೇಮಿ ಭಕ್ತಾಮರ ಸ್ತೋತ್ರಗಳು ವಿಶೇಷ ಉಲ್ಲೇಖನೀಯವಾಗಿವೆ. ಇವುಗಳ ರಚನೆಯು ಭಕ್ತಾಮರ ಸ್ತೋತ್ರದ ಸಮಸ್ಯಾಪೂರ್ತಿ ಪ್ರಣಾಲಿಯಲ್ಲಿ ಆದದ್ದುಂಟು. ಇವುಗಳಲ್ಲಿ ಕ್ರಮವಾಗಿ ಸರಸ್ವತೀ ಮತ್ತು ನೇಮಿ ತೀರ್ಥಂಕರರ ಸ್ತುತಿಯನ್ನು ಮಾಡಲಾಗಿದೆ.

## ಪ್ರಥಮಾನುಯೋಗ—ಪ್ರಾಕೃತ ಪುರಾಣ :—

ಜೈನಾಗಮಗಳ ಪರಿಚಯದಲ್ಲಿ ಈಗಾಗಲೇ ಹೇಳಲಾಗಿದೆಯಷ್ಟೆ : ಹನ್ನೆರಡ ನೆಯ ಶ್ರುತಾಂಗವಾದ ದೃಷ್ಟಿವಾದದ ಐದು ಭೇದಗಳಲ್ಲಿ ಪ್ರಥಮಾನುಯೋಗವು ಒಂದು. ಇದರಲ್ಲಿ ಅರಹಂತ ಮತ್ತು ಚಕ್ರವರ್ತಿ ಮೊದಲಾದ ಮಹಾಪುರುಷರ ಚರಿತ್ರ ಗಳನ್ನು ವರ್ಣಿಸಿದೆ. ಇದನ್ನೇ ಜೈನ ಕಥಾಸಾಹಿತ್ಯದ ಆದಿ ಸ್ರೋತವೆಂದು ಮನ್ನಿಸ ಲಾಗುತ್ತದೆ. ನಾಲ್ಕನೆಯ ಶ್ರುತಾಂಗವೆನಿಸುವ ಸಮವಾಯಾಂಗದಲ್ಲಿ ೨೪೬ ರಿಂದ ೨೭೫ ನೆಯ ಸೂತ್ರದ ವರೆಗೆ ಕುಲಂಕರರು, ತೀರ್ಥಂಕರರು, ಚಕ್ರವರ್ತಿಗಳು, ಬಲ ದೇವರು, ವಾಸುದೇವರು ಮತ್ತು ಪ್ರತಿವಾಸುದೇವರ ವರ್ಣನೆಯು ಬಂದಿದೆ. ಇದರ ನಿರ್ದೇಶವನ್ನೂ ಸಹ ಮೇಲೆ ಮಾಡಲಾಗಿದೆ. ಸಮವಾಯಾಂಗದ ಈ ವರ್ಣನೆಗೆ ತನ್ನದೇ ಆದ ಪ್ರಾಚೀನ ಪರಂಪರೆಯು ಇದೆ. ಇದರಲ್ಲಿ ಮೊದಲು ಜಂಬೂದ್ವೀಪ, ಭರತ ಕ್ಷೇತ್ರ ದಲ್ಲಿ ಸದ್ಯದ ಅವಸರ್ಪಿಣೀ ಕಾಲದಲ್ಲಿ ಆದ ಇಪ್ಪತ್ತನಾಲ್ಕು ತೀರ್ಥಂಕರರ ತಂದೆ-ತಾಯಂದಿರು, ಅವರ ಹೆಸರುಗಳು, ಪೂರ್ವಭವದ ಹೆಸರುಗಳು, ಅವರ ಶಿಬಿಕೆಗಳ ಹೆಸರು, ನಿಷ್ಕ್ರಮಣ ಭೂಮಿಗಳು, ನಿಷ್ಕ್ರಮಣ ಗೈಯುವ ಅನ್ಯ ಪುರುಷರ ಸಂಖ್ಯೆ, ಪ್ರಥಮ ಭಿಕ್ಷಾದಾತೃಗಳ ಹೆಸರುಗಳು, ದೀಕ್ಷೆಯಾದ ತರುವಾಯ ಮೊದಲನೆಯ ಸಲ ಆಹಾರ ಸ್ವೀಕರಿಸಿದ ಕಾಲಾಂತರ, ಚೈತ್ಯವೃಕ್ಷ ಮತ್ತು ಅದರ ಎತ್ತರ ಹಾಗೆಯೇ ಪ್ರಥಮ ಶಿಷ್ಯ ಹಾಗೂ ಶಿಷ್ಯಿಣಿ, ಇವರೆಲ್ಲರ ನಾಮಾವಲಿಯನ್ನು ಮಾತ್ರ ಕ್ರಮದಿಂದ ಕೊಡಲಾಗಿದೆ. ತೀರ್ಥಂಕರರ ತರುವಾಯ ಹನ್ನೆರಡು ಚಕ್ರವರ್ತಿಗಳ ತಂದೆ-ತಾಯಂ ದಿರು, ಸ್ವಯಂ ಚಕ್ರವರ್ತಿ ಹಾಗೂ ಅವರ ಸ್ತ್ರೀರತ್ನ ಇವರನ್ನು ಕ್ರಮದಿಂದ ಹೇಳ ಲಾಗಿದೆ. ಆ ಮೇಲೆ ೯ ಬಲದೇವ ಮತ್ತು ೯ ವಾಸುದೇವರ ತಂದೆ-ತಾಯಂದಿರು, ನ್ನತಃ ಅವರ ಹೆಸರು, ಅವರ ಪೂರ್ವಭವದ ಹೆಸರುಗಳು, ಧರ್ಮಾಚಾರ್ಯ, ವಾಸುದೇವರ

ನಿದಾನ ಭೂಮಿಗಳು ಮತ್ತು ನಿದಾನ ಕಾರಣ (ಸೂತ್ರ ೨೬೩) ಇವೆಲ್ಲವುಗಳ ನಾಮ ಸೂಚಿಯು ಬಂದಿದೆ. ಅದರಲ್ಲಿಯೂ ಒಂದು ವಿಶೇಷತೆಯೆಂದರೆ ಬಲದೇವ ಮತ್ತು ವಾಸುದೇವರ ನಾಮಾವಲಿಯಲ್ಲಿ ಅವರವರ ಹೆಸರುಗಳ ಹಿಂದೆ ಉತ್ತಮ ಪುರುಷ, ಪ್ರಧಾನ ಪುರುಷ, ತೇಜಸ್ವೀ, ವರ್ಚಸ್ವೀ, ಯಶಸ್ವೀ, ಕಾಂತ, ಸೌಮ್ಯ, ಸುಭಗ ಮೊದಲಾದ ನೂರಕ್ಕೂ ಹೆಚ್ಚಿಗೆ ವಿಶೇಷಣಗಳನ್ನು ಹಚ್ಚಲಾಗಿದೆ. ಆ ಮೇಲೆ ಅವರ ಪ್ರತಿ ಶತ್ರುಗಳ (ಪ್ರತಿವಾಸುದೇವ) ಹೆಸರುಗಳನ್ನು ಕೊಡಲಾಗಿದೆ. ಆದರ ತರುವಾಯ ಭವಿಷ್ಯ ಕಾಲದ ತೀರ್ಥಂಕರ ಮೊದಲಾದವರ ಹೆಸರುಗಳನ್ನು ಹೇಳಿದೆ. ಇಲ್ಲಿ ಒಂದು ಸಂಗತಿಯು ಉಲ್ಲೇಖನೀಯವಾಗಿದೆ: ಈ ನಾಮಾವಲಿಯಲ್ಲಿ ತ್ರಿಷಷ್ಠಿ ಪುರುಷರ ವೃತ್ತಾಂತವನ್ನು ಹೇಳಿದ್ದರೂ ಅದರ ಮುಂಚಿನ ೧೩೨ ನೆಯ ಸೂತ್ರದಲ್ಲಿ ಉತ್ತಮ ಪುರುಷರ ಸಂಖ್ಯೆಯು ೫೪ ಎಂದು ಹೇಳಿದೆ, ೬೩ ಎಂದಲ್ಲ. ಅರ್ಥಾತ್ ೯ ಜನ ಪ್ರತಿ ವಾಸುದೇವರನ್ನು ಉತ್ತಮ ಪುರುಷರಲ್ಲಿ ಸಮಾವೇಶಮಾಡಲಾಗಿಲ್ಲ.

ಯತಿವೃಷಭ ಕೃತ ತಿಲೋಯಪಣ್ಣತ್ತಿಯ ನಾಲ್ಕನೆಯ ಮಹಾಧಿಕಾರ ದಲ್ಲಿಯೂ ಈ ಮಹಾಪುರುಷರ ವೃತ್ತಾಂತವು ಕಂಡುಬರುತ್ತದೆ. ಈ ಅಧಿಕಾರದ ಗಾಹೆ ೪೨೧ ರಿಂದ ೫೦೯ ರ ವರೆಗೆ ಹದಿನಾಲ್ಕು ಮನುಗಳನ್ನು ಅಥವಾ ಕುಲಂಕರರನ್ನು ಉಲ್ಲೇಖಿಸಿದೆ. ಮುಂದೆ ಕ್ರಮದಿಂದ ೧೪೧೧ ನೆಯ ಗಾಹೆಯವರೆಗೆ ಅವರೆಲ್ಲರ ವರ್ಣನೆಯನ್ನು—ಮೇಲೆ ವಿವರಿಸಿದಂತೆಯೇ ಮಾಡಿದೆ. ಆದರೂ ಇಲ್ಲಿ ಒಂದು ವಿಶೇಷ ತೆಯು ಇದೆ: ಇದರಲ್ಲಿ ಅನೇಕ ಸಂಗತಿಗಳಲ್ಲಿ ಹೆಚ್ಚು ವಿಸ್ತಾರವು ಕಂಡುಬರುತ್ತದೆ. ಅದು ಹೀಗಿದೆ: ತೀರ್ಥಂಕರರ ಜನ್ಮ ತಿಥಿಗಳು ಮತ್ತು ಜನ್ಮ ನಕ್ಷತ್ರ, ಅವರ ವಂಶ ಗಳ ನಿರ್ದೇಶ, ಜನ್ಮಾಂತರಾಲ, ಆಯುಃಪ್ರಮಾಣ, ಕುಮಾರ ಕಾಲ, ಉತ್ಸೇಧ, ಶರೀರ ವರ್ಣ, ರಾಜ್ಯಕಾಲ, ಚಿಹ್ನ ರಾಜ್ಯಪದ, ವೈರಾಗ್ಯ ಕಾರಣ ಮತ್ತು ಭಾವನೆ, ದೀಕ್ಷಾಸ್ಥಾನ, ತಿಥಿ, ಕಾಲ, ನಕ್ಷತ್ರ, ವನ, ಉಪವಾಸಗಳ ನಾಮ ನಿರ್ದೇಶ, ದೀಕ್ಷೆಯ ಪೂರ್ವದ ಉಪವಾಸ ಸಂಖ್ಯೆ, ಪಾರಣೆಯ ಸಮಯದ ನಕ್ಷತ್ರ ಮತ್ತು ಸ್ಥಾನ, ಕೇವಲ ಜ್ಞಾನದ ಅಂತರ ಕಾಲ, ಸಮವಸರಣ ರಚನೆಯ ವಿಸ್ತಾರವಾದ ವರ್ಣನೆಯು (ಗಾಹೆ ೭೧೦ ರಿಂದ ೯೩೩ ರ ವರೆಗೆ), ಯಕ್ಷ-ಯಕ್ಷಿಣಿ, ಕೇವಲಿ-ಕಾಲ, ಗಣಧರರ ಸಂಖ್ಯೆ, ಋದ್ಧಿಗಳ ಭೇದ, ಏಳು ಗಣ, ಆರ್ಯಿಕೆಯರ ಸಂಖ್ಯೆ, ಮುಖ್ಯ ಆರ್ಯಿಕೆಯರ ಹೆಸರು, ಶ್ರಾವಕರ ಸಂಖ್ಯೆ, ಮುಕ್ತಿಯ ತಿಥಿ, ಕಾಲ ಮತ್ತು ನಕ್ಷತ್ರ ಹಾಗೂ ಜೊತೆಯಲ್ಲಿ ಮುಕ್ತವಾದ ಜೀವಗಳ ಸಂಖ್ಯೆ, ಮುಕ್ತಿಯ ಪೂರ್ವದ ಯೋಗಕಾಲ, ಮುಕ್ತವಾಗುವ ಸಮಯದ ಆಸನ, ಅನುಬದ್ಧ ಕೇವಲಿಗಳ ಸಂಖ್ಯೆ, ಅನುತ್ತರ ತೆರಳುವವರ ಸಂಖ್ಯೆ ಮುಕ್ತಿಯನ್ನು ಪಡೆದ ಯತಿಗಳ ಸಂಖ್ಯೆ, ಮುಕ್ತಿಯನ್ನು ಹೊಂದಿದ ಶಿಷ್ಯ ಸಮೂಹದ ಮುಕ್ತಿಯ ಕಾಲ, ಸ್ವರ್ಗವನ್ನು ಪಡೆದ ಶಿಷ್ಯರ ಸಂಖ್ಯೆ, ಭಾವ ಶ್ರಮಣರ ಸಂಖ್ಯೆ, ಇತ್ಯಾದಿ, ಇವಲ್ಲದೆ ಅಂತಿಮ ತೀರ್ಥಂಕರರ ಮುಕ್ತಿಯ ಕಾಲ ಮತ್ತು ಪರಸ್ಪರ ಅಂತ ರಾಲ ಅಂತೂ ತೀರ್ಥಪ್ರವರ್ತನ ಕಾಲ ಇವೆಲ್ಲ ವಿಷಯಗಳು ಬಂದಿವೆ. ಈ ವಿಸ್ತಾರ

ವಾದ ವಿಷಯವೆಲ್ಲ ೧೨೭೮ ನೆಯ ಗಾಹೆಯಲ್ಲಿ ಸಮಾಪ್ತಿಗೊಂಡು ಆ ಮೇಲೆ ಚಕ್ರವರ್ತಿಗಳ ವಿವರಣವು ಪ್ರಾರಂಭವಾಗುತ್ತದೆ. ಅದರಲ್ಲಿ ಅವರ ಶರೀರೋತ್ಸೇಧ, ಆಯು, ಕುಮಾರಕಾಲ, ಮಾಂಡಲಿಕ ಕಾಲ, ದಿಗ್ವಿಜಯ, ವಿಭವ, ರಾಜ್ಯಕಾಲ, ಸಂಯಮ ಕಾಲ ಮತ್ತು ಪರ್ಯಾಯಾನಂತರ ಪ್ರಾಪ್ತಿ (ಪುನರ್ ಜನ್ಮ) ಇವುಗಳ ವರ್ಣನೆಯನ್ನು ೧೪೧೧ ನೆಯ ಗಾಹೆಗಳ ವರೆಗೆ ಮಾಡಲಾಗಿದೆ. ಇದರ ತರುವಾಯ ಬಲದೇವ, ವಾಸುದೇವ ಮತ್ತು ಅವರ ಪ್ರತಿ ಶತ್ರುಗಳ-ಪ್ರತಿವಾಸುದೇವರುಗಳ-ಹೆಸರುಗಳು ಬರುತ್ತವೆ. ಅಲ್ಲದೆ ಅವರೆಲ್ಲ ಯಾವ ಯಾವ ತೀರ್ಥಂಕರರ ಕಾಲದಲ್ಲಿ ಆಗಿ ಹೋದರೆಂಬುದರ ನಿರ್ದೇಶವೂ ಕೂಡ ಬಂದಿದೆ. ಅದರಂತೆಯೇ ಅವರ ಶರೀರ-ಪ್ರಮಾಣ, ಆಯು, ಕುಮಾರ ಕಾಲ ಮತ್ತು ಮಾಂಡಲಿಕ ಕಾಲ; ಹಾಗೆಯೇ ಶಕ್ತಿ, ಧನುಷ, ಮೊದಲಾದ ಏಳು ಮಹಾರತ್ನಗಳು ಮತ್ತು ಮುಸಲ ಮೊದಲಾದ ನಾಲ್ಕು ರತ್ನಗಳ ಉಲ್ಲೇಖವಿದೆ. ಆ ಮೇಲೆ ೧೪೩೬ ನೆಯ ಗಾಹೆಯಲ್ಲಿ. ಬಲದೇವರು ನಿದಾನ ರಹಿತರಾಗಿರುವುದರಿಂದ ಮರಣದ ನಂತರ ಊರ್ಧ್ವಗಾಮಿಗಳಾಗಿರುತ್ತಾರೆ; ಎಲ್ಲ ನಾರಾಯಣರು ನಿದಾನ ಸಹಿತರಾಗಿರುದರಿಂದ ಅಧೋಗಾಮಿಗಳಾಗಿರುತ್ತಾರೆಂದು ಸೂಚಿಸಲಾಗಿದೆ. ಈ ಗಾಹೆಯು ಸ್ವಲ್ಪ ಶಾಬ್ದಿಕ ಹೆಚ್ಚು ಕಡಿಮೆಯೊಡನೆ ಸಮವಾಯಾಂಗದ ೨೬೩ ನೆಯ ಸೂತ್ರವನ್ನು ಹೋಲುತ್ತದೆ. ಇದರ ತರುವಾಯ ಅವರ ಮೋಕ್ಷ, ಸ್ವರ್ಗ ಮತ್ತು ನರಕಗತಿಗಳ ವಿಶೇಷ ಉಲ್ಲೇಖವಿದೆ. ಇನ್ನು ೧೪೩೭ ನೆಯ ಗಾಹೆಯಲ್ಲಿ, ಅಂತಿಮ ಬಲದೇವ, ಕೃಷ್ಣನ ಹಿರಿಯ ಅಣ್ಣನು ಬ್ರಹ್ಮ ಸ್ವರ್ಗಕ್ಕೆ ಹೋಗಿದ್ದಾನೆ, ಮತ್ತು ಅವನು ಮುಂದಿನ ಜನ್ಮದಲ್ಲಿ ಕೃಷ್ಣ ತೀರ್ಥಂಕರನ ತೀರ್ಥದಲ್ಲಿ ಸಿದ್ಧಿಯನ್ನು ಪಡೆಯುವನು ಎಂದೂ ನಿರ್ದೇಶಗೊಳಿಸಿದೆ. ಆ ಮೇಲೆ ೧೧ ರುದ್ರ, ೯ ನಾರದ ಮತ್ತು ೨೪ ಕಾಮದೇವ ಇವರ ವೃತ್ತಾಂತವು ಗಾಹೆ ೧೪೩೯ ರಿಂದ ೧೪೭೨ ರ ವರೆಗೆ ಬಂದಿದೆ. ತರುವಾಯ ದುಃಷಮ ಕಾಲದ ಪ್ರವೇಶ, ಅನುಬದ್ಧ ಕೇವಲಿ, ೧೪ ಪೂರ್ವಧಾರೀ, ೧೦ ಪೂರ್ವಧಾರೀ, ೧೧ ಅಂಗಧಾರೀ, ಆಚಾರಾಂಗದ ಧಾರಕರು, ಇವರ ಕಾಲ ನಿರ್ದೇಶ ಮಾಡಿದ ಮೇಲೆ ಶಕರಾಜನ ಉತ್ಪತ್ತಿ, ಅವನ ವಂಶವು ರಾಜ್ಯವಾಳಿದ ಕಾಲ; ಗುಪ್ತರು ಮತ್ತು ಚತುರ್ಮುಖನ ರಾಜ್ಯ ಕಾಲದ ವರೆಗೆ ಮಹಾವೀರ ನಿರ್ವಾಣ ಕಾಲದಿಂದ ೧೦೦೦ ವರ್ಷಗಳ ವರೆಗಿನ ಪರಂಪರೆ; ಇನ್ನೊಂದು ದೃಷ್ಟಿಯಿಂದ, ಮಹಾವೀರ-ನಿರ್ವಾಣಹೊಂದಿದ ರಾತ್ರಿಯಲ್ಲಿ ರಾಜ್ಯಾಭಿಷಿಕ್ತನಾದ ಅವಂತಿರಾಜ ಪಾಲಕ, ವಿಜಯವಂಶ, ಪುಷ್ಯಮಿತ್ರ, ವಸುಮಿತ್ರ, ಅಗ್ನಿಮಿತ್ರ, ಗಂಧರ್ವ, ನರವಾಹನ, ಭೃತ್ಯಾಂಧ್ರ ಮತ್ತು ಗುಪ್ತ ವಂಶ ಹಾಗೂ ಕಲ್ಕಿ ಚತುರ್ಮುಖನ ರಾಜ್ಯಕಾಲದ ಪರಂಪರೆಯವರೆಗೆ ವೀರ ನಿರ್ವಾಣ ಕಾಲದಿಂದ ಅದೂ ೧೦೦೦ ವರ್ಷಗಳ ವೃತ್ತಾಂತವೆಂದು ವಿವರಿಸಲಾಗಿದೆ. ಆಯಿತು; ಇಲ್ಲಿಗೇನೇ ತಿಲೋಯ ಪಣ್ಣತ್ತಿಯ ಪೌರಾಣಿಕ ಹಾಗೂ ಐತಿಹಾಸಿಕ ವೃತ್ತಾಂತವು ಪೂರ್ಣಗೊಳ್ಳುತ್ತದೆ (ಗಾಹೆ ೧೪೭೬ ರಿಂದ ೧೫೧೪).

ಜೈನ ಸಾಹಿತ್ಯದಲ್ಲಿ ಮಹಾಪುರುಷರ ಚರಿತ್ರೆಯನ್ನು ಹೊಸ ಕಾವ್ಯಶೈಲಿಯಲ್ಲಿ

ನಿರೂಪಿಸುವುದನ್ನು ವಿಮಲಸೂರಿಯು ಪ್ರಾರಂಭಿಸಿದನು. ಸಂಸ್ಕೃತ ಸಾಹಿತ್ಯದಲ್ಲಿ ಯಾವ ಪ್ರಕಾರ ವಾಲ್ಮೀಕಿ ಕೃತ ರಾಮಾಯಣವನ್ನು ಆದಿಕಾವ್ಯವೆಂದು ಮನ್ನಿಸ ಲಾಗುವುದೋ, ಅದರಂತೆಯೇ ಪ್ರಾಕೃತದಲ್ಲಿ ವಿಮಲಸೂರಿ ಕೃತ **ಪಉಮಚರಿಯಂ** (ಪದ್ಮಚರಿತಮ್) ಕಾವ್ಯವನ್ನು ಆದಿಕಾವ್ಯವೆಂದು ಮನ್ನಿಸಲಾಗುತ್ತದೆ. ಈ ಕಾವ್ಯದ ಕೊನೆಯ ಪ್ರಶಸ್ತಿಯಲ್ಲಿ ಇದರ ಕರ್ತೃ ಹಾಗೂ ರಚನಾ ಕಾಲಗಳ ನಿರ್ದೇಶವಿದೆ. ಅದರಲ್ಲಿ ಹೀಗೆ ಹೇಳಿದೆ: ಸ್ವಸಮಯ ಮತ್ತು ಪರಸಮಯ ಅರ್ಥಾತ್ ತನ್ನ ಧರ್ಮ ಹಾಗೂ ಅನ್ಯಧರ್ಮಗಳ ಜ್ಞಾನಿಯಾದ ರಾಹೂ ಎಂಬ ಹೆಸರಿನ ಆಚಾರ್ಯನು ಆಗಿ ಹೋದನು. ಅವನ ಶಿಷ್ಯನು ನಾಯಿಲ ಕುಲದಲ್ಲಿ ಜನಿಸಿದ ವಿಜಯನು. ಈ ವಿಜಯನ ಶಿಷ್ಯನಾದ ವಿಮಲಸೂರಿಯು ಪೂರ್ವಗತದಿಂದ ನಾರಾಯಣ ಮತ್ತು ಬಲದೇವನ ಚರಿತ್ರವನ್ನು ಕೇಳಿ, ಈ ಕಾವ್ಯದ ರಚನೆಯನ್ನು ಮಾಡಿದನು. ಇದರ ಸಮಾಪ್ತಿಯು ಮಹಾವೀರನು ಮುಕ್ತಿಯನ್ನು ಹೊಂದಿದ ತರುವಾಯ ದುಷಮ ಕಾಲದ ೫೩೦ ವರ್ಷ ಗಳು ಕಳೆದ ಮೇಲೆ ಆಯಿತು. ತ್ರಿಲೋಕ-ಪ್ರಜ್ಞಪ್ತಿ ಮೊದಲಾದ ಗ್ರಂಥಗಳಿಗೆ ಅನುಸರಿಸಿ ವೀರ ನಿರ್ವಾಣದ ತರುವಾಯ ೩ ವರ್ಷ, ೮ ತಿಂಗಳು, ೧ ಪಕ್ಷ ಕಳೆದ ಮೇಲೆ ದುಷಮಕಾಲವು ಪ್ರಾರಂಭವಾಯಿತು (ತಿ. ಪ. ೪, ೧೪೭೪). ನಾವು ಈ ಮೊದಲು ಹೇಳಿದ ಪ್ರಕಾರ ಮಹಾವೀರನ ನಿರ್ವಾಣಕಾಲವು ಕ್ರಿ. ಪೂ. ೫೨೭ ನೆಯ ವರ್ಷ ಕಾರ್ತಿಕ ಕೃಷ್ಣ ಅಮಾವಾಸ್ಯೆಯೆಂದು ಮನ್ನಿಸುತ್ತೇವೆ. ಅದಕ್ಕನುಸರಿಸಿ ಪಉಮ ಚರಿಯದ ಸಮಾಪ್ತಿ ಕಾಲವು ಆಷಾಢ ಶುಕ್ಲ ಪೌರ್ಣಿಮೆಯ ದಿನ ಕ್ರಿ. ಶ. ೭ ನೆಯ ವರ್ಷದಲ್ಲಿ ಆಯಿತೆಂದು ಗೊತ್ತಾಗುತ್ತದೆ. ಆದರೆ ಕೆಲವು ಜನ ವಿದ್ವಾಂಸರು-ಜಾಕೋಬಿ ಯಂಥವರು-ಗ್ರಂಥ ರಚನೆಯ ಈ ಕಾಲವನ್ನು ಸರಿಯೆಂದು ಸ್ವೀಕರಿಸುವುದಿಲ್ಲ. ಅದಕ್ಕೆ ಕಾರಣವಿಷ್ಟೆ: ಗ್ರಂಥದ ಭಾಷೆಯು ಹೆಚ್ಚು ವಿಕಾಸ ಹೊಂದಿದುದಾಗಿದೆ. ಅಲ್ಲದೆ ಅದರಲ್ಲಿ ಯುನಾನಿಗಳಿಂದ ತಕ್ಕೊಂಡಂಥ ದೀನಾರ, ಲಗ್ನ ಮೊದಲಾದ ಪದಗಳೂ ಇವೆ. ಇನ್ನು ಇದರಲ್ಲಿ ಉಪಯೋಗಿಸಿದ ಕೆಲವೊಂದು ಛಂದಸ್ಸುಗಳು ಆ ಕಾಲದ ವರೆಗೂ ವಿಕಾಸಗೊಂಡಿರಲಿಲ್ಲವೆಂಬುದೂ ಇನ್ನೊಂದು ಕಾರಣವಾಗಿದೆ. ಹೀಗಾಗಿ ವಿದ್ವಾಂಸರು ಇದರ ರಚನಾಕಾಲವನ್ನು ಕ್ರಿ ಶ. ಮೂರು ನಾಲ್ಕನೆಯ ಶತಮಾನವೆಂದು ಅನುಮಾನಿಸುತ್ತಾರೆ. ನಿಜವಾಗಿಯೂ ಈ ಮತವು ಬಹಳಷ್ಟು ಕಾಲ್ಪನಿಕ ಮತ್ತು ಅಪರ್ಯಾಪ್ತ ಪ್ರಮಾಣಗಳ ಮೇಲೆ ಆಧಾರಿತವಾಗಿದೆ. ಇನ್ನೂವರೆಗೆ ಗ್ರಂಥದಲ್ಲಿ ಆಚಾರ್ಯರು ನಿರ್ದೇಶಿಸಿದ ಕಾಲವನ್ನು ಸಂಪೂರ್ಣವಾಗಿ ಅಸಿದ್ಧಗೊಳಿಸುವ ಯಾವ ಪ್ರಮಾಣವೂ ಮುಂದೆ ಬಂದಿಲ್ಲ. ಇನ್ನು ಇದರ ಭಾಷೆಯಲ್ಲಿ ನಾವು ಮಹಾರಾಷ್ಟ್ರೀ ಪ್ರಾಕೃತದ ಸ್ವರೂಪವು ನಿಶ್ಚಿತಗೊಂಡುದನ್ನು ಕಾಣುತ್ತೇವೆ. ಈ ಮಹಾರಾಷ್ಟ್ರಿಯ ವಿಕಾಸ ಕಾಲವನ್ನು ಸುಮಾರು ಕ್ರಿ.ಶ. ಎರಡನೆಯ ಶತಮಾನವೆಂದು ಸ್ವೀಕರಿಸಲಾಗು ತ್ತದೆ. ಇಲ್ಲಿ ಇನ್ನೊಂದು ಮಾತೂ ಸಹ ವಿಚಾರಣೀಯವಾಗಿದೆ: ಜೈನಸಾಹಿತ್ಯದಲ್ಲಿ ಈ ಶೈಲಿಯಲ್ಲಿ, ಇನ್ನಾವ ಪ್ರಾಕೃತ ಕಾವ್ಯವೂ ಕ್ರಿ.ಶ. ಆರೇಳನೆಯ ಶತಮಾನಗಳ

ಪೂರ್ವದಲ್ಲಿ ರಚಿತವಾದುದು ಲಭಿಸುವದಿಲ್ಲ.

ಪಉಮಚರಿಯದ ಕರ್ತೃವು ತನ್ನ ಗ್ರಂಥದ ವಿಷಯದಲ್ಲಿ ಮೂಲ ವಸ್ತುವಿನ ಬಗ್ಗೆ ಕೆಲವು ಮಾತುಗಳನ್ನು ಸೂಚಿಸಿದ್ದಾನೆ: ಅವನು ನಾರಾಯಣ ಮತ್ತು ಬಲದೇವರ (ಲಕ್ಷ್ಮಣ ಹಾಗೂ ರಾಮ) ಚರಿತ್ರೆಯನ್ನು ಪೂರ್ವಗತದೊಳಗಿಂದಲೇ ಕೇಳಿದ್ದನು (ಉ. ೧೧೮, ಗಾ. ೧೧೮). ಆದರೆ ಪೂರ್ವದಿಂದ ಲಭಿಸಿದ ಪರಿಚಯದಲ್ಲಿ ಕಥಾತ್ಮಕ ಸಾಹಿತ್ಯದ ಉಲ್ಲೇಖವು ಕಂಡು ಬರುತ್ತಿರಲಿಲ್ಲ. ಅಂಪರೂ ೧೨ ನೆಯ ಪ್ರುತಾಂಗವಾದ ದೃಷ್ಟಿವಾದಾಂಗದ ಭೇದಗಳಲ್ಲಿ ಪ್ರಥಮಾನುಯೋಗ ಮತ್ತು ಪೂರ್ವಗತಗಳು ಜೊತೆ ಜೊತೆಯಲ್ಲಿಯೇ ನಿರ್ದಿಷ್ಟಗೊಂಡಿವೆ. ಪದ್ಮ ಚರಿತವು ಮೊದಲು ನಾಮಾವಲಿ ನಿಬದ್ಧವೂ ಆಚಾರ್ಯ ಪರಂಪರಾಗತವೂ ಆದದ್ದು ಇತ್ತೆಂದೂ ಪಉಮಚರಿಯದಲ್ಲಿ ಹೇಳಿದೆ. ಅದನ್ನವರು ಆನುಪೂರ್ವಿಯಿಂದ ಸಂಕ್ಷೇಪವಾಗಿ ಹೇಳಿದ್ದಾರೆ. (೧.೮). ಇಲ್ಲಿ ಕರ್ತೃವು ನಂಕೇತಿಸುವ ನಾಮಾವಲಿ–ನಿಬದ್ಧ ಚರಿತ್ರಗಳು ನಮವಾಯಾಂಗ ಮತ್ತು ತಿಲೋಯ ಪಣ್ಣತ್ತಿಯಲ್ಲಿ ಕಂಡುಬರುತ್ತವೆಂಬುದು ಸ್ಪಷ್ಟವಿದೆ. ಈ ನಾಮಾವಲಿಗಳು ನಿಜವಾಗಿಯೂ ಸ್ಮೃತಿಗೆ ಸಹಾಯಕ ಮಾತ್ರ ಆಗಿವೆ. ಇವುಗಳ ಆಧಾರದಿಂದ, ವಿಶೇಷ ಕಥಾನಕವು ಮೌಖಿಕ ರೂಪದಲ್ಲಿ ಗುರು–ಶಿಷ್ಯ ಪರಂಪರೆಯಲ್ಲಿ ಅತ್ಯವಶ್ಯವಾಗಿ ಪ್ರಚಲಿತವಿರಬೇಕು. ಇದರ ಉಲ್ಲೇಖವನ್ನೇ ಕರ್ತೃವು ಆಚಾರ್ಯ–ಪರಂಪರಾಗತವೆಂದು ಹೇಳಿ ಮಾಡಿದ್ದಾನೆ. ಯಾವ ಸೂತ್ರಗಳ ಆಧಾರದಿಂದ ಈ ಗಾಥಾತ್ಮಕ ಕಾವ್ಯ ರಚನೆಯನ್ನುಮಾಡಲಾಯಿತೋ, ಅವುಗಳ ನಿರ್ದೇಶವನ್ನು ಗ್ರಂಥದ ಮೊದಲ ಉದ್ದೇಶದಲ್ಲಿ ಮಾಡಲಾಗಿದೆ. ಕವಿಗೆ ಈ ಗ್ರಂಥರಚನೆಗೆ ಪ್ರೇರಣೆಯು ಎಲ್ಲಿಂದ ಲಭಿಸಿತೆಂಬುದರ ಸೂಚನೆಯೂ ನಹ ಈ ಕೃತಿಯಲ್ಲಿ ಲಭಿಸುತ್ತದೆ. ಶ್ರೇಣಿಕ ರಾಜನು ಗೌತಮನ ನಮ್ಮುಖದಲ್ಲಿ ತನ್ನ ಸಂದೇಹಗಳನ್ನು ಪ್ರಕಟಗೊಳಿಸಿದನು. ಅವು ಹೀಗಿವೆ— ವಾನರರು ಅತಿ ಪ್ರಬಲ ರಾಕ್ಷಸರನ್ನು ಹೇಗೆ ವಿನಾಶಗೈದಿರಬೇಕು ? ನಿಜವಾಗಿಯೂ ರಾವಣ ಮೊಲಾದ ರಾಕ್ಷನರು ಮಾಂಸಾಹಾರಿಗಳಾಗಿದ್ದರೆ ? ರಾವಣನ ತಮ್ಮನಾದ ಕುಂಭಕರ್ಣನು ಆರುತಿಂಗಳ ವರೆಗೆ ನಿದ್ರಿಸುತ್ತಿದ್ದನೆಂಬುದು ಸರಿಯೆ ? ಅವನು ನಿದ್ರೆಯಿಂದ ಎಚ್ಚರಾದಾಗ ಹಸಿದು ಆನೆ ಮತ್ತು ಎಮ್ಮೆಗಳನ್ನು ನುಂಗುತ್ತಿದ್ದನೆ ? ಇಂದ್ರನು ನಂಗ್ರಾಮದಲ್ಲಿ ರಾವಣನಿಂದ ನೋತಿರಬೇಕೆ ? ಇಂಥ ವಿಪರೀತ ಸಂಗತಿಗಳಿಂದ ಕೂಡಿದ ರಾಮಾಯಣವು ಕವಿಯಿಂದ ರಚಿನಲ್ಪಟ್ಟಿದೆ. ಇದು ಸತ್ಯವಾದುದೆ ? ಇಲ್ಲವೆ ನಿಜವಾದ ಸಂಗತಿಯು ಭಿನ್ನವಾಗಿರುವುದೆ ? ಶ್ರೇಣಿಕನ ಈ ನಂದೇಹಗಳನ್ನು ನಿವಾರಿಸಲಿಕ್ಕೆಂದು ಗೌತಮನು ಅವನಿಗೆ ಯಥಾರ್ಥ ರಾಮಾಯಣದ ಕಥಾನಕವನ್ನು ಹೇಳಿದನು (೨, ೩). ಈ ಕಥನದಿಂದ ಪಉಮಚರಿಯದ ಲೇಖಕನ ಕಣ್ಣೆದುರಿಗೆ ವಾಲ್ಮೀಕಿ ಕೃತ ರಾಮಾಯಣವು ಉಪಸ್ಥಿತವಾಗಿತ್ತೆಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ ಆ ಗ್ರಂಥದ ಪ್ರೇರಣೆಯಿಂದಲೇ ಅವನು ತಮ್ಮ ಪೂರ್ವಸಾಹಿತ್ಯ ಹಾಗೂ ಗುರು ಪರಂಪರೆಯಿಂದ ಲಭಿಸಿದ ಕಥಾಸೂತ್ರಗಳನ್ನು ಅರಳಿಸಿ, ಪ್ರಸ್ತುತ ಗ್ರಂಥವನ್ನು

ನಿರ್ಮಿಸಿದನೆಂದೂ ವಿದಿತವಾಗುತ್ತದೆ.

ಪಉಮಚರಿಯದಲ್ಲಿ ಸ್ವತಃ ಕರ್ತೃವಿನ ಹೇಳಿಕೆಗನುಸರಿಸಿ ಏಳು ಅಧಿಕಾರಗಳಿವೆ, ಸ್ಥಿತಿ, ವಂಶೋತ್ಪತ್ತಿ, ಪ್ರಸ್ಥಾನ, ರಣ, ಲವಂಕುಶ (ಲವಣಾಂಕುಶ) ಉತ್ಪತ್ತಿ, ನಿರ್ವಾಣ ಮತ್ತು ಅನೇಕ ಭವ. ಈ ಅಧಿಕಾರಗಳು ಉದ್ದೇಶಗಳಿಂದ ವಿಭಾಜಿತವಾಗಿವೆ. ಇವುಗಳ ಸಂಖ್ಯೆಯು ೧೧೮ ಇದೆ. ಸಮಸ್ತ ರಚನೆಯು ಪ್ರಾಕೃತ ಗಾಥಾಗಳಲ್ಲಿದೆ ; ಆದರೆ ಉದ್ದೇಶಗಳ ಕೊನೆಯಲ್ಲಿ ಭಿನ್ನ ಭಿನ್ನ ಛಂದಸ್ಸನ್ನು ಉಪಯೋಗಿಸಿದ್ದನ್ನೂ ಕಾಣುತ್ತೇವೆ. ರಚನೆಯು ಎಲ್ಲೆಡೆಗೂ ಸರಳ, ಧಾರಾವಾಹಿಯಾಗಿದ್ದು ಕಥೆಯೇ ಪ್ರಧಾನವಾಗಿರುವಂತಿದೆ. ಆದರೂ ಅಲ್ಲಿ ಇಲ್ಲಿ ಉಪಮಾ ಮೊದಲಾದ ಅಲಂಕಾರಗಳು, ಸೂಕ್ತಿಗಳು, ರಸ-ಭಾವಗಳಿಂದ ಕೂಡಿದ ವರ್ಣನೆಗಳೂ ಇದ್ದುದು ಕಂಡುಬರುತ್ತದೆ. ಈ ವಿಶೇಷತೆಗಳಿಂದ ಇದರ ಶೈಲಿಯ ಭಾಷೆಯು ಭಿನ್ನವಾಗಿದ್ದರೂ ಸಹ ಸಂಸ್ಕೃತ ರಾಮಾಯಣ, ಮಹಾಭಾರತಗಳಿಂದ ಪುರಾಣ ಕಾವ್ಯಗಳ ಶೈಲಿಗೆ ಸಮಾನವಾಗಿದೆ. ಇದರ ಯಾವ ಭಾಗದಲ್ಲಿ ಕಾವ್ಯದ ಆ ಸ್ವರೂಪವು ವಿಕಸಿತಗೊಂಡಿಲ್ಲವೋ ಅಲ್ಲಿ ಅಲಂಕಾರಿತ ವರ್ಣನೆ, ರಸ-ಭಾವನಿರೂಪಣ ಪ್ರಧಾನ ಮತ್ತು ಕಥಾಭಾಗವೂ ಗೌಣವಾದದ್ದು ಕಂಡುಬರುತ್ತದೆ. ಮೊದಲಿನ ೨೪ ಉದ್ದೇಶಗಳಲ್ಲಿ ಮುಖ್ಯವಾಗಿ ವಿದ್ಯಾಧರ ಮತ್ತು ರಾಕ್ಷಸ ವಂಶಗಳ ವಿವರಣೆಯು ಬರುತ್ತದೆ. ರಾಮನ ಜನ್ಮದಿಂದ ಮೊದಲುಗೊಂಡು ಅವನು ಲಂಕೆಯಿಂದ ಮರಳಿ ಬಂದು ರಾಜ್ಯಾಭಿಷಿಕ್ತನಾಗುವ ವರೆಗೆ ಅರ್ಥಾತ್ ರಾಮಾಯಣದ ಮುಖ್ಯಭಾಗವು ೨೫ರಿಂದ ೮೫ ಪೂರ್ಣ ೬೧ ಉದ್ದೇಶಗಳಲ್ಲಿ ವಿವರವಾಗಿ ಬಂದಿದೆ. ಗ್ರಂಥದ ಉಳಿದ ಭಾಗದಲ್ಲಿ ಸೀತಾ-ಪರಿತ್ಯಾಗ (ಉದ್ದೇಶ ೯೪), ಲವಣಾಂಕುಶ-ಉತ್ಪತ್ತಿ, ದೇಶ-ವಿಜಯ ಮತ್ತು ಸಮಾಗಮ, ಪೂರ್ವಭವಗಳ ವರ್ಣನೆ ಮೊದಲಾದವುಗಳನ್ನು ವಿಸ್ತರಿಸಲಾಗಿದೆ ಕೊನೆಯಲ್ಲಿ ರಾಮನ ಕೇವಲ ಜ್ಞಾನೋತ್ಪತ್ತಿ ಮತ್ತು ಆತನ ನಿರ್ವಾಣ ಪ್ರಾಪ್ತಿಯೊಡನೆ ಗ್ರಂಥವು ಮುಕ್ತಾಯಗೊಳ್ಳುತ್ತದೆ. ಇಲ್ಲಿ ರಾಮನ ಕಥಾನಕವು ಹಲವು ಸಂಗತಿಗಳಲ್ಲಿ ವಾಲ್ಮೀಕಿ ರಾಮಾಯಣದಿಂದ ಭಿನ್ನವಾಗಿದೆ; ವೈಶಿಷ್ಟ್ಯವುಳ್ಳುದೂ ಆಗಿದೆ. ಇಲ್ಲಿ ಹನುಮಾನ, ಸುಗ್ರೀವ ಮೊದಲಾದವರು ವಾನರರಲ್ಲ. ವಿದ್ಯಾಧರರಾಗಿದ್ದರು. ಅವರ ಧ್ವಜ ಚಿನ್ಹವು ವಾನರವಾದುದರಿಂದ ಅವರಿಗೆ ವಾನರವೆಂಬ ಹೆಸರು ರೂಢಿವಾಯಿತು. ರಾವಣನಿಗೆ ಹತ್ತು ಮುಖಗಳಿರಲಿಲ್ಲ. ಅವನ ಕೊರಳಲ್ಲಿ ಹಾಕಿದ ನವರತ್ನಗಳಲ್ಲಿ ಪ್ರತಿಬಿಂಬಿತಗೊಂಡ ಅನ್ಯ ಒಂಭತ್ತು ಮುಖಗಳೇ ಕಾರಣವಾಗಿ ದಶಮುಖನೆಂಬ ನಾಮವನ್ನು ಹೊಂದಿದ್ದನು. ಸೀತೆಯು ನಿಜವಾಗಿಯೂ ಜನಕನಿಂದಲೇ ಜನಿಸಿದ ಪುತ್ರಿಯಾಗಿದ್ದಳು ; ಅವಳ ಅಣ್ಣನೊಬ್ಬನು ಭಾಮಂಡಲನೆಂಬವನಿದ್ದನು. ಜನಕನ ರಾಜ್ಯದ ಮೇಲೆ ಕಾಡು ಜನರು ದಾಳಿಯನ್ನು ಮಾಡಿದಾಗ ರಾಮನು ಸಹಾಯ ಮಾಡಿದನು, ಇದನ್ನೇ ಗಮನದಲ್ಲಿಟ್ಟುಕೊಂಡು ಸೀತೆಯನ್ನು ರಾಮನೊಡನೆ ವಿವಾಹ ಮಾಡುವ ನಿಶ್ಚಯವನ್ನು ಜನಕನು ಸ್ವೀಕರಿಸಿದನು. ಸೀತೆಯ ಅಣ್ಣನಾದ ಭಾಮಂಡಲನನ್ನು ಅವನ ಬಾಲ್ಯದಲ್ಲಿಯೇ ಒಬ್ಬ ವಿದ್ಯಾ

ಥರನು ಎತ್ತಿಕೊಂಡು ಹೋಗಿದ್ದನು. ಅವನು ಯುವಕನಾದಮೇಲೆ ತನ್ನ ನಿಜವಾದ ತಂದೆ-ತಾಯಂದಿರಾರೆಂಬ ಕಲ್ಪನೆಯಿಲ್ಲದೆ, ಅವನು ಸೀತೆಯ ಚಿತ್ರಪಟವನ್ನು ನೋಡಿ, ಅವಳಲ್ಲಿ ಮೋಹಾಸಕ್ತನಾದನು. ಇಷ್ಟೇ ಅಲ್ಲ, ಅವಳೊಡನೆಯೇ ಲಗ್ನವಾಗುವ ಉತ್ಕಟ ಅಪೇಕ್ಷೆಯನ್ನು ತಾಳಿದನು. ಈ ವಿರೋಧವನ್ನು ಪರಿಹರಿಸುವುದಕ್ಕಾಗಿ ಧನುಷ-ಪರೀಕ್ಷೆಯ ಯೋಜನೆಯು ರೂಪುಗೊಂಡಿತು. ಇದರಲ್ಲಿ ರಾಮನು ವಿಜಯಿಯಾದನು. ದಶರಥನು ವೃದ್ಧನಾದ ಮೇಲೆ ರಾಜ್ಯಭಾರದಿಂದ ಮುಕ್ತನಾಗಿ ವೈರಾಗ್ಯಧಾರಣ ಮಾಡುವ ವಿಚಾರ ಮಾಡಿದನು ; ಅದನ್ನು ಕಂಡು ಗಂಭೀರ ಸ್ವಭಾವದ ಭರತನಿಗೂ ವೈರಾಗ್ಯವು ಉತ್ಪನ್ನವಾಯಿತು. ಈ ಪ್ರಕಾರ ತನ್ನ ಪತಿ ಹಾಗೂ ಪುತ್ರರನ್ನು ಏಕಕಾಲಕ್ಕೆ ಅಗಲುವ ಸಂದರ್ಭ ಒದಗಿದುದರಿಂದ ಕೈಕೇಯಿಯು ಭಯಭೀತಳಾದಳು. ತನ್ನ ಮಗನನ್ನು ಗೃಹಸ್ಥಾಶ್ರಮದಲ್ಲಿರಿಸಲು, ಅವನಿಗೇ ರಾಜ್ಯಪದವು ದೊರೆಯಬೇಕೆಂದು ಒಂದೇ ಒಂದು ವರವನ್ನು ದಶರಥನ ಹತ್ತಿರ ಬೇಡಿದಳು. ರಾಮನು ದಶರಥನ ಆಜ್ಞೆಯಿಂದಲ್ಲ, ಸ್ವೇಚ್ಛೆಯಿಂದ ವನಕ್ಕೆ ತೆರಳಿದನು. ಈ ಪ್ರಕಾರ ಕೈಕೇಯಿಯನ್ನು ದುರ್ಭಾವನೆಯ ಕಳಂಕದಿಂದ ಉಳಿಸಲಾಗಿದೆ. ರಾವಣನ ಆಧಿಪತ್ಯವನ್ನು ಸ್ವೀಕರಿಸಲು ಒಪ್ಪದೆ ವಾಲಿಯು ತನ್ನ ತಮ್ಮನಾದ ಸುಗ್ರೀವನಿಗೆ ರಾಜ್ಯವನ್ನು ಒಪ್ಪಿಸಿ ಪ್ರವ್ರಜ್ಯೆಯನ್ನು ಸ್ವೀಕರಿಸಿದ್ದನು ; ರಾಮನು ಇವನನ್ನು ಕೊಂದುದಿಲ್ಲ. ರಾವಣನನ್ನೂ ಇಲ್ಲಿ ಜ್ಞಾನಿಯೆಂದೂ ವ್ರತಿಕನೆಂದೂ ಚಿತ್ರಿಸಲಾಗಿದೆ. ಅವನು ಸೀತೆಯನ್ನು ಅಪಹರಿಸಿದ್ದೇನೋ ನಿಜ ; ಆದರೆ ಅವನೂ ಅವಳ ಇಚ್ಛೆಗೆ ವಿರೋಧವಾಗಿ ಬಲಾತ್ಕಾರವನ್ನು ಮಾಡುವ ವಿಚಾರವನ್ನೂ ಸಹ ಎಂದೂ ಮಾಡಲಿಲ್ಲ ; ಪ್ರಯತ್ನವಂತೂ ದೂರವೇ ಉಳಿಯಿತು. ಪ್ರೇಮಕ್ಕೆ ವಶನಾಗಿ ತನ್ನಲ್ಲಿಯೇ ತಾನು ಕೊರಗುತ್ತಲಿದ್ದನು. ಸ್ವತಃ ರಾವಣನ ಪತ್ನಿಯಾದ ಮಂಡೋದರಿಯು ತನ್ನ ಪತಿಯನ್ನು ಸುಧಾರಿಸಲು ಅನ್ಯ ಉಪಾಯವೇ ಇಲ್ಲವೆಂದು ಕಂಡಾಗ, ಒಳ್ಳೆಯ ಪತ್ನಿಯ ಸ್ವರೂಪದಲ್ಲಿದ್ದವಳು ಸೀತೆಯನ್ನು ಬಲಾತ್ಕಾರದಿಂದ ವಶಪಡಿಸಿಕೊಳ್ಳಲಿಕ್ಕೂ ಸೂಚಿಸಿದಳು. ಆದರೆ ರಾವಣನು ಅದನ್ನು ಧಿಕ್ಕರಿಸಿದನು. ತಾನು ಯಾವ ಸ್ತ್ರೀಯ ಜೊತೆಯಲ್ಲಿಯೂ ಸಹ ಅವಳ ಇಚ್ಛೆಗೆ ವಿರೋಧವಾಗಿ ಕೂಡಲಾರೆನೆಂದು ವ್ರತವನ್ನು ಕೈಕೊಂಡಿರುವುದಾಗಿ ಹೇಳಿದನು. ಇಷ್ಟೇ ಅಲ್ಲ, ಅದನ್ನೆಂದೂ ತಾನು ಮುರಿಯಲಾರೆನೆಂದೂ ಘೋಷಿಸಿದನು. ರಾವಣನ ಸ್ವಂತ ಮುಖದಿಂದ ಈ ವ್ರತ ಸ್ವೀಕಾರದ ಮಾತನ್ನು ಕವಿಯು ನುಡಿಯಿಸಿ, ಅವನ ಚರಿತ್ರವನ್ನು ಉನ್ನತಗೊಳಿಸಿದನಿಷ್ಟೇ ಅಲ್ಲ, ಸೀತೆಯ ಪಾತಿವ್ರತ್ಯವನ್ನೂ ನಿಸ್ಸಂದೇಹ ಸ್ಥಿತಿಯಲ್ಲಿ ಕಾಯ್ದಿದ್ದಾನೆ. ರಾವಣನ ಮೃತ್ಯುವು ಇಲ್ಲಿ ರಾಮನ ಹಸ್ತದಿಂದ ಆದುದಿಲ್ಲ ; ಲಕ್ಷ್ಮಣನಿಂದ ಆಗಿದೆ. ರಾಮನ ಪುತ್ರರ ಹೆಸರು ಇಲ್ಲಿ ಲವಣ ಮತ್ತು ಅಂಕುಶ ಎಂದು ಇದ್ದುದು ಕಂಡುಬರುತ್ತದೆ. ಈ ಪ್ರಕಾರದ ಅನೇಕ ವಿಶೇಷತೆಗಳು ಈ ರಾಮ ಕಥೆಯಲ್ಲಿ ಕಂಡುಬರುತ್ತವೆ. ಇದರ ಉದ್ದೇಶವು ಕಥಾನಕವನ್ನು ಹೆಚ್ಚು ಸ್ವಾಭಾವಿಕಗೊಳಿಸುವುದೇ ಆಗಿದೆ, ಅಲ್ಲದೆ ಮಾನವ ಚರಿತ್ರವನ್ನು ಎಲ್ಲ ಪರಿಸ್ಥಿತಿಯಲ್ಲಿಯೂ ಸಹ

ಹೆಚ್ಚು ಉಚ್ಚತರಗತಿಗೆ ಒಯ್ಯುವುದೇ ಆಗಿದೆ. ಕಥೆಯಲ್ಲಿ ನಡುನಡುವೆ ಪ್ರಸಂಗವಶ ನಾನಾ ಉಪಕಥೆಗಳೂ ಧರ್ಮೋಪದೇಶಗಳೂ ಸಹ ಬಂದಿವೆ. ಪಉಮಚರಿಯದ ಹೊರ ತಾಗಿ ವಿಮಲಸೂರಿಯ ಇನ್ನಾವ ಕೃತಿಯೂ ಇಲ್ಲಿಯವರೆಗೆ ಉಪಲಬ್ಧವಿಲ್ಲ , ಆದರೆ ಶಕ ಸಂವತ್ಸರ ೭೦೦ರಲ್ಲಿ (ಕ್ರಿ.ಶ. ೭೭೮) ರಚಿತವಾದ ಕುವಲಯಮಾಲಾದಲ್ಲಿ ಅದರ ಕರ್ತೃವಾದ ಉದ್ಯೋತನ ಸೂರಿಯು ಹೀಗೆ ಹೇಳಿದ್ದಾನೆ—

ಬುಹಯಣ–ಸಹಸ್ಸ–ದಇಯಂ ಹರಿವಂಸುಪ್ಪತ್ತಿ–ಕಾರಯಂ ಪಢಮಂ |
ವಂದಾಮಿ ವಂದಿಯಂ ತಿ ಹು ಹರಿವಂಸಂ ಚೇವ ವಿಮಲಪಯಂ ||

ಅರ್ಥಾತ್ ಸಾವಿರಾರು ಜನ ವಿದ್ವಾಂಸರಿಗೆ ಪ್ರಿಯವಾದ ಹರಿವಂಶೋತ್ಪತ್ತಿ ಗ್ರಂಥ ವನ್ನು ಮೊದಲು ರಚಿಸಿದ ವಿಮಲಪದ ಹರಿವಂಶವನ್ನೇ ವಂದಿಸುವೆ; ಈ ಉಲ್ಲೇಖ ದಿಂದ, ವಿಮಲಸೂರಿಯು ಹರಿವಂಶ ಕಥಾತ್ಮಕವುಳ್ಳ ಒಂದು ಗ್ರಂಥವನ್ನೂ ರಚಿಸಿರ-ಬೇಕೆಂದು ಅನುಮಾನಿಸಲಿಕ್ಕೆ ಆಸ್ಪದವಿದೆ.

ಮೇಲೆ ಹೇಳಲಾಗಿದೆಯಷ್ಟೆ : ಸಮವಾಯಾಂಗ ಸೂತ್ರದಲ್ಲಿ ಸಮಸ್ತ ತ್ರಿಷಷ್ಠಿ ಶಲಾಕಾಪುರುಷರ ನಾಮಾವಲಿಯನ್ನು ನಿಬದ್ಧಗೊಳಿಸಲಾಗಿದೆ. ಆದರೆ ಅವುಗಳಲ್ಲಿ ೯ ಪ್ರತಿವಾಸುದೇವರನ್ನು ಬಿಟ್ಟು ಉಳಿದ ೫೪ ಜನರಿಗೇನೇ ಉತ್ತಮ ಪುರುಷರೆಂದು ಹೇಳಿದೆ. ಇದೇ ೫೪ ಜನ ಉತ್ತಮ ಪುರುಷರ ಚರಿತ್ರೆಯನ್ನು ಶೀಲಾಂಕಾಚಾರ್ಯನು ತನ್ನ 'ಚಉಪನ್ನ–ಮಹಾಪುರಿಸ–ಚರಿಯ'ದಲ್ಲಿ ವಿವರಿಸಿದ್ದಾನೆ. ಇದರ ರಚನೆಯು ವಿ.ಸಂ. ೯೨೫ (ಕ್ರಿ.ಶ. ೮೬೮)ರಲ್ಲಿ ಆಗಿದೆ. ಈ ಗ್ರಂಥವು ಪ್ರಾಕೃತ ಗದ್ಯದಲ್ಲಿದೆ, ನಡುವೆ ಅಲ್ಲಲ್ಲಿ ಕೆಲವು ಪದ್ಯಗಳೂ ಸಹ ಇವೆ. ತೀರ್ಥಂಕರರು ಮತ್ತು ಚಕ್ರವರ್ತಿಗಳ ಚರಿತ್ರೆಯನ್ನೂ ಇದರಲ್ಲಿ ಪೂರ್ವೋಕ್ತ ನಾಮಾವಲಿಗಳ ಆಧಾರದಿಂದ ಜೈನ ಪರಂಪರೆ ಗನುಸರಿಸಿ ವರ್ಣಿಸಲಾಗಿದೆ. ಆದರೆ ವಿಶೇಷ ತುಲನಾತ್ಮಕ ಅಭ್ಯಾಸಕ್ಕಾಗಿ ರಾಮನ ಆಖ್ಯಾನವನ್ನು ಇಲ್ಲಿ ಗಮನಿಸಬಹುದಾಗಿದೆ. ಇಲ್ಲಿಯ ವರ್ಣನೆಯ ಬಹುಭಾಗವು ವಿಮಲಸೂರಿಯ ಪಉಮಚರಿಯದ ಸಂಕ್ಷಿಪ್ತ ರೂಪವೆನ್ನುವಂತಿದೆ. ಆದರೂ ಕೆಲ ವೊಂದು ಸಂಗತಿಗಳಲ್ಲಿ ಉಲ್ಲೇಖಿಸಬಹುದಾದಂಥ ಭೇದಗಳೂ ಇವೆ. ರಾವಣನ ತಂಗಿ ಯನ್ನು ಪಉಮಚರಿಯದಲ್ಲಿ ಎಲ್ಲೆಡೆಗೂ ಚಂದ್ರನಖಿಯೆಂದು ಕರೆಯಲಾಗಿದೆ. ಆದರೆ ಅವಳ ಹೆಸರನ್ನು ಇಲ್ಲಿ ಸೂರ್ಪನಖಾ ಎಂದು ಹೇಳಿದೆ. ಪಉಮಚರಿಯದಲ್ಲಿ ರಾವಣನು ಲಕ್ಷ್ಮಣನ ಸ್ವರದಂತೆ ಸಿಂಹನಾದ ಮಾಡಿ, ರಾಮನನ್ನು ಮೋಸಗೊಳಿಸಿ, ಸೀತೆಯನ್ನು ಅಪಹರಿಸಿದನು. ಆದರೆ ಇಲ್ಲಿ ಸ್ವರ್ಣಮಯೀ ಮಾಯಾಮೃಗದ ಪ್ರಯೋಗವು ಕಂಡು ಬರುತ್ತದೆ. ಪಉಮಚರಿಯದಲ್ಲಿ ಸ್ವತಃ ವಾಲಿಯು ಸುಗ್ರೀವನಿಗೆ ರಾಜ್ಯವನ್ನು ಕೊಟ್ಟು ಪ್ರವ್ರಜಿತನಾದನು. ಆದರೆ ಇಲ್ಲಿ ರಾಮನಿಂದ ಅವನ ವಧೆಯಾದುದನ್ನು ಹೇಳಿದೆ. ಇಲ್ಲಿ ಸೀತೆಯ ಅಪಹರಣದ ತರುವಾಯ ಕರೆಯುವಂಥ ತ್ರಿಜಟೆಯ ಉಲ್ಲೇಖವು ಬಂದಿದೆ. ಇದು ಪಉಮಚರಿಯದಲ್ಲಿ ಇಲ್ಲ. ಈ ಭೇದಗಳಿಂದ ಶೀಲಾಂಕನ ರಚನೆಯು

ಮೇಲೆ ವಾಲ್ಮೀಕಿ ರಾಮಾಯಣದ ಪ್ರಭಾವವು ಹೆಚ್ಚಾಗಿ ಆದದ್ದು ಸ್ಪಷ್ಟವಾಗಿ ಕಂಡು ಬರುತ್ತದೆ. ಆದರೂ ಗ್ರಂಥದ ಕೊನೆಯಲ್ಲಿ ಶೀಲಾಂಕಸೂರಿಯು ಈ ರಾಮ ಮತ್ತು ಲಕ್ಷ್ಮಣನ ಚರಿತ್ರೆಯು ಪಉಮಚರಿಯದಲ್ಲಿ ವಿಸ್ತಾರದಿಂದ ವರ್ಣಿಸಿದಂತೆಯೇ ಇದೆ-ಯೆಂದು ಸ್ಪಷ್ಟವಾಗಿ ಹೇಳಿದ್ದಾನೆ.

ಭದ್ರೇಶ್ವರ ಕೃತ ' ಕಹಾವಲಿ ' ಯಲ್ಲಿ ಅರವತ್ತುಮೂರು ಮಹಾಪುರುಷರ ಚರಿತ್ರೆಯನ್ನು ವರ್ಣಿಸಿದೆ. ಭದ್ರೇಶ್ವರನು ಅಭಯದೇವನ ಗುರುವಾಗಿದ್ದನು. ಅಭಯ ದೇವನ ಶಿಷ್ಯನಾದ ಆಷಾಢನ ಸಮಯವು ಸುಮಾರು ಕ್ರಿ.ಶ. ೧೧೯೧ ಎಂದು ಕಂಡು ಬರುತ್ತದೆ. ಅಂತೂ ಈ ರಚನೆಯು ಹನ್ನೆರಡನೆಯ ಶತಮಾನದ ಪ್ರಾರಂಭಕಾಲ ದ್ದೆಂದು ತಿಳಿಯುತ್ತದೆ. ಸಮಸ್ತ ರಚನೆಯು ಪ್ರಾಕೃತ ಗದ್ಯದಲ್ಲಿದ್ದರೂ ಅಲ್ಲಲ್ಲಿ ಪದ್ಯಗಳೂ ಇವೆ. ಗ್ರಂಥದಲ್ಲಿ ಯಾವ ಅಧ್ಯಾಯಗಳ ವಿಭಾಗಗಳೂ ಇಲ್ಲ. ಆದರೂ ಕಥೆಗಳ ನಿರ್ದೇಶವು ' ರಾಮಕಹಾ ಭಣ್ಣಇ ', ' ಪಾಣರ ಕಹಾ ಭಣ್ಣಇ ' ಇತ್ಯಾದಿ ರೂಪ ಗಳಲ್ಲಿ ಮಾಡಲಾಗಿದೆ. ಈ ಗ್ರಂಥದಲ್ಲಿ ರಾಮಾಯಣದ ಕಥೆಯು ವಿಮಲಸೂರಿಯ ಪಉಮಚರಿಯವನ್ನು ಅನುಸರಿಸಿದೆ. ಸ್ವಲ್ಪ ಭೇದವು ಅಲ್ಲಲ್ಲಿ ಕಂಡುಬರುತ್ತದೆ. ಅಂಥವುಗಳಲ್ಲಿ ಸೀತೆಯ ನಿರ್ವಾಸನದ ಪ್ರಸಂಗವು ಉಲ್ಲೇಖನೀಯವಾಗಿದೆ. ಸೀತೆಯು ಗರ್ಭವತಿಯಾಗಿದ್ದಾಳೆ ; ಅವಳಿಗೆ ಸ್ವಪ್ನವಾಗಿದೆ ; ಅವಳು ಪರಾಕ್ರಮಿಗಳಾದ ಇಬ್ಬರು ಪುತ್ರರಿಗೆ ಜನ್ಮವೀಯುವಳೆಂಬುದೇ ಆ ಕನಸು. ಸೀತೆಯ ಈ ಸೌಭಾಗ್ಯಕರ ಸಂಗತಿ ಯನ್ನು ಕೇಳಿ. ಅವಳ ಸವತಿಯರಿಗೆ ಮಾತ್ಸರ್ಯವು ಉಂಟಾಗಿದೆ. ಅವರು ಸೀತೆ ಯೊಡನೆ ಒಂದು ಹಟವನ್ನು ಸಾಧಿಸಿದರು. ಅವರು ಸೀತೆಗೆ ರಾವಣನ ಚಿತ್ರವನ್ನು ಬರೆಯಲು ಹೇಳಿದರು ; ಅದಕ್ಕಾಗಿ ಆಗ್ರಹವನ್ನೂ ಕೂಡ ಮಾಡಿದರು. ಆಗ ಸೀತೆಯು ಹೇಳಿದಳು : 'ನಾನು ಆತನ ಮುಖವನ್ನು ನೋಡಲಿಲ್ಲ. ಆತನ ಪಾದಗಳ ಚಿತ್ರವನ್ನು ಮಾತ್ರ ಬರೆಯಬಲ್ಲೆ.' ಎಂದಳು. ಅದರಂತೆ ಪಾದಗಳ ಚಿತ್ರವನ್ನು ತೆಗೆದಳು. ಅವಳ ಸವತಿಯರು ಅದನ್ನು ಒಯ್ದು ರಾಮನಿಗೆ ತೋರಿಸಿದರು. ಅಲ್ಲದೆ ಸೀತೆಯು ರಾವಣ ನಲ್ಲಿ ಅನುರಕ್ತಳಾಗಿದ್ದಾಳೆಂದು ಹೇಳಿದರು. ಅವನ ಚರಣಗಳ ವಂದನೆಯನ್ನೇ ಮಾಡು ತ್ತಿದ್ದಾಳೆಂದೂ ಸೂಚಿಸಿದರು. ಆಗ ಕೂಡಲೇ ರಾಮನು ಅದಕ್ಕೇನೂ ಪ್ರತಿಕ್ರಿಯೆ ಯನ್ನು ವ್ಯಕ್ತಗೊಳಿಸಲಿಲ್ಲ. ಆದರಿಂದ ಆ ಸಾಪತ್ನಿಯರು ಜನತೆಯಲ್ಲಿ ಈ ವಾರ್ತೆ ಯನ್ನು ಪಸರಿಸಿದರು. ಈ ಅಪವಾದ ಪ್ರಸಾರದ ಪರಿಣಾಮವಾಗಿ ರಾಮನು ಸೀತೆ ಯನ್ನು ತ್ಯಜಿಸಿದನು. ರಾವಣನ ಚಿತ್ರದ ವೃತ್ತಾಂತವು ಹೇಮಚಂದ್ರನು ತನ್ನ ತ್ರಿಷಷ್ಟಿ ಶಲಾಕಾಪುರುಷ ಚರಿತದಲ್ಲಿಯೂ ನಿಬದ್ಧಗೊಳಿಸಿದ್ದಾನೆ.

### ಪ್ರಾಕೃತದಲ್ಲಿ ತೀರ್ಥಂಕರರ ಚರಿತ್ರೆ :—

ಶೀಲಾಂಕ ಕೃತ ' ಚಉಪನ್ನಮಹಾಪುರಿಸಚರಿಯ 'ದ ತರುವಾಯ ಮೂರು-ನಾಲ್ಕು ಶತಮಾನಗಳಲ್ಲಿ ವಿವಿಧ ತೀರ್ಥಂಕರರ ಚರಿತ್ರೆಗಳು ಪ್ರಾಕೃತ ಭಾಷೆಯಲ್ಲಿ

ಕೆಲವು ಪದ್ಯಾತ್ಮಕವಾಗಿಯೂ, ಇನ್ನು ಕೆಲವು ಗದ್ಯಾತ್ಮಕವಾಗಿಯೂ ಹಲವು ಗದ್ಯ-ಪದ್ಯ ಮಿಶ್ರರೂಪದಲ್ಲಿಯೂ ಕಾವ್ಯ ಶೈಲಿಯಲ್ಲಿ ಬರೆಯಲ್ಪಟ್ಟವು. ಪ್ರಥಮ ತೀರ್ಥಂಕರ ಋಷಭನಾಥನನ್ನು ಕುರಿತು, ಅಭಯದೇವನ ಶಿಷ್ಯನಾದ ವರ್ಧಮಾನಸೂರಿಯು ಕ್ರಿ.ಶ. ೧೧೦೩ ರಲ್ಲಿ, ೧೧೦೦೦ ಶ್ಲೋಕ ಪ್ರಮಾಣದಲ್ಲಿರುವ **ಆದಿಣಾಹ-ಚರಿಯಂ** ಎಂಬ ಕಾವ್ಯವನ್ನು ರಚಿಸಿದನು. ಐದನೆಯ ತೀರ್ಥಂಕರನಾದ **ಸುಮತಿನಾಥನ** ಚರಿತ್ರವನ್ನು ೧೨ ನೆಯ ಶತಮಾನದ ಮಧ್ಯದಲ್ಲಿ ವಿಜಯಸಿಂಹನ ಶಿಷ್ಯನಾದ ಸೋಮಪ್ರಭನು ಸುಮಾರು ೯೦೦೦ ಗಾಹೆಗಳಲ್ಲಿ ರಚಿಸಿದನು. ಆರನೆಯ ತೀರ್ಥಂಕರನಾದ **ಪದ್ಮಪ್ರಭನ** ಚರಿತ್ರವನ್ನು ದೇವಸೂರಿಯು ೧೩ ನೆಯ ಶತಮಾನದಲ್ಲಿ ರೂಪಿಸಿದನು. ಏಳನೆಯ ತೀರ್ಥಂಕರನನ್ನು ಕುರಿತು ಲಕ್ಷ್ಮಣಗಣಿಕೃತ **'ಸುಪಾಸಣಾಹಚರಿಯು'** ಎಂಬುದು ಸುವಿಸ್ತೃತವೂ ಉತ್ಕೃಷ್ಟವೂ ಆದ ಕಾವ್ಯವಾಗಿದೆ. ಇದು ವಿ.ಸಂ. ೧೧೯೯ ರಲ್ಲಿ ರಚನೆಯಾದ ಕೃತಿಯು. ಇದರಲ್ಲಿ ಸುಮಾರು ೭೦ ಪದ್ಯಗಳು ಅಪಭ್ರಂಶ ಭಾಷೆಯವೂ ನಹ ಇವೆ. ಎಂಟನೆಯ ತೀರ್ಥಂಕರ **ಚಂದ್ರಪ್ರಭನನ್ನು** ಕುರಿತು ಯಶೋದೇವ ಕೃತ (ಸಂ. ೧೧೭೮) ಹಾಗೂ ಶ್ರೀಚಂದ್ರನ ಶಿಷ್ಯನಾದ ಹರಿಭದ್ರನು ರಚಿಸಿದ (ಸಂ. ೧೨೨೩) ಕೃತಿಗಳು ಪ್ರಸಿದ್ಧವಾಗಿವೆ. ೧೧ ನೆಯ ತೀರ್ಥಂಕರನಾದ **ಶ್ರೇಯಾಂಸನನ್ನು** ಕುರಿತು ಅಜಿತಸಿಂಹನೂ, ೧೨ ನೆಯ ತೀರ್ಥಂಕರ **ವಾಸುಪೂಜ್ಯನನ್ನು** ಕುರಿತು ಚಂದ್ರಪ್ರಭನೂ ಚರಿತ್ರ ಗ್ರಂಥಗಳನ್ನು ರಚಿಸಿದ್ದಾರೆ. ೧೪ ನೆಯ ತೀರ್ಥಂಕರ **ಅನಂತನಾಥನ** ಚರಿತ್ರವನ್ನು ನೇಮಿಚಂದ್ರನು ವಿ. ಸಂ. ೧೨೧೩ ರಲ್ಲಿ ಬರೆದನು. ೧೬ ನೆಯ ತೀರ್ಥಂಕರ **ಶಾಂತಿನಾಥ** ಚರಿತ್ರವು ದೇವಚಂದ್ರ ಸೂರಿಯಿಂದ ವಿ.ಸಂ. ೧೧೬೦ ರಲ್ಲಿಯೂ ಇನ್ನೊಂದು ಮುನಿಭದ್ರನಿಂದ ವಿ.ಸಂ. ೧೩೫೩ ರಲ್ಲಿಯೂ ರಚಿಸಲ್ಪಟ್ಟವೆ. ದೇವಸೂರಿಯ ರಚನೆಯು ಸುಮಾರು ೧೨೦೦೦ ಶ್ಲೋಕ ಪ್ರಮಾಣದಲ್ಲಿದೆ. ೧೯ ನೆಯವನಾದ **ಮಲ್ಲಿನಾಥ** ತೀರ್ಥಂಕರರನ್ನು ಕುರಿತು ಎರಡು ಕೃತಿಗಳು ಲಭಿಸುತ್ತವೆ. ಅವುಗಳಲ್ಲಿ ಒಂದನ್ನು ಶ್ರೀಚಂದ್ರಸೂರಿಯ ಶಿಷ್ಯನಾದ ಹರಿಭದ್ರನು ಸರ್ವದೇವಗಣಿಯ ಸಹಾಯದಿಂದ ರಚಿಸಿದನು. ಇನ್ನೊಂದನ್ನು ಜಿನೇಶ್ವರ ಸೂರಿಯು ರಚಿಸಿದ್ದಾನೆ. ೧೨ನೆಯ ಶತಮಾನದಲ್ಲಿಯೇ ಇಪ್ಪತ್ತನೆಯ ತೀರ್ಥಂಕರ **ಮುನಿಸುವ್ರತ** ಚರಿತ್ರವನ್ನು ಶ್ರೀಚಂದ್ರನು ಬರೆದನು. ಅದು ಸುಮಾರು ೧೧೦೦೦ ಗಾಹೆಗಳಲ್ಲಿದೆ ೨೨ ನೆಯ ತೀರ್ಥಂಕರ **ನೇಮಿನಾಥನನ್ನು** ಕುರಿತು ಮೂರು ಕೃತಿಗಳು ಉಪಲಬ್ಧವಿವೆ. ಒಂದು ಮಲಧಾರಿ ಹೇಮಚಂದ್ರನು ರಚಿಸಿದ್ದು, ಇನ್ನೊಂದು ವಿ. ಸಂ. ೧೧೭೫ ರಲ್ಲಿ ಜಿನೇಶ್ವರ ಸೂರಿಯು ನಿರ್ಮಿಸಿದ್ದು, ಮೂರನೆಯದನ್ನು ರತ್ನಪ್ರಭಸೂರಿಯು ವಿ.ಸಂ. ೧೨೩೩ರಲ್ಲಿ ನಿರ್ಮಾಣ ಮಾಡಿದ್ದು. ಇನ್ನು ೨೩ನೆಯ ತೀರ್ಥಂಕರ **ಪಾರ್ಶ್ವನಾಥನ** ಚರಿತ್ರವನ್ನು ಅಭಯದೇವನ ಪ್ರಶಿಷ್ಯನಾದ ದೇವಭದ್ರಸೂರಿಯು ವಿ. ಸಂ. ೧೧೬೮ ರಲ್ಲಿ ರಚಿಸಿದನು. ಇದು ಗದ್ಯ-ಪದ್ಯ ಮಿಶ್ರಿತವಾಗಿದೆ. ಅಂತಿಮ ತೀರ್ಥಂಕರನನ್ನು ಕುರಿತು **'ಮಹಾವೀರ-ಚರಿಯಂ'** ಎಂಬ ಹೆಸರಿನ ಮೂರು

ಕೃತಿಗಳು (ಪ್ರಕಾ. ಅಹಮದಾಬಾದ ೧೯೪೫) ಉಪಲಬ್ಧವಾಗಿವೆ. ಅವುಗಳಲ್ಲೊಂದು ಸುಮತಿವಾಚಕನ ಶಿಷ್ಯನಾದ ಗುಣಚಂದ್ರಗಣಿಕೃತವು ; ಎರಡನೆಯದು ದೇವಚಂದ್ರ-ಗಣಿ—ಈತನ ಇನ್ನೊಂದು ಹೆಸರು ನೇಮಿಚಂದ್ರ—ರಚಿಸಿದ್ದು ; ಮೂರನೆಯದು ದೇವಭದ್ರಸೂರಿ ನಿರ್ಮಿಸಿದ್ದಾಗಿದೆ. ಇವೆಲ್ಲವುಗಳಿಗಿಂತ ಪ್ರಾಚೀನವಾದ ಮಹಾವೀರ ಚರಿತ್ರವು ಆಚಾರಾಂಗ ಮತ್ತು ಕಲ್ಪಸೂತ್ರಗಳಲ್ಲಿ ಕಂಡುಬರುತ್ತದೆ. ಕಲ್ಪಸೂತ್ರದಲ್ಲಿ ವರ್ಣಿಸಲ್ಪಟ್ಟ ಚರಿತ್ರವು ತನ್ನ ಕಾವ್ಯಾತ್ಮಕ ಶೈಲಿಯಲ್ಲಿ ಲಲಿತವಿಸ್ತಾರದಲ್ಲಿ ವರ್ಣಿತಗೊಂಡ ಬುದ್ಧ ಚರಿತೆಯನ್ನು ಹೋಲುತ್ತದೆ. ಈ ರಚನೆಯು ಭದ್ರಬಾಹು ಕೃತವೆಂದು ಹೇಳಲಾಗುತ್ತದೆ.

ಈ ಎಲ್ಲ ಕೃತಿಗಳ ಭಾಷೆ ಮತ್ತು ಶೈಲಿಯು ಬಹುತರ ಒಂದೇ ಮಾದರಿಯಾಗಿದೆ. ಭಾಷೆಯು ಮಹಾರಾಷ್ಟ್ರೀ ಪ್ರಾಕೃತವು. ಆದರೂ ಅಲ್ಲಲ್ಲಿ ಶೌರಸೇನಿಯ ಪ್ರವೃತ್ತಿಗಳೂ ಕೂಡ ಕಂಡು ಬರುತ್ತವೆ. ಶೈಲಿಯು ಎಲ್ಲೆಡೆಗೂ ಪೌರಾಣಿಕವಾಗಿದೆ. ಅಂದರೂ ಕವಿಗಳ ಪ್ರತಿಭೆಗೆ ಅನುಸರಿಸಿ ಛಂದ, ಅಲಂಕಾರ, ರಸ-ಭಾವ ಮೊದಲಾದ ಕಾವ್ಯಗುಣಗಳ ತರತಮ ಭಾವವು ಕಂಡುಬರುತ್ತದೆ. ಪ್ರತಿಯೊಂದು ಕೃತಿಯಲ್ಲಿಯೂ ಚರಿತ್ರನಾಯಕನ ಅನೇಕ ಪೂರ್ವಭವಗಳ ವರ್ಣನೆಯು ಇದ್ದುದು ಕಂಡುಬರುತ್ತದೆ. ಈ ವರ್ಣನೆಯು ಗ್ರಂಥದ ಒಂದು ಮೂರನೆಯಾಂಶದಷ್ಟು ಇದೆ. ಕೆಲವೆಡೆಯಲ್ಲಿ ಅರ್ಧದಷ್ಟೂ ಇದ್ದವುಗಳೂ ಇವೆ. ಉಳಿದ ಭಾಗದಲ್ಲಿಯೂ ಉಪಾಖ್ಯಾನಗಳೂ ಉಪದೇಶಗಳೂ ಹೆಚ್ಚಾಗಿ ಇದ್ದುದೇ ಕಂಡುಬರುವುದು. ನಾಯಕನ ಚರಿತ್ರ ವರ್ಣನೆಯಲ್ಲಿ ಜನ್ಮ-ನಾಗರಿಯ ಶೋಭೆ, ತಂದೆ-ತಾಯಂದಿರ ವೈಭವ, ಗರ್ಭ ಮತ್ತು ಜನ್ಮ ಸಮಯದ ದೇವಕೃತ ಅತಿಶಯ, ಕುಮಾರ-ಕ್ರೀಡಾ ಮತ್ತು ಶಿಕ್ಷಾ-ದೀಕ್ಷಾ, ಪ್ರವ್ರಜ್ಯಾ ಮತ್ತು ತಪಸ್ಸಿನ ಕಠೋರತೆ. ಪರೀಷಹ ಹಾಗೂ ಉಪಸರ್ಗಗಳ ಸಹನೆ, ಕೇವಲ ಜ್ಞಾನೋತ್ಪತ್ತಿ, ಸಮವಸರಣ ರಚನೆ, ಧರ್ಮೋಪದೇಶ, ದೇಶ-ಪ್ರದೇಶ ವಿಹಾರ, ಕೊನೆಗೆ ನಿರ್ವಾಣ ಇವುಗಳ ವರ್ಣನೆಯನ್ನು ಕೆಲವೆಡೆಯಲ್ಲಿ ಸಂಗ್ರಹವಾಗಿಯೂ ಹಲವೆಡೆಯಲ್ಲಿ ವಿಸ್ತಾರ ಪೂರ್ವಕವಾಗಿಯೂ ಮಾಡಿದೆ. ಕೆಲವೆಡೆಯಲ್ಲಿ ಸರಳವಾಗಿದ್ದರೆ, ಹಲವೆಡೆಗಳಲ್ಲಿ ಕಲ್ಪನೆ, ಲಾಲಿತ್ಯ ಮತ್ತು ಅಲಂಕಾರಗಳಿಂದ ತುಂಬಿ ತುಳುಕುವಂತಹದೂ ಆಗಿದೆ.

## ಪ್ರಾಕೃತದಲ್ಲಿರುವ ವಿಶೇಷ ಕಥಾಗ್ರಂಥ-ಪದ್ಯಾತ್ಮಕ :—

ತೀರ್ಥಂಕರರ ಚರಿತ್ರೆಗಳನ್ನುಳಿದು ಪ್ರಾಕೃತದಲ್ಲಿ ಮತ್ತೆ ಅನೇಕ ಗ್ರಂಥಗಳು ಉಪಲಬ್ಧವಿವೆ. ಅವುಗಳಲ್ಲಿ ಕೆಲವು ವ್ಯಕ್ತಿಗಳ ಜೀವನ ಚರಿತ್ರೆಗಳಾಗಿವೆ. ಈ ಚರಿತ್ರೆಗಳಿಂದ ಜೈನಧರ್ಮದ ಸಂಯಮ, ಉಪವಾಸ, ಪೂಜಾ, ವಿಧಿ-ವಿಧಾನ, ಪಾತ್ರ-ದಾನ ಮೊದಲಾದ ವಿಶೇಷ ಗುಣಗಳ ಮಹಾತ್ಮೆಯನ್ನು ಪ್ರಕಟಗೊಳಿಸಲಾಗಿದೆ. ಈ ಕೃತಿಗಳನ್ನು ಅವುಗಳ ಶೈಲಿ, ಪ್ರಮಾಣಾದಿಗಳ ದೃಷ್ಟಿಯಿಂದ ಮೂರು ಭಾಗಗಳಲ್ಲಿ

ವಿಭಾಗಿಸಲಾಗುತ್ತದೆ. ಇವುಗಳಲ್ಲಿ ಕೆಲವೊಂದು ಗ್ರಂಥಗಳು ಪ್ರಾಕೃತ ಪದ್ಯಾತ್ಮಕ ಕೃತಿಗಳೇ ಆಗಿವೆ. ಇಂಥ ರಚನೆಗಳಲ್ಲಿ ಛಂದ, ಅಲಂಕಾರ ಮೊದಲಾದವುಗಳ ವೈಶಿಷ್ಟ್ಯವೂ ಕಂಡುಬರುತ್ತದೆ. ಅದರಿಂದ ಇವುಗಳಿಗೆ ನಾವು ಪ್ರಾಕೃತ ಕಾವ್ಯಗಳೆಂದು ಹೇಳುತ್ತೇವೆ. ಇನ್ನೊಂದು ಮಾದರಿಯ ಕೃತಿಗಳು ಪ್ರಾಕೃತ ಗದ್ಯದಲ್ಲಿ ಯಾವುದಾದರೊಂದು ವ್ಯಕ್ತಿಯ ಚರಿತ್ರೆಯನ್ನು ವಿವರಿಸುತ್ತವೆ. ಇನ್ನು ಮೂರನೆಯ ಪ್ರಕಾರದ ಗ್ರಂಥಗಳು ಬಹುತರ ಕಥಾಕೋಶಗಳೆನಿಸುತ್ತವೆ. ಇವುಗಳಲ್ಲಿ ಕೆಲವು ಪದ್ಯಗಳಿಂದಲೂ ಇನ್ನುಳಿದುವು ಗದ್ಯ–ಪದ್ಯ ಮಿಶ್ರಿತವಾಗಿಯೂ ಸಂಗ್ರಹ ರೂಪದಲ್ಲಿ ಧಾರ್ಮಿಕ ಸ್ತ್ರೀ–ಪುರುಷರ ಚರಿತ್ರೆಗಳನ್ನು ವರ್ಣಿಸಲಾಗಿದೆ.

ಎಲ್ಲಕ್ಕೂ ಹೆಚ್ಚು ಪ್ರಾಚೀನ ಪ್ರಾಕೃತ ಕಾವ್ಯವು ಪಾದಲಿಪ್ತಸೂರಿ ಕೃತ **ತರಂಗವತೀಕಥಾ** ಎಂಬುದಾಗಿದೆ. ಇದರ ಉಲ್ಲೇಖವು ಅನುಯೋಗದ್ವಾರಸೂತ್ರ, ಕುವಲಯಮಾಲಾ, ತಿಲಕಮಂಜರೀ ಮೊದಲಾದ ಪ್ರಾಚೀನ ಗ್ರಂಥಗಳಲ್ಲಿ ಲಭಿಸುತ್ತದೆ. 'ವಿಸೇಸನಿಸೀಹ ಚೂರ್ಣಿ'ಯಲ್ಲಿ ನರವಾಹನದತ್ತನ ಕಥೆಯನ್ನು ಲೌಕಿಕವೆಂದು ಹೇಳಿದೆ ; **ತರಂಗವತೀ** ಮತ್ತು **ಮಗಧಸೇನಾ** ಮೊದಲಾದ ಕಥೆಗಳನ್ನು ಲೋಕೋತ್ತರವೆಂದು ಸಾರಿದೆ. ಹಾಲಕೃತ ಗಾಧಾ-ಸಪ್ತಶತಿಯಲ್ಲಿ ಪಾದಲಿಪ್ತಕೃತ ಗಾಥೆಗಳ ಸಂಕಲನವು ಕಂಡುಬರುತ್ತದೆ. ಪ್ರಭಾಚಂದ್ರಕೃತ ಪ್ರಭಾವಕ ಚರಿತ್ರದಲ್ಲಿ (೧೩ನೆಯ ಶತಮಾನ) ಪಾದಲಿಪ್ತಸೂರಿಯ ಜೀವನವೃತ್ತವನ್ನು ಕೊಟ್ಟಿದೆ. ಅದರಲ್ಲಿ ಅವನ ವಿದ್ಯಾಧರ ಕುಲ ಹಾಗೂ ನಾಗಹಸ್ತಿ ಗುರುವಿನ ಉಲ್ಲೇಖವಿದೆ. ಈ ಉಲ್ಲೇಖಗಳಿಂದ ಈ ಗ್ರಂಥದ ಕಾಲವು ಕ್ರಿ.ಶ. ೫೦೦ಕ್ಕೂ ಮುಂಚಿನದೆಂದು ಸಿದ್ಧವಾಗುತ್ತದೆ. ದುರ್ಭಾಗ್ಯದಿಂದ ಈ ಗ್ರಂಥವು ಇನ್ನೂವರೆಗೆ ದೊರೆತಿಲ್ಲ. ಆದರೂ ಸುಮಾರು ಹದಿನೈದನೆಯ ಶತಮಾನದಲ್ಲಿ ವೀರಭದ್ರನ ಶಿಷ್ಯನಾದ ನೇಮಿಚಂದ್ರನು ಇದನ್ನು ಸಂಗ್ರಹಿಸಿ **ತರಂಗಲೋಲಾ** ಎಂಬ ಹೆಸರಿನಿಂದ ೧೬೪೩ ಗಾಹೆಗಳಲ್ಲಿ ನಮಗೆ ನೀಡಿದ್ದಾನೆ. ಅದು ಪ್ರಕಟವೂ ಆಗಿದೆ (ನೇಮಿ ವಿಜ್ಞಾನ ಗ್ರಂಥಮಾಲಾ, ವಿ.ಸಂ. ೨೦೦೦). ಇದರ ಅನುವಾದಗಳು ಜರ್ಮನ್ ಭಾಷೆಯಲ್ಲಿ ಪ್ರಾಧ್ಯಾಪಕ ಲಾಯಮನ್‌ರಿಂದಲೂ, ಗುಜರಾಥಿಯಲ್ಲಿ ನರಸಿಂಹಭಾಯಿ ಪಟೇಲ್‌ರಿಂದಲೂ ಆಗಿದ್ದು, ಪ್ರಕಟವೂ ಆಗಿವೆ. ತರಂಗಲೋಲಾಕಾರನು ತರಂಗವತೀ ಕಥೆಯು ದೇಶೀವಚನಾತ್ಮಕ, ಬಹು ವಿಸ್ತೃತ ಮತ್ತು ವಿಚಿತ್ರವಾಗಿದೆಯೆಂದೂ ಅದರಲ್ಲಿ ಸುಂದರ ಕುಲಕಗಳ ಕೆಲವೊಂದು ಗಹನಯುಗಲ, ಕೆಲವೆಡೆಗಳಲ್ಲಿ ದುರ್ಗಮ ಷಟ್‌ಕಲಗಳ ಪ್ರಯೋಗವಾಗಿದೆಯೆಂದೂ ಸ್ಪಷ್ಟವಾಗಿ ಹೇಳಿದ್ದಾನೆ. ಅದು ವಿದ್ವಾಂಸರಿಗೇನೇ ಯೋಗ್ಯವಾಗಿತ್ತು. ಜನಸಾಮಾನ್ಯರು ಅದರ ಲಾಭವನ್ನು ಹೊಂದುತ್ತಿರಲಿಲ್ಲ. ಅದರಿಂದ ಆ ಕೃತಿಯನ್ನು ಸಂಗ್ರಹರೂಪದಲ್ಲಿ ಇಲ್ಲಿ ಪ್ರಸ್ತುತಗೊಳಿಸಲಾಗಿದೆ. ಇದರಿಂದ ಅದರೊಳಗಿನ ಕಥೆಗಳಿಗೆ ಕುಂದುಂಟಾಗದಂತೆ ನೋಡಿಕೊಳ್ಳಲಾಗಿದೆ. ಈ ಕಥೆಯಲ್ಲಿ ತರಂಗವತೀ ಎಂಬ ಹೆಸರಿನ ಸಾಧ್ವಿಯು ಭಿಕ್ಷೆಗಾಗಿ ನಗರದಲ್ಲಿ ಹೋಗಿರುತ್ತಾಳೆ. ಆಗ ಒಬ್ಬ ಶ್ರೇಷ್ಠಿಯ ಹೆಂಡತಿಯು ಅವಳ ರೂಪಿನಿಂದ

ಆಕರ್ಷಿತಳಾಗಿ ಆಕೆಯ ಜೀವನ ವೃತ್ತಾಂತವನ್ನು ಕೇಳಿದಳು. ಸಾಧ್ವಿಯು ಹೇಳಿದಳು : ನಾನು ಯುವತಿಯಾಗಿದ್ದೆ. ಆಗ ಒಂದು ಚಕೋರ ಪಕ್ಷಿಯನ್ನು ಕಂಡೆ. ಕೂಡಲೆ ನನಗೆ ಪೂರ್ವಭವದ ಸ್ಮರಣೆಯಾಯಿತು. ನಾನೂ ಹಿಂದಿನ ಭವದಲ್ಲಿ ಚಕ್ರವಾಕ ಪಕ್ಷಿಯಾಗಿದ್ದೆ. ನನ್ನ ಪ್ರಿಯಕರನೊಡನೆ ಗಂಗಾನದಿಯ ತೀರದಲ್ಲಿ ಕ್ರೀಡಿಸುತ್ತಿದ್ದೆ. ಆಗ ನನ್ನ ಪತಿಯು ಬೇಡನೊಬ್ಬನ ಬಾಣದಿಂದ ಹತನಾದನು. ಕೂಡಲೇ ನಾನೂ ಪ್ರಾಣತ್ಯಾಗ ಮಾಡಿದೆನು. ಈಗ ಈ ಭವವನ್ನು ಹೊಂದಿದೆನು. ಈ ಜಾತಿಸ್ಮರಣವಾದ ಮೇಲೆ ನಾನು ನನ್ನ ಪೂರ್ವಭವದ ವೃತ್ತಾಂತವನ್ನು ಚಿತ್ರಪಟ ರೂಪದಿಂದ ಬರೆದು, ಕೌಮುದೀ ಮಹೋತ್ಸವದ ಸಂದರ್ಭದಲ್ಲಿ ಕೌಶಾಂಬಿನಗರದ ನಾಲ್ಕು ಕಡೆಯಿಂದ ರಾಜಮಾರ್ಗಗಳು ಕೂಡುವೆಡೆಯಲ್ಲಿ ಇಡಿಸಿದೆ. ಇದನ್ನು ನೋಡಿ ಒಬ್ಬ ಶ್ರೇಷ್ಠಿಯ ಮಗನಾದ ಪದ್ಮದೇವನಿಗೂ ತನ್ನ ಪೂರ್ವಭವದ ಸ್ಮರಣೆಯುಂಟಾಯಿತು. ಅದರಿಂದ ನಮ್ಮಿಬ್ಬರ ಪ್ರೇಮವೂ ಬೆಳೆಯಿತು. ಆದರೆ ನನ್ನ ತಂದೆಯು ಆ ಯುವಕನೊಡನೆ ನನ್ನ ಲಗ್ನವನ್ನು ಮಾಡಲಿಲ್ಲ; ಯಾಕೆಂದರೆ ಆತನು ಸಂಪೂರ್ಣ ಶ್ರೀಮಂತನಾಗಿರಲಿಲ್ಲ. ಆಗ ನಾವಿಬ್ಬರೂ ಒಂದು ಇರುಳು ನಾವಿನಲ್ಲಿ ಕುಳಿತು, ಅಲ್ಲಿಂದೆ ಓಡಿಹೋದೆವು. ತಿರುಗುತ್ತಿದ್ದ ನಾವು ಒಂದು ಕಳ್ಳರ ತಂಡದಲ್ಲಿ ಸಿಕ್ಕುಬಿದ್ದೆವು. ಆ ದರೋಡೆಗಾರರು ಕಾತ್ಯಾಯನಿಯ ಎದುರಿನಲ್ಲಿ ನಮ್ಮನ್ನು ಬಲಿಕೊಡಬೇಕೆಂದು ಇಚ್ಛಿಸಿದರು. ಆದರೆ ನನ್ನ ದುಃಖದಿಂದ ಮನಕರಗಿ ಆ ಕಳ್ಳರ ಗುಂಪಿನ ಮುಖ್ಯಸ್ಥನು ನಮ್ಮನ್ನು ಬಿಟ್ಟುಬಿಟ್ಟನು. ನಾವು ಕೌಶಾಂಬಿಗೆ ತಿರುಗಿ ಬಂದೆವು ; ವೈಭವದಿಂದ ನಮ್ಮ ವಿವಾಹವು ಆಯಿತು. ಕೆಲವೊಂದು ಕಾಲವುರುಳಿತು. ನಾನು ಚಂದನ ಮಾತೆಯ ಶಿಷ್ಯೆಯಾದೆ. ಅವಳ ಜೊತೆಯಲ್ಲಿಯೇ ವಿಹರಿಸಹತ್ತಿದೆ. ಈಗ ಇಲ್ಲಿ ಬಂದು ತಲುಪಿದೆ. ಈ ಜೀವನ ವೃತ್ತಾಂತದಿಂದ ಪ್ರಭಾವಿತಳಾಗಿ ಆ ಶ್ರೇಷ್ಠಿಯ ಸತಿಯೂ ಸಹ ಶ್ರಾವಕ-ವ್ರತವನ್ನು ಸ್ವೀಕರಿಸಿದಳು. ಈ ಕಥಾನಕದ ಅನೇಕ ಘಟನೆಗಳು ಸುಬಂಧು, ಬಾಣ ಮೊದಲಾದ ಸಂಸ್ಕೃತ ಕವಿಗಳ ಕಾವ್ಯಗಳನ್ನು ಹೋಲುತ್ತವೆ. ನರಬಲಿಯ ಪ್ರಸಂಗವಂತೂ ಭವಭೂತಿಯ ಮಾಲತಿ ಮಾಧವದಲ್ಲಿ ಬರುವ ಪ್ರಸಂಗಕ್ಕೆ ಬಹಳಷ್ಟು ಹೊಂದುತ್ತದೆ.

ಹರಿಭದ್ರಸೂರಿಕೃತ (೮ನೆಯ ಶತಮಾನ) ಧೂರ್ತಾಖ್ಯಾನದಲ್ಲಿ ೪೮೫ ಗಾಥೆಗಳು ಇವೆ. ಇದು ಐದು ಆಖ್ಯಾನಗಳಲ್ಲಿ ವಿಭಾಗಿಸಲ್ಪಟ್ಟಿದೆ. ಉಜ್ಜಯಿನಿಯ ಸಮೀಪದಲ್ಲಿ ಒಂದು ಉದ್ಯಾನವಿತ್ತು. ಅದರಲ್ಲಿ ಒಮ್ಮೆ ಧೂರ್ತಜನರ ಐದು ಗುಂಪುಗಳು ಅಕಸ್ಮಿಕವಾಗಿ ಬಂದು ಸಹಜವೇ ಕೂಡಿದವು. ಮಳೆಯಂತೂ ಒಂದೇಸವನೆ ಸುರಿಯುತಲಿತ್ತು. ತಿನ್ನುಣ್ಣುವ ವ್ಯವಸ್ಥೆ ಮಾಡಿಕೊಳ್ಳುವುದು ಬಹು ಕಠಿಣವಾಗಿತ್ತು. ಐದೂ ತಂಡಗಳ ನಾಯಕರು ಒತ್ತಟ್ಟಿಗೆ ಸೇರಿದರು. ಅವರಲ್ಲಿ ಒಬ್ಬನಾದ ಮೂಲದೇವನು ಹೀಗೆ ಪ್ರಸ್ತಾಪಿಸಿದನು. ನಾವು ಪ್ರತಿಯೊಬ್ಬರೂ ನಮ್ಮ ನಮ್ಮ ಅನುಭವಗಳನ್ನು ಕಥನ ರೂಪದಲ್ಲಿ ಈಗ ವಿವರಿಸೋಣ. ಅದನ್ನು ಕೇಳಿ ಎರಡನೆಯವನು ತನ್ನ ಕಥಾನಕದಿಂದ ಅದು ಸಂಭವನೀಯವೆಂದು ಸಿದ್ಧ ಮಾಡಲಿ. ಯಾರಾದರೊಬ್ಬರಿಗೆ ಹಾಗೆ

ಮಾಡಲು ಸಾಧ್ಯವಾಗದೆ ಹೋದರೆ ಇಲ್ಲವೆ ಆಖ್ಯಾನವೇ ಅಸಂಭವವೆಂದು ಸಾಧಿಸಿದರೆ ಅವನೇ ಆ ದಿನದ ಸಮಸ್ತ ಧೂರ್ತರ ಊಟದ ವೆಚ್ಚವನ್ನು ವಹಿಸಿಕೊಳ್ಳಬೇಕು. ಮೂಲ ದೇವ, ಕಂಡರೀಕ, ಏಲಾಷಾಢ ಮತ್ತು ಶಶ ಎಂಬ ಹೆಸರಿನ ಧೂರ್ತ ರಾಜರು ತಮ್ಮ ತಮ್ಮ ಅಸಾಧಾರಣ ಅನುಭವಗಳನ್ನು ನಿರೂಪಿಸಿದರು. ಅವುಗಳಿಗೆ ಸಮಾಧಾನಗಳನ್ನು ಪುರಾಣಗಳ ಅಲೌಕಿಕ ವೃತ್ತಾಂತಗಳಿಂದ ಎರಡನೆಯವರು ಸೂಚಿಸಿದರು. ಐದನೆಯ ವೃತ್ತಾಂತವನ್ನು ಖಂಡಪಾನಾ ಎಂಬ ಧೂರ್ತಿಯು ಹೇಳಿದಳು. ಅವಳು ಅದರಲ್ಲಿ ಹಲವಾರು ಅಸಂಭವ ಘಟನೆಗಳನ್ನು ನಿರೂಪಿಸಿದಳು. ಅವುಗಳ ಸಮಾಧಾನವನ್ನು ಆ ಧೂರ್ತರು ಪೌರಾಣಿಕ ವೃತ್ತಾಂತಗಳಿಂದ ಮಾಡಿದರು. ಆದರೆ ಖಂಡಪಾನಾ ಇವಳು ಹೀಗೆ ಹೇಳಿದಳು :— 'ಇವರು ನನ್ನನ್ನು ಒಡತಿಯೆಂದು ಸ್ವೀಕರಿಸಲಿ ; ಅಂದರೆ ಅವಳು ಊಟದ ವ್ಯವಸ್ಥೆಯನ್ನೂ ಮಾಡಿಯಾಳು, ಆವರು ಸೋಲಿನಿಂದಲೂ ಉಳಿದಾರು , ಆದರೆ ಅವರು ವಿಜಯದ ಉನ್ಮಾದದಿಂದ ಈ ಸೂಚನೆಯನ್ನು ಸ್ವೀಕರಿ ಸಲಿಲ್ಲ. ಇಷ್ಟೇ ಅಲ್ಲ, ತಮ್ಮ ಅಂತಿಮ ಆಖ್ಯಾನವನ್ನು ಹೇಳುವುದಕ್ಕೆ ಆಯ್ಕೆಯನ್ನು ಮಾಡಿದರು. ಖಂಡಪಾನಳು ಸಮಯ ಸಾಧಿಸಿ ನುಡಿದಳು:–'ನನ್ನ ವಸ್ತ್ರವು ಹವೆಯಲ್ಲಿ ಹಾರಿ ಹೋಗಿತ್ತಷ್ಟೆ. ಅದನ್ನು ತರಲು ನಾಲ್ಕು ಜನ ಸೇವಕರು ಓಡಿಹೋಗಿದ್ದರು. ಇಂದು ಅದರ ಗುರುತು ಸಿಕ್ಕಿತು. ನೀವು ನಾಲ್ವರೂ ನನ್ನ ಸೇವಕರಾಗಿದ್ದಿರಿ. ಮತ್ತು ನನ್ನ ಆ ವಸ್ತ್ರವನ್ನು ಧರಿಸಿದ್ದೀರಿ. ಇದು ಸತ್ಯವಿದ್ದರೆ ನನ್ನ ಸೇವಕತನವನ್ನು ಸ್ವೀಕರಿಸಿರಿ. ಇದು ಅಸತ್ಯವಿದ್ದರೆ ನಮ್ಮೆಲ್ಲರ ಊಟದ ವ್ಯವಸ್ಥೆಯನ್ನು ಮಾಡಿರಿ. ಆಗ ಎಲ್ಲ ಧೂರ್ತರೂ ಅವಳನ್ನು ತಮ್ಮ ಪ್ರಧಾನ ನಾಯಕಳೆಂದು ಒಪ್ಪಿಕೊಂಡರು. ಅವಳು ಸ್ವತಃ ಎಲ್ಲರ ಊಟದ ವ್ಯವಸ್ಥೆಯನ್ನು ಮಾಡಲು ಒಪ್ಪಿಕೊಂಡಳು. ತರುವಾಯ ಅವಳು ಸ್ಮಶಾನಕ್ಕೆ ಹೋದಳು. ಅಲ್ಲಿಂದ ಅದೇ ಮೃತಪಟ್ಟ ಬಾಲಕನ ಶವವೊಂದನ್ನು ತಕ್ಕೊಂಡು ಊರಲ್ಲಿ ತೆರಳಿದಳು. ಒಬ್ಬ ಶ್ರೀಮಂತನಾದ ಶ್ರೇಷ್ಠಿಯ ಮನೆಗೆ ಹೋಗಿ ಸಹಾಯವನ್ನು ಕೇಳಿದಳು. ಅದರಿಂದ ಅವನನ್ನು ಉತ್ತೇಜಿತಗೊಳಿಸಿದಳು. ಆಗ ಶ್ರೇಷ್ಠಿಯ ನೌಕರರು ಇವಳನ್ನು ಥಳಿಸಿದರು. ಕೂಡಲೇ ತನ್ನ ಬಾಲಕನನ್ನು ಅವರು ಕೊಂದರೆಂದು ಕೂಗಿ ಕೂಗಿ ಅಳಹತ್ತಿದಳು. ಅದರಿಂದ ಶ್ರೇಷ್ಠಿಯು ಗಾಬರಿಯಾಗಿ, ಆ ಧೂರ್ತಳಿಗೆ ಧನವನ್ನು ಕೊಟ್ಟು ಸಮಾಧಾನ ಮಾಡಿ ಕಳಿಸಿದನು. ಆ ಧನದಿಂದ ಖಂಡಪಾನಳು ಎಲ್ಲ ಧೂರ್ತರ ಆಹಾರದ ವ್ಯವಸ್ಥೆಯನ್ನು ಮಾಡಿದಳು. ಈ ಕೃತಿಯು ಭಾರತೀಯ ಸಾಹಿತ್ಯದಲ್ಲಿ ಆ ಮಾದರಿಯಲ್ಲಿ ಅದ್ವಿತೀಯ ಕೃತಿಯಾಗಿದೆ. ಪುರಾಣಗಳ ಅತಿರಂಜಿತ ಘಟನೆಗಳನ್ನು ವ್ಯಂಗ್ಯಾತ್ಮಕ ರೀತಿಯಿಂದ ಇದರಲ್ಲಿ ವಿಮರ್ಶಿಸಲಾಗಿದೆ. ಇದನ್ನನುಕರಿಸಿ, ಅಪಭ್ರಂಶ ಭಾಷೆಯಲ್ಲಿ ಹರಿಷೇಣನು ಮತ್ತು ಶ್ರುತಕೀರ್ತಿಯು ಸಂಸ್ಕೃತದಲ್ಲಿ ಅಮಿತಗತಿ ಇವರು 'ಧರ್ಮಪರೀಕ್ಷಾ' ಎಂಬ ಹೆಸರಿನ ಗ್ರಂಥಗಳನ್ನು ರಚಿಸಿದ್ದಾರೆ (ಪ್ರಕಾಶನ, ಮುಂಬಯಿ ೧೯೪೨).

ಜಿನೇಶ್ವರಸೂರಿಯ ಶಿಷ್ಯನಾದ ಧನೇಶ್ವರ ಸೂರಿಕೃತ 'ಸುರಸುಂದರೀ ಚರಿ

ಯಂ' ಎಂಬುದು ೧೬ ಪರಿಚ್ಛೇದಗಳ ಗ್ರಂಥವು. ಇದು ೪೦೦೦ ಗಾಹೆಗಳಲ್ಲಿ ಪೂರ್ಣ ಗೊಂಡಿದೆ. ಇದರ ರಚನೆಯು ಚಂದ್ರಾವತೀ ನಗರದಲ್ಲಿ ವಿ. ಸಂ. ೧೦೯೫ ರಲ್ಲಿ ಆಯಿತು. ಸುರಸುಂದರಿಯು ಕುಶಾಗ್ರಪುರದ ರಾಜನಾದ ನರವಾಹನದತ್ತನ ಪುತ್ರಿಯು. ಅವಳು ಓದು-ಬರೆಹ ಕಲಿತು ಬಹು ದೊಡ್ಡ ವಿದುಷಿಯಾದ ಯುವತಿಯಾದಳು. ಬುದ್ಧಿಲಾ ಎಂಬ ಹೆಸರಿನ ಪರಿವ್ರಾಜಿಕೆಯು ಅವಳಿಗೆ ನಾಸ್ತಿಕತೆಯ ವಾರವನ್ನು ಕೊಡಲು ಹವಣಿಸಿದಳು, ಆದರೆ ಸುರಸುಂದರಿಯು ತರ್ಕದಿಂದ ಸೋತಳು, ಮತ್ತು ಸಿಟ್ಟಾಗಿ ತೆರಳಿ ದಳು. ಮುಂದೆ ಅವಳು ಉಜ್ಜಯಿನಿಯ ರಾಜನಾದ ಶತ್ರುಂಜಯನಿಗೆ ಅವಳ ಚಿತ್ರಪಟ ವನ್ನು ತೋರಿಸಿ, ಮೋಹಗೊಳ್ಳುವಂತೆ ಮಾಡಿದಳು. ಶತ್ರುಂಜಯನು ಸುರಸುಂದರಿಯ ತಂದೆಯ ಹತ್ತರ ವಿವಾಹದ ಬೇಡಿಕೆಯನ್ನು ಇತ್ತನು. ಅದು ಅಸ್ವೀಕಾರವಾಯಿತು. ಈ ಕಾರಣದಿಂದ ಆ ಇಬ್ಬರೂ ರಾಜರಲ್ಲಿ ಯುದ್ಧ ಪ್ರಸಂಗವು ಉಂಟಾಯಿತು. ಈ ಮಧ್ಯದಲ್ಲಿ ವೈತಾಢ್ಯ ಪರ್ವತದ ಖೇಚರನೊಬ್ಬನು ಸುರಸುಂದರಿಯನ್ನು ಅಪಹರಿಸಿ ದನು ; ಅವಳನ್ನೊಯ್ದು ಕದಳೀಗೃಹದಲ್ಲಿಟ್ಟನು. ಸುರಸುಂದರಿಯು ಆತ್ಮಘಾತದ ವಿಚಾರದಿಂದ ವಿಷ ಫಲವನ್ನು ಸೇವಿಸಿದಳು. ದೈವಯೋಗದಿಂದ ಇದೇ ಕಾಲದಲ್ಲಿ ಅವಳ ನಿಜವಾದ ಪ್ರೇಮಿಯಾದ ಮಕರಕೇತುವು ಅಲ್ಲಿ ಬಂದು ತಲುಪಿದನು ; ಹಾಗೂ ಅವಳನ್ನು ರಕ್ಷಿಸಿದನು. ಅಲ್ಲದೆ ಅಲ್ಲಿಂದ ಅವನು ಹೋಗಿ ಶತ್ರುಂಜಯನ ವಧೆಯನ್ನೂ ನಹ ಮಾಡಿದನು. ಆದರೆ ಒಬ್ಬ ವಿದ್ಯಾಧರ ವೈರಿಯು ಸ್ವತಃ ಅವನನ್ನೇ ಅಪಹರಿಸಿದನು. ಬಹಳ ತೊಂದರೆಗಳನ್ನು ನೀಗಿದ ಮೇಲೆ, ಅನೇಕ ಘಟನೆಗಳ ತರುವಾಯ ಸುರಸುಂದರಿ ಹಾಗೂ ಮಕರಕೇತುಗಳ ಪುನರ್ ಮೀಲನ ಮತ್ತು ವಿವಾಹಗಳು ಜರುಗಿದುವು. ಅವರಿಬ್ಬರೂ ದೀರ್ಘಕಾಲದ ವರೆಗೆ ರಾಜ್ಯ ಸುಖವನ್ನು ಭೋಗಿಸಿ ದೀಕ್ಷೆಯನ್ನು ತಕ್ಕೊಂಡರು. ಕೊನೆಗೆ ಕೇವಲ ಜ್ಞಾನವನ್ನು ಪಡೆದು, ಮೋಕ್ಷವನ್ನು ಸಂಪಾದಿಸಿದರು. ನಿಜವಾಗಿಯೂ ನಾಯಿಕೆಯ ಹೆಸರು ಹಾಗೂ ವೃತ್ತಾಂತಗಳು ೧೧ನೆಯ ಪರಿಚ್ಛೇದ ದಿಂದ ಪ್ರಾರಂಭವಾಗುತ್ತವೆ. ಇದಕ್ಕೂ ಪೂರ್ವದಲ್ಲಿ ಹಸ್ತಿನಾಪುರದ ಶ್ರೇಷ್ಠಿಯಾದ ಧನದತ್ತನ ಘಟನಾಪೂರ್ಣ ವೃತ್ತಾಂತವು ಬಂದಿದೆ. ಅದರ ಕೊನೆಯಲ್ಲಿ ಶ್ರೀದತ್ತ ಳೊಡನೆ ಅವನ ವಿವಾಹದ ಕಥನವಿದೆ. ಇದೇ ಘಟನಾ ಚಕ್ರದ ಮಧ್ಯದಲ್ಲಿ ವಿದ್ಯಾಧರ ಚಿತ್ರವೇಗ ಮತ್ತು ಕನಕಮಾಲಾ; ಹಾಗೂ ಚಿತ್ರಗತಿ ಮತ್ತು ಪ್ರಿಯಂಗುಮಂಜರಿ ಇವರ ಪ್ರೇಮಾಖ್ಯಾನಗಳು ಸಮಾವೇಶವಾಗಿವೆ. ಬಹುತರ ಸಂಪೂರ್ಣ ರಚನೆಯು ಗಾಥಾ ಛಂದದಲ್ಲಿದೆ. ಆದರೆ ಅಲ್ಲಲ್ಲಿ ವಿವಿಧ ಛಂದಗಳ ಪ್ರಯೋಗವೂ ಇಲ್ಲದಿಲ್ಲ. ಕವಿಯು ಪ್ರತಿಭಾವಂತನು. ಸಮಗ್ರ ರಚನೆಯು ಬಹು ಸರಸವಾಗಿದೆ ; ಭಾವಪೂರ್ಣ ವರ್ಣನೆಗಳಿಂದ ತುಂಬಿದೆ. ಪ್ರಕೃತಿ ವರ್ಣನೆಯ ದೃಶ್ಯದಳು, ಪುತ್ರಜನ್ಮ ವಿವಾಹಾದಿ ಉತ್ಸವಗಳು, ಪ್ರಾತಃಕಾಲ ಮತ್ತು ಸಾಯಂಕಾಲ, ವನ ಹಾಗೂ ಸರೋವರಗಳು ಇವೇ ಮೊದಲಾದವುಗಳ ವರ್ಣನೆಗಳು ಕಲಾಪೂರ್ಣವಾಗಿವೆ, ರೋಚಕವೂ ಆಗಿವೆ. ನೃತ್ಯವೇ ಮೊದಲಾದ ವರ್ಣನೆಗಳಲ್ಲಿ ಹರಿಭದ್ರನ ಸಮರಾದಿತ್ಯ ಕಥೆಯ ಪ್ರಭಾವವು

ಕಂಡುಬರುತ್ತದೆ.

ಮಹೇಶ್ವರ ಸೂರಿಕೃತ ' ಣಾಣ ಪಂಚಮೀ ಕಹಾ ' ಎಂಬ ಕಾವ್ಯದ ರಚನಾ ಕಾಲವು ಕ್ರಿ.ಶ. ೧೦೧೫ ಕ್ಕಿಂತಲೂ ಮುಂಚಿನದೆಂದು ಗೊತ್ತಾಗುತ್ತದೆ. ಈ ಗ್ರಂಥ ದಲ್ಲಿ ಸ್ವತಂತ್ರ ರೂಪದ ಹತ್ತು ಕಥೆಗಳಿವೆ. ಅವುಗಳ ಹೆಸರುಗಳು ಹೀಗಿವೆ :—(೧) ಜಯಸೇನ, (೨) ನಂದ, (೩), ಭದ್ರಾ, (೪) ವೀರ, (೫) ಕಮಲ, (೬) ಗುಣಾನು ರಾಗ, (೭) ವಿಮಲ, (೮) ಧರಣ, (೯) ದೇವೀ ಮತ್ತು (೧೦) ಭವಿಷ್ಯದತ್ತ. ಇವು ಗಳಲ್ಲಿ ಮೊದಲನೆಯ ಹಾಗೂ ಕೊನೆಯ ಕಥೆಗಳು ಐದ್ನೈದು ನೂರು ಗಾಹೆಗಳಿಂದ ಕೂಡಿವೆ. ಉಳಿದವುಗಳು ಸಾಮಾನ್ಯವಾಗಿ ೧೨೫ ಗಾಹೆಗಳಲ್ಲಿ ಮುಗಿದಿವೆ. ಈ ಪ್ರಕಾರ ಈ ಕಾವ್ಯದ ಒಟ್ಟು ಗಾಹೆಗಳು ೨೦೦೦ ಆಗುತ್ತವೆ. ಈ ಹತ್ತೂ ಕಥೆಗಳು ಜ್ಞಾನ ಪಂಚಮೀ ವ್ರತದ ಮಹಾತ್ಮೆಯನ್ನು ವಿವರಿಸಲೆಂದೇ ಬರೆದವುಗಳಾಗಿವೆ. ಕಥೆಗಳು ಬಹು ಸುಂದರ, ಸರಳ ಮತ್ತು ಧಾರಾವಾಹಿ ರೀತಿಯಲ್ಲಿ ಇವೆ. ಅಲ್ಲಲ್ಲಿ ವಿವಿಧ ರಸ, ಭಾವ ಹಾಗೂ ಲೋಕೋಕ್ತಿಗಳ ಸಮಾವೇಶ ಮಾಡಲಾಗಿದೆ. ಇದರಿಂದ ಈ ಕೃತಿಯು ಉತ್ತಮ ಕಾವ್ಯವೆನಿಸುತ್ತದೆ.

ಹೇಮಚಂದ್ರ ಕೃತ 'ಕುಮಾರಪಾಲ-ಚರಿತ'ವು ಎಂಟು ಸರ್ಗಗಳಲ್ಲಿ ಪೂರ್ಣ ಗೊಂಡಿದೆ. ಹೇಮಚಂದ್ರನ ಜನ್ಮವು ವಿ. ಸಂ. ೧೧೪೫ ರಲ್ಲಿಯೂ ಸ್ವರ್ಗವಾಸವು ಸಂ. ೧೨೨೯ ರಲ್ಲಿಯೂ ಆಯಿತು. ಅದರಿಂದ ಈ ಕಾಲಾವಧಿಯಲ್ಲಿಯೇ ಈ ಕಾವ್ಯದ ರಚನೆಯಾಗಿದೆ. ಕುಮಾರಪಾಲನು ಹೇಮಚಂದ್ರನ ಕಾಲದಲ್ಲಿ ಗುಜರಾಥವನ್ನಾಳುವ ಚಾಲುಕ್ಯವಂಶದ ರಾಜನಾಗಿದ್ದನು ಆ ರಾಜನ ಪ್ರೋತ್ಸಾಹದಿಂದಲೇ ಈ ಕವಿಯು ತನ್ನ ಅನೇಕ ಕೃತಿಗಳನ್ನು ನಿರ್ಮಿಸಿದ್ದನು. ' ಕುಮಾರಪಾಲ-ಚರಿತ 'ವು ಅದರಲ್ಲೂ ಒಂದು ವಿಶಿಷ್ಟ ಸ್ಥಾನವನ್ನು ಹೊಂದಿದೆ. ಹೇಮಚಂದ್ರನು ತನ್ನದೇ ಆದ ಒಂದು ಮಹಾನ್ ಶಬ್ದಾನುಶಾಸನವನ್ನು ರಚಿಸಿದ್ದಾನೆ. ಇದರ ಮೊದಲನೆಯ ಏಳು ಅಧ್ಯಾಯಗಳಲ್ಲಿ ಸಂಸ್ಕೃತ ವ್ಯಾಕರಣವಿದೆ. ಕೊನೆಯ ಎಂಟನೆಯ ಅಧ್ಯಾಯದಲ್ಲಿ ಪ್ರಾಕೃತ ಭಾಷೆಯ ವ್ಯಾಕರಣವಿದೆ. ಇದೆಲ್ಲ ಸೂತ್ರರೂಪದಲ್ಲಿದ್ದು, ಅದಕ್ಕೆ ಸ್ವತಃ ವೃತ್ತಿಯನ್ನು ಸಹ ರಚಿಸಿ ವಿವರಿಸಿದ್ದಾನೆ. ಈ ವ್ಯಾಕರಣದ ನಿಯಮಗಳಿಗೆ ಉದಾ ಹರಣೆಗಳೆಂದೇ ಇಡೀ ಕುಮಾರಪಾಲ ಚರಿತದ ಪದ್ಯಗಳನ್ನು ಕ್ರಮದಿಂದ ಹೊಂದಿಸ ಲಾಗಿದೆ. ಒಂದೆಡೆಗೆ ಕುಮಾರಪಾಲ ರಾಜನ ವಂಶದ ಕಥನವೂ ಇದೆ. ಇನ್ನೊಂದು ದೃಷ್ಟಿಯಿಂದ ವ್ಯಾಕರಣದ ಎಲ್ಲ ಸೂತ್ರಗಳಿಗೂ ಈ ಎಲ್ಲ ಪದ್ಯಗಳು ಒಳ್ಳೆಯ ಉದಾ ಹರಣೆಗಳೂ ಆಗಿವೆ. ಸಂಪೂರ್ಣ ಗ್ರಂಥವು ಇಪ್ಪತ್ತೆಂಟು ಸರ್ಗಗಳಲ್ಲಿ ವಿಭಾಗಗೊಂಡಿದೆ. ಅವುಗಳಲ್ಲಿ ಮೊದಲಿನ ಇಪ್ಪತ್ತು ಸರ್ಗಗಳಲ್ಲಿ ಕುಮಾರಪಾಲನ ವಂಶ ಹಾಗೂ ಪೂರ್ವ ಜರ ಇತಿಹಾಸವಿದೆ. ಈ ಭಾಗವು ಸಂಸ್ಕೃತ ವ್ಯಾಕರಣಕ್ಕೆ ಉದಾಹರಣೆಯ ರೂಪ ದಲ್ಲಿದೆ. ಉಳಿದ ಎಂಟು ಸರ್ಗಗಳಲ್ಲಿ ಕುಮಾರಪಾಲನ ಚರಿತ್ರವಿದೆ. ಇದು ಪ್ರಾಕೃತ ವ್ಯಾಕರಣಕ್ಕೆ ಉದಾಹರಣೆಯಾಗಿದೆ. ಇದೇ ಭಾಗವು ಕುಮಾರಪಾಲ-ಚರಿತ್ರವೆಂಬ

ಹೆಸರಿನಿಂದ ಪ್ರಸಿದ್ಧವಿದೆ. ಇದರ ಮೊದಲಿನ ಆರು ಸರ್ಗಗಳೂ ಏಳನೆಯ ಸರ್ಗದ ೯೨ ನೆಯ ಗಾಹೆಯ ವರೆಗೆ ಪ್ರಾಕೃತ ವ್ಯಾಕರಣದ ಪ್ರಾರಂಭದಿಂದ ನಾಲ್ಕನೆಯ ಅಧ್ಯಾಯದ ೨೫೯ ಸೂತ್ರಗಳ ವರೆಗೆ ಪ್ರಾಕೃತ ಸಾಮಾನ್ಯಕ್ಕೆ ಉದಾಹರಣೆಗಳಾಗಿವೆ. ಮುಂದೆ ಎಂಟನೆಯ ಸರ್ಗದ ಐದನೆಯ ಗಾಹೆಯವರೆಗೆ ಮಾಗಧಿ, ೧೧ ರ ವರೆಗೆ ಪೈಶಾಚೀ, ೧೩ ರ ವರೆಗೆ ಚೂಲಿಕಾ ಪೈಶಾಚೀ, ಮತ್ತು ತರುವಾಯ ಸರ್ಗದ ಕೊನೆಯ ೮೩ ನೆಯ ಪದ್ಯದವರೆಗೆ ಅಪಭ್ರಂಶಕ್ಕೆ ಉದಾಹರಣೆಗಳನ್ನು ಕೊಡಲಾಗಿದೆ. ಕಥೆಯ ದೃಷ್ಟಿಯಿಂದ ಮೊದಲನೆಯ ಸರ್ಗದಲ್ಲಿ ಅನಹಿಲಪುರ ಹಾಗೂ ಕುಮಾರಪಾಲ ರಾಜನ ಪ್ರಾತಃಕ್ರಿಯೆಗಳ ವರ್ಣನೆಯಿದೆ. ಎರಡನೆಯ ಸರ್ಗದಲ್ಲಿ ರಾಜನ ವ್ಯಾಯಾಮ, ಆನೆಯನ್ನು ಹತ್ತುವಿಕೆ, ಜಿನಮಂದಿರಕ್ಕೆ ಹೋಗುವಿಕೆ, ಪೂಜೆ ಮತ್ತು ಮರಳಿ ಮನೆಗೆ ಬರುವಿಕೆ ಇವುಗಳ ವರ್ಣನೆಯು ಇದೆ. ಮೂರನೆಯ ಸರ್ಗದಲ್ಲಿ ವನಕ್ರೀಡೆ, ನಾಲ್ಕನೆಯದರಲ್ಲಿ ಗ್ರೀಷ್ಮ ಋತುವಿನ ವರ್ಣನೆಗಳು ಇವೆ. ಐದನೆಯ ಸರ್ಗದಲ್ಲಿ ಮಳೆಗಾಲ, ಚಳಿಗಾಲ ಮತ್ತು ಶಿಶಿರ ಋತುಗಳನ್ನು ವರ್ಣಿಸಲಾಗಿದೆ. ಆರನೆಯ ಸರ್ಗದಲ್ಲಿ ಚಂದ್ರೋದಯ, ಏಳನೆಯ ಸರ್ಗದಲ್ಲಿ ರಾಜನ ಸ್ವಪ್ನಗಳು ಮತ್ತು ಪರಮಾರ್ಥ-ಚಿಂತನ, ಎಂಟನೆಯ ಸರ್ಗದಲ್ಲಿ ಸರಸ್ವತೀದೇವಿಯಿಂದ ಉಪದೇಶವೀಯುವುದರ ವಿವರಗಳು ಬರುತ್ತವೆ. ಈ ಪ್ರಕಾರ ಕಾವ್ಯದಲ್ಲಿ ಕಥಾಭಾಗವು ಇಲ್ಲವೇನೋ ಎನ್ನುವಂತಿದೆ ಮೇಲೆ ಉಲ್ಲೇಖಿಸಿದ ವಿಷಯಗಳ ವರ್ಣನೆಗಳೇ ವಿಸ್ತಾರಪೂರ್ವಕವಾಗಿ ಬರುತ್ತವೆ. ಕಾವ್ಯ ಹಾಗೂ ವ್ಯಾಕರಣದ ಉದಾಹರಣೆಗಳನ್ನು ಒತ್ತಟ್ಟಿಗೆ ಸೇರಿಸಿ, ಪೂರ್ತಿಗೊಳಿಸುವುದು ಬಹು ದುಷ್ಕರ ಕಾರ್ಯವಾಗಿದೆ. ಈ ಕರಿನ ಕಾರ್ಯದಲ್ಲಿ ಕೆಲವೊಂದೆಡೆಯಲ್ಲಿ ಕೃತ್ರಿಮತೆಯೂ ನೀರಸತೆಯೂ ಉಂಟಾಗುವುದು ಸ್ವಾಭಾವಿಕವಾಗಿದೆ. ಆದರೆ ಅದನ್ನು ನಹ ಹೇಮಚಂದ್ರನು ತನ್ನ ಈ ಕೃತಿಯಲ್ಲಿ ಬಹು ಕುಶಲತೆಯಿಂದ ತೂಗಿಸಿಕೊಂಡು ಹೋಗಿದ್ದಾನೆ. ಇದಕ್ಕೆ ತುಲನೆಯೆಂದು ಸಂಸ್ಕೃತ ಸಾಹಿತ್ಯದಲ್ಲಿ ಭಟ್ಟೀಕಾವ್ಯವೊಂದನ್ನು ಮಾತ್ರ ಉಲ್ಲೇಖಿಸಬಹುದಾಗಿದೆ. ಅದರಲ್ಲಿ ಕಥೆಯ ಜೊತೆಗೆ ಪಾಣಿನೀಯ ವ್ಯಾಕರಣಕ್ಕೆ ಉದಾಹರಣೆಗಳನ್ನೂ ಸಹ ಕೊಡಲಾಗಿದೆ. ಆದರೆ ಅದರಲ್ಲಿ ಈ ಪೂರ್ಣತೆಯಾಗಲಿ, ಕ್ರಮಬದ್ಧತೆಯಾಗಲಿ—ಹೇಮಚಂದ್ರನ ಕೃತಿಯಲ್ಲಿ ದೊರೆಯುವಂತೆ—ಇಲ್ಲ. (ಪ್ರಕಾಶನ : ಪುಣೆ—೧೯೩೬).

ಪ್ರಾಕೃತದಲ್ಲಿ ಇನ್ನೂ ಒಂದು 'ಕುಮಾರಪಾಲ-ಚರಿತೆ'ವನ್ನು ಹರಿಶ್ಚಂದ್ರನು ರಚಿಸಿದುದುಂಟು. ಈ ಹರಿಶ್ಚಂದ್ರನು ಪೃಥ್ವೀ ಚಂದ್ರಸೂರಿಯ ಶಿಷ್ಯನು. ಇದರಲ್ಲಿ ೯೫೪ ಶ್ಲೋಕಗಳು ಇವೆ.

ವೀರದೇವ ಗಣಿಕೃತ 'ಮಹಿವಾಲ-ಕಹಾ' ಎಂಬುದು ೧೮೦೦ ಗಾಹೆಗಳಲ್ಲಿ ಪೂರ್ಣವಾಗಿದೆ. ಇದರ ಕೊನೆಯಲ್ಲಿ ಕವಿಯು ತನ್ನ ಪರಿಚಯವನ್ನು ಕೊಟ್ಟಿದ್ದಾನೆ. ಚಂದ್ರಗಚ್ಛದ ದೇವಭದ್ರಸೂರಿಯು ; ಅವನ ಶಿಷ್ಯನು ಸಿದ್ಧಸೇನಸೂರಿಯು ; ಇವನ ಶಿಷ್ಯನು ಮುನಿಚಂದ್ರಸೂರಿಯು ; ಈ ಮುನಿಚಂದ್ರನ ಶಿಷ್ಯನೇ ವೀರದೇವಗಣಿಯು.

ಇವನು ತನ್ನನ್ನು ಪಂಡಿತ-ತಿಲಕ ಎಂಬ ಉಪಾಧಿಯಿಂದ ಕರೆದುಕೊಂಡಿದ್ದಾನೆ. ಈ ಆಚಾರ್ಯ ಪರಂಪರೆಯ ಪೂರ್ಣ ಪರಿಚಯವು ಎಲ್ಲಿಯೂ ದೊರೆಯುವುದಿಲ್ಲ. ಆದರೆ ಒಂದು ಪ್ರತಿಮಾ ಲೇಖನದಲ್ಲಿ ದೇವಭದ್ರಸೂರಿಯ ಶಿಷ್ಯನಾದ ಸಿಂಹಸೇನ ಸೂರಿಯ ಉಲ್ಲೇಖವು ಬರುತ್ತದೆ. ಅದು ಸಂವತ್ಸರ ೧೨೧೩ ರ ಉಲ್ಲೇಖವಾಗಿದೆ (ಪಟ್ಟಾ. ಸಮು. ಪೃ. ೩೦೫). ಸಿಂಹಸೇನ ಮತ್ತು ಸಿದ್ಧಸೇನ ಎಂಬ ಹೆಸರುಗಳನ್ನು ಓದುವುದರಲ್ಲಿ ಭ್ರಾಂತಿಯು ಉತ್ಪನ್ನವಾಗಿರಲು ಸಾಕು. ಅವು ಒಂದೇ ವ್ಯಕ್ತಿಯ ಹೆಸರು ಇರುವ ಸಂಭವವಿದೆ. ಇದರ ಆಧಾರದ ಮೇಲೆ ಈ ಕೃತಿಯ ರಚನೆಯ ಕಾಲವು ಹನ್ನೆರಡನೆಯ ಶತಮಾನವೆಂದು ಅನುಮಾನಿಸಲಿಕ್ಕೆ ಬರುತ್ತದೆ. ಇದೇ ಗ್ರಂಥದ ಸಂಸ್ಕೃತ ರೂಪಾಂತರವು 'ಮಹೀಪಾಲ-ಚರಿತ್ರ' ಎಂದಿದೆ. ಅದನ್ನು ಚರಿತ್ರ ಸುಂದರನು ೧೫ ನೆಯ ಶತಮಾನದ ಮಧ್ಯ ಭಾಗದಲ್ಲಿ ರಚಿಸಿರಬೇಕೆಂದು ಊಹಿಸಲಾಗುತ್ತಿದೆ. ಉಜ್ಜಯಿನಿಯ ರಾಜನಾದ ನರಸಿಂಹನು ಜ್ಞಾನಿಯೂ ವಿನೋದಿಯೂ ಆದ ತನ್ನ ಮಿತ್ರ ಮಹೀಪಾಲನನ್ನು ರಾಜ್ಯದಿಂದ ಹೊರಗೆ ಹಾಕಿದ್ದನು. ಅದಕ್ಕೆ ಇರುವ ಕಾರಣವು ಇಷ್ಟೆ: ಮಹೀಪಾಲನು ತನ್ನ ಸಂಪೂರ್ಣ ಕಾಲವನ್ನೆಲ್ಲ ರಾಜನ ಸೇವೆಯಲ್ಲಿ ಕಳೆಯುತ್ತಿರಲಿಲ್ಲ. ಕೆಲವೊಂದು ಕಾಲವನ್ನು ಕಲೋಪಾಸನೆಗಾಗಿ ಮೀಸಲಾಗಿ ಇಟ್ಟಿದ್ದನು. ಅದಕ್ಕಾಗಿ ಬೇರೆಡೆಗೆ ಹೋಗುತ್ತಿದ್ದನು. ಹೀಗಾಗಿ ರಾಜನಿಂದ ನಾಡಿನ ಹೊರಗೆ ಹಾಕಲ್ಪಟ್ಟ ಮಹೀಪಾಲನು ವಿವಿಧ ದ್ವೀಪ ಹಾಗೂ ನಗರಗಳಲ್ಲಿ ವಿಹರಿಸಿದನು. ತನ್ನ ಕುಶಲತೆ, ವಿಜ್ಞಾನ ಚಾತುರ್ಯಗಳಿಂದ ಭಿನ್ನ ಭಿನ್ನ ರಾಜರನ್ನೂ ಶ್ರೇಷ್ಠಿಗಳನ್ನೂ ಪ್ರಸನ್ನಗೊಳಿಸಿದನು. ಅದರಿಂದ ತುಂಬ ಧನವನ್ನು ಸಂಪಾದಿಸಿದನು. ಅನೇಕ ಕನ್ಯೆಯರನ್ನು ಲಗ್ನವಾದನು. ತಿರುಗಿ ಊರಿಗೆ ಬಂದ ಮೇಲೆ ಅವನು ಪುನಃ ರಾಜನಿಗೆ ಪ್ರೀತಿ ಪಾತ್ರನಾದನು. ಕೊನೆಗೆ ಈ ಮಿತ್ರರಿಬ್ಬರೂ ಮುನಿಯ ಉಪದೇಶವನ್ನು ಕೇಳಿ, ವೈರಾಗ್ಯವನ್ನು ಹೊಂದಿದರು. ಸಂಪೂರ್ಣ ಕಥೆಯು ಗಾಥಾ ಛಂದದಲ್ಲಿದೆ. ಮಹೀಪಾಲನ ಕಲೆ ಹಾಗೂ ಚಾತುರ್ಯಗಳನ್ನು ವಿವರಿಸುವ ಅನೇಕ ಉಪಾಖ್ಯಾನಗಳೂ ಇವೆ. ಕಥಾ ಪ್ರಸಂಗವು ಬಹಳಷ್ಟಿಲ್ಲ. ಭಾಷೆಯು ಸರಳವೂ ಧಾರಾವಾಹಿಯೂ ಆಗಿದೆ. ಅಲಂಕಾರ ಹಾಗೂ ಸೂಕ್ತಿಗಳ ಪ್ರಯೋಗವೂ ಸಮುಚಿತವಾಗಿದೆ (ಪ್ರಕಾಶನ: ಅಹಮದಾಬಾದ, ವಿ. ಸಂ. ೧೯೯೮).

ದೇವೇಂದ್ರಸೂರಿ ಕೃತ 'ಸುದಂಸಣಾಚರಿಯಂ'ದ ಇನ್ನೊಂದು ಹೆಸರು 'ಶಕುನಿಕಾ-ವಿಹಾರ'ವೆಂದೂ ಇದೆ. ಕರ್ತೃವು ತನ್ನ ವಿಷಯಕ್ಕೆ ಹೇಳುತ್ತ ಚಿತ್ರಾವಾಲಕ ಗಚ್ಛದ ಭುವನಚಂದ್ರಗುರುವಿನ ಶಿಷ್ಯನಾದ ದೇವಭದ್ರಮುನಿಯ ಶಿಷ್ಯನೆನಿಸುವ ಜಗಚ್ಚಂದ್ರಸೂರಿಯ ಶಿಷ್ಯನು ತಾನೆಂದು ಸೂಚಿಸಿದ್ದಾನೆ. ಆತನ ಗುರು-ಬಂಧುವೊಬ್ಬನು ವಿಜಯಚಂದ್ರಸೂರಿ ಎಂಬವನೂ ಇದ್ದನು. ತಪಾಗಚ್ಛದ ಪಟ್ಟಾವಲಿಗೆ ಅನುಸರಿಸಿ ಮೇಲೆ ಹೇಳಿದ ದೇವಭದ್ರ ಮೊದಲಾದ ಮುನಿಗಳು ವಸ್ತುಪಾಲ ಮಂತ್ರಿಯ ಸಮ-ಕಾಲೀನರಿದ್ದರು. ವಿಕ್ರಮ ಸಂವತ್ಸರ ೧೩೦೩ ರಲ್ಲಿ ದೇವಭದ್ರಸೂರಿಯು ವಿದ್ಯಾ

ನಂದನಿಗೆ ಸೂರಿಪದವನ್ನು ಅರ್ಪಿಸಿದ್ದನು. ಅಂತೂ ಇದೇ ವರ್ಷದ ಸುಮಾರಿನಲ್ಲಿ ಪ್ರಸ್ತುತ ಗ್ರಂಥದ ರಚನಾಕಾಲವೆಂದು ಸಿದ್ಧವಾಗುತ್ತದೆ. ಈ ಕೃತಿಯಲ್ಲಿ ಹದಿನಾರು ಉದ್ದೇಶಗಳು ಇವೆ. ಇದರಲ್ಲಿ ಸ್ವತಃ ಗ್ರಂಥಕಾರನ ಮತಕ್ಕನುಸರಿಸಿ, ಸಮಸ್ತ ಗಾಹೆಗಳ ಸಂಖ್ಯೆಯು ೪೦೦೩ ಇದೆ; ಮತ್ತು ಧನಪಾಲ, ಸುದರ್ಶನ, ವಿಜಯಕುಮಾರ, ಶೀಲವತೀ, ಅಶ್ವಾವಬೋಧ, ಭ್ರಾತಾ, ಧಾತ್ರೀಸುತ ಮತ್ತು ಧಾತ್ರೀ, ಈ ಎಂಟು ಅಧಿಕಾರಗಳಿವೆ. ಸಿಂಹಲ ದ್ವೀಪದಲ್ಲಿರುವ ಶ್ರೀಪುರ ನಗರದ ರಾಜನಾದ ಚಂದ್ರಗುಪ್ತ ಮತ್ತು ರಾಣಿಯಾದ ಚಂದ್ರಲೇಖಾ ಇವರ ಪುತ್ರಿಯು ಸುದರ್ಶನಾ ಎಂಬುವಳು. ಅವಳು ಓದು–ಬರೆಹ ಕಲಿತು ಬಹು ಜಾಣೆಯೂ ಕಲಾವತಿಯೂ ಎಂದು ಹೆಸರನ್ನು ಪಡೆದಳು. ಒಂದು ಸಲ ಅವಳು ರಾಜಸಭೆಯಲ್ಲಿ ಜ್ಞಾನನಿಧಿ ಪುರೋಹಿತನ ಮತವನ್ನು ಖಂಡಿಸಿದಳು. ಧರ್ಮಭಾವನೆಯಿಂದ ಪ್ರೇರಿತಳಾಗಿ ಅವಳು ಭೃಗು ಕಚ್ಛದ ಯಾತ್ರೆಗೆಂದು ಬಂದಳು. ಅಲ್ಲಿ ಅವಳು ಮುನಿಸುವ್ರತ ತೀರ್ಥಂಕರರ ಮಂದಿರವನ್ನೂ ಶಕುನಿಕಾ ವಿಹಾರವೆಂಬ ಹೆಸರಿನ ಜಿನಾಲಯವನ್ನೂ ನಿರ್ಮಾಣಮಾಡಿಸಿದಳು. ಮತ್ತು ತನ್ನ ಉಳಿದ ಜೀವನವನ್ನೂ ಧರ್ಮ ಭಾವನೆಯಲ್ಲಿ ಕಳೆದಳು. ಸುದರ್ಶನಾಳ ಈ ಚರಿತ್ರವನ್ನು ಹಿರಣ್ಯಪುರದ ಶ್ರೇಷ್ಠಿಯಾದ ಧನಪಾಲನು ರೈವತಕ ಗಿರಿಯ ವಂದನೆಯಿಂದ ತಿರುಗಿ ಬಂದ ಮೇಲೆ ತನ್ನ ಪತ್ನಿಯಾದ ಧನಶ್ರೀಗೆ ಹೇಳಿದ್ದನು. ಅದನ್ನು ಅವನು ರೈವತಕ ಗಿರಿಯಲ್ಲಿ ಒಬ್ಬ ಕಿನ್ನರಿಯ ಮುಖದಿಂದ ಕೇಳಿದ್ದನು. ಕಥೆಯಲ್ಲಿ ಪ್ರಸಂಗಕ್ಕನುಸರಿಸಿ, ಸ್ತ್ರೀ-ಪುರುಷ ಹಾಗೂ ಅನ್ಯ ವಿವಿಧ ಘಟನೆಗಳನ್ನು ಮನೋಹರವಾಗಿ ವರ್ಣಿಸಲಾಗಿದೆ. ಹತ್ತನೆಯ ಉದ್ದೇಶದಲ್ಲಿ ಜ್ಞಾನ ಮತ್ತು ಚರಿತ್ರಗಳಿಗೆ ಉದಾಹರಣೆಯ ರೂಪದಲ್ಲಿ ಮರುದೇವಿಯ ಹಾಗೂ ಆಕೆಯ ಪುತ್ರನಾದ ಋಷಭ ಪ್ರಭುವಿನ ಚರಿತ್ರವನ್ನು ವರ್ಣಿಸಲಾಗಿದೆ. ಇದೇ ಪ್ರಕಾರ ವಿವಿಧ ಧಾರ್ಮಿಕ ನಿಯಮಗಳು ಹಾಗೂ ಅವುಗಳಿಗೆ ಆದರ್ಶ ದೃಷ್ಟಾಂತಗಳು ಇವೆಲ್ಲವುಗಳ ವರ್ಣನೆಯು ಕಥೆಯ ಮಧ್ಯದಲ್ಲಿ ಅಲ್ಲಲ್ಲಿ ಬಂದಿವೆ. ಎಲ್ಲೆಡೆಗೂ ಕವಿಯು ತನ್ನ ರಚನಾಚಾತುರ್ಯವನ್ನು ಪ್ರದರ್ಶಿಸಿದ್ದಾನೆ. ಹದಿನಾರನೆಯ ಉದ್ದೇಶದಲ್ಲಿ ಧನಪಾಲನು ನೇಮೀಶ್ವರನ ಸ್ತುತಿಯನ್ನು ಮೊದಲು ಸಂಸ್ಕೃತ ಗದ್ಯದಲ್ಲಿ ಮಾಡಿದ್ದಾನೆ; ಅದು ಸಮಾಸ ಪ್ರಚುರವಾಗಿದೆ. ಇನ್ನೊಂದು ಅಷ್ಟಕ ಸ್ತೋತ್ರವೂ ಇದೆ. ಅದರ ಒಂದು ಚರಣವು ಸಂಸ್ಕೃತದಲ್ಲಿಯೂ ಇನ್ನೊಂದು ಚರಣವು ಪ್ರಾಕೃತದಲ್ಲಿಯೂ ಇರುವಂತೆ ರಚಿಸಿದ್ದಾನೆ. ಶಿಕ್ಷಾತ್ಮಕ ಉಕ್ತಿಗಳೂ ಉಪಮೆಗಳೂ ಈ ಕೃತಿಯಲ್ಲಿ ಬಹಳಷ್ಟಿವೆ (ಪ್ರಕಾಶನ: ಅಹಮದಾಬಾದ, ವಿ. ಸಂ. ೧೯೮೯).

ದೇವೇಂದ್ರಸೂರಿಯು ರಚಿಸಿದ ಕೃಷ್ಣ ಚರಿತ್ರವು ೧೧೬೩ ಗಾಹೆಗಳ ಗ್ರಂಥವು. ಯಥಾರ್ಥವಾಗಿ ಈ ರಚನೆಯು ಕರ್ತೃವಿನ ಶ್ರಾದ್ಧದಿನ ಕೃತ್ಯ ಎಂಬ ಹೆಸರಿನ ಗ್ರಂಥದಲ್ಲಿ ದೃಷ್ಟಾಂತರೂಪದಿಂದ ಬರುವ ಭಾಗವಾಗಿದೆ; ಮತ್ತು ಅದನ್ನು ಅಲ್ಲಿಂದಲೇ ಉದ್ಧರಿಸಿ, ಸ್ವತಂತ್ರರೂಪದಿಂದ ಪ್ರಕಾಶಿತಗೊಳಿಸಲಾಗಿದೆ. (ರತನಪುರ, ಮಾಲವಾ,

೧೯೩೮). ಇದರಲ್ಲಿ ವಸುದೇವನ ಪೂರ್ವಭವದಿಂದ ಆರಂಭಿಸಿ, ಕ್ರಮದಿಂದ ವಸುದೇವನ ಜನ್ಮ, ಭ್ರಮಣ, ಕೃಷ್ಣ ಜನ್ಮ, ಕಂಸ-ವಧೆ, ದ್ವಾರಕಾ-ನಿರ್ಮಾಣ, ಪ್ರದ್ಯುಮ್ನ-ಹರಣ, ಪಾಂಡವ ಮತ್ತು ದ್ರೌಪದೀ, ಜರಾಸಂಧ-ಯುದ್ಧ, ನೇಮಿನಾಥ-ಚರಿತ್ರ, ದ್ರೌಪದೀ-ಹರಣ, ದ್ವಾರಕಾದಾಹ, ಬಲದೇವ-ದೀಕ್ಷಾ, ನೇಮಿನಿರ್ವಾಣ ಮತ್ತು ಕೃಷ್ಣನ ಭಾವೀ ತೀರ್ಥಂಕರತ್ವದ ವರ್ಣನೆಯನ್ನು ಮಾಡಲಾಗಿದೆ. ವಸುದೇವ-ಭ್ರಮಣದ ವೃತ್ತಾಂತದಲ್ಲಿ ಪ್ರಸಂಗವಶ ಚಾರುದತ್ತ ಮತ್ತು ವಸಂತಸೇನಾ ಇವರ ಉಲ್ಲೇಖವೂ ಸಹ ಬಂದಿದೆ. ಸಮಸಕಥೆಗೆ ಆಧಾರವು ವಸುದೇವಹಿಂಡೀ ಹಾಗೂ ಜಿನಸೇನ ಕೃತ ಹರಿವಂಶ ಪುರಾಣಗಳ ವಸ್ತುವು ಆಗಿದೆ. ರಚನೆಯ ರೀತಿಯು ಮೊದಲಿನಿಂದಲೂ ಕೊನೆಯ ವರೆಗೆ ಕಥಾ-ಪ್ರಧಾನವಾಗಿದೆ.

ರತ್ನಶೇಖರ ಸೂರಿ ಕೃತ ಶ್ರೀಪಾಲಚರಿತ್ರದಲ್ಲಿ ೧೩೪೨ ಗಾಹೆಗಳಿವೆ. ಗ್ರಂಥದ ಕೊನೆಯಲ್ಲಿ ಹೀಗೆ ಹೇಳಿದೆ: ಇದರ ಸಂಕಲನವನ್ನು ವಜ್ರಸೇನ ಗಣಧರನ ಪಟ್ಟ ಶಿಷ್ಯನೂ ಮತ್ತು ಪ್ರಭು ಹೇಮ ತಿಲಕಸೂರಿಯ ಶಿಷ್ಯನೂ ಆದ ರತ್ನಶೇಖರ ಸೂರಿಯು ಮಾಡಿದ್ದಾನೆ. ಅವನ ಶಿಷ್ಯನಾದ ಹೇಮಚಂದ್ರ ಸಾಧುವು ವಿ. ಸಂ. ೧೪೨೮ ರಲ್ಲಿ ಇದನ್ನು ಲಿಪಿಬದ್ಧಗೊಳಿಸಿದನು. ಈ ಕಥೆಯು ಸಿದ್ಧಚಕ್ರದ ಮಹಾತ್ಮೆಯನ್ನು ಪ್ರಕಟಗೊಳಿಸಲಿಕ್ಕೆಂದು ಬರೆಯಲ್ಪಟ್ಟಿದೆ. ಉಜ್ಜಯಿನಿಯ ರಾಜಕುಮಾರಿಯಾದ ಮದನ ಸುಂದರಿಯು ತನ್ನ ತಂದೆಯು ಕೊಟ್ಟ ಸಮಸ್ಯೆಯ ಪೂರ್ತಿಯಲ್ಲಿ ತನ್ನ ಭಾವಗಳನ್ನು ಇಂತು ಪ್ರಕಟಿಸಿದಳು : ಪ್ರತಿಯೊಬ್ಬರಿಗೂ ತಮ್ಮ ಪುಣ್ಯ-ಪಾಪಗಳಿಗೆ ಅನುಸರಿಸಿ ಸುಖ-ದುಃಖಗಳು ಪ್ರಾಪ್ತವಾಗುತ್ತವೆ. ಇದರಲ್ಲಿ ಅನ್ಯ ವ್ಯಕ್ತಿಗಳ ಕೈವಾಡವೇನೂ ನಡೆಯುವುದಿಲ್ಲ. ತಂದೆಯು ಮಗಳ ಈ ಮಾತಿನಿಂದ ತನ್ನ ವಿಷಯದಲ್ಲಿ ಆವಳ ಕೃತಘ್ನತಾ ಬುದ್ಧಿಯದೆಂದು ಭಾವಿಸಿದನು , ಕೆರಳಿದನು , ಮತ್ತು ಅವಳ ವಿವಾಹವನ್ನು ಕುಷ್ಟರೋಗಿಯೊಬ್ಬನೊಡನೆ ಮಾಡಿದನು. ಮದನ ಸುಂದರಿಯು ತನ್ನ ಪತಿ-ಭಕ್ತಿ ಹಾಗೂ ಸಿದ್ಧ-ಚಕ್ರ ಪೂಜೆಯ ಪ್ರಭಾವದಿಂದ ತನ್ನ ಪತಿಯ ಆರೋಗ್ಯವು ಸುಧಾರಿಸುವಂತೆ ಮಾಡಿದಳು. ಶ್ರೀಪಾಲನು ನಾನಾ ದೇಶಗಳನ್ನು ಸುತ್ತಿದನು ; ಬಹಳಷ್ಟು ಧನವನ್ನೂ ಯಶಸ್ಸನ್ನೂ ಸಂಪಾದಿಸಿದನು ಗ್ರಂಥದ ಮಧ್ಯದಲ್ಲಿ ಅಲ್ಲಲ್ಲಿ ಅಪಭ್ರಂಶ ಪದ್ಯಗಳೂ ಸಹ ಬಂದಿವೆ. ಅಲ್ಲದೆ ನಾನಾ ಗದ್ಯಹಾಗೂ ಛಂದಗಳಲ್ಲಿ ಸ್ತುತಿಗಳನ್ನು ನಿಬದ್ಧಗೊಳಿಸಲಾಗಿದೆ. ಕೃತಿಯು ಪ್ರಾರಂಭದಿಂದ ಕೊನೆಯವರೆಗೆ ಮನೋಹರವಾಗಿದೆ.

ಜಿನಮಾಣಿಕ್ಯ ಕೃತ 'ಕುಮ್ಮಾಪುತ್ತ ಚರಿಯಂ' ಎಂಬುದು ಚಿಕ್ಕ ಕಥೆಯಾಗಿದೆ. ಇದು ೧೮೫ ಗಾಹೆಗಳಲ್ಲಿ ಪೂರ್ಣಗೊಂಡಿದೆ. ಕವಿಯು ತನ್ನ ಗುರುವಿನ ಹೆಸರು ಹೇಮವಿಮಲನೆಂದು ಪ್ರಕಟಗೈದಿದ್ದಾನೆ ತಪಾಗಚ್ಛದ ಪಟ್ಟಾವಲಿಗೆ ಅನುಸರಿಸಿ ಅವನು ೧೬ನೆಯ ಶತಮಾನದಲ್ಲಿ ಆಗಿಹೋದಂತೆ ಕಂಡುಬರುತ್ತದೆ. ಮಹಾವೀರ ತೀರ್ಥಂಕರನು ತನ್ನ ಉಪದೇಶದಲ್ಲಿ ದಾನ, ತಪ, ಶೀಲ ಮತ್ತು ಭಾವನೆ ಈ ನಾಲ್ಕು ಧರ್ಮದ ಭೇದಗಳಲ್ಲಿ ಭಾವನಾಧರ್ಮದ ಆದರ್ಶ ಉದಾಹರಣೆಯೆಂದು ಕುಮ್ಮಾಪುತ್ತನ ಕಥೆಯನ್ನು

ಹೇಳಿದ್ದಾನೆ; ಇಂದ್ರಭೂತಿಯನ್ನು ಕೇಳಿದಮೇಲೆ ಅವನು ವಿವರಿಸಿದ್ದಾನೆ. ಪೂರ್ವಭವದಲ್ಲಿ ಅವನು ದುರ್ಲಭನೆಂಬ ಹೆಸರಿನ ರಾಜಪುತ್ರನಿದ್ದನು. ಅವನನ್ನು ಒಬ್ಬ ಯಕ್ಷಿಣಿಯು ತನ್ನ ಪೂರ್ವಜನ್ಮದ ಪತಿಯೆಂದು ಗುರುತಿಸಿ, ಪಾತಾಳಲೋಕದಲ್ಲಿ ಒಯ್ದಳು. ಅವನು ತನ್ನ ಅಲ್ಪಾಯುಷ್ಯವನ್ನು ತಿಳಿದು, ದುರ್ಲಭ ಧರ್ಮಧ್ಯಾನದಲ್ಲಿ ಮನವನ್ನು ತೊಡಗಿಸಿದನು. ಆದರಿಂದ ಅವನು ಮುಂದಿನ ಭವದಲ್ಲಿ ರಾಜಗೃಹದಲ್ಲಿ ರಾಜಪುತ್ರನಾಗಿ ಜನಿಸಿದನು. ಶಾಸ್ತ್ರ-ಶ್ರವಣದ ಮುಖಾಂತರ ಅವನಿಗೆ ಪೂರ್ವಜನ್ಮದ ಸ್ಮರಣೆಯು ಉಂಟಾಯಿತು. ಆಗ ಸಂಸಾರದಿಂದ ವಿರಕ್ತನಾದನು. ಆದರೂ ತಂದೆ-ತಾಯಂದಿರಿಗೆ ಶೋಕವಾಗಕೂಡದೆಂದು ಪ್ರವ್ರಜಿತನಾಗದೆ ಮನೆಯಲ್ಲಿಯೇ ಉಳಿದನು. ಕೊನೆಗೆ ಭಾವಕೇವಲಿಯಾಗಿ ಮೋಕ್ಷವನ್ನು ಪಡೆದನು. ಪೂರ್ವಭವ-ವರ್ಣನೆಯಲ್ಲಿ ಮನುಷ್ಯ ಜೀವನವು ಚಿಂತಾಮಣಿಗೆ ಸಮಾನವಾಗಿರುವ ದುರ್ಲಭ ಸ್ಥಿತಿಯಾಗಿದೆಯೆಂಬುದಕ್ಕೆ ಒಂದು ಆಖ್ಯಾನವನ್ನು ಹೇಳಿದೆ ಅದರಲ್ಲಿ ಒಬ್ಬ ರತ್ನಪರೀಕ್ಷಕ ಪುರುಷನು ಚಿಂತಾಮಣಿಯನ್ನು ಹೊಂದಿಯೂ ತನ್ನ ಎಚ್ಚರಗೇಡಿತನದಿಂದ ಅದನ್ನು ಸಮುದ್ರದಲ್ಲಿ ಒಗೆದನು. ಈ ಕೃತಿಯು ಸರಳ ಹಾಗೂ ಸುಂದರವಾಗಿದೆ (ಪ್ರಕಾಶನ, ಪುಣೆ, ೧೯೩೦).

ಈ ಪ್ರಕಾಶಿತ ಪದ್ಯಾತ್ಮಕ ಪ್ರಾಕೃತ ಕಥೆಗಳ ಹೊರತಾಗಿ ಇನ್ನೂ ಹಲವು ಕೃತಿಗಳು ಜೈನ ಶಾಸ್ತ್ರಭಂಡಾರಗಳ ಗ್ರಂಥ ಸೂಚಿಯಲ್ಲಿ ಉಲ್ಲೇಖಗೊಂಡುದನ್ನು ಕಾಣುತ್ತೇವೆ. ಅಂಥವುಗಳಲ್ಲಿ ಜಿನೇಶ್ವರಸೂರಿ ಕೃತ ನಿರ್ವಾಣ ಲೀಲಾವತೀ ಗ್ರಂಥದ ಉಲ್ಲೇಖವು ನಮಗೆ ಹಲವು ಗ್ರಂಥಗಳಲ್ಲಿ ದೊರೆಯುತ್ತದೆ. ವಿಶೇಷವಾಗಿ ಧನೇಶ್ವರನು ರಚಿಸಿದ ' ಸುರಸುಂದರೀ ಚರಿಯ ' (ವಿ. ಸಂ. ೧೧೯೫)ದಲ್ಲಿ ಅದನ್ನು ಅತಿ ಸುಲಲಿತ ಪ್ರಸನ್ನ, ಶ್ಲೇಷಾತ್ಮಕ ಮತ್ತು ವಿವಿಧಾಲಂಕಾರ-ಶೋಭಿತವೆಂದು ಹೇಳಿದೆ. ದುರ್ಭಾಗ್ಯದಿಂದ ಈ ಗ್ರಂಥದ ಪ್ರತಿಗಳು ದುರ್ಲಭವಾಗಿವೆ. ಆದರೆ ಅದರ ಸಂಸ್ಕೃತ ಪದ್ಯಾತ್ಮಕ ರೂಪಾಂತರವು ೬೦೦೦ ಶ್ಲೋಕಗಳಲ್ಲಿ ಜಿನರತ್ನನು (೧೩ನೆಯ ಶತಮಾನ)ರಚಿಸಿದ್ದು ಕಂಡುಬರುತ್ತದೆ. ಅದರಲ್ಲಿ ಮೂಲ ಗ್ರಂಥವು ೧೮೦೦ ಶ್ಲೋಕ ಪ್ರಮಾಣವಾಗಿದ್ದುದರ ಉಲ್ಲೇಖವು ದೊರೆಯುತ್ತದೆ.

### ಪ್ರಾಕೃತ ಕಥೆಗಳು-ಗದ್ಯ-ಪದ್ಯಾತ್ಮಕ :—

ಜೈನ ಕಥಾ-ಸಾಹಿತ್ಯವು ತನ್ನ ಉತ್ಕೃಷ್ಟ ಸೀಮೆಗೆ ಯಾವ ಕೃತಿಗಳಿಂದ ತಲುಪಿತೋ ಆ ಕೃತಿಗಳು ಮುಖ್ಯವಾಗಿ ಗದ್ಯದಲ್ಲಿಯೂ, ಗದ್ಯ-ಪದ್ಯ ಮಿಶ್ರಿತ ರೂಪ (ಚಂಪೂ)ದಲ್ಲಿಯೂಬರೆಯಲ್ಪಟ್ಟಿವೆ , ಇವುಗಳಿಗೆ ನಾವು ಚಂಪೂ ಎಂದು ಹೇಳಬಹುದಾಗಿದೆ. ಇವುಗಳಲ್ಲಿ ವಸುದೇವಹಿಂಡೀ ಎಂಬುದು ಪ್ರಾಚೀನತಮ ಕಾವ್ಯವಾಗಿದೆ. ಇದರಲ್ಲಿ ಒಂದುನೂರು ಲಂಬಕಗಳಿವೆ. ಈ ಲಂಬಕಗಳನ್ನು ಎರಡು ವಿಭಾಗಗಳಲ್ಲಿ ಹಂಚಲಾಗಿದೆ. ಮೊದಲನೆಯ ಖಂಡದಲ್ಲಿ ೨೯ ಲಂಬಕಗಳಿವೆ. ಈ ಖಂಡವು ಸುಮಾರು ೧೧೦೦೦ ಶ್ಲೋಕಗಳಿಂದ ಕೂಡಿದೆ. ಇದರ ಕರ್ತೃವು ಸಂಘದಾಸಗಣಿಯು. ಎರಡನೆಯ

ಖಂಡದಲ್ಲಿ ೨೧ ಲಂಬಕಗಳಿವೆ. ಇದು ೧೭೦೦೦ ಶ್ಲೋಕ ಪ್ರಮಾಣವಾಗಿದೆ. ಇದರ ಕರ್ತೃವು ಧರ್ಮಸೇನ ಗಣಿಯು. ಗ್ರಂಥದ ರಚನಾ ಕಾಲವು ನಿಶ್ಚಿತವಿಲ್ಲ. ಆದರೂ ಜಿನಭದ್ರಗಣಿಯು ತನ್ನ ವಿಶೇಷಣವತಿಯಲ್ಲಿ ಇದರ ಉಲ್ಲೇಖ ಮಾಡಿದ್ದಾನೆ. ಅದರಿಂದ ಇದರ ರಚನಾ-ಕಾಲವು ಆರನೆಯ ಶತಮಾನಕ್ಕಿಂತ ಪೂರ್ವದ್ದೆಂದು ಸಿದ್ಧವಾಗುತ್ತದೆ. ಈ ಗ್ರಂಥದ ಪ್ರಥಮ ಖಂಡವು ಮಾತ್ರ ಇಲ್ಲಿಯವರೆಗೆ ಪ್ರಕಟವಾಗಿದೆ. ಅದರಲ್ಲಿಯೂ ೧೯ ಮತ್ತು ೨೦ನೆಯ ಲಂಬಕಗಳು ಉಪಲಬ್ಧವಿಲ್ಲ. ಅಲ್ಲದೆ ೨೮ನೆಯ ಲಂಬಕವು ಅಪೂರ್ಣವಾಗಿದೆ. ಅಂಧಕವೃಷ್ಣಿಯ ಪುತ್ರರಲ್ಲಿ ಹಿರಿಯನು ಸಮುದ್ರವಿಜಯನು ; ಮತ್ತು ಎಲ್ಲಕ್ಕೂ ಕಿರಿಯನು ವಸುದೇವನು. ಸಮುದ್ರವಿಜಯನು ರಾಜನಾದ ಮೇಲೆ ವಸುದೇವನು ನಗರದಲ್ಲಿ ಸಂಚರಿಸುತ್ತಿದ್ದನು. ಆದರೆ ಅವನ ಅತಿಶಯ ರೂಪ ಹಾಗೂ ಕಲಾ-ಪ್ರಾವೀಣ್ಯಗಳಿಂದ ಪಟ್ಟಣದಲ್ಲಿ ಅನರ್ಥಗಳು ಸಂಭವಿಸಹತ್ತಿದುವು. ಅದಕ್ಕಾಗಿ ರಾಜನು ಅವನನ್ನು ಹೊರಗೆ ಹೋಗದಂತೆ ತಡೆದನು. ಆಮೇಲೆ ವಸುದೇವನು ಗುಪ್ತರೂಪದಿಂದ ಅರಮನೆಯಿಂದ ಹೊರಬಿದ್ದು, ದೇಶ-ವಿದೇಶಗಳಲ್ಲಿ ಸಂಚರಿಸತೊಡಗಿದನು. ಈ ಸಂಚಾರದಲ್ಲಿ ಅವನು ಅನೇಕ ಕಷ್ಟಗಳನ್ನೂ ಸಹ ಅನುಭವಿಸಬೇಕಾಯಿತು. ಹಲವು ಲೋಮ ಹರ್ಷಕ ಘಟನೆಗಳನ್ನೂ ಕೂಡ ಎದುರಿಸಬೇಕಾಯಿತು. ಇಂಥ ವಿಚಿತ್ರ ಪ್ರಸಂಗಗಳ ವರ್ಣನೆಗಳಿಂದ ಇಡೀ ಗ್ರಂಥವೆಲ್ಲ ತುಂಬಿಹೋಗಿದೆ. ಪ್ರಸಂಗಕ್ಕನುಸರಿಸಿ ಇದರಲ್ಲಿ ಮಹಾಭಾರತ, ರಾಮಾಯಣ ಹಾಗೂ ಅನ್ಯ ವಿವಿಧ ಆಖ್ಯಾನಗಳು ಬಂದಿವೆ. ಈ ಗ್ರಂಥವು ಲುಪ್ತವಾದ ಬೃಹತ್ಕಥೆಯ ಆಧಾರದಿಂದಲೂ ಅದನ್ನೇ ಆದರ್ಶವಾಗಿಟ್ಟುಕೊಂಡು ರಚಿತವಾಗಿದೆಯೆಂದು ಅನುಮಾನಿಸುತ್ತಾರೆ. ಭಾಷೆ, ಸಾಹಿತ್ಯ, ಇತಿಹಾಸ ಮೊದಲಾದ ಅನೇಕ ದೃಷ್ಟಿಯಿಂದ ಈ ಕೃತಿಯು ಬಹು ಮಹತ್ವಪೂರ್ಣವಾಗಿದೆ.

ಹರಿಭದ್ರ ಕೃತ ಸಮರಾದಿತ್ಯಕಥಾ (೮ನೆಯ ಶತಮಾನ) ಎಂಬುದರಲ್ಲಿ 'ಭವ' ಎಂಬ ಹೆಸರಿನ ೯ ಪ್ರಕರಣಗಳಿವೆ. ಇದರಲ್ಲಿ ಕ್ರಮವಾಗಿ ಪರಸ್ಪರ ವಿರೋಧಿ ಪುರುಷರಿಬ್ಬರು ಜೊತೆ-ಜೊತೆಯಲ್ಲಿ ಬಾಳುವ ೯ ಜನ್ಮಾಂತರಗಳ ವರ್ಣನೆಯನ್ನು ಮಾಡಲಾಗಿದೆ. ಗ್ರಂಥದ ಉತ್ಥಾನಿಕೆಯಲ್ಲಿ ಮಂಗಲಾಚರಣದ ತರುವಾಯ ಕಥಾವಸ್ತುವನ್ನು ದಿವ್ಯ, ದಿವ್ಯ-ಮಾನುಷ, ಮಾನುಷ ಎಂದು ಮೂರು ಪ್ರಕಾರದವುಗಳೆಂದು ವಿಭಜಿಸಿ ಹೇಳಿದೆ. ಕಥಾವಸ್ತುವನ್ನು ನಾಲ್ಕು ಪ್ರಕಾರದ ಕಥನಗಳ ಮುಖಾಂತರ ಪ್ರಸ್ತಾಪಿಸಲಾಗುತ್ತದೆ. ಅವು ಅರ್ಥ, ಕಾಮ, ಧರ್ಮ ಮತ್ತು ಸಂಕೀರ್ಣ ಎಂದಿವೆ. ಇವುಗಳನ್ನು ಕೇಳುವವರೂ ಅಧಮ, ಮಧ್ಯಮ, ಉತ್ತಮ ಎಂದು ಮೂರು ವಿಧವಾಗಿರುತ್ತಾರೆ. ಗ್ರಂಥಕರ್ತೃವು ಇದನ್ನು ದಿವ್ಯ-ಮಾನುಷ ವಸ್ತುಗತ ಧರ್ಮಕಥೆಯೆಂದು ಹೇಳಿದ್ದಾನೆ. ಅಲ್ಲದೆ ಪೂರ್ವಾಚಾರ್ಯರು ಹೇಳಿದ ಎಂಟು ಚರಿತ್ರ ಸಂಗ್ರಹಾತ್ಮಕ ಗಾಹೆಗಳನ್ನು ಉದ್ಧರಿಸಿದ್ದಾನೆ. ಇವುಗಳಲ್ಲಿ ನಾಯಕ-ಪ್ರತಿನಾಯಕರ ಒಂಭತ್ತು ಭವಾಂತರಗಳ ಹೆಸರುಗಳೂ, ಅವರ ಪರಸ್ಪರ ಸಂಬಂಧ, ಅವರು ವಾಸಮಾಡುವ

ಪಟ್ಟಣಗಳು, ಅಲ್ಲದೆ ಅವರ ಮರಣ ತರುವಾಯ ಪ್ರಾಪ್ತವಾಗುವ ಸ್ವರ್ಗ-ನರಕಗಳ ಹೆಸರುಗಳು ಇವನ್ನೆಲ್ಲ ಕೊಟ್ಟಿದೆ. ಅಂತಿಮ ಭವದಲ್ಲಿ ನಾಯಕ ಸಮರಾದಿತ್ಯನು ಮೋಕ್ಷಮಾರ್ಗಿಯಾದನು. ಪ್ರತಿನಾಯಕನಾದ ಗಿರಿಸೇನನು ಅನಂತ ಸಂಸಾರದಲ್ಲಿ ಭ್ರಮಿಸುವಂಥವನಾದನು. ಮೊದಲನೆಯ ಭವದಲ್ಲಿಯೇ ಇವರಲ್ಲಿ ಪರಸ್ಪರ ವೈರವು ಉತ್ಪನ್ನವಾಯಿತು. ಅದಕ್ಕೆ ಕಾರಣವಿಷ್ಟೆ : ರಾಜಪುತ್ರನಾದ ಗುಣಸೇನನು ಪುರೋಹಿತ-ಪುತ್ರ ಬ್ರಾಹ್ಮಣ ಅಗ್ನಿ-ಶರ್ಮಾ ಇವನನ್ನು ಕುರೂಪತೆಗಾಗಿ ಆಗಾಗ ನಗೆಯಾಡುತ್ತಿದ್ದನು. ಇದರಿಂದ ವಿರಕ್ತನಾಗಿ ಅಗ್ನಿಶರ್ಮನು ದೀಕ್ಷೆಯನ್ನು ಸ್ವೀಕರಿಸಿದನು. ಮಾಸೋಪವಾಸವನ್ನೂ ಸಂಯಮವನ್ನೂ ಪಾಲಿಸಿದನು. ಗುಣಸೇನರಾಜನು ಅವನನ್ನು ಮೂರುಸಲ ಆಹಾರಕ್ಕಾಗಿ ಆಮಂತ್ರಿಸಿದನು. ಆದರೆ ಮೂರೂ ಸಲ ಮುನಿಯು ವಿಶೇಷ ಕಾರಣದಿಂದಾಗಿ ಆಹಾರ ಪಡೆಯದೆ ತಿರುಗಿ ಹೋಗಬೇಕಾಯಿತು. ಇದರಿಂದ ಆ ಮುನಿಯು ಸಿಟ್ಟಿಗೆ ಬಂದನು. ಅಲ್ಲದೆ ಮನದಲ್ಲಿ ನಿಶ್ಚಯಿಸಿಯೂ ಬಿಟ್ಟನು. ನನ್ನ ತಪಸ್ಸಿಗೆ ಏನಾದರೂ ಫಲವಿದ್ದರೆ ನಾನು ಜನ್ಮ-ಜನ್ಮಾಂತರದಲ್ಲಿ ಈ ರಾಜನಿಗೆ ಕ್ಲೇಶವನ್ನು ನೀಡುವೆ. ಇದೇ ನಿದಾನ-ಬಂಧದ ಕಾರಣದಿಂದ ಉತ್ತರೋತ್ತರ ಅವನಿಗೆ ಅಧೋಗತಿಯು ಉಂಟಾಯಿತು. ಕೊನೆಯಲ್ಲಿ ಅವನಿಗೆ ಸಂಬೋಧನ ಸಹ ಇಲ್ಲದ ಅವಸ್ಥೆಯು ಪ್ರಾಪ್ತವಾಯಿತು. ಈ ಒಂಭತ್ತೂ ಭವಗಳ ವರ್ಣನೆಯನ್ನು ಪ್ರತಿಭಾಶಾಲಿಯಾದ ಲೇಖಕನು ಬಹು ಉತ್ತಮ ರೀತಿಯಿಂದ ಮಾಡಿದ್ದಾನೆ. ಇದರಲ್ಲಿ ಕಥಾ-ಪ್ರಸಂಗಗಳು, ಪ್ರಾಕೃತಿಕ ವರ್ಣನೆಗಳು, ಭಾವ-ಚಿತ್ರಣಗಳು ಸುಂದರವಾಗಿದ್ದು, ಈ ಕಥಾನಕಕ್ಕೆ ಶ್ರೇಷ್ಠ ಕೃತಿಯ ಪದವನ್ನು ತಂದುಕೊಟ್ಟಿವೆ.

ಉದ್ಯೋತನಸೂರಿ ಕೃತ ಕುವಲಯಮಾಲಾ ಗ್ರಂಥದ ರಚನೆಯು ಅದರಲ್ಲಿ ಉಲ್ಲೇಖಿಸಿದಂತೆ ಶಕ ಸಂ. ೭೦೦ (ಕ್ರಿ.ಶ. ೭೭೮)ರಲ್ಲಿ ಜಾಬಾಲಿಪುರ (ಜಾಲೋರ-ರಾಜಸ್ಥಾನ)ದಲ್ಲಿ ಆಯಿತು. ಲೇಖಕನು ತಾನು ದಾಕ್ಷಿಣ್ಯಚಿಹ್ನನೆಂದು ಇಲ್ಲಿ ಪ್ರಕಟಸಿದ್ದಾನೆ. ಚರಿತ್ರ-ನಾಯಿಕೆಯಾದ ಕುವಲಯಮಾಲೆಯ ವೈಚಿತ್ರ್ಯ ಪೂರ್ಣ ಜೀವನ ಚರಿತ್ರೆಯಲ್ಲಿ ಹೆಣೆದ ವಿವಿಧ ಪ್ರಕಾರದ ಉಪಾಖ್ಯಾನ, ಘಟನೆ, ಸಾಮಾಜಿಕ ಹಾಗೂ ವೈಯಕ್ತಿಕ ಚಿತ್ರಣಗಳಲ್ಲಿ ಈ ಕೃತಿಯ ವೈಶಿಷ್ಟ್ಯವಿದೆ. ಇಲ್ಲಿಯ ಸಮತೋಲನವನ್ನು ಉಳಿದೆಡೆಯಲ್ಲಿ ಕಾಣುವುದು ಕಷ್ಟ ಸಾಧ್ಯವಾಗಿದೆ. ಪ್ರಾಕೃತ ಭಾಷೆಯ ವಿವಿಧ ದೇಶೀ ರೂಪ ಮತ್ತು ಶೈಲಿಗಳ ಪ್ರಚಲಿತ ಉದಾಹರಣೆಗಳು ಈ ಗ್ರಂಥದಲ್ಲಿ ನೋಡಲಿಕ್ಕೆ ಸಿಕ್ಕುತ್ತವೆ. ಲೇಖಕನ ಧ್ಯೇಯವು ತನ್ನ ಕಥೆಯ ಮುಖಾಂತರ ಕ್ರೋಧಾದಿ ಕಷಾಯ ಹಾಗೂ ದುರ್ಭಾವನೆಗಳ ದುಷ್ಪರಿಣಾಮವನ್ನು ಚಿತ್ರಿಸುವುದಾಗಿದೆ. ಘಟನಾ-ವೈಚಿತ್ರ್ಯ ಮತ್ತು ಉಪಾಖ್ಯಾನಗಳ ಪ್ರಚುರತೆಯಲ್ಲಿ ಇದು ವಸುದೇವಹಿಂಡಿಗೆ ಸಮಾನವಾಗಿದೆ. ಯಥಾಸ್ಥಾನದಲ್ಲಿ ತನ್ನ ಪ್ರೌಢಶೈಲಿಯಿಂದ ಈ ಕೃತಿಯು ಸಂಬಂಧು ಮತ್ತು ಬಾಣನ ಸಂಸ್ಕೃತ ರಚನೆಗಳಿಗೆ ಸಮಾನವಾಗಿ ನಿಲ್ಲುವುದು. ಸಮರಾದಿತ್ಯ ಕಥೆಯೂ ಈ ರಚನೆಯಲ್ಲಿ ಬಹಳ ಪ್ರಭಾವವನ್ನು ಬೀರಿದೆ. ಸ್ವತಃ ಕರ್ತೃವು ಹರಿಭದ್ರನನ್ನು ತನ್ನ ಸಿದ್ಧಾಂತ

ಮತ್ತು ನ್ಯಾಯಗಳಿಗೆ ಗುರುವೆಂದು ಮನ್ನಿಸಿದ್ದಾನೆ. ಅವನ ಸಮರಮಿಯಂಕಾ (ಸಮರಾದಿತ್ಯ) ಕಥೆಯನ್ನೂ ಕೂಡ ಉಲ್ಲೇಖಿಸಿದ್ದಾನೆ.

ದೇವೇಂದ್ರಗಣಿಕೃತ **ರಯಣಚೂಡರಾಯಚರಿಯಂ**ದಲ್ಲಿ ಕರ್ತೃವು ತನ್ನ ಗುರುಪರಂಪರೆಯನ್ನು ದೇವಸೂರಿಯಿಂದ ಆರಂಭಿಸಿ ದ್ವಿತೀಯ ಉದ್ಯೋತನ ಸೂರಿಯ ವರೆಗೆ ಹೇಳಿದ್ದಾನೆ. ಸ್ವತಃ ತಾನು ಉದ್ಯೋತನ ಸೂರಿಯ ಶಿಷ್ಯನಾದ ಉಪಾಧ್ಯಾಯ ಅಂಬದೇವನ ಶಿಷ್ಯನೆಂದು ಹೇಳಿಕೊಂಡಿದ್ದಾನೆ. ಇವನ ಹೆಸರು ನೇಮಿಚಂದ್ರನೆಂದೂ ಸಹ ಇತ್ತು. ಇವನು ಈ ಕೃತಿಯ ರಚನೆಯನ್ನು ದಂಡಿಲಪದ ನಿವೇಶದಲ್ಲಿ ಪ್ರಾರಂಭಿಸಿದನು, ಮತ್ತು ಚಡ್ಡಾವಲಿಪುರಿಯಲ್ಲಿ ಮುಗಿಸಿದನು. ನೇಮಿಚಂದ್ರನು ಅರ್ಥಾತ್ ದೇವೇಂದ್ರಗಣಿಯು ತನ್ನ ಉತ್ತರಾಧ್ಯಯನ ಟೀಕೆಯನ್ನು ವಿ. ಸಂ. ೧೧೨೯ ರಲ್ಲಿಯೂ ಮಹಾವೀರಚರಿಯಂ ವಿ. ಸಂ. ೧೧೪೦ರಲ್ಲಿಯೂ ಬರೆದು ಮುಗಿಸಿದನು. ಅದರಿಂದ ಈ ಗ್ರಂಥದ ರಚನೆಯೂ ಸಹ ಇದೇ ಕಾಲದ ಸುಮಾರಿನಲ್ಲಿ ರಚಿತವಾದುದೆಂದು ಸಿದ್ಧವಾಗುತ್ತದೆ. ಕಥೆಯಲ್ಲಿ ರಾಜಾಶ್ರೇಣಿಕನ ಪ್ರಶ್ನೆಗೆ ಉತ್ತರವೆಂದು ಗೌತಮ ಗಣಧರನು ಕಂಚನಪುರದ ಬಕುಲವೆಂಬ ಹೆಸರಿನ ಹೂಗಾರನು ಋಷಭ ಭಗವಂತನಿಗೆ ಹೂವೇರಿಸಿದ ಫಲವೆಂದು ಗಜಪುರದಲ್ಲಿ ಕಮಲಸೇನ ರಾಜಪುತ್ರನಾದ ರತ್ನಚೂಡನಾಗಿ ಜನಿಸಿದ ವೃತ್ತಾಂತವನ್ನು ವಿವರಿಸಿದನು. ರತ್ನಚೂಡನು ಒಂದು ಮದ್ದಾನೆಯನ್ನು ದಮನ ಮಾಡಿದನು. ಆದರೆ ಅವನೊಬ್ಬ ವಿದ್ಯಾಧರನಾಗಿದ್ದನು. ಈ ರಾಜಕುಮಾರನನ್ನು ಅಪಹರಣ ಮಾಡಿಕೊಂಡು ಹೋದನು. ಹೀಗಾಗಿ ರತ್ನಚೂಡನು ನಾನಾ ಪ್ರದೇಶಗಳಲ್ಲಿ ಸುತ್ತಾಡಿದನು, ವಿಚಿತ್ರ ಅನುಭವಗಳನ್ನು ಹೊಂದಿದನು, ಅನೇಕ ಸುಂದರಿಯರನ್ನು ವಿವಾಹವಾದನು, ಋದ್ಧಿಯನ್ನೂ ಪಡೆದನು. ಇವೆಲ್ಲವುಗಳ ವರ್ಣನೆಯು ಬಹು ಸುಂದರವಾಗಿ ಬಂದಿದೆ, ರೋಚಕವೂ ಆಗಿದೆ. ಕೊನೆಗೆ ಅವನು ರಾಜಧಾನಿಗೆ ಮರಳಿದನು. ಮುನಿಗಳ ಉಪದೇಶವನ್ನು ಹೊಂದಿ, ಧಾರ್ಮಿಕ ಜೀವನವನ್ನು ಕಳೆಯುತ್ತ ಬಾಳಿದನು. ಮುಂದೆ ಮರಣಹೊಂದಿದ ಮೇಲೆ ಸ್ವರ್ಗಕ್ಕೆ ತೆರಳಿದನು. ಕಥಾನಕದಲ್ಲಿ ಅನೇಕ ಉಪಾಖ್ಯಾನಗಳ ಸಮಾವೇಶವಿದೆ ಈ ಕಥೆಯು 'ನಾಯಾಧಮ್ಮಕಹಾ'ದಲ್ಲಿ ಸೂಚಿತವಾದ ದೇವಪೂಜೆಯೇ ಮೊದಲಾದ ಧರ್ಮ ಕ್ರಿಯೆಗಳ ಫಲ ಸ್ವರೂಪ ದೃಷ್ಟಾಂತವೆಂದು ರೂಪುಗೊಂಡಿದೆ (ಪ್ರಕಾಶನ : ಅಹಮ್ಮದಾಬಾದ, ೧೯೪೨).

'**ಕಾಲಿಕಾಚಾರ್ಯಕಥಾ**' ಎಂಬುದು ಎಲ್ಲಕ್ಕೂ ಪ್ರಾಚೀನ ನಿಶೀಥ ಚೂರ್ಣಿ, ಆವಶ್ಯಕ ಚೂರ್ಣಿ, ಬೃಹತ್ ಕಲ್ಪ ಭಾಷ್ಯ ಮೊದಲಾದ ಅರ್ಧಮಾಗಧಿ ಭಾಷೆಯ ಆಗಮಗಳ ಟೀಕೆಯಲ್ಲಿಯೇ ಕಂಡು ಬರುತ್ತದೆ. ಇದರ ಮೇಲೆ ಸ್ವತಂತ್ರ ರಚನೆಗಳೂ ಬಹಳಷ್ಟು ರಚಿತವಾಗಿವೆ. ಜೈನ ಗ್ರಂಥಾವಲಿಯಲ್ಲಿ, ಪ್ರಾಕೃತದಲ್ಲಿ ವಿನಯಚಂದ್ರ, ಭಾವದೇವ, ಜಯಾನಂದಿಸೂರಿ, ಧರ್ಮಪ್ರಭ, ದೇವಕಲ್ಲೋಲ ಮತ್ತು ಮಹೇಶ್ವರ, ಹೀಗೆಯೇ ಸಂಸ್ಕೃತದಲ್ಲಿ ಕೀರ್ತಿಚಂದ್ರ ಮತ್ತು ಸಮಯಸುಂದರ ಕೃತ

ಕಾಲಕಾಚಾರ್ಯನ ಕಥೆಗಳ ಉಲ್ಲೇಖವಿದೆ. ಆದರೆ ಇವೆಲ್ಲವುಗಳಿಗಿಂತಲೂ ಪ್ರಾಚೀನವೂ ಸಾಹಿತ್ಯಿಕ ದೃಷ್ಟಿಯಿಂದ ಹೆಚ್ಚು ಸುಂದರವೂ ಆದ ಕೃತಿಯು ದೇವೇಂದ್ರಸೂರಿ ಕೃತ ಕಥಾನಕ-ಪ್ರಕರಣ-ವೃತ್ತಿಯಲ್ಲಿ ಸಮಾವಿಷ್ಟವಾದುದು ಕಂಡುಬರುತ್ತದೆ. ಇದರ ರಚನಾ ಕಾಲವು ವಿ. ಸಂ. ೧೧೪೬ ಇದೆ. ಕಾಲಕನು ಒಬ್ಬ ರಾಜಪುತ್ರನಾಗಿದ್ದನು. ಆದರೆ ಗುಣಾಕರ ಮುನಿಯ ಉಪದೇಶದಿಂದ ಮುನಿಯಾದನು. ಅವನ ಚಿಕ್ಕ ತಂಗಿಯಾದ ಸರಸ್ವತಿಯೂ ಆರ್ಯಿಕೆಯ ದೀಕ್ಷೆಯನ್ನು ತಕ್ಕೊಂಡಳು. ಇವಳ ಮೇಲೆ ಉಜ್ಜಯಿನಿಯ ರಾಜನಾದ ಗರ್ದಭಿಲ್ಲನು ಮೋಹಿತನಾದನು. ಇಷ್ಟೇ ಅಲ್ಲ, ಅವನು ಅವಳನ್ನು ಹಿಡಿಯಿಸಿ ತನ್ನ ಅಂತಃಪುರದಲ್ಲಿ ಒಯ್ದು ಇಟ್ಟನು. ರಾಜನಿಗೆ ತಿಳುವಳಿಕೆಯನ್ನು ಹೇಳಿ, ತನ್ನ ತಂಗಿಯನ್ನು ಬಿಡಿಸುವ ಯತ್ನದಲ್ಲಿ ಯಶಸ್ಸನ್ನು ಕಾಣದೆ ಕಾಲ-ಕಾಚಾರ್ಯನು ಶಕ ದೇಶಕ್ಕೆ ತೆರಳಿದನು ; ಮತ್ತು ಗರ್ದಭಿಲ್ಲ ರಾಜನನ್ನು ಹಿಡಿದು, ದೇಶದಿಂದ ಹೊರಗೆ ಹಾಕಲಾಯಿತು. ಕಾಲಕಾಚಾರ್ಯನು, ಸರಸ್ವತಿಯನ್ನು ಪುನಃ ದೀಕ್ಷಿತಗೊಳಿಸಿ, ಸಂಘದಲ್ಲಿ ಸೇರಿಸಿಕೊಂಡನು. ಉಜ್ಜಯಿನಿಯಲ್ಲಿ ಒಂದು ರಾಜ ವಂಶವು ಸ್ಥಾಪಿಸಲಾಯಿತು. ಅದನ್ನು ನಷ್ಟಗೊಳಿಸಿ ವಿಕ್ರಮಾದಿತ್ಯ ರಾಜನು ತನ್ನ ಸಂವತ್ಸರವನ್ನು ಪ್ರಾರಂಭಿಸಿದನು. ಕಥೆಯ ಮುಂದಿನ ಭಾಗದಲ್ಲಿ ಕಾಲಕಾಚಾರ್ಯನು ಭರುಕಚ್ಛ ಅಲ್ಲಿಂದ ಪ್ರತಿಷ್ಠಾನಗಳಿಗೆ ವಿಹರಿಸಿದ ವರ್ಣನೆಯು ಬರುತ್ತದೆ. ಆಗ ಅವನಿಗೆ ರಾಜಾ ಸಾತವಾಹನನ ಭೆಟ್ಟಿಯಾಯಿತು. ಈ ಆಚಾರ್ಯರ ಸೂಚನೆಯಂತೆ ಅವನು ಭಾದ್ರಪದ ಶುಕ್ಲ ಚತುರ್ಥಿ ತಿಥಿಯಿಂದ ಪರ್ಯೂಷಣ ಪರ್ವವನ್ನು ಮನ್ನಿಸುವುದಕ್ಕೆ ಅನುಮತಿಯನ್ನಿತ್ತನು ; ಯಾಕೆಂದರೆ ಭಾದ್ರಪದ ಪಂಚಮಿಯನ್ನು ಇಂದ್ರ-ಮಹೋತ್ಸವವೆಂದು ಆಚರಿಸುವ ಪರಿಪಾಠವಿತ್ತು. ತನ್ನ ಶಿಷ್ಯರಿಗೆ ಸಂಬೋಧಿಸುತ್ತ ಕೊನೆಯಲ್ಲಿ ಕಾಲಕಾಚಾರ್ಯನು ಸಲ್ಲೇಖನ ವಿಧಿಯಿಂದ ಸ್ವರ್ಗವನ್ನು ಹೊಂದಿದನು. ಈ ಕಥೆಯಲ್ಲಿ ಶಕರ ಆಕ್ರಮಣ ಹಾಗೂ ಅದರ ತರುವಾಯ ವಿಕ್ರಮಾದಿತ್ಯನಿಂದ ಅವರ ಉಚ್ಚಾಟನೆ ಇವೇ ಮೊದಲಾದ ವಿಷಯಗಳಲ್ಲಿ ಐತಿಹಾಸಿಕ ತಥ್ಯವು ಕಂಡುಬರುತ್ತದೆ. ಸಾಹಿತ್ಯ ದೃಷ್ಟಿಯಿಂದಲೂ ಈ ರಚನೆಯು ಸುಂದರವಾಗಿದೆ (ಪ್ರಕಾಶನ : ಅಹಮ್ಮದಾಬಾದ ೧೯೪೯).

ಸುಮತಿ ಸೂರಿ ಕೃತ ಜಿನದತ್ತಾಖ್ಯಾನದಲ್ಲಿ ಕರ್ತೃವು ತನ್ನ ಪರಿಚಯವನ್ನು ಸ್ವಲ್ಪದರಲ್ಲಿ ನೀಡಿದ್ದಾನೆ. ಪಾಡಿಚ್ಛಯ ಗಚ್ಛದ ಕಲ್ಪದ್ರುಮ ಶ್ರೀ ನೇಮಿಚಂದ್ರ ಸೂರಿಯು ಆಗಿಹೋದನು. ಅವನನ್ನು ಶ್ರೀ ಸರ್ವದೇವ ಸೂರಿಯು ಉತ್ತಮ ಪದದಲ್ಲಿ ಸ್ಥಾಪಿಸಿದನು. ಅವನ ಶಿಷ್ಯನಾದ ಸುಮತಿ ಗಣಿಯು ಈ ಜಿನದತ್ತ ಮಹರ್ಷಿ ಚರಿತ್ರೆಯನ್ನು ರಚಿಸಿದನು. ಗ್ರಂಥದ ರಚನಾ ಕಾಲವು ನಿಶ್ಚಿತವಿಲ್ಲ; ಆದರೆ ಒಂದು ಪ್ರಾಚೀನ ಪ್ರತಿಯಲ್ಲಿ ಇದನ್ನು ಅನಹಿಲಪಾಟನದಲ್ಲಿ ಸಂ. ೧೨೪೬ ರಲ್ಲಿ ಬರೆದ ಉಲ್ಲೇಖವು ಲಭಿಸುತ್ತದೆ. ಇದರಿಂದ ಈ ಗ್ರಂಥ ರಚನೆಯು ಇದಕ್ಕೂ ಪೂರ್ವದಲ್ಲಿ ಆಗಿರಲಿಕ್ಕೆ ಬೇಕೆಂದು ಗೊತ್ತಾಗುತ್ತದೆ. ಕಥಾನಾಯಕನಾದ ಶೆಟ್ಟಿಯು ದ್ಯೂತ-ಕ್ರೀಡೆಯಲ್ಲಿ

ತನ್ನ ಎಲ್ಲ ಧನವನ್ನು ಕಳೆದುಕೊಂಡು ವಿದೇಶ ಯಾತ್ರೆಗೆ ಹೊರಡುವ ಅವಸ್ಥೆಯನ್ನು ಹೊಂದಿದನು. ಅವನು ದಧಿಪುರದಲ್ಲಿ ರಾಜಕನ್ಯೆಯಾದ ಶ್ರೀಮತಿಯನ್ನು ವ್ಯಾಧಿಯಿಂದ ಮುಕ್ತಗೊಳಿಸಿ, ಅವಳನ್ನು ಲಗ್ನವಾದನು. ಸಮುದ್ರಯಾತ್ರೆಯಲ್ಲಿ ಅವನನ್ನು ಇನ್ನೊಬ್ಬ ವ್ಯಾಪಾರಿಯು ಸಾಗರದಲ್ಲಿ ನೂಕಿದನು. ಆದರೂ ಅವನು ಒಂದು ಹಲಿಗೆಯ ತುಂಡಿನ ನೆರವಿನಿಂದ ತೀರವನ್ನು ತಲುಪಿದನು. ಅಲ್ಲಿಂದ ರಥನೂಪುರ ಚಕ್ರವಾಲದಲ್ಲಿ ಹೋಗಿ, ಅಲ್ಲಿಯ ರಾಜಕನ್ಯೆಯನ್ನು ಮದುವೆಯಾದನು. ಕೊನೆಯಲ್ಲಿ ಅವನು ಪುನಃ ಚಂಪಾನಗರಕ್ಕೆ ತಿರುಗಿ ಬಂದನು. ಅಲ್ಲಿಯವಳೇ ಆದ ರತಿಸುಂದರೀ ಎಂಬ ರಾಜಕನ್ಯೆಯನ್ನು ಲಗ್ನವಾದನು. ತರುವಾಯ ಅನೇಕ ಸುಖಗಳನ್ನು ಭೋಗಿಸಿ ಕೊನೆಗೆ ದೀಕ್ಷೆಯನ್ನು ಸಹ ಕೈಕೊಂಡನು, ಮತ್ತು ಮರಣಹೊಂದಿ ಸ್ವರ್ಗವನ್ನು ಪಡೆದನು. ಗದ್ಯ ಮತ್ತು ಪದ್ಯಗಳೆರಡರಲ್ಲಿಯೂ ಭಾಷೆಯು ಪರಿಶುದ್ಧವಾಗಿದೆ. ಎಲ್ಲೆಡೆಯಲ್ಲಿಯೂ ಕಾವ್ಯಗುಣವೂ ಸಹ ಕಂಡು ಬರುತ್ತದೆ.

ಮೇಲೆ ಹೇಳಿದ ಕೃತಿಯ ಜೊತೆಗೇನೇ ಜಿನದತ್ತಾಖ್ಯಾನ ಎಂಬ ಹೆಸರಿನ ಇನ್ನೊಂದು ರಚನೆಯೂ ಸಹ ಪ್ರಕಟವಾಗಿದೆ (ಮುಂಬೈ ೧೯೫೩), ಇದರಲ್ಲಿ ಕರ್ತೃವಿನ ಹೆಸರು ದೊರೆಯುವದಿಲ್ಲ. ಕಥಾನಕವು ಮೊದಲಿನ ಗ್ರಂಥದಲ್ಲಿ ಇರುವಂತೆಯೇ ಇದೆ! ಆದರೆ ಅದಕ್ಕಿಂತ ಸಂಗ್ರಹ ರೂಪದಲ್ಲಿದೆ. ಮುಂಚಿನ ಕೃತಿಗಿಂತ ಇದು ಪ್ರಾಚೀನವಾಗಿದ್ದರೆ ಆಶ್ಚರ್ಯವೇನಲ್ಲ. ಇದರಲ್ಲಿ ಜಿನದತ್ತನ ಪೂರ್ವಭವವು ಕೊನೆಯಲ್ಲಿ ವರ್ಣಿತಗೊಂಡಿದೆ, ಪ್ರಾರಂಭದಲ್ಲಿ ಅಲ್ಲ. ಇದರ ಹಸ್ತಲಿಖಿತ ಪ್ರತಿಯಲ್ಲಿ ಇದನ್ನು ಚಿತ್ರಕೂಟದಲ್ಲಿ ಮಣಿಭದ್ರಯತಿಯು ನಂ. ೧೧೮೬ ರಲ್ಲಿ ಬರೆದನೆಂದು ಉಲ್ಲೇಖವಿದೆ.

ರಯೆಣಸೇಹರೀಕಹಾ ಎಂಬ ಕೃತಿಯನ್ನು ಜಿನಹರ್ಷ ಗಣಿಯು ರಚಿಸಿದನು. ಇದರಲ್ಲಿ ಸ್ವತಃ ಲೇಖಕನು ತಾನು ಜಯಚಂದ್ರ ಮುನಿಯ ಶಿಷ್ಯನೆಂದೂ ಚಿತ್ರಕೂಟ ನಗರದಲ್ಲಿ ಇದನ್ನು ರಚಿಸಿದನೆಂದೂ ಹೇಳಿಕೊಂಡಿದ್ದಾನೆ. ಪಾಟನ ಭಂಡಾರದ ಹಸ್ತಲಿಖಿತ ಪ್ರತಿಯನ್ನು ವಿ.ಸಂ. ೧೫೧೨ರಲ್ಲಿ ಬರೆಯಲಾಗಿದೆ. ಆದರಿಂದ ಈ ಕೃತಿಯು ಅದಕ್ಕಿಂತ ಮುಂಚಿನದೆಂದು ನಿಶ್ಚಿತಗೊಳ್ಳುತ್ತದೆ ಇಲ್ಲಿಯ ಕಥೆಯನ್ನು ಸಾಂವತ್ಸರಿಕ, ಚಾತುರ್ಮಾಸಿಕ ಮತ್ತು ಚತುರ್ದಶೀ, ಅಷ್ಟಮಿ ಮೊದಲಾದ ಪರ್ವಾನುಷ್ಠಾನಗಳಿಗೆ ದೃಷ್ಟಾಂತ ರೂಪದಲ್ಲಿ ವಿವರಿಸಲಾಗಿದೆ. ರತ್ನಪುರದ ರಾಜನು ಕಿನ್ನರರಿಂದ ರತ್ನಾವತಿಯ ರೂಪದ ವರ್ಣನೆಯನ್ನು ಕೇಳಿ, ಅವಳ ಮೇಲೆ ಮೋಹಗೊಳ್ಳುವನು. ಆಗ ಆ ಸುಂದರಿಯನ್ನು ಗೊತ್ತುಹಚ್ಚಲಿಕ್ಕೆ ಅವನ ಮಂತ್ರಿಯು ಹೊರಬಿದ್ದನು. ಒಂದು ನಿಬಿಡಾರಣ್ಯದಲ್ಲಿ ಪ್ರವೇಶಿಸಿದನು. ಅಲ್ಲಿ ಅವನಿಗೆ ಯಕ್ಷಕನ್ಯೆಯೊಬ್ಬಳು ದೊರಕಿದಳು. ಅವಳ ನಿರ್ದೇಶದಂತೆ ಉರಿಯುತ್ತಿರುವ ಧೂಪಕುಂಡದಲ್ಲಿ ಸೇರಿ, ಪಾತಾಳವನ್ನು ತಲುಪಿದನು. ಆ ಯಕ್ಷಕನ್ಯೆಯನ್ನು ಲಗ್ನವಾದನು. ಆಗ ಯಕ್ಷನು ರತ್ನಾವಳಿಯ ಪರಿಚಯವನ್ನು ಹೇಳಿದನು. ಅವಳು ಸಿಂಹಳದ ರಾಜನಾದ ಜಯಸಿಂಹನ ಕನ್ಯೆಯಾಗಿದ್ದಳು. ಯಕ್ಷನು ತನ್ನ ವಿದ್ಯಾಬಲದಿಂದ ಸಿಂಹಳವನ್ನು ತಲುಪಿಸಿಯೂ

ವತದ ರಚನಾಕಾಲವು ಶೇರಶಾಹ ಸುಲ್ತಾನನ ಸಮಯದ್ದಾದುದರಿಂದ ರಯಣಸೇಹರಿ ಕಹಾ ಗ್ರಂಥದ ತರುವಾಯದ್ದೆಂದು ಸಿದ್ಧವಾಗುತ್ತದೆ; ಯಾಕೆಂದರೆ ಶೇರಶಾಹನ ರಾಜ್ಯ ಕಾಲವು ಕ್ರಿ.ಶ. ೧೫೪೦ ರಲ್ಲಿ ಪ್ರಾರಂಭವಾಗಿತ್ತು.

ಜಂಬೂಸಾಮಿಚರಿತ್ತವು ಮೇಲೆ ಉಲ್ಲೇಖಿಸಿದ ಎಲ್ಲ ಪ್ರಾಕೃತ ಚರಿತ್ರ ಗಳಿಂದಲೂ ವಿಶೇಷತೆಯುಳ್ಳುದಾಗಿದೆ; ಯಾಕೆಂದರೆ ಇದರ ರಚನೆಯು ಅರ್ಧಮಾಗಧೀ ಪ್ರಾಕೃತ ಗದ್ಯದಲ್ಲಾಗಿದೆ, ಅದು ಆಗಮದ ಶೈಲಿಯಾಗಿದೆ. ಇಷ್ಟೇ ಅಲ್ಲ, ವರ್ಣನೆ ಗಳನ್ನು ಸಂಕ್ಷೇಪಿಸುವುದಕ್ಕಾಗಿ ಇದರಲ್ಲಿಯೂ ಸಹ 'ಜಾವ' 'ಜಹಾ' ಮೊದಲಾದವು ಗಳ ಉಪಯೋಗ ಮಾಡಲಾಗಿದೆ. ಇದರ ಮೇಲಿಂದ ಈ ರಚನೆಯು ವಲಭೀವಾಚನಾ ಕಾಲದ (೫ನೆಯ ಶತಮಾನ) ಸಮೀಪಿನದೆಂದು, ಗೊತ್ತಾಗುತ್ತದೆ. ಇದರ ಸಂಪಾದ ಕನೂ ಕೂಡ ತನ್ನ ' ಪ್ರವೇಶದ್ವಾರ 'ದಲ್ಲಿಯೂ ಇದನ್ನೇ ಪ್ರತಿಪಾದಿಸಿದ್ದಾನೆ. (ಪ್ರಕಾಶನ : ಭಾವನಗರ, ವಿ. ೨೦೦೪); ಆದರೆ ಗ್ರಂಥದ ಕೊನೆಯಲ್ಲಿರುವ ಒಂದು ಗಾಹೆಯಲ್ಲಿ ಇದನ್ನು ವಿಜಯದಯಾ ಸೂರೀಶ್ವರನ ಆದೇಶದಿಂದ ಜಿನವಿಜಯನು ಬರೆ ದಿದ್ದಾನೆಂದು ಹೇಳಿದೆ. ಅದರಿಂದ ಇದರ ರಚನಾ ಕಾಲವು ವಿ. ಸಂ. ೧೭೮೫ ರಿಂದ ೧೮೦೯ರ ಮಧ್ಯದಲ್ಲಿ ಎಂದು ಅನುಮಾನ ಮಾಡಲಾಗಿದೆ; ಯಾಕಂದರೆ ತಪಾಗಚ್ಛದ ಪಟ್ಟಾವಲಿಗೆ ಅನುಸರಿಸಿ ೭೪ನೆಯ ಗುರುವಾದ ವಿಜಯದಯಾ ಸೂರಿಯ ಕಾಲವು ಅದೇ ಆಗಿದೆ. ಆದರೆ ಈ ಉಲ್ಲೇಖವು ಗ್ರಂಥ ರಚನಾ ಕಾಲದ್ದಾಗಿರದೆ ಗ್ರಂಥದ ಪ್ರತಿ ಲಿಪಿಯ ಕಾಲದ್ದೂ ಆಗಿರುವ ಸಂಭವವಿದೆ. ವಿಶೇಷವಾಗಿ ಗ್ರಂಥದ ಕೊನೆಯಲ್ಲಿರುವ ಪುಷ್ಪಿಕೆಯಲ್ಲಿ ಪುನಃ ಬೇರೆಯಾಗಿ ಅದನ್ನು ಬರೆದುದರ ಕಾಲವೆಂದು ಸಂ. ೧೮೧೪ ಎಂದು ನಿರ್ದಿಷ್ಟಗೊಳಿಸಿದೆ. ಒಂದು ವೇಳೆ ಮುಂದೆ ಸಂಶೋಧನೆಯಿಂದಲೂ, ಬೇರೆ ಪ್ರಾಚೀನ ಪ್ರತಿಗಳ ಆಧಾರದಿಂದಲೂ, ಇದೇ ಗ್ರಂಥದ ರಚನಾಕಾಲವೆಂದು ಸಿದ್ಧ ವಾದಲ್ಲಿ ಹದಿನೆಂಟನೆಯ ಶತಮಾನದಲ್ಲಿ ಇದರ ಲೇಖಕನು ಆಗಮ ಶೈಲಿಯಲ್ಲಿ ಗ್ರಂಥ ರಚಿಸಿ, ಒಂದು ಅಸಾಧಾರಣ ಕಾರ್ಯ ಮಾಡಿದನೆಂದಾಗುತ್ತದೆ.

ಕಥಾನಾಯಕನಾದ ಜಂಬೂಸ್ವಾಮಿಯು ಮಹಾವೀರ ತೀರ್ಥಂಕರರ ಸಾಕ್ಷಾತ್ ಶಿಷ್ಯನಾಗಿದ್ದನು. ಅಲ್ಲದೆ ಅವರ ನಿರ್ವಾಣದ ತರುವಾಯ ೬೪ ವರ್ಷಗಳವರೆಗೆ ಜೀವಿ ಸಿದ್ದನು. ಜೈನ ಆಗಮಗಳ ಪರಂಪರೆಯಲ್ಲಿ ಅವನಿಗೊಂದು ಮಹತ್ವದ ಸ್ಥಾನವಿದೆ. ಉಪಲಬ್ಧವಾಗಿರುವ ದ್ವಾದಶಾಂಗದ ಬಹು ಭಾಗವು ಸುಧರ್ಮನ ಸ್ವಾಮಿಯಿಂದಲೇ ಉಪದೇಶಿಸಿದ್ದಾಗಿದೆ. ಈ ಕೃತಿಯ ರಚನೆಗನುಸರಿಸಿ ಜಂಬೂಸ್ವಾಮಿಯ ಜನ್ಮವು ರಾಜಗೃಹದಲ್ಲಾಯಿತು. ಆತನ ವೈರಾಗ್ಯ ವೃತ್ತಿಯನ್ನು ತಡೆಯಲಿಕ್ಕೆಂದು ಅವನಿಗೆ ಎಂಟು ಕನ್ಯೆಯರೊಡನೆ ಮದುವೆಗಳನ್ನು ಮಾಡಲಾಯಿತು, ಆದರೂ ಅವನ ಧಾರ್ಮಿಕ ಪ್ರವೃತ್ತಿಗೆ ತಡೆಯುಂಟಾಗಲಿಲ್ಲ. ಅದು ಬೆಳೆಯುತ್ತಲೇ ಹೋಯಿತು. ಆವನು ತನ್ನ ಎಲ್ಲ ಪತ್ನಿಯರನ್ನೂ ಸಂಬೋಧಿಸಿ, ಅವರ ಸಮಸ್ತ ತರ್ಕ ಹಾಗೂ ಯುಕ್ತಿಗಳನ್ನೆಲ್ಲ ಖಂಡನ ಮಾಡಿ ದೀಕ್ಷೆಯನ್ನು ಸ್ವೀಕರಿಸಿದನು. ಪ್ರಭಾವ ಎಂಬ ಹೆಸರಿನ ವಂಚಕನು

ಕಳವು ಮಾಡಲಿಕ್ಕೆಂದು ಇವರ ಮನೆಯನ್ನು ಹೊಕ್ಕಿದ್ದನು. ಅವನೂ ಕೂಡ ಇವರ ಉಪದೇಶವನ್ನು ಕೇಳಿ, ಸಂಸಾರದಿಂದ ವಿರಕ್ತಿಗೊಂಡು, ಸದ್ದಿಲ್ಲದೆ ದೀಕ್ಷೆಯನ್ನು ತೆಗೆದುಕೊಂಡನು.

ಇನ್ನೊಂದು **ಜಂಬೂಚರಿಯಂ** ಮಹಾರಾಷ್ಟ್ರೀ ಪ್ರಾಕೃತದಲ್ಲಿದೆ. ಅದು ಇನ್ನೂ ವರೆಗೆ ಪ್ರಕಾಶಿತವಾಗಿಲ್ಲ. ಇದರ ಕರ್ತೃವು ನಾಇಲ ಗಚ್ಛದ ಗುಣಪಾಲನಾಗಿ ದ್ದಾನೆ. ಈತನು ಜೈನ ಗ್ರಂಥಾವಲಿಯಲ್ಲಿ ಉಲ್ಲೇಖಗೊಂಡ **ಋಷಿದತ್ತಾ ಚರಿತ್ರದ** ಕರ್ತೃವೇ ಆಗಿರಬೇಕು. ಈ ಗ್ರಂಥದ ರಚನಾ ಕಾಲವು ವಿ. ಸಂ. ೧೨೬೪ ಎಂದು ಅಂಕಿತಗೊಂಡಿದೆ. ಈ ಜಂಬೂಚರಿತ್ರವೂ ಹದಿನಾರು ಉದ್ದೇಶಗಳಲ್ಲಿ ಪೂರ್ಣ ಗೊಂಡಿದೆ. ಮುಖ್ಯ ಕಥೆಯೂ ಉಪಕಥೆಗಳೂ ಸಹ ಮೊದಲಿನ ಜಂಬೂಸ್ವಾಮಿ ಚರಿತ ದಲ್ಲಿ ಇದ್ದಂತೆಯೇ ಇವೆ. ಆದರೆ ಬುದ್ಧಿಪೂರ್ವಕವಾಗಿ ಸಂಗ್ರಹಿಸಿದಂತಿವೆ. ಪದ್ಮ ಸುಂದರ ಕೃತ **ಜಂಬೂ ಚರಿತವು** ಅಕಬರನ ಕಾಲದಲ್ಲಿ ಸಂ. ೧೬೩೬ ರಲ್ಲಿ ರಚಿಸಿದ್ದು ದೊರಕಿದೆ.

ಗುಣಚಂದ್ರ ಸೂರಿಯು ವಿರಚಿಸಿದ **ಣರವಿಕ್ಕಮಚರಿಯವು** ನಿಜವಾಗಿಯೂ ಅವನದೇ ಆದ ' ಮಹಾವೀರ ಚರಿಯಂ 'ದಲ್ಲಿ ಉದ್ಧೃತಗೊಂಡುದಾಗಿದೆ. ಅದನ್ನೇ ಪೃಥಕ್ ರೂಪದಿಂದ ಸಂಸ್ಕೃತ ಛಾಯೆ ಸಹಿತ ಪ್ರಕಟಿಸಲಾಗಿದೆ. (ನೇಮಿ ವಿಜ್ಞಾನ ಗ್ರಂಥಮಾಲಾ ೨೦, ವಿ. ಸಂ. ೨೦೦೮). ಛತ್ತಾ ನಗರದ ಜಿತಶತ್ರು ರಾಜನ ಪುತ್ರ ನಾದ ನಂದನನಿಗೆ ಉಪದೇಶವೀಯುತ್ತ ಪೊಟ್ಟಿಲನ್ಧವಿರನು ವಿಷಯಾಸಕ್ತಿಯಲ್ಲಿ ಧರ್ಮೋಪದೇಶದಿಂದ ವಿರಕ್ತಿಯುಂಟಾಗಿ ದೀಕ್ಷೆಯನ್ನು ಸ್ವೀಕರಿಸಿದ ರಾಜಾ ನರಸಿಂಹ ಮತ್ತು ಅವನ ಪುತ್ರನಾದ ನರವಾಹನದತ್ತನ ಚರಿತ್ರವನ್ನೂ ಇದರಲ್ಲಿ ವಿವರಿಸಿದ್ದಾನೆ. ಕಥೆಯ ಗದ್ಯ ಮತ್ತು ಪದ್ಯಗಳೆರಡೂ ಭಾಗಗಳು ರಚನೆಯ ದೃಷ್ಟಿಯಿಂದ ಪ್ರೌಢವೂ ಕಾವ್ಯಗುಣದಿಂದ ಕೂಡಿದವೂ ಆಗಿವೆ.

ಇವಲ್ಲದೆ ಇನ್ನೂ ಅನೇಕ ಪ್ರಾಕೃತ ಗ್ರಂಥಗಳು ಉಪಲಬ್ಧವಿವೆ. ಅವು ಇನ್ನೂ ವರೆಗೆ ಪ್ರಕಟವಾಗಿಲ್ಲ. ಅಂಥವುಗಳಲ್ಲಿ ಕೆಲವುಗಳ ಹೆಸರುಗಳು ಹೀಗಿವೆ :—ವಿಜಯಸಿಂಹ ಕೃತ **ಭುವನಸುಂದರೀ** (೧೦ನೆಯ ಶತಮಾನ), ವರ್ಧಮಾನ ಕೃತ **ಮನೋರಮಾ ಚರಿಯಂ** (೧೧ ನೆಯ ಶತಮಾನ), **ಋಷಿದತ್ತಾ ಚರಿತ** (೧೩ ನೆಯ ಶತಮಾನ), **ಪ್ರದ್ಯುಮ್ನ ಚರಿತ, ಮಲಯಸುಂದರೀ ಕಥಾ, ನರ್ಮದಾಸುಂದರೀ ಕಥಾ, ಧನ್ಯಸುಂದರೀ ಕಥಾ ಮತ್ತು ನರದೇವ ಕಥಾ** (ಜೈನ ಗ್ರಂಥಾವಲಿಯನ್ನು ನೋಡಿರಿ).

### ಪ್ರಾಕೃತ ಕಥಾಕೋಷ :—

ಧರ್ಮೋಪದೇಶಕ್ಕಾಗಿ ಚಿಕ್ಕ ಕಥೆಗಳನ್ನು ಹೇಳುವ ಪರಿಪಾಠವು ಶ್ರಮಣ ಪರಂ ಪರೆಯಲ್ಲಿ ತೀರ ಪ್ರಾಚೀನ ಕಾಲದಿಂದಲೂ ಪ್ರಚಲಿತವಿದೆ. ದ್ವಾದಶಾಂಗ ಆಗಮದ

ಣಾಯೆ ಧಮ್ಮ ಕಹಾಓದಲ್ಲಿ ಇದರ ಒಂದು ರೂಪವು ಕಂಡು ಬರುತ್ತದೆ. ಅದರಲ್ಲಿ ಒಂದು ಗಾಹೆಯೊಳಗೇ ಒಂದು ಉಪದೇಶಾತ್ಮಕ ಮಾತನ್ನು ಹೇಳಿದೆ. ಅದಕ್ಕೆ ದೃಷ್ಟಾಂತವೆಂದು ಆ ಧರ್ಮ ನಿಯಮವನ್ನು ತನ್ನ ಜೀವನದಲ್ಲಿ ಆಚರಿಸಿ ತೋರಿಸಿದ ಒಬ್ಬ ವ್ಯಕ್ತಿಯ ಜೀವನ ವೃತ್ತಾಂತವನ್ನು ಗದ್ಯದಲ್ಲಿ ಸವಿಸ್ತಾರ ಪೂರ್ವಕ ವಿವರಿಸಿದ್ದುಂಟು. ಇದೇ ಪ್ರಣಾಲಿಯನ್ನು ನಾವು ಪಾಲಿಯ ಜಾತಕ ಕಥೆಗಳಲ್ಲಿಯೂ ಕಾಣುತ್ತೇವೆ. ಸಂಸ್ಕೃತದ ಹಿತೋಪದೇಶ, ಪಂಚತಂತ್ರಾದಿ ಚಿಕ್ಕ ಕಥಾತ್ಮಕ ಗ್ರಂಥಗಳ ಶೈಲಿಯ ಪ್ರಣಾಲಿಯೂ ನಹ ಇದೇ ಆಗಿದೆ.

ಆಗಮಗಳ ತರುವಾಯ ಈ ಶೈಲಿಯ ಸ್ವತಂತ್ರ ಪ್ರಾಕೃತ ರಚನೆಯು ಧರ್ಮದಾಸ ಗಣೀಕೃತ ಉಪದೇಶಮಾಲಾ ಪ್ರಕರಣವೆಂಬುದಾಗಿದೆ. ಇದರಲ್ಲಿ ೫೪೪ ಗಾಹೆಗಳು ಇವೆ. ಈ ಕೃತಿಯಲ್ಲಿ ವಿನಯ, ಶೀಲ, ವ್ರತ, ಸಂಯಮ, ದಯಾ, ಜ್ಞಾನ, ಧ್ಯಾನಾದಿ ವಿಷಯಗಳಿಗೆ ದೃಷ್ಟಾಂತವೆಂದು ನೂರಾರು ಸ್ತ್ರೀ-ಪುರುಷರ ಉದಾಹರಣೆಗಳನ್ನು ಕೊಡಲಾಗಿದೆ. ಇಂಥವರ ಚರಿತ್ರೆಯನ್ನು ವಿಸ್ತಾರ ಪೂರ್ವಕವಾಗಿ ಟೀಕೆಯಲ್ಲಿ ವಿವರಿಸಲಾಗಿದೆ. ಇಂಥ ಟೀಕಾ ಗ್ರಂಥಗಳು ೧೦ ನೆಯ ಶತಮಾನದಿಂದ ೧೫ ನೆಯ ಶತಮಾನದ ವರೆಗೆ ಹಲವಾರು ಹುಟ್ಟಿವೆ. ಇವು ಜೈನ ಲಘು ಕಥೆಯ ಭಂಡಾರವಾಗಿವೆ. ಕೆಲವೊಂದು ಟೀಕಾಕಾರರ ಹೆಸರುಗಳು ಹೀಗಿವೆ :—ಜಯಸಿಂಹ ಮತ್ತು ಸಿದ್ಧರ್ಷಿ (೧೦ ನೆಯ ಶತಮಾನ), ಜಿನಭದ್ರ ಮತ್ತು ರತ್ನಪ್ರಭ (೧೨ ನೆಯ ಶತಮಾನ), ಉದಯಪ್ರಭ (೧೩ ನೆಯ ಶತಮಾನ), ಅಭಯಚಂದ್ರ (೧೫ ನೆಯ ಶತಮಾನ), ಜಯಶೇಖರ, ರಾಮವಿಜಯ, ಸರ್ವಾನಂದ, ಧರ್ಮನಂದನ ಮೊದಲಾದವರು. ಮೂಲ ಗಾಹೆಗಳ ರಚನಾಕಾಲವು ನಿಶ್ಚಿತವಾಗಿಲ್ಲ ಆದರೆ ಮುನಿಸಮಾಜದಲ್ಲಿ ಇವುಗಳ ವಿಷಯಕ್ಕೆ ಬಹಳ ಆದರವಿದೆ, ಪ್ರಚಾರವೂ ಇದೆ. ಇವುಗಳ ಕರ್ತೃವು ಮಹಾವೀರ ತೀರ್ಥಂಕರರ ಸಮಕಾಲೀನರೆಂದು ಅವರು ಮನ್ನಿಸುತ್ತಾರೆ. ಆದರೆ ಗಾಹೆಗಳ ಭಾಷೆಯನ್ನು ಅವಲೋಕಿಸಿದರೆ ಅವು ೫-೬ ನೆಯ ಶತಮಾನಕ್ಕಿಂತ ಮೊದಲಿನವೆಂದು ಕಂಡುಬರುವುದಿಲ್ಲ. ಮೂಲ ಕರ್ತೃವು ಹಾಗೂ ಅವುಗಳ ಟೀಕಾಕಾರರೆದುರಿಗೆ ಬೌದ್ಧ ಧಮ್ಮಪದ ಮತ್ತು ಅದರ ಬುದ್ಧಘೋಷ ಕೃತ ಟೀಕೆಗಳು ಆದರ್ಶವೆಂದು ಇದ್ದದ್ದು ಕಂಡು ಬರುತ್ತದೆ. ಇವುಗಳಲ್ಲಿ ಕ್ರಮವಾಗಿ ೪೨೫ ಗಾಹೆಗಳು ಮತ್ತು ೩೧೦ ಕಥಾನಕಗಳು ಇವೆ.

ಇದೇ ಶೈಲಿಯಲ್ಲಿ ೮ ನೆಯ ಶತಮಾನದಲ್ಲಿ ಹರಿಭದ್ರನು ತನ್ನ ಉಪದೇಶಪದವನ್ನು ರಚಿಸಿದನು. ಇದರಲ್ಲಿ ೧೦೪೦ ಗಾಹೆಗಳು ಇವೆ. ಇದರ ಮೇಲೆ ಮುನಿಚಂದ್ರಸೂರಿಯ ಸುಖಬೋಧಿನೀ ಟೀಕೆಯೂ (೧೨ ನೆಯ ಶತಮಾನ) ವರ್ಧಮಾನಕೃತ ವೃತ್ತಿಯೂ (೧೩ ನೆಯ ಶತಮಾನ) ಇದ್ದುದು ಕಂಡುಬರುತ್ತದೆ.

ಕೃಷ್ಣಮುನಿಯ ಶಿಷ್ಯನಾದ ಜಯಸಿಂಹನು ವಿ. ಸಂ. ೯೧೫ ರಲ್ಲಿ ಧರ್ಮದಾಸನ ಕೃತಿಯನ್ನು ಅನುಸರಿಸಿ ೯೮ ಗಾಹೆಗಳನ್ನು ಬರೆದನು. ಅವುಗಳ ಮೇಲೆ

ಸ್ವತಃ ವಿವರಣವನ್ನೂ ಸಹ ಬರೆದನು. ಇವನ ಈ ಪೂರ್ಣಕೃತಿಯು **ಧರ್ಮೋಪ ದೇಶಮಾಲಾ-ವಿವರಣ**ವೆಂಬ ಹೆಸರಿನಿಂದ ಪ್ರಕಟವಾಗಿದೆ (ಮುಂಬೈ ೧೯೪೯). ಇದರಲ್ಲಿ ೧೫೬ ಕಥೆಗಳು ಸಮಾವೇಶಗೊಂಡಿವೆ. ಅವುಗಳಲ್ಲಿ ಶೀಲ, ದಾನ, ಮೊದ ಲಾದ ಸದ್ಗುಣಗಳ ಮಹಾತ್ಮೆಯೂ ಹಾಗೂ ರಾಗ-ದ್ವೇಷಾದಿ ದುರ್ಭಾವಗಳೇ ಮೊದಲುಗೊಂಡು ಕಳವು, ಜೂಜು, ಮದ್ಯಪಾನಗಳಲ್ಲಿ ತನ್ಮಯರಾದ ಎಲ್ಲ ತರಗತಿಯ ವ್ಯಕ್ತಿಚಿತ್ರಗಳೂ ಇವೆ. ಇವುಗಳಿಂದ ಅಂದಿನ ಸಮಾಜದ ಚಿತ್ರಣವು ನಮ್ಮ ಎದುರಿಗೆ ಚೆನ್ನಾಗಿ ಮೂಡಿ ನಿಲ್ಲುತ್ತದೆ. ಪ್ರಾಕೃತಿಕ, ಭಾವಾತ್ಮಕ ಮತ್ತು ರಸಾತ್ಮಕ ವರ್ಣನೆ ಗಳೂ ಸುಂದರವಾಗಿವೆ, ಸಾಹಿತ್ಯ ಗುಣದಿಂದ ಕೂಡಿದುವಾಗಿವೆ.

ಜಯಸಿಂಹ ಸೂರಿಯ ಶಿಷ್ಯನಾದ ಜಯಕೀರ್ತಿಯು ವಿರಚಿಸಿದ **ಶೀಲೋಪ ದೇಶ-ಮಾಲಾ** ಎಂಬುದೂ ಇದೇ ಮಾದರಿಯ ೧೧೬ ಗಾಹೆಗಳ ರಚನೆಯಾಗಿದೆ. ಇದರ ಮೇಲೆ ಸೋಮತಿಲಕ ಕೃತ ಟೀಕೆಯೂ (೧೪ ನೆಯ ಶತಮಾನ) ಇದೆ. ಜಿನೇಶ್ವರ ಸೂರಿಯು ರಚಿಸಿದ **ಕಥಾಕೋಷ ಪ್ರಕರಣ**ದಲ್ಲಿ (ವಿ. ಸಂ. ೧೧೦೮) ೩೦ ಗಾಹೆಗಳ ಆಧಾರದಿಂದ ಸುಮಾರು ೪೦ ಕಥೆಗಳನ್ನು ಹೇಳಿದೆ. ಇದರಲ್ಲಿ ಸುಲಭ ಭಾಷೆಯಿಂದ ಜಿನಪೂಜೆ, ಸುಪಾತ್ರದಾನ ಮೊದಲಾದವುಗಳ ಸುಫಲಗಳನ್ನು ಹೇಳ ಲಾಗಿದೆ. ಅದರ ಜೊತೆಗೇನೇ ರಾಜನೀತಿ, ಸಾಮಾಜಿಕ ರೀತಿ ಮೊದಲಾದವುಗಳ ಚಿತ್ರ ಣವೂ ಬಂದಿದೆ. ಜಿನೇಶ್ವರ ಕೃತ ೬೦ ಗಾಹೆಗಳಿಂದ ಕೂಡಿದ **ಉಪದೇಶರತ್ನಕೋಷ** ಮತ್ತು ಅದರ ಮೇಲೆ ೨೫೦೦ ಶ್ಲೋಕಗಳಲ್ಲಿ ಬರೆದ ವೃತ್ತಿ (ದೇವಭದ್ರನದು) ಸಹ ದೊರೆಯುತ್ತವೆ. ದೇವೇಂದ್ರಗಣಿಕೃತ **ಆಖ್ಯಾನ ಮಣಿಕೋಷ** (೧೧ನೆಯ ಶತಮಾನ) ಮಲಧಾರೀ ಹೇಮಚಂದ್ರಕೃತ **ಭವಭಾವನಾ** ಮತ್ತು **ಉಪದೇಶಮಾಲಾ ಪ್ರಕರಣ** (೧೨ ನೆಯ ಶತಮಾನ) ಇವು ಸಹ ಇದೇ ಪ್ರಕಾರದ ಲಘುಕಥೆಗಳ ಸಂಗ್ರಹಗಳಾಗಿವೆ. ಸೋಮಪ್ರಭ ಕೃತ **ಕುಮಾರಪಾಲ-ಪ್ರತಿಬೋಧ**ದಲ್ಲಿ (ವಿ. ಸಂ. ೧೨೪೧) ಪ್ರಾಕೃತ ವಲ್ಲದೆ ಕೆಲವೊಂದು ಆಖ್ಯಾನಗಳು ಸಂಸ್ಕೃತ ಮತ್ತು ಅಪಭ್ರಂಶದಲ್ಲಿಯೂ ರಚಿತ ವಾಗಿವೆ. ಇದರಲ್ಲಿ ಒಟ್ಟು ಐದು ಪ್ರಸ್ತಾವಗಳಿವೆ. ಅವುಗಳ ಮುಖಾಂತರ—ಗ್ರಂಥ ಕಾರನು ಹೇಳುವಂತೆ—ಆಚಾರ್ಯ ಹೇಮಚಂದ್ರನು ರಾಜಾ ಕುಮಾರಪಾಲನನ್ನು ಜೈನಧರ್ಮಾವಲಂಬಿಯನ್ನಾಗಿ ಮಾಡಿದನು. ಐದೂ ಪ್ರಸ್ತಾವಗಳಲ್ಲಿ ಕೂಡಿ ಒಟ್ಟು ೫೪ ಕಥಾನಕಗಳು ಇವೆ. ಇವು ಬಹಳ ಸುಂದರ ಹಾಗೂ ಸಾಹಿತ್ಯಿಕ ಗುಣದಿಂದ ಕೂಡಿದುದಾಗಿವೆ. ಮಾನತುಂಗ ಸೂರಿ ಕೃತ **ಜಯಂತೀ-ಪ್ರಕರಣ**ದ ರಚನೆಯು ಭಗವತೀ ಸೂತ್ರದ ೧೨ ನೆಯ ಶತಕದ ಎರಡನೆಯ ಉದ್ದೇಶದ ಆಧಾರದಿಂದ ಆಗಿದೆ. ಅದಕ್ಕನುಸರಿಸಿ ಶ್ರಮಣೋಪಾಸಿಕೆಯಾದ ಜಯಂತಿಯು ಕೌಶಾಂಬಿಯ ರಾಜನಾದ ಶತಾನೀಕನ ತಂಗಿಯಾಗಿದ್ದಳು. ಅವಳು ತೀರ್ಥಂಕರ ಮಹಾವೀರನಿಗೆ ಧರ್ಮಕ್ಕೆ ಸಂಬಂಧಿಸಿದ ಅನೇಕ ಪ್ರಶ್ನೆಗಳನ್ನು ಕೇಳಿದ್ದಳು. ಇದನ್ನು ಆಧರಿಸಿ ಇದರ ಕರ್ತೃವು ೨೮ ಗಾಹೆಗಳನ್ನು ರಚಿಸಿದ್ದಾನೆ. ಅವನ ಶಿಷ್ಯನಾದ ಮಲಯಪ್ರಭ ಸೂರಿಯು ವಿ.ಸಂ.

೧೨೬೦ ರ ಸುಮಾರಿನಲ್ಲಿ ಅದರ ಮೇಲೆ ವೃತ್ತಿಯನ್ನು ಬರೆದಿದ್ದಾನೆ. ಇದರಲ್ಲಿ ಅನೇಕ ಕಥೆಗಳಿವೆ. ಉಜ್ಜಯಿನಿಯ ರಾಜನಾದ ಪ್ರದ್ಯೋತನು ಚೇಟಕ ರಾಜನ ಪುತ್ರಿಯೂ ಶತಾನೀಕನ ಪತ್ನಿಯೂ ಆದ ಮೃಗಾವತಿಯಲ್ಲಿ ಆಸಕ್ತನಾಗಿದ್ದನು. ಆಗ ತೀರ್ಥಂಕರ ಮಹಾವೀರನು ಅವನಿಗೆ ಪರಸ್ತ್ರೀ ತ್ಯಾಗದ ಉಪದೇಶವಿತ್ತನು. ಉಳಿದ ಕಥೆಗಳು ಶೀಲ, ಸುಪಾತ್ರದಾನ ಮತ್ತು ತಪ ಮೊದಲಾದ ಗುಣಗಳ ಫಲಗಳನ್ನು ವಿವರಿಸು ವಂಥವು ಆಗಿವೆ. ಇವುಗಳಲ್ಲಿ ಋಷಭದೇವ, ಭರತ ಮತ್ತು ಬಾಹುಬಲಿಯ ವೃತ್ತಾಂತವೂ ಕೂಡ ಬಂದಿದೆ.

ಗುಣಚಂದ್ರ ಕೃತ **ಕಥಾರತ್ನಕೋಷದಲ್ಲಿ** (೧೨ ನೆಯ ಶತಮಾನ) ಐವತ್ತು ಕಥೆಗಳಿವೆ. ಇವುಗಳಲ್ಲ ಕೆಲವೆಡೆಯಲ್ಲಿ ಅಪಭ್ರಂಶ ಭಾಷೆಯ ಉಪಯೋಗವೂ ಇದೆ. ಇನ್ನುಳಿದ ಕಥಾಕೋಷಗಳಲ್ಲಿ ಚಂದ್ರಪ್ರಭ ಮಹತ್ತರ ಕೃತ **ವಿಜಯಚಂದ್ರ ಕೇವಲೀ** (೧೧ ನೆಯ ಶತಮಾನ), ಜಿನಚಂದ್ರಸೂರಿ ಕೃತ **ಸಂವೇಗ-ರಂಗಶಾಲಾ** ಮತ್ತು ಆಷಾಢಕೃತ **ವಿವೇಕ-ಮಂಜರೀ** ಹಾಗೂ **ಉಪದೇಶ-ಕಂದಲೀ** (೧೨ನೆಯ ಶತಮಾನ), ಮುನಿಸುಂದರ ಕೃತ **ಉಪದೇಶ ರತ್ನಾಕರ** (೧೩ ನೆಯ ಶತಮಾನ), ಸೋಮಚಂದ್ರ ಕೃತ **ಕಥಾಮಹೋದಧಿ** ಮತ್ತು ಶುಭವರ್ಧನಗಣಿ ಕೃತ **ವರ್ಧಮಾನ-ದೇಶನಾ** ಹಾಗೂ **ದಶಶ್ರಾವಕ-ಚರಿತ್ರ** (೧೫ ನೆಯ ಶತಮಾನ) ಇವು ಉಲ್ಲೇಖನೀಯವಾಗಿವೆ ಇವಲ್ಲದೆ ಬಿಡಿಬಿಡಿಯಾದ ಅನೇಕ ಚಿಕ್ಕ ಕಥೆಗಳಿವೆ. ಅಂಥವು ಗಳಲ್ಲಿ ವಿಶೇಷ ವ್ರತಗಳನ್ನು ಆಚರಿಸಿ ವಿಶಿಷ್ಟ ಫಲವನ್ನು ಹೊಂದಿದ ಸ್ತ್ರೀ ಪುರುಷರ ಚರಿತ್ರಗಳನ್ನು ವರ್ಣಿಸಲಾಗಿದೆ; ಇವುಗಳಿಗೆ ಉದಾಹರಣೆಗಳೆಂದು **ಅಂಜನಾ ಸುಂದರೀ ಕಥಾ, ಶೀಲವತೀ, ಸರ್ವಾಂಗಸುಂದರೀ** ಮೊದಲಾದ ಕಥೆಗಳನ್ನು ಎತ್ತಿ ಹೇಳಬಹುದಾಗಿದೆ. ಈ ಪ್ರಕಾರದ ಕೆಲವೊಂದು ೨೦-೨೫ ಪ್ರಾಕೃತ ಕಥೆಗಳ ಉಲ್ಲೇಖವು ಜೈನ-ಗ್ರಂಥಾವಲಿಯಲ್ಲಿ ಬರುತ್ತದೆ.

**ಅಪಭ್ರಂಶ ಭಾಷೆಯ ವಿಕಾಸ :—**

ಭಾರತದಲ್ಲಿ ಆರ್ಯ ಭಾಷೆಗಳ ವಿಕಾಸವನ್ನು ಮುಖ್ಯವಾಗಿ ಮೂರು ಘಟ್ಟಗಳಲ್ಲಿ ವಿಂಗಡಿಸಿ ವಿವೇಚಿಸಲಾಗುತ್ತದೆ. ಮೊದಲನೆಯ ಹಂತದ ಭಾಷೆಯ ಸ್ವರೂಪವು ವೇದ ಗಳು, ಬ್ರಾಹ್ಮಣಗಳು, ಉಪನಿಷದ್‌ಗಳು ಮತ್ತು ರಾಮಾಯಣ, ಮಹಾಭಾರತ ಮೊದಲಾದ ಪುರಾಣ ಹಾಗೂ ಕಾವ್ಯಗಳಲ್ಲಿ ಕಂಡುಬರುತ್ತದೆ. ಇದಕ್ಕೆ ಭಾಷಾ ವಿಕಾಸದ ಪ್ರಾಚೀನ ಯುಗವೆಂದು ಮನ್ನಿಸಲಾಗಿದೆ. ಕ್ರಿ.ಪೂ. ಆರನೆಯ ಶತಮಾನ ದಲ್ಲಿ ಮಹಾವೀರ ಮತ್ತು ಬುದ್ಧ ಇವರು ತಮ್ಮ ಉಪದೇಶಕ್ಕೆ ಯಾವ ಭಾಷೆಯನ್ನು ಉಪಯೋಗಿಸಿದರೋ ಅದು ಆ ಕಾಲದಲ್ಲಿ ಪೂರ್ವ ಭಾರತದ ಲೋಕಭಾಷೆಯಾಗಿತ್ತು. ಆ ಭಾಷೆಯ ಸ್ವರೂಪವನ್ನು ಪಾಲಿ ತ್ರಿಪಿಟಕಗಳಲ್ಲಿಯೂ ಅರ್ಧಮಾಗಧಿ ಜೈನಾಗಮ ಗಳಲ್ಲಿಯೂ ನಾವು ಕಾಣುತ್ತೇವೆ. ಆ ಮೇಲಿನ ಶೌರಸೇನೀ ಮತ್ತು ಮಹಾರಾಷ್ಟ್ರೀ

ರಚನೆಗಳಲ್ಲಿ ಕಂಡು ಬರುವ ಭಾಷೆಯು ಮಧ್ಯಯುಗದ ಎರಡನೆಯ ಹಂತವಾಗಿದೆ. ಇದರ ವಿಕಾಸ ಕಾಲವು ಕ್ರಿ ಶ. ಎರಡನೆಯ ಶತಮಾನದಿಂದ ಐದನೆಯ ಶತಮಾನದ ವರೆಗೆ ಇದ್ದದ್ದು ಕಂಡುಬರುತ್ತದೆ. ಆದರೆ ನಂತರ ಮಧ್ಯಯುಗದ ಮೂರನೆಯ ಹಂತದ ಯಾವ ಭಾಷೆಯು ಕಂಡು ಬರುತ್ತದೆಯೋ ಅದಕ್ಕೆ ಅಪಭ್ರಂಶವೆಂದು ಹೆಸರನ್ನು ಕೊಡಲಾಗಿದೆ. ಭಾಷೆಯ ವಿಷಯದಲ್ಲಿ ಮೊಟ್ಟ ಮೊದಲು ಅಪಭ್ರಂಶದ ಉಲ್ಲೇಖವು ಪಾತಂಜಲ ಮಹಾಭಾಷ್ಯದಲ್ಲಿ (ಕ್ರಿ.ಪೂ. ೨ನೆಯ ಶತಮಾನ) ದೊರೆಯುತ್ತದೆ. ಆದರೆ ಅಲ್ಲಿ ಅದರ ಅರ್ಥವು ಯಾವ ಒಂದು ವಿಶೇಷ ಭಾಷೆಯೆಂದಾಗಿರದೆ ಶಬ್ದದ ಒಂದು ರೂಪವೆಂದಿದೆ. ಅದು ಸಂಸ್ಕೃತದಿಂದ ಅಪಭ್ರಷ್ಟ, ವಿಕೃತ ಅಥವಾ ವಿಕಸಿತವಾದ ರೂಪದ ಹೆಸರಾಗಿದೆ. ಉದಾ : ಗಾ ಎಂಬುದು ಗಾವೀ, ಗೋಣೀ, ಗೋಪೋತಲಿಕಾ ಆದಿ ದೇಶೀ ರೂಪಗಳಾಗಿವೆ. ಇದೇ ಅಭಿಪ್ರಾಯಕ್ಕನುಸರಿಸಿ ದಂಡಿಯು (೬ ನೆಯ ಶತಮಾನ) ತನ್ನ ಕಾವ್ಯಾದರ್ಶದಲ್ಲಿ, ಶಾಸ್ತ್ರದಲ್ಲಿ ಸಂಸ್ಕೃತದಿಂದ ಭಿನ್ನವಾದ ಎಲ್ಲ ಶಬ್ದಗಳೂ ಅಪಭ್ರಂಶವೆಂದು ಹೇಳಿದ್ದಾನೆ : ಆದರೆ ಕಾವ್ಯದಲ್ಲಿ ಆಭೀರ ಮೊದಲಾದ ಭಾಷೆಗಳಿಗೆ ಅಪಭ್ರಂಶವೆಂದು ಮನ್ನಿಸಲಾಗಿದೆ. ಇದರಿಂದ ದಂಡಿಯ ಕಾಲದಲ್ಲಿ ಅರ್ಥಾತ್ ಆರನೆಯ ಶತಮಾನದಲ್ಲಿ ಅಪಭ್ರಂಶ ಕಾವ್ಯ ರಚನೆಯು ಪ್ರಚಲಿತ ವಿತ್ತೆಂದು ಸ್ಪಷ್ಟವಾಗುತ್ತದೆ. ಅಪಭ್ರಂಶದ ವಿಕಾಸವು ಹತ್ತನೆಯ ಶತಮಾನದ ವರೆಗೆ ನಡೆಯಿತು. ಇದರ ಜೊತೆಗೇನೇ ಆರ್ಯಭಾಷೆಯ ವಿಕಾಸದ ಎರಡನೆಯ ಹಂತವು ಸಮಾಪ್ತವಾಗಿ ಮೂರನೆಯ ಹಂತದ ಪ್ರಾದುರ್ಭಾವವಾಯಿತು ಇದರ ಪ್ರಾತಿ ನಿಧಿಕ ರೂಪುಗಳೆಂದೇ ಹಿಂದೀ, ಮರಾಠಿ, ಗುಜರಾತೀ, ಬಂಗಾಲಿ ಮೊದಲಾದ ಆಧು ನಿಕ ಭಾಷೆಗಳಾಗಿವೆ. ಈ ಪ್ರಕಾರ ಅಪಭ್ರಂಶವು ಒಂದು ಮಗ್ಗಲಿಗೆ ಪ್ರಾಚೀನ ಪ್ರಾಕೃತ ಮತ್ತು ಇನ್ನೊಂದು ಮಗ್ಗಲಿಗೆ ಆಧುನಿಕ ಭಾಷೆಗಳ ನಡುವಿನ ಕಳಿಗೆ ಇದ್ದಂತೆ ಇದೆ. ನಿಜವಾಗಿಯೂ ಅಪಭ್ರಂಶದಿಂದಲೇ ಹಿಂದೀ ಮೊದಲಾದ ಭಾಷೆಗಳ ವಿಕಾಸ ವಾಯಿತು. ಈ ದೃಷ್ಟಿಯಿಂದ ಈ ಭಾಷೆಯ ಸ್ವರೂಪಕ್ಕೆ ಬಹಳ ಮಹತ್ವವಿದೆ. ಪ್ರಾಕೃತಕ್ಕಿಂತ ಅಪಭ್ರಂಶ ಭಾಷೆಯ ಬೇರೆಯಾದ ಮುಖ್ಯ ಲಕ್ಷಣಗಳು ಹೀಗಿವೆ : ಅಕಾರಾಂತ ಶಬ್ದಗಳ ಕರ್ತೃ ಕಾರಕಗಳ ವಿಭಕ್ತಿಗಳು ಸಂಸ್ಕೃತದಲ್ಲಿ ವಿಸರ್ಗ, ಪ್ರಾಕೃತ ದಲ್ಲಿ ' ಓ ' ಕಂಡುಬರುವಂಥ ಕಡೆಯಲ್ಲಿ ಕರ್ಮಕಾರಕದಲ್ಲಿ ' ಅಮ್ ' ಎಂಬ ಎರಡೂ ಭಾಷೆಗಳಲ್ಲಿ ಆಗುವೆಡೆಗಳಲ್ಲಿಯೂ ಅಪಭ್ರಂಶದಲ್ಲಿ ಅದು 'ಉ'ದ ರೂಪದಲ್ಲಿ ಪರಿವರ್ತಿತ ವಾಗಿದೆ. ಮಾದರಿಗಾಗಿ ಸಂಸ್ಕೃತದ ' ರಾಮಃ ವನಂ ಗತಃ ', ಪ್ರಾಕೃತದಲ್ಲಿ 'ರಾಮೊ ವಣಂ ಗಓ ' ಮತ್ತು ಅಪಭ್ರಂಶದಲ್ಲಿ ' ರಾಮು ವಣಂ ಗಯಉ ' ಎಂಬ ರೂಪದಲ್ಲಿ ಕಂಡು ಬರುತ್ತದೆ. ಈ ಕಾರಣದಿಂದ ಭರತಮುನಿಯು ಈ ಭಾಷೆಗೆ 'ಉಕಾರ ಬಹುಲ' ವೆಂದು ಹೇಳಿದ್ದಾನೆ. ಅಪಭ್ರಂಶದಲ್ಲಿ ಇನ್ನೊಂದು ವಿಶೇಷತೆಯೂ ಇದೆ. ' ತಣ ' ಹಾಗೂ ' ಕೇರ ' ಎಂಬುದೂ ಬಹಳಷ್ಟು ಉಪಯೋಗವಾದುದು ಕಂಡು ಬರುತ್ತದೆ. ಈಗಲೂ ಕೂಡ ಭಾಷೆಯು ಯೋಗಾತ್ಮಕವಾಗಿದೆ. ಆದರೂ ಅಯೋಗಾತ್ಮಕತೆಯು

ಕಡೆಗೆ ಇದರ ಪ್ರವೃತ್ತಿಯೂ ಸ್ಪಷ್ಟವಾಗಿ ಕಂಡುಬರುತ್ತದೆ. ಕಾರಕ ವಿಭಕ್ತಿಗಳು ಮೂರು ನಾಲ್ಕು ಮಾತ್ರ ಉಳಿದಿವೆ, ಮತ್ತು ಕ್ರಿಯೆಗಳ ಪ್ರಯೋಗವು ನಿಂತ ಹಾಗೆಯೇ ಆಗಿದೆ. ಅವುಗಳ ಸ್ಥಾನದಲ್ಲಿ ಕ್ರಿಯೆಗಳಿಂದ ಸಿದ್ಧವಾದ ವಿಶೇಷಣಗಳ ಉಪ ಯೋಗವಾಗತೊಡಗಿತು. ವ್ಯಾಕರಣದ ಈ ವಿಶೇಷತೆಗಳ ಹೊರತಾಗಿ ಕಾವ್ಯ ರಚನೆ ಯಲ್ಲಿ ತೀರ ಹೊಸ ಪ್ರಣಾಲಿಗಳೂ ಹೊಸ ಹೊಸ ಛಂದಗಳ ಪ್ರಯೋಗಗಳೂ ಕಂಡು ಬರುತ್ತವೆ. ದೋಹಾ ಹಾಗೂ ಪದ್ಧಡಿಯಾ ಛಂದಗಳು ಅಪಭ್ರಂಶ ಭಾಷೆಯ ಕಾವ್ಯಕ್ಕೆ ತಮ್ಮವೇ ಆದ ವಸ್ತುಗಳಾಗಿವೆ; ಮತ್ತು ಇವುಗಳಿಂದಲೇ ಹಿಂದಿಯ ದೋಹಾ ಹಾಗೂ ಚೌಪಾಇಗಳ ಆವಿಷ್ಕಾರವಾಯಿತು. ಈ ಭಾಷೆಯ ಪ್ರಚುರ ಸಾಹಿತ್ಯವು ಜೈನ ಸಾಹಿತ್ಯದಲ್ಲಿ ತನ್ನ ವಿಶೇಷತೆಯನ್ನು ವ್ಯಕ್ತಗೊಳಿಸಿದೆ.

### ಅಪಭ್ರಂಶ ಪುರಾಣ:—

ಯಾವ ಪ್ರಕಾರ ಪ್ರಾಕೃತದಲ್ಲಿ ಪ್ರಥಮಾನುಯೋಗ ಕಾವ್ಯದ ಪ್ರಾರಂಭವು ರಾಮಕಥೆಯಿಂದ ಆಗುತ್ತದೆಯೋ ಅದೇ ಪ್ರಕಾರ ಅಪಭ್ರಂಶವೂ ಕೂಡ ರಾಮಕಥೆ ಯಿಂದಲೇ ಪ್ರಾರಂಭವಾಗುತ್ತದೆ. ಇಲ್ಲಿಯವರೆಗೆ ಬೆಳಕಿಗೆ ಬಂದ ಅಪಭ್ರಂಶ ಕಥಾ ಸಾಹಿತ್ಯದಲ್ಲಿ ಸ್ವಯಂಭೂಕೃತ **ಪೌಉಮಚರಿಉ** ಎಂಬುದೇ ಮೊಟ್ಟ ಮೊದಲಿನ ದಾಗಿದೆ. ಇದರಲ್ಲಿ ವಿದ್ಯಾಧರ, ಅಯೋಧ್ಯಾ, ಸುಂದರ, ಯುದ್ಧ ಮತ್ತು ಉತ್ತರ ಈ ಐದು ಕಾಂಡಗಳಿವೆ. ಇವುಗಳಲ್ಲಿ ಅಡಕವಾದ ಸಮಸ್ತಸಂಧಿಗಳ-ಪರಿಚ್ಛೇದಗಳ-ಸಂಖ್ಯೆಯು ೯೦ ಇದೆ. ಗ್ರಂಥದ ಆದಿಯಲ್ಲಿ ಕವಿಯು ತನಗಿಂತಲೂ ಮೊದಲು ಆಗಿ ಹೋದ ಭರತ, ಪಿಂಗಲ, ಭಾಮಹ ಮತ್ತು ದಂಡಿ ಇವರ ಐದು ಮಹಾಕಾವ್ಯಗಳನ್ನು ಉಲ್ಲೇಖಿಸಿದ್ದಾನೆ. ಈ ರಾಮಕಥಾ ರೂಪೀ ನದಿಯು ವರ್ಧಮಾನ ತೀರ್ಥಂಕರರ ಮುಖ ದಿಂದ ಜನಿಸಿತು ಗಣಧರ ದೇವನು ಅದು ಹರಿಯುತ್ತಿರುವುದನ್ನು ಕಂಡನು. ತರುವಾಯ ಅದು ಇಂದ್ರಭೂತಿ ಆಚಾರ್ಯ, ಸುಧರ್ಮ ಮತ್ತು ಕೀರ್ತಿಧರರಿಂದ ಪ್ರವಾಹಿತ ಗೊಳ್ಳುತ್ತ, ರವಿಷೇಣಾಚಾರ್ಯರ ಪ್ರಸಾದದಿಂದ ಕವಿರಾಜನಿಗೆ (ಸ್ವಯಂಭೂ) ಲಭಿ ಸಿತು. ತನ್ನ ವೈಯಕ್ತಿಕ ಪರಿಚಯದಲ್ಲಿ ಕವಿಯು ತನ್ನ ಮಾತೆಯಾದ ಪದ್ಮಿನಿ ಹಾಗೂ ತಂದೆ ಮಾರುತದೇವ, ಅದರಂತೆಯೇ ಅಮೃತಾಂಬಾ ಮತ್ತು ಆದಿತ್ಯಾಂಬಾ ಎಂಬ ಇಬ್ಬರು ಪತ್ನಿಯರ ಉಲ್ಲೇಖ ಮಾಡಿದ್ದಾನೆ. ತಾನು ಶರೀರದಿಂದ ಕೃಶನೂ ಕುರೂ ಪಿಯೂ ಆಗಿದ್ದನೆಂದೂ ಹೇಳಿದ್ದಾನೆ. ಅದರಂತೆ ಅವನ ಮೂಗು ಚಪ್ಪಟೆಯೂ ಹಲ್ಲು ಗಳು ವಿರಲವೂ ಆಗಿದ್ದವೆಂದು ತಿಳಿಯುತ್ತದೆ. ಅವನು ತನ್ನ ಆಶ್ರಯದಾತನಾದ ಧನಂಜಯನ ಹೆಸರನ್ನೂ ನಹ ಕಾಣಿಸಿದ್ದಾನೆ. ಪುಷ್ಪದಂತ ಕೃತ ಮಹಾಪುರಾಣದಲ್ಲಿ ಸ್ವಯಂಭೂವಿನ ಉಲ್ಲೇಖವು ಬರುವಲ್ಲಿ ಪ್ರಾಚೀನ ಪ್ರತಿಯಲ್ಲಿ '**ಸ್ವಯಂಭುಃ ಪದ್ಧಡಿಬಂಧಕರ್ತಾ ಆಪಲೀಸಂಘೀಯಃ**' ಎಂಬ ಮಾತು ಕಂಡುಬರುತ್ತದೆ. ಇದರಿಂದ ಅವನು ಯಾಪನೀಯ ಸಂಘದ ಅನುಯಾಯಿಯಾಗಿರಬೇಕೆಂದು ಕಂಡು

ಬರುತ್ತದೆ. ಕವಿಯಿಂದ ಉಲ್ಲೇಖಗೊಂಡ ರವಿಷೇಣಾಚಾರ್ಯನು ತನ್ನ ಪದ್ಮಚರಿತ ವನ್ನು ವೀರ ನಿ. ಸಂ. ೧೨೦೩ ರಲ್ಲಿ ಅರ್ಥಾತ್ ಕ್ರಿ.ಶ. ೬೭೬ ರಲ್ಲಿ ಪೂರ್ಣಗೊಳಿಸಿದನು. ಇನ್ನು ಸ್ವಯಂಭೂದೇವನ ಉಲ್ಲೇಖವನ್ನು ಕ್ರಿ.ಶ. ೯೫೯ ರಲ್ಲಿ ಪ್ರಾರಂಭಗೊಂಡ ಅಪಭ್ರಂಶ ಮಹಾಪುರಾಣದಲ್ಲಿ ಅದರ ಕರ್ತೃವಾದ ಪುಷ್ಪದಂತನು ಮಾಡಿದ್ದಾನೆ. ಆದರಿಂದ ಪಉಮಚರಿಉ ಕಾವ್ಯವು ಈ ಎರಡೂ ಕಾಲಗಳ ಮಧ್ಯದಲ್ಲಿ ರಚಿತವಾದ ದ್ದೆಂದು ನಿಶ್ಚಿತವಾಗುತ್ತದೆ. ಈ ಕಾಲಾವಧಿಯನ್ನು ಇನ್ನೂ ಸೀಮಿತಗೊಳಿಸುವ ಒಂದು ಆಧಾರವೂ ಇದೆ. ಇವನು ತನ್ನ ಪಉಮಚರಿಉದಲ್ಲಿ ರವಿಷೇಣನ ಉಲ್ಲೇಖವನ್ನು ಮಾಡಿದಂತೆಯೇ ಸಂಸ್ಕೃತ ಹರಿವಂಶ-ಪುರಾಣದ ಕರ್ತೃವಾದ ಜಿನಸೇನನ ಉಲ್ಲೇಖ ವನ್ನು ಮಾಡಿಲ್ಲ. ಆದರಿಂದ ಬಹುತರವಾಗಿ ಅವನು ಸಂಸ್ಕೃತ ಹರಿವಂಶದ ರಚನಾ ಕಾಲಕ್ಕಿಂತ ಅರ್ಥಾತ್ ಕ್ರಿ.ಶ. ೭೮೩ಕ್ಕಿಂತ ಪೂರ್ವದಲ್ಲಿ ಆಗಿಹೋಗಿರಬೇಕು. ಹೀಗಾಗಿ ಈ ಗ್ರಂಥದ ರಚನಾಕಾಲವು ಕ್ರಿ.ಶ. ೭೦೦ ರ ಸುಮಾರು ಎಂದು ಸಿದ್ಧವಾಗುತ್ತದೆ. ಸ್ವಯಂಭೂದೇವನು ಈ ಕೃತಿಯಲ್ಲಿ ೮೨ ಇಲ್ಲವೆ ೮೩ ಸಂಧಿಗಳ ವರೆಗೆ ಮಾತ್ರ ರಚಿಸಿ ದ್ದಾನೆ; ಮತ್ತು ಅಲ್ಲಿಯೇ ಅವನು ತನ್ನ ಕೃತಿಯು ಪೂರ್ಣಗೊಂಡಿತೆಂದು ತಿಳಿದನು. ಆದರೆ ಅವನ ಸುಪುತ್ರನಾದ ತ್ರಿಭುವನ ಸ್ವಯಂಭುವು ಮುಂದೆ ಏಳೆಂಟು ಸಂಧಿಗಳನ್ನು ರಚಿಸಿ, ಪದ್ಮಚರಿತದಲ್ಲಿ ವರ್ಣನಗೊಂಡ ವಿಷಯಕ್ಕನುಸರಿಸಿ ಪೂರ್ಣಗೊಳಿಸಿದನು. ಸಮಗ್ರ ಗ್ರಂಥದ ಕಥಾಭಾಗವು ಸಂಸ್ಕೃತಪದ್ಮಚರಿತದಂತೆಯೇ ಇದೆ. ಆದರೂ ಈ ಕೃತಿ ಯಲ್ಲಿ ವರ್ಣನೆಗಳು ವಿಶೇಷವಾಗಿ ಕಾವ್ಯಾತ್ಮಕವಾಗಿವೆ. ಅಲ್ಲಲ್ಲಿ ಛಂದಸ್ಸಿನ ವೈಚಿತ್ರ್ಯ, ಅಲಂಕಾರ, ರಸಭಾವನಿರೂಪಣ ಮೊದಲಾದುವು ಸಂಸ್ಕೃತ ಕಾವ್ಯಶೈಲಿಯ ಉತ್ಕೃಷ್ಟ ರೀತಿಗಳಿಗನುಸರಿಸಿ ಆಗಿವೆ.

ಸ್ವಯಂಭೂವಿನ ಇನ್ನೊಂದು ಅಪಭ್ರಂಶ ಕೃತಿಯು '**ರಿಟ್ಠಣೇಮಿ ಚರಿಉ**' ಅಥವಾ '**ಹರಿವಂಶ ಪುರಾಣ**' ಎಂಬುದಾಗಿದೆ. ಇದರ ಉತ್ಥಾನಿಕೆಯಲ್ಲಿ ಕವಿಯು ಭರತ, ಪಿಂಗಲ, ಭಾಮಹ ಮತ್ತು ದಂಡಿಗಳಲ್ಲದೆ ವ್ಯಾಕರಣ-ಜ್ಞಾನಕ್ಕಾಗಿ ಇಂದ್ರ ನನ್ನೂ, ಘನ ಘನ ಅಕ್ಷರಾಡಂಬರಕ್ಕಾಗಿ ಬಾಣನನ್ನೂ, ಪದ್ಧಡಿಯಾ ಛಂದಕ್ಕಾಗಿ ಚತುರ್ಮುಖನನ್ನೂ ಉಲ್ಲೇಖಿಸಿ, ಅವರ ಋಣವನ್ನು ಸ್ವೀಕರಿಸಿದ್ದಾನೆ. ಕೊನೆಯಲ್ಲಿ ಕಥೆಯ ಪರಂಪರೆಯನ್ನು ಮಹಾವೀರನ ತರುವಾಯ ಗೌತಮ. ಸುಧರ್ಮ, ವಿಷ್ಣು, ನಂದಿಮಿತ್ರ, ಅಪರಾಜಿತ, ಗೋವರ್ಧನ ಮತ್ತು ಭದ್ರಬಾಹುವಿನವರೆಗೆ ಸಂಗ್ರಹ ರೂಪದಲ್ಲಿ ವಿವರಿಸಿದ್ದಾನೆ. ಅಲ್ಲದೆ ತಾನು ಪದ್ಧಡಿಯಾ ಬಂಧದಲ್ಲಿ ಮನೋಹರ ರೂಪ ದಲ್ಲಿ ನಿರೂಪಿಸಿದ್ದೇನೆಂದು ಹೇಳಿದ್ದಾನೆ. ಇದರ ಪ್ರಾರಂಭದ ೯೯ ಸಂಧಿಗಳು ಮಾತ್ರ ಸ್ವಯಂಭೂಕೃತವಾಗಿವೆ. ಉಳಿದುವು ಅವನ ಪುತ್ರನಾದ ತ್ರಿಭುವನ ಸ್ವಯಂಭೂ ರಚಿ ಸಿದ್ದಾಗಿವೆ. ಈ ಕೊನೆಯ ನಾಲ್ಕು ಸಂಧಿಗಳಲ್ಲಿಯೇ ಪುಷ್ಪಿಕೆಯಲ್ಲಿ ಮುನಿ ಯಶಃ ಕೀರ್ತಿಯ ಹೆಸರೂ ಸಹ ಬರುತ್ತದೆ. ಇದರಿಂದ ಈ ಗ್ರಂಥದಲ್ಲಿ ಸಂಶೋಧನೆಯನ್ನಾ ಗಲಿ, ಸಂವರ್ಧನೆಯನ್ನಾಗಲಿ ಇವನೂ ಮಾಡಿರಬೇಕೆಂದು ಅನುಮಾನಿಸಲಿಕ್ಕೆ ಅವ

ಕಾಶವು ಇದೆ. ಜಿನಸೇನ ಕೃತ ಹರಿವಂಶದಲ್ಲಿ ವಿವರಿಸಿದ ಕಥೆಯೇ ಇದರಲ್ಲಿಯೂ ಇದೆ. ಯಾದವ ಕಾಂಡದಲ್ಲಿ ಕೃಷ್ಣನ ಜನ್ಮ, ಬಾಲಕ್ರೀಡೆ, ವಿವಾಹ ಮೊದಲಾದುವುಗಳ ಸಂಬಂಧದಲ್ಲಿ ಬರುವ ವರ್ಣನೆಯು ಬಹು ಕಾವ್ಯಮಯವಾಗಿದೆ. ಇದೇ ಪ್ರಕಾರ ಕುರು-ಕಾಂಡದಲ್ಲಿ ಕೌರವ-ಪಾಂಡವರ ಜನ್ಮ, ಕುಮಾರಕಾಲ, ಶಿಕ್ಷಣ, ಪರಸ್ಪರ ವಿರೋಧ, ದ್ಯೂತ ಕ್ರೀಡಾ ಮತ್ತು ವನವಾಸಗಳ ವರ್ಣನೆಯು ಮನೋಹರವಾಗಿದೆ. ಯುದ್ಧಕಾಂಡದಲ್ಲಿ ಬರುವ ಕೌರವ-ಪಾಂಡವರ ಯುದ್ಧದ ವರ್ಣನೆಯು ಬಹಳ ರೋಚಕ ವಾಗಿದೆ. ಮಹಾಭಾರತದ ವರ್ಣನೆಯೊಡನೆ ತುಲನೆ ಮಾಡುವಂತಿದೆ.

ಅಪಭ್ರಂಶದಲ್ಲಿ ಇನ್ನೊಂದು ಹರಿವಂಶಪುರಾಣವು ಧವಲ ಕವಿ ಕೃತವಾಗಿದೆ. ಇದರಲ್ಲಿ ೧೨೨ ಸಂಧಿಗಳಿವೆ. ಕವಿಯು ವಿಪ್ರವರ್ಣದವನಾಗಿದ್ದನು. ಇವನ ತಂದೆಯ ಹೆಸರು ಸೂರ. ತಾಯಿ ಕೇಸುಲ್ಲ ಮತ್ತುಗುರುವಿನ ಹೆಸರು ಅಂಬಸೇನವೆಂದಿತ್ತು. ಗ್ರಂಥದ ಉತ್ಥಾನಿಕೆಯಲ್ಲಿ ಇವನು ಅನೇಕ ಆಚಾರ್ಯ ಮತ್ತು ಅವರು ರಚಿಸಿದ ಗ್ರಂಥಗಳನ್ನು ಉಲ್ಲೇಖಿಸಿದ್ದಾನೆ. ಅವುಗಳಲ್ಲಿ ಮಹಾಸೇನ ರಚಿತ ಸುಲೋಚನಾ ಚರಿತ, ರವಿಷೇಣ ಕೃತ ಪದ್ಮಚರಿತ, ಜಿನಸೇನ ವಿರಚಿತ ಹರಿವಂಶ, ಜಟಿಲ ಮುನಿಕೃತ ವರಾಂಗ ಚರಿತ, ಅಸಗನ ವೀರಚರಿತ ಜಿನರಕ್ಷಿತ, ಶ್ರಾವಕನಿಂದ ವಿಖ್ಯಾಪಿತ ಜಯಧವಲಗಳು ಇವೆ. ಹಾಗೂ ಚತುರ್ಮುಖ ಮತ್ತು ದ್ರೋಣರ ಸುಪರಿಚಿತ ಹೆಸರುಗಳು ಕವಿಯ ಕಾಲ ನಿರ್ಣಯಕ್ಕೆ ಸಹಾಯಕವೂ ಆಗಿವೆ. ಇವರಲ್ಲಿ ಕಾಲದ ದೃಷ್ಟಿಯಿಂದ ಎಲ್ಲರಿಗೂ ಕೊನೆಯವನು ಅಸಗ ಕವಿಯಾಗಿದ್ದಾನೆ. ಅವನು ತನ್ನ ವೀರಚರಿತವನ್ನು ಶಕ ಸಂವತ್ ೯೧೦ರಲ್ಲಿ ಅರ್ಥಾತ್ ಕ್ರಿ. ಶ. ೯೮೮ರಲ್ಲಿ ರಚಿಸಿದನು- ಅದರಿಂದ ಇದೇ ಕಾಲವು ಕವಿಯ ಕಾಲದ ಪೂರ್ವಾವಧಿಯಾಗಿದೆ. ಅವನ ಉತ್ತರಾವಧಿಯನ್ನು ನಿರ್ಣ ಯಿಸಲಿಕ್ಕೆ ಯಾವ ಆಧಾರವೂ ಲಭಿಸಿಲ್ಲ ಬಹುತರ ಈ ಕೃತಿಯ ಕಾಲವು ೧೦ನೆಯ ಹಾಗೂ ೧೧ನೆಯ ಶತಮಾನವಾಗಿರಬೇಕು. ಇವನು ತಾನು ಸ್ತುತಿಸುವ ಕವಿಗಳಲ್ಲಿ ಮಹಾನ್ ಶ್ವೇತಾಂಬರ ಕವಿ ಗೋವಿಂದ ಹಾಗೂ ಅವನ ಸನತ್‌ಕುಮಾರ ಚರಿತ ಗಳನ್ನು ಉಲ್ಲೇಖಿಸಿದ್ದೊಂದು ವಿಶೇಷ ಎತ್ತಿ ಹೇಳಬೇಕಾದ ಸಂಗತಿಯಾಗಿದೆ! (ಸಣ ಕುಮಾರ ಜೇಂ ವಿರಇಉ ಮಣಹರು, ಕಇಗೋವಿಂದು ಪವರು ಸೇಯಂಬರು). ತನ್ನ ವಿಷಯವಾಗಿ ವರ್ಣಿಸುವುದಕ್ಕೆ ಕವಿಯು ಜಿನಸೇನ ಕೃತ ಹರಿವಂಶ ಪುರಾಣವನ್ನು ಆಶ್ರಯಿಸಿದ್ದಾನೆ, ಈ ಋಣವನ್ನು ಅವನು ಸ್ಪಷ್ಟವಾಗಿ ಉಲ್ಲೇಖಿಸಿಯೂ ಸಹ ಇದ್ದಾನೆ, (ಜಹ ಜಿನಸೇಣೇಣ ತಯಂ, ಕಹ ವಿರಯಮಿ ಕಿಂಪಿ ಉದ್ದೇಸಂ). ಸಂಧಿಗಳ ಸಂಖ್ಯೆಯು ಸಂಸ್ಕೃತ ಹರಿವಂಶದ ಎರಡಷ್ಟಕ್ಕಿಂತ ಸ್ವಲ್ಪ ಕಡಿಮೆಯಾಗಿದೆ. ಆದರೆ ನಿರ್ದಿಷ್ಟ ಪ್ರಮಾಣವು ಒಂದೂವರೆ ಪಟ್ಟು ಇದೆ. ಹೇಗೆಂದರೆ ಸಂಸ್ಕೃತ ಹರಿ ವಂಶದ ಪ್ರಮಾಣವು ೧೨ ಸಾವಿರ ಶ್ಲೋಕದಷ್ಟಾಗಿದ್ದರೆ ಇದರಲ್ಲಿ ೧೮೦೦೦ ಸಮೀಪ ಶ್ಲೋಕಗಳು ಇವೆ. ಈ ವಿಸ್ತಾರವು ವರ್ಣನೆಯ ವೈಚಿತ್ರ್ಯದಿಂದ ಉಂಟಾದಂತೆ ಕಂಡು ಬರುತ್ತದೆ. ಅಪಭ್ರಂಶ ಕಾವ್ಯ ಪರಂಪರೆಗೆ ಅನುಸರಿಸಿ, ಕಾವ್ಯ ಗುಣಗಳಲ್ಲಿಯೂ

ಕೂಡ ಈ ಗ್ರಂಥದಲ್ಲಿ ವಿಶೇಷತೆಯು ಇದೆ. ಛಂದಸ್ಸಿನ ವೈಚಿತ್ರ್ಯವೂ ಕೂಡ ಬಹಳಷ್ಟು ಕಂಡುಬರುವದು.

ಅಪಭ್ರಂಶದಲ್ಲಿ ಮತ್ತೆ ಅನೇಕ ಕವಿಗಳು ಸಹ ಹರಿವಂಶ ಪುರಾಣವನ್ನು ರಚಿಸಿದ್ದುಂಟು. ಈ ಮೊದಲು ಹರಿವಂಶ ಪುರಾಣದ ಪರಿಚಯವನ್ನು ಮಾಡಿಕೊಡುವಾಗ ಆ ಗ್ರಂಥದ ಕೊನೆಯ ಸಂಧಿಯಲ್ಲಿ ಯಶಃಕೀರ್ತಿಯಿಂದ ಅದು ಪರಿವರ್ಧನಗೊಂಡ ಸಂಗತಿಯನ್ನು ಹೇಳಿದೆಯಷ್ಟೆ. ಈ ಯಶಃಕೀರ್ತಿಯು ರಚಿಸಿದ ಒಂದು ಸ್ವತಂತ್ರ **ಹರಿವಂಶ ಪುರಾಣವು** ವಿ. ಸಂವತ್ ೧೫೦೦ ಅಥವಾ ೧೫೨೦ ರಲ್ಲಿ ನಿರ್ಮಾಣವಾದದ್ದು ಕಂಡುಬರುತ್ತದೆ. ಇದು ಯೋಗಿನೀಪುರದಲ್ಲಿ (ದಿಲ್ಲಿ) ಅಗ್ರವಾಲ ವಂಶದ ಗರ್ಗಗೋತ್ರೀ ದಿಉಡಾಸಾಹೂವಿನ ಪ್ರೇರಣೆಯಿಂದ ಬರೆದದ್ದಾಗಿದೆ. ಈ ಗ್ರಂಥವು ಹದಿಮೂರು ಸಂಧಿಗಳಲ್ಲಿ ಪೂರ್ಣಗೊಂಡಿದೆ. ಕಥಾನಕಕ್ಕೆ ಆಧಾರಗಳೆಂದು ಜಿನಸೇನ ಮತ್ತು ಸ್ವಯಂಭೂ ಹಾಗೆಯೇ ಪುಷ್ಪದಂತನ ಕೃತಿಗಳು ಇದ್ದುದು ಗೊತಾಗುತ್ತದೆ. ಇನ್ನೊಂದು ಹರಿವಂಶ ಪುರಾಣವು ಶ್ರುತಿಕೀರ್ತಿಯು ರಚಿಸಿದ್ದು ದೊರೆತಿದೆ. ಇದು ವಿ. ಸಂವತ್ ೧೫೫೩ ರಲ್ಲಿ ಪೂರ್ಣಗೊಂಡದ್ದಿದೆ. ಇದರಲ್ಲಿ ೪೪ ಸಂಧಿಗಳಲ್ಲಿ ಮೊದಲಿನ ಕಥೆಯನ್ನೇ ವರ್ಣಿಸಲಾಗಿದೆ.

ಯಾವ ಪ್ರಕಾರ ಪ್ರಾಕೃತದಲ್ಲಿ 'ಚಉಪನ್ನ-ಮಹಾಪುರುಷಚರಿತ' ಹಾಗೂ ಸಂಸ್ಕೃತದಲ್ಲಿ ತ್ರಿಷಷ್ಟಿ ಶಲಾಕಾಪುರುಷ ಚರಿತಗಳು ರಚಿತವಾದುವೋ ಅದೇ ಪ್ರಕಾರ ಅಪಭ್ರಂಶದಲ್ಲಿ ಮಹಾಕವಿ ಪುಷ್ಪದಂತನಿಂದ 'ತಿಸಟ್ಠಿ-ಮಹಾಪುರಿಸ-ಗುಣಾಲಂಕಾರು' ಮಹಾಪುರಾಣದ ರಚನೆಯಾಗಿದೆ. ಇದರ ರಚನಾ ಕಾಲವು ಶಕ ಸಂವತ್ಸರ ೮೮೧ರ ಸಿದ್ಧಾರ್ಥ ಸಂವತ್ಸರದಿಂದ ಪ್ರಾರಂಭವಾಗಿ ೮೮೭ ಕ್ರೋಧನ ಸಂವತ್ಸರದ ವರೆಗೆ ಇದೆ. ಹೀಗೆ ಆರು ವರ್ಷಗಳಲ್ಲಿ ಕೃತಿಯು ಪೂರ್ಣ ಗೊಂಡಿದೆ. ಆಕಾಲದಲ್ಲಿ ಮಾನ್ಯಖೇಟದೊಳಗೆ ರಾಷ್ಟ್ರಕೂಟ ರಾಜನಾದ ಮೂರನೆಯ ಕೃಷ್ಣನು ರಾಜ್ಯವಾಳುತ್ತಿದ್ದನು. ಅವನ ಮಂತ್ರಿಯಾದ ಭರತನ ಪ್ರೇರಣೆಯಿಂದ ಕವಿಯು ಈ ಗ್ರಂಥ ರಚನೆಗೆ ಕೈಯಿಕ್ಕಿದನು. ಮಹಾಪುರಾಣದ ಒಂದು ಸಂಧಿಯ ಪ್ರಾರಂಭದಲ್ಲಿ ಕವಿಯು ಮಾನ್ಯಖೇಟ ಪುರವು ಧಾರಾನಾಥನಿಂದ ಸುಟ್ಟ ವಿಷಯವನ್ನು ಉಲ್ಲೇಖಿಸಿದ್ದಾನೆ. ಧನಪಾಲ ಕೃತ 'ಪಾಇಯ-ಲಚ್ಛೀ-ನಾಮಮಾಲಾ' ಎಂಬ ಗ್ರಂಥಕ್ಕೆ ಅನುಸರಿಸಿ ಧಾರಾನಗರದ ಧಾರಾಧೀಶನಾದ ಹರ್ಷದೇವನಿಂದ ವಿ. ಸಂ. ೧೦೨೯ ರಲ್ಲಿ ಸುಲಿಗೆಯಾಗಿ ಸುಟ್ಟ ಸಂಗತಿಯು ನಿಶ್ಚಿತಗೊಳ್ಳುತ್ತದೆ. ಈ ಪ್ರಕಾರ ಈ ದುರ್ಘಟನೆಯ ಕಾಲವು ಮಹಾಪುರಾಣವು ಸಮಾಪ್ತಿಗೊಂಡ ಮೇಲೆ ಐದಾರು ವರ್ಷಗಳ ತರುವಾಯವೆಂದು ಗೊತ್ತಾಗುತ್ತದೆ. ಅಂದ ಮೇಲೆ ಸಂಧಿಯ ಪ್ರಾರಂಭದಲ್ಲಿ ಉಕ್ತಗೊಂಡ ಸಂಸ್ಕೃತ ಶ್ಲೋಕವನ್ನು ಗ್ರಂಥ ರಚನೆಯ ತರುವಾಯ ನಿಬದ್ಧಗೊಳಿಸಿರಬೇಕೆಂದು ಅನುಮಾನ ಮಾಡಬೇಕಾಗುತ್ತದೆ. ಈ ಗ್ರಂಥದಲ್ಲಿಯೂ ಇನ್ನುಳಿದ ಈ ಕವಿಯ ಅನ್ಯ ಕೃತಿಗಳಲ್ಲಿಯೂ ಕವಿಯು ತನ್ನ ಪರಿಚಯವನ್ನೂ ಸಹ ಕೊಟ್ಟಿದ್ದಾನೆ. ಅದಕ್ಕನುಸರಿಸಿ ಈತನ ತಂದೆಯ ಹೆಸರು

ಕೇಶವ ಮತ್ತು ತಾಯಿಯ ಹೆಸರು ಮುಗ್ಧಾದೇವಿ ಎಂದಿತ್ತು. ಅವರು ಪ್ರಾರಂಭದಲ್ಲಿ ಶೈವರಾಗಿದ್ದರು ; ಮುಂದೆ ಜೈನ ಧರ್ಮಾವಲಂಬಿಗಳಾದರು. ಕವಿಯು ಅಲ್ಲಿ ಇಲ್ಲಿ ಸಂಚರಿಸುತ್ತ ಮಾನ್ಯಖೇಟಕ್ಕೆ ಬಂದನು. ಅಲ್ಲಿ ಭರತನು ಅವನಿಗೆ ಆಶ್ರಯವಿತ್ತನು, ಕಾವ್ಯ ರಚನೆಗೆ ಪ್ರೇರಿಸಿದನು. ಅವನು ಶರೀರದಿಂದ ಕೃಶನೂ ಕುರೂಪಿಯೂ ಆಗಿದ್ದನು. ಆದರೆ ಅವನ ಕವ್ವ-ಪಿಸಲ್ಲ (ಕಾವ್ಯ ಪಿಶಾಚ), ಕವಿ ಕುಲ-ತಿಲಕ, ಕಾವ್ಯರತ್ನಾಕರ, ಸರಸ್ವತೀ ನಿಲಯ ಮೊದಲಾದ ಬಿರುದುಗಳು ಅವನ ಕಾವ್ಯ ಪ್ರತಿಭೆಯನ್ನು ಎತ್ತಿ ತೋರಿಸುತ್ತವೆ. ಅದರಂತೆ ಅವನ ಕೃತಿಗಳ ಸೌಂದರ್ಯ ಮತ್ತು ಸೌಷ್ಠವಗಳನ್ನು ಕಂಡಾಗ ಇವು ಸಾರ್ಥಕವೆನಿಸುತ್ತವೆ. ಸಂಪೂರ್ಣ ಮಹಾಪುರಾಣವು ೧೦೨ ಸಂಧಿಗಳಲ್ಲಿ ಪೂರ್ಣಗೊಂಡಿದೆ. ಸಂಸ್ಕೃತ ಆದಿಪುರಾಣದಲ್ಲಿ ಬರುವ ವಿಷಯವಷ್ಟೇ ಇದರಲ್ಲಿ ಪ್ರಾರಂಭದ ೩೭ ಸಂಧಿಗಳಲ್ಲಿ ಬಂದಿದೆ. ಅದು ಪ್ರಥಮ ತೀರ್ಥಂಕರನಾದ ಆದಿನಾಥ ಮತ್ತು ಅವನ ಪುತ್ರನಾದ ಭರತ ಚಕ್ರವರ್ತಿಯ ಚರಿತ್ರವಾಗಿದೆ. ಉಳಿದ ಸಂಧಿಗಳಲ್ಲಿ ಉತ್ತರ ಪುರಾಣದಂತೆ ಅನ್ಯ ಶಲಾಕಾಪುರುಷರ ಜೀವನ ಚರಿತ್ರಗಳನ್ನು ವರ್ಣಿಸಲಾಗಿದೆ. ಸಂಧಿ ೬೯ರಿಂದ ೭೯ ರವರೆಗೆ ೧೧ ಸಂಧಿಗಳಲ್ಲಿ ರಾಮನ ಕಥೆಯು ಬಂದಿದೆ. ಅದನ್ನು ಉತ್ತರ ಪುರಾಣದಲ್ಲಿ ಬರುವ ರಾಮ ಕಥೆಯನ್ನು ಅನುಸರಿಸಿ ಬರೆಯಲಾಗಿದೆ. ಆದರೆ ಇದರಲ್ಲಿಯೂ ಕೂಡ ರಾಮಾಯಣದ ವಿಷಯದಲ್ಲಿ ಪ್ರಾಕೃತ ಪಉಮಚರಿಯಂ ಮತ್ತು ಸಂಸ್ಕೃತ ಪದ್ಮಪುರಾಣ ಅಲ್ಲದೆ ಸ್ವಯಂಭೂಕೃತ ಪಉಮಚರಿಉಗಳ ಪ್ರಾರಂಭದಲ್ಲಿ ಕಂಡುಬರುವಂತೆ ಗೌತಮನಿಂದ ಸಂಶಯಗಳನ್ನು ಎತ್ತಲಾಗಿದೆ. ಸಂಧಿ ೮೧ರಿಂದ ೯೨ರವರೆಗೆ ೧೨ ಸಂಧಿಗಳಲ್ಲಿ ಕೃಷ್ಣ ಮತ್ತು ನೇಮಿನಾಥ ಹಾಗೂ ಕೌರವ ಪಾಂಡವರ ವೃತ್ತಾಂತವು ಸಂಸ್ಕೃತ ಹರಿವಂಶ ಪುರಾಣಕ್ಕೆ ಅನುಸರಿಸಿ ವರ್ಣಿಸಲಾಗಿದೆ. ಆದರೆ ಈ ಎಲ್ಲ ವರ್ಣನೆಗಳು ಕವಿಯ ಅಸಾಧಾರಣ ಕಾವ್ಯ-ಪ್ರತಿಭೆಯಿಂದ ಬಹಳ ಸುಂದರವೂ ರೋಚಕವೂ ಮತ್ತು ಮೌಲಿಕವೂ ಆಗಿವೆ. ಇದರಲ್ಲಿ ಬರುವ ನಗರ, ಪರ್ವತ, ನದಿ, ಋತು, ಸೂರ್ಯಚಂದ್ರರ ಅಸ್ತ ಮತ್ತು ಉದಯ, ಯುದ್ಧ, ವಿವಾಹ, ವಿಯೋಗ, ವಿಲಾಪ, ಶೃಂಗಾರಾದಿ ರಸಗಳ ವರ್ಣನೆಗಳು ಯಾವ ಸಂಸ್ಕೃತ ಮತ್ತು ಪ್ರಾಕೃತದ ಉತ್ಕೃಷ್ಟತಮ ಕಾವ್ಯಗಳಿಗಿಂತ ಕಡಿಮೆಯೆಂಬೆನಿಸುವುದಿಲ್ಲ. ಕವಿಯು ಸ್ವತಃ ಒಂದು ಸಂಸ್ಕೃತ ಪದ್ಯವನ್ನು ರಚಿಸಿ, ಈ ಕೃತಿಯ ಗುಣವನ್ನು ಪ್ರಕಟಿಸಿದ್ದಾನೆ. ಅವನು ಹೇಳುವುದು ಹೀಗಿದೆ :-

ಅತ್ರ ಪ್ರಾಕೃತಲಕ್ಷಣಾನಿ ಸಕಲಾ ನೀತಿಃ ಸ್ಥಿತಿಶ್ಛನ್ದಸಾ-
ಮರ್ಥಾಲಂಕೃತಯೊ ರಸಾಶ್ಚ ವಿವಿಧಾಸ್ತತ್ವಾರ್ಥ ನಿರ್ಣೀತಯಃ ॥
ಕಿಂಚಾನ್ಯದ್ಯದಿಹಾಸ್ತಿ ಜೈನ ಚರಿತೆ ನಾನ್ಯತ್ರ ತದ್ವಿದ್ಯತೆ ।
ದ್ವಾವೇತೌ ಭರತೇಶಪುಷ್ಪದಶನೌ ಸಿದ್ಧಂ ಮಯೋರೀದೃಶಮ್ ॥

ಈ ಜೈನ ಚರಿತ್ರೆಯಲ್ಲಿ ಸಮಾವೇಶವಾಗದೆ ಇರುವ ವಸ್ತುವು ಬೇರೆ ಎಲ್ಲಿಯೂ

ಇಲ್ಲವೆಂದು ಕವಿಯು ಇದರಲ್ಲಿ ಸಾಧಿಸಲು ಹೋಗಿದ್ದಾನೆ. ಅದು ಅವನ ವಿಷಯ ಮತ್ತು ಕಾವ್ಯದ ಸೀಮೆಯನ್ನು ಗಮನಿಸಿದರೆ ಅಸಿದ್ಧವೆಂದು ಪ್ರತೀತವಾಗುವುದಿಲ್ಲ.

**ಅಪಭ್ರಂಶದಲ್ಲಿ ತೀರ್ಥಂಕರ-ಚರಿತ್ರ :—**

ಪುಷ್ಪದಂತ ಕೃತ ಮಹಾಪುರಾಣದ ತರುವಾಯ ಸಂಸ್ಕೃತಕ್ಕೆ ಸಮವೆನಿಸುವಂತೆ ಅಪಭ್ರಂಶದಲ್ಲಿಯೂ ವಿವಿಧ ತೀರ್ಥಂಕರರ ಚರಿತ್ರೆಗಳು ಕಾವ್ಯ ರೂಪದಲ್ಲಿ ರೂಪು ಗೊಂಡುವು. '**ಚಂದಪ್ಪಹ–ಚರಿಉ**' ಎಂಬುದು ೧೧ ಸಂಧಿಗಳ ಕಾವ್ಯವು. ಇದನ್ನು ಹುಂಮಡ ಕುಲದ ಸಿದ್ಧಪಾಲನ ಪ್ರಾರ್ಥನೆಯಂತೆ ಯಶಃಕೀರ್ತಿಯು ರಚಿಸಿದನು. ಹಿಂದೆ ಹರಿವಂಶಪುರಾಣದ ಯಶಃಕೀರ್ತಿಯನ್ನು ಉಲ್ಲೇಖಿಸಿದೆಯಷ್ಟೆ. ಅವನೇ ಇವನು. ಆದರಿಂದ ಇದರ ರಚನಾ ಕಾಲವು ಅದೇ ಕ್ರಿ.ಶ. ೧೫ನೆಯ ಶತಮಾನವೇ ಆಗಿದೆ '**ಸಂತಿಣಾಹ–ಚರಿಉ**' ಎಂಬುದನ್ನು ಮಹೀಚಂದ್ರನು ವಿ. ಸಂ. ೧೫೮೭ರಲ್ಲಿ ಯೋಗಿನೀಪುರದಲ್ಲಿ (ದಿಲ್ಲಿ) ಬಾಬರ ಬಾದಶಹನ ರಾಜ್ಯಕಾಲದಲ್ಲಿ ರಚಿಸಿದನು. ಕವಿಯು ತನ್ನ ಗುರುಪರಂಪರೆಯಲ್ಲಿ ಮಾಥುರ ಸಂಘ, ಪುಷ್ಕರ ಗಣದ ಯಶಃಕೀರ್ತಿ, ಮಲಯಕೀರ್ತಿ ಮತ್ತು ಗುಣಭದ್ರಸೂರಿ ಇವರ ಉಲ್ಲೇಖ ಮಾಡಿದ್ದಾನೆ. ಹಾಗೆಯೇ ಅಗ್ರವಾಲ ವಂಶದ ಗರ್ಗ ಗೋತ್ರದ ಭೋಜರಾಜನ ಮೊಮ್ಮಗನೂ, ಜ್ಞಾನಚಂದ್ರನ ಪುತ್ರನೂ 'ಸಾಧಾರಣ' ಕುಲವನ್ನೂ ವಿಸ್ತಾರದಿಂದ ವರ್ಣನ ಮಾಡಿದ್ದಾನೆ. '**ಣೇಮಿಣಾಹ ಚರಿಉ**' ಎಂಬುದರ ರಚನೆಯನ್ನು ಹರಿಭದ್ರನು ವಿ ಸಂ. ೧೨೧೬ರಲ್ಲಿ ಮಾಡಿದನು. ಇಲ್ಲಿಯವರೆಗೆ ಇದರ ಒಂದು ಭಾಗವಾದ ಸನತ್ಕುಮಾರ **ಚರಿತವು** ಮಾತ್ರ ಸುಸಂಪಾದಿತವಾಗಿ ಪ್ರಕಟವಾಗಿದೆ. ಇನ್ನೊಂದು **ಣೇಮಿಣಾಹ ಚರಿಉ** ಎಂಬುದನ್ನು ಲಖಮದೇವನು (ಲಕ್ಷ್ಮಣದೇವ) ರಚಿಸಿದ್ದುಂಟು. ಇದರಲ್ಲಿ ನಾಲ್ಕು ಸಂಧಿಗಳೂ ೮೩ ಕಡವಕಗಳೂ ಇವೆ. ಕವಿಯು ಆರಂಭದಲ್ಲಿ ತನ್ನ ನಿವಾಸಸ್ಥಾನವು ಮಾಲವದೇಶ ಮತ್ತು ಗೋನಂದ ನಗರ ಇವುಗಳ ವರ್ಣನೆಯನ್ನು ಮಾಡಿದ್ದಾನೆ. ತನ್ನ ಪುರವಾಡ ವಂಶವನ್ನೂ ಉಲ್ಲೇಖಿಸಿದ್ದಾನೆ. ರಚನಾ ಕಾಲವು ನಿಶ್ಚಿತವಾಗಿಲ್ಲ. ಆದರೆ ಈ ಗ್ರಂಥದ ಒಂದು ಹಸ್ತಲಿಖಿತ ಪ್ರತಿಯು ವಿ. ಸಂ. ೧೫೧೦ರಲ್ಲಿ ಬರೆದದ್ದು ಲಭಿಸಿದೆ. ಇದರಿಂದ ಈ ಕೃತಿಯ ರಚನಾ ಕಾಲದ ಉತ್ತರಾವಧಿಯು ಸುನಿಶ್ಚಿತವಾಗಿದೆ. **ಪಾಸಣಾಹ ಚರಿಉ** ಎಂಬುದರ ರಚನೆಯನ್ನು ಪದ್ಮಕೀರ್ತಿಯು ವಿ. ಸಂ. ೯೯೯ರಲ್ಲಿ ೧೮ ಸಂಧಿಗಳಲ್ಲಿ ಪೂರ್ತಿಗೊಳಿಸಿದನು. ಕವಿಯು ತನ್ನ ಗುರುಪರಂಪರೆಯಲ್ಲಿ ಸೇನ ಸಂಘದ ಚಂದ್ರಸೇನ. ಮಾಧವಸೇನ ಮತ್ತು ಜಿನಸೇನರನ್ನು ಉಲ್ಲೇಖಿಸಿದ್ದಾನೆ. ಇನ್ನೊಂದು ಪಾಸಣಾಹಚರಿಉವನ್ನು ೧೨ ಸಂಧಿಗಳಲ್ಲಿ ಕವಿ ಶ್ರೀಧರನು ವಿ. ಸಂ. ೧೧೮೯ರಲ್ಲಿ ರಚಿಸಿದನು. ಕವಿಯ ತಂದೆಯ ಹೆಸರು ಗೊಲ್ಲ. ತಾಯಿಯ ಹೆಸರು ಬೀಲ್ಹಾ ಎಂದಿತ್ತು. ಇವನು ಹರಿಯಾಣಾದಿಂದ ಹೊರಟು ಯಮುನೆಯನ್ನು ದಾಟಿ ದಿಲ್ಲಿಗೆ ಬಂದನು. ಅಲ್ಲಿ ಅಗ್ರವಾಲ ವಂಶದ ನಟ್ಟಲನಾಹುವಿನ ಪ್ರೇರಣೆಯಿಂದ ಈ

ಕೃತಿಯನ್ನು ರಚಿಸಿದನು. ಮೂರನೆಯ ಪಾಸಣಾಹ ಚರಿವು ಕವಿ ಅಸವಾಲನ ಕೃತಿಯಾಗಿದೆ. ಇದರಲ್ಲಿ ೧೩ ಸಂಧಿಗಳು ಇವೆ. ಸಂಧಿಗಳ ಕೊನೆಯಲ್ಲಿ, ಈ ಗ್ರಂಥವು ಸಂಘಾಧಿಪ ಸೋಣೀ (ಸೋಣಿಯ)ಯ ಕರ್ಣಾಭರಣರೂಪ ಅರ್ಥಾತ್ ಅವರ ಪ್ರೇರಣೆಯಿಂದ ಅವರು ಕೇಳಲೆಂದೇ ರಚಿಸಿದ್ದಾಗಿದೆಯೆಂಬ ಉಲ್ಲೇಖವಿದೆ. ಇದರ ರಚನಾ ಕಾಲವು ಸುಮಾರು ೧೫ನೆಯ ಶತಮಾನದ ಹಿಂದು-ಮುಂದಿನದಾಗಿರಬೇಕು. ಅಂತಿಮ ತೀರ್ಥಂಕರರನ್ನು ಕುರಿತು ಜಯಮಿತ್ರ ಹಲ್ಲ ಕೃತ ವಡ್ಢಮಾಣ-ಕವ ಎಂಬುದು ದೊರೆಯುತ್ತದೆ. ಇದರಲ್ಲಿ ೧೧ ಸಂಧಿಗಳಿವೆ. ಈ ಕಾವ್ಯವನ್ನು ದೇವರಾಯನ ಪುತ್ರನಾದ ಸಂಘಾಧಿಪ ಹೋಲಿವರ್ಮನಿಗಾಗಿ ರಚಿಸಲಾಯಿತು. ಇದರ ಒಂದು ಹಸ್ತಲಿಖಿತ ಪ್ರತಿಯು ವಿ. ಸಂ. ೧೫೪೫ ರಲ್ಲಿ ಬರೆದದ್ದು ದೊರೆಯುತ್ತದೆ. ಅದರಿಂದ ಈ ಗ್ರಂಥವು ಇದಕ್ಕೂ ಪೂರ್ವದಲ್ಲಿ ರಚಿಸಿದ್ದಾಗಿದೆ. ಈ ಕಾವ್ಯದ ಕೊನೆಯ ಆರು ಸಂಧಿಗಳಲ್ಲಿ ರಾಜಾಶ್ರೇಣಿಕನ ಚರಿತ್ರೆಯನ್ನು ವರ್ಣಿಸಲಾಗಿದೆ. ಇದು ತನ್ನಷ್ಟಕ್ಕೆ ತಾನು ಪೂರ್ಣವಾಗಿದೆ; ಪೃಥಕ್ ರೂಪದಲ್ಲಿಯೂ ಇದು ದೊರೆಯುತ್ತದೆ. ರಯಧೂಕೃತ **ಸಮ್ಮಇಣಾಹ-ಚರಿಉ** ಎಂಬುದು ಹತ್ತು ಸಂಧಿಗಳಲ್ಲಿ ಸಮಾಪ್ತವಾಗಿದೆ. ಇದರಲ್ಲಿ ಕವಿಯು ತನ್ನ ಗುರುವಿನ ಹೆಸರು ಯಶಃಕೀರ್ತಿ ಎಂದು ಪ್ರಕಟಗೊಳಿಸಿದ್ದಾನೆ. ಹೀಗಾಗಿ ಇದರ ರಚನಾ ಕಾಲವು ವಿ. ಸಂ. ೧೫೦೦ರ ಸುಮಾರಿನದಾಗುತ್ತದೆ. ನರಸೇನ ಕೃತ ವಡ್ಢಮಾಣ-ಕಹಾ ವಿ. ಸಂ. ೧೪೧೨ರ ಸುಮಾರಿನಲ್ಲಿ ರಚಿತ ಕೃತಿಯಾಗಿದೆ. ಜೈನ ಗ್ರಂಥಾವಲಿಯಲ್ಲಿ ಜಿನೇಶ್ವರ ಸೂರಿಯ ಶಿಷ್ಯನಿಂದ ರಚಿತವಾದ ಅಪಭ್ರಂಶ ಮಹಾವೀರ ಚರಿತದ ಉಲ್ಲೇಖವಿದೆ.

## ಅಪಭ್ರಂಶ ಚರಿತೆ ಕಾವ್ಯ :—

ತೀರ್ಥಂಕರರ ಚರಿತ್ರೆಗಳನ್ನುಳಿದು ಅಪಭ್ರಂಶ ಭಾಷೆಯಲ್ಲಿ ಚರಿತ್ರ ಕಾವ್ಯಗಳ ರೀತಿಯಲ್ಲಿ ಬರೆದ ಗ್ರಂಥಗಳು ಈ ಪ್ರಕಾರ ಇವೆ :—

'ತಿಸಟ್ಠಿ-ಮಹಾಪುರಿಸ-ಗುಣಾಲಂಕಾರ'ದ ಮಹಾಕವಿ ಪುಷ್ಪದಂತನು ರಚಿಸಿದ ಉಳಿದ ಕೃತಿಗಳು ಹೀಗಿವೆ—**ಜಸಹರ-ಚರಿಉ** ಮತ್ತು **ಣಾಯಕುಮಾರಚರಿಉ.** ಯಶೋಧರ ಚರಿತ್ರವು ಜೈನ ಸಾಹಿತ್ಯದಲ್ಲಿ ಹಿಂಸೆಯ ದೋಷ ಮತ್ತು ಅಹಿಂಸೆಯ ಪ್ರಭಾವವನ್ನು ವ್ಯಕ್ತಪಡಿಸಲಿಕ್ಕೆಂದು ಬಹು ಲೋಕಪ್ರಿಯ ಕಥೆಯಾಗಿದೆ. ಈ ಕಥೆಯನ್ನು ಕುರಿತು ಸಂಸ್ಕೃತದಲ್ಲಿ ಸೋಮದೇವಕೃತ ಯಶಸ್ತಿಲಕ ಚಂಪುವೇ ಮೊದಲುಗೊಂಡು, ಹದಿನೇಳನೆಯ ಶತಮಾನದ ವರೆಗೆ ಸುಮಾರು ಮೂವತ್ತು ಗ್ರಂಥಗಳ ರಚನೆಯಾದದ್ದು ಕಂಡುಬರುತ್ತದೆ. ಇವುಗಳಲ್ಲಿ ಕಾವ್ಯ ಕಲೆಯ ದೃಷ್ಟಿಯಿಂದ ಸಂಸ್ಕೃತದಲ್ಲಿ ಸೋಮದೇವನ ಕೃತಿಯೂ ಅಪಭ್ರಂಶದಲ್ಲಿ ಪುಷ್ಪದಂತ ಕೃತ ಜಸಹರ ಚರಿಉ ಇವು ಸರ್ವ ಶ್ರೇಷ್ಠ ಗ್ರಂಥಗಳಾಗಿವೆ. ಈ ಎರಡೂ ಕೃತಿಗಳು ಹತ್ತನೆಯ ಶತಮಾನದಲ್ಲಿ ಐದು-ಏಳು ವರ್ಷಗಳ ಅಂತರದಲ್ಲಿ ರೂಪುಗೊಂಡವುಗಳು. ಬಹುತರ ಒಂದೇ

ಕಾಲದ ಕೃತಿಗಳಿವು. ಜನಹರೆಚರಿಉ ನಾಲ್ಕು ಸಂಧಿಗಳಲ್ಲಿ ವಿಭಾಗಗೊಂಡಿದೆ. ಯೌಧೇಯ ದೇಶದ ರಾಜಧಾನಿಯಾದ ರಾಜಪುರದಲ್ಲಿ ಮಾರಿದತ್ತ ರಾಜನಿದ್ದನು. ಅವನಿಗೂ ಕಾಪಾಲಿಕಾಚಾರ್ಯನಾದ ಭೈರವಾನಂದನಿಗೂ ಸಂಬಂಧವು ಬಂತು. ಅವನ ಆದೇಶದಂತೆ ಆಕಾಶಗಾಮಿನೀ ವಿದ್ಯೆಯನ್ನು ಸಂಪಾದಿಸುವುದಕ್ಕಾಗಿ ರಾಜನು ನರಬಲಿ ಯಜ್ಞವನ್ನು ಮಾಡುವ ಯೋಜನೆಯನ್ನು ಕೈಕೊಂಡನು. ಅದಕ್ಕಾಗಿ ರಾಜನ ಸೇವಕರು ಜೈನಮುನಿ ಸುದತ್ತನ ಶಿಷ್ಯರಾದ ಅಭಯರುಚಿ ಮತ್ತು ಅವನ ತಂಗಿಯಾದ ಅಭಯಮತಿ ಇವರನ್ನು ಹಿಡಿದೊಯ್ದರು. ರಾಜನು ಅವರ ರೂಪಕ್ಕೆ ಪ್ರಭಾವಿತ ನಾದನು ; ಅವರ ವೃತ್ತಾಂತವನ್ನು ಕೇಳಿದನು. ಆಗ ಅಭಯರುಚಿಯು ತನ್ನ ಪೂರ್ವ ಜನ್ಮದ ವೃತ್ತಾಂತವನ್ನು ಹೇಳಲು ಪ್ರಾರಂಭಿಸಿದನು :–ಅವಂತೀ ದೇಶದಲ್ಲಿ ಉಜ್ಜಯಿ ನಿಯ ರಾಜನಾದ ಯಶೋಬಂಧುರನ ಮೊಮ್ಮಗನೂ ಯಶೋರ್ಹನ ಮಗನೂ ಆದ ನಾನು ಯಶೋಧರ ಎಂಬ ಹೆಸರಿನ ರಾಜನಿದ್ದೆನು (ಸಂ. ೧). ಯಶೋಧರನು ತನ್ನ ರಾಣಿಯಾದ ಅಮೃತಮತಿಯು ಒಬ್ಬ ಡೊಗ ಕುರೂಪಿಯೊಡನೆ ವ್ಯಭಿಚಾರದಲ್ಲಿ ಇರು ವುದನ್ನು ಕಂಡನು. ಆದರಿಂದ ವಿರಕ್ತನಾಗಿ ಮುನಿ ದೀಕ್ಷೆಯನ್ನು ತಕ್ಕೊಳ್ಳಲು ಸಿದ್ಧ ನಾದನು. ಆದರೆ ಅವನ ತಾಯಿಯು ಅವನನ್ನು ತಡೆದಳು. ಅಮೃತಮತಿಯು ಇಬ್ಬ ರಿಗೂ ವಿಷ ಹಾಕಿ ಕೊಂದಳು. ತರುವಾಯ ತಾಯಿ-ಮಗ ಇಬ್ಬರೂ ನಾನಾ ಪಶು ಯೋನಿಗಳಲ್ಲಿ ಪರಿಭ್ರಮಣ ಮಾಡಿದರು. ಅದರಲ್ಲಿ ಸ್ವತಃ ಅವನ ವ್ಯಭಿಚಾರಿಣಿ ಪತ್ನಿಯು ಘಾತಮಾಡಿದಳು (ಸಂ. ೨). ಅನೇಕ ಪಶುಯೋನಿಗಳಲ್ಲಿ ದುಃಖ ಭೋಗಿಸಿ ಕೊನೆಯಲ್ಲಿ ಅವರಿಬ್ಬರೂ ಜಸವಇಯ ಪುತ್ರ ಹಾಗೂ ಪುತ್ರಿಯ ರೂಪದಿಂದ ಜನಿಸಿ ದರು. ಒಮ್ಮೆ ಜಸವಇಯು ವನ ವಿಹಾರಕ್ಕೆಂದು ಕಾಡಿಗೆ ತೆರಳಿದ್ದನು. ಅಲ್ಲಿ ಅವನಿಗೆ ಸುದತ್ತ ಮುನಿಯ ದರ್ಶನವಾಯಿತು. ಆಗ ಅವನು ತನ್ನ ನಾಯಿಗಳನ್ನು ಮುನಿಯ ಮೇಲೆ ಬಿಟ್ಟನು. ಆದರೆ ಮುನಿಯ ಪ್ರಭಾವದಿಂದ ನಾಯಿಗಳು ವಿನೀತ ಭಾವದಿಂದ ಅವರ ಎದುರಿಗೆ ನಿಂತು ಗಮನ ಗೈದುವು. ಒಬ್ಬ ಶ್ರೇಷ್ಠಿಯು ರಾಜನಿಗೆ ಮುನಿಯ ಮಹಾತ್ಮೆಯನ್ನು ಅರುಹಿದನು. ಆಗ ರಾಜನಿಗ ಜ್ಞಾನವುಂಟಾಯಿತು. ಮುನಿಗೆ ಇರುವ ಅವಧಿಜ್ಞಾನವನ್ನು ತಿಳಿದು, ರಾಜನು ಅವನಿಂದ ತನ್ನ ಪೂರ್ವಭವ, ತಂದೆ-ತಾಯಿ, ಅಜ್ಜಿಯರ ವೃತ್ತಾಂತವನ್ನು ಕೇಳಿದನು. ಮುನಿಯು ಅವನ ಭವ-ಭ್ರಮಣದ ಎಲ್ಲ ವೃತ್ತಾಂತವನ್ನು ವಿವರಿಸಿದನು. ಅದರಿಂದ ಅವನ ತಂದೆ ಹಾಗೂ ಅಜ್ಜಿಯರು ಈಗ ಅವನ ಮಕ್ಕಳಾದ ಅಭಯರುಚಿ ಹಾಗೂ ಅಭಯಮತಿಯರ ರೂಪದಲ್ಲಿ ಜನಿ ಸಿದ್ದಾರೆಂದು ತಿಳಿಯಿತು (ಸಂ. ೩). ಈ ಸಂಗತಿಯನ್ನು ಕೇಳಿಯೂ ಸಂಸಾರದ ವಿಚಿ ತ್ರತೆ ಹಾಗೂ ಅಸಾರತೆಗಳನ್ನು ತಿಳಿದೂ ಜಸವಇಯು ದೀಕ್ಷೆಯನ್ನು ಸ್ವೀಕರಿಸಿದನು. ಅವನ ಪುತ್ರ-ಪುತ್ರಿಯರಿಗೂ ಪೂರ್ವಭವದ ಸ್ಮರಣೆಯು ಉಂಟಾಯಿತು. ಅವರು ಕ್ಷುಲ್ಲಕ ವ್ರತವನ್ನು ಸ್ವೀಕರಿಸಿ, ಸುದತ್ತಮುನಿಯೊಡನೆ ವಿಹಾರ ಮಾಡತೊಡಗಿದರು. ಆಗ ಮಾರಿದತ್ತನ ಸೇವಕರ ಕೈಗೆ ಸಿಕ್ಕು, ಆ ಮಾರಿಯ ಗುಡಿಗೆ ಬಂದರು. ಈ

ವೃತ್ತಾಂತವನ್ನು ಕೇಳಿ ರಾಜಾ ಮಾರಿದತ್ತನಿಗೂ ಅವನ ದೇವಿ ಚಂಡಮಾರಿಗೂ ಪುರೋಹಿತ ಭೈರವಾನಂದ ಮೊದಲಾದವರಿಗೂ ವೈರಾಗ್ಯವು ಉಂಟಾಯಿತು. ಅವರೂ ಸುದತ್ತ ಮುನಿಯ ಸಾನಿಧ್ಯದಲ್ಲಿ ದೀಕ್ಷೆಯನ್ನು ಸ್ವೀಕರಿಸಿದರು (ನಂ. ೪). ಈ ಕಥಾನಕವನ್ನು ಪುಷ್ಪದಂತನು ಬಹು ಕಾವ್ಯ ಕೌಶಲ್ಯದಿಂದ ವಿವರಿಸಿದ್ದಾನೆ. (ಕಾರಂಜಾ, ೧೯೩೨).

ಣಾಯಕುಮಾರಚರಿಉದಲ್ಲಿ ಪುಷ್ಪದಂತನು ಶ್ರುತ-ಪಂಚಮಿ ಕಥೆಯ ಮಹಾತ್ಮೆಯನ್ನು ಪ್ರಕಟಮಾಡುವುದಕ್ಕಾಗಿ ಕಾಮದೇವನು ನಾಗಕುಮಾರ ರೂಪದಲ್ಲಿ ಅವತರಿಸಿದ ಕಥೆಯನ್ನು ಹೇಳಿದ್ದಾನೆ. ಇದು ೯ ಸಂಧಿಗಳ ಕಾವ್ಯವು. ಮಗಧ ದೇಶದ ಕನಕಪುರ ನಗರದಲ್ಲಿ ರಾಜಾ ಜಯಂಧರ ಮತ್ತು ರಾಣಿ ವಿಶಾಲನೇತ್ರಾ ಇವರಿಂದ ಶ್ರೀಧರನೆಂಬ ಹೆಸರಿನ ಪುತ್ರನು ಜನಿಸಿದನು. ಆಮೇಲೆ ರಾಜನು ಸೌರಾಷ್ಟ್ರ ದೇಶದ ಗಿರನಾರದ ರಾಜಕುಮಾರಿಯಾದ ಪೃಥ್ವೀದೇವಿಯ ಚಿತ್ರವನ್ನು ಕಂಡು, ಅವಳನ್ನು ಮೋಹಿಸಿ, ಲಗ್ನವಾದನು (ನಂ.೧). ಮುಂದೆ ತಕ್ಕ ಕಾಲದಲ್ಲಿ ಪೃಥ್ವೀದೇವಿಗೂ ಒಬ್ಬ ಪುತ್ರನು ಜನಿಸಿದನು. ಅವನು ಬಾಲ್ಯದಲ್ಲಿಯೇ ಜಿನಮಂದಿರದ ಬಾವಿಯಲ್ಲಿ ಬಿದ್ದನು. ಅಲ್ಲಿ ನಾಗರು ಅವನನ್ನು ರಕ್ಷಿಸಿದರು. ಇದರಿಂದಲೇ ಅವನಿಗೆ ನಾಗಕುಮಾರನೆಂದು ಹೆಸರನ್ನು ಇಡಲಾಯಿತು (ಸಂ. ೨). ನಾಗಕುಮಾರನು ನಾನಾವಿದ್ಯೆಗಳನ್ನು ಕಲಿತು, ಯೌವನವನ್ನು ಪಡೆದನು. ಆಗ ಅವನನ್ನು ಕೆಂಡುಮನೋಹರೀ ಮತ್ತು ಕಿನ್ನರೀ ಎಂಬ ಹೆಸರಿನ ನರ್ತಕಿಯರು ಮೋಹಿತರಾದರು. ಅವರು ಅವನನ್ನು ಮದುವೆಯಾದರು. ಅವನ ತಾಯಿ ಹಾಗೂ ಮಲತಾಯಂದಿರಲ್ಲಿ ವಿದ್ವೇಷವುಂಟಾಯಿತು. ಅವನ ಮಲಣ್ಣನಾದ ಶ್ರೀಧರನೂ ಕೂಡ ಅವನನ್ನು ದ್ವೇಷಿಸತೊಡಗಿದನು. ಇಷ್ಟೇ ಅಲ್ಲ, ಅವನನ್ನು ಕೊಲ್ಲಿಸುವ ಪ್ರಯತ್ನಕ್ಕೂ ತೊಡಗಿದನು. ಇದೇ ಸಮಯದಲ್ಲಿ ಒಂದು ಮದೋನ್ಮತ್ತ ಆನೆಯ ಆಕ್ರಮಣದಿಂದ ಸಮಸ್ತ ನಗರವೇ ಆಕುಲಗೊಂಡಿತು. ಶ್ರೀಧರನು ಮದ್ದಾನೆಯನ್ನು ತಡೆಯಲು ಅಸಮರ್ಥನಾದನು ; ಆದರೆ ನಾಗಕುಮಾರನು ತನ್ನ ಪರಾಕ್ರಮದಿಂದ ಅದನ್ನು ವಶವಡಿಸಿಕೊಂಡನು. ಇದರಿಂದ ಇಬ್ಬರಲ್ಲಿಯೂ ವೈರವು ಇನ್ನೂ ಹೆಚ್ಚಿತು (ನಂ. ೩). ನಾಗಕುಮಾರನ ಪರಾಕ್ರಮದ ಖ್ಯಾತಿಯು ಬೆಳೆಯಿತು. ಮಥುರೆಯ ರಾಜಕುಮಾರನಾದ ವ್ಯಾಲನು ಒಂದು ಭವಿಷ್ಯವಾಣಿಯನ್ನು ಕೇಳಿ, ಅವನ ಸಂಗಡಿಗನಾದನು. ಈಗಂತೂ ಶ್ರೀಧರನು ನಾಗಕುಮಾರನನ್ನು ತನ್ನ ಪರಮ ಶತ್ರುವೆಂದು ಭಾವಿಸಿ ವಧೆಗೈಯುವ ಚಟುವಟಿಕೆಗೆ ತೊಡಗಿದನು. ತಂದೆಯು ಸಂಕಟ ನಿವಾರಣೆಗೆಂದು ಕೆಲವು ಕಾಲ ನಾಗಕುಮಾರನಿಗೆ ದೇಶಾಂತರ ಹೋಗಲು ತಿಳಿಸಿದನು (ಸಂ. ೪). ನಾಗಕುಮಾರನು ರಾಜಧಾನಿಯಿಂದ ಹೊರಬಿದ್ದು, ಮಥುರೆಗೆ ಹೋಗಿ ತಲುಪಿದನು. ಅಲ್ಲಿ ಅವನು ಕಾನ್ಯಕುಬ್ಜದ ರಾಜನಾದ ವಿನಯಪಾಲನ ಕನ್ಯೆಯನ್ನು ಕಾರಾಗೃಹದಿಂದ ಮುಕ್ತಗೊಳಿಸಿ, ಅವಳ ತಂದೆಯ ಹತ್ತಿರ ಕಳಿಸಿಕೊಟ್ಟನು. ಅಲ್ಲಿಂದ ಮುಂದೆ ಸಾಗಿ ಕಾಶ್ಮೀರಕ್ಕೆ ಹೋದನು. ಅಲ್ಲಿ ಅವನು ರಾಜಾ ನಂದನ ಪುತ್ರಿ

ಯಾದ ತ್ರಿಭುವನರತಿಯನ್ನು ವೀಣಾವಾದನದಲ್ಲಿ ಸೋಲಿಸಿ ಲಗ್ನವಾದನು. ಅಲ್ಲಿಂದ ಅವನು ರಮ್ಯಕ ವನಕ್ಕೆ ತೆರಳಿದನು. ಅಲ್ಲಿ ಕಾಲ ಗುಹಾವಾಸಿಯಾದ ಭೀಮಾಸುರನು ಅವನನ್ನು ಸ್ವಾಗತಿಸಿದನು (ಸಂ. ೫). ತನ್ನ ಮಾರ್ಗ-ದರ್ಶಕನಾದ ಶಬರನ ಸಹಾಯದಿಂದ ಅವನು ಕಾಂಚನ ಗುಹೆಯಲ್ಲಿ ತಲುಪಿದನು. ಅಲ್ಲಿ ಅವನು ಅನೇಕ ವಿದ್ಯೆಗಳನ್ನು ಸಂಪಾದಿಸಿದನು. ಹಾಗೆಯೇ ಕಾಲ ವೈತಾಲ ಗುಹೆಯಿಂದ ರಾಜಾ ಜಿತಶತ್ರುವು ಸಂಗ್ರಹಿಸಿದ ಅಪಾರ ಸಂಪತ್ತನ್ನು ಪಡೆದನು. ತರುವಾಯ ಅವನ ಭೆಟ್ಟಿಯು ಗಿರಿಶಿಖರದ ರಾಜನಾದ ವನರಾಜನಿಗೆ ಆಯಿತು. ಅವನ ಮಗಳಾದ ಲಕ್ಷ್ಮೀಮತಿಯನ್ನು ಅವನು ವರಿಸಿದನು. ಅಲ್ಲಿ ಶ್ರುತಿಧರ ಮುನಿಯಿಂದ ವನರಾಜನು ಕಿರಾತನಲ್ಲವೆಂದು ಕೇಳಿ ತಿಳಿದನು. ವನರಾಜನು ಪುಂಡ್ರವರ್ಧನನ ರಾಜವಂಶದವನು, ಅಲ್ಲಿಂದ ಮೂರು ತಲೆಮಾರಿನ ಹಿಂದೆ ಅವನ ಪೂರ್ವಜರಿಂದ ಒಬ್ಬ ದಾಯಾದಿಯು ಹೊರಗೆ ಹಾಕಿದ್ದನು. ನಾಗಕುಮಾರನ ಆದೇಶದಂತೆ ವ್ಯಾಲನು ಪುಂಡ್ರವರ್ಧನಕ್ಕೆ ತೆರಳಿದನು, ಮತ್ತು ವನರಾಜನನ್ನು ಪುನಃ ಅಲ್ಲಿಯ ರಾಜನನ್ನಾಗಿ ಮಾಡಲಾಯಿತು (ಸಂ. ೬). ತರುವಾಯ ನಾಗಕುಮಾರನು ಊರ್ಜಯಂತ ಗಿರಿಯ ಕಡೆಗೆ ತೆರಳಿದನು. ಮಧ್ಯದಲ್ಲಿ ಗಿರನಾರದ ಮೇಲೆ ಸಿಂಧದ ರಾಜನಾದ ಚಂಡಪ್ರದ್ಯೋತನು ಆಕ್ರಮಣ ಮಾಡಿದ್ದಾನೆಂಬ ಸುದ್ದಿಯನ್ನು ಕೇಳಿ ಅಲ್ಲಿಗೆ ಹೋದನು. ಅಲ್ಲಿ ಅವನು ತನ್ನ ಮಾವನನ್ನು ಶತ್ರುವಿನಿಂದ ರಕ್ಷಿಸಿದನು. ಅಂತೂ ಅವನ ಮಗಳಾದ ಗುಣವತಿಯನ್ನು ಲಗ್ನವಾದನು. ಅಲ್ಲಿಂದ ಹೊರಟು ಅವನು ಅಲಂಘ ನಗರದ ಅತ್ಯಾಚಾರಿ ರಾಜನಾದ ಸುಕಂಠನ ವಧೆಗೈದನು; ಮತ್ತು ಅವನ ಮಗಳಾದ ರುಕ್ಮಿಣಿಯನ್ನೂ ಮದುವೆಯಾದನು. ಅಲ್ಲಿಂದ ಮುನ್ನಡೆದು ಅವನು ಗಜಪುರವನ್ನು ತಲುಪಿದನು. ಅಲ್ಲಿ ರಾಜಾ ಅಭಿಚಂದ್ರನ ಪುತ್ರಿಯಾದ ಚಂದ್ರಾ ಎಂಬವಳೊಡನೆ ವಿವಾಹವಾದನು (ಸಂ. ೭). ಮಹಾ ವ್ಯಾಲನ ಮೂಲಕ ಉಜ್ಜಯಿನಿಯ ಅದ್ವಿತೀಯ ರಾಜಕನ್ಯೆಯ ಸಮಾಚಾರವನ್ನು ತಿಳಿದನು. ಹಾಗೂ ನಾಗಕುಮಾರನು ಅಲ್ಲಿಗೆ ಬಂದನು. ಆ ರಾಜಕನ್ಯೆಯನ್ನೂ ಸಹ ವರಿಸಿದನು. ಅಲ್ಲಿಂದ ಅವನು ತಿರುಗಿ ಕಿಷ್ಕಿಂಧಮಲಯಕ್ಕೆ ಹೋಗಿ, ಅಲ್ಲಿ ಮೃದಂಗವಾದ್ಯದಲ್ಲಿ ರಾಜಕನ್ಯೆಯನ್ನು ಸೋಲಿಸಿ ವಿವಾಹವಾದನು. ಅಲ್ಲಿಂದ ಅವನು ತೋಯಾವಲಿ ದ್ವೀಪಕ್ಕೆ ತೆರಳಿದನು. ತನ್ನಲ್ಲಿರುವ ವಿದ್ಯೆಗಳ ಸಹಾಯದಿಂದ ಅಲ್ಲಿ ಬಂಧನದಲ್ಲಿರುವ ಕನ್ಯೆಯರನ್ನು ಬಿಡುಗಡೆ ಮಾಡಿದನು (ಸಂ. ೮). ಪಾಂಡ್ಯ ದೇಶದಿಂದ ಹೊರಟು ನಾಗಕುಮಾರನು ಆಂಧ್ರ ದೇಶದ ದಂತೀಪುರಕ್ಕೆ ಬಂದನು; ಮತ್ತು ಅಲ್ಲಿಯ ರಾಜಕನ್ಯೆಯೊಡನೆ ವಿವಾಹ ಮಾಡಿಕೊಂಡನು. ತಿರುಗಿ ಅವನ ದರ್ಶನವು ಪಿಹಿತಾಶ್ರವ ಮುನಿಯೊಡನೆ ಆಯಿತು. ಆ ಮುನಿಯ ಮುಖದಿಂದ ಅವನು ತನ್ನ ಹಾಗೂ ತನ್ನ ಪ್ರಿಯ ಪತ್ನಿಯಾದ ಲಕ್ಷ್ಮೀಮತಿಯ ಪೂರ್ವಭವದ ಕಥೆಯನ್ನು ಕೇಳಿಕೊಂಡನು. ಹಾಗೆಯೇ ಶ್ರುತಪಂಚಮೀ ವ್ರತದ ಉಪವಾಸದ ಫಲವನ್ನು ತಿಳಿದನು. ಇದೇ ಸಮಯಕ್ಕೆ ಅವನ ತಂದೆಯ ಮಂತ್ರಿಯಾದ ನಯಂಧರನು ಅವನನ್ನು ಕರೆದೊಯ್ಯಲು ಬಂದನು. ಅವನ ತಮ್ಮನಾದ

ಶ್ರೀಧರನು ದೀಕ್ಷೆಯನ್ನು ತಕ್ಕೊಂಡಿದ್ದನು. ತಂದೆ-ತಾಯಂದಿರೂ ನಹ ನಾಗಕುಮಾರ ನಿಗೆ ರಾಜ್ಯವನ್ನಿತ್ತು ದೀಕ್ಷೆಯನ್ನು ತಕ್ಕೊಂಡು ಹೋದರು. ನಾಗಕುಮಾರನು ದೀರ್ಘ ಕಾಲದವರೆಗೆ ರಾಜ್ಯವಾಳಿದನು. ಕೊನೆಯಲ್ಲಿ ತನ್ನ ಪುತ್ರನಾದ ದೇವಕುಮಾರನಿಗೆ ರಾಜ್ಯವನ್ನಿತ್ತು, ವ್ಯಾಲ ಮೊದಲಾದ ಸುಭಟರ ಸಹಿತ ದಿಗಂಬರೀ ದೀಕ್ಷೆಯನ್ನು ಸ್ವೀಕರಿಸಿದನು. ಮುಂದೆ ಮರಣ ಹೊಂದಿ, ಸ್ವರ್ಗವನ್ನೂ ಹೊಂದಿದನು (ನಂ. ೯). ಪುಷ್ಪದಂತನು ಈ ಜಟಿಲ ಕಥಾನಕವನ್ನು ನಾನಾ ವರ್ಣನೆ, ವಿವಿಧ ಛಂದ ಪ್ರಯೋಗ, ರಸ ಮತ್ತು ಭಾವಗಳ ಚಿತ್ರಣ ಸಹಿತ ಅತ್ಯಂತ ರೋಚಕವಾಗುವಂತೆ ಮಾಡಿ ನಿರೂಪಿಸಿದ್ದಾನೆ (ಕಾರಂಜಾ ೧೯೩೩).

ಭವಿಸಯತ್ತಕಹಾ (ಭವಿಷ್ಯದತ್ತಕಥಾ) ಎಂಬ ಕಾವ್ಯದ ಕರ್ತೃವು ಧನವಾಲನು. ಇವನು ವೈಶ್ಯಜಾತಿಯ ಧಕ್ಕಡ ವಂಶದಲ್ಲಿ ಜನಿಸಿದ್ದನು. ಅವನ ತಂದೆಯ ಹೆಸರು ಮಾಏಸರ (ಮಹೇಶ್ವರ ?) ಮತ್ತು ತಾಯಿಯ ಹೆಸರು ಧನಶ್ರೀ ಎಂದಿತ್ತು. ಇವನ ಕಾಲವು ಇನ್ನೂ ನಿಶ್ಚಿತವಾಗಿಲ್ಲ, ಆದರೆ ಹನ್ನೊಂದನೆಯ ಶತಮಾನವೆಂದು ಅನುಮಾನ ಮಾಡಲಾಗಿದೆ. ಈ ಕಥೆಯನ್ನು ಇಪ್ಪತ್ತೆರಡು ಸಂಧಿಗಳಲ್ಲಿ ವಿಭಾಗಿಸಲಾಗಿದೆ. ಚರಿತ್ರನಾಯಕ ಭವಿಷ್ಯದತ್ತನು ಒಬ್ಬ ವಣಿಕ್ ಪುತ್ರನಾಗಿದ್ದನು. ಅವನು ತನ್ನ ಮಲತಮ್ಮನೊಡನೆ ವ್ಯಾಪಾರಕ್ಕೆಂದು ಪರದೇಶಕ್ಕೆ ಹೋಗುತ್ತಾನೆ, ಧನವನ್ನು ಸಂಪಾದಿಸುತ್ತಾನೆ, ಮತ್ತು ವಿವಾಹವನ್ನು ನಹ ಮಾಡಿಕೊಳ್ಳುತ್ತಾನೆ. ಆದರೆ ಅವನ ಮಲತಮ್ಮನು ಅವನಿಗೆ ಆಗಾಗ ಮೋಸಗೊಳಿಸಿ, ದುಃಖವನ್ನುಂಟು ಮಾಡುತ್ತಾನೆ. ಇಷ್ಟೇ ಅಲ್ಲ, ಅವನನ್ನು ಒಂದು ದ್ವೀಪದಲ್ಲಿ ಒಬ್ಬೊಂಟಿಗನನ್ನಾಗಿ ಬಿಟ್ಟು, ಅವನ ಪತ್ನಿಯನ್ನು ತಕ್ಕೊಂಡು ಮನೆಗೆ ತಿರುಗಿ ಬರುತ್ತಾನೆ; ಅವಳೊಡನೆ ವಿವಾಹವನ್ನು ಮಾಡಿಕೊಳ್ಳಲಿಕ್ಕೂ ಇಚ್ಛಿಸುತ್ತಾನೆ. ಆದರೆ ಅಷ್ಟರಲ್ಲಿ ಭವಿಷ್ಯದತ್ತನು ಒಬ್ಬ ಯಕ್ಷನ ಸಹಾಯದಿಂದ ಮನೆಗೆ ತಿರುಗಿ ಬರುವನು, ಮತ್ತೆ ತನ್ನ ಅಧಿಕಾರವನ್ನು ಪಡೆಯುವನು. ಅಲ್ಲದೆ ರಾಜನನ್ನು ಪ್ರಸನ್ನಗೊಳಿಸಿ ಅವನ ಮಗಳನ್ನು ಲಗ್ನವಾಗುವನು. ಕೊನೆಗೆ ಮುನಿಗಳಿಂದ ಧರ್ಮೋಪದೇಶವನ್ನೂ ತನ್ನ ಪೂರ್ವಭವದ ವೃತ್ತಾಂತವನ್ನೂ ಕೇಳಿ, ವಿರಕ್ತನಾಗುವನು. ಪುತ್ರನಿಗೆ ರಾಜ್ಯವನ್ನು ಕೊಟ್ಟು, ಮುನಿದೀಕ್ಷೆಯನ್ನು ತಕ್ಕೊಳ್ಳುವನು. ಈ ಕಥೆಯನ್ನೂ ಕೂಡ ಶ್ರುತಪಂಚಮಿ ವ್ರತದ ಮಹಾತ್ಮ್ಯೆಯನ್ನು ಪ್ರಕಟಗೊಳಿಸುವುದಕ್ಕಾಗಿ ಬರೆದದ್ದಾಗಿದೆ. ಗ್ರಂಥದ ಅನೇಕ ಪ್ರಕರಣಗಳು ಬಹುಸುಂದರ ಹಾಗೂ ರೋಚಕವಾಗಿವೆ. ಬಾಲಕ್ರೀಡೆ, ಸಮುದ್ರಯಾತ್ರೆ, ನೌಕಾಭಂಗ, ಪಟ್ಟಣಕ್ಕೆ ಬೆಂಕಿ ಹತ್ತುವಿಕೆ, ವಿಮಾನಯಾತ್ರೆ ಮೊದಲಾದ ವರ್ಣನೆಗಳು ಓದಲು ತಕ್ಕವಾಗಿವೆ. ಕವಿಯ ಸಮಯದಲ್ಲಿ ವಿಮಾನವಿರಲಿ, ಇಲ್ಲದಿರಲಿ, ಆದರೆ ವಿಮಾನದ ವರ್ಣನೆಯನ್ನು ಅವನು ಬಹಳ ಸಜೀವ ರೂಪದಲ್ಲಿ ಮಾಡಿದ್ದಾನೆ. (ಗಾಯಕವಾಡ ಔರಿ. ಸಿರೀಜ, ಬಡೋದಾ).

ಕರಕಂಡಚರಿಉ ವಿನ ಕರ್ತೃವಾದ ಕನಕಾಮರನು ತನ್ನ ಪರಿಚಯವನ್ನು

ಸ್ವತಃ ಮಾಡಿಕೊಟ್ಟಿದ್ದಾನೆ. ಅವನು ದ್ವಿಜ ವಂಶದ ಚಂದ್ರರ್ಷಿಯ ಗೋತ್ರೀಯ ನಾಗಿದ್ದನು. ಅವನು ವೈರಾಗ್ಯದಿಂದ ದಿಗಂಬರನಾಗಿದ್ದನು. ಇವನ ಗುರುವಿನ ಹೆಸರು ಬುಧ ಮಂಗಲದೇವ ಎಂದಿತ್ತು. ಇವನು ಆಸಾಇ ನಗರದಲ್ಲಿ ರಾಜಮಂತ್ರಿ ಯೊಬ್ಬನ ಅನುರಾಗದಿಂದ ಈ ಗ್ರಂಥವನ್ನು ರಚಿಸಿದನು. ರಾಜಮಂತ್ರಿಯ ವಿಷಯ ದಲ್ಲಿಯೂ ಕೆಲವು ಸಂಗತಿಗಳನ್ನು ಹೇಳಿದ್ದಾನೆ. ಆ ಮಂತ್ರಿಯು ವಿಜಯಪಾಲ ರಾಜನ ಸ್ನೇಹವನ್ನು ಪಡೆದವನು. ನೃಪಭೂಪಾಲ ಅಥವಾ ನಿಜಭೂಪಾಲನ ಮನಮೋಹಕನು. ಕರ್ಣನರೇಂದ್ರನ ರಂಜಕನು. ಇವನ ಆಹುಲ, ರಲ್ಲು ಮತ್ತು ರಾಹುಲ ಈ ಮೂವರು ಮಕ್ಕಳೂ ಮುನಿಯ ಭಕ್ತರಾಗಿದ್ದರು. ಮುನಿಯು ಇಲ್ಲಿ ಉಲ್ಲೇಖಿಸಿದ ಕರ್ಣನು ಕಲಚೂರಿ ವಂಶದ ರಾಜನಾಗಿರಬೇಕು. ವಿಜಯ ಪಾಲನು ಅವನ ಸಮಕಾಲೀನನಾದ ಚಂದೇಲ ವಂಶೀಯ ರಾಜನಾಗಿದ್ದನು. ಇದಕ್ಕನುಸರಿಸಿ ಈ ಗ್ರಂಥದ ರಚನಾಕಾಲವು ಕ್ರಿ.ಶ. ೧೦೫೦ ರ ಸುಮಾರಿನಲ್ಲಿ ಆಗಿರ ಬೇಕೆಂದು ಸಿದ್ಧವಾಗುತ್ತದೆ. ಕವಿಯು ಸ್ವಯಂಭೂ ಮತ್ತು ಪುಷ್ಪದಂತರ ಉಲ್ಲೇಖ ಮಾಡಿದ್ದಾನೆ. ಅದರಿಂದ ಇವನು ಕ್ರಿ. ಶ. ೯೬೫ ರ ತರುವಾಯ ಆಗಿರುವುದು ನಿಶ್ಚಿತವಾಗುತ್ತದೆ. ಈ ಕೃತಿಯು ಹತ್ತು ಸಂಧಿಗಳಲ್ಲಿ ಪೂರ್ಣವಾಗಿದೆ. ಕಥಾನಾಯಕ ನಾದ ಕರಕಂಡುವಿನನ್ನು ಜೈನ ಮತ್ತು ಬೌದ್ಧ ಪರಂಪರೆಗಳಲ್ಲಿ ಒಬ್ಬ ಪ್ರತ್ಯೇಕ ಬುದ್ಧ ನೆಂದು ಮನ್ನಿಸಲಾಗಿದೆ. ಅವನು ಅಂಗ ದೇಶದ ಚಂಪಾ ನಗರದಲ್ಲಿ ರಾಜನಾದ ಧಾಡೀವಾಹನ ಮತ್ತು ರಾಣಿ ಪದ್ಮಾವತಿಯ ಪುತ್ರನಾಗಿದ್ದನು. ಆದರೆ ಒಂದು ದೊಡ್ಡ ಆನೆಯು ರಾಣಿಯನ್ನು ಅಪಹರಿಸಿದುದರಿಂದ ಅವನ ಜನ್ಮವು ದಂತೀಪುರದ ಸಮೀಪ ದಲ್ಲಿರುವ ಸ್ಮಶಾನ-ಭೂಮಿಯಲ್ಲಿ ಆಯಿತು. ಅವನ ಪರಿಪಾಲನ ಮತ್ತು ಶಿಕ್ಷಣಗಳು ಒಬ್ಬ ಮಾತಂಗನಿಂದ ಆದುವು. ದಂತೀಪುರದ ರಾಜನು ಮರಣ ಹೊಂದಿದ ಮೇಲೆ ದೈವಯೋಗದಿಂದ ಅವನನ್ನು ಅಲ್ಲಿಯ ರಾಜನನ್ನಾಗಿ ಮಾಡಲಾಯಿತು. ಚಂಪಾ ನಗ ರದ ರಾಜನಾದ ಧಾಡೀವಾಹನನು ಅವನ ಹತ್ತಿರ ತನ್ನ ಮಾಂಡಲಿಕನಾಗುವಂತೆ ಆದೇಶವನ್ನು ಕಳಿಸಿದನು. ಅದನ್ನವನು ತಳ್ಳಿ ಹಾಕಿದನು. ಅಲ್ಲದೆ ಚಂಪಾನಗರದ ಮೇಲೆ ಆಕ್ರಮಣವನ್ನೂ ಕೂಡ ಮಾಡಿದನು. ತಂದೆ-ಮಕ್ಕಳಲ್ಲಿ ಘನ-ಘೋರ ಯುದ್ಧವು ನಡೆಯಿತು. ಆಗ ಅವನ ತಾಯಿಯಾದ ಪದ್ಮಾವತಿಯು ಪ್ರಕಟವಾಗಿ ಯುದ್ಧದ ನಿವಾರಣೆಯನ್ನು ಮಾಡಿದಳು ; ತಂದೆ ಮಕ್ಕಳ ಪರಿಚಯವನ್ನು ಮಾಡಿ ಕೊಟ್ಟಳು. ಈಗ ಕರಕಂಡುವು ಚಂಪಾಪುರದ ರಾಜನಾದನು. ಅವನು ದಕ್ಷಿಣದ ಚೋಳ, ಚೇರ ಮತ್ತು ಪಾಂಡ್ಯ ದೇಶಗಳ ವಿಜಯಕ್ಕಾಗಿ ದಂಡಯಾತ್ರೆಯನ್ನು ಮಾಡಿ ದನು. ಮಾರ್ಗದಲ್ಲಿ ತೇರಾಪುರದ ಸಮೀಪದ ಬೆಟ್ಟದ ಮೇಲೆ ಇರುವ ಪ್ರಾಚೀನ ಜೈನ ಗುಹೆಯೊಂದನ್ನು ಕಂಡು ಹಿಡಿದನು. ಒಂದೆರಡು ಹೊಸ ಗುಹೆಗಳನ್ನು ನಿರ್ಮಿಸಿದನು. ಆಮೇಲೆ ಅವನು ಸಿಂಹಲ ದ್ವೀಪದವರೆಗೆ ಗೆದ್ದನು. ಅಲ್ಲದೆ ಹಲವು ಜನ ರಾಜಕುಮಾರಿ ಯರನ್ನು ಲಗ್ನವಾದನು, ಕೊನೆಯಲ್ಲಿ ಶೀಲಗುಪ್ತ ಮುನಿಯಿಂದ ಧರ್ಮಶ್ರವಣ ಮಾಡಿ

ತಪಸ್ಸನ್ನಾಚರಿಸಿ ಮುಕ್ತನಾದನು. ಈ ಕಥಾನಕದಲ್ಲಿ ಅನೇಕ ಚಿಕ್ಕ-ಪುಟ್ಟ ಉಪಕಥೆಗಳು ಕರಕಂಡುವಿನ ಶಿಕ್ಷಣಕ್ಕೆಂದು ಮಾತಂಗನು ಹೇಳಿದವುಗಳಾಗಿವೆ. ಮೂರು ಅವಾಂತರ ಕಥೆಗಳು ಒಂದೊಂದು ಸಂಧಿಗಳಷ್ಟು ಆಗುವಂತೆ ದೊಡ್ಡ ಪ್ರಮಾಣದವು ಇವೆ. ಐದನೆಯ ಸಂಧಿಯಲ್ಲಿ ತೇರಾಪುರದ ಪರ್ವತದಲ್ಲಿ ಪ್ರಾಚೀನ ಗುಹೆಗಳ ನಿರ್ಮಾಣ, ಜಿನಮೂರ್ತಿಯನ್ನು ಸ್ಥಾಪಿಸುವಿಕೆ ಇತ್ಯಾದಿಗಳ ವರ್ಣನೆಯು ಬರುತ್ತದೆ. ಆರನೆಯ ಸಂಧಿಯಲ್ಲಿ ಕರಕಂಡುವಿನ ಪ್ರಿಯ ಪತ್ನಿಯಾದ ಮದನಾವಳಿಯನ್ನು ಒಂದು ದುಷ್ಟ ಆನೆಯು ಅಪಹರಣ ಮಾಡುತ್ತದೆ. ಆಗ ರಾಜನ ವಿಯೋಗ ದುಃಖವನ್ನು ಪರಿಹರಿಸಲಿಕ್ಕೆಂದು ರಾಜಾ ನರವಾಹನದತ್ತನ ಆಖ್ಯಾನವನ್ನು ಹೇಳಲಾಗಿದೆ. ಎಂಟನೆಯ ಸಂಧಿಯಲ್ಲಿ ಕರಕಂಡುವಿನ ಪತ್ನಿಯಾದ ರತಿವೇಗಾ ಎಂಬವಳಿಗೆ ಪತಿಯೋಗದ ಕಾಲಕ್ಕೆ ಸಂಭೋಧಿಸಲಿಕ್ಕೆಂದು ದೇವಿಯು ಅರಿದಮನ ಮತ್ತು ರತ್ನಲೇಖೆಯ ವಿಯೋಗ ಹಾಗೂ ಪುನರ್ಮಿಲನಗಳ ಆಖ್ಯಾನವನ್ನು ವಿವರಿಸಲಾಗಿದೆ. ಈ ಗ್ರಂಥದಲ್ಲಿ ಸ್ಮಶಾನ, ಗಂಗಾ ನದಿ, ಪ್ರಾಚೀನ ಜಿನಮೂರ್ತಿಯನ್ನು ಭೂಮಿಯಿಂದ ಹೊರ ತೆಗೆಯುವಿಕೆ, ರತಿವೇಗಾ ಇವಳ ಪ್ರಲಾಪ ಮೊದಲಾದವುಗಳ ವರ್ಣನೆಯು ಬಹು ಸುಂದರವಾಗಿದೆ. (ಕಾರಂಜಾ, ೧೯೩೪).

ಪಉಮಸಿರಿ-ಚರಿಉ (ಪದ್ಮಶ್ರೀ ಚರಿತ)ದ ಕರ್ತೃವು ಧಾಹಿಲನು. ಇವನ ತಂದೆಯ ಹೆಸರು ಪಾರ್ಶ್ವ, ತಾಯಿಯು ಮಹಾಸತೀ ಸೂರಾ ಈ (ಸೂರಾದೇವಿ ?) ಆಗಿದ್ದರು. ಅವರು ಶಿಶುಪಾಲ ಕಾವ್ಯದ ಕರ್ತೃವಾದ ಮಾಘನ ವಂಶದಲ್ಲಿ ಉತ್ಪನ್ನವಾಗಿದ್ದರು. ಇದನ್ನಿಷ್ಟು ಕವಿಯೇ ತಿಳಿಸಿದ್ದಾನೆ. ಈ ಕಾವ್ಯದ ಕಾಲವು ನಿಶ್ಚಿತವಿಲ್ಲ. ಆದರೆ, ಈ ಕೃತಿಯ ಪ್ರಾಚೀನ ಪ್ರತಿಯನ್ನು ವಿ. ಸಂ. ೧೧೯೧ರಲ್ಲಿ ಮಾಡಿದ್ದು ಲಭಿಸಿದೆ. ಇದರಿಂದ ಈ ಕೃತಿ ರಚನೆಯ ಉತ್ತರಾವಧಿಯು ನಿಶ್ಚಯವಾಗಿ ಬಿಡುತ್ತದೆ. ಇದರ ರಚನೆಯು ನಾಲ್ಕು ಸಂಧಿಗಳಲ್ಲಿ ಪೂರ್ಣಗೊಂಡಿದೆ. ನಾಯಿಕೆಯಾದ ಪದ್ಮಶ್ರೀಯು ತನ್ನ ಪೂರ್ವಭವದಲ್ಲಿ ಒಬ್ಬ ಶ್ರೇಷ್ಠಿಯ ಪುತ್ರಿಯಾಗಿದ್ದಳು. ಆಗ ಅವಳು ಬಾಲ ವಿಧವೆಯಾದಳು. ತನ್ನ ಜೀವನವನ್ನು ಇಬ್ಬರು ತಮ್ಮಂದಿರು, ಅವರ ಪತ್ನಿಯರ ಮಧ್ಯದಲ್ಲಿ ಈರ್ಷೆ ಮತ್ತು ಸಂತಾಪಗಳ ಮಧ್ಯದಲ್ಲಿ ಕಳೆದಳು. ಇನ್ನೊಂದೆಡೆಗೆ ಧರ್ಮಸಾಧನೆಯಲ್ಲಿಯೂ ಮಗ್ನಳಾಗಿದ್ದಳು. ಮುಂದಿನ ಜನ್ಮದಲ್ಲಿ ಅವಳು ಪೂರ್ವ ಪುಣ್ಯದ ಫಲದಿಂದ ರಾಜಕುಮಾರಿಯಾಗಿ ಜನಿಸಿದಳು. ಆದರ ಅವಳಿಗೆ ಕಟ್ಟಿದ ಪಾಪಕರ್ಮದ ಫಲದಿಂದಾಗಿ ಪತಿಯಿಂದ ಪರಿತ್ಯಾಗ ಹೊಂದುವಂಥ ದುಃಖವನ್ನು ಅನುಭವಿಸಬೇಕಾಯಿತು. ಅಂದರೂ ಸಂಯಮ ಮತ್ತು ತಪಗಳ ಬಲದಿಂದ ಕೊನೆಯಲ್ಲಿ ಅವಳು ಕೇವಲ ಜ್ಞಾನವನ್ನು ಪಡೆದು ಮುಕ್ತಿಯನ್ನು ಹೊಂದಿದಳು. ಕಾವ್ಯದಲ್ಲಿ ದೇಶ, ನಗರಗಳ ವರ್ಣನೆಗಳು, ಹೃದಯದ ದಾಹದ ಚಿತ್ರಣ, ಸಂಜೆ ಮತ್ತು ಚಂದ್ರೋದಯ ಮೊದಲಾದ ಪ್ರಕೃತಿಯ ವರ್ಣನೆಗಳು ಬಹಳ ಸುಂದರವಾಗಿವೆ. (ಸಿಂಘೀ ಜೈನ ಸೀರೀಜ ಮುಂಬಯಿ).

**ಸಣಂಕುಮಾರಚರಿಉ** (ಸನತ್ಕುಮಾರ ಚರಿತ)ದ ಕರ್ತೃವಾದ ಹರಿಭದ್ರನು ಶ್ರೀಚಂದ್ರನ ಶಿಷ್ಯನೂ ಜಿನಚಂದ್ರನ ಪ್ರಶಿಷ್ಯನೂ ಆಗಿದ್ದನು. ಅವನು ತನ್ನ '**ಣೇಮಿಣಾಹ-ಚರಿಉ**'ಎಂಬುದನ್ನು ವಿ. ಸಂ. ೧೨೧೬ರಲ್ಲಿ ರಚಿಸಿದನು. ಪ್ರಸ್ತುತ ರಚನೆಯು ಅದರದೇ ಒಂದು ಭಾಗವು. ಆ ಕೃತಿಯ ೪೪೩ರಿಂದ ೭೮೫ರ ವರೆಗಿನ ೩೪೩ ರಡ್ಡಾಛಂದಾತ್ಮಕಪದ್ಯಗಳ ಕಾವ್ಯವಾಗಿದೆ. ಅದು ಪೃಥಕ್ ರೂಪದಿಂದ ಸುಸಂಪಾದಿತವಾಗಿ ಪ್ರಕಟವಾಗಿದೆ. ಕಥಾನಾಯಕನಾದ ಸನತ್ಕುಮಾರನು ಗಜಪುರದ ರಾಜನಾದ ಅಶ್ವಸೇನನ ಪುತ್ರನಾಗಿದ್ದನು. ಅವನು ಒಂದು ಸಲ ಮದನೋತ್ಸವದ ಸಮಯದಲ್ಲಿ, ಅತಿವೇಗವುಳ್ಳ ಕುದುರೆಯನ್ನು ಹತ್ತಿ, ವಿದೇಶದೊಳಗೆ ಪ್ರವೇಶಿಸಿ, ತಿರುಗ ಹತ್ತಿದನು. ರಾಜಧಾನಿಯಲ್ಲಿ ಹಾಹಾಕಾರವು ಉಂಟಾಯಿತು. ಅವನ ಸ್ನೇಹಿತರು ಶೋಧದಲ್ಲಿ ತೊಡಗಿದರು. ಅವರು ಮಾನಸಸರೋವರಕ್ಕೆ ಹೋಗಿ ತಲುಪಿದರು. ಅಲ್ಲಿ ಒಬ್ಬ ಕಿನ್ನರಿಯ ಮುಖದಿಂದ ತಮ್ಮ ಮಿತ್ರನ ಗುಣಗಾನವನ್ನು ಕೇಳಿ, ಅವರು ಅವನನ್ನು ಗೊತ್ತು ಹಚ್ಚಿದರು. ಇಷ್ಟರಲ್ಲಿ ಸನತ್ಕುಮಾರನು ಅನೇಕ ಸುಂದರ ಕನ್ಯೆಯರನ್ನು ಮದುವೆಯಾಗಿದ್ದನು. ಮಿತ್ರನ ಮುಖದಿಂದ ಮಾತಾಪಿತರ ಶೋಕ ಸಂತಾಪಗಳ ಸುದ್ದಿಯನ್ನು ಕೇಳಿ, ಗಜಪುರಕ್ಕೆ ತಿರುಗಿ ಬಂದನು. ತಂದೆಯು ಅವನಿಗೆ ರಾಜ್ಯವನ್ನು ಒಪ್ಪಿಸಿ ದೀಕ್ಷೆಯನ್ನು ತಕ್ಕೊಂಡನು. ಸನತ್ಕುಮಾರನು ತನ್ನ ಪರಾಕ್ರಮ ಮತ್ತು ವಿಜಯಗಳಿಂದ ಚಕ್ರವರ್ತಿಪದವನ್ನು ಸಂಪಾದಿಸಿದನು. ಕೊನೆಗೆ ತಪಸ್ಸನ್ನು ಆಚರಿಸಿದನು. ಇದೇ ಸಾಮಾನ್ಯ ಕಥಾನಕವನ್ನು ಕರ್ತೃವು ತನ್ನ ಕಾವ್ಯ ಪ್ರತಿಭೆಯಿಂದ ಬಹು ಸ್ವಾರಸ್ಯಕರವೆನಿಸುವಂತೆ ನಿರೂಪಿಸಿದ್ದಾನೆ. ಇದರಲ್ಲಿ ಋತುಗಳ ವರ್ಣನೆಗಳು ಬಹುಚೆನ್ನಾಗಿ ಬಂದಿವೆ. (ಡಾ. ಜಾಕೋಬಿಯಿಂದ ರೋಮನ್ ಲಿಪಿಯಲ್ಲಿ ಸಂಪಾದಿತ, ಜರ್ಮನಿ)

ಈ ಪ್ರಕಟವಾದ ಚರಿತ್ರೆಗಳ ಹೊರತಾಗಿ ಅನೇಕ ಅಪಭ್ರಂಶ ಚರಿತ ಗ್ರಂಥಗಳು ಹಸ್ತಪ್ರತಿಗಳ ರೂಪದಲ್ಲಿ ವಿವಿಧ ಜೈನ ಶಾಸ್ತ್ರ ಭಂಡಾರಗಳಲ್ಲಿ ಸುರಕ್ಷಿತವಾಗಿವೆ; ಸಂಪಾದನ ಹಾಗೂ ಪ್ರಕಾಶನದ ಮಾರ್ಗಪ್ರತೀಕ್ಷೆಯಲ್ಲಿವೆ. ಅವುಗಳಲ್ಲಿ ಕೆಲವೊಂದು ವಿಶೇಷ ಕೃತಿಗಳು ಈ ಪ್ರಕಾರ ಇವೆ:—ವೀರಕೃತ **ಜಂಬೂಸ್ವಾಮಿ-ಚರಿಉ** (ವಿ. ಸಂ. ೧೦೭೬), ನಯನಂದೀಕೃತ **ಸುದಂಸಣ-ಚರಿಉ** (ವಿ. ಸಂ. ೧೧೦೦), ಶ್ರೀಧರಕೃತ **ಸುಕುಮಾಲ ಚರಿಉ** (ವಿ. ಸಂ. ೧೨೦೮), ದೇವಸೇನ ಗಣಿ ಕೃತ **ಸುಲೋಚನಾ-ಚರಿತ**, ಸಿಂಹ (ಅಥವಾ ಸಿದ್ಧ) ಕೃತ **ಪಜ್ಜುಣ್ಣ ಚರಿಉ** (೧೨-೧೩ನೆಯ ಶತಮಾನ), ಲಕ್ಷ್ಮಣ ಕೃತ **ಜಿನದತ್ತ ಚರಿಉ** (ವಿ. ಸಂ, ೧೨೭೫), ಧನಪಾಲ ಕೃತ **ಬಾಹುಬಲಿ ಚರಿಉ** (ವಿ. ಸಂ. ೧೪೫೪), ರಯಧೂ ಕೃತ **ಸುಕೋಸಲ-ಚರಿಉ, ಧನ್ನಕುಮಾರ-ಚರಿಉ, ಮೇಹೇಸರ-ಚರಿಉ** ಮತ್ತು **ಸಿರಿವಾಲಚರಿಉ** (೧೫ನೆಯ ಶತಮಾನ), ನರಸೇನ ಕೃತ **ಸಿರಿವಾಲ-ಚರಿಉ** (ವಿ. ಸಂ. ೧೫೭೬) ಮತ್ತು **ಣಾಯಕುಮಾರಚರಿಉ** (ವಿ. ಸಂ. ೧೫೭೯), ಇದರಂತೆಯೇ ಭಗವತೀದಾಸ ವಿರಚಿತ **ಸತಿಲೇಹಾ** ಅಥವಾ **ಮೃಗಾಂಕಲೇಖಾ-**

**ಚರಿಉ** (ವಿ. ಸಂ. ೧೭೦೦) ಇವು ಉಲ್ಲೇಖನೀಯವಾಗಿವೆ. ಹರಿದೇವನು ರಚಿಸಿದ **ಮಯಣ ಪರಾಜಯ** ಮತ್ತು ಜಿನಪ್ರಭಸೂರಿಕೃತ **ಮೋಹರಾಜ ವಿಜಯ**ಗಳಂಥ ಕವಿತೆಗಳೂ ಇವೆ. ಇವುಗಳಲ್ಲಿ ತಪ, ಸಂಯಮ ಮೊದಲಾದ ಭಾವನೆಗಳಿಗೆ ಮೂರ್ತಿಮಾನ್ ಪಾತ್ರಗಳ ರೂಪವನ್ನು ಕೊಟ್ಟು, ಮೋಹರಾಜ ಮತ್ತು ಜಿನರಾಜ ಇವರಲ್ಲಿ ನಡೆದ ಯುದ್ಧದ ಚಿತ್ರಣವನ್ನು ಮಾಡಿದೆ.

**ಅಪಭ್ರಂಶ ಲಘು ಕಥೆಗಳು :—**

ಚರಿತೆ ಕಾವ್ಯಗಳು ಒಂದಿಲ್ಲೊಂದು ಜೈನ ವ್ರತಗಳ ಮಹಾತ್ಮೆಯನ್ನು ಪ್ರಕಟ ಮಾಡುವುದಕ್ಕಾಗಿ ರೂಪುಗೊಂಡವುಗಳಾಗಿವೆ. ಇದನ್ನು ಈ ಮೊದಲೇ ಹೇಳಿದೆಯಷ್ಟೆ. ಇದೇ ಉದ್ದೇಶದಿಂದ ಅನೇಕ ಚಿಕ್ಕ ಕಥೆಗಳನ್ನೂ ಸಹ ರಚಿಸಲಾಗಿದೆ. ವಿಶೇಷ ಲಘು ಕಥಾ ಲೇಖಕರೂ ಅವರ ಕೃತಿಗಳೂ ಈ ಪ್ರಕಾರ ಇವೆ :—ನಯನಂದಿಕೃತ '**ಸಕಲ ವಿಧಿವಿಧಾನಕಹಾ**' (ವಿ. ಸಂ. ೧೧೦೦) ಶ್ರೀಚಂದ್ರ ವಿರಚಿತ **ಕಥಾಕೋಶ** ಮತ್ತು **ರತ್ನಕರಂಡಶಾಸ್ತ್ರ** (ವಿ. ಸಂ. ೧೧೨೩), ಅಮರಕೀರ್ತಿ ಕೃತ **ಛಕ್ಕಮ್ಮೊವ ಏಸು** (ವಿ ಸಂ. ೧೨೪೭), ಲಕ್ಷ್ಮಣ ರಚಿತ **ಅಣುವಯ-ರಯಣ-ಪಈಉ** (ವಿ.ಸಂ. ೧೩೧೩), ಹಾಗೂ ರಯಧೂಕೃತ **ಪುಣ್ಣಾಸವಕಹಾಕೋಸೊ** (೧೫ನೆಯ ಶತಮಾನ) ಇವಲ್ಲದೆ ಅನೇಕ ವ್ರತ ಕಥೆಗಳೂ ಸಹ ಸ್ಫುಟ ರೂಪದಿಂದ ದೊರೆಯುತ್ತವೆ. ಅಂಥವುಗಳಲ್ಲಿ ಬಾಲಚಂದ್ರ ಕೃತ **ಸುಗಂಧದಹಮೀಕಹಾ** ಹಾಗೂ **ಣಿದ್ದಹ ಸತ್ತೆಮೀ ಕಹಾ**, ವಿನಯಚಂದ್ರ ವಿರಚಿತ **ಣಿಜ್ಝರ ಪಂಚಮೀ ಕಹಾ**, ಯಶಃಕೀರ್ತಿ ಕೃತ **ಜಿಣರತ್ತಿವಿಹಾಣ ಕಹಾ** ಮತ್ತು **ರವಿವ್ರತ ಕಹಾ**, ಹಾಗೆಯೇ ಅಮರಕೀರ್ತಿ ರಚಿತ **ಪುರಂದರ ವಿಹಾಣ ಕಹಾ** ಇತ್ಯಾದಿಗಳನ್ನು ಇಲ್ಲಿ ಎತ್ತಿ ಹೇಳಬಹುದಾಗಿದೆ. ಇವುಗಳಲ್ಲಿ ವಿನಯಚಂದ್ರ ಕೃತ **ಣಿಜ್ಝರ-ಪಂಚಮೀ-ಕಹಾ**ದಂಥ ಕೆಲವೊಂದು ಕೃತಿಗಳು ಅಪಭ್ರಂಶ ಭಾಷೆಯಲ್ಲಿ ಗೀತ ಕಾವ್ಯದ ನರನ ಹಾಗೂ ಸುಂದರ ಉದಾಹರಣೆಗಳೆನಿಸುತ್ತವೆ.

ಇನ್ನೊಂದು ಪ್ರಕಾರದ ಅಪಭ್ರಂಶ ಕಥೆಗಳನ್ನು ಸಹ ಇಲ್ಲಿ ಉಲ್ಲೇಖಿಸಬೇಕು. ಹರಿಭದ್ರನು ಪ್ರಾಕೃತದಲ್ಲಿ **ಧೂರ್ತಾಖ್ಯಾನ** ಎಂಬ ಹೆಸರಿನ ಕಥೆಯನ್ನು ಬರೆದಿದ್ದಾನೆ ಅದರಲ್ಲಿ ಅನೇಕ ಪೌರಾಣಿಕ ಅತಿರಂಜಿತ ಸಂಗತಿಗಳನ್ನು ಕುರಿತು ವ್ಯಂಗ್ಯಾತ್ಮಕ ಆಖ್ಯಾನಗಳನ್ನು ಬರೆದದ್ದಾಗಿದೆ. ಇದನ್ನನುಕರಿಸಿ, ಅಪಭ್ರಂಶದಲ್ಲಿ ಹರಿಷೇಣನು **ಧರ್ಮಪರಿಕ್ಷಾ** ಎಂಬ ಹೆಸರಿನ ಗ್ರಂಥವನ್ನು ೧೧ ಸಂಧಿಗಳಲ್ಲಿ ಬರೆದಿದ್ದಾನೆ. ಇದರ ರಚನೆಯು ವಿ ಸಂ. ೧೦೪೪ರಲ್ಲಿ ಆಗಿದೆ. ಇದರಂತೆಯೇ ಶ್ರುತಕೀರ್ತಿಯೂ ಸಹ **ಧರ್ಮಪರಿಕ್ಷಾ** ಎಂಬ ಗ್ರಂಥವನ್ನು ೧೫ನೆಯ ಶತಮಾನದಲ್ಲಿ ರಚಿಸಿದ್ದಾನೆ.

**ಪ್ರಥಮಾನುಯೋಗ-ಸಂಸ್ಕೃತ :—**

ಯಾವ ಪ್ರಕಾರ ಪ್ರಾಕೃತದಲ್ಲಿ ಕಥಾತ್ಮಕ ಸಾಹಿತ್ಯದ ಪ್ರಾರಂಭವು ರಾಮಕಥೆಯಿಂದ ಆಗುತ್ತದೆಯೋ, ಅದೇ ಪ್ರಕಾರ ಸಂಸ್ಕೃತದಲ್ಲಿಯೂ ಕೂಡ ಕಂಡುಬರುತ್ತದೆ. ರವಿಷೇಣ ಕೃತ ಪದ್ಮಚರಿತದ ರಚನೆಯು ಸ್ವಯಂ ಗ್ರಂಥದಲ್ಲಿರುವ ಉಲ್ಲೇಖಕ್ಕನುಸರಿಸಿ ವೀರ ನಿರ್ವಾಣದ ತರುವಾಯ ೧೨೦೩ ವರ್ಷಗಳ ಮೇಲೆ ಅರ್ಥಾತ್ ಕ್ರಿ. ಶ. ೬೭೭ರಲ್ಲಿ ಆಯಿತು. ಈ ಗ್ರಂಥವನ್ನು ವಿಮಲಸೂರಿಯ 'ಪಉಮಚರಿಯಂ' ಕಾವ್ಯವನ್ನು ಅನುಸರಿಸಿ ರಚಿಸಿದಂತೆ ಕಂಡುಬರುತ್ತದೆ. ಇದರ ರಚನೆಯು ಬಹಳಷ್ಟು ಅನುಷ್ಟುಪ್ ಶ್ಲೋಕಗಳಲ್ಲಿ ಆಗಿದೆ. ವಿಷಯ ಮತ್ತು ವರ್ಣನೆಗಳು ಬಹುತರ ಒಂದಕ್ಕೊಂದು ಹೊಂದುತ್ತವೆ. ಇಷ್ಟೇ ಅಲ್ಲ, ಅಧ್ಯಾಯ- ಪ್ರತಿ ಅಧ್ಯಾಯ ಮತ್ತು ಬಹಳಷ್ಟು ಪದ್ಯ-ಪ್ರತಿಪದ್ಯಗಳು ಹೊಂದುತ್ತ ಹೋಗುತ್ತವೆ. ವರ್ಣನೆಗಳ ವಿಸ್ತಾರವು ಕೆಲವೆಡೆಗಳಲ್ಲಿ ಪದ್ಮಚರಿತದಲ್ಲಿ ಹೆಚ್ಚಾಗಿ ಇದ್ದುದು ಕಂಡುಬರುತ್ತದೆ. ಅದರಿಂದ ಇದರ ಪ್ರಮಾಣವು ಪಉಮಚರಿಯಂ ದ ಒಂದೂವರೆ ಪಟ್ಟನಷ್ಟು ಇದೆ.(ಹಿಂದಿ ಅನುವಾದ ಸಹಿತ ಭಾರತೀಯ ಜ್ಞಾನ ಪೀಠ, ಕಾಶಿ ಇವರಿಂದ ಪ್ರಕಟಿತ)

ಪದ್ಮಚರಿತದ ತರುವಾಯ ಸಂಸ್ಕೃತದಲ್ಲಿ ಇನ್ನೊಂದು ಪೌರಾಣಿಕ ರಚನೆಯೆಂದರೆ ಜಿನಸೇನಕೃತ ಹರಿವಂಶ ಪುರಾಣವಾಗಿದೆ. ಇದು ಶಕ ಸಂವತ್ ೭೦೫ ಅರ್ಥಾತ್ ಕ್ರಿ.ಶ. ೭೮೩ರಲ್ಲಿ ಪೂರ್ಣಗೊಂಡಿದೆ. ಆಗ ಉತ್ತರ ಭಾರತದಲ್ಲಿ ಇಂದ್ರಾಯುಧ, ದಕ್ಷಿಣದಲ್ಲಿ ಕೃಷ್ಣನ ಪುತ್ರನಾದ ಶ್ರೀವಲ್ಲಭ, ಪೂರ್ವದಲ್ಲಿ ಅವಂತಿನೃಪ ಹಾಗೂ ಪಶ್ಚಿಮದಲ್ಲಿ ವತ್ಸರಾಜ ಅದರಂತೆ ಸೌರ ಮಂಡಲದಲ್ಲಿ ವೀರವರಾಹ ರಾಜರ ರಾಜ್ಯವಿತ್ತು. ಈ ಗ್ರಂಥದಲ್ಲಿ ೬೬ ಸರ್ಗಗಳಿವೆ. ಅವುಗಳಲ್ಲಿ ೧೨೦೦೦ ಶ್ಲೋಕಗಳಿವೆ. ಇಲ್ಲಿಯೂ ಸಾಮಾನ್ಯವಾಗಿ ಅನುಷ್ಟುಪ್ ಛಂದಸ್ಸಿನ ಪ್ರಯೋಗವಾಗಿದೆ. ಆದರೆ ಕೆಲವೊಂದು ಸರ್ಗಗಳ ಕೊನೆಯಲ್ಲಿ ದ್ರುತವಿಲಂಬಿತ, ವಸಂತತಿಲಕಾ, ಶಾರ್ದೂಲ ವಿಕ್ರೀಡಿತ ಮೊದಲಾದ ಛಂದಸ್ಸುಗಳನ್ನು ಸಹ ಉಪಯೋಗಿಸಲಾಗಿದೆ. ಗ್ರಂಥದ ಮುಖ್ಯ ವಿಷಯವು ಹರಿವಂಶದಲ್ಲಿ ಉತ್ಪನ್ನವಾದಂಥ ೨೨ನೆಯ ತೀರ್ಥಂಕರ ನೇಮಿನಾಥನ ಚರಿತ್ರೆಯನ್ನು ವರ್ಣಿಸಲಾಗಿದೆ. ಆದರೆ ಇದರಲ್ಲಿ ಪ್ರಸ್ತಾವನಾ ರೂಪದಿಂದ ಉಳಿದ ಶಲಾಕಾ ಪುರುಷರ ವರ್ಣನೆಯನ್ನೂ ಕೂಡ ಮಾಡಲಾಗಿದೆ. ಅದರಂತೆ ಮೂರುಲೋಕ ಹಾಗೂ ಜೀವಾದಿ ದ್ರವ್ಯಗಳ ವರ್ಣನೆಯೂ ಸಹ ಬಂದಿದೆ. ಹರಿವಂಶದ ಇನ್ನೊಂದು ಶಾಖೆಯು ಯಾದವ ವಂಶವಾಗಿದೆ. ಈ ವಂಶದಲ್ಲಿ ಶೌರೀಪುರದ ಒಬ್ಬ ರಾಜನಾದ ವಸುದೇವನ ರೋಹಿಣೀ ಮತ್ತು ದೇವಕೀ ಎಂಬ ಹೆಸರಿನ ಇಬ್ಬರು ಪತ್ನಿಯರಿಂದ ಕ್ರಮದಿಂದ ಬಲದೇವ ಮತ್ತು ಕೃಷ್ಣರ ಜನ್ಮವಾಯಿತು. ವಸುದೇವನ ತಮ್ಮನಾದ ಸಮುದ್ರವಿಜಯನ ಶಿವಾ ಎಂಬ ಹೆಸರಿನ ರಾಣಿಯಿಂದ ಅರಿಷ್ಟನೇಮಿಯ ಜನ್ಮವಾಯಿತು. ಈತನು ತರುಣನಾದ ಮೇಲೆ ಇವನ ವಿವಾಹವು ರಾಜೀಮತಿಯೆಂಬ ಕನ್ಯೆಯೊಡನೆ ನಿಶ್ಚಿತವಾಯಿತು. ಮದುವೆಯ ಸಂದರ್ಭದಲ್ಲಿ ಯಾದವರ ಮಾಂಸಾಹಾರಕ್ಕೆಂದು ಒತ್ತಟ್ಟಿಗೆ ಕಟ್ಟಿದ ಪಶು

ಗಳನ್ನು ಕಂಡು ಕರುಣೆಯಿಂದ ನೇಮಿನಾಥನ ಹೃದಯವು ಕಳವಳಕ್ಕೆ ತುತ್ತಾಯಿತು; ಸಂಸಾರದಿಂದ ವಿರಕ್ತವೂ ಆಯಿತು. ಅದರಿಂದ ಮದುವೆಯನ್ನು ಮಾಡಿಕೊಳ್ಳದೇನೇ ಅವನು ದೀಕ್ಷೆಯನ್ನು ತಕ್ಕೊಂಡನು. ಈತನೇ ಕೇವಲ ಜ್ಞಾನವನ್ನು ಪಡೆದು, ೨೨ನೆಯ ತೀರ್ಥಂಕರನಾದನು. ಪ್ರಸಂಗಕ್ಕನುಸರಿಸಿ ಕೌರವರ ಹಾಗೂ ಪಾಂಡವರ ಹಾಗೆಯೇ ಬಲರಾಮ ಮತ್ತು ಕೃಷ್ಣರ ವಂಶಜರ ವೃತ್ತಾಂತವೂ ಕೂಡ ಬಂದಿದೆ. ಗ್ರಂಥ ದಲ್ಲಿ ವಸುದೇವನ ಭ್ರಮಣದ ವೃತ್ತಾಂತವು ವಿಸ್ತಾರದಿಂದ ಬಂದಿದೆ. ಇದರಿಂದ ವಸು ದೇವಹಿಂಡೀ ಕಾವ್ಯವು ನೆನಪಿಗೆ ಬರುತ್ತದೆ. ಆದರೆ ನೇಮಿನಾಥನ ಚರಿತ್ರೆಯು ಇದಕ್ಕೂ ಪೂರ್ವದಲ್ಲಿ ಸ್ವತಂತ್ರ ರೂಪದಲ್ಲಿ ವರ್ಣಿತವಾದದ್ದು ಬೇರೆಡೆಗೆ ಕಂಡು ಬರುವುದಿಲ್ಲ. ಉತ್ತರಾಧ್ಯಯನ ಸೂತ್ರದ ' ರಹನೇಮಿಜ್ಜಂ ' ಎಂಬ ಹೆಸರಿನ ೨೨ನೆಯ ಅಧ್ಯಯನ ದಲ್ಲಿ ಅವಶ್ಯವಾಗಿ ಈ ಚರಿತ್ರೆಯ ವರ್ಣನೆಯು ಕಂಡುಬರುತ್ತದೆ. ಆದರೆ ಅದು ತೀರ ಸಂಗ್ರಹವಾಗಿ ಕೇವಲ ೪೯ ಗಾಹೆಗಳಲ್ಲಿ ಮಾತ್ರ ಬಂದಿದೆ. ವಿಮಲಸೂರಿ ಕೃತ ' ಪಉಮ ಚರಿಯಂ 'ದ ಪರಿಚಯದಲ್ಲಿ ಬಹುತರ ಅದೇ ಗ್ರಂಥಕಾರನ ' ಹರಿವಂಶ ಚರಿತ್ರ 'ವೂ ಇರಬೇಕೆಂದು ಹೇಳಿದೆ. ಆದರೆ ಅದು ಅನುಪಲಬ್ಧವಾಗಿದೆ. ಒಂದು ವೇಳೆ ಆ ಗ್ರಂಥವು ಇದ್ದರೆ ಈ ರಚನೆಯು ಅದನ್ನು ಆಧರಿಸಿದ್ದೆಂದು ಅನುಮಾನ ಮಾಡ ಲಾಗುತ್ತದೆ. ಗ್ರಂಥದಲ್ಲಿ ಬರುವ ಚಾರುದತ್ತ ಮತ್ತು ವಸಂತಸೇನೆಯರ ವೃತ್ತಾಂತವೂ ವಿಸ್ತಾರವಾಗಿಯೇ ಇದೆ. ಇದೇ ಮೃಚ್ಛಕಟಿಕ ನಾಟಕಕ್ಕೆ ಆಧಾರವಾಗಿದ್ದರೆ ಆಶ್ಚರ್ಯ ಪಡುವ ಕಾರಣವಿಲ್ಲ (ಹಿಂದೀ ಅನುವಾದ ಸಹಿತ ಭಾರತೀಯ ಜ್ಞಾನಪೀಠ ಕಾಶಿ ಯಿಂದ ಪ್ರಕಟಿತ). ಸಕಲಕೀರ್ತಿ (ವಿ. ಸಂ. ೧೪೫೦-೧೫೧೦) ಕೃತ ಹರಿವಂಶ ಪುರಾಣವು ೩೯ ಸರ್ಗಗಳಲ್ಲಿ ಸಮಾಪ್ತವಾಗಿದೆ. ಇದರಲ್ಲಿ ೧೫ನೆಯ ಸರ್ಗದ ಕೊನೆಯ ವರೆಗೆ ಅವನ ಶಿಷ್ಯನಾದ ಜಿನದಾಸನಿಂದ ವಿರಚಿತವಾಗಿವೆ. ಅದರಲ್ಲಿ ರವಿಷೇಣ ಮತ್ತು ಜಿನಸೇನರ ಉಲ್ಲೇಖವಿದೆ. ಇವರ ಗ್ರಂಥಗಳ ಆಧಾರದಿಂದಲೇ ಈ ಕೃತಿಯ ರಚನೆಯು ಆದದ್ದು ಪ್ರತೀತವಾಗುತ್ತದೆ. ಶುಭಚಂದ್ರ ವಿರಚಿತ ಪಾಂಡವ ಪುರಾಣಕ್ಕೆ (ಕ್ರಿ. ಶ. ೧೫೫೧) ಜೈನ ಮಹಾಪುರಾಣವೆಂದೂ ಹೇಳಲಾಗುತ್ತದೆ. ಇದರಲ್ಲಿ ಜಿನಸೇನ ಮತ್ತು ಗುಣಭದ್ರ ಕೃತ ಪುರಾಣಗಳ ಆಧಾರದಿಂದ ಕಥೆಯನ್ನು ವರ್ಣಿಸಲಾಗಿದೆ.

ಮಲಧಾರೀ ದೇವಪ್ರಭ ಸೂರಿಯು ವಿರಚಿಸಿದ ಪಾಂಡವ ಚರಿತ್ರವು (ಕ್ರಿ. ಶ. ೧೨೦೦ರ ಸುಮಾರಿನದು) ಹದಿನೆಂಟು ಸರ್ಗಗಳಲ್ಲಿ ಇದೆ ಇದರಲ್ಲಿ ಮಹಾಭಾರತದ ಹದಿನೆಂಟು ಪರ್ವಗಳ ಕಥೆಯನ್ನು ಸಂಗ್ರಹರೂಪದಲ್ಲಿ ವರ್ಣಿಸಲಾಗಿದೆ. ಆರನೆಯ ಸರ್ಗದಲ್ಲಿ ದ್ಯೂತಕ್ರೀಡೆಯ ವರ್ಣನೆಯು ಇದೆ. ಇಲ್ಲಿ ವಿದುರನಿಂದ ದ್ಯೂತದ ದುಷ್ಪರಿ ಣಾಮಕ್ಕೆ ಉದಾಹರಣೆಯೆಂದು ನಲ-ಕೂಬರ (ನಲದಮಯಂತಿ) ಕಥೆಯನ್ನು ಹೇಳಿಸ ಲಾಗಿದೆ. ಕೂಬರನು ನಲನ ತಮ್ಮನು. ಹದಿನಾರನೆಯ ಸರ್ಗದಲ್ಲಿ ಅರಿಷ್ಟನೇಮಿ ತೀರ್ಥಂಕರನ ಚರಿತ್ರವು ಬಂದಿದೆ. ಇನ್ನು ಹದಿನೆಂಟನೆಯ ಸರ್ಗದಲ್ಲಿ ನೇಮಿಯ ಹಾಗೂ ಪಾಂಡವರ ನಿರ್ವಾಣದ ವರ್ಣನೆಯಿದೆ. ಬಲದೇವನ ಸ್ವರ್ಗಗಮನದ

ವೃತ್ತಾಂತವೂ ಇದೆ. ಈ ಪುರಾಣದ ಗದ್ಯಾತ್ಮಕ ರೂಪಾಂತರವನ್ನು ರಾಜವಿಜಯ ಸೂರಿಯ ಶಿಷ್ಯನಾದ ದೇವವಿಜಯ ಗಣಿಯು (ಕ್ರಿ. ಶ. ೧೬೨೩) ಮಾಡಿದ್ದಾನೆ. ಇದರಲ್ಲಿ ಅಲ್ಲಲ್ಲಿ ದೇವಪ್ರಭನ ಕೃತಿಯಿಂದಲೂ ಬೇರೆ ಗ್ರಂಥಗಳಿಂದಲೂ ಕೆಲವೊಂದು ಪದ್ಯಗಳನ್ನು ಉದ್ಧರಿಸಲಾಗಿದೆ.

ಸಂಸ್ಕೃತದಲ್ಲಿ ಮೂರನೆಯದಾದ ಪೌರಾಣಿಕ ಮಹತ್ವಪೂರ್ಣ ಕೃತಿಯು ಮಹಾ ಪುರಾಣವಾಗಿದೆ. ಇದರಲ್ಲಿ ಆದಿಪುರಾಣ ಮತ್ತು ಉತ್ತರಪುರಾಣ ಎಂಬ ಎರಡು ಭಾಗಗಳಿವೆ. ಆದಿಪುರಾಣದಲ್ಲಿ ೪೭ ಪರ್ವ ಇಲ್ಲವೆ ಅಧ್ಯಾಯಗಳು ಇವೆ. ಇದು ೧೨೦೦೦ ಶ್ಲೋಕ ಪ್ರಮಾಣವಾಗಿದೆ. ಇವುಗಳಲ್ಲಿಯ ೪೨ ಪರ್ವ ಹಾಗೂ ೪೩ನೆಯ ಪರ್ವದ ಕೆಲವು ಪದ್ಯಗಳನ್ನು ಜಿನಸೇನನು ರಚಿಸಿದವುಗಳಾಗಿವೆ. ಉಳಿದ ಆದಿಪುರಾಣ ಹಾಗೂ ಉತ್ತರಪುರಾಣಗಳ ರಚನೆಯು ಅವನ ಶಿಷ್ಯನಾದ ಗುಣಭದ್ರನಿಂದ ಆಗಿದೆ. ಈ ಸಮಸ್ತ ಕೃತಿಯು ಶಕ ಸಂವತ್ ೮೨೦ರ ಪೂರ್ವದಲ್ಲಿ ಪೂರ್ಣಗೊಂಡಿದೆ. ಆದಿ ಪುರಾಣದ ಉತ್ಥಾನಿಕೆಯಲ್ಲಿ ಪೂರ್ವದಲ್ಲಿ ಆಗಿಹೋದ ಸಿದ್ಧಸೇನ ಸಮಂತಭದ್ರ. ಶ್ರೀದತ್ತ, ಪ್ರಭಾಚಂದ್ರ. ಶಿವಕೋಟಿ, ಜಟಾಚಾರ್ಯ, ಕಾಣಭಿಕ್ಷು, ದೇವ (ದೇವ ನಂದಿ ಪೂಜ್ಯಪಾದ), ಭಟ್ಟಾಕಲಂಕ, ಶ್ರೀಪಾಲ, ಪಾತ್ರಕೇಸರಿ, ವಾದೀಭಸಿಂಹ, ವೀರಸೇನ, ಜಯಸೇನ ಮತ್ತು ಕವಿಪರಮೇಶ್ವರ ಈ ಆಚಾರ್ಯರ ಸ್ತುತಿಯನ್ನು ಮಾಡಲಾಗಿದೆ. ಗುಣಾಢ್ಯ ಕೃತ ಬೃಹತ್‌ಕಥೆಯ ಉಲ್ಲೇಖವೂ ಸಹ ಬಂದಿದೆ. ಆದಿ ಪುರಾಣ ಪೂರ್ಣ ಪ್ರಥಮ ತೀರ್ಥಂಕರ ಆದಿನಾಥನ ಚರಿತ್ರೆಯ ವರ್ಣನೆಯಲ್ಲಿಯೇ ಮುಗಿದಿದೆ. ಇದರಲ್ಲಿ ಎಲ್ಲ ವರ್ಣನೆಗಳು ಬಹು ವಿಸ್ತಾರದಿಂದ ಬಂದಿವೆ. ಭಾಷೆ ಮತ್ತು ಶೈಲಿಗಳ ಸೌಷ್ಠವವೂ ಅಲಂಕಾರಾದಿ ಕಾವ್ಯಗುಣಗಳೂ ಇದರಲ್ಲಿ ಪರಿಪೂರ್ಣವಾಗಿವೆ. ಜೈನಧರ್ಮಕ್ಕೆ ಸಂಬಂಧಿಸಿದ ಸಮಗ್ರ ತಿಳುವಳಿಕೆಯು ಇದರಲ್ಲಿ ವ್ಯಕ್ತಗೊಂಡಿದೆ. ಇದರಿಂದ ಈ ಗ್ರಂಥವು ಒಂದು ಜ್ಞಾನಕೋಶವೇ ಎನಿಸುವಂತಿದೆ. ಉಳಿದ ಇಪ್ಪತ್ತು ಮೂವರು ತೀರ್ಥಂಕರರೇ ಮೊದಲಾದ ಶಲಾಕಾ ಪುರುಷರ ಚರಿತ್ರೆಯು ಉತ್ತರ ಪುರಾಣದಲ್ಲಿ ಬುದ್ಧಿಪೂರ್ವಕವಾಗಿ ಸಂಗ್ರಹ ರೂಪದಲ್ಲಿ ವರ್ಣಿಸಲಾಗಿದೆ. ಈ ಪ್ರಕಾರ ಒಟ್ಟಿನಲ್ಲಿ ಈ ಗ್ರಂಥದಲ್ಲಿ ತ್ರಿಷಷ್ಠಿ ಶಲಾಕಾ ಪುರುಷರ ಚರಿತ್ರವನ್ನು ವಿಧಿಗನು ಸರಿಸಿ ಒತ್ತಟ್ಟಿಗೆ ವರ್ಣಿಸಿದ್ದು ಕಂಡುಬರುತ್ತದೆ. ಉತ್ತರ ಪುರಾಣದ ೬೮ನೆಯ ಪರ್ವ ದಲ್ಲಿ ರಾಮನ ಚರಿತ್ರೆಯು ಬಂದಿದೆ. ಇದು ವಿಮಲಸೂರಿಕೃತ 'ಪಉಮಚರಿಯಂ'ದ ಕಥೆಗಿಂತ ಅನೇಕ ಸಂಗತಿಗಳಲ್ಲಿ ತೀರ ಭಿನ್ನವಾಗಿದೆ. ಉತ್ತರಪುರಾಣಕ್ಕೆ ಅನುಸರಿಸಿ ರಾಜಾ ದಶರಥನು ಕಾಶೀ ದೇಶದ ವಾರಾಣಸೀಯ ಅಧಿಪತಿಯಾಗಿದ್ದನು ಅಲ್ಲಿಯೇ ರಾಮನ ಜನ್ಮವು ಸುಬಾಲಾ ರಾಣಿಯಿಂದಲೂ ಹಾಗೆಯೇ ಲಕ್ಷ್ಮಣನ ಜನ್ಮವು ಕೈಕೆಯಿಯ ಗರ್ಭದಿಂದಲೂ ಆಯಿತು ಸೀತೆಯು ಮಂಡೋದರಿಯ ಹೊಟ್ಟೆಯಿಂದ ಜನಿಸಿದ್ದಳು. ಆದರೆ ಅವಳು ಅನಿಷ್ಟಕಾರಿಯೆಂದು ತಿಳಿದು ರಾವಣನು ಅವಳನ್ನು ಪೆಟ್ಟಿಗೆಯಲ್ಲಿಟ್ಟು ಮರೀಚಿಯ ಮುಖಾಂತರ ಮಿಥಿಲೆಯ ಅಡವಿಯಲ್ಲಿ ಹೂಳಿಸಿದನು.

ಅಲ್ಲಿಂದ ಅವಳು ಜನಕನಿಗೆ ದೊರೆತಳು. ತರುವಾಯ ದಶರಥನು ತನ್ನ ರಾಜಧಾನಿಯನ್ನಾಗಿ ಅಯೋಧ್ಯೆಯನ್ನು ಮಾಡಿಕೊಂಡನು. ಜನಕನು ಯಜ್ಞಕ್ಕೆಂದು ರಾಮನನ್ನು ಆಮಂತ್ರಿಸಿ, ಅವನಿಗೆ ಸೀತೆಯನ್ನಿತ್ತು ವಿವಾಹ ಮಾಡಿದನು. ರಾಮನು ವನಕ್ಕೆ ಹೋದುದರ ಉಲ್ಲೇಖವು ಇಲ್ಲಿ ಇಲ್ಲ. ರಾಮನು ತನ್ನ ಪೂರ್ವಜರ ಭೂಮಿಯಾದ ಬನಾರಸವನ್ನು ನೋಡಲೆಂದು ಸೀತೆ ಸಹಿತ ಅಲ್ಲಿಗೆ ಬಂದನು. ಅಲ್ಲಿಯ ಚಿತ್ರಕೂಟ ವನದಿಂದ ರಾವಣನು ಸೀತೆಯನ್ನು ಅಪಹರಿಸಿದನು. ಇದರಲ್ಲಿ ಸೀತೆಯ ಎಂಟು ಜನ ಪುತ್ರರ ಉಲ್ಲೇಖವಿದೆ. ಆದರೆ ಅವರಲ್ಲಿ ಲವ–ಕುಶರ ನಾಮನಿರ್ದೇಶವು ಎಲ್ಲಿಯೂ ಇಲ್ಲ. ಲಕ್ಷ್ಮಣನು ಒಂದು ಅಸಾಧ್ಯ ರೋಗದಿಂದ ಪೀಡಿತನಾಗಿ ಮರಣ ಹೊಂದಿದನು. ಆಗ ರಾಮನು ಲಕ್ಷ್ಮಣನ ಪುತ್ರನಾದ ಪೃಥ್ವೀಸುಂದರನಿಗೆ ರಾಜ್ಯವನ್ನು ತನ್ನ ಮಗನಾದ ಅಜಿತಂಜಯನಿಗೆ ಯುವರಾಜಪದವನ್ನೂ ಇತ್ತನು. ತಾನು ಸೀತೆ ಸಹಿತ ಜಿನ ದೀಕ್ಷೆಯನ್ನು ತಕ್ಕೊಂಡನು. ಈ ಪ್ರಕಾರ ಈ ಕಥಾಪ್ರವಾಹವು ಪಉಮಚರಿಯದಿಂದ ಸರ್ವಥಾ ಭಿನ್ನವಾಗಿದೆ. ಇದರ ಕೆಲವೊಂದು ಸಂಗತಿಗಳು ಬೌದ್ಧ ಮತ್ತು ವೈದಿಕ ಪರಂಪರೆಯ ರಾಮ ಕಥೆಗಳ ಕೂಡ ಹೊಂದುವಂತೆ ಇವೆ. ಪಾಲೀ ಭಾಷೆಯ ದಶರಥ ಜಾತಕದಲ್ಲಿಯೂ ದಶರಥನನ್ನು ವಾರಾಣಸಿಯ ರಾಜನೆಂದು ಹೇಳಿದೆ. ಅದ್ಭುತ ರಾಮಾಯಣಕ್ಕನುಸರಿಸಿಯೂ ಸೀತೆಯು ಮಂಡೋದರಿಯ ಮಗಳಾಗಿದ್ದಾಳೆ. ಆದರೆ ಮಂಡೋದರಿಯ ಗರ್ಭಧಾರಣೆಯು ರಾವಣನಿಲ್ಲದ ಕಾಲದಲ್ಲಿ ಆದುದರಿಂದ ಆ ಕೂಸನ್ನು ಅಡಗಿಸಲಿಕ್ಕೆಂದು ಅವಳು ವಿಮಾನದಲ್ಲಿ ಕುಳಿತು ಕುರುಕ್ಷೇತ್ರಕ್ಕೆ ತೆರಳಿದಳು. ಅಲ್ಲಿ ಆ ಕೂಸನ್ನು ನೆಲದಲ್ಲಿ ಹೂಳಿದಳು. ಅಲ್ಲಿಂದ ಆ ಮಗುವು ಜನಕನಿಗೆ ಲಭಿಸಿತು. ಉತ್ತರ ಪುರಾಣದ ಅನ್ಯ ವಿಶೇಷ ಸಂಗತಿಗಳ ಮೂಲ ಪ್ರವಾಹವನ್ನು ಗೊತ್ತು ಹಚ್ಚುವುದು ಕಠಿಣ ಸಾಧ್ಯವಿದೆ. ಇದರಲ್ಲಿ ಬರುವ ಮಹಾಪುರುಷರ ಹೆಸರುಗಳೆಲ್ಲ ವೈದಿಕ ಪುರಾಣಗಳಿಗೆ ಅನುಸರಿಸಿಯೇ ಇವೆ. ಅಲ್ಲದೆ ವಿವಿಧ ಸಂಸ್ಕಾರಗಳ ವ್ಯವಸ್ಥೆಯ ಮೇಲೆಯೂ ಆ ಪರಂಪರೆಯ ಪ್ರಭಾವವು ಕಂಡುಬರುತ್ತದೆ. 'ಜಯಧವಲಾ' ಗ್ರಂಥದ ಪ್ರಶಸ್ತಿಯಲ್ಲಿ ಜಿನಸೇನನು ತನ್ನ ವರ್ಣನೆಯನ್ನು ಬಹು ಸುಂದರ ರೂಪದಲ್ಲಿ ಕೊಟ್ಟಿದ್ದಾನೆ. ಅವನ ಕರ್ಣಭೇದನವು ಜ್ಞಾನದ ಶಲಾಕೆಯಿಂದ ಆಗಿತ್ತು. ಅವನು ಶರೀರದಿಂದ ಕೃಶನಾಗಿದ್ದನು, ಆದರೆ ತಪದಿಂದಲ್ಲ. ಅವನು ಆಕಾರದಿಂದ ಬಹಳ ಸುಂದರನಾಗಿರಲಿಲ್ಲ. ಆದರೂ ಸರಸ್ವತಿಯು ಅವನ ದುಂಬಾಲು ಬಿದ್ದಿದ್ದಳು. ಅವಳಿಗೆ ಇನ್ನೆಲ್ಲಿಯೂ ಆಶ್ರಯವು ಲಭಿಸಿರಲಿಕ್ಕಿಲ್ಲವೇನೋ! ಅವನ ಸಮಯವು ಯಾವಾಗಲೂ ಜ್ಞಾನಾರಾಧನೆಯಲ್ಲಿಯೇ ಕಳೆಯುತ್ತಿತ್ತು. ತತ್ವದರ್ಶಿಗಳು ಅವನನ್ನು ಜ್ಞಾನದ ಪಿಂಡವೆಂದು ಹೇಳುತ್ತಿದ್ದರು. ಇತ್ಯಾದಿಯಾಗಿದೆ. (ಹಿಂದಿ ಅನುವಾದ ಸಹಿತ ಭಾರತೀಯ ಜ್ಞಾನ ಪೀಠ, ಕಾಶಿಯಿಂದ ಪ್ರಕಾಶಿತ)

ಇದರ ತರುವಾಯ ಹೇಮಚಂದ್ರನಿಂದ **ತ್ರಿಷಷ್ಟಿ ಶಲಾಕಾ-ಪುರುಷ-ಚರಿತೆ** ಎಂಬ ಹೆಸರಿನ ಪುರಾಣ ಕಾವ್ಯದ ರಚನೆಯಾಗಿದೆ. ಇದನ್ನು ಗುಜರಾಥದ ರಾಜನಾದ

ಕುಮಾರಪಾಲನ ಪ್ರಾರ್ಥನೆಯಂತೆ ಬರೆಯಲಾಯಿತು. ಇದು ಕ್ರಿ.ಶ. ೧೧೬೦ ಮತ್ತು ೧೧೭೨ರ ಮಧ್ಯದಲ್ಲಿ ಪೂರ್ಣವಾಯಿತು. ಇದರಲ್ಲಿ ಹತ್ತು ಪರ್ವಗಳು ಇವೆ. ಇಪ್ಪತ್ತು ನಾಲ್ಕು ತೀರ್ಥಂಕರರನ್ನೊಳಗೊಂಡು ತ್ರಿಷಷ್ಠಿ ಶಲಾಕಾ ಪುರುಷರ ಚರಿತ್ರೆಗಳ ವರ್ಣನೆಯು ಇದರಲ್ಲಿದೆ. ಗ್ರಂಥದ ಏಳನೆಯ ಪರ್ವದಲ್ಲಿ ರಾಮ-ಕಥೆಯು ಬರುತ್ತದೆ. ಇದನ್ನು ಪ್ರಾಕೃತ 'ಪಉಮ ಚರಿಯ' ಹಾಗೂ ಸಂಸ್ಕೃತ ಪದ್ಮಪುರಾಣಗಳನ್ನು ಅನುಸರಿಸಿ ಬರೆಯಲಾಗಿದೆ. ಹತ್ತನೆಯ ಪರ್ವದಲ್ಲಿ ಮಹಾವೀರ ತೀರ್ಥಂಕರರ ಚರಿತ್ರೆಯನ್ನು ವರ್ಣಿಸಲಾಗಿದೆ. ಇದು ಸ್ವತಂತ್ರ ಕೃತಿಗಳ ರೂಪದಲ್ಲಿಯೂ ಸಹ ಲಭಿಸುತ್ತದೆ. ಇದರಲ್ಲಿ ಸಾಮಾನ್ಯವಾಗಿ ಆಚಾರಾಂಗ ಮತ್ತು ಕಲ್ಪ ಸೂತ್ರದ ವಿಷಯಗಳನ್ನು ಸಮಾವೇಶಗೊಳಿಸಲಾಗಿದೆ. ಆದರೆ ಮೂಲ ಘಟನೆಗಳನ್ನು ವಿಸ್ತರಿಸಿದ್ದೂ, ಕಾವ್ಯಗುಣವೂ ಸ್ವತಃ ಹೇಮಚಂದ್ರನದಾಗಿದೆ. ಇಲ್ಲಿ ಮಹಾವೀರನ ಮುಖದಿಂದ ವೀರ ನಿರ್ವಾಣವಾಗಿ ೧೬೬೯ ವರ್ಷಗಳು ಕಳೆದ ಮೇಲೆ ಆಗುವಂಥ ಆದರ್ಶ ರಾಜನಾದ ಕುಮಾರಪಾಲನ ಭವಿಷ್ಯವನ್ನು ಹೇಳಿಸಲಾಗಿದೆ. ಇದರಲ್ಲಿ ರಾಜಾ ಶ್ರೇಣಿಕ, ಯುವ ರಾಜ ಅಭಯ ಹಾಗೂ ರೌಹಿಣೇಯ ಕಳ್ಳ ಮೊದಲಾದವರ ಉಪಕಥೆಗಳೂ ಹಲವು ಬಂದಿವೆ. ಈ ಗ್ರಂಥದ ಕೊನೆಯ ಭಾಗವು-ಪರಿಶಿಷ್ಟ ಪರ್ವವು-ಒಂದು ಸ್ವತಂತ್ರ ರಚನೆಯೇ ಆಗಿದೆ. ಅದು ಐತಿಹಾಸಿಕ ದೃಷ್ಟಿಯಿಂದ ಬಹು ಮಹತ್ವಪೂರ್ಣವಾಗಿದೆ. ಇದರಲ್ಲಿ ಮಹಾವೀರನ ತರುವಾಯ ಆದ ಅವನ ಕೇವಲಿ ಶಿಷ್ಯರು ಹಾಗೂ ದಶಪೂರ್ವಿ ಆಚಾರ್ಯರ ಪರಂಪರೆಯು ಕಂಡುಬರುತ್ತದೆ. ಈ ಭಾಗಕ್ಕೆ 'ಸ್ಥವಿರಾವಲಿ ಚರಿತ' ವೆಂದೂ ಹೇಳುತ್ತಾರೆ. ಇದು ಕೇವಲ ಆಚಾರ್ಯರ ನಾಮಾವಲಿ ಮಾತ್ರವಲ್ಲ. ಅವರಿಗೆ ಸಂಬಂಧಿಸಿದ ವಿವಿಧ ಉದ್ಬುದ್ಧ ಕಥೆಗಳನ್ನು ಸಹ ಹೇಳಲಾಗಿದೆ. ಈ ಕಥೆಗಳನ್ನು ಪೂರ್ವದ ಆಗಮಗಳ ನಿರ್ಯುಕ್ತಿ, ಭಾಷ್ಯ, ಚೂರ್ಣಿ ಮೊದಲಾದ ಟೀಕೆಗಳಿಂದ ಸಂಗ್ರಹಿಸಲಾಗಿದೆ. ಅಲ್ಲದೆ ಕೆಲವು ಕಥೆಗಳನ್ನು ಮೌಖಿಕ ಪರಂಪರೆಯಿಂದಲೂ ಸಂಪಾದಿಸಲಾಗಿದೆ ಇಂಥವುಗಳಲ್ಲಿ ಸ್ಥೂಲಭದ್ರ, ಮತ್ತು ಕೋಶಾ ವೇಶ್ಯೆಯ ಉಪಾಖ್ಯಾನ, ಕುವೇರಸೇನಾ ಎಂಬ ಹೆಸರಿನ ಗಣಿಕೆಯ ಕುಬೇರದತ್ತ ಮತ್ತು ಕುಬೇರದತ್ತಾ ಎಂಬ ಹೆಸರಿನ ಪುತ್ರ-ಪುತ್ರಿಯರಲ್ಲಿ ಉಂಟಾದ ಪರಸ್ಪರ ಪ್ರೇಮದ ಕಥೆ, ಆರ್ಯ ಸ್ವಯಂಭವನಿಂದ ತನ್ನ ಪುತ್ರ ಮನಕನಿಗಾಗಿ ದಶವೈಕಾಲಿಕ ಸೂತ್ರದ ರಚನೆಯ ವೃತ್ತಾಂತ, ಹಾಗೂ ಆಗಮಗಳ ಸಂಕಲನಕ್ಕೆ ಸಂಬಂಧಿಸಿದ ಉಪಾಖ್ಯಾನ, ನಂದ ರಾಜವಂಶಕ್ಕೆ ಸಂಬಂಧಿಸಿದ ಕಥಾನಕ, ಮತ್ತು ಚಾಣಕ್ಯ ಹಾಗೂ ಚಂದ್ರಗುಪ್ತರಿಂದ ಆ ರಾಜವಂಶದ ಮೂಲೋಚ್ಛೇದದ ವೃತ್ತಾಂತ ಮೊದಲಾದ ಅನೇಕ ದೃಷ್ಟಿಯಿಂದ ಮಹತ್ವಪೂರ್ಣವಾಗಿದೆ. ಗ್ರಂಥ ಕರ್ತೃವು ತನ್ನ ಈ ಪುರಾಣಕ್ಕೆ ಮಹಾಕಾವ್ಯವೆಂದು ಹೇಳಿದ್ದಾನೆ. ಆದರೂ ಗ್ರಂಥದ ಬಹುಭಾಗವು ಕಥಾತ್ಮಕವಾಗಿದೆ. ಸ್ವಾಭಾವಿಕವಾಗಿ ಪುರಾಣದ ಸರಳ ಶೈಲಿಯನ್ನೂ ಅನುಸರಿಸಲಾಗಿದೆ. ಆದರೂ, ಇದರಲ್ಲಿ ಅನೇಕ ಸ್ಥಳಗಳಲ್ಲಿ ರಸ, ಭಾವ, ಅಲಂಕಾರಗಳಿದ್ದು, ಅವುಗಳಿಂದ ಮಹಾಕಾವ್ಯ ಪದವೂ ಸಹ ಈ ಕೃತಿಗೆ

ಪ್ರಾಪ್ತವಾಗುತ್ತದೆ.

ಹದಿಮೂರನೆಯ ಶತಮಾನದ ಮಾಳವದ ಸುಪ್ರಸಿದ್ಧ ಲೇಖಕ ಪಂಡಿತ ಆಶಾಧರ ಕೃತ 'ತ್ರಿಷಷ್ಟಿಸ್ಮೃತಿ-ಶಾಸ್ತ್ರ'ದಲ್ಲಿಯೂ ಉಪರ್ಯುಕ್ತ ೬೩ ಶಲಾಕಾ ಪುರುಷರ ಚರಿತ್ರವು ಬುದ್ಧಿಪೂರ್ವಕವಾಗಿ ಸಂಕ್ಷೇಪ ರೂಪದಲ್ಲಿ ವರ್ಣಿಸಲಾಗಿದೆ. ಇದು ಮುಖ್ಯವಾಗಿ ಜಿನಸೇನ ಮತ್ತು ಗುಣಭದ್ರ ಕೃತ ಮಹಾಪುರಾಣವನ್ನು ಅನುಸರಿಸುತ್ತದೆ.

ವಾಯಡಗಚ್ಛೀಯ ಜಿನದತ್ತ ಸೂರಿಯ ಶಿಷ್ಯ ಅಮರಚಂದ್ರನು ರಚಿಸಿದ **ಚತುರ್ವಿಂಶತಿ - ಜಿನಚರಿತ** (೧೩ನೆಯ ಶತಮಾನ) ದಲ್ಲಿ ೧೮೦೨ ಶ್ಲೋಕಗಳು ೨೪ ಅಧ್ಯಾಯಗಳಲ್ಲಿ ವಿಭಾಗಗೊಂಡಿವೆ. ಇದರಲ್ಲಿ ಕ್ರಮದಿಂದ ೨೪ ತೀರ್ಥಂಕರರ ಚರಿತ್ರೆಗಳನ್ನು ವರ್ಣಿಸಲಾಗಿದೆ. ಅಮರಚಂದ್ರನ ಇನ್ನೊಂದು ಕೃತಿಯು **ಬಾಲ ಭಾರತ** ಎಂಬುದೂ ಇದೆ (ಪ್ರಕಾಶನ, ಮುಂಬಯಿ ೧೯೨೬).

ಮೇರುತುಂಗ ಕೃತ **ಮಹಾಪುರುಷ ಚರಿತದ** ಐದು ಸರ್ಗಗಳಲ್ಲಿ **ಋಷಭ, ಶಾಂತಿ, ನೇಮಿ, ಪಾರ್ಶ್ವ ಮತ್ತು ವರ್ಧಮಾನ** ಈ ಐದು ತೀರ್ಥಂಕರರ ಚರಿತ್ರಗಳನ್ನು ವರ್ಣಿಸಲಾಗಿದೆ. ಇದರ ಮೇಲೆ ಒಂದು ಟೀಕೆಯೂ ಇದೆ. ಅದು ಬಹುತರ ಸ್ವೋಪಜ್ಞವಾಗಿರಬೇಕು. ಅದರಲ್ಲಿ ಈ ಕೃತಿಗೆ '**ಕಾವ್ಯೋಪದೇಶ ಶತಕ**' ಮತ್ತು '**ಧರ್ಮೋಪದೇಶ ಶತಕ**' ವೆಂದೂ ಹೇಳಲಾಗಿದೆ. ಮೇರುತುಂಗನ ಇನ್ನೊಂದು ಕೃತಿಯು **ಪ್ರಬಂಧ ಚಿಂತಾಮಣಿಯು**. ಇದು ಕ್ರಿ. ಶ. ೧೩೦೬ ರಲ್ಲಿ ಪೂರ್ಣಗೊಂಡಿದೆ. ಅದರಿಂದ **ಮಹಾಪುರುಷ ಚರಿತವೂ** ಅದೇ ಸುಮಾರಿನ ಕೃತಿಯಾಗಿರಬೇಕು. ಪದ್ಮಸುಂದರನು ವಿರಚಿಸಿದ **ರಾಯಮಲ್ಲಾಭ್ಯುದಯ** ವನ್ನು (ವಿ. ಸಂ. ೧೬೧೫) ಅಕಬರನ ಕಾಲದಲ್ಲಿ ಚೌಧರಿ ರಾಜಮಲ್ಲನ ಪ್ರೇರಣೆಯಿಂದ ಬರೆದದ್ದಾಗಿದೆ. ಇದರಲ್ಲಿ ೨೪ ತೀರ್ಥಂಕರರ ಚರಿತ್ರಗಳ ವರ್ಣನೆಯು ಇದೆ. ದಾಮನಂದಿ ಕೃತ **ಪುರಾಣ ಸಾರ ಸಂಗ್ರಹವೂ** ಈಗ ಎರಡು ಭಾಗಗಳಲ್ಲಿ ಪ್ರಕಟವಾಗಿದೆ. ಇದರಲ್ಲಿ ಶಲಾಕಾ ಪುರುಷರ ಚರಿತ್ರವೂ ಅತಿ ಸಂಗ್ರಹ ರೂಪದಲ್ಲಿ ಸಂಸ್ಕೃತ ಪದ್ಯಗಳಲ್ಲಿ ಹೇಳಿದೆ. ತೀರ್ಥಂಕರರ ಜೀವನ-ಚರಿತ್ರಕ್ಕೆ ಸಂಬಂಧಿಸಿದ ಕೆಲವೊಂದು ಪೃಥಕ್ ಪೃಥಕ್ ಕಾವ್ಯಗಳು ಈ ಪ್ರಕಾರ ಇವೆ— ಪ್ರಥಮ ತೀರ್ಥಂಕರ ಆದಿನಾಥನ ಜೀವನ ಚರಿತ್ರವನ್ನು **ಚತುರ್ವಿಂಶತಿ - ಜಿನಚರಿತದ** ಕರ್ತೃವಾದ ಅಮರಚಂದ್ರನು ತನ್ನ **ಪದ್ಮಾನಂದ** ಕಾವ್ಯದಲ್ಲಿ ೧೯ ಸರ್ಗಗಳಲ್ಲಿ ಬರೆದಿದ್ದಾನೆ. ಈ ಕೃತಿಯನ್ನು ಅವನು ಪದ್ಮನೆಂಬ ಮಂತ್ರಿಯ ಪ್ರಾರ್ಥನೆಯಿಂದ ಬರೆದುದರಿಂದ ಅದಕ್ಕೆ ಈ ಹೆಸರನ್ನು ಇಟ್ಟಿದ್ದಾನೆ. ಕಾವ್ಯದಲ್ಲಿ ಒಟ್ಟು ೬೨೮೧ ಶ್ಲೋಕಗಳಿವೆ (ಪ್ರಕಾಶನ ಬಡೋದಾ, ೧೯೩೨). ಎಂಟನೆಯ ತೀರ್ಥಂಕರನಾದ **ಚಂದ್ರಪ್ರಭನನ್ನು** ಕುರಿತು ವೀರನಂದಿಯೂ, **ವಾಸುಪೂಜ್ಯನನ್ನು** ಕುರಿತು ವರ್ಧಮಾನ ಸೂರಿಯೂ, **ವಿಮಲನಾಥನನ್ನು** ಕುರಿತು ಕೃಷ್ಣದಾಸನು ರಚಿಸಿದ ಕೃತಿಗಳು ಲಭಿಸುತ್ತವೆ. ೧೫ನೆಯ ತೀರ್ಥಂಕರನಾದ ಧರ್ಮ

ನಾಥನ ಬಗ್ಗೆ ಹರಿಶ್ಚಂದ್ರ ಕೃತ ಧರ್ಮಶರ್ಮಾಭ್ಯುದಯವು ಒಂದು ಉತ್ಕೃಷ್ಟ ಸಂಸ್ಕೃತ ಕಾವ್ಯವಾಗಿದೆ. ಇದು ಸುಪ್ರಸಿದ್ಧ ಸಂಸ್ಕೃತ ಮಾಘ ಕವಿ ಕೃತ 'ಶಿಶುಪಾಲ ವಧ'ವನ್ನು ಅನುಸರಿಸಿದಂತೆ ಕಂಡುಬರುತ್ತದೆ. ಇದರ ಮೇಲೆ ಪ್ರಾಕೃತ ಕಾವ್ಯವಾದ 'ಗಉಡವಹೊ' ಮತ್ತು ಸಂಸ್ಕೃತ 'ನೈಷಧೀಯ ಚರಿತ'ಗಳ ಪ್ರಭಾವವೂ ಕೂಡ ಆಗಿದೆ. ಈ ಕೃತಿಯು ೧೧-೧೨ನೆಯ ಶತಮಾನದ್ದೆಂದು ಕಂಡುಬರುತ್ತದೆ. ೧೬ನೆಯ ತೀರ್ಥಂಕರ ಶಾಂತಿನಾಥನ ಚರಿತ್ರವು ಅಸಗ್ಕೃತ (೧೦ನೆಯ ಶತಮಾನ), ದೇವಸೂರಿಯ (ಕ್ರಿ. ಶ. ೧೨೮೨) ಪ್ರಶಿಷ್ಯ ಅಜಿತಪ್ರಭ ಕೃತ, ಮಾಣಿಕ್ಯಚಂದ್ರ ವಿರಚಿತ (೧೩ನೆಯ ಶತಮಾನ), ಸಕಲಕೀರ್ತಿ ಕೃತ (೧೫ನೆಯ ಶತಮಾನ) ಹಾಗೂ ಶ್ರೀಭೂಷಣ ಕೃತ (ವಿ. ಸಂ. ೧೬೫೯) ಇವು ಉಪಲಬ್ಧ ಇರುತ್ತವೆ. ವಿನಯಚಂದ್ರನು ರಚಿಸಿದ ಮಲ್ಲಿನಾಥ ಚರಿತವು ೪೦೦೦ ಕ್ಕಿಂತ ಹೆಚ್ಚು ಶ್ಲೋಕಗಳಲ್ಲಿ ಇದೆ. ೨೨ನೆಯ ತೀರ್ಥಂಕರ 'ನೇಮಿನಾಥ ಚರಿತ್ರ'ವು ಸೂರಾಚಾರ್ಯ ಕೃತ (೧೧ನೆಯ ಶತಮಾನ) ಮತ್ತು ಮಲಧಾರಿ ಹೇಮಚಂದ್ರ ಕೃತ (೧೩ನೆಯ ಶತಮಾನ) ಇವು ಕಂಡುಬರುತ್ತವೆ. ವಾಗ್ಭಟ ಕೃತ ನೇಮಿ ನಿರ್ವಾಣ ಕಾವ್ಯವು (೧೨ನೆಯ ಶತಮಾನ) ಒಂದು ಉತ್ಕೃಷ್ಟ ಕೃತಿಯಾಗಿದೆ. ಇದರಲ್ಲಿ ೧೫ ಸರ್ಗಗಳು ಇವೆ. ಸಂಗನನ ಪುತ್ರನಾದ ವಿಕ್ರಮನು ರಚಿಸಿದ ನೇಮಿದೂತ ಕಾವ್ಯವು ಒಂದು ವಿಶೇಷ ಕಲಾಕೃತಿಯಾಗಿದೆ. ಇದರಲ್ಲಿ ರಾಜೀಮತಿಯ ವಿಲಾಪದ ವರ್ಣನೆಯನ್ನು ಮಾಡಿದೆ. ಇದೊಂದು ಸಮಸ್ಯಾ ಪೂರ್ತಿ ಕಾವ್ಯವು. ಇದರಲ್ಲಿ ಕಾಲಿದಾಸನ 'ಮೇಘದೂತ' ಕಾವ್ಯದ ಪಂಕ್ತಿಗಳನ್ನು ಪ್ರತಿಯೊಂದು ಪದ್ಯದ ಕೊನೆಯ ಚರಣಗಳಾಗುವಂತೆ ನಿಬದ್ಧಗೊಳಿಸಲಾಗಿದೆ. ಪಾರ್ಶ್ವನಾಥನನ್ನು ಕುರಿತು ಪ್ರಾಚೀನ ಸಂಸ್ಕೃತ ಕಾವ್ಯವು ಜಿನಸೇನ ಕೃತ (೯ನೆಯ ಶತಮಾನ) ಪಾರ್ಶ್ವಾಭ್ಯುದಯವು ಇದೆ. ಇದರಲ್ಲಿ ಉತ್ತಮ ಕಾವ್ಯ ರೀತಿಯಿಂದ ಸಮಸ್ತ ಮೇಘದೂತದ ಒಂದೋ ಇಲ್ಲವೆ ಎರಡೋ ಚರಣಗಳನ್ನು ಪ್ರತಿಯೊಂದು ಪದ್ಯದಲ್ಲಿ ಸಮಾವೇಶಗೊಳಿಸಲಾಗಿದೆ. ಪಾರ್ಶ್ವನಾಥನ ಪೂರ್ಣ ಚರಿತ್ರವು ವಾದಿರಾಜ ವಿರಚಿತ (ಕ್ರಿ. ಶ. ೧೦೨೫) ಪಾರ್ಶ್ವನಾಥ ಚರಿತೆ ದಲ್ಲಿ ಕಂಡುಬರುತ್ತದೆ. ಇದೇ ಚರಿತ್ರವನ್ನು ಕುರಿತು ೧೩, ೧೪ ನೆಯ ಶತಮಾನಗಳಲ್ಲಿ ಮಾಣಿಕ್ಯನಂದಿ (ಕ್ರಿ. ಶ. ೧೨೭೯) ಮತ್ತು ಭಾವದೇವ ಸೂರಿ (ಕ್ರಿ. ಶ. ೧೩೧೫) ಇವರು ಎರಡು ಕಾವ್ಯಗಳನ್ನು ರಚಿಸಿದ್ದಾರೆ. ಭಾವದೇವನ ಕೃತಿಯ ಅನುವಾದವು ಇಂಗ್ಲಿಷಿನಲ್ಲಿಯೂ ಕೂಡ ಆಗಿದೆ. ೧೫ನೆಯ ಶತಮಾನದಲ್ಲಿ ಸಕಲಕೀರ್ತಿಯು ಮತ್ತು ೧೬ನೆಯ ಶತಮಾನದಲ್ಲಿ ಪದ್ಮಸುಂದರನು ಮತ್ತು ಹೇಮ ವಿಜಯರು ಸಂಸ್ಕೃತದಲ್ಲಿ ಪಾರ್ಶ್ವನಾಥ ಚರಿತ್ರಗಳನ್ನು ನಿರ್ಮಿಸಿದರು. ೧೬ನೆಯ ಶತಮಾನದಲ್ಲಿ ಶ್ರೀಭೂಷಣನ ಶಿಷ್ಯನಾದ ಚಂದ್ರಕೀರ್ತಿಯು ಪಾರ್ಶ್ವ ಪುರಾಣದ ರಚನೆಯನ್ನು ಮಾಡಿದನು. ವಿನಯಚಂದ್ರ ಮತ್ತು ಉದಯವೀರ ಗಣಿಕೃತ ಪಾರ್ಶ್ವನಾಥ ಚರಿತ್ರವು ದೊರೆಯುತ್ತದೆ. ಇವುಗಳಲ್ಲಿ ಉದಯವೀರನ ಕೃತಿಯು ಸಂಸ್ಕೃತ ಗದ್ಯದಲ್ಲಿದೆ. ಮಹಾವೀರನ ಚರಿತ್ರವನ್ನು

ಕುರಿತು ೧೮ ಸರ್ಗಗಳ ಸುಂದರ ಸಂಸ್ಕೃತ ಕಾವ್ಯವು 'ವರ್ಧಮಾನ ಚರಿತ್ರೆ'ವು (ಶಕ ಸಂ. ೯೧೦) ಅಸಗ ಕೃತವಾಗಿದೆ. ಗುಣಭದ್ರನ ಉತ್ತರ ಪುರಾಣದಲ್ಲಿಯೂ ಹೇಮಚಂದ್ರ ಕೃತ ತ್ರಿಷಷ್ಠಿ ಶಲಾಕಾ ಪುರುಷ ಚರಿತ್ರದ ೧೦ನೆಯ ಪರ್ವದಲ್ಲಿ ಇರುವ ಮಹಾವೀರ ಚರಿತ್ರೆಯನ್ನೇ ಸ್ವತಂತ್ರ ರೂಪದಲ್ಲಿ ಪ್ರತಿ ಮಾಡಿಕೊಳ್ಳಲಾಗಿದೆ. ಹಾಗೂ ಓದಲೂ ಉಪಯೋಗಿಸಲಾಗುತ್ತದೆ. ಸಕಲಕೀರ್ತಿಯ ವರ್ಧಮಾನ ಪುರಾಣವು (ವಿ. ಸಂ. ೧೫೧೮) ೧೯ ಸರ್ಗಗಳಲ್ಲಿ ಇದೆ. ಪದ್ಮನಂದಿ, ಕೇಶವ ಮತ್ತು ವಾಣೀವಲ್ಲಭ ಕೃತ ವರ್ಧಮಾನ ಪುರಾಣಗಳೂ ಸಹ ಇರುತ್ತವೆ.

ಮೇಲೆ ಉಲ್ಲೇಖಿಸಿದ ಜೈನ ತೀರ್ಥಂಕರರ ಚರಿತ್ರಗಳು ಹೆಚ್ಚಾಗಿ ಸಂಸ್ಕೃತ ಮಹಾ ಕಾವ್ಯದ ಉದಾಹರಣೆಗಳಿವೆ. ಇವುಗಳ ವಿಷಯಾತ್ಮಕ ರೂಪರೇಖೆಗಳ ವಿವರಣೆಯನ್ನು ಅವುಗಳ ಪ್ರಾಕೃತ ಚರಿತ್ರೆಯ ಪ್ರಕರಣದಲ್ಲಿ ಕೊಟ್ಟಿದೆ. ಭಾವ ಮತ್ತು ಶೈಲಿಗಳಲ್ಲಿ ಇವೂ ಎಲ್ಲ ಗುಣಗಳಿಂದಲೂ ಕೂಡಿವೆ. ಕಾಲಿದಾಸ, ಭಾರವಿ, ಮಾಘ ಮೊದಲಾದ ಮಹಾಕವಿಗಳ ಕಾವ್ಯದಲ್ಲಿ ಕಂಡುಬರುವ ಲಕ್ಷಣಗಳು ಇಲ್ಲಿವೆ. ಕಾವ್ಯಾದರ್ಶ ಮೊದಲಾದ ಸಾಹಿತ್ಯ-ಶಾಸ್ತ್ರಗಳಲ್ಲಿ ನಿರೂಪಿಸಿದ ಕಾವ್ಯಲಕ್ಷಣಗಳೆಲ್ಲ ಈ ಕೃತಿಗಳಿಗಿವೆ. ಸರ್ಗಬಂಧದ ರೀತಿ, ನಮಸ್ಕ್ರಿಯೆ ಇಲ್ಲವೆ ವಸ್ತುನಿರ್ದೇಶ ಪೂರ್ವಕ ಪ್ರಾರಂಭ ಮಾಡುವಿಕೆ, ಹಾಗೂ ಅವುಗಳಲ್ಲಿ ನಗರ, ವನ, ಪರ್ವತ, ನದಿ ಮತ್ತು ಋತು ಮೊದಲಾದ ಪ್ರಾಕೃತ ದೃಶ್ಯಗಳ ವರ್ಣನೆ, ಜನ್ಮ, ವಿವಾಹಾದಿ ಸಾಮಾಜಿಕ ಉತ್ಸವಗಳು, ರಸಗಳು, ಶೃಂಗಾರಾತ್ಮಕ ಹಾವ ಭಾವಗಳು, ವಿಲಾಸ, ಅದರಂತೆಯೇ ಸಾಂಪತ್ತಿಕ ವಿಪತ್ತಿಯಲ್ಲಿ ವ್ಯಕ್ತಿಯ ಸುಖ-ದುಃಖಗಳ ಏರಿಳಿವುಗಳು, ಇವೆಲ್ಲವುಗಳ ಹೃದಯಸ್ಪರ್ಶಿ ಚಿತ್ರಣಗಳು ಈ ತೀರ್ಥಂಕರರ ಚರಿತ್ರೆಗಳಲ್ಲಿ ಲಭಿಸುತ್ತವೆ. ಈ ಕಾವ್ಯಗಳಲ್ಲಿ ಇನ್ನೊಂದು ವಿಶೇಷತೆಯೂ ಇದೆ. ಅದು ಸಂದರ್ಭಾಂಥಕ್ಕನುಸರಿಸಿ ಧಾರ್ಮಿಕ ಉಪದೇಶವೂ ಸಮಾವೇಶವಾದುದೇ ಆಗಿದೆ. ತೀರ್ಥಂಕರರ ಚರಿತ್ರವನ್ನು ಳಿದು, ವಿವಿಧ ಅನ್ಯ ಸಾಮಾಜಿಕ ಮಹಾಪುರುಷರೂ ಸ್ತ್ರೀಯರೂ ನಾಯಕ ನಾಯಿಕೆಯರಾಗಿರುವ ಚರಿತ್ರ-ಚಿತ್ರಣವುಳ್ಳ ಕೃತಿಗಳು ಜೈನ ಸಾಹಿತ್ಯದಲ್ಲಿ ವಿಪುಲವಾಗಿ ಕಂಡು ಬರುತ್ತವೆ. ಇವುಗಳಲ್ಲಿಯೂ ಯಥಾಸಂಭವ ಭಾಷೆ, ಶೈಲಿ ಮತ್ತು ಭಾವಗಳಲ್ಲಿ ಕಾವ್ಯತ್ವವನ್ನು ಕಾಪಾಡಲಾಗಿದೆ. ಇವು ಪೂರ್ಣ ಪದ್ಯಾತ್ಮಕವೂ ಇವೆ; ಗದ್ಯ ಪದ್ಯ ಮಿಶ್ರಣ ಚಂಪೂ ರೂಪದಲ್ಲಿಯೂ ಇವೆ. ಅವುಗಳಲ್ಲಿಯೂ ಗದ್ಯ ಬಹುಲತೆಯುಳ್ಳ ಕೃತಿಗಳು ಹೆಚ್ಚಾಗಿವೆ. ಅವುಗಳ ಪರಿಚಯವು ಹೀಗಿದೆ :—

ಸೋಮದೇವಸೂರಿಕೃತ ಯಶಸ್ತಿಲಕ ಚಂಪೂ (ಶಕ ಸಂ. ೮೮೧) ಎಂಬುದು ಸಂಸ್ಕೃತದಲ್ಲಿ ಗದ್ಯ-ಪದ್ಯಾತ್ಮಕವಾದ ಉತ್ಕೃಷ್ಟ ಕಾವ್ಯವಾಗಿದೆ. ಇದರ ಕಥಾವಸ್ತುವನ್ನು ಗುಣಭದ್ರನ ಉತ್ತರಪುರಾಣದಿಂದ ಎತ್ತಿಕೊಳ್ಳಲಾಗಿದೆ. ಪುಷ್ಪದಂತನು ವಿರಚಿಸಿದ ಅಪಭ್ರಂಶ 'ಜಸಹರಚರಿಉ' ಕಾವ್ಯದ ಪರಿಚಯದಲ್ಲಿ ಇದನ್ನು ವಿವರಿಸಿಯೇ ಇದೆ. ಕೊನೆಯ ಮೂರು ಅಧ್ಯಾಯಗಳಲ್ಲಿ ಗೃಹಸ್ಥ ಧರ್ಮದ ಸವಿಸ್ತಾರ ನಿರೂಪಣೆಯು

ಇದೆ. ಇದು 'ಉಪಾಸಕಾಧ್ಯಯನ' ಎಂಬ ಹೆಸರಿನಿಂದ ಸ್ವತಂತ್ರ ಕೃತಿಯೇ ಆಗಿದೆ. ಇದೇ ಕಥೆಯನ್ನು ಕುರಿತು ವಾದಿರಾಜಸೂರಿಯು ರಚಿಸಿದ **ಯಶೋಧರ ಚರಿತವು** (೧೧ನೆಯ ಶತಮಾನ) ನಾಲ್ಕು ಸರ್ಗಗಳ ಕಾವ್ಯವಾಗಿದೆ. ಇದರಂತೆಯೇ ವಾಸವಸೇನ (೧೩ನೆಯ ಶತಮಾನ), ಸಕಲ ಕೀರ್ತಿ (೧೫ನೆಯ ಶತಮಾನ), ಸೋಮ ಕೀರ್ತಿ (೧೫ನೆಯ ಶತಮಾನ). ಪದ್ಮನಾಭ (೧೬-೧೭ನೆಯ ಶತಮಾನ) ಇವರ ಕೃತಿ ಗಳು ಕಂಡುಬರುತ್ತವೆ. ಮಾಣಿಕ್ಯಸೂರಿಯೂ (೧೪ನೆಯ ಶತಮಾನ) ಯಶೋಧರ ಚರಿತವನ್ನು ಸಂಸ್ಕೃತ ಪದ್ಯದಲ್ಲಿ ರಚಿಸಿದ್ದಾನೆ. ಇವನು ತನ್ನ ಕಥೆಗೆ ಆಧಾರವು ಹರಿಭದ್ರನ ಕಥಾಕೋಶವೆಂದು ಹೇಳಿದ್ದಾನೆ. ಕ್ಷಮಾ ಕಲ್ಯಾಣನು ಯಶೋಧರ ಚರಿತದ ಕಥೆಯನ್ನು ಸಂಸ್ಕೃತ ಗದ್ಯದಲ್ಲಿ ಸಂವತ್ ೧೮೩೯ರಲ್ಲಿ ಬರೆದನು. ಅವನು 'ಈ ಚರಿತವನ್ನು ಹರಿಭದ್ರ ಮುನೀಂದ್ರನು ಪ್ರಾಕೃತದಲ್ಲಿಯೂ ಅನ್ಯರು ಸಂಸ್ಕೃತ ಪದ್ಯಗಳಲ್ಲಿಯೂ ಬರೆದಿದ್ದಾರೆ. ಆದರೆ ಅವುಗಳಲ್ಲಿ ಇದ್ದ ವಿಷಮತ್ವವನ್ನು ಕಳೆಯಲು ನಾನು ಇದನ್ನು ಗದ್ಯದಲ್ಲಿ ರಚಿಸಿದ್ದೇನೆ' ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಈ ಉಲ್ಲೇಖದಿಂದ ಹರಿಭದ್ರಕೃತ ಪ್ರಾಕೃತ ಯಶೋಧರ ಚರಿತವು ಈತನ ಸಮ್ಮುಖದಲ್ಲಿ-ತ್ತೆಂದು ಸ್ಪಷ್ಟವಾಗುತ್ತದೆ. ಆದರೆ ಈಗ ಅದು ಅನುಪಲಬ್ಧವಿದೆ. ಹರಿಚಂದ್ರನು ವಿರ ಚಿಸಿದ **ಜೀವಂಧರ ಚಂಪೂ** (ಸು. ೧೧ನೆಯ ಶತಮಾನ) ಕಾವ್ಯವು ಅದೇ ಕಥೆಯನ್ನು ಸಂಸ್ಕೃತ ಗದ್ಯಪದ್ಯಗಳಲ್ಲಿ ಕಾವ್ಯಾತ್ಮಕವಾಗಿ ವರ್ಣಿಸುತ್ತದೆ; ಇದು ಗುಣಭದ್ರನ ಉತ್ತರ ಪುರಾಣದ ಕಥೆಯಾಗಿದೆ. (ಪರ್ವ ೭೫) ಪುಷ್ಪದಂತಕೃತ ಅಪಭ್ರಂಶ ಪುರಾಣ (ಸಂಧಿ ೯೮) ಹಾಗೂ ಒಡೆಯದೇವ ವಾದೀಭಸಿಂಹ ವಿರಚಿತ **ಗದ್ಯ ಚಿಂತಾಮಣಿ** ಯಲ್ಲಿಯೂ ಜೀವಂಧರ ಚಂಪೂವಿನ ಕಥೆಯೇ ಕಂಡುಬರುತ್ತದೆ. ಕ್ಷತ್ರಚೂಡಾಮಣಿ ಮತ್ತು ವಾದೀಭಸಿಂಹ ಕೃತ **ಕ್ಷತ್ರ ಚೂಡಾಮಣಿ** ಕಾವ್ಯದ ಅನೇಕ ಶ್ಲೋಕಗಳು ಜೀವಂಧರ ಚಂಪೂವಿನಲ್ಲಿ ಇದ್ದಕ್ಕೆ ಇದ್ದಂತೆ ಬಂದಿವೆ. ಉಳಿದ ಸಂಗತಿಗಳ ಮೇಲೆಯೂ ಅದರ ಪ್ರಭಾವವು ಸ್ಪಷ್ಟವಾಗಿ ಕಂಡುಬರುತ್ತದೆ. ಕ್ಷತ್ರಚೂಡಾಮಣಿ ಮತ್ತು ಗದ್ಯ ಚಿಂತಾಮಣಿಗಳ ಕರ್ತೃವಾದ ವಾದೀಭಸಿಂಹನು ಒಬ್ಬನೇ ವ್ಯಕ್ತಿಯೋ ಭಿನ್ನ ಭಿನ್ನ ವ್ಯಕ್ತಿಗಳೋ ಎಂಬುದನ್ನು ಇನ್ನೂವರೆಗೆ ಸ್ಪಷ್ಟವಾಗಿ ಹೇಳಲು ಬರುವಂತೆ ಇಲ್ಲ. ಈ ವಿಷಯದಲ್ಲಿ ಕೆಲವೊಂದು ಸಂಗತಿಗಳ ಕಡೆಗೆ ಗಮನ ಸೆಳೆಯುವ ಆವಶ್ಯಕತೆಯು ಇದೆ. ಇದರಲ್ಲಿ ಕರ್ತೃವಿನ ಹೆಸರಿನ ಜೊತೆಗೆ ಒಡೆಯದೇವ ಮತ್ತು ಗುರು ಪುಷ್ಪಸೇನನ ಉಲ್ಲೇಖವು ಇಲ್ಲ. ರಚನಾಶೈಲಿ ಹಾಗೂ ಶಬ್ದಯೋಜನೆಗಳೂ ಎರಡೂ ಗ್ರಂಥಗಳಲ್ಲಿ ಭಿನ್ನ ಭಿನ್ನವಾಗಿ ಕಂಡುಬರುತ್ತವೆ. ಗದ್ಯ ಚಿಂತಾಮಣಿಯ ಭಾಷೆಯು ಓಜಃಪೂರ್ಣ ವಾಗಿದೆ. ಕ್ಷತ್ರ ಚೂಡಾಮಣಿಯ ಭಾಷೆಯು ಬಹಳ ಸರಳವಿದೆ, ಪ್ರಸಾದಗುಣ ಯುಕ್ತವೂ ಇದೆ. ಬಹುತರ ಪ್ರತಿಯೊಂದು ಶ್ಲೋಕದ ಅರ್ಧ ಭಾಗದಲ್ಲಿ ಕಥಾನಕವೂ ಉಳಿದರ್ಧ ಭಾಗದಲ್ಲಿ ನೀತಿಯ ಉಪದೇಶವೂ ಇರುತ್ತದೆ.

ವಿಜಯಕೀರ್ತಿಯ ಶಿಷ್ಯನಾದ ಶುಭಚಂದ್ರನು ರಚಿಸಿದ **ಜೀವಂಧರ-ಚರಿತ್ರವು**

(ವಿ. ಸಂ. ೧೫೯೬) ಒಂದು ಇದೆ. ದೇವೇಂದ್ರ ಸೂರಿಯ ಶಿಷ್ಯನಾದ ಶ್ರೀ ಚಂದ್ರ ಸೂರಿಯ ವಿರಚಿಸಿದ **ಸನತ್ಕುಮಾರ-ಚರಿತ್ರೆ** (ವಿ. ಸಂ ೧೨೧೪) ಇದರಲ್ಲಿ ಅದೇ ಚಕ್ರವರ್ತಿಯ ಚರಿತ್ರವು ಇದೆ. ಈ ಹೆಸರಿನ ಪ್ರಾಕೃತ ಗ್ರಂಥಗಳ ವಿಷಯದಲ್ಲಿ ಹೇಳುವಾಗ ವಿವರಿಸಲಾಗಿದೆ. ಇದೇ ಹೆಸರಿನ ಇನ್ನೊಂದು ಸಂಸ್ಕೃತ ಕಾವ್ಯವು ಜಿನಚಂದ್ರ ಸೂರಿಯು ಪ್ರಶಿಷ್ಯನೂ ಜಿನಪತಿ ಸೂರಿಯ ಶಿಷ್ಯನೂ ಆದ ಜಿನಪಾಲನು ರಚಿಸಿದ್ದು ಪ್ರಕಟವಾಗಿದೆ. ಮಲಧಾರಿ ದೇವಪ್ರಭಕೃತ **ಮೃಗಾವತೀ-ಚರಿತ್ರವು** (೧೨ನೆಯ ಶತಮಾನ) ಸಂಸ್ಕೃತ ಪದ್ಯಾತ್ಮಕ ರಚನೆಯಾಗಿದೆ. ಇದರಲ್ಲಿ ಉದಯನ-ವಾಸವದತ್ತೆಯರ ಕಥಾನಕವು ವರ್ಣಿತವಾಗಿದೆ. ಮೃಗಾವತಿಯು ಉದಯನನ ಮಾತೆಯು. ರಾಜಾ ಚೇಟಕನ ಪುತ್ರಿಯಾಗಿದ್ದಳು. ಅಲ್ಲದೆ ಮಹಾವೀರ ತೀರ್ಥಂಕರರ ಉಪಾಸಿಕೆಯೂ ಆಗಿದ್ದಳು. ಇವಳ ನಾದಿನಿ ಜಯಂತಿಯುಂತೂ ಮಹಾವೀರನಿಗೆ ನಾನಾ ಪ್ರಶ್ನೆಗಳನ್ನು ಕೇಳಿದ್ದಳು. ಕೊನೆಗೆ ಸಮಾಧಾನವನ್ನು ಹೊಂದಿ ಪ್ರವ್ರಜ್ಯೆಯನ್ನೂ ಸಹ ಸ್ವೀಕರಿಸಿದಳು. ಈ ವೃತ್ತಾಂತವು ಭಗವತಿಯ ೧೨ನೆಯ ಶತಕದ ಎರಡನೆಯ ಉದ್ದೇಶದಲ್ಲಿ ಕಂಡು ಬರುತ್ತದೆ. ಆ ಕಥೆಯ ಆಶ್ರಯದಿಂದ ಪ್ರಸ್ತುತ ಗ್ರಂಥದಲ್ಲಿ ಅನೇಕ ಉಪಕತೆಗಳನ್ನು ವರ್ಣಿಸಲಾಗಿದೆ. ಮಲಧಾರಿ ದೇವಪ್ರಭನು **ಪಾಂಡವ-ಚರಿತ್ರೆದ** ಕರ್ತೃವೂ ಸಹ ಆಗಿದ್ದಾನೆ. ಜಿನಪತಿಯ ಶಿಷ್ಯನಾದ ಪೂರ್ಣಭದ್ರನು ರಚಿಸಿದ **ಧನ್ಯ-ಶಾಲಿಭದ್ರ ಚರಿತ್ರವು** (ವಿ. ಸಂ. ೧೨೮೫) ಆರು ಪರಿಚ್ಛೇದಗಳು ಮತ್ತು ೧೪೬೦ ಶ್ಲೋಕಗಳಲ್ಲಿ ಪೂರ್ಣವಾಗಿದೆ. ಇದನ್ನು ರಚಿಸುವಾಗ ಕವಿಗೆ ಸರ್ವದೇವ ಸೂರಿಯು ಸಹಾಯ ಮಾಡಿದ್ದನು. ಈ ಕಾವ್ಯದಲ್ಲಿ ಧನ್ಯ ಮತ್ತು ಶಾಲಿಭದ್ರನ ಚರಿತ್ರಗಳನ್ನು ವರ್ಣಿಸಲಾಗಿದೆ. ಧನ್ಯ-ಶಾಲಿಚರಿತ್ರಗಳು ಭದ್ರಗುಪ್ತಕೃತ (ವಿ.ಸಂ. ೧೪೨೮), ಜಿನಕೀರ್ತಿಕೃತ (೧೫ನೆಯ ಶತಮಾನ), ದಯಾವರ್ಧನಕೃತ (೧೫ನೆಯ ಶತಮಾನ), ಇವೂ ಸಹ ಕಂಡುಬರುತ್ತವೆ. ಧರ್ಮಕುಮಾರಕೃತ **ಶಾಲಿಭದ್ರ-ಚರಿತವು** (ಕ್ರಿ.ಶ. ೧೨೭೭) ೭ ಸರ್ಗಗಳ ಕಾವ್ಯವು. ಕಥಾನಕವನ್ನು ಹೇಮಚಂದ್ರನ ಮಹಾವೀರ ಚರಿತ್ರದಿಂದಲೇ ತಕ್ಕೊಳ್ಳಲಾಗಿದೆ. ಆದರೂ ಕಾವ್ಯದ ರೀತಿಯಿಂದ ಛಂದ ಮತ್ತು ಅಲಂಕಾರಗಳ ವೈಶಿಷ್ಟ್ಯ ಸಹಿತ ವರ್ಣಿಸಲಾಗಿದೆ. ಲೇಖಕನ ಈ ಕೃತಿಯನ್ನೂ ಪ್ರದ್ಯುಮ್ನ ಸೂರಿಯು ಸಂಶೋಧನ ಮಾಡಿ, ಇದರ ಕಾವ್ಯ ಗುಣವನ್ನು ಇನ್ನಷ್ಟು ಹೆಚ್ಚಿಸಿದ್ದಾನೆ. ಶಾಲಿಭದ್ರನು ಮಹಾವೀರ ತೀರ್ಥಂಕರರ ಕಾಲದಲ್ಲಿ ಆಗಿ ಹೋದ ರಾಜಗೃಹ ನಿವಾಸಿಯಾದ ಶ್ರೀಮಂತ ಗೃಹಸ್ಥನಾಗಿದ್ದನು. ಇವನು ಪ್ರತ್ಯೇಕ ಬುದ್ಧನೆನಿಸಿದ್ದನು. ಚಂದ್ರಗಚ್ಛದ ಹರಿಭದ್ರ ಸೂರಿಯ ಶಿಷ್ಯನಾದ ಬಾಲಚಂದ್ರ ಸೂರಿಯು ರಚಿಸಿದ **ವಸಂತ-ವಿಲಾಸವು** (ವಿ. ಸಂ. ೧೨೯೬) ಹದಿನಾಲ್ಕು ಸರ್ಗಗಳಲ್ಲಿ ಸಮಾಪ್ತವಾಗಿದೆ. ಇದರಲ್ಲಿ ಗುಜರಾತದ ರಾಜನಾದ ವೀರಧವಲನ ಮಂತ್ರಿಯಾದ ವಸ್ತುಪಾಲನ ಚರಿತ್ರವನ್ನು ವರ್ಣಿಸಲಾಗಿದೆ (ಬಡೋದಾ, ೧೯೧೭). ಇದರ ಜೊತೆಯಲ್ಲಿಯೇ ಶ್ರೀ ತಿಲಕ ಸೂರಿಯ ಶಿಷ್ಯನಾದ ರಾಜಶೇಖರಕೃತ **ವಸ್ತುಪಾಲ-ತೇಜಪಾಲ ಪ್ರಬಂ**

ಥವೂ ಪ್ರಕಾಶಿತವಾಗಿದೆ. ವಸ್ತುಪಾಲ ಮಂತ್ರಿ ಮತ್ತು ಅವನ ತಮ್ಮನಾದ ತೇಜ ಪಾಲನು ಸೇರಿ ಅಬೂಗಿರಿಯ ಮೇಲೆ ಮಂದಿರಗಳನ್ನು ಕಟ್ಟಿಸಿದರು. ಅಲ್ಲದೆ ಜೈನ ಧರ್ಮದ ಏಳಿಗೆಗೆ ಸಂಬಂಧಿಸಿದ ಅನೇಕ ಕಾರ್ಯಗಳನ್ನೂ ಸಹ ಮಾಡಿದರು. ಇದ ರಿಂದ ಅವರ ಹೆಸರುಗಳು ಜೈನ ಸಂಪ್ರದಾಯದಲ್ಲಿ ಅಮರವಾಗಿ ಉಳಿದಿವೆ. ಈ ರಚ ನೆಯ ಮೂಲಕ ಅವರ ಚರಿತ್ರೆಯನ್ನು ಕುರಿತು ಜಯಚಂದ್ರನ ಶಿಷ್ಯನಾದ ಜಿನಹರ್ಷ ಗಣಿಯು ರಚಿಸಿದ್ದು (ವಿ. ಸಂ. ೧೪೯೭, ಪ್ರಕಾಶನ : ಭಾವನಗರ, ೧೯೨೪) ಹಾಗೂ ವರ್ಧಮಾನ, ಸಿಂಹಕವಿ, ಕೀರ್ತಿವಿಜಯ ಮೊದಲಾದವರು ನಿರ್ಮಿಸಿದ ಕೃತಿಗಳೂ ಸಹ ಲಭಿಸುತ್ತವೆ. ಇವಲ್ಲದೆ ಅವರ ಸಂಸ್ಕೃತ ಪ್ರಶಸ್ತಿಗಳು ಜಯಸಿಂಹ, ಬಾಲಚಂದ್ರ, ನರೇಂದ್ರಪ್ರಭ ಮೊದಲಾದವರಿಂದ ರಚಿತವಾದುವುಗಳು ದೊರೆಯುತ್ತವೆ.

ಜಿನೇಶ್ವರ ಸೂರಿಯ ಶಿಷ್ಯನಾದ ಚಂದ್ರತಿಲಕನು ರಚಿಸಿದ **ಅಭಯಕುಮಾರ-ಚರಿತ್ರವು** (ವಿ. ಸಂ, ೧೩೧೨) ಒಂಭತ್ತು ಸರ್ಗಗಳಲ್ಲಿ ಪೂರ್ಣಗೊಂಡಿದೆ. ಕವಿಯ ಉಲ್ಲೇಖಕ್ಕನುಸರಿಸಿ ಅವನಿಗೆ ಸೂರಪ್ರಭನು ವಿದ್ಯಾನಂದ ವ್ಯಾಕರಣವನ್ನು ಓದಿಸಿ ದ್ದನು (ಪ್ರಕಾಶನ, ಭಾವನಗರ ೧೯೧೭).

ಸಕಲಕೀರ್ತಿಕೃತ **ಅಭಯಕುಮಾರ-ಚರಿತೆದ** ಉಲ್ಲೇಖವೂ ಸಹ ದೊರೆಯು ತ್ತದೆ. ಧನಪ್ರಭಸೂರಿಯ ಶಿಷ್ಯನಾದ ಸರ್ವಾನಂದ ಸೂರಿ ಕೃತ 'ಜಗಡು-ಚರಿತ್ರೆ'ವು (೧೩ನೆಯ ಶತಮಾನ) ಏಳು ಸರ್ಗಗಳ ಕಾವ್ಯವು. ಇದರಲ್ಲಿ ಒಟ್ಟು ೩೮೮ ಪದ್ಯಗಳಿವೆ. ಇದರಲ್ಲಿ ಬೀಸಲದೇವ ರಾಜನ ಉಲ್ಲೇಖವಿದೆ. ಹಾಗೂ ವಿ. ಸಂ. ೧೩೧೨-೧೫ರವರೆಗೆ ಗುಜರಾಥದಲ್ಲಿ ಬಿದ್ದ ಭೀಷಣ ಬರಗಾಲದ ವರ್ಣನೆಯು ಇದೆ. ಈ ದೃಷ್ಟಿಯಿಂದ ಈ ಕಾವ್ಯಕ್ಕೆ ಒಂದು ವಿಶೇಷತೆಯಿದೆ. ಈ ಕೃತಿಯ ರಚನೆಯು ಇದೇ ಕಾಲದ ಸುಮಾರಿ ನಲ್ಲಿ ಆದದ್ದಿರಬೇಕೆಂದು ಪ್ರತೀತಿಯುಂಟಾಗುತ್ತದೆ.

ಕೃಷ್ಣರ್ಷಿ ಗಚ್ಛೀಯ ಮಹೇಂದ್ರ ಸೂರಿಯ ಶಿಷ್ಯನಾದ ಜಯಸಿಂಹ ಸೂರಿಯು ರಚಿಸಿದ ವಿ. ಸಂ. (೧೪೨೨) **ಕುಮಾರಪಾಲ-ಚರಿತ್ರವು** ಹತ್ತು ಸರ್ಗಗಳ ಕಾವ್ಯವು. ಇದರಲ್ಲಿ ಅದೇ ಗುಜರಾಥದ ರಾಜನಾದ ಕುಮಾರಪಾಲನ ಚರಿತ್ರವನ್ನೂ ಅವನ ಧಾರ್ಮಿಕ ಕೃತ್ಯಗಳನ್ನೂ ವರ್ಣಿಸಲಾಗಿದೆ. ಇದರ ಮೇಲೆ ಹೇಮಚಂದ್ರನು ತನ್ನ ಕುಮಾರಪಾಲ ಚರಿತ ಎಂಬ ಹೆಸರಿನ ದ್ವಯಾಶ್ರಮ ಪ್ರಾಕೃತ ಕಾವ್ಯವನ್ನು ಬರೆದಿ ದ್ದಾನೆ. ಸಂಸ್ಕೃತದಲ್ಲಿ ಇನ್ನುಳಿದ ಕುಮಾರಪಾಲ ಚರಿತ್ರಗಳು ರತ್ನಸಿಂಹ ಸೂರಿಯ ಶಿಷ್ಯನಾದ ಚಾರಿತ್ರ ಸುಂದರ ಗಣಿಕೃತ (ವಿ. ಸಂ. ೧೪೮೭), ಧನರತ್ನಕೃತ (ವಿ. ಸಂ. ೧೫೩೭) ಹಾಗೂ ಸೋಮ ವಿಮಲಕೃತ ಮತ್ತು ಸೋಮಚಂದ್ರ ಗಣಿಕೃತವೂ ಕಂಡು ಬರುತ್ತವೆ. ಮೇರುತುಂಗನ ಶಿಷ್ಯನಾದ ಮಾಣಿಕ್ಯಸುಂದರನು ರಚಿಸಿದ **ಮಹೀಪಾಲ-ಚರಿತ್ರವು** (೧೫ನೆಯ ಶತಮಾನ) ಹದಿನೈದು ಸರ್ಗಗಳ ಕಾವ್ಯವಾಗಿದೆ. ಇದರಲ್ಲಿ ವೀರದೇವಗಣಿಕೃತ ಪ್ರಾಕೃತ ಮಹಿವಾಲಕಹಾ ಗ್ರಂಥದ ಆಧಾರದಿಂದ ಆ ಜ್ಞಾನಿಯೂ ಕಲಾಕುಶಲನೂ ಆದ ಮಹೀಪಾಲನ ಚರಿತ್ರವನ್ನು ವರ್ಣಿಸಲಾಗಿದೆ.

ಇವನು ಉಜ್ಜಯಿನಿಯಿಂದ ನಿರ್ವಾಸಿತನಾಗಿ ನಾನಾ ಪ್ರದೇಶಗಳಲ್ಲಿ ಸಂಚರಿಸುತ್ತ ತನ್ನ ರತ್ನ-ಪರೀಕ್ಷೆ, ವಸ್ತ್ರ-ಪರೀಕ್ಷೆ ಮತ್ತು ಪುರುಷ-ಪರೀಕ್ಷೆಗಳಲ್ಲಿರುವ ನಿಪುಣತೆಯನ್ನೂ ಚಮತ್ಕಾರವನ್ನೂ ತೋರಿಸುತ್ತ ಧನವನ್ನೂ ಯಶಸ್ಸನ್ನೂ ಸಂಪಾದಿಸಿದನು. ಈ ವೃತ್ತಾಂತವು ರೋಚಕ ಮತ್ತು ಶೈಲಿಯು ಸುಂದರ, ಸರಳ ಹಾಗೂ ಕಲಾಪೂರ್ಣವಾಗಿದೆ.

ಭಕ್ತಿಲಾಭನ ಶಿಷ್ಯನಾದ ಚಾರುಚಂದಕೃತ ಉತ್ತಮಕುಮಾರ-ಚರಿತ್ರವು ೬೮೬ ಪದ್ಯಗಳ ಕಾವ್ಯವಾಗಿದೆ. ಇದರಲ್ಲಿ ಒಬ್ಬ ಧಾರ್ಮಿಕ ರಾಜಕುಮಾರನ ವಿವಿಧ ಸಾಹಸಪೂರ್ಣ ಘಟನೆಗಳೂ ಅನೇಕ ಅವಾಂತರಿಕ ಕಥಾನಕಗಳೂ ವರ್ಣಿತವಾಗಿವೆ. ಇದರ ರಚನಾ ಕಾಲವು ನಿಶ್ಚಿತವಾಗದೆ ಹೋಗಿದೆ. ಇದೇ ವಿಷಯವನ್ನು ಕುರಿತು ಬರೆದ ಎರಡು ಪದ್ಯಾತ್ಮಕ ಕಾವ್ಯಗಳಿದ್ದುದೂ ಕಂಡುಬರುತ್ತದೆ. ಅವುಗಳಲ್ಲೊಂದು ಸೋಮಸುಂದರ ಸೂರಿಯ ಶಿಷ್ಯನಾದ ಜಿನಕೀರ್ತಿಕೃತವು ಮತ್ತು ಇನ್ನೊಂದು ಸೋಮಸುಂದರನ ಪ್ರಸಿಷ್ಯನೂ ರತ್ನಶೇಖರನ ಶಿಷ್ಯನೂ ಆದ ಸೋಮಮಂಡನ ಗಣಿಯು ರಚಿಸಿದ್ದಾಗಿದೆ. ಈ ಆಚಾರ್ಯನು ತಪಾಗಚ್ಛದವನು. ಪಟ್ಟಾವಲಿಗೆ ಅನುಸರಿಸಿ ಸೋಮಸುಂದರನಿಗೆ ವಿ. ಸಂ. ೧೪೫೭ರಲ್ಲಿ ಸೂರಿಪದವು ಪ್ರಾಪ್ತವಾಯಿತು. ಇದೇ ವಿಷಯವನ್ನು ಕುರಿತು ರಚಿಸಿದ ಇನ್ನೊಂದು ಕಾವ್ಯವು ಶುಭಶೀಲಗಣಿಕೃತವಾಗಿದೆ. ಚಾರುಚಂದ್ರನು ಬರೆದ ' ಉತ್ತಮಕುಮಾರ-ಕಥಾ ' ಎಂಬುದರ ಗದ್ಯಾತ್ಮಕ ರೂಪಾಂತರವೂ ಇದೆ. ಲೇಖಕನು ಇದನ್ನು ಸಂಪಾದಿಸಿ ಜರ್ಮನ ಭಾಷೆಯಲ್ಲಿ ಅನುವಾದಿಸಿ ಕ್ರಿ.ಶ. ೧೮೮೮ರಲ್ಲಿ ಪ್ರಕಟಿಸಿದ್ದಾನೆ.

ಕೃಷ್ಣರ್ಷಿ ಗಚ್ಛದ ಜಯಸಿಂಹ ಸೂರಿಯ ಶಿಷ್ಯ ಪರಂಪರೆಯ ನಯಚಂದ್ರ ಸೂರಿಯು (೧೫ನೆಯ ಶತಮಾನ) ವಿರಚಿಸಿದ ಹಮ್ಮೀರ ಕಾವ್ಯವು ಹದಿನಾಲ್ಕು ಸರ್ಗಗಳಲ್ಲಿ ಸಮಾಪ್ತಿಗೊಂಡಿದೆ. ಇದರಲ್ಲಿ ಆ ಹಮ್ಮೀರ ವೀರನ ಚರಿತ್ರವನ್ನು ವರ್ಣಿಸಲಾಗಿದೆ. ಈ ವೀರನು ಸುಲ್ತಾನ ಅಲ್ಲಾವುದ್ದೀನನೊಡನೆ ಯುದ್ಧ ಮಾಡುತ್ತ ಕ್ರಿ.ಶ. ೧೩೦೧ರಲ್ಲಿ ವೀರಗತಿಯನ್ನು ಹೊಂದಿದನು. ತೋಮರ ವೀರಮನ ಸಭೆಯಲ್ಲಿ ಪ್ರಾಚೀನ ಕವಿಗಳ ಸಮಾನ ಕಾವ್ಯ ರಚಿಸುವ ಸಾಮರ್ಥ್ಯವು ಈಗ ಯಾರಲ್ಲಿಯೂ ಇಲ್ಲವೆಂದು ಹೇಳಲಾಯಿತು. ಈ ಮಾತನ್ನು ಖಂಡಿಸಲಿಕ್ಕೆಂದು ಕವಿಯು ಈ ಕಾವ್ಯವನ್ನು ರಚಿಸಿದೆನೆಂದು ಸ್ವತಃ ಈ ಕೃತಿಯಲ್ಲಿ ಹೇಳಿಕೊಂಡಿದ್ದಾನೆ. ಆದರಿಂದ ಕವಿಯು ಶೃಂಗಾರ, ವೀರ ಮತ್ತು ಅದ್ಭುತ ರಸಗಳಿಂದ ಪೂರ್ಣವೂ ಅಮರಚಂದ್ರನ ಸಮವಾದ ಲಾಲಿತ್ಯ ಮತ್ತು ಶ್ರೀಹರ್ಷನಂತೆ ವಕ್ರೋಕ್ತಿಗಳಿಂದ ಕೂಡಿದ ಈ ಕಾವ್ಯವನ್ನು ರಚಿಸಿದನು. ಜಿನದತ್ತ ಸೂರಿಯ ಶಿಷ್ಯನಾದ ಅಮರಚಂದ್ರ ಸೂರಿಯು ರಚಿಸಿದ **ಚತುರ್ವಿಂಶತಿ–ಜಿನ–ಚರಿತ, ಪದ್ಮಾನಂದ–ಕಾವ್ಯ** ಮತ್ತು ಬಾಲಭಾರತಗಳ ಉಲ್ಲೇಖವನ್ನು ಮೇಲೆ ಮಾಡಿಯೇ ಇದೆ.

ಬ್ರಹ್ಮನೇಮಿದತ್ತ ಕೃತ **ಶ್ರೀಪಾಲ ಚರಿತದಲ್ಲಿ** (ಕ್ರಿ.ಶ. ೧೫೨೮) ಒಂಭತ್ತು

ಸರ್ಗಗಳಿವೆ. ಇದರಲ್ಲಿ ಕುಷ್ಟ ವ್ಯಾಧಿಯಿಂದ ಪೀಡಿತನಾದ ಶ್ರೀಪಾಲನ ಜೊತೆಯಲ್ಲಿ ಮದನಸುಂದರಿಯ ವಿವಾಹ, ಸಿದ್ಧಚಕ್ರ ವಿಧಾನದ ಮಹಾತ್ಮ್ಯದಿಂದ ಅವನು ನಿರೋಗಿಯಾಗುವಿಕೆಯ ಕಥೆಗಳಿವೆ. ಇದರ ಪರಿಚಯವನ್ನು ಇದೇ ಹೆಸರಿನ ಪ್ರಾಕೃತ ಕಾವ್ಯದ ವಿವರಣದಲ್ಲಿ ಮಾಡಿಕೊಟ್ಟಿದೆ. ಶ್ರೀಪಾಲ ಕಥಾನಕವು ಜೈನ ಸಮಾಜದಲ್ಲಿ ಬಹು ಲೋಕಪ್ರಿಯವಾಗಿದೆ. ಇದನ್ನು ಕುರಿತು ಪ್ರಾಕೃತ, ಅಪಭ್ರಂಶ ಮತ್ತು ಸಂಸ್ಕೃತ ಭಾಷೆಗಳಲ್ಲಿ ಸುಮಾರು ೩೦–೪೦ ಕೃತಿಗಳು ದೊರೆಯುತ್ತವೆ (ಜಿನರತ್ನ ಕೋಶ, ಡಾ. ವೇಲಣಕರ ಕೃತ ನೋಡಿರಿ).

ನಾಗೇಂದ್ರ ಗಚ್ಛೀಯ ವಿಜಯಸೇನ ಸೂರಿಯ ಶಿಷ್ಯ ಉದಯಪ್ರಭನು ರಚಿಸಿದ **ಧರ್ಮಾಭ್ಯುದಯವು** ಹದಿನಾಲ್ಕು ಸರ್ಗಗಳ ಮಹಾಕಾವ್ಯವಾಗಿದೆ. ಇದರಲ್ಲಿ ಗುಜರಾಥದ ರಾಜನಾದ ವೀರಧವಲನ ಸುಪ್ರಸಿದ್ಧ ಮಂತ್ರಿಯಾದ ವಸ್ತುಪಾಲನ ಚರಿತ್ರೆಯನ್ನು ಸುಂದರವಾಗಿ ವರ್ಣಿಸಲಾಗಿದೆ. ಸಿದ್ಧರ್ಷಿಕೃತ **ಉಪಮಿತಿಭವ ಪ್ರಪಂಚ ಕಥಾ** (ಕ್ರಿ.ಶ. ೯೦೬) ಎಂಬುದು ಸಂಸ್ಕೃತ ಗದ್ಯದ ಒಂದು ಅನುಪಮ ರಚನೆಯಾಗಿದೆ. ಇದರಲ್ಲಿ ಭಾವಾತ್ಮಕ ಸಂಜ್ಞೆಗಳನ್ನು ಮೂರ್ತಿಕಸ್ವರೂಪದಲ್ಲಿಟ್ಟು ಧರ್ಮ ಕಥೆಯನ್ನೂ ಅನೇಕ ಅವಾಂತರ ಕಥೆಗಳನ್ನೂ ಹೇಳಿದೆ. ಉದಾಹರಣೆಗೆಂದು ಇಲ್ಲಿ ಅನಂತಪುರ, ನಿವೃತ್ತಿ ಪುರಗಳೆಂಬ ನಗರಗಳಿವೆ; ರಾಜನು ಕರ್ಮಪರಿಣಾಮ ಎಂಬವನು, ರಾಣಿಯು ಕಾಲಪರಿಣತಿಯು, ಸಾಧುಸಮಾಗಮ ಮತ್ತು ಅನ್ಯವ್ಯಕ್ತಿಗಳು ಸಂಸಾರೀ, ನಿಷ್ಪುಣ್ಯಕ ಮೊದಲಾದವರಾಗಿದ್ದಾರೆ. ಇದನ್ನು ಓದುವಾಗ ಇಂಗ್ಲಿಷಿನಲ್ಲಿ ಜಾನಬನಯನ ಕೃತ ' ಪಿಲ್ಗ್ರಿಮ್ಸ ಪ್ರೊಗ್ರೇಸ್ 'ದ ಸ್ಮರಣೆಯಾಗುತ್ತದೆ. ಇದರಲ್ಲಿ ರೂಪಕದ ರೀತಿಯಿಂದ ಧರ್ಮವೃದ್ಧಿ ಮತ್ತು ಅದರಲ್ಲಿ ಬರುವ ವಿಘ್ನ ಬಾಧೆಗಳ ಕಥೆಯನ್ನು ಹೇಳಲಾಗಿದೆ. ಜೈನ ಪ್ರಪಂಚದಲ್ಲಿ ಈ ಕಥೆಯ ಪ್ರಸಾರವು ಬಹಳ ಆದರದಿಂದ ಆಗಿದೆ. ಇದರ ಸಾರವನ್ನು ಸ್ವೀಕರಿಸಿ ಅನೇಕ ಕೃತಿಗಳೂ ಸಹ ರಚನೆಯಾದುವು. ಅವುಗಳಲ್ಲಿ ವರ್ಧಮಾನ ಸೂರಿಯು ರಚಿಸಿದ **ಉಪಮಿತಿ–ಭವ ಪ್ರಪಂಚಾ–ಸಾರ–ಸಮುಚ್ಚಯ** (೧೧ನೆಯ ಶತಮಾನ), ದೇವೇಂದ್ರ ಕೃತ **' ಉಪಮಿತಿ ಸಾರೋದ್ಧಾರ '** (೧೩ನೆಯ ಶತಮಾನ), ಹಂಸರತ್ನ ಸೂರಿಯು ನಿರ್ಮಿಸಿದ ಸಾರೋದ್ಧಾರ ಮೊದಲಾದವುಗಳನ್ನು ಎತ್ತಿ ಹೇಳಬಹುದು.

ಸಂಸ್ಕೃತ ಗದ್ಯಾತ್ಮಕ ಆಖ್ಯಾನಗಳಲ್ಲಿ ಧನಪಾಲ ಕೃತ **ತಿಲಕಮಂಜರೀ** (ಕ್ರಿ. ಶ. ೯೭೦) ಕೃತಿಯ ಭಾಷೆ ಮತ್ತು ಶೈಲಿಗಳು ಬಹು ಓಜಸ್ವಿನಿಯಾಗಿವೆ. **ಅಮರಸುಂದರನು** ವಿರಚಿಸಿದ **ಅಂಬಡಚರಿತ್ರವು** ಬಹು ವಿಲಕ್ಷಣ ಕಥೆಯಾಗಿದೆ. ಕಥಾನಾಯಕನಾದ ಅಂಬಡನು ಶೈವಧರ್ಮಿಯವನಾಗಿದ್ದಾನೆ. ಇವನು ಮಂತ್ರ-ತಂತ್ರಗಳ ಬಲದಿಂದ ಗೋರಖಾ ದೇವಿಯಿಂದ ನಿರ್ದಿಷ್ಟ ಏಳು ದುಷ್ಕರ ಕಾರ್ಯಗಳನ್ನೂ ಮಾಡಿ ಮುಗಿಸಿದನು, ಮೂವತ್ತೆರಡು ಸುಂದರಿಯರನ್ನು ಲಗ್ನವಾಧನು, ಅಪಾರ ಧನ ಮತ್ತು ರಾಜ್ಯಗಳನ್ನು ಪಡೆದನು. ಕೊನೆಯಲ್ಲಿ ಉಪದೇಶವನ್ನು

ಹೊಂದಿ ಅವನು ಜೈನಧರ್ಮವನ್ನು ಸ್ವೀಕರಿಸಿದನು. ಅಲ್ಲದೆ ಪ್ರವ್ರಜಿತನಾಗಿ ಸಲ್ಲೇಖನ ವಿಧಿಯಿಂದ ಮರಣವನ್ನು ಹೊಂದಿದನು. ಅಂಬಡ ಎಂಬ ಹೆಸರಿನ ತಾಂತ್ರಿಕ ನಾಮವು ಓವಾಇಯ ಉಪಾಂಗದಲ್ಲಿ ಬರುತ್ತದೆ. ಆದರೆ ಇಲ್ಲಿಯ ಕಥಾನಕದ ಕಲ್ಪನೆಯು ಮಾತ್ರ ಈ ಲೇಖಕನದೇ ಆಗಿದೆ. ಅಮರಸುಂದರನ ಹೆಸರು ವಿ. ಸಂ. ೧೪೫೭ರಲ್ಲಿ ಸೂರಿ ಪದವನ್ನು ಪಡೆಯುವ ಸೋಮಸುಂದರ ಗಣಿಯ ಶಿಷ್ಯರಲ್ಲಿ ಬರುತ್ತದೆ. ಅಲ್ಲಿ ಇವನನ್ನು 'ಸಂಸ್ಕೃತ ಜಲ್ಪ ಪಟು' ಎಂದು ಹೇಳಿದೆ. ಈ ಕಥಾನಕದ ಜರ್ಮನ್ ಅನುವಾದವು ಚಾರ್ಲಸ್ ಕ್ರಾಉಸನು ಮಾಡಿದನು. ಇದೇ ಕಥೆಯು ಹರ್ಷ ಸಮುದ್ರ ವಾಚಕ (೧೬ನೆಯ ಶತಮಾನ) ಮತ್ತು ಜಯಮೇರು ಕೃತವೂ ದೊರೆಯುತ್ತದೆ.

ಜ್ಞಾನಸಾಗರ ಸೂರಿ ಕೃತ ರತ್ನಚೂಡ ಕಥಾ (೧೫ನೆಯ ಶತಮಾನ) ಎಂಬುದು ದೇವೇಂದ್ರ ಸೂರಿ ಕೃತ ಪ್ರಾಕೃತ ಕಥೆಯೊಡನೆ ನಾಮ ಸಾಮ್ಯವಿದೆ; ಆದರೆ ಈ ಕಥೆಯು ಸರ್ವಥಾ ಭಿನ್ನವಾಗಿದೆ. ಇಲ್ಲಿ ಅನೀತಿಪುರದ ಅನ್ಯಾಯ ರಾಜಾ ಡೆ ತ್ತು ದುರ್ಬುದ್ಧಿ ಮಂತ್ರಿಯ ಕಥೆಯಿದೆ. ಈ ನಗರದಲ್ಲಿ ಕಳ್ಳರು ಧೂರ್ತರೆ ಹೊರತಾಗಿ ಅನ್ಯ ಧಾರ್ಮಿಕ ಪುರುಷರು ವಾಸಿಸುತ್ತಿರಲಿಲ್ಲ. ಕಥೆಯಲ್ಲಿ ನಾನಾ ಉಪಕಥೆಗಳು ತುಂಬಿಕೊಂಡಿವೆ ರೋಹಕನು ತನ್ನ ವಿಲಕ್ಷಣ ಬುದ್ಧಿಯಿಂದ ದುಷ್ಕರ ಕಾರ್ಯಗಳನ್ನು ಮಾಡಿ ತೋರಿಸುತ್ತಾನೆ. ಇದರಿಂದ ಪಾಲಿಯ ಮಹಾ-ಉಮ್ಮಗ್ಗ ಜಾತಕದಲ್ಲಿ ವರ್ಣಿತಗೊಂಡ ಮಹೋಸಥ ಎಂಬ ಹೆಸರಿನ ಪುರುಷನ ಅದ್ಭುತ ಕೆಲಸಗಳ ಸ್ಮರಣೆಯು ಉಂಟಾಗುತ್ತದೆ. ರತ್ನಚೂಡನು ವಿದೇಶಕ್ಕಾಗಿ ಪ್ರಸ್ಥಾನ ಮಾಡುವಾಗ ಅವನ ತಂದೆಯ ಮುಖಾಂತರ ನುಡಿಸಿದ ಉಪದೇಶಪರ ಮಾತುಗಳಲ್ಲಿ ವ್ಯಾವಹಾರಿಕ ಚಾತುರ್ಯವೂ ಇದೆ. ಅದರೊಡನೆಯೇ ಅಂಧ ವಿಶ್ವಾಸದ ಮಿಶ್ರಣವೂ ಸಹ ಇದೆ. ಮಹಾ ಪುರುಷನ ೩೨ ಲಕ್ಷಣಗಳನ್ನೂ ಕೂಡ ಇದರಲ್ಲಿ ಲೆಕ್ಕ ಹಾಕಲಾಗಿದೆ.

ಅಘಟಕುಮಾರ-ಕಥಾ ಎಂಬುದರಲ್ಲಿ ಜಿನಕೀರ್ತಿಕೃತ ಚಂಪಕ-ಶ್ರೇಷ್ಠಿ-ಕಥಾನಕಕ್ಕೆ ಸಮನಾಗಿ ಪತ್ರವಿನಿಮಯದಿಂದ ನಾಯಕನು ಮೃತ್ಯುವಿನಿಂದ ಉಳಿದುಕೊಂಡ ಘಟನೆಯ ವರ್ಣನೆಯು ಇದೆ. ಇದರ ಜರ್ಮನ್ ಅನುವಾದವನ್ನು ಚಾರ್ಲೋಟ್ ಕ್ರಾಉಸಳು ಮಾಡಿದ್ದಾಳೆ. ಇದರ ಎರಡು ಪದ್ಯಾತ್ಮಕ ಸಂಸ್ಕರಣಗಳೂ ದೊರೆಯುತ್ತವೆ. ಆದರೆ ಯಾವ ಕೃತಿಯಲ್ಲಿಯೂ ಕರ್ತೃವಿನ ಹೆಸರು ಇಲ್ಲ. ರಚನಾ ಕಾಲವೂ ಅನಿಶ್ಚಿತವಾಗಿದೆ. ಇದು ಬಹುತರ ೧೫–೧೬ನೆಯ ಶತಮಾನದ ರಚನೆಯಾಗಿದೆ.

ಜಿನಕೀರ್ತಿಯು ರಚಿಸಿದ ಚಂಪಕ ಶ್ರೇಷ್ಠಿ ಕಥಾನಕದ (೧೫ನೆಯ ಶತಮಾನ) ಆಖ್ಯಾನವು ಸುಪ್ರಸಿದ್ಧವಾಗಿದೆ. ಇದರಲ್ಲಿ ತಕ್ಕ ಸಮಯಕ್ಕೆ ಪತ್ರವು ದೊರೆಯುವುದರಿಂದ ಸೌಭಾಗ್ಯಶಾಲಿಯಾದ ನಾಯಕನು ಮೃತ್ಯುವಿನ ಮುಖದಿಂದ ಬದುಕಿ ಉಳಿಯುತ್ತಾನೆ. ಕಥೆಯ ಮಧ್ಯದಲ್ಲಿ ಮತ್ತೆ ಮೂರು ಸುಂದರ ಉಪಕಥೆಗಳು ಇವೆ. ಈ

ಕ್ಷೆಯು ಮೇರುತುಂಗನ ಪ್ರಬಂಧ ಚಿಂತಾಮಣಿ ಮತ್ತು ಅನ್ಯ ಕಥಾಕೋಷಗಳ ಲ್ಲಿಯೂ ದೊರೆಯುತ್ತದೆ. ಇದರ ಸಂಪಾದನ ಹಾಗೂ ಪ್ರಕಾಶನಗಳು ಇಂಗ್ಲಿಷದಲ್ಲಿ ಹರ್ಟೆಲನಿಂದ ಆಗಿವೆ. ಜರ್ಮನ್ ಅನುವಾದವೂ ಪ್ರಕಟವಾಗಿದೆ.

ಜಿನಕೀರ್ತಿಯ ಇದೇ ಪ್ರಕಾರದ ಇನ್ನೊಂದು ಕೃತಿಯು ಪಾಲ-ಗೋಪಾಲ ಕಥಾನಕವಾಗಿದೆ. ಇದರಲ್ಲಿ ಪಾಲ ಮತ್ತು ಗೋಪಾಲ ಎಂಬ ಹೆಸರಿನ ಇಬ್ಬರು ಬಂಧು ಗಳ ಪರಿಭ್ರಮಣ ಹಾಗೂ ನಾನಾ ಪ್ರಕಾರದ ಸಾಹಸಗಳು ಮತ್ತು ಪ್ರಲೋಭನಗಳು ಇವುಗಳನ್ನು ಮೀರಿ, ಕೊನೆಯಲ್ಲಿ ಧಾರ್ಮಿಕ ಜೀವನದಲ್ಲಿ ಕಾಲಕಳೆಯುವ ಸಂಗತಿ ಯನ್ನು ರುಚಿಕಟ್ಟಾಗಿ ವಿವರಿಸಲಾಗಿದೆ. ಮಾಣಿಕ್ಯಸುಂದರಕೃತ **ಮಹಾಬಲ-ಮಲಯ ಸುಂದರೀ ಕಥಾ** (೧೫ನೆಯ ಶತಮಾನ) ಸಂಸ್ಕೃತ ಗದ್ಯದಲ್ಲಿದೆ. ಇದು ಉಪಾಖ್ಯಾನಗಳ ಭಂಡಾರವಾಗಿದೆ.

ಜಯವಿಜಯನ ಶಿಷ್ಯನಾದ ಮಾನವಿಜಯನು ರಚಿಸಿದ **ಪಾಪಬುದ್ಧಿ-ಧರ್ಮ ಬುದ್ಧಿ-ಕಥಾ** ಎಂಬುದರ ಇನ್ನೊಂದು ಹೆಸರು ಕಾಮಘಟ ಕಥೆಯೆಂದಿದೆ. ಈ ಸಂಸ್ಕೃತ ಗದ್ಯಾತ್ಮಕ ಕಥೆಯನ್ನು ರಚಿಸಿದವನು ಹೀರವಿಜಯನಿಂದ ಸ್ಥಾಪಿತವಾದ ವಿಜಯ ಶಾಖೆಯಲ್ಲಿ ಆಗಿಹೋದಂತೆ ಕಂಡುಬರುತ್ತದೆ. ಅಂತೂ ಇವನ ಕಾಲವು ೧೭-೧೭ ನೆಯ ಶತಮಾನವಾಗಿರಬೇಕೆಂದು ಅನುಮಾನಿಸಲಾಗುತ್ತದೆ. ಇದರ ಕಥಾನಾಯ ಕನು ಸಿದ್ಧರ್ಷಿಕೃತ ಉಪಮಿತಿಭವಪ್ರಪಂಚ ಕಥೆಗೆ ಅನುಸರಿಸಿ ಭಾವಾತ್ಮಕ ಹಾಗೂ ಕಲ್ಪಿತವಾಗಿದೆ. ಅವರಿಬ್ಬರೂ ಕ್ರಮವಾಗಿ ರಾಜ ಮತ್ತು ಮಂತ್ರಿಗಳಾಗಿದ್ದರು. ರಾಜನು ಧನ ಮತ್ತು ಐಶ್ವರ್ಯಗಳೇ ಸರ್ವಸ್ವವೆಂದು ತಿಳಿಯುತ್ತಾನೆ. ಮಂತ್ರಿಯು ಧರ್ಮವೇ ಸರ್ವಸ್ವವೆನ್ನುವನು. ಕೊನೆಗೆ ಮುನಿಯ ಉಪದೇಶದಿಂದ ಅವನು ಬೋಧೆಯನ್ನು ಪಡೆದು, ಪ್ರವ್ರಜಿತನಾಗುತ್ತಾನೆ. ಈ ಕಥಾನಕವು ನಿಜವಾಗಿಯೂ ಇದೇ ಲೇಖಕನ ಹಿರಿಯ ಕೃತಿಯಾದ ಧರ್ಮಪರೀಕ್ಷೆಯ ಒಂದು ಭಾಗ ಮಾತ್ರವಾಗಿದೆ. ಇದನ್ನು ಲೋಪರಿಯು ಸಂಪಾದಿಸಿ ಇಟಾಲಿಯನ್ ಭಾಷೆಯಲ್ಲಿ ಅನುವಾದಿಸಿ ಪ್ರಕಟಿಸಿದ್ದಾನೆ.

ಇನ್ನು ಕೆಲವೊಂದು ಕೃತಿಗಳನ್ನು ಇಲ್ಲಿ ಪಿಂಗಡಿಸಿ ಉಲ್ಲೇಖಿಸಬೇಕು. ಯಾಕೆಂ ದರೆ ಅವುಗಳಲ್ಲಿ ತೀರ್ಥ ಮೊದಲಾದ ಸ್ಥಾನಗಳ ಬಗ್ಗೆಯೂ ಮಹಾಪುರುಷರನ್ನು ಕುರಿತೂ ಕೆಲವು ಐತಿಹಾಸಿಕ ವೃತ್ತಾಂತಗಳು ಕಂಡುಬರುತ್ತವೆ. ಇವು ಪ್ರಾಚೀನ ಇತಿಹಾಸ-ನಿರ್ಮಾಣದ ದೃಷ್ಟಿಯಿಂದ ಬಹು ಮಹತ್ವಪೂರ್ಣವಾಗಿವೆ. ಅಂಥ ಕೆಲವು ಕೃತಿಗಳು ಈ ಪ್ರಕಾರವಾಗಿವೆ :—

ಧನೇಶ್ವರ ಸೂರಿಯು ವಿರಚಿಸಿದ **ಶತ್ರುಂಜಯ ಮಹಾತ್ಮ್ಯವು** (೭-೮ನೆಯ ಶತಮಾನ) ಸ್ವತಃ ಕರ್ತೃವೇ ಹೇಳಿದ ಪ್ರಕಾರ ಸೌರಾಷ್ಟ್ರದ ರಾಜನಾದ ಶೀಲಾದಿತ್ಯನ ಅನುರೋಧದಿಂದ ವಲಭಿಯಲ್ಲಿ ರೂಪುಗೊಂಡಿತು. ಇದರಲ್ಲಿ ಹದಿನಾಲ್ಕು ಸರ್ಗಗಳಿವೆ. ವೈದಿಕ ಪರಂಪರೆಯ ಪುರಾಣಗಳ ಶೈಲಿಯಿಂದ ಶತ್ರುಂಜಯ ಪರ್ವತದ ತೀರ್ಥ ಮಹಾತ್ಮ್ಯದ ವರ್ಣನೆಯನ್ನು ಇದರಲ್ಲಿ ಮಾಡಿದೆ. ಲೋಕ-ವರ್ಣನೆಯ ತರುವಾಯ

ತೀರ್ಥಂಕರ ಋಷಭ ಮತ್ತು ಅವನ ಪುತ್ರರಾದ ಭರತ ಬಾಹುಬಲಿಗಳೂ ಭರತನು ಇಲ್ಲಿ ಮಂದಿರಗಳನ್ನು ಸ್ಥಾಪಿಸಿದ ಸಂಗತಿಗಳೂ ಬಂದಿವೆ. ೯ನೆಯ ಸರ್ಗದಲ್ಲಿ ರಾಮ ಕಥೆಯಿದೆ. ೧೦–೧೨ನೆಯ ಸರ್ಗಗಳಲ್ಲಿ ಪಾಂಡವ, ಕೃಷ್ಣ ಮತ್ತು ನೇಮಿನಾಥರ ಚರಿತ್ರಗಳು ಬಂದಿವೆ. ಅದರಂತೆಯೇ ೧೪ನೆಯದರಲ್ಲಿ ಪಾರ್ಶ್ವ ಮಹಾವೀರರ ಚರಿತ್ರ ಗಳು ಇವೆ. ಭೀಮಸೇನನಿಗೆ ಸಂಬಂಧಿಸಿದ ಬಹಳಷ್ಟು ವೃತ್ತಾಂತವು ಮಹಾಭಾರತ ದಿಂದ ತೀರ ಭಿನ್ನವಾಗಿದೆ; ನವೀನವೂ ಆಗಿದೆ.

ಪ್ರಭಾಚಂದ್ರ ಕೃತ ಪ್ರಭಾವಕ-ಚರಿತ್ರ ದಲ್ಲಿ (ಕ್ರಿ.ಶ. ೧೨೭೭) ಇಪ್ಪತ್ತೆರಡು ಜನ ಜೈನಾಚಾರ್ಯರೂ ಹಾಗೂ ಕವಿಗಳ ಚರಿತ್ರೆಯನ್ನು ವರ್ಣಿಸಲಾಗಿದೆ. ಅವು ಗಳಲ್ಲಿ ಹರಿಭದ್ರ, ಸಿದ್ಧರ್ಷಿ, ಬಪ್ಪಭಟ್ಟಿ, ಮಾನತುಂಗ, ಶಾಂತಿಸೂರಿ ಮತ್ತು ಹೇಮ ಚಂದ್ರರೂ ಸಮನ್ವಿತರಾಗಿದ್ದಾರೆ. ಈ ಪ್ರಕಾರ ಇಲ್ಲಿ ಹೇಮಚಂದ್ರನ ವಿಷಯವು ಪರಿಶಿಷ್ಟ ಪರ್ವಕ್ಕೆ ಪೂರಕ ವಿಷಯವಾಗಿ ಬಂದಿದೆ. ಇದು ಐತಿಹಾಸಿಕ ದೃಷ್ಟಿಯಿಂದ ಉಪಯುಕ್ತವಾಗಿದೆ. ಇದರ ಸಂಶೋಧನೆಯೂ ಸಹ ಪ್ರದ್ಯುಮ್ನಸೂರಿಯಿಂದ ಆಗಿದೆ.

ಪ್ರಭಾಚಂದ್ರನ ಪ್ರಭಾವಕ ಚರಿತ್ರೆಯ ಪರಂಪರೆಯಲ್ಲಿ ಮೇರುತುಂಗನು ತನ್ನ ಪ್ರಬಂಧ ಚಿಂತಾಮಣಿಯನ್ನೂ (ಕ್ರಿ. ಶ. ೧೩೦೬), ರಾಜಶೇಖರನು ಪ್ರಬಂಧ ಕೋಷವನ್ನೂ (ಕ್ರಿ. ಶ. ೧೩೪೯) ರಚಿಸಿದರು. ಇವುಗಳಲ್ಲಿ ಬಹುಭಾಗವಂತೂ ಕಾಲ್ಪನಿಕವಾಗಿವೆ. ಆದರೆ ಕೆಲವೊಂದು ಮಹತ್ವಪೂರ್ಣ ಐತಿಹಾಸಿಕ ಸಂಗತಿಗಳೂ ಕಂಡುಬರುತ್ತವೆ. ಅವು ಲೇಖಕರ ನಿಕಟವರ್ತಿ ಕಾಲಕ್ಕೆ ಸಂಬಂಧಿಸಿದವುಗಳಾಗಿವೆ. ರಾಜಶೇಖರ ಕೃತಿಯಲ್ಲಿ ಇಪ್ಪತ್ನಾಲ್ಕು ವ್ಯಕ್ತಿಗಳ ಚರಿತ್ರವು ವರ್ಣಿತವಾಗಿದೆ. ಇವರಲ್ಲಿ ರಾಜಾ ಶ್ರೀಹರ್ಷ ಮತ್ತು ಆಚಾರ್ಯ ಹೇಮಚಂದ್ರರೂ ಆಗಿದ್ದಾರೆ. ಯಾವ ಪ್ರಕಾರ ಪ್ರಭಾಚಂದ್ರ, ಮೇರುತುಂಗ ಮತ್ತು ರಾಜಶೇಖರರ ಪ್ರಬಂಧಗಳಲ್ಲಿ ನಮಗೆ ಐತಿಹಾಸಿಕ ಪುರುಷರ ಚರಿತ್ರಗಳು ಲಭಿಸುತ್ತವೆಯೋ ಹಾಗೆಯೇ ಜಿನಪ್ರಭಸೂರಿಯ ತೀರ್ಥಕಲ್ಪ ಅಥವಾ ಕಲ್ಪಪ್ರದೀಪ ಮತ್ತು ರಾಜಪ್ರಸಾದ (ಸುಮಾರು ಕ್ರಿ. ಶ. ೧೩೩೦) ಇವುಗಳಲ್ಲಿ ತೀರ್ಥಗಳ ನಿರ್ಮಾಣ, ಅವುಗಳನ್ನು ನಿರ್ಮಿಸಿದವರು ಮತ್ತು ದೊರೆತ ದಾನ-ದಾತೃಗಳ ವೃತ್ತಾಂತವೆಲ್ಲ ದೊರೆಯುತ್ತದೆ. ರಚನಾ ಶೈಲಿಯಲ್ಲಿ ಸಂಸ್ಕೃತ ಮತ್ತು ಪ್ರಾಕೃತಗಳ ಮಿಶ್ರಣವಿದೆ.

ಜೈನ ಲಘುಕಥೆಗಳ ಸಂಗ್ರಹವೂ ಬಹು ಸಂಖ್ಯೆಯಲ್ಲಿ ಕಥಾಕೋಷಗಳಲ್ಲಿ ಕಂಡು ಬರುತ್ತದೆ. ಅವುಗಳಲ್ಲಿ ಪದ್ಯ, ಗದ್ಯ ಇಲ್ಲವೆ ಚಂಪೂ ರೂಪಗಳಲ್ಲಿ ಪುರುಷ ಇಲ್ಲವೆ ಸ್ತ್ರೀಯರ ಚರಿತ್ರೆಗಳನ್ನು ಸಂಗ್ರಹ ರೂಪದಿಂದ ವರ್ಣಿಸಲಾಗಿದೆ. ಆ ವ್ಯಕ್ತಿಗಳ ಸಾಂಸಾರಿಕ ಸುಖ-ದುಃಖಗಳ ಕಾರಣವು ಅವರು ಸ್ವತಃ ಮಾಡಿದ ಪುಣ್ಯ ಪಾಪಗಳ ಪರಿಣಾಮಗಳೆಂದು ಸಿದ್ಧಮಾಡಲಾಗಿದೆ. ಅಂಥ ಕೆಲವು ಕಥಾಕೋಷಗಳು ಹೀಗಿವೆ:–

ಹರಿಷೇಣ ಕೃತ ಕಥಾಕೋಷವು (ಶಕ ೮೫೩) ಸಂಸ್ಕೃತ ಪದ್ಯಗಳಲ್ಲಿದೆ. ಉಪ ಲಬ್ಧ ಸಮಸ್ತ ಕಥಾಕೋಷಗಳಲ್ಲಿ ಇದು ಎಲ್ಲಕ್ಕೂ ಪ್ರಾಚೀನವಾಗಿದೆ. ಇದರಲ್ಲಿ ೧೫೭

ಕಥೆಗಳಿವೆ. ಅವುಗಳಲ್ಲಿ ಚಾಣಕ್ಯ, ಶಕಟಾಲ, ಭದ್ರಬಾಹು, ವರರುಚಿ, ಸ್ವಾಮಿ ಕಾರ್ತಿಕೇಯ ಮೊದಲಾದ ಐತಿಹಾಸಿಕ ಪುರುಷರ ಚರಿತ್ರಗಳೂ ಸಹ ಇವೆ. ಈ ಕಥೆಗೆ ಅನುಸರಿಸಿ ಭದ್ರಬಾಹುವೂ ಉಜ್ಜಯಿನಿಯ ಸಮೀಪ ಭಾದ್ರಪದ (ಭದಾವರ?) ದಲ್ಲಯೇ ವಾಸಿಸುತ್ತಿದ್ದನು. ಇವನಿಂದ ದೀಕ್ಷೆಯನ್ನು ಪಡೆದ ಶಿಷ್ಯ ರಾಜಾ ಚಂದ್ರ ಗುಪ್ತನು — ಇವನ ಇನ್ನೊಂದು ಹೆಸರು ವಿಶಾಖಾಚಾರ್ಯ — ಸಂಘ ಸಹಿತ ದಕ್ಷಿ ಣದ ಪುನ್ನಾಟ ದೇಶಕ್ಕೆ ತೆರಳಿದ್ದನು. ಕಥೆಗಳಲ್ಲಿ ಕೆಲವೊಂದು ಹೆಸರುಗಳು ಮತ್ತು ಶಬ್ದಗಳು ಮೇದಜ್ಜ (ಮೇತಾರ್ಯ), ವಿಜ್ಜದಾಢ (ವಿದ್ಯುದ್ದಂಷ್ಟ್ರ) ಇವು ಪ್ರಾಕೃತ ರೂಪದಲ್ಲಿ ಪ್ರಯುಕ್ತವಾಗಿವೆ. ಇದರಿಂದ ಕರ್ತೃವು ಈ ಕಥೆಗಳನ್ನು ಯಾವುದೋ ಒಂದು ಪ್ರಾಕೃತ ಗ್ರಂಥದಿಂದ ಎತ್ತಿಕೊಂಡಿರಬೇಕೆಂದು ತಿಳಿಯುತ್ತದೆ. ಅವನು ಸ್ವತಃ ತನ್ನ ಕಥಾಕೋಷವನ್ನು 'ಆರಾಧನೋದ್ಧೃತ' ಎಂದು ಕರೆದಿದ್ದಾನೆ. ಇದು ಬಹು ತರ ಭಗವತೀ ಆರಾಧನೆಯೆಂದಭಿಪ್ರಾಯವಾಗಿದೆ. ಜಿನಸೇನಾಚಾರ್ಯನು ಆಗಿ ಹೋದ ಪುನ್ನಾಟ ಗಚ್ಛದವನೇ ಈ ಹರಿಷೇಣನೂ ಸಹ ಆಗಿದ್ದಾನೆ. ಅಲ್ಲದೆ ಜಿನ ಸೇನನು ಹರಿವಂಶವನ್ನು ಶಕ ಸಂ. ೭೦೫ರಲ್ಲಿ ಸಮಾಪ್ತಿಗೊಳಿಸಿದ ವರ್ಧಮಾನಪುರ ದಲ್ಲಿಯೇ ತನ್ನ ಈ ಕೃತಿಯನ್ನು ಪೂರ್ಣಗೊಳಿಸದನು. ಇದರಿಂದ ವರ್ಧಮಾನಪುರವು ಎಂಟನೆಯ ಶತಮಾನದವರೆಗೆ ಪುನ್ನಾಟ ಸಂಘದ ಒಳ್ಳೆಯ ಕೇಂದ್ರವಾಗಿತ್ತೆಂದು ಗೊತ್ತಾಗುತ್ತದೆ. ಈ ಕಥಾಕೋಷವು ಬೃಹತ್ ಕಥಾಕೋಷ ಎಂಬ ಹೆಸರಿನಿಂದ ಪ್ರಸಿದ್ಧವಿದೆ. ಬಹುತರ ಇದರ ತರುವಾಯ ರಚಿತವಾದ ಕಥಾಕೋಷಗಳಿಂದ ಇದನ್ನು ವಿಂಗಡಿಸಿ ಹೇಳುವುದಕ್ಕಾಗಿ ಈ 'ಬೃಹತ್' ಎಂಬ ವಿಶೇಷಣವನ್ನು ಹಚ್ಚಿರಬೇಕು.

ಅಮಿತಗತಿಯು ರಚಿಸಿದ **ಧರ್ಮಪರೀಕ್ಷೆಯ** ಶೈಲಿಯ ಮೂಲ ಪ್ರವಾಹವು ಹರಿಭದ್ರಕೃತ ಪ್ರಾಕೃತ ಧೂರ್ತಾಖ್ಯಾನವಾಗಿದೆ. ಆದರೆ ಇಲ್ಲಿಯ ಅನೇಕ ಚಿಕ್ಕ ಪುಟ್ಟ ಕಥೆಗಳು ಸಂಪೂರ್ಣ ಸ್ವತಂತ್ರವಾಗಿವೆ; ಮೇಲಿನವೂ ಇವೆ. ಗ್ರಂಥದ ಮೂಲ ಉದ್ದೇಶವು ಅನ್ಯಧರ್ಮಗಳ ಪೌರಾಣಿಕ ಕಥೆಗಳ ಅಸತ್ಯತೆಯನ್ನು ಅವುಗಳ ಅಧಿಕ ಕೃತ್ರಿಮತೆ, ಅಸಂಭವತೆ, ತಾಳ-ಮೇಳವಿಲ್ಲದಿರುವಿಕೆಯನ್ನು ವಿವರಿಸಿ ಹೇಳಿ ಸಿದ್ಧ ಮಾಡುವುದಾಗಿದೆ ಅಲ್ಲದೆ ನಿಜವಾದ ಧಾರ್ಮಿಕ ಶ್ರದ್ಧೆಯನ್ನು ಹುಟ್ಟಿಸುವುದಾಗಿದೆ. ಇದರಲ್ಲಿ ಧೂರ್ತ ಮತ್ತು ಮೂರ್ಖರ ಕಥೆಗಳೇ ಹೆಚ್ಚಾಗಿವೆ.

ಪ್ರಭಾಚಂದ್ರ ಕೃತ ಕಥಾಕೋಷವು (೧೩ನೆಯ ಶತಮಾನ) ಸಂಸ್ಕೃತ ಗದ್ಯದಲ್ಲಿ ಬರೆದದ್ದಾಗಿದೆ. ಇದರಲ್ಲಿ ಭದ್ರಬಾಹು-ಚಂದ್ರಗುಪ್ತರಲ್ಲದೆ ಸಮಂತಭದ್ರ ಮತ್ತು ಅಕ ಲಂಕರ ಚರಿತ್ರೆಗಳನ್ನೂ ಸಹ ವರ್ಣಿಸಲಾಗಿದೆ. ನೇಮಿದತ್ತನು ರಚಿಸಿದ ಆರಾಧನಾ ಕಥಾಕೋಷವು (೧೬ನೆಯ ಶತಮಾನ) ಪದ್ಯಾತ್ಮಕವಾಗಿದೆ. ಇದು ಪ್ರಭಾಚಂದ್ರನ ಕಥಾಕೋಷವನ್ನು ವಿಸ್ತರಿಸಿ ಬರೆದದ್ದಾಗಿದೆ. ಇದೇ ಪ್ರಕಾರ ಇನ್ನೊಂದು ಸಂಗ್ರಹವು ರಾಮಚಂದ್ರ ಮುಮುಕ್ಷುವು ರಚಿಸಿದ ಪುಣ್ಯಾಶ್ರವ ಕಥಾಕೋಷವಾಗಿದೆ.

ರಾಜಶೇಖರನು ನಿರ್ಮಿಸಿದ ಅಂತರಕಥಾಸಂಗ್ರಹವು (೧೪ನೆಯ ಶತಮಾನ)

ಆಗಮದ ಟೀಕೆಗಳಿಂದ ಕಥೆಗಳನ್ನು ಸಂಗ್ರಹಿಸಿ ಕೊಟ್ಟಿದೆ. ಇದರ ಎಂಟು ಕಥೆಗಳ ಪೂಲ್ಲೆಯಿಂದ ಇಟಾಲಿಯನ್ ಭಾಷೆಯಲ್ಲಿ ಅನುವಾದಗೊಂಡಿವೆ. ಇದರೊಳಗಿನ ಒಂದು ಕಥೆಯನ್ನು 'ಜಜಮೆಂಟ್ ಆಫ್ ಸೋಲೋಮನ್' ಎಂಬ ಹೆಸರಿನಿಂದ ಟೇಸಿ ಟೋರಿಯು ಇಂಗ್ಲಿಷದಲ್ಲಿ ಅನುವಾದ ಮಾಡಿದ್ದಾನೆ. (ಇಂ. ಏಂಟೀ. ೪೨). ಇದರ ಜೊತೆಯಲ್ಲಿ ಮಲಯಗಿರಿಯ ಟೀಕೆಯ ಕಥೆಯೂ ಕೂಡ ಇದೆ. ಈ ಕಥೆಯ ರೂಪಾಂತರವೂ ಸಹ ಯುರೋಪದ ಕಥೆಗಳಲ್ಲಿ ಆಗಿದೆಯೆಂದು ಹೇಳಲಾಗುತ್ತಿದೆ.

ಲಕ್ಷ್ಮೀಸಾಗರನ ಶಿಷ್ಯನಾದ ಶುಭಶೀಲಗಣೀ (೧೫ನೆಯ ಶತಮಾನ) ಕೃತ **ಪಂಚಶತೀ ಪ್ರಬೋಧ ಸಂಬಂಧ**ದಲ್ಲಿ ಸುಮಾರು ೬೦೦ ಧಾರ್ಮಿಕ ಕಥೆಗಳೂ ಇವೆ. ಇವುಗಳಲ್ಲಿ ನಂದ, ಸಾತವಾಹನ, ಭರ್ತೃಹರಿ, ಭೋಜ, ಕುಮಾರಪಾಲ, ಹೇಮಸೂರಿ ಮೊದಲಾದ ಐತಿಹಾಸಿಕ ಪುರುಷರ ಚರಿತ್ರೆಗಳೂ ಸಹ ಇವೆ. ಇದು ಲೇಖಕನ ಇನ್ನೊಂದು ಕಥಾಕೋಷವು 'ಭರತಾದಿ ಕಥಾ' ಎಂಬ ಹೆಸರಿನದಿದೆ.

ಜಿನಕೀರ್ತಿ ಕೃತ **ದಾನಕಲ್ಪದ್ರುಮ**ದಲ್ಲಿ (೧೫ನೆಯ ಶತಮಾನ) ದಾನದ ಮಹಿಮೆಯನ್ನು ಹೇಳುವ ರೋಚಕ ಹಾಗೂ ವಿನೋದಪೂರ್ಣ ಅನೇಕ ಲಘುಕಥೆಗಳನ್ನು ಸಂಸ್ಕೃತ ಪದ್ಯಗಳಲ್ಲಿ ಸಂಗ್ರಹಿಸಿ ಕೊಟ್ಟಿದೆ. ಉದಯಧರ್ಮನು ರಚಿಸಿದ **ಧರ್ಮಕಲ್ಪ-ದ್ರುಮ**ದಲ್ಲಿ (೧೫ನೆಯ ಶತಮಾನ) ಪದ್ಯಾತ್ಮಕ ಕಥೆಗಳು ಇವೆ.

**ಸಮ್ಯಕ್ತ್ವಕೌಮುದಿ**ಯು ಚಿಕ್ಕ ಕಥೆಗಳ ಒಂದು ಸಂಗ್ರಹವಾಗಿದೆ. ಅರ್ಹದ್ದಾಸ ಶ್ರೇಷ್ಠಿಯು ತನ್ನ ಎಂಟು ಜನ ಪತ್ನಿಯರಿಗೆ ಹೇಳಿದ ಕಥೆಗಳಿವು. ತನಗೆ ಸಮ್ಯಕ್ತ್ವವು ಉಂಟಾದ ರೀತಿಯನ್ನು ಇದರಲ್ಲಿ ಶ್ರೇಷ್ಠಿಯು ವಿವರಿಸಿದ್ದಾನೆ. ತಿರುಗಿ ಪತ್ನಿಯರೂ ಸಹ ಅವನಿಗೆ ತಮ್ಮ ಅನುಭವಗಳನ್ನು ಹೇಳುವರು. ಈ ಚೌಕಟ್ಟಿನಲ್ಲಿ ಬಹಳಷ್ಟು ಕಥೆಗಳನ್ನು ಹೆಣೆಯಲಾಗಿದೆ. ಸಮ್ಯಕ್ತ್ವ ಕೌಮುದಿ ಎಂಬ ಹೆಸರಿನ ಅನೇಕ ಕೃತಿಗಳು ಉಪಲಬ್ಧವಿವೆ. ಅವುಗಳಲ್ಲಿ ಜಯಚಂದ್ರ ಸೂರಿಯ ಶಿಷ್ಯನಾದ ಜಿನಹರ್ಷಗಣಿಯು ರಚಿಸಿದ್ದು (ವಿ. ಸಂ. ೧೪೮೭) ಗುಣಾಕರಸೂರಿ ಕೃತ (ವಿ. ಸಂ. ೧೫೦೪), ಮಲ್ಲಿಭೂಷಣ ನಿರ್ಮಿಸಿದ್ದು (ಸುಮಾರು ವಿ. ಸಂ ೧೫೪೪) ಸಿಂಹದತ್ತ ಸೂರಿಯ ಶಿಷ್ಯನಾದ ಸೋಮದೇವ ಸೂರಿಯು ಬರೆದ (ವಿ. ಸಂ. ೧೫೭೩), ಶುಭಚಂದ್ರ ಕೃತ (ಸುಮಾರು ವಿ. ಸಂ. ೧೬೮೦), ಇವಲ್ಲದೆ ಕಾಲ ನಿರ್ಣಯಕೊಗದೆ ಇರುವ ವತ್ಸರಾಜ, ಧರ್ಮಕೀರ್ತಿ, ಮಂಗರಸ, ಯಶಃಕೀರ್ತಿ ಮತ್ತು ಆದಿಭೂಷಣ ಇವರು ರಚಿಸಿದ ಸಮ್ಯಕ್ತ್ವಕೌಮುದಿಗಳನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ.

ಹೇಮವಿಜಯಕೃತ **ಕಥಾರತ್ನಾಕರ**ದಲ್ಲಿ (ಕ್ರಿ.ಶ. ೧೬೧೦) ೨೫೮ ಕಥಾನಕಗಳಿವೆ. ಇವುಗಳಲ್ಲಿ ಹೆಚ್ಚು ಕಥೆಗಳು ಉತ್ತಮ ಗದ್ಯದಲ್ಲಿಯೂ ಕೆಲವೊಂದು ಕಥೆಗಳು ಪದ್ಯದಲ್ಲಿಯೂ ರೂಪುಗೊಂಡವುಗಳಾಗಿವೆ. ಅಲ್ಲಲ್ಲಿ ಪ್ರಾಕೃತ ಮತ್ತು ಅಪಭ್ರಂಶ ಪದ್ಯಗಳೂ ಸಹ ಕಂಡುಬರುತ್ತವೆ. ಈ ಕಥೆಗಳಲ್ಲಿ ಒಂದು ವಿಶೇಷತೆಯೂ ಇದೆ. ಬಹುತರ ಕಥೆಗಳ ಆದಿ-ಅಂತ್ಯಗಳಲ್ಲಿ ಧಾರ್ಮಿಕ ಉಪದೇಶವನ್ನು ಹೊಂದಿಸುವ ಕಳಿಗೆ

ಗಳ ಪದ್ಯಗಳನ್ನುಳಿದು ಬೇರೆಲ್ಲಿಯೂ ಜೈನತತ್ವದ ಉಲ್ಲೇಖವು ಕಂಡುಬರುವುದಿಲ್ಲ. ಕಥೆಗಳು ಮತ್ತು ನೀತಿವಾಕ್ಯಗಳು ಪಂಚತಂತ್ರದ ರೀತಿಯಲ್ಲಿವೆ.

**ನಾಟಕ :—**

ಜೈನ ಮುನಿಗಳಿಗೆ ನಾಟಕ ಮೊದಲಾದ ವಿನೋದಗಳಲ್ಲಿ ಭಾಗವಹಿಸುವುದು ನಿಷಿದ್ಧವಾಗಿದೆ. ಇದೇ ಕಾರಣದಿಂದ ಪ್ರಾಚೀನ ಜೈನ ಸಾಹಿತ್ಯದಲ್ಲಿ ನಾಟಕ ಕೃತಿಗಳು ಕಂಡುಬರುವುದಿಲ್ಲ. ಮುಂದಿನ ಕಾಲದಲ್ಲಿ ಮುನಿಯ ಚರ್ಯೆಯು ಅಷ್ಟು ಬಂಧನಕಾರಿಯಾಗಿ ಉಳಿಯದೆ ಇದ್ದಾಗ, ಇಲ್ಲವೆ ಗೃಹಸ್ಥರೂ ಸಾಹಿತ್ಯ ರಚನೆಯನ್ನು ಮಾಡತೊಡಗಿದ ಮೇಲೆ ೧೩ನೆಯ ಶತಮಾನದಿಂದ ಕೆಲವು ಸಂಸ್ಕೃತ ನಾಟಕಗಳು ರೂಪುಗೊಂಡವು. ಅವುಗಳ ಸ್ಥೂಲ ಪರಿಚಯವು ಹೀಗಿದೆ :—

ರಾಮಚಂದ್ರ ಸೂರಿಯು (೧೩ನೆಯ ಶತಮಾನ) ಹೇಮಚಂದ್ರನ ಶಿಷ್ಯನಾಗಿದ್ದನು. ಅವನು ಒಂದು ನೂರು ಪ್ರಕರಣಗಳನ್ನು (ನಾಟಕಗಳನ್ನು) ರಚಿಸಿದನೆಂದು ಹೇಳಲಾಗುತ್ತದೆ. ಅವುಗಳಲ್ಲಿ **ನಿರ್ಭಯ-ಭೀಮ-ವ್ಯಾಯೋಗ, ನಲವಿಲಾಸ** ಮತ್ತು **ಕೌಮುದೀ-ಮಿತ್ರಾನಂದ** ಇವು ಪ್ರಕಟವಾಗಿವೆ. ರಘುವಿಲಾಸ ನಾಟಕದ ಪ್ರತಿಯು ಲಭಿಸಿದೆ. ಈತನ ಇನ್ನೊಂದು ಕೃತಿಯಾದ **ನಾಟ್ಯದರ್ಪಣ**ದಲ್ಲಿ **ರೋಹಿಣೀ ಮೃಗಾಂಕ** ಮತ್ತು **ವನಮಾಲಾ** ಎಂಬವುಗಳ ಉಲ್ಲೇಖವು ದೊರೆಯುತ್ತದೆ. **ನಿರ್ಭಯ- ಭೀಮ-ವ್ಯಾಯೋಗವು** ಒಂದೇ ಅಂಕಿನ ನಾಟಕವಾಗಿದೆ. ಇದರಲ್ಲಿ ಭೀಮನಿಂದಾದ ಬಕನ ವಧೆಯ ಕಥೆಯಿದೆ. **ನಲವಿಲಾಸವು** ಹತ್ತು ಅಂಕಗಳ ಪ್ರಕರಣವಾಗಿದೆ. ಇದರೊಳಗೆ ನಲದಮಯಂತಿಯರ ಚರಿತ್ರೆಯನ್ನು ಚಿತ್ರಿಸಲಾಗಿದೆ. ಮೂರನೆಯ ನಾಟಕದಲ್ಲಿ ನಾಯಿಕೆಯಾದ ಕೌಮುದಿ ಮತ್ತು ಅವಳ ಪತಿಯಾದ ಮಿತ್ರಾನಂದ ಸೆಟ್ಟಿ ಇವರ ಸಾಹಸಪೂರ್ಣ ಭ್ರಮಣದ ಕಥಾನಕವಿದೆ. ಇದು ಮಾಲತಿಮಾಧವದ ಸರಿ ಜೋಡಿಯಾದ ಕೃತಿಯಾಗಿದೆ.

ಹಸ್ತಿಮಲ್ಲ ಕೃತ (೧೩ನೆಯ ಶತಮಾನ) ನಾಲ್ಕು ನಾಟಕಗಳು ಪ್ರಕಟವಾಗಿವೆ : **ವಿಕ್ರಾಂತಕೌರವ, ಸುಭದ್ರಾ, ಮೈಥಿಲೀಕಲ್ಯಾಣ** ಮತ್ತು **ಅಂಜನಾಪವನಂಜಯ**. ಕವಿಯು ಪ್ರಸ್ತಾವನೆಯಲ್ಲಿ ತನ್ನ ಪರಿಚಯವನ್ನು ಕೊಟ್ಟಿದ್ದಾನೆ. ಅವನು ವತ್ಸಗೋತ್ರೀಯ ಬ್ರಾಹ್ಮಣನಾಗಿದ್ದನು. ಆದರೆ ಅವನ ತಂದೆಯಾದ ಗೋವಿಂದನು ಸಮಂತಭದ್ರನು ರಚಿಸಿದ ದೇವಾಗಮ ಸ್ತೋತ್ರದ(ಅಪ್ತಮೀಮಾಂಸಾ) ಪ್ರಭಾವದಿಂದ ಜೈನಧರ್ಮವನ್ನು ಸ್ವೀಕರಿಸಿದ್ದನು. ಕವಿಯು ತನ್ನ ಕಾಲದ ಪಾಂಡ್ಯ ರಾಜನನ್ನು ಉಲ್ಲೇಖಿಸಿದ್ದಾನೆ. ಆದರೆ ಅವನ ಹೆಸರನ್ನು ಕೊಟ್ಟಿಲ್ಲ. ಅವನು ಕರ್ನಾಟಕವನ್ನು ಆಳುತ್ತಿದ್ದನೆಂದು ಮಾತ್ರ ಹೇಳಿದ್ದಾನೆ. ಮೊದಲಿನ ಎರಡು ನಾಟಕಗಳು ಮಹಾಭಾರತದ ಮೇಲೆಯೂ ಇನ್ನುಳಿದ ಎರಡು ನಾಟಗಗಳು ರಾಮಾಯಣವನ್ನೂ ಅವಲಂಬಿಸಿವೆ. ಈ ಕಥಾನಕಗಳು ಗುಣಭದ್ರನ ಉತ್ತರ ಪುರಾಣವನ್ನು ಅನುಸರಿಸು

ತ್ತನೆ. ಹಸ್ತಿಮಲ್ಲನ **ಉದಯನ ರಾಜ, ಭರತರಾಜ, ಅರ್ಜುನನರಾಜ, ಮೇಘೇಶ್ವರ** ಎಂಬ ಮತ್ತೆ ನಾಲ್ಕು ನಾಟಕಗಳ ಉಲ್ಲೇಖವು ದೊರೆಯುತ್ತದೆ.

ಜಿನಪ್ರಭ ಸೂರಿಯ ಶಿಷ್ಯನಾದ ರಾಮಭದ್ರನಿಂದ (೧೩ ನೆಯ ಶತಮಾನ) ರಚಿತವಾದ **ಪ್ರಬುದ್ಧರೌಹಿಣೇಯ** ಎಂಬುದು ಆರು ಅಂಕಗಳುಳ್ಳ ನಾಟಕವು. ಇದರಲ್ಲಿ ನಾಯಕನ ಚೌರ ವೃತ್ತಿಯನ್ನು ಚಿತ್ರಿಸಿದೆ. ಕೊನೆಗೆ ಆತನು ಉಪದೇಶವನ್ನು ಹೊಂದಿ, ಶಿಕ್ಷೆಯನ್ನು ಪಡೆಯುವನು. ಈ ನಾಟಕವನ್ನು ಚಾಹಮಾನ (ಚೌಹಾನ) ರಾಜನಾದ ಅಮರಸಿಂಹನು ನಿರ್ಮಿಸಿದ ಋಷಭ ಜಿನಾಲಯದಲ್ಲಿ ಉತ್ಸವದ ಕಾಲಕ್ಕೆ ಅಭಿನಯಿಸಿದ್ದರು.

ಯಶಃಪಾಲ ಕೃತ **ಮೋಹರಾಜ-ಪರಾಜಯದಲ್ಲಿ** (೧೩ ನೆಯ ಶತಮಾನ) ಭಾವಾತ್ಮಕ ಪಾತ್ರಗಳಲ್ಲದೆ ರಾಜಾ ಕುಮಾರಪಾಲನೂ ಬರುತ್ತಾನೆ. ರಾಜನು ಧರ್ಮಪರಿವರ್ತನೆಯಿಂದ ಜೈನಧರ್ಮವನ್ನು ಸ್ವೀಕರಿಸುತ್ತಾನೆ, ಕೃಪಾಸುಂದರಿಯೊಡನೆ ವಿವಾಹಿತನಾಗುತ್ತಾನೆ, ರಾಜ್ಯದಲ್ಲಿ ಅಹಿಂಸೆಯ ಘೋಷಣೆಯನ್ನು ಮಾಡುತ್ತಾನೆ, ಹಾಗೆಯೇ ನಿಸ್ಸಂತಾನರಾಗಿ ಮರಣ ಹೊಂದಿದ ವ್ಯಕ್ತಿಗಳ ಧನವನ್ನು ಅಪಹರಿಸುವುದರ ನಿಷೇಧ ಗೈಯುತ್ತಾನೆ. ರಾಜನ ವಿವಾಹವನ್ನು ಮಾಡುವ ಪುರೋಹಿತನು ಹೇಮಚಂದ್ರನಾಗಿದ್ದಾನೆ. ಈ ನಾಟಕವನ್ನು ಶಾಕಂಬರಿಯ ಚೌಹಾನ ರಾಜನಾದ ಅಜಯದೇವನ ಸಮಯದಲ್ಲಿ ರಚಿಸಲಾಯಿತು.

ವೀರಸೂರಿಯ ಶಿಷ್ಯನಾದ ಜಯಸಿಂಹ ಸೂರಿಯು ರಚಿಸಿದ **ಹಮ್ಮೀರಮದ ಮರ್ದನವು** ಐದು ಅಂಕಗಳ ನಾಟಕವಾಗಿದೆ. ಇದರಲ್ಲಿ ವೀರಧವಲ ರಾಜನಿಂದ ಮ್ಲೇಚ್ಛ ರಾಜನಾದ ಹಮ್ಮೀರನ (ಅಮೀರ-ಶಿಕಾರ-ಸುಲ್ತಾನ ಸಮಸುದ್ದೀನಿಯಾ) ಪರಾಜಯದ ವರ್ಣನೆಯಿದೆ. ಅವರ ಜೊತೆಯಲ್ಲಿಯೇ ವಸ್ತುಪಾಲ ಮತ್ತು ತೇಜಪಾಲ ಮಂತ್ರಿಗಳ ಚರಿತ್ರೆಯ ವರ್ಣನೆಯೂ ಇದೆ ಇದರಲ್ಲಿ ರಾಜನೀತಿಯ ಘಟನಾಚಕ್ರವು ಮುದ್ರಾರಾಕ್ಷಸದಂತೆ ಇದೆ. ಇದರ ಒಂದು ಹಸ್ತಲಿಖಿತ ಪ್ರತಿಯು ವಿ. ಸಂ. ೧೨೮೬ ರಲ್ಲಿ ಸಿದ್ಧಗೊಳಿಸಿದ್ದು ದೊರೆತಿದೆ ಆದರಿಂದ ಇದರ ರಚನಾಕಾಲವು ಇದಕ್ಕಿಂತ ಸ್ವಲ್ಪ ಮುಂಚಿನದೆಂದು ಸಿದ್ಧವಾಗುತ್ತದೆ.

ಪದ್ಮಚಂದ್ರನ ಶಿಷ್ಯನಾದ ಯಶಶ್ಚಂದ್ರನು ರಚಿಸಿದ **ಮುದ್ರಿತ-ಕುಮುದ ಚಂದ್ರ** ನಾಟಕದಲ್ಲಿ ಐದು ಅಂಕಗಳಿವೆ ಇದರಲ್ಲಿ ಅಣಹಿಲಪುರದೊಳಗೆ ಚಾಲುಕ್ಯ ಜಯಸಿಂಹನ ಸಭೆಯಲ್ಲಿ (ವಿ.ಸಂ. ೧೧೮೧) ಶ್ವೇತಾಂಬರಾಚಾರ್ಯನಾದ ದೇವಸೂರಿ ಮತ್ತು ದಿಗಂಬರಾಚಾರ್ಯ ಕುಮುದಚಂದ್ರರ ಮಧ್ಯದಲ್ಲಿ ಶಾಸ್ತ್ರಾರ್ಥದ ಬಗ್ಗೆ ನಡೆದ ವಿವಾದದ ವರ್ಣನೆಯು ಬಂದಿದೆ ವಾದದ ಕೊನೆಯಲ್ಲಿ ಕುಮುದಚಂದ್ರನ ಮುಖವು ಮುದ್ರಿತವಾಯಿತು. ಇದರ ರಚನಾ ಕಾಲವು ನಿಶ್ಚಿತವಿಲ್ಲ. ಬಹುತರ ಲಘು ಪಟ್ಟಾವಲಿಯಲ್ಲಿ (ಪಟ್ಟಾವಲೀ ಸಮುಚ್ಚಯ ಪು. ೨೦೮) ಉಲ್ಲೇಖಗೊಂಡ ಪದ್ಮಚಂದ್ರನೇ ಈತನ ಗುರುವಾಗಿದ್ದಾನೆ. ಇವನ ಕಾಲವು ಸುಮಾರು ೧೮-೧೫ ನೆಯ ಶತಮಾನ

ವೆಂದಾಗಿದೆ.

ಮುನಿಸುಂದರರ ಶಿಷ್ಯನಾದ ರತ್ನಶೇಖರ ಸೂರಿಯು ರಚಿಸಿದ ಪ್ರಬೋಧ ಚಂದ್ರೋದಯ ನಾಟಕದಲ್ಲಿ ಭಾವಾತ್ಮಕ ಪಾತ್ರಗಳನ್ನು ಚಿತ್ರಿಸಲಾಗಿದೆ. ಇದು ಇದೇ ಹೆಸರಿನ ಕೃಷ್ಣಮಿಶ್ರ ರಚಿತ ನಾಟಕದ (೧೧ ನೆಯ ಶತಮಾನ) ಅನುಕರಣವೆಂದು ಕಂಡುಬರುತ್ತದೆ. ಇದರಲ್ಲಿ ಪ್ರಬೋಧ, ವಿದ್ಯಾ, ವಿವೇಕ ಮೊದಲಾದ ಹೆಸರಿನ ಪಾತ್ರಗಳನ್ನು ರೂಪಿಸಲಾಗಿದೆ.

ಮೇಘಪ್ರಭಾಚಾರ್ಯ ಕೃತ ಧರ್ಮಾಭ್ಯುದಯವು ಸ್ವತಃ ಲೇಖಕನೇ ಹೇಳುವಂತೆ ಛಾಯಾನಾಟ್ಯ ಪ್ರಬಂಧವಾಗಿದೆ. ಇದನ್ನು ಪಾರ್ಶ್ವನಾಥ ಜಿನಾಲಯದ ಮಹೋತ್ಸವ ಸಮಯದಲ್ಲಿ ಅಭಿನಯಿಸಲಾಗಿತ್ತು. ಇದರಲ್ಲಿ ದರ್ಶನಭದ್ರ ಮುನಿಯ ವೃತ್ತಾಂತವನ್ನು ಚಿತ್ರಿಸಲಾಗಿದೆ. ಇದರ ಅನುವಾದವು ಜರ್ಮನ್ ಭಾಷೆಯಲ್ಲಿಯೂ ಆಗಿದೆ.

ಹರಿಭದ್ರನ ಶಿಷ್ಯನಾದ ಬಾಲಚಂದ್ರನು ರಚಿಸಿದ ಕರುಣಾವಜ್ರಾಯುಧ ನಾಟಕದಲ್ಲಿ ವಜ್ರಾಯುಧ ನೃಪನಿಂದ ಗರುಡನಿಗೆ ತನ್ನ ಮಾಂಸವನ್ನು ನೀಡಲು ಹಚ್ಚಿ, ಕಪೋತವನ್ನು ರಕ್ಷಿಸಿದ ಸನ್ನಿವೇಶವು ಚಿತ್ರಿತವಾಗಿದೆ. ಇದು ಹಿಂದೂ ಪುರಾಣಗಳಲ್ಲಿ ಶಿಬಿಚಕ್ರವರ್ತಿಯು ತನ್ನ ಮಾಂಸವನ್ನಿತ್ತು ಪಾರಿವಾಳವನ್ನು ರಕ್ಷಿಸಿದ ಕಥೆಯನ್ನು ಹೋಲುತ್ತದೆ.

### ಸಾಹಿತ್ಯ-ಶಾಸ್ತ್ರ :—

ವ್ಯಾಕರಣ, ಛಂದಸ್ಸು ಮತ್ತು ಕೋಶಗಳು ಸಾಹಿತ್ಯಕ್ಕೆ ಅನುಷಂಗಿಕ ಶಾಸ್ತ್ರಗಳಾಗಿವೆ. ಜೈನ ಪರಂಪರೆಯಲ್ಲಿ ಈ ಶಾಸ್ತ್ರಗಳನ್ನು ಕುರಿತು ಮಹತ್ವಪೂರ್ಣ ಕೃತಿಗಳು ನಿರ್ಮಾಣವಾದುದು ಕಂಡುಬರುತ್ತದೆ.

### ವ್ಯಾಕರಣ-ಪ್ರಾಕೃತ :—

ಮಹರ್ಷಿ ಪತಂಜಲಿಯು ತನ್ನ ಮಹಾಭಾಷ್ಯದಲ್ಲಿ ಒಂದು ಪ್ರಶ್ನೆಯನ್ನು ಎತ್ತಿದ್ದಾನೆ. ಯಾವಾಗ ಜನತೆಗೆ ಪ್ರಚಲಿತ ಭಾಷೆಯ ಜ್ಞಾನವು ಜನತೆಯಿಂದಲೇ ಸ್ವತಃ ಲಭಿಸುತ್ತದೆಯೋ ಆಗ ಅವರಿಗಾಗಿ ಶಬ್ದಾನುಶಾಸನವನ್ನು ಬರೆಯುವ ಆವಶ್ಯಕತೆಯೇನು ? ಈ ಪ್ರಶ್ನೆಗೆ ಉತ್ತರವೆಂದು ಅವನೇ ಹೇಳಿದ್ದಾನೆ. ಶಬ್ದಾನುಶಾಸನವಿಲ್ಲದೆ ಶಬ್ದ ಮತ್ತು ಅಪಶಬ್ದಗಳ ಭೇದವು ಸ್ಪಷ್ಟವಾಗಿ ತಿಳಿದು ಬರುವುದಿಲ್ಲ. ಅದಕ್ಕಾಗಿ ಶಬ್ದಾನುಶಾಸನ ಶಾಸ್ತ್ರದ ಆವಶ್ಯಕತೆಯು ಇದೆ. ಜೈನ ಸಾಹಿತ್ಯದ ನಿರ್ಮಾಣವು ಪ್ರಾರಂಭದಲ್ಲಿ ಜನ ಭಾಷೆಯಲ್ಲಿಯೇ ಆಯಿತು. ಅದರಿಂದ ಬಹು ಕಾಲದವರೆಗೆ ಅದನ್ನು ಒಂದು ಕಟ್ಟು-ನಿಟ್ಟಿನಲ್ಲಿ ಇಡಲಿಕ್ಕೆಂದು ಸ್ವಾಭಾವಿಕವಾಗಿ ಯಾವ ವ್ಯಾಕರಣದ ಅವಶ್ಯಕತೆಯೂ ಉಂಟಾಗಲಿಲ್ಲ. ಜನತೆಯ ಭಾಷೆಯಲ್ಲಿ ಪ್ರಯೋಗಗಳು ಹೇಗೆ

ಪ್ರಚಲಿತವಿದ್ದುವೋ ಅದರಂತೆಯೇ ಸಾಹಿತ್ಯದಲ್ಲಿ ವಚನ-ಪ್ರಯೋಗಗಳು ಆಗುತ್ತ ಬಂದುವು. ಮೆಲ್ಲ ಮೆಲ್ಲನೆ ಒಂದೆಡೆಗೆ ಸಾಹಿತ್ಯವು ಬಹಳಷ್ಟು ನಿರ್ಮಾಣವಾಗುತ್ತ ನಡೆಯಿತು. ಇನ್ನೊಂದೆಡೆಗೆ ನಾನಾ ದೇಶಗಳಲ್ಲಿ ಜನರ ಭಾಷೆಯಲ್ಲಿ ಪ್ರಯೋಗಗಳ ರೀತಿಯು ಭಿನ್ನ ಭಿನ್ನವಾಗುತ್ತ ನಡೆಯಿತು. ಅಲ್ಲದೆ ಕಾಲಾನುಕ್ರಮದಿಂದಲೂ ಪ್ರಯೋಗಗಳಲ್ಲಿ ವ್ಯತ್ಯಾಸವು ಕಂಡು ಬರಹತ್ತಿತು. ಆಗ ಅದನ್ನು ಒಂದು ಕಟ್ಟುನಿಟ್ಟಿನಲ್ಲಿ ರೂಪಿಸುವ ಅವಶ್ಯಕತೆಯು ಉಂಟಾಯಿತು.

ಪ್ರಾಕೃತದ ಉಪಲಬ್ಧ ವ್ಯಾಕರಣಗಳಲ್ಲಿ ಚಂಡನು (ಚಂದ್ರ) ರಚಿಸಿದ ಪ್ರಾಕೃತ-ಲಕ್ಷಣವು ಎಲ್ಲಕ್ಕೂ ಪ್ರಾಚೀನವೆಂದು ಸಿದ್ಧವಾಗುತ್ತದೆ. ಇದನ್ನು ರಾಡಲ್ಫ ಹಾರ್ನಲೆ ಸಾಹೇಬನು ಸಂಪಾದಿಸಿ ಬಿಬ್ಲಿಓಥಿಕಾ-ಇಂಡಿಕಾದಲ್ಲಿ ೧೮೮೦ ಇಸ್ವಿಯಲ್ಲಿ ಪ್ರಕಟಿಸಿದ್ದನು. ಅವನು ಇದು ಒಬ್ಬ ಜೈನ ಲೇಖಕನ ಕೃತಿಯೆಂದು ಸಿದ್ಧಮಾಡಿದ್ದನು. ಆದರೂ ಕೆಲವೊಂದು ಜನರು ಇದರ ಸೂತ್ರಗಳನ್ನು ವಾಲ್ಮೀಕಿಯು ರಚಿಸಿದ್ದಾನೆಂದು ಭಾವಿಸುತ್ತಾರೆ. ಇದು ಸ್ಪಷ್ಟವಾಗಿ ಅಸಂಭವವಾಗಿದೆ. ಗ್ರಂಥದ ಆದಿಯಲ್ಲಿ ವೀರ (ಮಹಾವೀರ) ತೀರ್ಥಂಕರರನ್ನು ವಂದಿಸಲಾಗಿದೆ. ವೃತ್ತಿಗತ ಉದಾಹರಣಗಳಲ್ಲಿ ಅರ್ಹಂತ್ (ಸೂ. ೪೬ ಮತ್ತು ೨೪), ಜಿನವರ (ಸೂ. ೪೮), ಎಂಬವುಗಳ ಉಲ್ಲೇಖವು ಬಂದಿದೆ. ಇವುಗಳಿಂದ ಇದು ನಿಃಸಂದೇಹವಾಗಿ ಜೈನ ಕೃತಿಯೆಂದು ಸಿದ್ಧವಾಗುತ್ತದೆ. ಗ್ರಂಥದ ಸೂತ್ರಕಾರ ಹಾಗೂ ವೃತ್ತಿಕಾರರು ಬೇರೆ ಬೇರೆಯೆಂದು ತಿಳಿಯಲಿಕ್ಕೆ ಯಾವ ಆಧಾರವೂ ಇಲ್ಲ. ಮಂಗಲಾಚರಣದಲ್ಲಿ ವೃದ್ಧಮತದ ಆಶ್ರಯವನ್ನು ಹೊಂದಿ ಈ ಪ್ರಾಕೃತ ವ್ಯಾಕರಣವನ್ನು ರಚಿಸಿದ ಸೂಚನೆಯು ಇದೆ. ಇದರಿಂದ ಸೂತ್ರಕಾರ ಮತ್ತು ವೃತ್ತಿಕಾರರು ಭಿನ್ನ ಭಿನ್ನವೆಂದು ತಿಳಿಯುವುದು ಸಂಪೂರ್ಣ ನಿರಾಧಾರವೆನಿಸುತ್ತದೆ. ಆದರೆ ಇದರಿಂದ ತೀರ ಹೆಚ್ಚೆಂದರೆ ಇಷ್ಟು ಮಾತ್ರ ಅಭಿಪ್ರಾಯವು ವ್ಯಕ್ತವಾಗುತ್ತದೆ:—ಪ್ರಸ್ತುತ ರಚನೆಯ ಸಮಯದಲ್ಲಿಯೂ ಸೂತ್ರಕಾರನ ಎದುರಿನಲ್ಲಿ ಯಾವುದೋ ಪ್ರಾಕೃತ ವ್ಯಾಕರಣ ಅಥವಾ ವ್ಯಾಕರಣಾತ್ಮಕ ಮತ ಮತಾಂತರಗಳಿದ್ದುವು, ಅವುಗಳಲ್ಲಿಯೇ ಕರ್ತೃವು ಕೆಲವೊಂದು ನಿಯಮಗಳಲ್ಲಿ ಪ್ರಾಚೀನತಮ ಪ್ರಣಾಲಿಯನ್ನು ರಕ್ಷಿಸುವ ಪ್ರಯತ್ನ ಮಾಡಿದನು.

ಅಂದರೂ ಪ್ರಾಕೃತ-ಲಕ್ಷಣದ ರಚನಾ ಕಾಲದ ಸಂಬಂಧದಲ್ಲಿ ಯಾವ ಪ್ರತ್ಯಕ್ಷ ಪ್ರಮಾಣಗಳೂ ಉಪಲಬ್ಧವಿಲ್ಲ. ಆದರೂ ಗ್ರಂಥದ ಅಂತಃ ಪರೀಕ್ಷಣದಿಂದ ಅದರ ವಿಷಯದಲ್ಲಿ ಕೆಲವೊಂದು ಅನುಮಾನಗಳನ್ನು ಮಾಡಲಾಗುತ್ತದೆ. ಇದರಲ್ಲಿ ಒಟ್ಟು ೯೯ ಇಲ್ಲವೆ ೧೦೩ ಸೂತ್ರಗಳ ಸಂಖ್ಯೆಯಿದೆ ಇದು ಉಪಲಬ್ಧ ವ್ಯಾಕರಣಗಳಲ್ಲಿ ತೀರ ಸಂಕ್ಷೇಪ ರೂಪದಲ್ಲಿದೆ. ಇದರಲ್ಲಿ ಸಾಮಾನ್ಯ ಪ್ರಾಕೃತದ ನಿರೂಪಣೆಯಿದೆ. ಅದರ ಮೇಲಿಂದ ಅದು ಅಶೋಕನ ಧರ್ಮಲಿಪಿಯ ಭಾಷೆ ಮತ್ತು ವರರುಚಿಯು ತನ್ನ ಪ್ರಾಕೃತಪ್ರಕಾಶದಲ್ಲಿ ವರ್ಣಿಸಿದ ಪ್ರಾಕೃತ ಭಾಷೆ ಇವುಗಳ ನಡುವಿನದೆಂದು ಗೊತ್ತಾಗುತ್ತದೆ. ಅದು ಹೆಚ್ಚಾಗಿ ಅಶ್ವಘೋಷ ಮತ್ತು ಅಲ್ಪಾಂಶ ಭಾಸ ಇವರ

ನಾಟಕಗಳಲ್ಲಿ ಪ್ರಯೋಗಗೊಂಡ ಪ್ರಾಕೃತದ ಕೂಡ ಹೊಂದುವಂತೆ ಕಂಡುಬರುತ್ತದೆ. ಯಾಕೆಂದರೆ ಇದರಲ್ಲಿ ಮಧ್ಯವರ್ತಿ ಅಲ್ಪ ಪ್ರಾಣ ವ್ಯಂಜನಗಳ ಬಾಹುಲ್ಯವನ್ನು ರಕ್ಷಿಸಲಾಗಿದೆ. ಮತ್ತು ಇದರಲ್ಲಿಯೇ ಮೊಟ್ಟಮೊದಲಸಲ ಪ್ರಥಮ ವರ್ಣಗಳಲ್ಲಿ ಕೇವಲ, ಮತ್ತು ಮೂರನೆಯ ವರ್ಣವಾದ ಗ ದ ಲೋಪದ ವಿಧಾನವನ್ನು ಒಂದು ಸೂತ್ರದಲ್ಲಿ ಮಾಡಲಾಗಿದೆ. ಈ ಪ್ರಕಾರ ಚ, ಟ, ತ, ಪ ವರ್ಣಗಳನ್ನು ಶಬ್ದದ ಮಧ್ಯದಲ್ಲಿಯೂ ರಕ್ಷಿಸುವ ಪ್ರಕೃತಿಯನ್ನು ಸೂಚಿಸಲಾಗಿದೆ. ಈ ಆಧಾರಗಳ ಮೇಲಿಂದ ಪ್ರಾಕೃತಲಕ್ಷಣದ ರಚನಾ ಕಾಲವು ಕ್ರಿ.ಶ. ಎರಡನೆಯ ಮೂರನೆಯ ಶತಮಾನ ವೆಂದು ಅನುಮಾನ ಮಾಡುವುದು ಅನುಚಿತವಾಗಲಾರದು.

ಪ್ರಾಕೃತ-ಲಕ್ಷಣವು ನಾಲ್ಕು ಪಾದಗಳಲ್ಲಿ ವಿಭಕ್ತವಾಗಿದೆ. ಪ್ರಾರಂಭದಲ್ಲಿ ಪ್ರಾಕೃತ ಶಬ್ದಗಳ ತದ್ಭವ, ತತ್ಸಮ, ದೇಶಿಯೆಂದು ಮೂರು ರೂಪಗಳನ್ನು ಸೂಚಿಸ ಲಾಗಿದೆ. ಮತ್ತು ಸಂಸ್ಕೃತದಂತೆ ಮೂರು ಲಿಂಗ ಹಾಗೂ ವಿಭಕ್ತಿಗಳ ವಿಧಾನವನ್ನು ಮಾಡಲಾಗಿದೆ. ತರುವಾಯ ಅದರಲ್ಲಿ ಕ್ವಚಿತ್ ವ್ಯತ್ಯಯವುಂಟಾಗುವುದನ್ನು ನಾಲ್ಕ ನೆಯ ಸೂತ್ರದಲ್ಲಿ ಸೂಚಿಸಿದೆ. ಆಮೇಲೆ ಪ್ರಥಮ ಪಾದದ ಕೊನೆಯ ಮೂವತ್ತೈದ ನೆಯ ಸೂತ್ರದವರೆಗೆ ಸಂಜ್ಞೆಗಳೂ ಮತ್ತು ಸರ್ವನಾಮಗಳು ಇವುಗಳ ವಿಭಕ್ತಿ ರೂಪಗಳ ವಿಧಾನವನ್ನು ಮಾಡಿದೆ. ಇವುಗಳಲ್ಲಿ ಯದ್ ಮತ್ತು ಇದಮ್‌ಗಳ ಷಷ್ಠಿಯ ರೂಪ 'ಸೆ' ಮತ್ತು 'ಅಹಮ್'ದ ಕರ್ತೃಕಾರಕ 'ಹಉಂ' ಧ್ಯಾನ ಕೊಡಲು ಯೋಗ್ಯ ವಾಗಿವೆ. 'ಹಉಂ' ಅಪಭ್ರಂಶ ಭಾಷೆಯ ವಿಶೇಷ ರೂಪವೆಂದು ನಾವು ಮನ್ನಿಸು ತ್ತೇವಷ್ಟೆ; ಆದರೆ ಸೂತ್ರಕಾರನ ಸಮಯದಲ್ಲಿ ಅದರ ಪ್ರಯೋಗವಂತೂ ಪ್ರಚಲಿತ ವಾಗಿತ್ತು. ಅಂದರೂ ಅಲ್ಲಿಯವರೆಗೆ ಅಪಭ್ರಂಶದ ವಿಶೇಷ ಲಕ್ಷಣವೆಂದು ಅದಾಗಿರಲಿಲ್ಲ. ದ್ವಿತೀಯ ಪಾದದ ೨೯ ಸೂತ್ರಗಳಲ್ಲಿ ಪ್ರಾಕೃತದಲ್ಲಿಯ ಸ್ವರ-ಪರಿವರ್ತನ, ಶಬ್ದಾದೇಶ ಮತ್ತು ಅವ್ಯಯಗಳ ವರ್ಣನೆಯನ್ನು ಮಾಡಲಾಗಿದೆ. ಇಲ್ಲಿ 'ಗೋ'ದ ಸ್ಥಳದಲ್ಲಿ 'ಗಾವೀ' ಆದೇಶ ಮತ್ತು ಪೂರ್ವಕಾಲಿಕ ರೂಪುಗಳಿಗಾಗಿ ಕೇವಲ ತು, ತ್ವಾ, ಚ್ಚ, ಟ್ಟ, ತು, ತೂಣ. ಓ ಮತ್ತು ಪ್ಪಿ ವಿಭಕ್ತಿಗಳ ವಿಧಾನಮಾಡಲಾಗಿದೆ. ದೂಣ, ಊಣ ಮತ್ತು ಯ ಗಳ ನಿರ್ದೇಶವು ಇಲ್ಲಿ ಇಲ್ಲ. ಮೂರನೆಯ ಪಾದದ ೩೫ ಸೂತ್ರಗಳಲ್ಲಿ ವ್ಯಂಜನಗಳ ವಿಪರಿವರ್ತನಗಳ ವಿಧಾನವಿದೆ. ಇದರಲ್ಲಿ ಲಕ್ಷ್ಯ ಪೂರೈಸುವ ನಿಯಮವು ಇದಾಗಿದೆ:— ಪ್ರಥಮ ವರ್ಣದ ಸ್ಥಾನದಲ್ಲಿ ಮೂರನೆಯ ವರ್ಣದ ಆದೇಶವಾಗುವಿಕೆ. ಉದಾ. ಏಕಂ = ಏಗಂ, ಪಿಶಾಚೀ = ಪಿಸಾಜೀ ಕೃತಂ = ಕದಂ, ಪ್ರತಿಸಿದ್ಧಂ = ಪದಿ ಸಿದ್ಧಂ. ಪಾದದ ಕೊನೆಯ ಸೂತ್ರದಲ್ಲಿ ಶಿಷ್ಟಪ್ರಯೋಗಾದ್ ವ್ಯವಸ್ಥಾ 'ಅರ್ಥಾತ್ ಉಳಿದ ವ್ಯವಸ್ಥೆಯು ಸಜ್ಜನರ ಪ್ರಯೋಗಕ್ಕೆ ಅನುಸರಿಸಿ ಇರುತ್ತವೆಂದು ತಿಳಿಯ ಬೇಕೆಂದು ಹೇಳಿದೆ. ಈ ಪಾದದ ಕೊನೆಯಲ್ಲಿ ಸೂತ್ರಗಳ ಸಂಖ್ಯೆಯು ೯೯ ಪೂರ್ಣವಾಗಿ ಹೋಗುತ್ತದೆ. ಹಾರ್ನಲೆ ಸಾಹೇಬರು ನಿರೀಕ್ಷಿಸಿದ ಒಂದು ಪ್ರಾಚೀನ ಪ್ರತಿಯಲ್ಲಿ ಸೂತ್ರಗಳ ಸಂಖ್ಯೆಯು ೯೯ ಎಂದೇ ಸೂಚನೆಯು ದೊರೆಯುತ್ತದೆ. ಮೂಲ ವ್ಯಾಕ

ರಣವು ಇಲ್ಲಿಯೇ ಸಮಾಪ್ತವಾಗಿರುವ ಸಂಭವವೂ ಇದೆ. ಆದರೆ ಅನ್ಯ ಪ್ರತಿಗಳಲ್ಲಿ ಳ ಸೂತ್ರಾತ್ಮಕ ಚತುರ್ಥ ಪಾದವೂ ದೊರೆಯುತ್ತದೆ. ಆದರೆ ಒಂದೊಂದು ಸೂತ್ರದಲ್ಲಿ ಕ್ರಮವಾಗಿ ಅಪಭ್ರಂಶದ ಲಕ್ಷಣ, ಅಧೋರೇಫದ ಲೋಪವಾಗದಿರುವಿಕೆ. ಪೈಶಾಚಿಯಲ್ಲಿ ರ್ ಮತ್ತು ನ್ ಗಳ ಸ್ಥಾನದಲ್ಲಿ ಲ್ ಮತ್ತು ನ್ ಗಳ ಆದೇಶ, ಮಾಗಧಿಯಲ್ಲಿ ರ್ ಮತ್ತು ಸ್ ದ ಸ್ಥಾನದಲ್ಲಿ ತ್ ಮತ್ತು ಶ್‌ಗಳ ಆದೇಶ ಹಾಗೂ ಶೌರಸೇನಿಯಲ್ಲಿ ತ್ ದ ಸ್ಥಾನದಲ್ಲಿ ವಿಕಲ್ಪದಿಂದ ದ್‌ದ ಆದೇಶಗಳನ್ನು ಹೇಳಲಾಗಿದೆ. ಪ್ರಾಕೃತ ಲಕ್ಷಣದ ಪೂರ್ವೋಕ್ತ ಸ್ವರೂಪವು ನಿಶ್ಚಯವಾಗಿ ಅದರ ವಿಸ್ತಾರ, ರಚನಾ ಮತ್ತು ಭಾಷಾ ಸ್ವರೂಪದ ದೃಷ್ಟಿಯಿಂದ ಅದರ ಉಪಲಬ್ಧ ಸಮಸ್ತ ವ್ಯಾಕರಣದಲ್ಲಿ ಪ್ರಾಚೀನತಮ ವೆಂದು ಸಿದ್ಧವಾಗುತ್ತದೆ. ಈ ವ್ಯಾಕರಣದ ಪ್ರಭಾವವು ಮುಂಬರುವ ಎಲ್ಲ ಪ್ರಾಕೃತ ವ್ಯಾಕರಣಗಳ ಮೇಲೆ ಬಹಳಷ್ಟು ಆಗಿದೆ. ಮತ್ತು ರಚನಾಶೈಲಿ ಹಾಗೂ ವಿಷಯಾನು ಕ್ರಮದಲ್ಲಿ ಅವು ಇದನ್ನೇ ಅನುಕರಣ ಮಾಡಿವೆ. ಚಂಡನು ಪ್ರಾಕೃತ ವ್ಯಾಕಣಕಾರರಿ ಗಾಗಿ ಒಂದು ಆದರ್ಶವನ್ನು ನಿರ್ಮಿಸಿದನು. ವರರುಚಿ, ಹೇಮಚಂದ್ರ ಮೊದಲಾದ ವ್ಯಾಕರಣಕಾರರು ಸಂಸ್ಕೃತ ಭಾಷೆಯಲ್ಲಿ ಪ್ರಾಕೃತ ವ್ಯಾಕರಣವನ್ನು ಬರೆದರು. ಅವರೆಲ್ಲ ಪ್ರಾರಂಭದಲ್ಲಿ ಪ್ರಾಕೃತದ ಸಾಮಾನ್ಯ ಲಕ್ಷಣವನ್ನು ಕೊಟ್ಟಿದ್ದಾರೆ. ಕೊನೆ ಯಲ್ಲಿ ಶೌರಸೇನಿಯೇ ಮೊದಲಾದ ವಿಶೇಷ ಪ್ರಾಕೃತಗಳ ಒಂದೊಂದರ ವಿಶೇಷ ಲಕ್ಷಣಗಳನ್ನು ಹೇಳಿದ್ದಾರೆ. ಇದೆಲ್ಲ ಚಂಡನ ಅನುಕರಣವೇ ಆಗಿದೆ. ಹೇಮಚಂದ್ರ ನಂತೂ ಚಂಡನನ್ನೇ ಅನುಸರಿಸಿ, ತನ್ನ ವ್ಯಾಕರಣವನ್ನು ನಾಲ್ಕು ಪಾದಗಳಲ್ಲಿಯೇ ವಿಭಜಿಸಿದ್ದಾನೆ. ಮತ್ತು ಚೂಲಿಕಾ, ಪೈಶಾಚಿಗಳನ್ನು ಬಿಟ್ಟು, ಉಳಿದ ಅವೇ ನಾಲ್ಕು ಪ್ರಾಕೃತಗಳ ವ್ಯಾಖ್ಯಾನವನ್ನು ಮಾಡಿದ್ದಾನೆ. ಯಾವುದನ್ನು ಚಂಡನು ಮಾಡಿದ್ದಾ ನೆಯೋ ಅದನ್ನೇ ಇವನು ಮಾಡಿದನು. ಅವನಂತೆ ಇವನು ಸ್ವತಃ ಸೂತ್ರಗಳ ಮೇಲೆ ವೃತ್ತಿಯನ್ನು ಸಹ ಬರೆದನು.

ಪ್ರಾಕೃತ ಲಕ್ಷಣದ ತರುವಾಯ ಬಹುಕಾಲದ ವರೆಗೆ ಯಾವ ಜೈನ ಪಾಕೃತ ವ್ಯಾಕರಣಕಾರನೂ ಉದಿಸಲಿಲ್ಲ. ಸಮಂತಭದ್ರ ಕೃತ ಪ್ರಾಕೃತ ವ್ಯಾಕರಣದ ಉಲ್ಲೇ ಖವು ದೊರೆಯುತ್ತದೆ. ಆದರೆ ಈ ಗ್ರಂಥವೂ ಇಲ್ಲಿಯವರೆಗೆ ದೊರೆತಿಲ್ಲ. ಸಮಂತ ಭದ್ರನ ಒಂದು ವ್ಯಾಕರಣಾತ್ಮಕ ಕೃತಿಯ ಉಲ್ಲೇಖವು ದೇವನಂದಿ ಪೂಜ್ಯಪಾದ ಕೃತ ಜೈನೇಂದ್ರ ವ್ಯಾಕರಣದಲ್ಲಿಯೂ ಸಹ ಕಂಡುಬರುತ್ತದೆ. ಅದರಿಂದ ಅವನ ಯಾವು ದೋ ಒಂದು ಸಂಸ್ಕೃತ ವ್ಯಾಕರಣದ ಅಸ್ತಿತ್ವವು ಸಿದ್ಧವಾಗುತ್ತದೆ. ಸಮಂತಭದ್ರನು ಅಂಥ ಯಾವುದಾದರೊಂದು ವ್ಯಾಕರಣವನ್ನು ಬರೆದದ್ದೇ ಆಗಿದ್ದರೆ ಅದರಲ್ಲಿ ಹೇಮ ಚಂದ್ರನ ಕೃತಿಯಲ್ಲಿ ಕಂಡುಬರುವಂತೆ ಕ್ರಮವಾಗಿ ಪ್ರಾಕೃತ ಮತ್ತು ಸಂಸ್ಕೃತ ಎರಡೂ ಭಾಷೆಗಳ ಅನುಶಾಸನವನ್ನು ಮಾಡಿರಲೇಬೇಕೆಂದು ಹೇಳಿದರೆ ಆಶ್ಚರ್ಯ ಪಡುವ ಕಾರಣವಿಲ್ಲ.

ಹೇಮಚಂದ್ರನು (೧೨ನೆಯ ಶತಮಾನ) ಶಬ್ದಾನುಶಾಸನವೆಂಬ ಹೆಸರಿನ

ವ್ಯಾಕರಣವನ್ನು ಬರೆದನು. ಅದರಲ್ಲಿ ಮೊದಲಿನ ಏಳು ಅಧ್ಯಾಯಗಳಲ್ಲಿ ಸಂಸ್ಕೃತ ಹಾಗೂ ಎಂಟನೆಯ ಅಧ್ಯಾಯದಲ್ಲಿ ಪ್ರಾಕೃತ ವ್ಯಾಕರಣವನ್ನು ನಿರೂಪಿಸಿದ್ದಾನೆ. ಈ ವ್ಯಾಕರಣವೂ ಉಪಲಬ್ಧ ಸಮಸ್ತ ಪ್ರಾಕೃತ ವ್ಯಾಕರಣಗಳಲ್ಲಿ ಎಲ್ಲಕ್ಕೂ ಹೆಚ್ಚು ಪೂರ್ಣ ಮತ್ತು ಸುವ್ಯವಸ್ಥಿತವೆಂದು ಸ್ವೀಕರಿಸಲಾಗುತ್ತದೆ. ಇದರಲ್ಲಿ ನಾಲ್ಕು ಪಾದಗಳಿವೆ. ಪ್ರಥಮ ಪಾದದ ೨೭೧ ಸೂತ್ರಗಳಲ್ಲಿ ಸಂಧಿ, ವ್ಯಂಜನಾಂತ ಶಬ್ದ, ಅನುಸ್ವಾರ, ಲಿಂಗ ವಿಸರ್ಗ, ಸ್ವರ ವ್ಯತ್ಯಯ ಮತ್ತು ವ್ಯಂಜನ ವ್ಯತ್ಯಯ ಇವುಗಳನ್ನು ಕ್ರಮದಿಂದ ನಿರೂಪಿಸಿದ್ದಾನೆ. ದ್ವಿತೀಯ ಪಾದದ ೨೧೮ ಸೂತ್ರಗಳಲ್ಲಿ ಸಂಯುಕ್ತ ವ್ಯಂಜನಗಳ ಪರಿವರ್ತನ, ಸಮೀಕರಣ, ಸ್ವರಭಕ್ತಿ, ವರ್ಣ-ವಿಪರ್ಯಯ, ಶಬ್ದಾದೇಶ ತದ್ಧಿತ, ನಿಪಾತ ಮತ್ತು ಅವ್ಯಯಗಳನ್ನೂ ವಿವರಿಸಿದೆ. ತೃತೀಯ ಪಾದದ ೧೮೨ ಸೂತ್ರಗಳಲ್ಲಿ ಕಾರಕ-ವಿಭಕ್ತಿಗಳು ಹಾಗೂ ಕ್ರಿಯಾ ರಚನೆಗೆ ಸಂಬಂಧಿಸಿದ ನಿಯಮಗಳನ್ನು ಹೇಳಿದೆ. ನಾಲ್ಕನೆಯ ಪಾದದಲ್ಲಿ ೪೪೮ ಸೂತ್ರಗಳು ಇವೆ. ಅವುಗಳಲ್ಲಿ ಮೊದಲನೆಯ ೨೫೯ ಸೂತ್ರಗಳಲ್ಲಿ ಧಾತ್ವಾದೇಶ ಮತ್ತು ಉಳಿದವುಗಳಲ್ಲಿ ಕ್ರಮದಿಂದ ಶೌರಸೇನಿ, ಮಾಗಧೀ, ಪೈಶಾಚೀ, ಚೂಲಿಕಾ ಪೈಶಾಚೀ ಮತ್ತು ಅಪಭ್ರಂಶ ಭಾಷೆಗಳ ವಿಶೇಷ ಲಕ್ಷಣಗಳನ್ನೂ ಹೇಳಲಾಗಿದೆ. ಕೊನೆಯ ಎರಡು ಸೂತ್ರಗಳಲ್ಲಿ ಪ್ರಾಕೃತಗಳ ಉಕ್ತ ಲಕ್ಷಣಗಳಿಗೆ ಕಂಡುಬರುವ ವ್ಯತ್ಯಯಗಳನ್ನೂ ಕೂಡ ಉಲ್ಲೇಖಿಸಿದೆ. ಇಲ್ಲಿ ಯಾವ ಸಂಗತಿಗಳನ್ನು ಹೇಳಿಲ್ಲವೋ ಅವೂ ಸಂಸ್ಕೃತದಂತೆ ಸಿದ್ಧಿಸುತ್ತವೆಂದು ತಿಳಿಯಬೇಕೆಂದು ಸೂಚಿಸಿದೆ. ಸೂತ್ರಗಳ ಹೊರತಾಗಿ, ಅವುಗಳ ಮೇಲಿನ ವೃತ್ತಿಯೂ ಸಹ ಸ್ವತಃ ಹೇಮಚಂದ್ರನೇ ರಚಿಸಿದ್ದೀ ಇದೆ ಅದರ ಮೂಲಕ ಅವನು ಸೂತ್ರಗತ ಲಕ್ಷಣಗಳನ್ನು ಬಹು ವಿಸ್ತಾರ ಪೂರ್ವಕವಾಗಿ, ಉದಾಹರಣೆಗಳನ್ನು ಕೊಟ್ಟು ತಿಳಿಸಿ ಹೇಳಿದ್ದಾನೆ. ಮೊದಲನೆಯ ಪ್ರಾಸ್ತಾವಿಕ ಸೂತ್ರವು ಅಥವಾ ಪ್ರಾಕೃತಮ್‌ದ ವೃತ್ತಿಯು ವಿಶೇಷ ಮಹತ್ವಪೂರ್ಣವಾಗಿದೆ. ಅದರಲ್ಲಿ ಗ್ರಂಥಕಾರನು ಪ್ರಾಕೃತ ಶಬ್ದದ ಉತ್ಪತ್ತಿಯನ್ನು, ಪ್ರಕೃತಿ ಸಂಸ್ಕೃತವಿದೆ ಮತ್ತು ಅದರಿಂದ ಉತ್ಪನ್ನ ಹಾಗೂ ಆಗತವಾದುದು ಪ್ರಾಕೃತವೆಂದು ವಿವರಿಸಿದ್ದಾನೆ. ಪ್ರಾಕೃತ ಶಬ್ದಗಳ ಅನುಶಾಸನವು ಸಂಸ್ಕೃತ ರೂಪಗಳನ್ನೇ ಆದರ್ಶವೆಂದು ಸ್ವೀಕರಿಸಿ ಮುಂದೆ ನಾಗತಕ್ಕದೆಂಬ ಅಭಿಪ್ರಾಯವು ಇಲ್ಲಿ ಸ್ಪಷ್ಟವಾಗಿದೆ. ಅವನು ಇಲ್ಲಿ ಪ್ರಾಕೃತದ ತತ್ಸಮ, ತದ್‌ಭವ ಮತ್ತು ದೇಶೀ ಈ ಮೂರು ಪ್ರಕಾರದ ಶಬ್ದಗಳನ್ನೂ ಸಹ ಸೂಚಿಸಿದ್ದಾನೆ. ಅವುಗಳಲ್ಲಿಯೇ ಸಂಸ್ಕೃತ ಮತ್ತು ದೇಶ್ಯಗಳನ್ನು ಬಿಟ್ಟು ತದ್ಭವ ಶಬ್ದಗಳ ಸಿದ್ಧಿಯನ್ನು ಈ ವ್ಯಾಕರಣದ ಮೂಲಕ ವಿವರಿಸುವ ಪ್ರತಿಜ್ಞೆಯನ್ನು ಮಾಡಿದ್ದಾನೆ. ಅವನು ಮೂರನೆಯ ಸೂತ್ರದಲ್ಲಿ ಮತ್ತು ಅನೇಕ ಸೂತ್ರಗಳ ವೃತ್ತಿಗಳಲ್ಲಿ ಆರ್ಷ ಪ್ರಾಕೃತದ ಉಲ್ಲೇಖವನ್ನು ಮಾಡಿದ್ದಾನೆ; ಅದಕ್ಕೆ ಉದಾಹರಣೆಯನ್ನೂ ಸಹ ಕೊಟ್ಟಿದ್ದಾನೆ. ಆರ್ಷ ಎನ್ನುವಲ್ಲಿ ಅವನ ಅಭಿಪ್ರಾಯವು ಅರ್ಧಮಾಗಧೀ ಪ್ರಾಕೃತವೆಂದಿದೆ. ಇದೇ ಭಾಷೆಯಲ್ಲಿ ಜೈನಾಗಮಗಳು ರೂಪುಗೊಂಡಿವೆ.

ಹೇಮಚಂದ್ರನಿಗಿಂತ ಪೂರ್ವಕಾಲದ ಚಂಡ-ಕೃತ ಪ್ರಾಕೃತ-ಲಕ್ಷಣ ಮತ್ತು ವರರುಚಿಯು ರಚಿಸಿದ ಪ್ರಾಕೃತ-ಪ್ರಕಾಶ ಎಂಬ ಹೆಸರಿನ ವ್ಯಾಕರಣಗಳೊಡನೆ ಹೇಮ ವ್ಯಾಕರಣವನ್ನು ಹೊಂದಿಸಿ ಅವಲೋಕಿಸಿದರೆ ಎರಡರ ರಚನಾ ಶೈಲಿ ಮತ್ತು ವಿಷಯ ಕ್ರಮಗಳು ಬಹುತರ ಒಂದೇ ಎಂದು ಕಂಡುಬರುತ್ತವೆ. ಆದರೆ ಹೇಮ ವ್ಯಾಕರಣದಲ್ಲಿ ಬಹಳಷ್ಟು ಪ್ರಕ್ರಿಯೆಗಳನ್ನು ಅಧಿಕ ವಿಸ್ತಾರವಾಗಿ ಹೇಳಿದೆ. ಅಲ್ಲದೆ ಅವುಗಳಲ್ಲಿ ಅನೇಕ ಹೊಸ ಹೊಸ ವಿಧಾನಗಳನ್ನೂ ಸ್ವೀಕರಿಸಲಾಗಿದೆ, ಅವು ಸ್ವಾಭಾವಿಕವಾಗಿಯೂ ಇವೆ. ಯಾಕಂದರೆ ಹೇಮಚಂದ್ರನ ಸಮ್ಮುಖದಲ್ಲಿ ವರರುಚಿಯ ಅಪೇಕ್ಷೆಯಂತೆ ಸುಮಾರು ಐದಾರು ಶತಮಾನಗಳ ಭಾಷಾತ್ಮಕ ವಿಕಾಸ ಮತ್ತು ಸಾಹಿತ್ಯಗಳು ಉಪ ಸ್ಥಿತವಿದ್ದುವು. ಅವುಗಳನ್ನು ಅವನು ಪೂರ್ಣ ಉಪಯೋಗಿಸಿಕೊಂಡಿದ್ದನು. ಚೂಲಿಕಾ -ಪೈಶಾಚೀ ಮತ್ತು ಅಪಭ್ರಂಶಗಳ ಉಲ್ಲೇಖವನ್ನು ವರರುಚಿಯು ಮಾಡಿಲ್ಲ. ಹೇಮ ಚಂದ್ರನು ಈ ಪ್ರಾಕೃತಗಳ ಲಕ್ಷಣಗಳನ್ನೂ ಸಹ ಹೇಳಿದ್ದಾನೆ. ಹಾಗೆಯೇ ಅಪಭ್ರಂಶ ಭಾಷೆಯ ನಿರೂಪಣೆಯನ್ನು ಕೊನೆಯ ೧೧೮ ಸೂತ್ರಗಳಲ್ಲಿ ಬಹು ವಿಸ್ತಾರದಿಂದ ಮಾಡಿದ್ದಾನೆ. ಇದರಲ್ಲಿ ನಿಯಮಗಳಿಗೆ ಉದಾಹರಣೆಗಳೆಂದು ಅಪಭ್ರಂಶ ಪೂರ್ಣ ಪದ್ಯಗಳನ್ನೇ ಕೊಟ್ಟುದೊಂದು ಹೆಚ್ಚಿನ ಬಹುದೊಡ್ಡ ವಿಶೇಷತೆಯಾಗಿದೆ. ಅವುಗಳಿಂದ ಆ ಕಾಲದ ವರೆಗಿನ ಅಪಭ್ರಂಶ ಸಾಹಿತ್ಯದ ರೂಪರೇಖೆಯನ್ನೂ ಸಹ ಕಂಡುಹಿಡಿ ಯಲು ಬರುತ್ತದೆ.

ಹೇಮಚಂದ್ರನ ತರುವಾಯ ತ್ರಿವಿಕ್ರಮ, ಶ್ರುತಸಾಗರ ಮತ್ತು ಶುಭ ಚಂದ್ರ ರಿಂದ ಬರೆಯಲ್ಪಟ್ಟ ಪ್ರಾಕೃತ–ವ್ಯಾಕರಣಗಳು ಕಂಡುಬರುತ್ತವೆ. ಆದರೆ ಈ ಎಲ್ಲ ಕೃತಿಗಳು ಶೈಲಿ ಮತ್ತು ವಿಷಯಗಳ ದೃಷ್ಟಿಯಿಂದ ಹೇಮಚಂದ್ರನಿಗಿಂತ ಮುಂದಿನ ಹೆಜ್ಜೆಯನ್ನಿಡಲಿಲ್ಲ. ಅಪಭ್ರಂಶದ ನಿರೂಪಣೆಯನ್ನಂತೂ ಅಷ್ಟು ಪೂರ್ಣವಾಗಿ ಇನ್ನಾವನೂ ಮಾಡಲಿಲ್ಲ. ಅಂದರೂ ಉದಾಹರಣೆಗಳ ದೃಷ್ಟಿಯಿಂದ ತ್ರಿವಿಕ್ರಮನು ರಚಿಸಿದ ವ್ಯಾಕರಣದಲ್ಲಿ ಕೆಲವೊಂದು ಮೌಲಿಕತೆಗಳು ಕಂಡುಬರುತ್ತವೆ.

### ವ್ಯಾಕರಣ–ಸಂಸ್ಕೃತ :—

ಜೈನ ಸಾಹಿತ್ಯದಲ್ಲಿ ಉಪಲಬ್ಧ ಸಂಸ್ಕೃತ ವ್ಯಾಕರಣಗಳಲ್ಲಿ ಎಲ್ಲಕ್ಕೂ ಹೆಚ್ಚು ಪ್ರಾಚೀನವಾದುದು ಜೈನೇಂದ್ರ ವ್ಯಾಕರಣವಾಗಿದೆ. ಇದರ ಕರ್ತೃವು ದೇವನಂದಿ ಪೂಜ್ಯಪಾದನು. ಈತನು ಕದಂಬ ವಂಶದ ದುರ್ವಿನೀತನಿಗೆ ಸಮಕಾಲೀನನು. ಅಂತೂ ೫-೬ ನೆಯ ಶತಮಾನದವನೆಂದು ಸಿದ್ಧವಾಗುತ್ತದೆ. ಈ ವ್ಯಾಕರಣವು ಐದು ಅಧ್ಯಾಯ ಗಳಲ್ಲಿ ವಿಭಜಿತವಾಗಿದೆ. ಅದರಿಂದ ಪಂಚಾಧ್ಯಾಯಿಯೆಂದೂ ಇದಕ್ಕೆ ಹೆಸರಿದೆ. ಇದ ರಲ್ಲಿ ಏಕಶೇಷ ಪ್ರಕರಣವು ಆಗದೆ ಇರುವುದರಿಂದ ಕೆಲವೊಂದು ಲೇಖಕರು ಇದನ್ನು ಅನೇಕಶೇಷ ವ್ಯಾಕರಣ ಎಂಬ ಹೆಸರಿನಿಂದಲೂ ಉಲ್ಲೇಖ ಮಾಡಿದ್ದಾರೆ. ಪೂಜ್ಯ ಪಾದ ಕೃತ ಸರ್ವಾರ್ಥಸಿದ್ಧಿ, ಅಕಲಂಕಕೃತ ತತ್ವಾರ್ಥ ರಾಜವಾರ್ತಿಕ ಮತ್ತು ವಿದ್ಯಾ

ನಂದಿ ಕೃತ ಶ್ಲೋಕವಾರ್ತಿಕಗಳಲ್ಲಿ ಈ ವ್ಯಾಕರಣದ ಉಲ್ಲೇಖವು ಕಂಡುಬರುತ್ತದೆ. ಇದರ ಪ್ರತಿಯೊಂದು ಅಧ್ಯಾಯವೂ ನಾಲ್ಕು ಪಾದಗಳಲ್ಲಿ ವಿಭಾಗವಾಗಿದೆ. ಇದರಲ್ಲಿ ಒಟ್ಟು ೩,೦೦೦ ಸೂತ್ರಗಳು ಇವೆ. ಇದರ ರಚನಾ ಶೈಲಿ ಮತ್ತು ವಿಷಯ ಕ್ರಮಗಳು ಪಾಣಿನಿಯ ಅಷ್ಟಾಧ್ಯಾಯಿ ವ್ಯಾಕರಣಕ್ಕೆ ಸಮಾನವಾಗಿಯೇ ಇವೆ. ಯಾವ ಪ್ರಕಾರ ಪಾಣಿನಿಯು **ಪೂರ್ವತ್ರಾಸಿದ್ಧವತ್** ಸೂತ್ರದಿಂದ ತನ್ನ ವ್ಯಾಕರಣವನ್ನು ಸವಾದ-ಸಪ್ತಾಧ್ಯಾಯಿ ಮತ್ತು ತ್ರಿಪಾದಿ ಈ ಎರಡು ಭಾಗಗಳಲ್ಲಿ ವಿಭಾಗಿಸಿದ್ದಾನೆಯೋ, ಅದೇ ಪ್ರಕಾರ ಅದೇ ಸೂತ್ರ (೫-೩-೨೭) ದ ಮುಖಾಂತರ ಈ ವ್ಯಾಕರಣವೂ ಕೂಡ **ಸಾರ್ಧದ್ವಿಪಾದ-ಚತುರಾಧ್ಯಾಯಿ** ಮತ್ತು **ಸಾರ್ಧೈಕಪಾದೀ** ಎಂದು ವಿಭಾಗಿಸಲಾಗಿದೆ. ಆದರೂ ಈ ವ್ಯಾಕರಣದಲ್ಲಿ ತನ್ನದೇ ಆದ ಅನೇಕ ವಿಶೇಷತೆಗಳೂ ನಹ ಇವೆ. ಇದರಲ್ಲಿ ವೈದಿಕೀ ಮತ್ತು ಸ್ವರ ಪ್ರಕ್ರಿಯಾ ಈ ಎರಡು ಪ್ರಕರಣಗಳನ್ನು ಬಿಟ್ಟು ಕೊಡಲಾಗಿದೆ. ಆದರೆ ಪಾಣಿನಿಯ ಸೂತ್ರಗಳಲ್ಲಿ ಯಾವ ಅಪೂರ್ಣತೆಯು ಇತ್ತೋ ಮತ್ತು ಅದರ ಪೂರ್ತಿಯನ್ನು ಕಾತ್ಯಾಯನ ಮತ್ತು ಪತಂಜಲಿ ಇವರು ವಾರ್ತಿಕ ಮತ್ತು ಭಾಷ್ಯಗಳಿಂದ ಮಾಡಲು ಯತ್ನಿಸಿದ್ದರೋ ಅದನ್ನು ಇಲ್ಲಿ ಸೂತ್ರ ಪಾಠದಿಂದ ಮಾಡಿ ಪೂರೈಸಲಾಗಿದೆ. ಅನೇಕ ಸಂಜ್ಞೆಗಳನ್ನೂ ನಹ ಹೊಸದಾಗಿ ಪ್ರಸ್ಥಾಪಿಸಲಾಗಿದೆ. ಪಾಣಿನೀಯ ವ್ಯಾಕರಣದ ಪ್ರಥಮಾ, ದ್ವಿತೀಯಾ ಮೊದಲಾದ ಕಾರಕ-ವಿಭಕ್ತಿಗಳ ಸಲುವಾಗಿ ಇಲ್ಲಿ ವಾ, ಇಪ್ ಮೊದಲಾದವುಗಳಿವೆ. ನಿಷ್ಠೆಗಾಗಿ ತ, ಆತ್ಮನೇ ಪದಕ್ಕಾಗಿ ದ, ಪ್ರಗೃಹ್ಯಕ್ಕಾಗಿ ದಿ, ಉತ್ತರಪದಕ್ಕಾಗಿ ದ್ಯ ಮೊದಲಾದ ಏಕ ಧ್ವನ್ಯಾತ್ಮಕ ನಾಮಗಳನ್ನು ನಿಯತಗೊಳಿಸಲಾಗಿದೆ. ಈ ಬೀಜಾಕ್ಷರಗಳಿಂದ ಸೂತ್ರಗಳಲ್ಲಿ ಅಲ್ಪಾಕ್ಷರತೆಯಂತೂ ಅವಶ್ಯ ಬಂದಿದೆ. ಅದರೊಡನೆಯೇ ಅವುಗಳನ್ನು ತಿಳಿದುಕೊಳ್ಳುವುದರಲ್ಲಿ ಕಠಿಣತೆಯೂ ಬೆಳೆದು ನಿಂತಿದೆ.

ಜೈನೇಂದ್ರ ವ್ಯಾಕರಣದ ಮೇಲೆ ಸ್ವಾಭಾವಿಕವಾಗಿಯೇ ಬಹಳಷ್ಟು ಟೀಕಾ-ಸಾಹಿತ್ಯವು ನಿರ್ಮಾಣವಾಯಿತು. ಶ್ರುತಕೀರ್ತಿಯು ರಚಿಸಿದ **ಪಂಚವಸ್ತು-ಪ್ರಕ್ರಿಯಾ** (೧೩ನೆಯ ಶತಮಾನ) ಎಂಬುದಕ್ಕನುಸರಿಸಿ ಈ ವ್ಯಾಕರಣ ರೂಪೀ ಪ್ರಸಾದವು ಸೂತ್ರರೂಪೀ ಸ್ತಂಭಗಳ ಮೇಲೆ ನಿಂತಿದೆ ; **ನ್ಯಾಸವು** ಇದರ ರತ್ನಮಯ ಭೂಮಿಯು ; ಇದಕ್ಕೆ ವೃತ್ತಿಯು ಕವಾಟದಂತಿದೆ ; ಭಾಷ್ಯವು ಇದರ ಶಯ್ಯಾತಲವು; ಮತ್ತು ಟೀಕೆಗಳು ಇದಕ್ಕೆ ಅಂತಸ್ತುಗಳಾಗಿವೆ. ಅದರ ಮೇಲೆ ಹತ್ತಲಿಕ್ಕೆಂದು ಈ ಪಂಚವಸ್ತುಕ ರೂಪದ ಸೋಪಾನ-ಪಥವನ್ನು ನಿರ್ಮಾಣಮಾಡಲಾಗಿದೆ. ಪಂಚವಸ್ತು-ಪ್ರಕ್ರಿಯೆಯ ಹೊರತಾಗಿ ಈ ವ್ಯಾಕರಣದ ಮೇಲೆ ಅಭಯನಂದಿ ಕೃತ ಮಹಾ ವೃತ್ತಿ (೯ನೆಯ ಶತಮಾನ), ಪ್ರಭಾಚಂದ್ರ ವಿರಚಿಸಿದ ಶಬ್ದಾಂಭೋಜ-ಭಾಸ್ಕರ ನ್ಯಾಸ (೧೧ನೆಯ ಶತಮಾನ), ಮತ್ತು ನೇಮಿಚಂದ್ರ ನಿರ್ಮಿಸಿದ ಪ್ರಕ್ರಿಯಾವತಾರಗಳು ಕಂಡು ಬರುತ್ತವೆ. ಇವುಗಳನ್ನುಳಿದು ಬೇರೆ ಟೀಕಾ ಗ್ರಂಥಗಳು ಇದರ ಮೇಲೆ ಲಭಿಸುವುದಿಲ್ಲ. ಆದರೆ ಭಾಷ್ಯ ಮತ್ತು ಪ್ರಾಚೀನ ಟೀಕೆಗಳು ಆಗಿರುವುದು ಅವಶ್ಯ

ವಾಗಿದೆ. ಮಹೀಚಂದ್ರ ಕೃತ ಲಘು ಜೈನೆಂದ್ರ, ವಂಶೀಧರ ವಿರಚಿತ ಜೈನೇಂದ್ರ-ಪ್ರಕ್ರಿಯಾ ಮತ್ತು ಪಂಡಿತ ರಾಜಕುಮಾರ ಕೃತ ಜೈನೇಂದ್ರ-ಲಘುವೃತ್ತಿಗಳು ಸದ್ಯದ ಕೃತಿಗಳಾಗಿವೆ. ಉಪಲಬ್ಧ ಟೀಕಾಗ್ರಂಥಗಳಲ್ಲಿ ಅಭಯನಂದಿ ಕೃತ ಮಹಾವೃತ್ತಿಯು ಹನ್ನೆರಡು ಸಾವಿರ ಶ್ಲೋಕ ಪ್ರಮಾಣವಾಗಿದೆ. ಇದು ಬಹು ಮಹತ್ವಪೂರ್ಣವೂ ಆಗಿದೆ ಇದರಲ್ಲಿ ಅನೇಕ ಹೊಸ ಉದಾಹರಣೆಗಳು ಕಂಡು ಬರುತ್ತವೆ. ಅವು ಐತಿಹಾಸಿಕ ದೃಷ್ಟಿಯಿಂದಲೂ ಮಹತ್ವಪೂರ್ಣವಾಗಿವೆ. ಇದರಲ್ಲಿ ಶಾಲಿಭದ್ರ, ಸಮಂತಭದ್ರ, ಸಿಂಹನಂದಿ, ಸಿದ್ಧಸೇನ, ಅಭಯಕುಮಾರ, ಶ್ರೇಣಿಕ ಮೊದಲಾದ ಹೆಸರುಗಳನ್ನು ಸಮಾವೇಶಗೊಳಿಸಿ ಗ್ರಂಥದಲ್ಲಿ ಜೈನ ವಾತಾವರಣವನ್ನು ನಿರ್ಮಾಣ ಮಾಡಲಾಗಿದೆ. ಇವನು ಶ್ರೀದತ್ತನ ಹೆಸರನ್ನು ಒಂದು ಸೂತ್ರದಲ್ಲಿ ಹೇಳಿದ್ದಾನೆ. ಅದರಲ್ಲಿ ಆ ಹೆಸರನ್ನು ಮೇಲಿಂದ ಮೇಲೆ ಹೇಳಿದ ಕ್ರಮವನ್ನು ಗಮನಿಸಿದಲ್ಲಿ ಅವನು ಪ್ರಾಚೀನ ಕಾಲದ ಮಹಾನ್ ಸುವಿಖ್ಯಾತ ವೈಯಾಕರಣಿಯಾಗಿರಬೇಕೆಂದು ಪ್ರತೀತಿಯು ಉಂಟಾಗುತ್ತದೆ. ವಿದ್ಯಾನಂದಿಯು ತನ್ನ ತತ್ತ್ವಾರ್ಥ-ಶ್ಲೋಕವಾರ್ತಿಕದಲ್ಲಿ ಶ್ರೀದತ್ತ ಕೃತ ಜಲ್ಪ-ನಿರ್ಣಯವನ್ನು ಉಲ್ಲೇಖಿಸಿದ್ದಾನೆ. ಅದರಲ್ಲಿ ಜಲ್ಪದ ಎರಡು ಪ್ರಕಾರಗಳನ್ನು ಹೇಳಲಾಗಿದೆ. ಜಿನಸೇನನು ಆದಿ ಪುರಾಣದಲ್ಲಿಯೂ ಅವನನ್ನು 'ತಪಃ ಶ್ರೀ ದೀಪ್ತಮೂರ್ತಿ' ಮತ್ತು 'ವಾದೀಭ ಕಂಠೀರವ' ಎಂದು ಹೇಳಿ ನಮಸ್ಕರಿಸಿದ್ದಾನೆ.

ಜೈನೇಂದ್ರ ವ್ಯಾಕರಣದ ಪರಿವರ್ಧಿತ ರೂಪವು ಗುಣನಂದಿಯು ರಚಿಸಿದ ಶಬ್ದಾರ್ಣವದಲ್ಲಿ ಕಂಡುಬರುತ್ತದೆ. ಇದರಲ್ಲಿ ೩೭೦೦ ಸೂತ್ರಗಳಿವೆ. ಮೂಲಕ್ಕಿಂತ ೭೦೦ ಸೂತ್ರಗಳು ಹೆಚ್ಚಿಗೆ ಇವೆ. ಜೈನೇಂದ್ರ ಸೂತ್ರಗಳಲ್ಲಿ ಇದ್ದ ಕೊರತೆಗಳನ್ನು ಅಭಯನಂದಿಯು ತನ್ನ ಮಹಾವೃತ್ತಿಯ ವಾರ್ತಿಕದಿಂದ ತುಂಬಿದನು. ಗುಣನಂದಿಯು ತನ್ನ ಸಂಸ್ಕರಣದಲ್ಲಿ ಆ ಎಲ್ಲವುಗಳಿಗೂ ಸೂತ್ರಗಳನ್ನು ನಿರ್ಮಿಸಿ, ಜೈನೇಂದ್ರ ವ್ಯಾಕರಣಕ್ಕೆ ತನ್ನ ಕಾಲದವರೆಗೂ ತನ್ನಷ್ಟಕ್ಕೆ ತಾನು ಪೂರ್ಣಗೊಳ್ಳುವಂತೆ ಮಾಡಿದನು. ಅವನು ಇದರಲ್ಲಿ ಏಕಶೇಷ ಪ್ರಕರಣವನ್ನೂ ಜೋಡಿಸಿದನು. ಇದು ಇಲ್ಲದೆ ಇರುವುದರಿಂದ ಚಂದ್ರಿಕಾ ಟೀಕೆಯ ಕರ್ತೃವು ಮೂಲ ಗ್ರಂಥಕ್ಕೆ 'ಅನೇಕ ಶೇಷ ವ್ಯಾಕರಣ' ಎಂದು ಹೇಳಿದ್ದಾನೆ. ಆದರೆ ಗುಣನಂದಿ ಎಂಬ ಹೆಸರಿನ ಅನೇಕ ಮುನಿಗಳು ಆಗಿ ಹೋಗಿದ್ದಾರೆ. ಶ್ರವಣ ಬೆಳ್ಗೊಳದ ಅನೇಕ ಶಿಲಾಲೇಖಗಳ ಪ್ರಕಾರ, ಬಲಾಕ ಪಿಚ್ಛನ ಶಿಷ್ಯನೂ ಗೃಧ್ರಪಿಚ್ಛನ ಪ್ರಶಿಷ್ಯನೂ ಆದ ಗುಣನಂದಿಯೇ ಶಬ್ದಾರ್ಣವದ ಕರ್ತೃವೆಂದು ಗೊತ್ತಾಗುತ್ತದೆ. ಈತನು ತರ್ಕ, ವ್ಯಾಕರಣ ಮತ್ತು ಸಾಹಿತ್ಯಗಳಲ್ಲಿ ಮಹಾನ್ ವಿದ್ವಾಂಸನಾಗಿದ್ದನು. ವಾದಿರಾಜಸೂರಿಯು ತನ್ನ ಪಾರ್ಶ್ವ-ಚರಿತದಲ್ಲಿ ಇವನನ್ನು ಸ್ಮರಿಸಿದ್ದಾನೆ. ಆದಿಪಂಪನ ಗುರುವಾದ ದೇವೇಂದ್ರಕೀರ್ತಿಯು ಇವನ ಶಿಷ್ಯನಾಗಿದ್ದನು. ಇವನ ಕಾಲವು ಕರ್ನಾಟಕ-ಕವಿ-ಚರಿತೆಕ್ಕೆ ಅನುಸರಿಸಿ ವಿ.ಸಂ. ೯೫೭ ಎಂದು ಗೊತ್ತಾಗುತ್ತದೆ.

ಇಲ್ಲಿಯ ವರೆಗೆ ಶಬ್ದಾರ್ಣವದ ಎರಡು ಟೀಕೆಗಳು ಮಾತ್ರ ಪ್ರಾಪ್ತವಾಗಿವೆ. ಅವುಗಳಲ್ಲಿ ಒಂದು ಸೋಮದೇವಮುನಿ ಕೃತ ಶಬ್ದಾರ್ಣವ-ಚಂದ್ರಿಕಾ ಎಂಬುದಾಗಿದೆ. ಅದನ್ನು ಶಕ ಸಂ. ೧೧೨೭ರಲ್ಲಿ ಶಿಲಾಹಾರ ವಂಶದ ರಾಜನಾದ ಎರಡನೆಯ ಭೋಜ ದೇವನ ಕಾಲದಲ್ಲಿ ಅರ್ಜುರಿಕಾ ಎಂಬ ಹೆಸರಿನ ಗ್ರಾಮದ ಜಿನಮಂದಿರದಲ್ಲಿ ಬರೆಯ ಲಾಯಿತು. ಲೇಖಕನ ಹೇಳಿಕೆಗನುಸರಿಸಿ ಅವನು ಇದನ್ನು ಮೇಘಚಂದ್ರನ ಶಿಷ್ಯ ನಾಗಚಂದ್ರ (ಭುಜಂಗಸುಧಾಕರ) ಮತ್ತು ಅವನ ಶಿಷ್ಯ ಹರಿಚಂದ್ರ ಯತಿಗಾಗಿ ರಚಿ ಸಿದ್ದನು.

ಇನ್ನೊಂದು ಟೀಕೆಯು ಶಬ್ದಾರ್ಣವ-ಪ್ರಕ್ರಿಯಾ ಎಂಬುದಾಗಿದೆ. ಇದು ಕಣ್ಣು ತಪ್ಪಿ ಜೈನೇಂದ್ರ ಪ್ರಕ್ರಿಯಾ ಎಂಬ ಹೆಸರಿನಿಂದ ಪ್ರಕಟವಾಗಿದೆ. ಇದರಲ್ಲಿ ಕರ್ತೃವು ತನ್ನ ಹೆಸರನ್ನು ಪ್ರಕಟಿಸಿಲ್ಲ. ಆದರೆ ತಾನು ಶ್ರುತಕೀರ್ತಿದೇವನ ಶಿಷ್ಯ ನೆಂದೂ ಸೂಚಿಸಿದ್ದಾನೆ. ಬಹುತರ ಈ ಶ್ರುತಕೀರ್ತಿಯು ಶ್ರವಣಬೆಳ್ಗೊಳದ ೧೦೮ ನೆಯ ಶಿಲಾಲೇಖದಲ್ಲಿ ಬಹಳ ಪ್ರಶಂಸೆಗೆ ಪಾತ್ರನಾದವನೇ ಆಗಿರಬೇಕು. ಇವನ ಕಾಲವು ವಿ. ಸಂ. ೧೧೮೦ ಎಂದು ಮನ್ನಿಸಲಾಗಿದೆ. ಬಹುತರ ಇವನ ಶಿಷ್ಯನಾದ ಚಾರುಕೀರ್ತಿ ಪಂಡಿತಾಚಾರ್ಯನೇ ಶಬ್ದಾರ್ಣವ-ಪ್ರಕ್ರಿಯೆಯ ಕರ್ತೃವಾಗಿದ್ದಾನೆ. ಉಪರ್ಯುಕ್ತ ಪಂಚವಸ್ತು ಪ್ರಕ್ರಿಯೆಯ ಕರ್ತೃವಾದ ಶ್ರುತಕೀರ್ತಿಯೂ ಇದರ ಕರ್ತೃವಿನ ಗುರುವಾಗುತ್ತಾನೆ. ಇದರಲ್ಲಿ ಪಂ. ನಾಥೂರಾಮಜಿ ಪ್ರೇಮಿಯು ಪ್ರಸ್ತುತ ಪ್ರಕ್ರಿಯೆಯ ಕರ್ತೃವು ತನ್ನ ಗುರುವನ್ನು ಕವಿಪತಿಯೆಂದು ಕರೆದಿದ್ದಾನೆ; ವ್ಯಾಕ ರಣಜ್ಞನೆಂದಲ್ಲವೆಂಬ ಆಪತ್ತಿಯೊಂದನ್ನು ಮಾತ್ರ ಪ್ರಕಟಿಸಿದ್ದಾನೆ. ಆದರೆ ಇದು ಅಂಥ ದೊಡ್ಡ ಆಪತ್ತಿಯೇನೂ ಅಲ್ಲ.

ದೇವನಂದಿಯ ತರುವಾಯ ಇನ್ನೊಬ್ಬ ಸಂಸ್ಕೃತದ ಮಹಾನ್ ಜೈನ ವೈಯಾ ಕರಣನಾದ ಶಾಕಟಾಯನನು ಆಗಿಹೋದನು. ಅವನು ಶಬ್ದಾನು ಶಾಸನದ ರಚನೆ ಯನ್ನು ರಾಷ್ಟ್ರಕೂಟ ರಾಜನಾದ ಅಮೋಘವರ್ಷನ ಕಾಲದಲ್ಲಿ ಮಾಡಿದನು. ಇದರ ರಚನಾ ಕಾಲವು ಶಕ ಸಂ. ೭೩೬ ಮತ್ತು ೭೮೯ರ ನಡುವೆ ಎಂದು ಸಿದ್ಧವಾಗುತ್ತದೆ. ಒಬ್ಬ ಟೀಕಾಕಾರ ಹಾಗೂ ಪಾರ್ಶ್ವನಾಥ ಚರಿತೆಯ ಕರ್ತೃವಾದ ವಾದಿಚಂದ್ರನು ಈ ವ್ಯಾಕರಣದ ಕರ್ತೃವಿಗೆ ಪಾಲ್ಯಕೀರ್ತಿ ಎಂಬ ಹೆಸರು ಇತ್ತೆಂದು ಸೂಚಿಸುತ್ತಾನೆ. ಇದರಿಂದ ಪಾಣಿನಿಯು ಸ್ಮರಿಸುವ ಪ್ರಾಚೀನ ವೈಯಾಕರಣಿಯಾದ ಶಾಕಟಾಯನ ನೆಂಬ ಭ್ರಾಂತಿಯು ಈತನ ವಿಷಯದಲ್ಲಿ ಉಂಟಾಗ ಕೂಡದೆಂದು ಹೀಗೆ ಇನ್ನೊಂದು ಹೆಸರನ್ನು ಸೂಚಿಸುವುದರ ಉದ್ದೇಶವೂ ಆಗಿರಬೇಕು. ಈ ಶಬ್ದಾನುಶಾಸನದಲ್ಲಿ ಕರ್ತೃವು ಮೂಲ ಜೈನೇಂದ್ರ ವ್ಯಾಕರಣದಲ್ಲಿ ಕಂಡುಬರುತ್ತಿದ್ದ ಎಲ್ಲ ಕೊರತೆಗಳನ್ನು ತುಂಬಿದ್ದಾನೆ. ಅನೇಕ ಸಂಗತಿಗಳು ಇಲ್ಲಿ ಮೌಲಿಕವೂ ಆಗಿವೆ. ಉದಾಹರಣಾರ್ಥ, ಪ್ರಾರಂಭದಲ್ಲಿಯೇ ಇದರ ಪ್ರತ್ಯಾಹಾರ ಸೂತ್ರವು ಪಾಣಿನೀಯ—ಪರಂಪರೆಯಿಂದ ಸ್ವಲ್ಪ ಭಿನ್ನವಾಗಿದೆ. ಋಲುಲೂಗಳ ಸ್ಥಾನದಲ್ಲಿ ಕೇವಲ ಋಕ್ ಪಾಠವಿದೆ.

ಯಾಕೆಂದರೆ ಋ ಮತ್ತು ಲುಗಳಲ್ಲಿ ಅಭೇದವನ್ನು ಸ್ವೀಕರಿಸಲಾಗಿದೆ. ಹಯವರಟ್ ಮತ್ತು ಲಣ್‌ಗಳು ಕೂಡಿ, ವಟ್‌ಗಳನ್ನು ಇಲ್ಲದಂತೆ ಮಾಡಿ ಇಲ್ಲಿ ಒಂದು ಸೂತ್ರವನ್ನು ನಿರ್ಮಿಸಲಾಗಿದೆ. ಹಾಗೆಯೇ ಉಪಾಂತ್ಯ ಸೂತ್ರ ಶ, ಷ, ಸ, ರ್‌ಗಳಲ್ಲಿ ವಿಸರ್ಗ ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯವನ್ನೂ ಸಮಾವೇಶ ಮಾಡಲಾಗಿದೆ, ಇತ್ಯಾದಿ. ಜೈನೇಂದ್ರ ಸೂತ್ರ ಮತ್ತು ಮಹಾವೃತ್ತಿಯಲ್ಲಿ 'ಪ್ರತ್ಯಾಹಾರ' ಸೂತ್ರವನ್ನು ಪಾಣಿನೀಯದಂತೆಯೇ ಸ್ವೀಕರಿಸಿ ಮುಂದರಿಸಿದೆ. ಆದರೆ ಜೈನೇಂದ್ರ ಪರಂಪರೆಯ ಶಬ್ದಾರ್ಣವಚಂದ್ರಿಕೆಯಲ್ಲಿ ಈ ಶಾಕಟಾಯನ 'ಪ್ರತ್ಯಾಹಾರ' ಸೂತ್ರವನ್ನು ಸ್ವೀಕರಿಸಲಾಗಿದೆ. ಜೈನೇಂದ್ರದ ಟೀಕಾ ಸಾಹಿತ್ಯವು ಶಾಕಟಾಯನನ ಕೃತಿಯಿಂದ ಬಹಳಷ್ಟು ಉಪಕೃತವಾದದ್ದು ಕಂಡುಬರುತ್ತದೆ. ಇದು ಹೆಚ್ಚು ಪೂರ್ಣ ವ್ಯಾಕರಣವಾಗಿದ್ದರೂ ಸಹ ಅವನು ಜೈನೇಂದ್ರನ ಪರಂಪರೆಯನ್ನು ಅಕ್ಷಯವಾಗಿ ಕಾಯುವ ಉದ್ದೇಶದಿಂದ ಇದನ್ನು ಆದರ ಆಧಾರದಿಂದ ತನ್ನ ಕಾಲದವರೆಗೆ ಸಂಪೂರ್ಣಗೊಳಿಸುವ ಆವಶ್ಯಕತೆಯನ್ನು ಅರಿತಿದ್ದನು.

ಶಾಕಟಾಯನನು ಸ್ವತಃ ತನ್ನ ಸೂತ್ರಗಳ ಮೇಲೆ ವೃತ್ತಿಯನ್ನೂ ಕೂಡ ಬರೆದಿದ್ದಾನೆ. ಅದಕ್ಕೆ ಅವನು ತನ್ನ ಸಮಕಾಲೀನ ರಾಜನಾದ ಅಮೋಘವರ್ಷನ ಹೆಸರಿನಿಂದ ಅಮೋಘವೃತ್ತಿ ಎಂದು ಹೆಸರನ್ನು ಕೊಟ್ಟಿದ್ದಾನೆ. ಈ ವೃತ್ತಿಯ ಶ್ಲೋಕ ಪ್ರಮಾಣವು ೧೮೦೦೦ ಎಂದು ಮನ್ನಿಸಲಾಗಿದೆ. ಇದರ ಸಂಕ್ಷಿಪ್ತ ರೂಪವು ೬೦೦೦ ಶ್ಲೋಕ ಪ್ರಮಾಣದಲ್ಲಿ ಯಕ್ಷವರ್ಮಾ ಕೃತ ಚಿಂತಾಮಣಿ ಎಂಬ ಹೆಸರಿನ ಲಘುವೃತ್ತಿಯಾಗಿದೆ. ಇದರ ವಿಷಯದಲ್ಲಿ ಕರ್ತೃವು ಇಂದ್ರ, ಚಂದ್ರಾದಿ ಶಾಬ್ದಿಕರು ಯಾವ ಶಬ್ದದ ಲಕ್ಷಣಗಳನ್ನು ಹೇಳಿದ್ದಾರೆಯೋ ಅವೆಲ್ಲವೂ ಇದರಲ್ಲಿ ಇವೆಯೆಂದು ಹೇಳಿದ್ದಾನೆ. ಇಷ್ಟೇ ಅಲ್ಲ, ಇಲ್ಲಿ ಇಲ್ಲದುದು ಎಲ್ಲಿಯೂ ಇಲ್ಲವೆಂದೂ ಹೇಳಿಕೊಂಡಿದ್ದಾನೆ. ಇದರಲ್ಲಿ ಗಣಪಾಠ, ಧಾತುಪಾಠ, ಲಿಂಗಾನುಶಾಸನ, ಉಣಾದಿ ಮೊದಲಾದ ನಿಃಶೇಷ ಪ್ರಕರಣಗಳಿವೆ. ಈ ನಿಃಶೇಷ ವಿಶೇಷಣದಿಂದ ಬಹುತರ ಅವನು ಅನೇಕಶೇಷ ಜೈನೇಂದ್ರ ವ್ಯಾಕರಣವನ್ನೂ ಅಪೂರ್ಣವೆಂದು ಸೂಚಿಸಿದ್ದಾನೆ. ಯಕ್ಷವರ್ಮನಂತೂ ತನ್ನ ಈ ವೃತ್ತಿಯ ಅಭ್ಯಾಸದಿಂದ ಬಾಲಕರು ಮತ್ತು ಅಬಲೆಯರು ಸಹ ನಿಶ್ಚಯವಾಗಿಯೂ ಒಂದು ವರ್ಷದಲ್ಲಿ ಸಮಸ್ತ ವಾಙ್ಮಯವೇತ್ತರಾಗುವರೆಂದು ಹೇಳಿದ್ದಾನೆ. ಈ ಚಿಂತಾಮಣಿ ವೃತ್ತಿಯ ಮೇಲೆ ಅಜಿತಸೇನ ಕೃತ ಮಣಿಪ್ರಕಾಶಿಕಾ ಎಂಬ ಹೆಸರಿನ ಟೀಕೆಯಿದೆ. ಮೂಲ ಸೂತ್ರಗಳ ಮೇಲೆ ಲಘುಕೌಮುದಿಯಂತೆ ಒಂದು ಚಿಕ್ಕ ಟೀಕೆಯು ದಯಾಪಾಲ ಮುನಿ ಕೃತ ರೂಪಸಿದ್ಧಿ ಎಂಬುದಿದೆ. ಇದರ ಕರ್ತೃವಿನ ಗುರುವಾದ ಮತಿಸಾಗರನು ಪಾರ್ಶ್ವನಾಥ-ಚರಿತದ ಕರ್ತೃವಾದ ವಾದಿರಾಜಸೂರಿಯ ಸಮಕಾಲೀನನಾದುದರಿಂದ ೧೧ನೆಯ ಶತಮಾನದವನೆಂದು ಸಿದ್ಧವಾಗುತ್ತದೆ. ಸಿದ್ಧಾಂತಕೌಮುದಿಯ ಮಾದರಿಯ ಒಂದು ಪ್ರಕ್ರಿಯಾ-ಸಂಗ್ರಹ ಎಂಬುದು ಅಭಯಚಂದ್ರ ಕೃತ ಪ್ರಕಟವಾಗಿದೆ (ಮುಂಬೈ ೧೯೦೭). ಇನ್ನೊಂದು ಟೀಕೆಯು ವಾದಿ ಪರ್ವತ

ವಜ್ರ ಭಾವಸೇನ ತ್ರೈವಿದ್ಯದೇವ ಕೃತ ಶಾಕಟಾಯನ ಟೀಕೆ ಎಂಬುದಾಗಿದೆ. ಇದರ ಕರ್ತೃವು ಬಹುತರ ಕಾತಂತ್ರದ ರೂಪಮಾಲಾ ಎಂಬ ಹೆಸರಿನ ಟೀಕೆಯನ್ನು ಬರೆದವನೇ ಆಗಿರಬೇಕು. ಇವನದೇ ಆದ ವಿಶ್ವತತ್ವಪ್ರಕಾಶ ಎಂಬ ಹೆಸರಿನ ಗ್ರಂಥವೂ ಇದೆ. ಅಮೋಘವೃತ್ತಿಯ ಮೇಲೆ ಪ್ರಭಾಚಂದ್ರ ಕೃತ ನ್ಯಾಸವೂ ಇದೆ. ಆದರೆ ಇಲ್ಲಿಯವರೆಗೆ ಇದರ ಎರಡು ಅಧ್ಯಾಯಗಳು ಮಾತ್ರ ಲಭಿಸಿವೆ. ಮಾಧವೀಯ ಧಾತುವೃತ್ತಿಯಲ್ಲಿ ಇದರ ಹಾಗೂ ಸಮಂತಭದ್ರ ಕೃತ ಚಿಂತಾಮಣಿ-ವಿಷಮಪದ-ಟೀಕಾ ಇವುಗಳ ಅವತರಣಗಳು ದೊರೆಯುತ್ತವೆ. ಇನ್ನೊಂದು ಮಂಗರಸ ಕೃತ ಪ್ರತಿಪದ ಎಂಬ ಹೆಸರಿನ ಟೀಕೆಯ ಉಲ್ಲೇಖವೂ ಬರುತ್ತದೆ.

ಇನ್ನೊಂದು ಮೂರನೆಯದಾದ ವ್ಯಾಕರಣ ಪರಂಪರೆಯೊಂದು ಸರ್ವವರ್ಮ ಕೃತ ಕಾತಂತ್ರ ವ್ಯಾಕರಣ ಸೂತ್ರದಿಂದ ಪ್ರಾರಂಭವಾಗುತ್ತದೆ. ಇದರ ರಚನಾ ಕಾಲವು ನಿಶ್ಚಿತವಾಗಿಲ್ಲ. ಆದರೆ ಇದ್ದರೆ ಅದು ಅತಿ ಪ್ರಾಚೀನ ಮತ್ತು ಶಾಕಟಾಯನನಕ್ಕಿಂತ ಮುಂಚಿನದೂ ಆಗಿರಬೇಕು. ಯಾಕಂದರೆ ಇದರ ಮೇಲಿನ ಟೀಕೆಗಳ ಪರಂಪರೆಯು ದುರ್ಗಸಿಂಹನಿಂದ ಪ್ರಾರಂಭವಾಗುತ್ತದೆ. ಅವನು ಸುಮಾರು ಕ್ರಿ.ಶ. ೮೦೦ ರಲ್ಲಿ ಆಗಿರಬೇಕೆಂದು ಅನುಮಾನ ಮಾಡಲಾಗಿದೆ. ಕಾಚ್ಚಾಯನ ಪಾಲಿ-ವ್ಯಾಕರಣದ ರಚನೆಯಲ್ಲಿ ಕಾತಂತ್ರದ ಉಪಯೋಗವನ್ನು ಮಾಡಲಾಗಿದೆ. ಇದರ ರಚನೆಯಲ್ಲಿ ವಿವಿಧ ವಿಶೇಷತೆಗಳು ಇವೆ. ಪರಿಭಾಷೆಗಳಲ್ಲಿಯೂ ಇದು ಪಾಣಿನಿಗಿಂತ ಬಹಳಷ್ಟು ಸ್ವತಂತ್ರವಾಗಿದೆ. ಇದರ ಸೂತ್ರ ಸಂಖ್ಯೆಯು ೧೪೪೦ಕ್ಕಿಂತ ಸ್ವಲ್ಪ ಹೆಚ್ಚಿಗಿದೆ. ದುರ್ಗಸಿಂಹನ ವೃತ್ತಿಯ ಮೇಲೆ ತ್ರಿಲೋಚನದಾಸ ಕೃತ ವೃತ್ತಿ–ವಿವರಣ–ಪಂಜಿಕಾ ಮತ್ತು ಅದರ ಮೇಲೆ ಜಿನೇಶ್ವರನ ಶಿಷ್ಯನಾದ ಜಿನಪ್ರಬೋಧನು ರಚಿಸಿದ 'ವೃತ್ತಿ–ವಿವರಣ–ಪಂಜಿಕಾ–ದುರ್ಗಪದ ಪ್ರಬೋಧ'ವು (ವಿ.ಸಂ. ೧೩೭೧ ಕ್ಕೆ ಪೂರ್ವದ್ದು) ಕಂಡುಬರುತ್ತದೆ. ಉಳಿದ ಉಪಲಬ್ಧ ಟೀಕೆಗಳು ಧುಂಧುಕನ ಪುತ್ರನಾದ ಮಹಾದೇವಕೃತ ಶಬ್ದಸಿದ್ಧಿ ವೃತ್ತಿ (ವಿ.ಸಂ. ೧೩೪೦ ಕ್ಕಿಂತ ಪೂರ್ವದ್ದು), ಮಹೇಂದ್ರ ಪ್ರಭನ ಶಿಷ್ಯನಾದ ಮೇರುತುಂಗಸೂರಿಕೃತ ಬಾಲಬೋಧ (ವಿ.ಸಂ. ೧೪೪೪), ವರ್ಧಮಾನ ಕೃತ ವಿಸ್ತಾರ (ವಿ.ಸಂ. ೧೪೫೮ ರ ಪೂರ್ವದ್ದು), ಭಾವಸೇನ ತ್ರೈವಿದ್ಯಕೃತ ರೂಪಮಾಲಾ-ವೃತ್ತಿ, ಗಾಲ್ಹಣಕೃತ ಚತುಷ್ಕವೃತ್ತಿ, ಮೋಕ್ಷೇಶ್ವರ ಕೃತ ಆಖ್ಯಾತ–ವೃತ್ತಿ ಮತ್ತು ಪೃಥ್ವೀಚಂದ್ರಸೂರಿಯು ರಚಿಸಿದ ವೃತ್ತಿ ಇವೇ ಮೊದಲಾದವುಗಳು ಇವೆ. ಒಂದು ಕಾಲಾಪಕ–ವಿಶೇಷ–ವ್ಯಾಖ್ಯಾನವೂ ದೊರೆಯುತ್ತದೆ. ಇದರಿಂದ ಮೂಲ ಗ್ರಂಥದ ಹೆಸರು ಕಾಲಾಪಕ ಎಂದೂ ಪ್ರತೀತವಾಗುತ್ತದೆ. ಇನ್ನೊಂದು ಪದ್ಯಾತ್ಮಕ ಟೀಕೆಯು ಕೌಮಾರ–ಸಮುಚ್ಚಯ ಎಂಬುದು ೩,೧೦೦ ಶ್ಲೋಕ ಪ್ರಮಾಣವಾಗಿದೆ. ಕಾತಂತ್ರ-ಸಂಭ್ರಮ ಮತ್ತು ವಿದ್ಯಾನಂದಸೂರಿ ಕೃತ ಕಾತಂತ್ರೋತ್ತರ ಎಂಬ ಹೆಸರಿನ ಟೀಕೆಗಳೂ ಕಂಡುಬರುತ್ತವೆ. ಇನ್ನುಳಿದವುಗಳಿದ್ದರೂ ಅದರಲ್ಲಿ ಕರ್ತೃವಿನ ಹೆಸರುಗಳಿಲ್ಲ. ಈ ಕೃತಿಗಳಲ್ಲಿ ಕೆಲವೊಂದರ

ಕರ್ತೃಗಳು ಅಜೈನವಿದ್ವಾಂಸರಿದ್ದುದೂ ಕಂಡುಬರುತ್ತದೆ. ಈ ಎಲ್ಲ ಕೃತಿಗಳಿಂದ ಈ ವ್ಯಾಕರಣದ ಪ್ರಚಾರವು ಬಹಳ ಚೆನ್ನಾಗಿ ಇತ್ತೆಂದು ಸಿದ್ಧವಾಗುತ್ತದೆ. ಇದಕ್ಕೆ ಒಂದು ಕಾರಣವೂ ಇದೆ. ಜೈನೇಂದ್ರ ಮತ್ತು ಶಾಕಟಾಯನಗಳಿಗಿಂತ ಇದು ಬಹಳ ಸಂಕ್ಷಿಪ್ತವಾಗಿದೆ.

ನಾಲ್ಕನೆಯವನು ಮಹಾನ್ ಜೈನವೈಯಾಕರಣಿಯಾದ ಹೇಮಚಂದ್ರನಾಗಿದ್ದಾನೆ. ಇವನ ಶಬ್ದಾನುಶಾಸನವು ತನ್ನ ಸರ್ವಾಂಗ ಪರಿಪೂರ್ಣತೆ ಮತ್ತು ನಾನಾ ವಿಶೇಷತೆಗಳ ದೃಷ್ಟಿಯಿಂದ ಅದ್ವಿತೀಯವೆನಿಸಿದೆ. ಇದರ ರಚನೆಯನ್ನು ಅವನು ಗುಜರಾತದ ಚಾಲುಕ್ಯವಂಶದ ರಾಜನಾದ ಸಿದ್ಧರಾಜ ಜಯಸಿಂಹನ ಪ್ರೋತ್ಸಾಹದಿಂದ ಮಾಡಿದ್ದನು. ಇದನ್ನು ವ್ಯಕ್ತಪಡಿಸಲಿಕ್ಕೆಂದೇ ಅವನು ಇದಕ್ಕೆ ಸಿದ್ಧ-ಹೈಮ ಶಬ್ದಾನುಶಾಸನ ಎಂದು ಹೆಸರನ್ನು ಇಟ್ಟನು. ಸಿದ್ಧರಾಜನ ರಾಜ್ಯಕಾಲವು ವಿ. ಸಂ. ೧೧೫೧ ರಿಂದ ೧೧೯೯ರ ವರೆಗೆ ಇದ್ದುದು ಕಂಡುಬರುತ್ತದೆ. ಇದೇ ಈ ಗ್ರಂಥರಚನೆಯ ಕಾಲಾವಧಿಯಾಗಿದೆ. ಹೈಮ ಶಬ್ದಾನುಶಾಸನವು ಪಾಣಿನೀಯ ಅಷ್ಟಾಧ್ಯಾಯಿಗೆ ಸಮನಾಗಿ ನಾಲ್ಕು ನಾಲ್ಕು ಪಾದಗಳುಳ್ಳ ಎಂಟು ಅಧ್ಯಾಯಗಳಲ್ಲಿದೆ ಎಂಟನೆಯ ಅಧ್ಯಾಯವು ಪ್ರಾಕೃತ-ವ್ಯಾಕರಣ ವಿಷಯಕ್ಕಿದೆ. ಅದರ ಪರಿಚಯವನ್ನು ಮೇಲೆ ಹೇಳಿದೆ. ಮೊದಲಿನ ಏಳು ಅಧ್ಯಾಯಗಳಲ್ಲಿ ಸಂಸ್ಕೃತ ವ್ಯಾಕರಣಕ್ಕೆ ಸಂಬಂಧಿಸಿದ ೩೫೬೬ ಸೂತ್ರಗಳಿವೆ. ಇವುಗಳಲ್ಲಿ ಕ್ರಮವಾಗಿ ಸಂಜ್ಞಾ, ಸಂಧಿ, ಕಾರಕ ಸಮಾಸ, ಆಖ್ಯಾತ, ಕೃದಂತ ಮತ್ತು ತದ್ಧಿತಗಳನ್ನು ಪ್ರರೂಪಿಸಲಾಗಿದೆ. ಸೂತ್ರಗಳ ಜೊತೆಯಲ್ಲಿ ತನ್ನ ಗಣಪಾಠ, ಧಾತುಪಾಠ, ಉಣಾದಿ ಮತ್ತು ಲಿಂಗಾನುಶಾಸನಗಳನ್ನು ಜೋಡಿಸಲಾಗಿದೆ. ಇದರಿಂದ ಈ ವ್ಯಾಕರಣವು ಪಂಚಾಂಗಪೂರ್ಣವಾಗಿದೆ. ಸೂತ್ರ-ರಚನೆಯಲ್ಲಿ ಶಾಕಟಾಯನನ ಅನುಕರಣವು ವಿಶೇಷವಾಗಿದ್ದುದು ಕಂಡುಬರುತ್ತದೆ. ಇದರ ಮೇಲೆ ಅದಕ್ಕೂ ಪೂರ್ವಕಾಲದ ಬಹುತರ ಎಲ್ಲ ಜೈನ ಮತ್ತು ಅಜೈನ ವ್ಯಾಕರಣಗಳ ಸ್ವಲ್ಪಿಲ್ಲ ಸ್ವಲ್ಪ ಪ್ರಭಾವವು ಆದದ್ದುಂಟು. ಇದರ ಮೇಲೆ ಕರ್ತೃವು ಸ್ವತಃ ಆರು ಸಾವಿರ ಶ್ಲೋಕ ಪ್ರಮಾಣದ ಲಘುವೃತ್ತಿಯನ್ನು ಬರೆದಿದ್ದಾನೆ. ಇದು ಪ್ರಾರಂಭಿಕ ಅಭ್ಯಾಸಿಗಳಿಗೆ ಬಹು ಉಪಯುಕ್ತವಾಗಿದೆ. ಇನ್ನೊಂದು ಹದಿನೆಂಟು ಸಾವಿರ ಶ್ಲೋಕ ಪ್ರಮಾಣದ ಬೃಹದ್-ವೃತ್ತಿಯನ್ನೂ ಸಹ ಬರೆದಿದ್ದಾನೆ. ಇದು ವಿದ್ವಾಂಸರಿಗಾಗಿ ಇದೆ. ಇದರಲ್ಲಿ ಅನೇಕ ಪ್ರಾಚೀನ ವೈಯಾಕರಣಿಗಳ ಹೆಸರನ್ನು ಹೇಳಿ, ಅವರ ಮತಗಳ ವಿವೇಚನೆಯನ್ನೂ ಸಹ ಮಾಡಿದ್ದಾನೆ. ಇಂಥ ಪೂರ್ವ ವೈಯಾಕರಣಿಗಳಲ್ಲಿ ದೇವನಂದಿ (ಜೈನೇಂದ್ರ), ಶಾಕಟಾಚಾರ್ಯ ಮತ್ತು ದುರ್ಗಸಿಂಹ (ಕಾತಂತ್ರವೃತ್ತಿಕಾರ) ಇವರೂ ಇದ್ದಾರೆ. ಅಲ್ಲದೆ ಯಾಸ್ಕ, ಗಾರ್ಗ್ಯ, ಪಾಣಿನಿ, ಪತಂಜಲಿ, ಭರ್ತೃಹರಿ, ವಾಮನ, ಜಯಾದಿತ್ಯ, ಕ್ಷೀರಸ್ವಾಮಿ, ಭೋಜ ಮೊದಲಾದವರೂ ಇದ್ದಾರೆ. ಉದಾಹರಣೆಗಳಲ್ಲಿಯೂ ಬಹಳಷ್ಟು ಮೌಲಿಕತೆಯು ಕಂಡುಬರುತ್ತದೆ. ವಿಧಿ-ವಿಧಾನಗಳಲ್ಲಿ ಕರ್ತೃವು ತನ್ನ ಕಾಲದವರೆಗಿನ ಭಾಷಾತ್ಮಕ ವಿಕಾಸವನ್ನು ಸಮಾವೇಶಗೊಳಿಸಲು ಪ್ರಯತ್ನ

ಮಾಡಿದ್ದಾನೆ. ಇದು ಐತಿಹಾಸಿಕ ದೃಷ್ಟಿಯಿಂದ ಬಹು ಮಹತ್ವಪೂರ್ಣವಾಗಿದೆ.
ಉಣಾದಿ ಸೂತ್ರಗಳ ಮೇಲೆಯೂ ಕರ್ತೃವಿನ ಸ್ವೋಪಜ್ಞ ವಿವರಣವಿದೆ. ಅದರಂತೆ
ಲಿಂಗಾನುಶಾಸನ ಪದ್ಯಾತ್ಮಕ ರಚನೆಯ ಮೇಲೆಯೂ ಸಹ ಇದೆ. ಕರ್ತೃವು ಸ್ವತಃ
ಒಂದು ಲಘು ಮತ್ತು ಇನ್ನೊಂದು ಬೃಹತ್ ನ್ಯಾಸವನ್ನೂ ಸಹ ಬರೆದಿದ್ದನು. ಆದರ
ಪ್ರತಿಗಳೂ ಕೂಡ ದೊರೆಯುತ್ತವೆ. ಬೃಹತ್-ನ್ಯಾಸದ ಪ್ರಮಾಣವು ಒಂಭತ್ತು
ಸಾವಿರ ಶ್ಲೋಕವೆಂದು ಹೇಳಲಾಗುತ್ತದೆ. ಆದರೆ ಸಧ್ಯಕ್ಕದು ಕೇವಲ ಭಿನ್ನ ಭಿನ್ನ
೮-೯ ಪಾದಗಳಲ್ಲಿ ೩೪೦೦ ಸೂತ್ರ ಪ್ರಮಾಣದಲ್ಲಿ ದೊರೆಯುತ್ತದೆ. ಹೀಗೆ ಈ ಸಮಸ್ತ
ವ್ಯಾಕರಣವು ಒಂದೂಕಾಲು ಲಕ್ಷ ಶ್ಲೋಕ ಪ್ರಮಾಣವಾಗಿ ಬೆಳೆದು ನಿಂತಿದೆ. ಸುಮಾರು
ಇಪ್ಪತ್ತು ಬಹು ದೊಡ್ಡ ಗಾತ್ರದ ಇತರ ಗ್ರಂಥಗಳನ್ನು ರಚಿಸಿದ ಈತನ ಇಷ್ಟು ವಿಶಾಲ
ಪ್ರಮಾಣದ ಕೃತಿಯನ್ನು ಕಂಡು ನಮ್ಮಂಥ ಸಾಮಾನ್ಯ ಮನುಷ್ಯರ ಬುದ್ಧಿಯು ಚಕಿತ
ವಾಗದೆ ನಿಲ್ಲುವುದಿಲ್ಲ. ಇಷ್ಟಕ್ಕೇನೇ ಈ ವ್ಯಾಕರಣ-ಸಾಮಗ್ರಿಯು ಸಮಾಪ್ತಿಗೊಳ್ಳು
ವುದಿಲ್ಲ. ಹೇಮಚಂದ್ರನು ತನ್ನ ದ್ವ್ಯಾಶ್ರಯಕಾವ್ಯದ ಮೊದಲಿನ ಇಪ್ಪತ್ತು ಸರ್ಗ
ಗಳಲ್ಲಿ ಈ ವ್ಯಾಕರಣದ ಕ್ರಮಬದ್ಧ ಉದಾಹರಣೆಗಳನ್ನು ಉಪಸ್ಥಿತಗೊಳಿಸಿದ್ದಾನೆ.
ಇಂಥ ಕೃತಿಯನ್ನು ಕುರಿತು ಅನ್ಯ ಲೇಖಕರು ಟೀಕೆ-ಟಿಪ್ಪಣಿಗಳನ್ನು ಬರೆಯಲು ಅವ
ಕಾಶವು ಉಳಿಯುವುದಿಲ್ಲ. ಆದರೂ ಇದರ ಮೇಲೆ ಮುನಿಶೇಖರಸೂರಿ ಕೃತ ಲಘು
ವೃತ್ತಿ ಢುಂಢಿಕಾ, ಕನಕಪ್ರಭ ರಚಿಸಿದ ಲಘುನ್ಯಾಸದ ಮೇಲೆ ದುರ್ಗಪದವ್ಯಾಖ್ಯಾ,
ವಿದ್ಯಾಕರ ಕೃತ ಬೃಹದ್-ವೃತ್ತಿ ದೀಪಿಕಾ, ಧನಚಂದ್ರಕೃತ ಲಘುವೃತ್ತಿ-ಅವ
ಚೂರಿ ಹಾಗೂ ಜಿನಸಾಗರ ಕೃತ ದೀಪಿಕಾ ಮೊದಲಾದ ವಿವಿಧ ಪ್ರಕರಣಗಳ ಟೀಕೆ
ಗಳು ಇವೆ. ಇದರಿಂದ ಈ ಕೃತಿಯ ವಿಷಯದಲ್ಲಿ ವಿದ್ವಾಂಸರಲ್ಲಿರುವ ಆದರ, ಲೋಕ
ಪ್ರಚಾರ, ಪ್ರಸಿದ್ಧಿ ಇವುಗಳ ಕಲ್ಪನೆಯು ಬರುವಂತಿದೆ.

ಇವಲ್ಲದೆ ಇನ್ನೂ ಅನೇಕ ಸಂಸ್ಕೃತ ವ್ಯಾಕರಣಗಳು ಇವೆ. ಅಂಥವುಗಳಲ್ಲಿ
ಮಲಯಗಿರಿ ಕೃತ ಶಬ್ದಾನುಶಾಸನವು ಒಂದಾಗಿದೆ. ಇದಕ್ಕೆ ಮುಷ್ಟಿವ್ಯಾಕರಣ
ವೆಂದೂ ಹೆಸರು. ಇದು ಸ್ವೋಪಜ್ಞ ಟೀಕೆ ಸಹಿತ ಇದೆ. ಇದರಂತೆ ದಾನವಿಜಯ ಕೃತ
ಶಬ್ದಭೂಷಣ ಮೊದಲಾದುವುಗಳೂ ಉಲ್ಲೇಖನೀಯವಾಗಿವೆ, ಆದರೆ ಇವು ಮೊದ
ಲಿನ ಗ್ರಂಥಗಳ ಅನುಕರಣಗಳೇ ಆಗಿವೆ. ರಚನೆಯ ವಿಷಯದಲ್ಲಾಗಲಿ, ಇನ್ನಿತರ
ಸಂಗತಿಗಳಲ್ಲಾಗಲಿ ಮೌಲಿಕತೆಯು ಕಂಡುಬರುವುದಿಲ್ಲ.

**ಛಂದಃ ಶಾಸ್ತ್ರ-ಪ್ರಾಕೃತ :—**

ಜೈನ ಪರಂಪರೆಯಲ್ಲಿ ಉಪಲಬ್ಧ ಛಂದಃ ಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳಲ್ಲಿ
ನಂದಿತಾಢ್ಯನು ರಚಿಸಿದ **ಗಾಥಾಲಕ್ಷಣ** ಎಂಬುದು ಪ್ರಾಕೃತ ವ್ಯಾಕರಣಗಳಲ್ಲಿ ಚಂಡ
ಕೃತ ಪ್ರಾಕೃತ-ಲಕ್ಷಣಕ್ಕೆ ಸಮವಾಗಿ ಸರ್ವ ಪ್ರಾಚೀನವೆಂದು ಗೊತ್ತಾಗುತ್ತದೆ. ಗ್ರಂಥ
ದಲ್ಲಿ ಕರ್ತೃವಿನ ಹೆಸರಿನ ಹೊರತಾಗಿ ಆದರ ರಚನಾಕಾಲ ಇತ್ಯಾದಿಗಳ ಬಗ್ಗೆ ಯಾವ

ಉಲ್ಲೇಖವೂ ಇಲ್ಲ. ತರುವಾಯದಲ್ಲಿ ಆಗಿಹೋದ ಲೇಖಕರು ಈತನ ಹೆಸರನ್ನು ಉಲ್ಲೇಖ ಮಾಡಿದ್ದರೆ ಅದರಿಂದ ಕಾಲನಿರ್ಣಯ ಮಾಡಬಹುದಿತ್ತು. ಅಂದರೂ ಕರ್ತೃವಿನ ಹೆಸರು, ಅವನ ಪ್ರಾಕೃತ ಭಾಷೆ, ಗ್ರಂಥದ ವಿಷಯ ಮತ್ತು ರಚನಾ ಶೈಲಿ ಇವುಗಳಿಂದ ಇದು ಅತ್ಯಂತ ಪ್ರಾಚೀನ ಕೃತಿಯೆಂದು ಅನುಮಾನ ಮಾಡಲಾಗುತ್ತದೆ. ಆರಂಭದಲ್ಲಿ ಗಾಥಾಗಳ ಮಾತ್ರೆ, ಅಂಶ ಇವುಗಳ ಸಾಮಾನ್ಯ ಗುಣಗಳ ವಿಧಾನವನ್ನು ಮಾಡಲಾಗಿದೆ. ಇವುಗಳಲ್ಲಿ ಶರ ಮೊದಲಾದ ಸಂಜ್ಞೆಗಳ ಪ್ರಯೋಗವು ಪಿಂಗಲ, ವಿರಹಾಂಕ ಮೊದಲಾದ ಛಂದಃಶಾಸ್ತ್ರಗಳ ವಿವರಣೆಗಿಂತ ಭಿನ್ನವಾಗಿ ಕಂಡುಬರುತ್ತದೆ. ತರುವಾಯ ಗಾಥೆಗಳ ಪಥ್ಯಾ, ವಿಪುಲಾ ಮತ್ತು ಚಪಲಾ ಎಂಬ ಭೇದಗಳನ್ನು ಹೇಳಿದೆ. ಅಲ್ಲದೆ ಚಪಲಾದಲ್ಲಿ ಮೂರು ಪ್ರಭೇದಗಳನ್ನು ಹೇಳಿ ಉದಾಹರಣೆಗಳನ್ನು ಸಹ ಕೊಡಲಾಗಿದೆ. ತಿರುಗಿ ಇನ್ನೊಂದು ಪ್ರಕಾರದಿಂದ ವರ್ಣಗಳ ಹ್ರಸ್ವ-ದೀರ್ಘಗಳ ಆಧಾರದಿಂದ ಗಾಥೆಗಳನ್ನು ವಿಪ್ರಾ, ಕ್ಷತ್ರಿಯಾ, ವೈಶ್ಯಾ ಮತ್ತು ಶೂದ್ರಾ ಎಂಬ ನಾಲ್ಕು ಭೇದಗಳನ್ನೂ ಅವುಗಳ ಉದಾಹರಣೆಗಳನ್ನು ಹೇಳಿದೆ. ಇದಾದ ಮೇಲೆ ಅಕ್ಷರ ಸಂಖ್ಯೆಗಳಿಗನುಸರಿಸಿ ಗಾಥಾಗಳ ಇಪ್ಪತ್ತಾರು ಭೇದಗಳನ್ನು ಕಮಲಾ ಆದಿ ಹೆಸರುಗಳು ಸಹ ಉದಾಹರಣೆಗಳೊಂದಿಗೆ ವಿವರಿಸಿದೆ. ಈ ವಿವರಣದಲ್ಲಿ ಅವುಗಳ ಲಕ್ಷಣ, ಗಾಥೆಯ ಲಘುತ್ವ ಹಾಗೂ ಗುರುತ್ವಗಳ ತುಲನೆ, ಪ್ರಸ್ತಾರ, ಸಂಖ್ಯಾ ನಕ್ಷತ್ರ-ಗ್ರಹ ಆದಿ ಪ್ರತ್ಯಯಗಳನ್ನು ಹೇಳಿದೆ. ಕೊನೆಯಲ್ಲಿ ಗಾಹೆಗಳಲ್ಲಿ ಮಾತ್ರೆಗಳ ಹೆಚ್ಚು ಕಡಿಮೆಯಿಂದ ಉತ್ಪನ್ನವಾಗುವ ಗಾಥಾ, ವಿಗಾಥಾ, ಉದ್ಗಾಥಾ, ಗಾಥಿನೀ ಮತ್ತು ಸ್ಕಂಥಕ ಈ ಪ್ರಭೇದಗಳನ್ನು ತಿಳಿಸಿ ಹೇಳಲಾಗಿದೆ. ಇದರಲ್ಲಿ ಮೊದಲಿನ ಮೂರು ಹೆಸರುಗಳು ಹೇಮಚಂದ್ರ ಮೊದಲಾದವರು ಪ್ರಯೋಗಿಸಿದ ಉಪಗೀತಿ, ಉದ್ಗೀತಿ ಮತ್ತು ಗೀತಿ ನಾಮಗಳ ಅಪೇಕ್ಷೆಯಿಂದ ಹೆಚ್ಚು ಪ್ರಾಚೀನವೆಂದು ಗೊತ್ತಾಗುತ್ತದೆ.

ಸುಮಾರು ಎಪ್ಪತ್ತು ಗಾಥೆಗಳಲ್ಲಿ ಪೂರ್ಣಗೊಂಡ ಗ್ರಂಥದ ಈ ವಿಷಯವು ಅದರ ಅಭಿನ್ನ ಮತ್ತು ಮೌಲಿಕ ಅಂಶಗಳನ್ನು ವ್ಯಕ್ತಪಡಿಸುತ್ತದೆ. ಆದರೆ ಡಾ. ವೇಲಂಕರರು ಸಂಪಾದಿಸಿದ ಪಾರದಲ್ಲಿ ೯೬ ಗಾಥೆಗಳು ಇವೆ. ಹೆಚ್ಚಿನ ಗಾಥೆಗಳಲ್ಲಿ, ಗಾಥೆಗಳ ಕೆಲವೊಂದು ಉದಾಹರಣೆಗಳು ಹಾಗೂ ೭೫ ನೆಯ ಗಾಹೆಯಿಂದ ಮುಂದಿನ ಭಾಗದಲ್ಲಿ ಪದ್ಧಡಿಯಾ ಮೊದಲಾದ ಅಪಭ್ರಂಶ ಛಂದಗಳ ಲಕ್ಷಣ ಮತ್ತು ಉದಾಹರಣೆಗಳು ಇವೆ. ಇವನ್ನು ವಿದ್ವಾಂಸರಾದ ಸಂಪಾದಕರು ಮೂಲ ಗ್ರಂಥದ ಭಾಗವೆಂದು ಮನ್ನಿಸುವುದಿಲ್ಲ, ನಕಾರಣವಾಗಿ ಅವುಗಳನ್ನು ಹಿಂದಿನಿಂದ ಜೋಡಿಸಿದ ಗಾಥೆಗಳೆಂದು ಸಿದ್ಧಮಾಡಿದ್ದಾರೆ. ಆದರೆ ಅವರು ಎರಡು ಗಾಥೆಗಳನ್ನು ಮೌಲಿಕವೆಂದು ಮನ್ನಿಸಿ ಅವುಗಳ ವಿಷಯದಲ್ಲಿ ಕೆಲವೊಂದು ಆಶ್ಚರ್ಯವನ್ನು ವ್ಯಕ್ತಪಡಿಸಿದ್ದಾರೆ. ಅವುಗಳ ವಿಷಯವಲ್ಲಿ ಇಲ್ಲಿ ವಿಚಾರಿಸುವ ಅವಶ್ಯಕತೆಯು ಇದೆ. ೩೮ ನೆಯ ಪದ್ಯದಲ್ಲಿ ಗಾಥೆಗಳ ಹತ್ತು ಭೇದಗಳನ್ನು ಹೇಳಿದ್ದಾರೆ. ಆದರೆ ನಿಜವಾಗಿಯೂ ಭೇದಗಳು ಒಂಭತ್ತು ಮಾತ್ರ ಆಗುತ್ತವೆ. ಹತ್ತನೆಯದಾದ ಮಿಶ್ರ ಎಂಬ ಭೇದವು

ಅಲ್ಲಿ ಆಗುವುದೇ ಇಲ್ಲ. ಅದಕ್ಕೆ ಕೊಟ್ಟ ಉದಾಹರಣೆಯು ಅದು ಮಿಶ್ರದ ಯಾವ ಉದಾಹರಣೆಯೂ ಆಗಿಲ್ಲ. ಅದನ್ನು ಸಂಪಾದಕನಂತೂ ಪ್ರಕ್ಷಿಪ್ತವೆಂದು ಅನುಮಾನ ಮಾಡಿಯೇ ಇದ್ದಾನೆ. ನನ್ನ ಮತಕ್ಕೆ ಅನುಸರಿಸಿ ಹತ್ತು ಭೇದಗಳನ್ನು ಹೇಳುವ ಗಾಥೆಯನ್ನೂ ಸಹ ಪ್ರಕ್ಷಿಪ್ತವೆಂದು ತಿಳಿಯಲಿಕ್ಕೆ ಬೇಕು. ಮೊದಲು ಒಂಭತ್ತು ಭೇದ ಹಾಗೂ ಲಕ್ಷಣಗಳನ್ನು ಉದಾಹರಣೆಗಳೊಡನೆ ತಿಳಿಸಿದ್ದಾಗಿದೆ. ಆ ಮೇಲೆ ಇಲ್ಲಿ ಪುನಃ ಭೇದಗಳನ್ನು ಹೇಳಿ, ಅದರಲ್ಲೂ ಒಂದು ಅಪ್ರಾಸಂಗಿಕ ಭೇದವನ್ನು ಜೋಡಿಸುವುದರ ಅವಶ್ಯಕತೆಯಿರಲಿಲ್ಲ. ಕರ್ತೃವಿನ ಸಂಕ್ಷಿಪ್ತವಾದ ರಚನಾ ಶೈಲಿ ಯಲ್ಲಿ ಅದಕ್ಕಾಗಿ ಯಾವ ಅವಕಾಶವೂ ಇಲ್ಲ. ಈ ಭೇದಗಳ ಮಿಶ್ರರೂಪವೂ ಒಂದು ಆಗಬಹುದೆಂದು ಭ್ರಾಂತ ಕಲ್ಪನೆಯಿಂದ ಯಾವುನೋ ಓದುಗನೊಬ್ಬನು ಇದನ್ನು ಜೋಡಿಸಿ, ಗ್ರಂಥವನ್ನು ಪೂರ್ಣಗೊಳಿಸುವುದು ಉಚಿತವೆಂದು ತಿಳಿದನು. ಅಲ್ಲದೆ ತಮ್ಮ ಮನಸ್ಸಿಗೆ ಬಂದಂತೆ ಯೋಗ್ಯವಲ್ಲದ ಆ ಉದಾಹರಣೆಯನ್ನು ಕೊಟ್ಟು ಪೂರೈಸಿದನು.

೩೧ ನೆಯ ಗಾಥಾದಲ್ಲಿ ವೇಶ್ಯೆಯರ ಸ್ನೇಹ ಕಾಮುಕರ ಸತ್ಯಗಳು ನಿಜವಾದವು ಗಳಲ್ಲ; ಅದರಂತೆಯೇ ನಂದಿತಾಢ್ಯದ ಮುಖಾಂತರ ಪ್ರಾಕೃತದಲ್ಲಿ ಜಿಹ, ಕಿಹ, ತಿಹಗಳು ಇರಲಾರವು. ಸ್ವತಃ ಗ್ರಂಥಕಾರನ ಈ ಅನುಚಿತ ಉಪಮೆಗಳನ್ನು ಕುರಿತು ಡಾ. ವೇಲಂಕರನು ಸ್ವಾಭಾವಿಕವಾಗಿ ಆಶ್ಚರ್ಯವನ್ನು ಪ್ರಕಟಿಸಿದ್ದಾನೆ. ಅಂದರೂ ಗ್ರಂಥದ ಮೌಲಿಕ ಭಾಗವೆಂದು ಮನ್ನಿಸಿದ್ದಾನೆ. ಅದಕ್ಕೆ ಒಂದು ಕಾರಣವನ್ನೂ ಕೊಡದೆ ಇಲ್ಲ. ಗ್ರಂಥಕಾರನು ಜೈನ ಯತಿಯಾದುದರಿಂದ ಆಗ ಮೋಕ್ತ ಗಾಥಾ ಛಂದದ ಪಕ್ಷಪಾತಿಯಾಗಿದ್ದನು. ಅಲ್ಲದೆ ಅಪಭ್ರಂಶ ಭಾಷೆ ಮತ್ತು ಛಂದಗಳ ವಿಷಯ ದಲ್ಲಿ ತಿರಸ್ಕಾರ ದೃಷ್ಟಿಯುಳ್ಳವನಾಗಿದ್ದನು. ಆದರೆ ನನ್ನ ಅನುಮಾನದಂತೆ ಈ ಗಾಥೆಯೂ ಕೂಡ ಗ್ರಂಥದ ಮೂಲಾಂಶವಲ್ಲ, ಮತ್ತು ಅದು ಅಪಭ್ರಂಶವನ್ನು ತಿರಸ್ಕರಿಸುವ ಜಗೆಯೂ ಅಲ್ಲ, ಅಂದರೂ ಆದರೆ ವಿಶೇಷ ಪಕ್ಷಪಾತಿಯೊಬ್ಬನು ಅದನ್ನು ಜೋಡಿಸಿದಂತೆ ಇದೆ. ಅವನಿಗೆ ತನ್ನ ಕಾಲದ ಲೋಕಪ್ರಿಯ ಹಾಗೂ ವಾಸ್ತವಿಕ ಅಪಭ್ರಂಶದ ರೂಪಗಳ ಅಭಾವವನ್ನು ಈ ಕೃತಿಯಲ್ಲಿ ಕಂಡು ಅಸಮಾ ಧಾನವಾಗಿರಬೇಕು. ಅವನು ಕರ್ತೃವಿನ ಮೇಲೆ ವ್ಯಂಗ್ಯ ನುಡಿಯಲ್ಲಿ, ಅವನ ಪ್ರಾಕೃತವೊಂದು ವೇಶ್ಯೆ ಮತ್ತು ಕಾಮುಕರಿಗೆ ಸಮಾನವೆಂದು ಆರೋಪಿಸಿದನು. ಪ್ರಯೋಗ ಪ್ರಿಯತೆ, ಸತ್ಯತೆಗಳು ಇಲ್ಲದವುಗಳೆಂದೂ ಸಾರಿದನು. ಈ ಪ್ರಕಾರ ಮೇಲ್ಕಾಣಿಸಿದ ಪದ್ಯದ ಅನೌಚಿತ್ಯ ದೋಷವು ಪುಷ್ಟಿಕರವಾದ ಗುಣದಲ್ಲಿ ಪರಿವರ್ತನ ಗೊಳ್ಳುತ್ತದೆ. ಗ್ರಂಥಕರ್ತನು ಅಪಭ್ರಂಶದ ವಿಷಯದಲ್ಲಿ ಅನುಚಿತ ಹಾಗೂ ಅಪ್ರಾಸಂಗಿಕ ವಿದ್ವೇಷದ ಅಪರಾಧದಿಂದ ಮುಕ್ತನಾಗುತ್ತಾನೆ. ಈ ಗ್ರಂಥದ ಎರಡು ಟೀಕೆಗಳು ಲಭಿಸಿವೆ. ಒಂದು ರತ್ನಚಂದ್ರನು ರಚಿಸಿದುದು. ಇನ್ನೊಂದು ಯಾವನೋ ರಚಿಸಿದ ಅವಚೂರಿಯು. ಈ ಎರಡರಲ್ಲಿಯೂ ಸಮಸ್ತ ಪ್ರಕ್ಷಿಪ್ತವೆಂದು ಅನುಮಾನಿ

ಸುವಂಥ ಗಾಥೆಗಳನ್ನೆಲ್ಲ ಸ್ವೀಕರಿಸಲಾಗಿದೆ. ಇದರಿಂದ ಈ ಭಾಗವು ಅವರ ಪೂರ್ವ ದಲ್ಲಿಯೇ ಸಮಾವೇಶವಾಗಿತ್ತೆಂದು ತಿಳಿಯುತ್ತದೆ. ಉಳಿದ ಪ್ರಾಚೀನ ಪ್ರತಿಗಳ ಅವಶ್ಯಕತೆಯು ಬಹು ಮಹತ್ವದ್ದಾಗಿದೆ.

ಪ್ರಾಕೃತದಲ್ಲಿ ಛಂದಃ ಶಾಸ್ತ್ರದ ಸರ್ವಾಂಗೀಣ ನಿರೂಪಣೆಯನ್ನು ಮಾಡುವಂಥ ಸುಪ್ರಾಚೀನ ಕವಿಯು ಸ್ವಯಂಭುವು. ಆವನ ಪಉಮಚರಿಉ ಮತ್ತು ಹರಿವಂಶ ಚರಿಉ ಎಂಬ ಅಪಭ್ರಂಶ ಪುರಾಣಗಳ ಪರಿಚಯವನ್ನು ಈ ಮೊದಲು ಮಾಡಿಕೊಡ ಲಾಗಿದೆ. ಅದಕ್ಕನುಸರಿಸಿ ಅವನ ಗ್ರಂಥರಚನಾ ಕಾಲವು ೭-೮ನೆಯ ಶತಮಾನ ವೆಂದು ಸಿದ್ಧವಾಗುತ್ತದೆ. ಸ್ವಯಂಭೂ ಛಂದಸ್ಸನ್ನು ಈಗಲೂ ಶೋಧಿಸಲಾಗಿದೆ. ಆದರೆ ಒಂದೇ ಒಂದಾದ ಹಸ್ತಲಿಖಿತ ಪ್ರತಿಯಲ್ಲಿ ಪ್ರಾರಂಭದ ೨೨ ಪತ್ರಗಳು ದೊರ ಕದೆ ಇರುವುದರಿಂದ ಗ್ರಂಥದ ಅಷ್ಟು ಭಾಗವು ಅನುಪಲಬ್ಧವಾಗಿದೆ. ಈ ಗ್ರಂಥವು ಮುಖ್ಯವಾಗಿ ಎರಡು ಭಾಗಗಳಲ್ಲಿ ವಿಭಾಗ ಹೊಂದಿದೆ. ಅದರಲ್ಲಿ ಒಂದು ಪ್ರಾಕೃತ ಇನ್ನೊಂದು ಅಪಭ್ರಂಶ ವಿಷಯಗಳನ್ನು ಒಳಗೊಂಡಿವೆ. ಪ್ರಾಕೃತ ಛಂದದ ನಿರೂ ಪಣೆಯನ್ನು ಮೂರು ಪರಿಚ್ಛೇದಗಳಲ್ಲಿ ಮಾಡಲಾಗಿದೆ. ಆದಿವಿಧಿ, ಅರ್ಧಸಮ ಮತ್ತು ವಿಸಮವೃತ್ತಗಳೆಂದು ಆ ಪರಿಚ್ಛೇದಗಳಾಗಿವೆ ಅಪಭ್ರಂಶದ ನಿರೂಪಣೆಯು ಉಚ್ಛಾಹಾದಿ, ಛಪ್ಪಅಜಾತಿ, ಚಉಪ್ಪಅ, ದುವಅ, ಶೇಷ ದ್ವಿಪದಿ ಮತ್ತು ಉತ್ಥಕ್ಕ ಮೊದಲಾದ ಕ್ರಮದಲ್ಲಿ ಇದೆ. ಈ ಪ್ರಕಾರ ಇದರಲ್ಲಿ ಒಟ್ಟು ಒಂಭತ್ತು ಪ್ರಕರಣಗಳಿವೆ. ಪ್ರಾಕೃತ ಛಂದಸ್ಸಿನಲ್ಲಿ ಪ್ರಥಮ ಪರಿಚ್ಛೇದದೊಳಗೆ ಶಕ್ವರಿಯೇ ಮೊದಲಾದ ೧೩ ಪ್ರಕಾರದ ೬೩ ಛಂದಗಳ ನಿರೂಪಣೆಯು ಇದೆ. ಇದರಲ್ಲಿ ಹದಿ ನಾಲ್ಕು ಅಕ್ಷರಗಳಿಂದ ೨೬ ಅಕ್ಷರಗಳ ವರೆಗೆ ಇರುವ ನಾಲ್ಕು ಚರಣಗಳಿರುತ್ತವೆ. ಒಂದರಿಂದ ಹದಿಮೂರು ಅಕ್ಷರಗಳ ವರೆಗಿನ ವೃತ್ತಗಳ ಸ್ವರೂಪವನ್ನು ಪ್ರಾರಂಭದಲ್ಲಿ ಹೇಳಿರಬೇಕು. ಅದು ಗ್ರಂಥದ ಅನುಪಲಬ್ಧ ಭಾಗವಾಗಿದೆ. ಇದಕ್ಕಿಂತ ಹೆಚ್ಚಿನ ಅಕ್ಷರಗಳ ವೃತ್ತವನ್ನು ದಂಡಕವೆಂದು ಹೇಳಲಾಗಿದೆ. ಎರಡನೆಯ ಪರಿಚ್ಛೇದದಲ್ಲಿ ವೇಗವತೀ ಮೊದಲಾದ ಅರ್ಧಸಮ ವೃತ್ತಗಳ ನಿರೂಪಣೆಯು ಇದೆ. ಇವುಗಳ ಪ್ರಥಮ ಹಾಗೂ ದ್ವಿತೀಯ ಚರಣಗಳು ಪರಸ್ಪರ ಭಿನ್ನ ಹಾಗೂ ಮೂರು ನಾಲ್ಕನೆಯ ಚರಣ ಗಳು ಸಮವಾಗಿರುತ್ತವೆ. ಮೂರನೆಯ ಪರಿಚ್ಛೇದದಲ್ಲಿ ಉದ್ಗತವೇ ಮೊದಲಾದ ವಿಷಮ ವೃತ್ತಗಳ ವರ್ಣನೆಯೂ ಇದೆ. ಇವುಗಳ ನಾಲ್ಕೂ ಚರಣಗಳು ಪರಸ್ಪರ ಭಿನ್ನವಾಗಿರುತ್ತವೆ. ಅಪಭ್ರಂಶ ಛಂದಸ್ಸಿನಲ್ಲಿ ಮೊದಲು ಉತ್ಸಾಹ, ದೋಹಾ ಮತ್ತು ಅದರ ಭೇದ, ಮಾತ್ರಾ, ರಡ್ಡಾ ಮೊದಲಾದ ಹನ್ನೆರಡು ವೃತ್ತಗಳ ವಿವರ ವಿದೆ. ಇನ್ನು ಐದನೆಯ ಪರಿಚ್ಛೇದದಲ್ಲಿ ಆರು ಪದಗಳುಳ್ಳ ಧ್ರುವಕ, ಜಾತಿ, ಉಪ ಜಾತಿ ಮೊದಲಾದ ೨೪ ಛಂದಗಳ ವಿಷಯವಿದೆ. ಆರನೆಯದರಲ್ಲಿ ಒಂದು ನೂರು ಅರ್ಧಸಮ ಮತ್ತು ಎಂಟು ಸರ್ವಸಮ, ಇಂಥ ೧೨ ಚತುಷ್ಪದೀ ಧ್ರುವಕ ಛಂದಗಳನ್ನು ಕುರಿತು ಹೇಳಿದೆ. ಏಳನೆಯದರಲ್ಲಿ ೪೦ ಪ್ರಕಾರದ ದ್ವಿಪದಿಗಳ ವಿಷಯವಿದೆ. ಎಂಟ

ನೆಯದರಲ್ಲಿ ನಾಲ್ಕರಿಂದ ಹತ್ತು ಮಾತ್ರೆಗಳವರೆಗೆ ಇರುವ ಉಳಿದ ಹತ್ತು ದ್ವಿಪದಿಗಳ ವಿವರ ಬಂದಿದೆ. ಕೊನೆಯಲ್ಲಿ ಉತ್ಥವಕ, ಧ್ರುವಕ, ಛಡ್ಡನಿಕಾ ಮತ್ತು ಘೆತ್ತಾ ಮೊದಲಾದ ವೃತ್ತಗಳ ನಿರೂಪಣೆಯನ್ನು ಮಾಡಲಾಗಿದೆ.

ಸ್ವಯಂಭೂ–ಛಂದಸ್ಸಿಗೆ ತನ್ನವೇ ಆದ ಅನೇಕ ವಿಶೇಷತೆಗಳು ಇವೆ. ಅವುಗಳಲ್ಲಿ ಒಂದೆಂತೂ ಅದರ ಸಮಸ್ತ ರಚನೆ ಹಾಗೂ ಎಲ್ಲ ಉದಾಹರಣೆಗಳು ಪ್ರಾಕೃತ-ಅಪಭ್ರಂಶಾತ್ಮಕವಾಗಿವೆ. ಎರಡನೆಯದು ಅವನು ಮಾತ್ರಾ ಗಣಗಳ ಸಲುವಾಗಿ ತನ್ನ ಮೇಲಿನ ಸಂಜ್ಞೆಗಳೆನಿಸುವಂಥ ದ, ತ, ಚ ಮೊದಲಾದವುಗಳನ್ನು ಪ್ರಸ್ತುತಗೊಳಿಸಿದ್ದಾನೆ. ಮೂರನೆಯದಾಗಿ ಅವನು ಅಕ್ಷರ ಮತ್ತು ಮಾತ್ರಾ ಗಣಗಳಲ್ಲಿ ಯಾವ ಭೇದವನ್ನೂ ಮಾಡಲಿಲ್ಲ; ಅಲ್ಲದೆ ಸಂಸ್ಕೃತ ಅಕ್ಷರ ಗಣ ವೃತ್ತಗಳನ್ನೂ ಸಹ ಪ್ರಾಕೃತದ ಮಾತ್ರಾ ರೂಪದಲ್ಲಿ ತೋರಿಸಿದ್ದಾನೆ. ನಾಲ್ಕನೆಯದಾಗಿ ಸ್ವಯಂಭುವು ಪಾದದ ಮಧ್ಯದಲ್ಲಿ ಯತಿಯ ಸಂಬಂಧದ ವಿಷಯದಲ್ಲಿ ಎರಡು ಪರಂಪರೆಗಳನ್ನು ಉಲ್ಲೇಖಿಸಿದ್ದಾನೆ. ಅವುಗಳಲ್ಲಿ ಮಾಂಡವ್ಯ, ಭರತ, ಕಶ್ಯಪ ಮತ್ತು ಸೈತವ ಇವರು ಯತಿಯನ್ನು ಮನ್ನಿಸಿಲ್ಲ. ಸ್ವಯಂಭುವು ತಾನು ಇದೇ ಪರಂಪರೆಯವನೆಂದು ಪ್ರಕಟಗೊಳಿಸಿದ್ದಾನೆ. ಇನ್ನು ಐದನೆಯದಾಗಿ ಅವನು ಕೊಟ್ಟ ಉದಾಹರಣೆಗಳು ಅವನ ಕಾಲದ ಪ್ರಾಕೃತ ಲೋಕ ಸಾಹಿತ್ಯದಿಂದ ಯಾವ ಧಾರ್ಮಿಕ, ಸಾಂಪ್ರದಾಯಿಕ ಭೇದ-ಭಾವಗಳನ್ನು ಮಾಡದೆ ಸ್ವೀಕರಿಸಿದಂಥವು ಇವೆ. ಇನ್ನೂ ಹೆಚ್ಚು ಉದಾಹರಣೆಗಳ ಜೊತೆಯಲ್ಲಿ ಅವುಗಳ ಕರ್ತೃಗಳ ಉಲ್ಲೇಖವನ್ನೂ ಸಹ ಮಾಡಿದ್ದಾನೆ. ಒಟ್ಟು ಉದಾಹರಣಾತ್ಮಕ ಪದ್ಯಗಳ ಸಂಖ್ಯೆಯು ೨೦೬ ಇದೆ. ಅವುಗಳಲ್ಲಿ ೧೨೮ ಪದ್ಯಗಳು ಪ್ರಾಕೃತದವು. ಉಳಿದುವು ಅಪಭ್ರಂಶವಾಗಿವೆ. ಇಲ್ಲಿ ಉಲ್ಲೇಖಿಸಿದ ಕವಿಗಳ ಸಂಖ್ಯೆಯು ೫೮ ಇದೆ. ಅವುಗಳಲ್ಲಿ ಎಲ್ಲಕ್ಕೂ ಹೆಚ್ಚು ಪದ್ಯಗಳ ಕರ್ತೃಗಳು ಸುದ್ಧಸಹಾವ (ಶುದ್ಧ ಸ್ವಭಾವ) ಮತ್ತು ಸುದ್ಧಸೀಲರು ಕಂಡುಬರುತ್ತಾರೆ. ಇವರಿಬ್ಬರೂ ಒಬ್ಬನೇ ಆಗಿದ್ದರೆ ಆಶ್ಚರ್ಯಪಡುವ ಕಾರಣವಿಲ್ಲ. ಉಳಿದವರಲ್ಲಿ ಕಾಲಿದಾಸ, ಗೋವಿಂದ, ಚಉಮುಹ, ಮಯೂರ, ವೇತಾಲ, ಹಾಲ ಮೊದಲಾದವರ ಹೆಸರುಗಳು ಪರಿಚಿತವಾಗಿವೆ. ಇನ್ನು ಇಬ್ಬರು ಕವಯಿತ್ರಿಯರಾದ ರಾಹಾ ಮತ್ತು ವಿಜ್ಜಾ ಇವರ ಹೆಸರುಗಳನ್ನು ಗಮನದಲ್ಲಿಡುವಂತಿದೆ. ಅಪಭ್ರಂಶದ ಉದಾಹರಣೆಗಳಲ್ಲಿ ಗೋವಿಂದ ಮತ್ತು ಚತುರ್ಮುಖ ಇವರ ಕೃತಿಗಳಿಗೆ ಪ್ರಧಾನತೆಯಿದೆ. ಅದರಿಂದ ಅವರ ಕ್ರಮವಾಗಿ ಹರಿವಂಶ ಮತ್ತು ರಾಮಾಯಣ ವಿಷಯದ ಗ್ರಂಥಗಳಾಗಿರುವ ಸಂಭವವಿದೆ. ಮೇಲ್ಕಾಣಿಸಿದ ಪ್ರತಿಯೊಂದು ಪರಿಚ್ಛೇದದ ಅಂತಿಮ ಪದ್ಯದಲ್ಲಿ ಸ್ವಯಂಭುವು ತನ್ನ ಕೃತಿಯನ್ನು ಪಂಚಂಸಸಾರಭೂತಂ ಎಂದು ಹೇಳಿದ್ದಾನೆ. ಇದರಿಂದ ಈ ರಚನೆಯಲ್ಲಿ ಗಣಗಳ ವಿಧಾನವನ್ನು ದ್ವಿಮಾತ್ರಿಕದಿಂದ ಆರಂಭಿಸಿ ಆರು ಮಾತ್ರಿಕೆಗಳ ವರೆಗೆ ಐದು ಪ್ರಕಾರದಿಂದ ಮಾಡಲಾಗಿದೆಯೆಂಬ ಅಭಿಪ್ರಾಯವಾಗಿದೆ ಎಂಬುದು ಗೊತ್ತಾಗುತ್ತದೆ.

ಕವಿದರ್ಪಣ ಎಂಬ ಹೆಸರಿನ ಪ್ರಾಕೃತ ಛಂದ-ಶಾಸ್ತ್ರದ ಕರ್ತೃವಿನ ಹೆಸರು ಅಜ್ಞಾತವಾಗಿದೆ. ಇದನ್ನು ಒಂದೇ ಒಂದು ಪ್ರತಿಯನ್ನು ಇಟ್ಟುಕೊಂಡು ಸಂಪಾದಿಸ ಲಾಗಿದೆ. ಈ ಪ್ರತಿಯ ಪ್ರಾರಂಭದ ಹಾಗೂ ಕೊನೆಯ ಪುಟಗಳು ನಷ್ಟವಾಗಿರುವುದ ರಿಂದ ಎರಡೂ ಮಗ್ಗಲು ಕೃತಿಯು ಅಪೂರ್ಣವಾಗಿದೆ. ಈಗ ಲಭಿಸಿರುವ ಕೃತಿಯ ಭಾಗದಿಂದ ಕರ್ತೃವಿನ ವಿಷಯವೂ ಸಹ ಏನೂ ಗೊತ್ತಾಗುವುದಿಲ್ಲ. ಜೊತೆಗೆ ಸಂಸ್ಕೃತ ಟೀಕೆಯೂ ಲಭಿಸಿರುವುದಾದರೂ ಅದರಿಂದಲೂ ಲೇಖಕನ ವಿಷಯವು ತಿಳಿಯುವುದಿಲ್ಲ. ಅಂದರೂ ನಂದಿಷೇಣ ಕೃತ ಅಜಿತ-ಶಾಂತಿಸ್ತವದ ಟೀಕಾಕಾರನಾದ ಜಿನಪ್ರಭ ಸೂರಿಯು ಈ ಗ್ರಂಥದ ನಾಮೋಲ್ಲೇಖ ಮಾಡಿದ್ದಾನೆ. ಅಲ್ಲದೆ ಇದರ ೩೪ ಪದ್ಯ ಗಳನ್ನೂ ಉದಹರಿಸಿದ್ದಾನೆ. ಇದರಿಂದ ಇದರ ರಚನಾ ಕಾಲವು ವಿ. ಸಂ. ೧೩೬೫ ಕ್ಕಿಂತ ಮುಂಚಿನದೆಂದು ಗೊತ್ತಾಗುತ್ತದೆ. ಗ್ರಂಥದಲ್ಲಿ ರತ್ನಾವಲಿಯ ಕರ್ತೃವಾದ ಹರ್ಷದೇವ, ಹೇಮಚಂದ್ರ, ಸಿದ್ಧರಾಜ ಜಯಸಿಂಹ, ಕುಮಾರಪಾಲ ಮೊದಲಾದ ವರ ಹೆಸರುಗಳು ಬಂದಿವೆ. ಇದರಿಂದ ಗ್ರಂಥದ ಪೂರ್ವಾವಧಿಯು ೧೩ನೆಯ ಶತ ಮಾನವೆಂದು ನಿಶ್ಚಿತಗೊಳ್ಳುತ್ತದೆ. ಅಂತೂ ಈ ಗ್ರಂಥವು ಕ್ರಿ ಶ. ೧೧೬೨–೧೩೦೮ರ ಮಧ್ಯದಲ್ಲಿ ಎಂದಾದರೂ ಬರೆದದ್ದು ಇದೆ. ಗ್ರಂಥದಲ್ಲಿ ಆರು ಉದ್ದೇಶಗಳಿವೆ. ಮೊದಲನೆಯ ಉದ್ದೇಶದಲ್ಲಿ ಮಾತ್ರಾ ಮತ್ತು ವರ್ಣಗಳ ವಿಷಯವಿದೆ. ಎರಡನೆಯ ದರಲ್ಲಿ ಮಾತ್ರಾ ಛಂದಗಳ ವಿವರವು ಬರುತ್ತದೆ. ಮೂರನೆಯದರಲ್ಲಿ ವರ್ಣ ವೃತ್ತಗಳ ವಿಷಯವಿದೆ. ನಾಲ್ಕನೆಯದರಲ್ಲಿ ೨೬ ಜಾತಿಗಳನ್ನೂ ಐದನೆಯದರಲ್ಲಿ ವೈತಾಲೀಯ ಮೊದಲಾದ ೧೧ ಉಭಯ ಛಂದಗಳನ್ನೂ ಆರನೆಯದರಲ್ಲಿ ೬ ಪ್ರತ್ಯಯಗಳ ವರ್ಣನೆ ಯನ್ನೂ ಮಾಡಲಾಗಿದೆ. ಈ ಪ್ರಕಾರ ಒಟ್ಟು ಎಲ್ಲವೂ ಸೇರಿ ೨೪ ಸಮ, ೧೫ ಅರ್ಧ ಸಮ ಮತ್ತು ೧೩ ಮಿಶ್ರ ಹೀಗಾಗಿ ೫೨ ಪ್ರಾಕೃತ ಛಂದಗಳ ನಿರೂಪಣೆಯು ಇದೆ. ಇದು ಸ್ಪಷ್ಟವಾಗಿಯೂ ಅಪೂರ್ಣವಾಗಿದೆ. ಇದು ಸ್ವಯಂಭೂ ಮತ್ತು ಹೇಮ ಚಂದ್ರರ ಕೃತಿಗಳ ತರುವಾಯ ವಿಶೇಷವಾಗಿ ರಚನೆಯಾಗಿದೆ. ಆದರೆ ಲೇಖಕನ ಉದ್ದೇಶವು ಸಂಪೂರ್ಣ ಛಂದಸ್ಸನ್ನು ವಿವರಿಸುವುದಾಗಿಲ್ಲ. ಕೆಲವೊಂದು ಸುಪ್ರಚಲಿತ ರೂಪಗಳನ್ನು ಮಾತ್ರ ಪ್ರರೂಪಣ ಮಾಡುವುದಾಗಿದೆ ಎಂದು ಗೊತ್ತಾಗುತ್ತದೆ. ಉದಾಹರಣೆಗಳ ಸಂಖ್ಯೆಯು ೬೯ ಮಾತ್ರ ಇದೆ. ಇವೆಲ್ಲವೂ ಗ್ರಂಥಕಾರನು ಸ್ವತಃ ನಿರ್ಮಿಸಿದವುಗಳಾಗಿವೆ. ಟೀಕೆಯಲ್ಲಿ ಬೇರೆ ೬೧ ಉದಾಹರಣೆಗಳು ಕಂಡುಬರುತ್ತವೆ. ಇವುಗಳನ್ನು ಬೇರೆ ಕಡೆಯಿಂದ ಎತ್ತಿಕೊಳ್ಳಲಾಗಿದೆ. ಎರಡನೆಯ ಉದ್ದೇಶದಲ್ಲಿ ಬರುವ ಮಾತ್ರಾ ವೃತ್ತಗಳ ನಿರೂಪಣೆಯು ಬಹಳಷ್ಟು ಹೇಮಚಂದ್ರನನ್ನು ಅನು ಸರಿಸಿದೆ. ಆದರೂ ಕೆಲವೊಂದೆಡೆಯಲ್ಲಿ ಸ್ವಲ್ಪ ಮೌಲಿಕತೆಯೂ ಕಂಡುಬರುತ್ತದೆ.

ಛಂದಃ ಕೋಶದ ಕರ್ತೃವಾದ ರತ್ನಶೇಖರನು ನಾಗಪುರೀಯ ತಪಾಗಚ್ಛದ ಹೇಮತಿಲಕ ಸೂರಿಯ ಶಿಷ್ಯನಾಗಿದ್ದನು. ಇವನ ಜನ್ಮವು ಪಟ್ಟಾವಲಿಗೆ ಅನುಸರಿಸಿ ವಿ. ಸಂ. ೧೩೬೨ರಲ್ಲಿ ಆದುದು ತಿಳಿಯುತ್ತದೆ. ಇವನ ಇನ್ನೆರಡು ಕೃತಿಗಳಾದ

ಶ್ರೀಪಾಲಚರಿತ್ರ (ವಿ. ಸಂ. ೧೪೨೮) ಮತ್ತು ಗುಣಸ್ಥಾನ-ಕ್ರಮಾರೋಹ (ವಿ. ಸಂ. ೧೪೪೭) ಇವು ಪ್ರಕಟವಾಗಿವೆ. ಗ್ರಂಥದಲ್ಲಿ ಒಟ್ಟು ೭೪ ಪ್ರಾಕೃತ ಮತ್ತು ಅಪಭ್ರಂಶ ಪದ್ಯಗಳು ಇವೆ. ಇವುಗಳಲ್ಲಿ ಕ್ರಮವಾಗಿ ಲಘು-ಗುರು ಅಕ್ಷರಗಳನ್ನೂ, ಮತ್ತು ಅಕ್ಷರ ಗಣಗಳನ್ನೂ, ಎಂಟು ವರ್ಣ ವೃತ್ತಗಳನ್ನೂ, ೩೦ ಮಾತ್ರಾ ವೃತ್ತಗಳನ್ನೂ ಮತ್ತು ಕೊನೆಯಲ್ಲಿ ಗಾಥಾ ಮತ್ತು ಅದರ ಭೇದ ಪ್ರಭೇದಗಳ ನಿರೂಪಣೆಯನ್ನು ಮಾಡಲಾಗಿದೆ. ಪ್ರಾಕೃತ-ಪಿಂಗಲದಲ್ಲಿ ೪೦ ಮಾತ್ರಾ ವೃತ್ತಗಳು ಕಂಡು ಬರುತ್ತವೆ. ಅವುಗಳಿಗಿಂತ ಈ ಗ್ರಂಥದ ೧೫ ವೃತ್ತಗಳು ಸಂಪೂರ್ಣ ಭಿನ್ನವಾಗಿವೆ; ನವೀನವೂ ಆಗಿವೆ. ಇವುಗಳ ಲಕ್ಷಣ ಮತ್ತು ಉದಾಹರಣೆಗಳೆಲ್ಲ ಅಪಭ್ರಂಶದಲ್ಲಿ ಇವೆ. ಒಂದೇ ಪದ್ಯದಲ್ಲಿ ಎರಡರ ಸಮಾವೇಶವನ್ನೂ ಸಹ ಮಾಡಲಾಗಿದೆ. ಗಾಥೆಗಳ ಲಕ್ಷಣ ಮೊದಲಾದವುಗಳು ಪ್ರಾಕೃತ ಗಾಥೆಗಳಲ್ಲಿ ಇವೆ. ಅಪಭ್ರಂಶ ಛಂದಗಳ ನಿರೂಪಕ ಪದ್ಯಗಳಲ್ಲಿ ಬಹಳಷ್ಟು ಪದ್ಯಗಳು ಎರಡನೆಯ ಕಡೆಯಿಂದ ಉದ್ಧೃತ ಮಾಡಿದ್ದು ಕಂಡುಬರುತ್ತದೆ. ಯಾಕೆಂದರೆ ಅವುಗಳ ಜೊತೆಯಲ್ಲಿ ಅವುಗಳ ಕರ್ತೃಗಳ ಹೆಸರುಗಳನ್ನು ಗುಲ್ಹ, ಅರ್ಜುನ, ಪಿಂಗಲ ಎಂದು ಮೊದಲಾಗಿ ಜೋಡಿಸಲಾಗಿದೆ. ಇವುಗಳಲ್ಲಿ ಪಿಂಗಲನ ಹೆಸರಿನಿಂದ ಒಂದು ಅನುಮಾನವನ್ನು ಮಾಡಲಿಕ್ಕೆ ಬರುತ್ತದೆ. ಅದು ಸಹಜವೂ ಆಗಿದೆ. ಛಂದಃಕೋಶದ ಕರ್ತೃವು ಆ ಪದ್ಯಗಳನ್ನು ಉಪಲಬ್ಧ ಪ್ರಾಕೃತ ಪಿಂಗಲದಿಂದಲೇ ತಕ್ಕೊಂಡಿರಬೇಕು. ಆದರೆ ಹಾಗೆ ಆದುದಿಲ್ಲ. ಆ ಪದ್ಯಗಳು ಪ್ರಾಕೃತ ಪಿಂಗಲದಲ್ಲಿ ಲಭಿಸುವದಿಲ್ಲ. ಕೆಲವೊಂದು ಪದ್ಯಗಳಂತು ಇಲ್ಲಿ ಗುಲ್ಹ ಕವಿ ಕೃತವೂ ಇಲ್ಲವೆ ಕರ್ತೃವಿನ ಹೆಸರುಗಳು ಇಲ್ಲದುವೂ ಆಗಿವೆ. ಮತ್ತು ಅವೇ ಪದ್ಯಗಳು ಪ್ರಾಕೃತ ಪಿಂಗಲದಲ್ಲಿ ಪಿಂಗಲನ ನಾಮ ನಿರ್ದೇಶ ಸಹಿತ ಉಪಲಬ್ಧವಿವೆ. ಇದರಿಂದ ವಿದ್ವಾನ್ ಸಂಪಾದಕ ಡಾ. ವೇಲಂಕರರು ಇಬ್ಬರೂ ಈ ಪದ್ಯಗಳನ್ನು ಬೇರೆಕಡೆಯಿಂದ ತಕ್ಕೊಂಡಿರಬೇಕೆಂದು ಅನುಮಾನಿಸಿದುದು ಯೋಗ್ಯವೇ ಆಗಿದೆ. ಆದರೆ ರತ್ನಶೇಖರನು ಸೌಜನ್ಯದಿಂದ ಅವುಗಳನ್ನು ಇದ್ದಕ್ಕಿದ್ದಂತೆ ಇಟ್ಟಿದ್ದಾನೆ. ಪಿಂಗಲನು ಮೊದಲಿನ ಕರ್ತೃಗಳ ಹೆಸರುಗಳನ್ನು ತೆಗೆದುಹಾಕಿ, ತನ್ನ ಹೆಸರನ್ನು ಸಮಾವೇಶಗೊಳಿಸಿದ್ದಾನೆ. ಪಿಂಗಲನಲ್ಲಿ ರತ್ನಶೇಖರನ ತರುವಾಯದ ಕಾಲದ ಘಟನೆಗಳ ಉಲ್ಲೇಖಗಳು ಇವೆ. ಅದರಿಂದ ಈ ಕೃತಿಯಲ್ಲಿ ರತ್ನಶೇಖರನು ಪಿಂಗಲನ ಕೃತಿಯಿಂದಲೇ ಉದಾಹರಣೆಗಳನ್ನು ಎತ್ತಿಕೊಳ್ಳಬೇಕೆಂದೇನೂ ಇಲ್ಲ. ಹೀಗಾಗಿ ಪಿಂಗಲನಿಂದ ಯಾವ ಭಾಗಗಳನ್ನು ಛಂದಃಕೋಶದಲ್ಲಿ ಉಪಯೋಗಿಸಿದೆಯೆಂದು ಭಾವಿಸಲಾಗುವುದೋ ಆ ಭಾಗಗಳು ಈಗಿರುವ ಪ್ರಾಕೃತ ಪಿಂಗಲನ ಕೃತಿಗಿಂತ ಪೂರ್ವದ ಯಾವುದೋ ಬೇರೆ ಕೃತಿಯಿಂದ ಎತ್ತಿಕೊಂಡುದಿರಬೇಕೆಂದು ಸಿದ್ಧವಾಗುತ್ತದೆ. ಇನ್ನೂ ಬೇರೆ ಪಿಂಗಲನಿಗೆ ಸಂಬಂಧಿಸಿದ ಉಲ್ಲೇಖಗಳಿಂದಲೂ ಈ ಮಾತು ನಿಶ್ಚಿತವಾಗುತ್ತದೆ.

ಸಂಸ್ಕೃತದಲ್ಲಿ ರಚಿತವಾದ ಹೇಮಚಂದ್ರ ಕೃತ ಛಂದೋನುಶಾಸನದ (೧೩ ನೆಯ

ಶತಮಾನ) ಉಲ್ಲೇಖವು ಛಂದಚೂಡಾಮಣಿ ಎಂಬ ಹೆಸರಿನಿಂದಲೂ ಆದದ್ದಿದೆ. ಈ ಕೃತಿಯೂ ಎಂಟು ಅಧ್ಯಾಯಗಳಲ್ಲಿ ವಿಭಾಗಗೊಂಡಿದೆ. ಇದರ ಮೇಲೆ ಸ್ವೋಪಜ್ಞ ಟೀಕೆಯೂ ಸಹ ಇದೆ. ಈ ಗ್ರಂಥದಲ್ಲಿ ಹೇಮಚಂದ್ರನು ತನ್ನ ವ್ಯಾಕರಣಾದಿ ಗ್ರಂಥಗಳಲ್ಲಿ ಮಾಡಿದಂತೆಯೇ ಯಥಾಶಕ್ತಿ ತನ್ನ ಕಾಲದವರೆಗೆ ಅವಿಸ್ಮೃತ ಹಾಗೂ ಪೂರ್ವಾಚಾರ್ಯರು ನಿರೂಪಿಸಿದ ಸಮಸ್ತ ಸಂಸ್ಕೃತ, ಪ್ರಾಕೃತ, ಅಪಭ್ರಂಶ ಛಂದಸ್ಸಿನ ಸಮಾವೇಶವನ್ನು ಮಾಡಿಕೊಡುವ ಪ್ರಯತ್ನ ಮಾಡಿದ್ದಾನೆ, ಅವು ಅವನ ಕಾಲದಲ್ಲಿ ಪ್ರಚಾರದಲ್ಲಿ ಇರಲಿ ಅಥವಾ ಇರದೆ ಇರಲಿ. ಭರತ ಮತ್ತು ಪಿಂಗಲರ ಜೊತೆಯಲ್ಲಿ ಅವನು ಸ್ವಯಂಭುವನ್ನೂ ಆದರದಿಂದ ಸ್ಮರಿಸಿದ್ದಾನೆ. ಮಾಂಡವ್ಯ, ಭರತ, ಕಾಶ್ಯಪ, ಸೈತವ, ಜಯದೇವ ಮೊದಲಾದ ಪ್ರಾಚೀನ ಛಂದಃಶಾಸ್ತ್ರ ಪ್ರಣೇತೃಗಳ ಉಲ್ಲೇಖ ವನ್ನು ಮಾಡಿದ್ದಾನೆ. ಅವನು ಛಂದದ ಲಕ್ಷಣವನ್ನಂತೂ ಸಂಸ್ಕೃತದಲ್ಲಿ ಬರೆದಿದ್ದಾನೆ. ಆದರೆ ಅವುಗಳ ಉದಾಹರಣೆಗಳನ್ನು ಅವನ ಪ್ರಯೋಗಕ್ಕನುಸರಿಸಿ ಸಂಸ್ಕೃತ, ಪ್ರಾಕೃತ ಅಥವಾ ಅಪಭ್ರಂಶದಲ್ಲಿ ಕೊಟ್ಟಿದ್ದಾನೆ. ಉದಾಹರಣೆಗಳು ಅವನ ಸ್ವನಿರ್ಮಿತವಾಗಿವೆ; ಬೇರೆ ಕಡೆಯಿಂದ ಎತ್ತಿಕೊಂಡವುಗಳಲ್ಲ. ಸ್ವಯಂಭೂ ಛಂದಸ್ಸಿನಲ್ಲಿ ಕಂಡುಬರದಂಥ ಪ್ರಾಕೃತ ಛಂದಸ್ಸಿನ ಹೆಸರುಗಳನ್ನೂ ಲಕ್ಷಣಗಳನ್ನೂ ಮತ್ತು ಉದಾಹರಣೆಗಳನ್ನೂ ಕೂಡ ಹೇಮಚಂದ್ರನು ನೀಡಿದ್ದಾನೆ. ಸ್ವಯಂಭುವು ಒಂದ ರಿಂದ ಹದಿನಾರು ಅಕ್ಷರಗಳ ವೃತ್ತಗಳಲ್ಲಿ ಸುಮಾರು ಒಂದು ನೂರು ಭೇದಗಳನ್ನು ಹೇಳಿದ್ದಾನೆ. ಆ ಸ್ಥಳದಲ್ಲಿ ಹೇಮಚಂದ್ರನು ಅವುಗಳಲ್ಲಿ ೨೮೬ ಭೇದ-ಪ್ರಭೇದಗಳನ್ನು ವಿವರಿಸಿದ್ದಾನೆ. ಇವುಗಳಲ್ಲಿ ದಂಡಕವು ಸಮಾವೇಶವಾಗಿಲ್ಲ. ಸಂಸ್ಕೃತ, ಪ್ರಾಕೃತ ಮತ್ತು ಅಪಭ್ರಂಶಗಳ ಸಮಸ್ತ ಪ್ರಕಾರದ ಛಂದಗಳ ಶಾಸ್ತ್ರೀಯ ಲಕ್ಷಣ ಮತ್ತು ಉದಾಹರಣೆಗಳಿಗಾಗಿ ಈ ಕೃತಿಯು ಮಹಾಕೋಶವಾಗಿದೆ.

**ಛಂದಃಶಾಸ್ತ್ರ–ಸಂಸ್ಕೃತ :—**

ಸಂಸ್ಕೃತದಲ್ಲಿ ಇನ್ನು ಕೆಲವು ಛಂದಸ್ಸನ್ನು ಕುರಿತು ರಚಿಸಿದ ಗ್ರಂಥಗಳು ಕಂಡು ಬರುತ್ತವೆ. ಅಂಥವುಗಳಲ್ಲಿ ನೇಮಿಯ ಪುತ್ರನಾದ ವಾಗ್ಭಟ್ಟ ಕೃತ ಛಂದೋನು ಶಾಸನವು ಐದು ಅಧ್ಯಾಯಗಳುಳ್ಳ ಗ್ರಂಥವಾಗಿದೆ. ಅದರ ಉಲ್ಲೇಖವು ಕಾವ್ಯಾನು ಶಾಸನದಲ್ಲಿ ಕಂಡುಬರುತ್ತದೆ. ಜಯಕೀರ್ತಿಯು ರಚಿಸಿದ ಛಂದೋನು ಶಾಸನವು ವಿ. ಸಂ. ೧೧೯೨ ರಲ್ಲಿ ರೂಪುಗೊಂಡ ಕೃತಿಯಾಗಿದೆ. ಜಿನದತ್ತನ ಶಿಷ್ಯನಾದ ಅಮರ ಚಂದ್ರನು ರಚಿಸಿದ ಛಂದೋ-ರತ್ನಾವಲಿ, ರತ್ನಮಂಜೂಷಾ–ಇದರ ಇನ್ನೊಂದು ಹೆಸರು ಛಂದೊ-ವಿಚಿತಿ-ಇದರ ಒಟ್ಟು ಹನ್ನೆರಡು ಅಧ್ಯಾಯಗಳಲ್ಲಿ ಎಂಟು ಅಧ್ಯಾಯಗಳ ಮೇಲೆ ಟೀಕೆಯೂ ಕೂಡ ಲಭಿಸಿದೆ. ಈ ಕೃತಿಗಳಲ್ಲಿ ಸಹ ಅವವುಗಳದೇ ಆದ ವಿಶೇಷತೆಗಳಿವೆ. ಆದರೂ ಶಾಸ್ತ್ರೀಯ ದೃಷ್ಟಿಯಿಂದ ಇವುಗಳ ಸಂಪೂರ್ಣ ವಿಷಯ ಗಳ ಪ್ರರೂಪಣೆಯು ಪೂರ್ವದ ಗ್ರಂಥಗಳಲ್ಲಿ ಸಮಾವೇಶವಾದುದು ಕಂಡು ಬರುತ್ತದೆ.

**ಕೋಶ-ಪ್ರಾಕೃತ :—**

ಪ್ರಾಕೃತ ಕೋಷಗಳಲ್ಲಿ ಎಲ್ಲಕ್ಕೂ ಪ್ರಾಚೀನವಾದ ಕೃತಿಯು ಧನಪಾಲ ಕೃತ ಪಾಇಯಲಚ್ಛೀ—ನಾಮಮಾಲಾ ಎಂಬುದಾಗಿದೆ. ಇದರ ಪ್ರಶಸ್ತಿಗೆ ಅನುಸರಿಸಿ, ಕರ್ತೃವು ತನ್ನ ಕೊನೆಯ ಕಿರಿಯ ತಂಗಿಯಾದ ಸುಂದರಿಗಾಗಿ ಇದನ್ನು ಧಾರಾನಗರ ದಲ್ಲಿ ವಿ. ಸಂ. ೧೦೨೯ ರಲ್ಲಿ ರಚಿಸಿದನು. ಆಗ ಮಾಳವದ ಅರಸನು ಮಾನ್ಯ ಖೇಟ ವನ್ನು ಸುಲಿಗೆ ಗೈದನು. ಈ ಘಟನೆಯು ಉಳಿದ ಐತಿಹಾಸಿಕ ಘಟನೆಗಳಿಂದಲೂ ಪ್ರಾಮಾಣಿಕವೆನಿಸಿ ಸಿದ್ಧವಾಗಿದೆ. ಧಾರಾನರೇಶ ಹರ್ಷದೇವನ ಒಂದು ಶಿಲಾಲೇಖ ದಲ್ಲಿ. ಅವನು ರಾಷ್ಟ್ರಕೂಟ ರಾಜನಾದ ಕೊಟ್ಟಿಗದೇವನ ಲಕ್ಷ್ಮಿಯನ್ನು ಅಪಹರಣ ಮಾಡಿದ ಉಲ್ಲೇಖವು ಬರುತ್ತದೆ. ಈ ಕೋಷದಲ್ಲಿ ಅಮರಕೋಷದ ರೀತಿಯಲ್ಲಿ ಪ್ರಾಕೃತ ಪದ್ಯಗಳಲ್ಲಿ ಸುಮಾರು ಒಂದು ಸಾವಿರ ಪ್ರಾಕೃತ ಶಬ್ದಗಳ ಪರ್ಯಾಯ ವಾಚೀ ಶಬ್ದಗಳನ್ನು ೨೭೦ ಗಾಹೆಗಳಲ್ಲಿ ಹೇಳಿದೆ. ಪ್ರಾರಂಭದಲ್ಲಿ ಕಮಲಾಸನಾದಿ ೧೮ ಹೆಸರುಗಳ ಪರ್ಯಾಯ ಪದಗಳನ್ನು ಒಂದೊಂದು ಗಾಥಾದಲ್ಲಿಯೂ, ಮುಂದೆ ಲೋಕಾಗ್ರ ಮೊದಲಾದ ೧೭೭ ಪದಗಳನ್ನು ಅರ್ಧ ಅರ್ಧ ಗಾಥೆಗಳಲ್ಲಿಯೂ, ತರು ವಾಯ ೫೯೭ ರ ವರೆಗೆ ಒಂದೊಂದು ಚರಣಗಳಲ್ಲಿಯೂ ಉಳಿದ ಪದಗಳನ್ನು ಭಿನ್ನ ರೂಪದಿಂದ ಅರ್ಥಾತ್ ಒಂದು ಗಾಥಾದಲ್ಲಿ ನಾಲ್ಕು. ಐದು ಕೆಲವೆಡೆಗಳಲ್ಲಿ ಆರು ನಾಮ ಗಳನ್ನು ಸಹ ಹೇಳಿದೆ. ಗ್ರಂಥದಲ್ಲಿ ಇವೇ ನಾಲ್ಕು ಪರಿಚ್ಛೇದಗಳಾಗಿವೆ. ಹೆಚ್ಚಾಗಿ ನಾಮಗಳೂ ಅವುಗಳ ಪರ್ಯಾಯಗಳೂ ತದ್ಭವಗಳಾಗಿವೆ. ನಿಜವಾದ ದೇಶೀ ಶಬ್ದ ಗಳು ಹೆಚ್ಚಿಗೆ ಹೆಚ್ಚೆಂದರೆ ಐದನೆಯ ಭಾಗದಷ್ಟಿವೆ.

ಇನ್ನೊಂದು ಪ್ರಾಕೃತ ಕೋಷವು ಹೇಮಚಂದ್ರ ಕೃತ ದೇಶೀ-ನಾಮ-ಮಾಲಾ ಎಂಬುದಾಗಿದೆ. ನಿಜವಾಗಿಯೂ ಈ ಗ್ರಂಥದ ಹೆಸರನ್ನು ಸ್ವತಃ ಲೇಖಕನು ಕೃತಿಯ ಪ್ರಾರಂಭದಲ್ಲಿಯೂ ಕೊನೆಯಲ್ಲಿಯೂ ಸ್ಪಷ್ಟವಾಗಿಯೂ ದೇಶೀ-ಶಬ್ದ ಸಂಗ್ರಹ ಎಂದು ಸೂಚಿಸಿದ್ದಾನೆ. ಹಾಗೂ ಕೊನೆಯ ಗಾಥಾದಲ್ಲಿ ಇದನ್ನು ರತ್ನಾ ವಲೀ ಎಂಬ ಹೆಸರಿನಿಂದಲೂ ಕರೆದಿದ್ದಾನೆ. ಆದರೆ ಈ ಗ್ರಂಥವನ್ನು ಮೊದಲ ಸಲ ಸಂಪಾದಿಸಿದ ಡಾ. ಪಿಶ್ಶೆಲನು ಕೆಲವೊಂದು ಹಸ್ತ ಪ್ರತಿಗಳ ಆಧಾರದಿಂದ ಈ ಹೆಸರೇ ಹೆಚ್ಚು ಸಾರ್ಥಕವೆಂದು ತಿಳಿದು ಸ್ವೀಕರಿಸಿದ್ದಾನೆ. ಮುಂದಿನ ಸಂಸ್ಕರಣಗಳಲ್ಲೆಲ್ಲ ಇದೇ ಹೆಸರು ಇದಕ್ಕೆ ರೂಢವಾಗಿಬಿಟ್ಟಿದೆ. ಈ ಕೋಷದಲ್ಲಿ ತನ್ನ ರೀತಿಯಲ್ಲಿ ಒಂದು ಪರಿ ಪೂರ್ಣ ಕ್ರಮ ವ್ಯವಸ್ಥೆಯನ್ನು ಪಾಲಿಸಿಕೊಂಡು ಹೋಗಲಾಗಿದೆ. ಒಟ್ಟು ಗಾಥೆಗಳ ಸಂಖ್ಯೆಯು ೭೮೩ ಇದ. ಇವುಗಳನ್ನು ಎಂಟು ವರ್ಗಗಳಲ್ಲಿ ವಿಭಜಿಸಲಾಗಿದೆ. ಇವು ಗಳಲ್ಲಿ ಕ್ರಮದಿಂದ ಸ್ವರಾದಿ, ಕವರ್ಗಾದಿ, ಚವರ್ಗಾದಿ, ಟವರ್ಗಾದಿ, ತವರ್ಗಾದಿ, ಪವರ್ಗಾದಿ, ಯಕಾರಾದಿ ಮತ್ತು ಸಕಾರಿ ಶಬ್ದಗಳೆಂದು ಗ್ರಹಿಸಲಾಗಿದೆ. ಏಳನೆಯ ವರ್ಗದ ಪ್ರಾರಂಭದಲ್ಲಿ ಕೋಷಕಾರನು, ಈ ಪ್ರಕಾರದ ನಾಮ ವ್ಯವಸ್ಥೆಯು ವ್ಯಾಕ .ರಣದಲ್ಲಿ ಪ್ರಸಿದ್ಧವಾಗಿಲ್ಲ, ಆದರೂ ಜ್ಯೋತಿಷ್ಯ ಶಾಸ್ತ್ರದಲ್ಲಿ ಪ್ರಸಿದ್ಧವಿದೆ, ಅದನ್ನೇ ಇಲ್ಲಿ

ಆಧಾರವೆಂದು ಅನುಸರಿಸಲಾಗಿದೆ ಎಂದು ಹೇಳಿದ್ದಾನೆ. ಈ ವರ್ಗಗಳಲ್ಲಿಯೂ ಶಬ್ದ ಗಳನ್ನು ಅವವುಗಳ ಅಕ್ಷರ ಸಂಖ್ಯೆಯಲ್ಲಿ ಅರ್ಥಾತ್ ಎರಡು, ಮೂರು, ನಾಲ್ಕು ಮತ್ತು ಐದು ಅಕ್ಷರಗಳುಳ್ಳ ಶಬ್ದಗಳನ್ನು ಬೇರ್ಪಡಿಸಿ ಇಡಲಾಗಿದೆ. ಈ ಸಂಖ್ಯಾತ್ಮಕ ಶಬ್ದಗಳ ಲ್ಲಿಯೂ ಅಕಾರಾದಿ ವರ್ಣಾನುಕ್ರಮವನ್ನು ಪಾಲಿಸಲಾಗಿದೆ. ಈ ಪ್ರಕಾರ ಏಕಾರ್ಥ ವುಳ್ಳ ಶಬ್ದಗಳೆಲ್ಲ ಮುಗಿದ ಮೇಲೆ ತಿರುಗಿ ಅದೇ ಅಕಾರಾದಿ ಖಂಡದಲ್ಲಿಯೇ ಅದೇ ಕ್ರಮದಿಂದ ಅನೇಕಾರ್ಥಗಳನ್ನು ಹೇಳುವ ಶಬ್ದಗಳ ಆಖ್ಯಾನ ಮಾಡಲಾಗಿದೆ. ಈ ಕ್ರಮ ಪದ್ಧತಿಯನ್ನು ಪೂರ್ಣವಾಗಿ ತಿಳಿದುಕೊಳ್ಳುವುದಕ್ಕೆ ಮೊದಲನೆಯ ವರ್ಗದ ಉದಾಹರಣೆಗಳನ್ನು ತಕ್ಕೊಳ್ಳೋಣ. ಇದರಲ್ಲಿ ಮೊದಲಿನ ಆರು ಗಾಥೆಗಳವರೆಗೆ ಎರಡು, ೧೯ ರವರೆಗೆ ಮೂರು, ೩೭ರ ವರೆಗೆ ನಾಲ್ಕು, ೪೯ನೆಯ ಗಾಥೆಯವರೆಗೆ ಐದು ಅಕ್ಷರಗಳುಳ್ಳ ಅಕಾರಾದಿ ಶಬ್ದಗಳನ್ನು ಹೇಳಲಾಗಿದೆ. ಆ ಮೇಲೆ ಅರವತ್ತ್ರರ ವರೆಗೆ ಅಕಾರಾದಿ ಶಬ್ದಗಳ ಎರಡು ಅಕ್ಷರಾದಿ ಕ್ರಮದಿಂದ ಅವುಗಳ ಅನೇಕಾರ್ಥಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಮುಂದೆ ೭೨ ರ ವರೆಗೆ ಏಕಾರ್ಥವುಳ್ಳ, ೭೬ ರ ವರೆಗೆ ಅನೇಕಾರ್ಥವುಳ್ಳ ಅಕಾರಾದಿ ಶಬ್ದಗಳಿವೆ. ತಿರುಗಿ ಇದೇ ಪ್ರಕಾರ ೮೩ ರ ವರೆಗೆ ಇಕಾರಾದಿ, ೮೪ ರಲ್ಲಿ ಈಕಾರಾದಿ, ೧೩೯ ರ ವರೆಗೆ ಉಕಾರಾದಿ, ೧೪೩ರಲ್ಲಿ ಊಕಾರಾದಿ, ೧೪೮ ರವರೆಗೆ ಎಕಾರಾದಿ ಮತ್ತು ಕೊನೆಯ ೧೭೪ ಗಾಥಾಗಳ ವರೆಗೆ ಓಕಾರಾದಿ ಶಬ್ದ ಗಳನ್ನು ಕ್ರಮದಿಂದ ಏಕಾರ್ಥ ಮತ್ತು ಅನೇಕಾರ್ಥಗಳುಳ್ಳ ಶಬ್ದಗಳ ಚಯನ ಮಾಡ ಲಾಗಿದೆ. ಇದೇ ಕ್ರಮವು ಉಳಿದ ಎಲ್ಲ ವರ್ಗಗಳಲ್ಲಿಯೂ ಕಂಡುಬರುತ್ತದೆ. ಸ್ಫುಟ-ಪತ್ರಕ ಪ್ರಣಾಲಿಯ (ಕಾರ್ಡಿಂಗ ಸಿಸ್ಟಿಮ್) ಹೊರತಾಗಿ ಈ ಕ್ರಮ ಪರಿಪಾಲನೆಯು ಅಸಂಭವವೆಂದು ಕಂಡುಬರುತ್ತದೆ. ಆದರೂ ಈ ಪದ್ಧತಿಯು ಜ್ಯೋತಿಷ್ಯ ಶಾಸ್ತ್ರಗಳಲ್ಲಿ ಮತ್ತು ಹೇಮಚಂದ್ರ ಹಾಗೂ ಅವನ ಪ್ರಣಾಲಿಯನ್ನು ಪಾಲಿಸುವ ವ್ಯಾಕರಣಗಳಲ್ಲಿ ಅವಶ್ಯ ಪ್ರಚಲಿತವಾಗಿತ್ತು.

ದೇಶೀನಾಮಮಾಲಾದಲ್ಲಿ ಶಬ್ದಗಳ ಚಯನವನ್ನೂ ಕೂಡ ಒಂದು ವಿಶೇಷ ಸಿದ್ಧಾಂತಕ್ಕನುಸರಿಸಿ ಮಾಡಲಾಗಿದೆ. ಕರ್ತೃವು ಗ್ರಂಥದ ಆದಿಯಲ್ಲಿ ಹೀಗೆ ಹೇಳಿ ದ್ದಾನೆ—

ಜೇ ಲಕ್ಖಣೇಣ ಸಿದ್ಧಾ ಣ ಪಸಿದ್ಧಾ ಸಕ್ಕಯಾಹಿಹಾಣೆಸು ।
ಣ ಯ ಗಉಡ ಲಕ್ಖಣಾಸತ್ತಿ ಸಂಭವಾ ತೇ ಇಹ ಣಿಬದ್ಧಾ ॥ ೩ ॥

ಅರ್ಥಾತ್ ಯಾವ ಶಬ್ದಗಳು ಸಂಸ್ಕೃತ, ಪ್ರಾಕೃತ, ವ್ಯಾಕರಣ ನಿಯಮಗಳಿಂದ ಸಿದ್ಧವಾಗುವುದಿಲ್ಲವೋ, ಸಂಸ್ಕೃತ ಕೋಷಗಳಲ್ಲಿ ಸಿಗುವುದಿಲ್ಲವೋ, ಅಲಂಕಾರ ಶಾಸ್ತ್ರ ಪ್ರಸಿದ್ಧ ಗೌಡೀ ಲಕ್ಷಣ ಶಕ್ತಿಯಿಂದ ಅಭೀಷ್ಟ ಅರ್ಥವನ್ನು ಕೊಡುವುದಿಲ್ಲವೋ, ಅಂಥವುಗಳನ್ನೇ ದೇಶೀ ಎಂದು ತಿಳಿದು ಈ ಕೋಷದಲ್ಲಿ ನಿಬದ್ಧಗೊಳಿಸಲಾಗಿದೆ. ಇಷ್ಟಾಗಿಯೂ ದೇಶ-ವಿದೇಶಗಳ ನಾನಾ ಭಾಷೆಗಳಲ್ಲಿ ಪ್ರಚಲಿತ ಮತ್ತು ಉಕ್ತಶ್ರೇಣಿ ಯಲ್ಲಿ ಬರದೆ ಇರುವ ಸಮಸ್ತ ಶಬ್ದಗಳ ಸಂಗ್ರಹವು ಇದರಲ್ಲಿ ಇದೆಯೆ? ಎಂಬ

ಪ್ರಶ್ನೆಯೂ ಒಂದು ಉದ್ಭವಿಸುತ್ತದೆ. ಇದರ ಉತ್ತರವು ಮುಂದಿನ ಗಾಥಾದಲ್ಲಿ ಗ್ರಂಥಕಾರನಿಂದ ಲಭಿಸುತ್ತದೆ—

ದೇಸವಿಸೇಸಪಸಿದ್ಧೀಇ ಭಣ್ಣಾಮಾಣಾ ಅಣಂತಯಾ ಹುಂತಿ ।
ತಮ್ಹಾ ಅಣಾಇ–ಪಾಇಯ–ಪಯಟ್ಟ–ಭಾಸಾವಿಸೇಸಓದೇಸಿೀ ॥ ೪ ॥

ಅರ್ಥಾತ್ ಭಿನ್ನ ಭಿನ್ನ ದೇಶಗಳಲ್ಲಿ ಪ್ರಸಿದ್ಧವಿರುವ ಶಬ್ದಗಳ ಆಖ್ಯಾನಕ್ಕೆ ತೊಡಗಿದರೆ ಈ ಶಬ್ದಗಳು ಅನಂತವಾಗಿ ಕಂಡುಬರುತ್ತದೆ. ಅದರಿಂದ ಇಲ್ಲಿ ಅನಾದಿಕಾಲ ದಿಂದ ಪ್ರಚಲಿತವಿರುವ ಹಾಗೂ ವಿಶೇಷ ರೂಪದಿಂದ ಪ್ರಾಕೃತವೆಂದು ಹೇಳಲಾಗುವ ಭಾಷೆಯಲ್ಲಿ ಕಂಡುಬರುವ ಶಬ್ದಗಳನ್ನು ಮಾತ್ರ ದೇಸೀ ಎಂದು ಗ್ರಹಿಸಿದೆ. ಇದರಿಂದ ಕೋಷಕಾರನು ದೇಶೀ ಎನ್ನುವಲ್ಲಿ ಇರುವ ಅಭಿಪ್ರಾಯವು ಸ್ಪಷ್ಟವಾಗಿರುತ್ತದೆ. ಪ್ರಾಕೃತ ಸಾಹಿತ್ಯದ ಭಾಷೆ ಮತ್ತು ಅದರ ನುಡಿಗಟ್ಟುಗಳಲ್ಲಿ ಪ್ರಚಲಿತ ವಾಗಿರುವ ಶಬ್ದಗಳು ಮಾತ್ರ ಇಲ್ಲಿ ದೇಶಿ ಎನ್ನಿಸುತ್ತವೆ. ವ್ಯಾಕರಣದಿಂದ ಇಲ್ಲವೆ ಅಲಂಕಾರದ ರೀತಿಯಿಂದ ಸಿದ್ಧವಾಗುವ ಪದಗಳೆಂದು ಅಲ್ಲ, ಸಂಸ್ಕೃತ ಕೋಷಗಳಲ್ಲಿ ಬರುವ ಶಬ್ದ ಗ್ಳೆಂದೂ ಅಲ್ಲ. ಈ ಮಹಾತ್ ಕಾರ್ಯದಲ್ಲಿ ತೊಡಗುವ ಪ್ರೇರಣೆಯು ಅವನಿಗೆ ಎಲ್ಲಿಂದ ಲಭಿಸಿತು ? ಎಂಬುದನ್ನು ಸಹ ಕರ್ತೃವು ಎರಡನೆಯ ಗಾಥಾದಲ್ಲಿ ಅದರ ಸ್ವೋಪಜ್ಞ ಟೀಕೆಯಲ್ಲಿ ಸ್ಪಷ್ಟಗೊಳಿಸಿದ್ದಾನೆ. ಯಾವಾಗ ಅವನು ಉಪಲಬ್ಧ ನಿಃಶೇಷ ದೇಶೀ ಶಾಸ್ತ್ರಗಳ ಪರಿಶೀಲನೆಯನ್ನು ಮಾಡಿದನೋ ಆಗ ಅವನಿಗೆ ಈ ಸಂಗತಿ ಗಳು ಕಂಡುಬಂದುವು :—ಕೆಲವೊಂದು ಶಬ್ದಗಳಿಗೆ ಸಾಹಿತ್ಯದ, ಅವುಗಳ ಪ್ರಚಾರದಲ್ಲಿ ಕೆಲವು ವಿಶೇಷ ಅರ್ಥವಾಗುತ್ತಿದೆ , ಇನ್ನು ಕೆಲವು ಶಬ್ದಗಳಲ್ಲಿ ವರ್ಣಗಳ ಅನು ಕ್ರಮವು ನಿಶ್ಚಿತವಾಗಿಲ್ಲ , ಕೆಲವೊಂದು ಶಬ್ದಗಳಲ್ಲಿ ಪ್ರಾಚೀನ ಹಾಗೂ ವರ್ತಮಾನ ಅರ್ಥಗಳಲ್ಲಿ ವಿಸಂಗತಿಯಿದೆ, ವಿರೋಧವಿದೆ ; ಅದರಂತೆಯೇ ಕೆಲವೆಡೆಯಲ್ಲಿ ಗತಾನು ಗತಿಗೆ ಅನುಸರಿಸಿ ಒಂದಕ್ಕೆ ಮತ್ತೊಂದರ್ಥವಾಗುತ್ತಿದೆ. ಇದರಿಂದ ಆಚಾರ್ಯನಿಗೆ ಆಕುಲತೆಯು ಉತ್ಪನ್ನವಾಯಿತು. ಈ ಪ್ರಕಾರ ಅಪಭ್ರಷ್ಟ ಶಬ್ದಗಳ ಕಲಬೆರಕೆಯಲ್ಲಿ ಸಿಕ್ಕುಬಿದ್ದ ಜನತೆಯ ಉದ್ಧಾರವಾಗುವ ಬಗೆಯು ಹೇಗೆ ? ಸಾಕು. ಇದೇ ಕುತೂಹಲ ದಿಂದ ಅವನು ಈ ದೇಶೀ–ಶಬ್ದಸಂಗ್ರಹ ಕಾರ್ಯದಲ್ಲಿ ಪ್ರವೃತ್ತನಾದನು.

ದೇಶೀ ಶಬ್ದಗಳ ಸಂಬಂಧದಲ್ಲಿ ಕೆಲವೊಂದು ಮರ್ಯಾದೆಗಳನ್ನು ಕೋಷಕಾರನು ಬಹು ಸಾವಧಾನದಿಂದ ಪಾಲಿಸಿದ್ದಾನೆ. ಇದರ ಕೆಲವೊಂದು ಸ್ವರೂಪವನ್ನು ಅವನು ಸ್ವತಃ ರಚಿಸಿದ ಟೀಕೆಯನ್ನು ಅವಲೋಕಿಸುವುದರಿಂದ ನಾವು ಕಂಡುಕೊಳ್ಳಬಹುದಾ ಗಿದೆ. ಉದಾಹರಣಾರ್ಥ:—ಗ್ರಂಥದ ಪ್ರಾರಂಭದಲ್ಲಿಯೇ 'ಅಜ್ಜ' ಶಬ್ದವನ್ನು ಸ್ವೀಕರಿಸಿದ್ದಾನೆ. ಅದರ ಪ್ರಯೋಗವನ್ನು 'ಜಿನ' ಎಂಬರ್ಥದಲ್ಲಿ ಮಾಡಿದ್ದಾನೆ. ಟೀಕೆಯಲ್ಲಿ ಒಂದು ಪ್ರಶ್ನೆಯನ್ನು ಎತ್ತಿದ್ದಾನೆ. 'ಅಜ್ಜ' ಎಂಬುದು ಸ್ವಾಮಿಯ ಪರ್ಯಾಯಾರ್ಥವುಳ್ಳ ಆರ್ಯ ಶಬ್ದದಿಂದ ಸಿದ್ಧವಾಗುತ್ತದೆಯೆ ? ಇದಕ್ಕೆ ಉತ್ತರ

ವೆಂದು ಅವನು ಹೀಗೆ ಹೇಳಿದ್ದಾನೆ. ಈ ಗ್ರಂಥದ ಆದಿಯಲ್ಲಿ ಅವನು ಅದನ್ನು ಮಂಗಲಾರ್ಥವುಳ್ಳ ಶಬ್ದವೆಂದು ಸ್ವೀಕರಿಸಿದ್ದಾನೆ. ೧೮ನೆಯ ಗಾಥಾದಲ್ಲಿ ' ಅವಿಣಯವರ ' ಶಬ್ದವನ್ನು ಜಾರ ಎಂಬ ಅರ್ಥದಲ್ಲಿ ಗ್ರಹಣ ಮಾಡಲಾಗಿದೆ. ಟೀಕೆಯಲ್ಲಿ ಈ ಶಬ್ದದ ಉತ್ಪತ್ತಿಯನ್ನು ' ಅವಿನಯ-ವರ ' ದಿಂದ ಆಗುತ್ತಿದ್ದರೂ ಸಂಸ್ಕೃತದಲ್ಲಿ ಅದರ ಈ ಅರ್ಥವು ಪ್ರಸಿದ್ಧವಿಲ್ಲ. ಅದಕ್ಕಾಗಿಯೇ ಈ ಪದಕ್ಕೆ ಇಲ್ಲಿ ದೇಶೀ ಎಂದು ಮನ್ನಿಸಲಾಗಿದೆ. ೬೭ನೆಯ ಗಾಥಾದಲ್ಲಿ ' ಆರಣಾಲ ' ಎಂಬುದರ ಅರ್ಥವನ್ನು ಕಮಲವೆಂದು ಹೇಳಲಾಗಿದೆ. ಟೀಕೆಯಲ್ಲಿ ಇದರ ವಾಚಿಕ ಅರ್ಥವನ್ನು ಇಲ್ಲಿ ಗ್ರಹಿಸಿಲ್ಲ, ಯಾಕೆಂದರೆ ಅದು ಸಂಸ್ಕೃತೋದ್ಭವವಾಗಿದೆಯೆಂದು ವಿವರಿಸಿದೆ. ' ಆಸಿಯಅ ' ಎಂಬುದು ಕಬ್ಬಿಣ ಕೊಡ ಎಂಬರ್ಥದಲ್ಲಿ ಹೇಳಿ, ಟೀಕೆಯಲ್ಲಿ ಕೆಲವು ಜನರು ಇದಕ್ಕೆ ಅಯಸ್ ದಿಂದ ಜನಿಸಿದ ಆಯಸಿಕದ ಅಪಭ್ರಂಶ ರೂಪವಾಗಿದೆಯೆಂದೂ ಮನ್ನಿಸಲಾಗುತ್ತದೆಂದು ವಿವರಿಸಿದೆ. ಈ ಟಿಪ್ಪಣಿಯ ಮೇಲಿಂದ ಕೋಶಕಾರನು ತನ್ನ ಪೂರ್ವೋಕ್ತ ಸಿದ್ಧಾಂತ ಪಾಲನೆಯಲ್ಲಿ ನಿರಂತರ ಚಿಂತೆಯ ಆಭಾಸವು ಕಂಡುಬರುತ್ತದೆ. ಅವನ ಸಂಸ್ಕೃತ ಟೀಕೆಯಲ್ಲಿ ಈ ಪ್ರಕಾರದ ಶಬ್ದಗಳ ಸ್ಪಷ್ಟೀಕರಣ ಮತ್ತು ವಿವೇಚನೆಗಳ ಹೊರತಾಗಿ ಗಾಥಾಗಳ ಮುಖಾಂತರ ಉಕ್ತ ದೇಶೀ ಶಬ್ದಗಳ ಪ್ರಯೋಗದ ಉದಾಹರಣೆಯನ್ನೂ ಸಹ ಕೊಟ್ಟಿದ್ದಾನೆ. ಇಂಥ ಒಟ್ಟು ಗಾಥಾಗಳ ಸಂಖ್ಯೆಯು ೬೩೪ ಇದ್ದುದು ಕಂಡುಬರುತ್ತದೆ. ಇವುಗಳಲ್ಲಿ ನೂರಕ್ಕೆ ಎಪ್ಪತ್ತೈದರಷ್ಟು ಗಾಥಾಗಳು ಶೃಂಗಾರಾತ್ಮಕವಾಗಿವೆ. ಸುಮಾರು ೬೫ ಗಾಥಾಗಳು ಕುಮಾರಪಾಲನ ಪ್ರಶಂಸಾ ವಿಷಯಕವಾಗಿವೆ. ಉಳಿದವು ಬೇರೆಯಾಗಿವೆ. ಇವೆಲ್ಲವೂ ಸ್ವತಃ ಹೇಮಚಂದ್ರನೇ ರಚಿಸಿದವುಗಳೆಂದು ಕಂಡುಬರುತ್ತದೆ. ಶಬ್ದ ವಿವೇಚನೆಯ ಸಂಬಂಧದಲ್ಲಿ ಅಭಿಮಾನ ಚಿಹ್ನ, ಅವಂತಿಸುಂದರೀ, ಗೋಪಾಲ, ದೇವರಾಜ, ದ್ರೋಣ, ಧನಪಾಲ, ಪಾದೋದುಖಲ, ಪಾದಲಿಪ್ತಾಚಾರ್ಯ, ರಾಹುಲಕ, ಶಾಂಬ, ಶೀಲಾಂಕ ಮತ್ತು ಸಾತವಾಹನ ಈ ಹನ್ನೆರಡು ಶಾಸ್ತ್ರಕಾರರು ಹಾಗೂ ಸಾರತರದೇಶೀ ಮತ್ತು ಅಭಿಮಾನ ಚಿಹ್ನ ಈ ಎರಡು ದೇಶೀ ಶಬ್ದಗಳ ಸೂತ್ರಪಾಠಗಳ ಉಲ್ಲೇಖವು ದೊರೆಯುತ್ತದೆ. ದೇಶೀ ಶಬ್ದಗಳ ಅನೇಕ ಕೋಷಗಳು ಈ ಲೇಖಕನ ಸಮ್ಮುಖದಲ್ಲಿ ಉಪಸ್ಥಿತವಿದ್ದವೆಂಬುದು ಗೊತ್ತಾಗುತ್ತದೆ. ಪ್ರಾರಂಭದ ಎರಡನೆಯ ಗಾಥಾದ ಟೀಕೆಯಲ್ಲಿ ಲೇಖಕನು ಪಾದಲಿಪ್ತಾಚಾರ್ಯ ಮೊದಲಾದವರಿಂದ ವಿರಚಿಸಲ್ಪಟ್ಟ ದೇಶೀ ಶಾಸ್ತ್ರಗಳು ಇದ್ದರೂ ಸಹ ಇದನ್ನು ರಚಿಸುವುದರ ಪ್ರಯೋಜನವನ್ನು ವಿವರಿಸಿದ್ದಾನೆ. ಮೇಲೆ ಹೇಳಿದ ಹೆಸರುಗಳಲ್ಲಿ ಧನಪಾಲ ಕೃತ ' ಪಾಇಯ-ಲಚ್ಛೀ-ನಾಮಮಾಲಾ ' ಎಂಬ ಕೋಷವಂತೂ ದೊರೆಯುತ್ತದೆ. ಉಳಿದವುಗಳು ಯಾವವೆಂಬುದು ಗೊತ್ತಿಲ್ಲ. ಟೀಕೆಯಲ್ಲಿ ಕೆಲವೊಂದು ಅವತರಣಗಳು ಧನಪಾಲ ಕೃತವೆಂದು ಹೇಳಲಾಗಿದೆಯಾದರೂ ಅವು ಅವನ ಉಪಲಬ್ಧ ಕೃತಿಯಲ್ಲಿ ನೋಡಲು ಸಿಕ್ಕುವುದಿಲ್ಲ ಮೃಚ್ಛಕಟಿಕದ ಟೀಕಾಕಾರನಾದ ಲಾಲಾದೀಕ್ಷಿತನು ' ದೇಶೀ ಪ್ರಕಾಶ ' ಎಂಬ ಹೆಸರಿನ ದೇಶೀ ಕೋಷದ ಅವತರಣ

ಗಳನ್ನು ಕೊಟ್ಟಿದ್ದಾನೆ. ಹಾಗೆಯೇ ಕ್ರಮದೀಶ್ವರನು ತನ್ನ ಸಂಕ್ಷಿಪ್ತ-ಸಾರ ದಲ್ಲಿ **ದೇಶೀಸಾರ** ಎಂಬ ಹೆಸರಿನ ಕೋಷದ ಉಲ್ಲೇಖವನ್ನು ಮಾಡಿದ್ದಾನೆ. ಆದರೆ ದುರ್ಭಾಗ್ಯದಿಂದ ಈ ಮಹತ್ವ-ಪೂರ್ಣ ಗ್ರಂಥಗಳು ಇನ್ನೂ ನಮಗೆ ಲಭಿಸಿಲ್ಲ. ದೇಶೀ ನಾಮಮಾಲಾದ ಪ್ರಥಮ ಸಂಪಾದಕನಾದ ಡಾ. ಪಿಶಲನು ಈ ಕೋಷದ ಉದಾ ಹರಣಾತ್ಮಕ ಗಾಥಾಗಳ ಭ್ರಷ್ಟ ಪಾಠಗಳನ್ನು ಬಹು ಕಷ್ಟದಿಂದ ಸಂಪಾದಿಸಿದ್ದಾನೆ. ಪ್ರೊ. ಮುರಲೀಧರ ಬ್ಯಾನರ್ಜಿಯು ತನ್ನ ಸಂಸ್ಕರಣದಲ್ಲಿ ಪಾಠಗಳ ಕೆಲವೊಂದು ಸಂಶೋಧಿತ ರೂಪಗಳನ್ನು ಉಪಸ್ಥಿತಗೊಳಿಸಿದ್ದಾನೆ. ಆದರೆ ಅನೇಕ ಗಾಥಾಗಳ ಸಂಶೋಧನೆಯು ಇನ್ನೂ ನಡೆಯುವ ಅವಶ್ಯಕತೆಯು ಇದೆ. ಕೋಷದಲ್ಲಿ ಸಂಗ್ರಹಿಸಿದ ನಾಮಗಳ ಸಂಖ್ಯೆಯು ಪ್ರೊ. ಬ್ಯಾನರ್ಜಿಯ ಮತಕ್ಕನುಸರಿಸಿ ೩೯೭೮ ಇದೆ. ಇವು ಗಳಲ್ಲಿ ಅವನು ೧೫೦೦ ಶಬ್ದಗಳನ್ನು ಯಥಾರ್ಥ ದೇಶೀ ಎಂದು ಮನ್ನಿಸುವನು. ಉಳಿದವುಗಳಲ್ಲಿ ೧೦೦ ತತ್ಸಮ, ೧೮೫೦ ತದ್ಭವ ಮತ್ತು ೫೨೮ ಸಂಶಯಾತ್ಮಕ ತದ್ಭವ ಶಬ್ದಗಳೆಂದು ಹೇಳಲಾಗಿದೆ. ಆ ದೇಶೀ ಶಬ್ದಗಳಲ್ಲಿ ಅವನ ಮತಕ್ಕನುಸರಿಸಿ ೮೦೦ ಶಬ್ದಗಳಂತೂ ಭಾರತೀಯ ಆರ್ಯ ಭಾಷೆಗಳಲ್ಲಿ ಒಂದಲ್ಲ ಒಂದು ರೂಪದಲ್ಲಿ ಕಂಡು ಬರುತ್ತವೆ. ಆದರೆ ಉಳಿದ ೭೦೦ ಶಬ್ದಗಳ ಮೂಲದ ವಿಷಯವು ಗೊತ್ತಾಗುವುದಿಲ್ಲ.

**ಕೋಷ–ಸಂಸ್ಕೃತ :—**

ಸಂಸ್ಕೃತದ ಪ್ರಾಚೀನತಮ ಜೈನ ಕೋಷಕಾರನು ಧನಂಜಯನೆಂದು ಕಂಡು ಬರುತ್ತದೆ. ಇವನ ನಾಮಮಾಲಾ ಮತ್ತು ಅನೇಕಾರ್ಥ ನಾಮಮಾಲಾ ಎಂಬ ಎರಡು ಕೃತಿಗಳು ಉಪಲಬ್ಧವಿವೆ. ಅವನು ರಚಿಸಿದ ನಾಮಮಾಲಾ ಎಂಬುದರ ಕೊನೆ ಯಲ್ಲಿ ಕವಿಯು ಅಕಲಂಕನ ಪ್ರಮಾಣ, ಪೂಜ್ಯಪಾದನ ಲಕ್ಷಣ (ವ್ಯಾಕರಣ) ಮತ್ತು ದ್ವಿಸಂಧಾನ ಕರ್ತೃವಿನ ಅರ್ಥಾತ್ ಸ್ವತಃ ರಚಿಸಿದ ಕಾವ್ಯ ಈ ಮೂರು ರತ್ನತ್ರಯಗಳು ಅಪೂರ್ವವೆಂದು ಹೇಳಿದ್ದಾನೆ. ಈ ಉಲ್ಲೇಖದಿಂದ ಕವಿಯು ಕೋಷವನ್ನು ರಚಿಸಿದ ಕಾಲದ ಪೂರ್ವಾವಧಿಯು ಎಂಟನೆಯ ಶತಮಾನವೆಂದು ನಿಶ್ಚಿತವಾಗುತ್ತದೆ. ಅನೇ ಕಾರ್ಥ ನಾಮಮಾಲಾದ 'ಹೇತಾವೇವಂ ಪ್ರಕಾರಾದಿ' ಎಂಬ ಶ್ಲೋಕವು ವೀರಸೇನ ಕೃತ ಧವಲಾ ಟೀಕೆಯಲ್ಲಿ ಉದ್ಧೃತವಾಗಿದೆ. ಇದರ ರಚನಾ ಕಾಲವು ಶಕ ಸಂ. ೭೩೮ ಇದೆ. ಈ ಪ್ರಕಾರ ಈ ಕೋಷದ ರಚನಾ ಕಾಲವು ಕ್ರಿ. ಶ. ೭೮೦ ರಿಂದ ೮೧೬ರ ಮಧ್ಯದಲ್ಲಿ ಎಂದು ಸಿದ್ಧವಾಗುತ್ತದೆ. ನಾಮಮಾಲಾದಲ್ಲಿ ೨೦೬ ಶ್ಲೋಕಗಳು ಇವೆ. ಮತ್ತು ಅವುಗಳಲ್ಲಿ ಸಂಗ್ರಹಿಸಿದ ಒಂದರ್ಥವುಳ್ಳ ಶಬ್ದಗಳ ಸಂಖ್ಯೆಯು ಸುಮಾರು ೨೦೦೦ ಇದೆ. ಕೋಷಕಾರನು ತನ್ನ ಸರಳ ಮತ್ತು ಸುಂದರ ಶೈಲಿಯಿಂದ ಅನೇಕ ಶಬ್ದ ಸಮೂಹವನ್ನು ಸ್ವಲ್ಪ ಶಬ್ದಗಳಲ್ಲಿ ಸೂಚಿಸಿ ಬಿಡುತ್ತಾನೆ. ಉದಾಹರಣಾರ್ಥ ಶ್ಲೋಕ ೫ ಮತ್ತು ೬ರಲ್ಲಿ ಭೂಮಿ ಮೊದಲಾದ ಪೃಥ್ವಿಯ ೨೭ ಪರ್ಯಾಯವಾಚಿ ನಾಮಗಳನ್ನು ಹೇಳಿದ್ದಾನೆ. ಆಮೇಲೆ ೭ನೆಯ ಶ್ಲೋಕದಲ್ಲಿ ಹೀಗೆ ವಿವರಿಸಿದೆ :—

ತತ್ಪರ್ಯಾಯಧರಃ ಶೈಲಃ ತತ್ಪರ್ಯಾಯಪತಿರ್ ನೃಪಃ |
ತತ್ಪರ್ಯಾಯರುಹೋವೃಕ್ಷಃ ಶಬ್ದಮನ್ಯಚ್ಚ ಯೋಜಯೇತ್ ||

ಈ ಪ್ರಕಾರ ಈ ಒಂದು ಶ್ಲೋಕದಿಂದ ಕೋಷಕಾರನು ಪರ್ವತ, ರಾಜ, ವೃಕ್ಷ ಇವುಗಳ ೨೭-೨೭ ಪರ್ಯಾಯವಾಚೀ ೮೧ ಹೆಸರುಗಳನ್ನು ಸೂಚಿಸಿಬಿಟ್ಟಿದ್ದಾನೆ. ಇದೇ ಪ್ರಕಾರ ೧೫ನೆಯ ಶ್ಲೋಕದಲ್ಲಿ ಜಲದ ೧೮ ಹೆಸರುಗಳನ್ನು ಹೇಳಿ, ೧೬ನೆಯ ಶ್ಲೋಕದಲ್ಲಿ ಆ ಹೆಸರುಗಳ ಜೊತೆಯಲ್ಲಿ ಚರವನ್ನು ಜೋಡಿಸಿದರೆ ಮತ್ಸ್ಯ, ದ ಜೋಡಿಸಿದರೆ ಘನ, ಜ ಜೋಡಿಸಿದರೆ ಪದ್ಮ ಮತ್ತು ಧರ ಜೋಡಿಸಿದರೆ ಸಮುದ್ರ, ಇವುಗಳ ೧೮-೧೮ ಹೆಸರುಗಳನ್ನು ನಿರ್ಮಿಸಿಕೊಳ್ಳುವ ಸೂಚನೆಯನ್ನು ಕೊಟ್ಟಿದ್ದಾನೆ. ಅನೇಕಾರ್ಥ ನಾಮಮಾಲಾದಲ್ಲಿ ಒಟ್ಟು ೪೬ ಶ್ಲೋಕಗಳಿವೆ. ಅವುಗಳಲ್ಲಿ ಸುಮಾರು ೬೦ ಶಬ್ದಗಳ ಅನೇಕಾರ್ಥಗಳನ್ನು ನಿರೂಪಣ ಮಾಡಿದ್ದಾನೆ.

ಜೈನ ಸಾಹಿತ್ಯದ ಈ ಸಂಕ್ಷಿಪ್ತ ಪರಿಚಯದಿಂದ ಇದು ಭಾರತೀಯ ಸಾಹಿತ್ಯವನ್ನು ಹೇಗೆ ಪುಷ್ಟಗೊಳಿಸಿದೆಯೆಂಬ ಸಂಗತಿಯು ಸ್ಪಷ್ಟವಾಗುತ್ತದೆ. ಈ ಸಾಹಿತ್ಯವು ಭಾರತೀಯ ವಾಙ್ಮಯ ಪ್ರವಾಹದೊಡನೆಯೂ ಹೊಂದಿಕೊಳ್ಳುತ್ತದೆ; ಮತ್ತು ಭಾಷೆ, ಶೈಲಿ, ವಿಷಯ ಇವುಗಳ ವಿಷಯದಲ್ಲಿ ಮಹಾನ್ ವೈಶಿಷ್ಟ್ಯವನ್ನು ಕಾಯ್ದುಕೊಂಡಿದೆ. ಇದನ್ನು ಅರಿತುಕೊಳ್ಳದೆ ಹೋದರೆ ನಮ್ಮ ಜ್ಞಾನವು ಅಪೂರ್ಣವಾಗಿ ಉಳಿಯುತ್ತದೆ. ಜೈನ ಸಾಹಿತ್ಯವಂತೂ ಇನ್ನೂ ಪೂರ್ಣ ಪ್ರಕಟವಾಗಿಲ್ಲ. ಅದನ್ನು ಅಭ್ಯಸಿಸಿದವರು ಕಡಿಮೆಯೇ ಸರಿ. ಶಾಸ್ತ್ರ-ಭಂಡಾರಗಳಲ್ಲಿ ನೂರಾರು, ಆಶ್ಚರ್ಯದ ಸಂಗತಿಯಲ್ಲ ಸಾವಿರಾರು ಗ್ರಂಥಗಳು ಇನ್ನೂ ಪ್ರಕಟವಾಗದೆ ಉಳಿದಿವೆ. ಅವುಗಳ ಹೆಸರುಗಳೂ ಸಹ ಗೊತ್ತಿಲ್ಲದೆ ಹೋಗಿದೆ. ಪ್ರಕಾಶಿತ ಸಾಹಿತ್ಯದ ಆಲೋಚನಾತ್ಮಕ ಅಧ್ಯಯನ, ಅನುವಾದಾದಿ ಕ್ಷೇತ್ರಗಳಲ್ಲಿಯೂ ಸಹ ವಿದ್ವಾಂಸರು ಪ್ರಯತ್ನಮಾಡಲು ತುಂಬ ಅವಕಾಶವಿದೆ.

ಪ್ರಾಕೃತ ಭಾಷೆಗಳ—ಅರ್ಧಮಾಗಧಿ, ಶೌರಸೇನಿ, ಮಹಾರಾಷ್ಟ್ರೀ ಮತ್ತು ಅಪಭ್ರಂಶ— ಉಲ್ಲೇಖವು ಜೈನ ಸಾಹಿತ್ಯದ ಪರಿಚಯದಲ್ಲಿ ಯಥಾ ಸ್ಥಾನದಲ್ಲಿ ಬಂದಿದೆ. ಅಲ್ಲಿ ಅವುಗಳ ಸ್ವರೂಪವನ್ನೂ ವಿವರಿಸಿದೆ. ಅವುಗಳ ಕೆಲವೊಂದು ಸಾಹಿತ್ಯಿಕ ಅವತರಣಗಳನ್ನು ಅನುವಾದ ಸಹಿತ ಇಲ್ಲಿ ಕೊಡಲಾಗಿದೆ.

## ಅವತರಣ—೧

### ಅರ್ಧಮಾಗಧೀ—ಪ್ರಾಕೃತ

ಪುಚ್ಛಿಂಸು ಣಂ ಸಮಣಾ ಮಾಹಣಾ ಯ ಅಗಾರಿಣೋ ಯ ಪರತಿತ್ಥಿಯಾ ಯ ।
ಸೆ ಕೇಇ ನೇಗನ್ತಹಿಯಂ ಧಮ್ಮಮಾಹು ಅಣೇಲಿಸಂ ಸಾಹು ಸಮಿಕ್ಖಯಾಏ ॥ ೧ ॥

ಕಹಂ ಚ ನಾಣಂ ಕಹ ದಂಸಣಂ ಸೇ ಸೀಲಂ ಕಹಂ ನಾಯಸುಯಸ್ಸ ಆಸಿ ।
ಜಾಣಾಸಿ ಣಂ ಭಿಕ್ಖು ಜಹಾತಹೇಣಂ ಅಹಾಸುಯಂ ಬೂಹಿ ಜಹಾ ನಿಸಂತಂ ॥ ೨ ॥

ಖೇಯನ್ನಏ ಸೇ ಕುಸಲಾಸುಪನ್ನೆ ಅನಂತನಾಣೀ ಯ ಅನಂತದಂಸೀ ।
ಜಸಂಸಿಣೋ ಚಕ್ಖುಪಹೇ ಠಿಯಸ್ಸ ಜಾಣಾಹಿ ಧಮ್ಮಂ ಚ ಧಿಇಂ ಚ ಪೇಹಿ ॥ ೩ ॥

ಉಡ್ಢಂ ಅಹೇ ಯ ತಿರಿಯಂ ದಿಸಾಸು ತಸಾ ಯ ಜೆ ಥಾವರ ಜೆ ಯ ಪಾಣಾ ।
ಸೇ ನಿಚ್ಚನಿಚ್ಚೇಹಿ ಸಮಿಕ್ಖ ಪನ್ನೆ ದೀವೇ ವ ಧಮ್ಮಂ ಸಮಿಯಂ ಉದಾಹು ॥ ೪ ॥

ಸೆ ಸವ್ವದಂಸೀ ಅಭಿಭೂಯನಾಣೀ ನಿರಾಮಗಂಧೇ ಧಿಇಮಂ ಠಿಯಪ್ಪಾ ।
ಅಣುತ್ತರೇ ಸವ್ವಜಗಂಸಿ ವಿಜ್ಜಂ ಗಂಥಾ ಅಈಏ ಅಭಏ ಅಣಾಊ ॥ ೫ ॥

ಸೇ ಭೂಇಪನ್ನೇ ಅಣಿಏಅಚಾರೀ ಓಹಂತರೆ ಧೀರೇ ಅಣಂತಚಕ್ಖೂ ।
ಅಣುತ್ತರಂ ತಪ್ಪಇ ಸೂರಿಏ ವಾ ವಇರೋಯಣಿಂದೇ ವ ತಮಂ ಪಗಾಸೇ ॥ ೬ ॥

(ಸೂಯಗಡಂ, ೧, ೬, ೧–೬)

(ಅನುವಾದ)

ಶ್ರಮಣ, ಬ್ರಾಹ್ಮಣ, ಗೃಹಸ್ಥ ಹಾಗೂ ಅನ್ಯ ಧರ್ಮಾವಲಂಬಿಗಳು (ಗಣಧರ ಸ್ವಾಮಿಗೆ) ಕೇಳಿದರು :—ಯಾವನು ಸುಂದರ ಸಮೀಕ್ಷಾಪೂರ್ವಕ ಈ ಸಂಪೂರ್ಣ ಹಿತಕಾರಿ, ಅಸಾಧಾರಣ ಧರ್ಮದ ಉಪದೇಶ ಮಾಡಿದಂಥವನು ಅವನು ಯಾರು ? ಈ ಧರ್ಮವನ್ನು ಉಪದೇಶಿಸಿದ ಜ್ಞಾತಪುತ್ರ (ಮಹಾವೀರ)ನಿಗೆ ಎಂಥ ಜ್ಞಾನವಿತ್ತು? ಎಂಥ ದರ್ಶನವಿತ್ತು? ಮತ್ತು ಎಂಥ ಶೀಲವಿತ್ತು ? ಎಲೈ ಭಿಕ್ಷುವೆ, ನೀನು ಯಥಾರ್ಥ ರೂಪದಿಂದ ತಿಳಿದಿರುವಿ. ಹೇಗೆ ಕೇಳಿರುವಿಯೋ ಮತ್ತು ಹೇಗೆ ಧಾರಣ ಮಾಡಿರುವಿಯೋ ಹಾಗೆ ಹೇಳು. ಇದಕ್ಕೆ ಗಣಧರ ಸ್ವಾಮಿಯು ಹೇಳಿದನು :—ಆ ಭಗವಾನ್ ಮಹಾವೀರನು ಕ್ಷೇತ್ರಜ್ಞ (ಅರ್ಥಾತ್ ಆತ್ಮಾ ಮತ್ತು ವಿಶ್ವವನ್ನು ತಿಳಿದಂಥವನು)

ಆಗಿದ್ದನು. ಕುಶಲ ಆಶುಪ್ರಜ್ಞ, ಅನಂತಜ್ಞಾನೀ ಮತ್ತು ಅನಂತದರ್ಶಿಯಾಗಿದ್ದನು. ಅವನು ಯಶಸ್ವೀ. ಸಾಕ್ಷಾತ್ ಅರಹಂತ ಅವಸ್ಥೆಯಲ್ಲಿದ್ದ ಭಗವಂತನಿಂದ ಉಪದೇಶಿಸಲ್ಪಟ್ಟ ಧರ್ಮ ಮತ್ತು ಧೃತಿ (ಸಂಯಮದಲ್ಲಿ ರತಿ) ಇವುಗಳನ್ನು ತಂದುಕೊಳ್ಳು ಮತ್ತು ತಿಳಿದುಕೊಳ್ಳು. ಊರ್ಧ್ವ, ಅಧಃ ಹಾಗೂ ಉತ್ತರ-ದಕ್ಷಿಣ ಮೊದಲಾದ ತಿರ್ಯಕ್ ದಿಶೆಗಳಲ್ಲಿ ಯಾವ ತ್ರಸ ಇಲ್ಲವೆ ಸ್ಥಾವರ ಜೀವವಿದೆಯೋ ಅವೆಲ್ಲದರ ನಿತ್ಯ-ಅನಿತ್ಯ ಗುಣ ಧರ್ಮಗಳ ಸಮೀಕ್ಷೆಯನ್ನು ಮಾಡಿ, ಆ ಜ್ಞಾನಿಯಾದ ಭಗವಂತನು ಸಮ್ಯಕ್ ಪ್ರಕಾರದಿಂದ ದೀಪಕದಂತೆ ಧರ್ಮವನ್ನು ಪ್ರಕಟಗೊಳಿಸಿದ್ದಾನೆ. ಆ ಭಗವಂತನು ಸರ್ವದರ್ಶಿ, ಜ್ಞಾನಿ, ನಿರಾಮಗಂಧ (ನಿಷ್ಪಾಪ), ಧೃತಿಮಾನ್, ಸ್ಥಿತಾತ್ಮಾ, ಸರ್ವ ಜಗತ್ತಿನಲ್ಲಿಯೂ ಅದ್ವಿತೀಯ ವಿದ್ವಾನ್, ಗ್ರಂಥಾತೀತ (ಅರ್ಥಾತ್ ಪರಿಗ್ರಹ ರಹಿತ ನಿರ್ಗ್ರಂಥ), ಅಭಯ ಮತ್ತು ಅನಾಯು (ಪುನರ್ ಜನ್ಮ ರಹಿತ) ಆಗಿದ್ದನು. ಅವನು ಭೂತಿಪ್ರಜ್ಞ (ದ್ರವ್ಯ-ಸ್ವಭಾವವನ್ನು ತಿಳಿಯುವಂಥವನು), ಅನಿಕೇತಚಾರೀ (ಗೃಹವನ್ನು ತ್ಯಜಿಸಿ ವಿಹಾರ ಮಾಡುವಂಥವನು) ಸಂಸಾರ ಸಮುದ್ರವನ್ನು ದಾಟಿಸುವಂಥವನು, ಧೀರ ಅನಂತ ಚಕ್ಷು (ಅನಂತದರ್ಶಿ), ಅಸಾಧಾರಣ ರೂಪದಿಂದ ಅದೇ ಪ್ರಕಾರ ತಪ್ಯಾಯಮಾನ ಮತ್ತು ಅಂಧಕಾರದಲ್ಲಿ ಸೂರ್ಯ, ವೈರೋಚನ (ಅಗ್ನಿ) ಮತ್ತು ಇಂದ್ರರಂತೆ ಪ್ರಕಾಶಮಾನನಾಗಿದ್ದಾನೆ.

## ಅವತರಣ—೨

### ಅರ್ಧಮಾಗಧೀ-ಪ್ರಾಕೃತ

ಕಮ್ಮಸಂಗೇಹಿ ಸಮ್ಮೂಢಾ ದುಕ್ಖಿಯಾ ಬಹುವೇಯಣಾ ।
ಅಮಾಣಸಾಸು ಜೋಣೀಸು ವಿಣಿಹಮ್ಮಂತಿ ಪಾಣಿಣೋ ॥ ೧ ॥

ಕಮ್ಮಾಣಂ ತು ಪಹಾಣಾಏ ಅಣುಪುವ್ವೀ ಕಯಾಇ ಉ ।
ಜೀವಾ ಸೋಹಿಮಣುಪ್ಪತ್ತಾ ಆಯಯಂತಿ ಮಣುಸ್ಸಯಂ ॥ ೨ ॥

ಮಾಣುಸ್ಸಂ ವಿಗ್ಗಹಂ ಲದ್ಧುಂ ಸುಈ ಧಮ್ಮಸ್ಸ ದುಲ್ಲಹಾ ।
ಜಂ ಸೋಚ್ಚಾ ಪಡಿವಜ್ಜಂತಿ ತವಂ ಖಂತಿಮಹಿಂಸಯಂ ॥ ೩ ॥

ಆಹಚ್ಚ ಸವಣಂ ಲದ್ಧುಂ ಸದ್ಧಾ ಪರಮದುಲ್ಲಹಾ ।
ಸೋಚ್ಚಾ ನೇಆಉಯಂ ಮಗ್ಗಂ ಬಹವೇ ಪರಿಭಸ್ಸಈ ॥ ೪ ॥

ಸುಇಂ ಚ ಲದ್ಧುಂ ಸದ್ಧಂ ಚ ವೀರಿಯಂ ಪುಣ ದುಲ್ಲಹಂ ।
ಬಹವೇ ರೋಯಮಾಣಾ ವಿ ನೊ ಯ ಣಂ ಪಡಿವಜ್ಜಏ ॥ ೫ ॥

ಮಾಣುಸತ್ತಮಿ ಆಯಾಉ ಜೋ ಧಮ್ಮಂ ಸೋಚ್ಚ ಸದ್ದಹೆ ।
ತವಸ್ಸೀ ವೀರಿಯಂ ಲದ್ಧುಂ ಸಂವುಡೆ ನಿದ್ಧುಣೆ ರಯಂ ॥ ೬ ॥

ಸೋಹೀ ಉಜ್ಜುಯಭೂಯಸ್ಸ ಧಮ್ಮೋ ಸುದ್ಧಸ್ಸ ಚಿಟ್ಠಈ ।
ನಿವ್ವಾಣಂ ಪರಮಂ ಜಾಇ ಘಯಸಿತ್ತಿವ್ವ ಪಾವಏ ॥ ೭ ॥

(ಉತ್ತರಾಧ್ಯಯನ, ೩-೬-೧೨)

(ಅನುವಾದ)

ಕರ್ಮಗಳ ಸಂಸರ್ಗದಿಂದ ಮೋಹಿತವಾದ ಪ್ರಾಣಿಯು ದುಃಖಿ ಮತ್ತು ಬಹಳಷ್ಟು ವೇದನೆಗಳಿಂದ ಕೂಡಿದ್ದಾಗಿ ಅಮಾನುಷಿಕ (ಪಶು-ಪಕ್ಷಿ ಆದಿ ತಿರ್ಯಂಚ) ಯೋನಿಯಲ್ಲಿ ಮುಳುಗಿ ಹೋಗುತ್ತದೆ. ಒಂದು ವೇಳೆ ಆನುಪೂರ್ವಿಯಿಂದ ಕರ್ಮಗಳ ಕ್ಷೀಣತೆಯು ಆದಲ್ಲಿ ಜೀವವು ಶುದ್ಧಿಯನ್ನು ಹೊಂದಿ ಮನುಷ್ಯತ್ವವನ್ನು ಪಡೆಯುತ್ತದೆ. ಮನುಷ್ಯ ಶರೀರವನ್ನು ಹೊಂದಿಯೂ ಇಂಥ ಧರ್ಮಶ್ರವಣವನ್ನು ಹೊಂದುವುದು ದುರ್ಲಭವಿದೆ. ಈ ಧರ್ಮವನ್ನು ಕೇಳುವುದರಿಂದ (ಜೀವವು) ಕ್ಷಮಾ, ಅಹಿಂಸಾ ಮತ್ತು ತಪವನ್ನು ಗ್ರಹಣ ಮಾಡುತ್ತದೆ. ಒಂದು ವೇಳೆ ಇಂಥ ಧರ್ಮಶ್ರವಣವು ದೊರೆತರೂ ಕೂಡ ಅದರಲ್ಲಿ ಶ್ರದ್ಧೆಯು ಉತ್ಪನ್ನವಾಗುವುದು ಪರಮ ದುರ್ಲಭವಾಗಿದೆ. ಆದಕ್ಕಾಗಿಯೇ ಬಹಳಷ್ಟು ಜನರು ಉದ್ಧಾರ ಹೊಂದುವಂಥ ಮಾರ್ಗವನ್ನು (ಧರ್ಮ) ಕೇಳಿಯೂ ಕೂಡ ಭ್ರಷ್ಟರಾಗಿ ಹೋಗುತ್ತಾರೆ. ಧರ್ಮ-ಶ್ರವಣವನ್ನು ಹೊಂದಿ, ಶ್ರದ್ಧೆಯನ್ನು ಪಡೆದ ಮೇಲೆಯೂ ವೀರ್ಯವು (ಧರ್ಮಾಚರಣದಲ್ಲಿ ಪುರುಷಾರ್ಥವು) ದುರ್ಲಭವಿದೆ. ಬಹಳಷ್ಟು ಜೀವಗಳು ರುಚಿ (ಶ್ರದ್ಧಾ)ಯನ್ನು ಕಾಯ್ದುಕೊಂಡವುಗಳಾಗಿದ್ದೂ ಸದಾಚರಣವನ್ನು ಸ್ವೀಕರಿಸಿರುವುದಿಲ್ಲ. ಮನುಷ್ಯಯೋನಿಯಲ್ಲಿ ಜನಿಸಿ ಯಾವನು ಧರ್ಮವನ್ನು ಶ್ರವಣ ಮಾಡುತ್ತಾನೆಯೋ ಮತ್ತು ಶ್ರದ್ಧೆಯನ್ನು ಇಡುತ್ತಾನೆಯೋ ಅಲ್ಲದೆ ತಪಸ್ವಿಯಾಗಿ ಪುರುಷಾರ್ಥದ ಲಾಭವನ್ನು ಸಾಧಿಸಿ ಆತ್ಮ-ಸಂವೃತ್ತನಾಗುತ್ತಾನೆಯೋ ಅವನು ಕರ್ಮ ರಜವನ್ನು ಕಳೆದುಕೊಳ್ಳುತ್ತಾನೆ. ಸರಳ-ಸ್ವಭಾವೀ ಪ್ರಾಣಿಗೇನೇ ಶುದ್ಧಿಯು ಪ್ರಾಪ್ತವಾಗುತ್ತದೆ. ಶುದ್ಧ ಪ್ರಾಣಿಗೇನೇ ಧರ್ಮವು ಸ್ಥಿರವಾಗುತ್ತದೆ. ಅದೇ ಪರಮ ನಿರ್ವಾಣಕ್ಕೆ ತುಪ್ಪವನ್ನು ಸಿಂಪಡಿಸಲು ಅಗ್ನಿಯು ಮೇಲೆ ಹೋಗುವಂತೆ ಹೋಗುತ್ತದೆ.

## ಅವತರಣ—೩

### ಶೌರಸೇನೀ ಪ್ರಾಕೃತ

ಣಾಣೀ ರಾಗಪ್ಪಜಹೋ ಸವ್ವದವ್ವೇಸು ಕಮ್ಮಮಜ್ಝಗದೋ ।
ಣೋ ಲಿಪ್ಪದಿ ಕಮ್ಮರಏಣ ದು ಕದ್ದಮಮಜ್ಝೇ ಜಹಾ ಕಣಯಂ ॥ ೧ ॥

ಅಣ್ಣಾಣೀ ಪುಣ ರತ್ತೋ ಸವ್ವದವ್ವೇಸು ಕಮ್ಮಮಜ್ಝಗದೋ ।
ಲಿಪ್ಪದಿ ಕಮ್ಮರಏಣ ದು ಕದ್ದಮಮಜ್ಝೇ ಜಹಾ ಲೋಹಂ ॥ ೨ ॥

ಣಾಗಫಣೀಎ ಮೂಲಂ ಣಾಇಣಿ-ತೋಏಣ ಗಬ್ಭಣಾಗೇಣ
ಣಾಗಂ ಹೋಇ ಸುವಣ್ಣಂ ಧಮ್ಮಂತಂ ಭಚ್ಛವಾಏಣ ॥ ೩ ॥

ಕಮ್ಮಂ ಹವೇಇ ಕಿಟ್ಟಂ ರಾಗಾದೀ ಕಾಲಿಯಾ ಅಹ ವಿಭಾಓ ।
ಸಮ್ಮತ್ತಣಾಣಚರಣಂ ಪರಮೋಸಹಮಿದಿ ವಿಯಾಣಾಹಿ ॥ ೪ ॥

ಝಾಣಂ ಹವೇಇ ಅಗ್ಗೀ ತವಯರಣಂ ಭತ್ತಲೀ ಸಮಕ್ಖಾದೊ ।
ಜೀವೋ ಹವೇಇ ಲೋಹಂ ಧಮಿಯವ್ವೋ ಪರಮ-ಜೋಈಹಿ ॥ ೫ ॥

ಭುಂಜಂತಸ್ಸ ವಿ ದವ್ವೇ ಸಚ್ಚಿತ್ತಾಚಿತ್ತಮಿಸ್ಸಿಎ ವಿವಿಹೆ ।
ಸಂಖಸ್ಸ ಸೇದ ಭಾವೋ ಣವಿ ಸಕ್ಕದಿ ಕಿಣ್ಹಗೋ ಕಾದುಂ ॥ ೬ ॥

ತಹ ಣಣಿಸ್ಸ ದು ವಿವಿಹೇ ಸಚ್ಚಿತ್ತಾಚಿತ್ತಮಿಸ್ಸಿಎ ದವ್ವೆ ।
ಭುಂಜಂತಸ್ಸ ವಿ ಣಾಣಂ ಣವಿ ಸಕ್ಕದಿ ರಾಗದೋ (ಣಾಣದೋ) ಣೇದುಂ ॥ ೭ ॥

(ಕುಂದಕುಂದ : ಸಮಯಸಾರ ೨೨೯–೨೩೫)

(ಅನುವಾದ)

ಜ್ಞಾನಿಯು ಎಲ್ಲ ದ್ರವ್ಯಗಳ ರಾಗವನ್ನು ತೊರೆದು ಕರ್ಮಗಳ ಮಧ್ಯದಲ್ಲಿ ಇರುತ್ತಿದ್ದರೂ ಸಹ ಕರ್ಮರಜದಿಂದ ಕೆಸರಿನಲ್ಲಿದ್ದ ಸುವರ್ಣದಂತೆ ಲಿಪ್ತನಾಗಿರುವುದಿಲ್ಲ. ಆದರೆ ಅಜ್ಞಾನಿಯು ಸಮಸ್ತ ದ್ರವ್ಯಗಳಲ್ಲಿ ಅನುರಕ್ತನಾಗಿರುವುದರಿಂದ ಕರ್ಮಗಳ ಮಧ್ಯದಲ್ಲಿ ಸಿಲುಕಿ ಕೆಸರಿನಲ್ಲಿ ಬಿದ್ದ ಕಬ್ಬಿಣದಂತೆ ಕರ್ಮರಜದಿಂದ ಲಿಪ್ತನಾಗಿರುತ್ತಾನೆ. ನಾಗಫಣಿಯ ಮೂಲದಲ್ಲಿ ನಾಗಿನೀ ತೋಯ ಗರ್ಭನಾಗದಲ್ಲಿ ಕೂಡಿಸಿ (ಲೋಹಗಳನ್ನು) ಅಗ್ನಿಯಲ್ಲಿ ಕಾಯಿಸಿದರೆ ಶುದ್ಧ ಸುವರ್ಣವಾಗುತ್ತದೆ. ಕರ್ಮವು ಮಲವಾಗಿದೆ. ರಾಗಾದಿ ವಿಭಾವಗಳು ಅದರ ಕಲಂಕಗಳಾಗಿವೆ. ಇವುಗಳನ್ನು ದೂರ ಮಾಡುವುದಕ್ಕಾಗಿ ಸಮ್ಯಗ್ದರ್ಶನ, ಜ್ಞಾನ ಮತ್ತು ಚಾರಿತ್ರಗಳೇ ಪರಮೌಷಧಿಗಳೆಂದು ತಿಳಿಯಬೇಕು. ಧ್ಯಾನವು ಅಗ್ನಿಯಾಗಿದೆ, ತಪಶ್ಚರಣವು ಕುಲುಮೆಯಾಗಿದೆ. ಜೀವವು ಧಾತುವಾಗಿದೆ. ಪರಮ ಯೋಗಿಯಿಂದ ಅದು ಶುದ್ಧವಾಗುತ್ತದೆ. (ಮತ್ತು ಈ ಪ್ರಕಾರ ಪರಮಾತ್ಮಾ ರೂಪೀ ಸುವರ್ಣವು ರೂಪುಗೊಳ್ಳುತ್ತದೆ.) ಸಚಿತ್ತ, ಅಚಿತ್ತ ಮತ್ತು ಮಿಶ್ರರೂಪ ನಾನಾ ಪ್ರಕಾರದ ದ್ರವ್ಯಗಳ ಸಂಯೋಗದಿಂದಲೂ ಶಂಖದ ಧವಲ ವರ್ಣವು ಕಪ್ಪುಗೊಳ್ಳುವುದಿಲ್ಲ. ಅದೇ ಪ್ರಕಾರ ಜ್ಞಾನಿಯು ಸಚಿತ್ತ, ಅಚಿತ್ತ ಮತ್ತು ಮಿಶ್ರರೂಪ ವಿವಿಧ ದ್ರವ್ಯಗಳನ್ನು ಉಪಭೋಗಿಸಿಯೂ ಕೂಡ ರಾಗದಿಂದ ಅವನ ಜ್ಞಾನಸ್ವಭಾವವು ಅಪಹರಣವಾಗುವುದಿಲ್ಲ. (ಅರ್ಥಾತ್ ಜ್ಞಾನವು ಅಜ್ಞಾನ ರೂಪದಲ್ಲಿ ಪರಿಣತವಾಗುವುದಿಲ್ಲ.)

## ಅವತರಣ—೪

### ಶೌರಸೇನೀ ಪ್ರಾಕೃತ

ಜೀವೋ ಣಾಣಸಹಾವೋ ಜಹ ಅಗ್ಗೀ ಉಣ್ಹವೋ ಸಹಾವೇಣ |
ಅತ್ಥಂತರ-ಭೂದೇಣ ಹಿ ಣಾಣೇಣ ಣ ಸೋ ಹವೇ ಣಾಣೀ ॥ ೧ ॥

ಜದಿ ಜೀವಾದೋ ಭಿಣ್ಣಂ ಸವ್ವ-ಪಯಾರೇಣ ಹವದಿ ತಂ ಣಾಣಂ |
ಗುಣ-ಗುಣಿ-ಭಾವೋ ಯ ತಹಾ ದೂರೇಣ ಪಣಸ್ಸದೇ ದುಣ್ಹಂ ॥ ೨ ॥

ಜೀವಸ್ಸ ವಿ ಣಾಣಸ್ಸ ವಿ ಗುಣಿ-ಗುಣ-ಭಾವೇಣ ಕೀರಏ ಭೇಓ |
ಜಂ ಜಾಣದಿ ತಂ ಣಾಣಂ ಏವಂ ಭೇಓ ಕಹಂ ಹೋದಿ ॥ ೩ ॥

ಣಾಣಂ ಭೂಯ-ವಿಯಾರಂ ಜೋ ಮಣ್ಣದಿ ಸೋ ವಿ ಭೂದ-ಗಹಿದವ್ವೋ |
ಜೀವೇಣ ವಿಣಾ ಣಾಣಂ ಕಿಂ ಕೇಣ ವಿ ದೀಸದೇ ಕತ್ಥ ॥ ೪ ॥

ಸಚ್ಚೇಯಣ-ಪಚ್ಚಕ್ಖಂ ಜೋ ಜೀವಂ ಣೇವ ಮಣ್ಣದೇ ಮೂಢೋ |
ಸೋ ಜೀವಂ ಣ ಮುಣಂತೋ ಜೀವಾಭಾವಂ ಕಹಂ ಕುಣದಿ ॥ ೫ ॥

ಜದಿ ಣ ಹವೇದಿ ಜೀವೋ ತಾ ಕೋ ವೇದೇದಿ ಸುಕ್ಖ-ದುಕ್ಖಾಣಿ |
ಇಂದಿಯ-ವಿಸಯಾ ಸವ್ವೇ ಕೋ ವಾ ಜಾಣದಿ ವಿಸೇಸೇಣ ॥ ॥ ೬ ॥

ಸಂಕಪ್ಪ-ಮಓ ಜೀವೋ ಸುಹ-ದುಕ್ಖಮಯಂ ಹವೇಇ ಸಂಕಪ್ಪೋ ॥
ತಂ ಚಿಯ ವೇದದಿ ಜೀವೋ ದೇಹೇ ಮಿಲಿದೋ ವಿ ಸವ್ವತ್ಥ ॥ ೭ ॥

ದೇಹ-ಮಿಲಿದೋ ಹಿ ಜೀವೋ ಸವ್ವ-ಕಮ್ಮಾಣಿ ಕುವ್ವದೇ ಜಮ್ಹಾ |
ತಮ್ಹಾ ಪವಟ್ಟಮಾಣೋ ಏಯತ್ತಂ ಬುಜ್ಝದೇ ದೋಣ್ಹಂ ॥ ೮ ॥

(ಕಾರ್ತ್ತಿಕೇಯಾನುಪ್ರೇಕ್ಷಾ, ೧೭೮-೧೮೫)

### (ಅನುವಾದ)

ಅಗ್ನಿಯು ಸ್ವಭಾವದಿಂದಲೇ ಉಷ್ಣವಾಗಿರುವಂತೆ ಜೀವವು ಜ್ಞಾನ ಸ್ವಭಾವವುಳ್ಳುದಾಗಿದೆ. ಯಾವುದಾದರೊಂದು ಪದಾರ್ಥರೂಪದ ಜ್ಞಾನದ ಸಂಯೋಗದಿಂದ ಜೀವವು ಜ್ಞಾನಿಯಾಗಿರುವುದಿಲ್ಲ. ಒಂದು ವೇಳೆ ಜ್ಞಾನವು ಸರ್ವ ಪ್ರಕಾರದಿಂದ ಜೀವದಿಂದ ಭಿನ್ನವೇ ಆಗಿದ್ದರೆ ಗುಣ ಮತ್ತು ಗುಣೀ ಭಾವವು ಸರ್ವಥಾ ನಷ್ಟವಾಗಿ ಹೋಗುತ್ತಿತ್ತು. (ಅರ್ಥಾತ್ ಅವುಗಳ ನಡುವೆ ಗುಣ ಮತ್ತು ಗುಣಿಗಳ ಸಂಬಂಧವು ಆಗುತ್ತಿರಲಿಲ್ಲ.) ಜೀವ ಮತ್ತು ಜ್ಞಾನಗಳ ಮಧ್ಯದಲ್ಲಿ ಒಂದು ವೇಳೆ ಗುಣೀ ಮತ್ತು ಗುಣದ ಭಾವದಿಂದ ಭೇದಗಳನ್ನು ಮಾಡಿದರೆ ಯಾವುದು ಯಾವುದನ್ನು ತಿಳಿಯುತ್ತದೆಯೋ ಅದೇ ಜ್ಞಾನವಾಗಿದೆ. ಅದು ಜ್ಞಾನ ಸ್ವರೂಪವಾದ ಮೇಲೆ ಎರಡರಲ್ಲಿಯೂ ಭೇದವು ಹೇಗೆ ಇದ್ದೀತು ? ಯಾರು ಜ್ಞಾನವನ್ನು ಭೂತ-ವಿಕಾರವೆಂದು (ಜಡತತ್ವದ

ರೂಪಾಂತರ) ಮನ್ನಿಸುವರೋ ಅವರು ಸ್ವತಃ ಭೂತ-ಗೃಹೀತರು (ಪಿಶಾಚ ಹಿಡಿದವರು) ಎಂದು ತಿಳಿಯಬೇಕು ಯಾರಾದರೂ ಜೀವದ ವಿನಹ ಜ್ಞಾನವನ್ನು ಕಂಡವರು ಉಂಟೆ? ಜೀವದ ಸ್ವಚೇತನವು (ಸ್ವಸಂವೇದನ) ಪ್ರತ್ಯಕ್ಷ ಆದಾಗಲೂ ಕೂಡ ಯಾವ ಮೂರ್ಖನು ಅದನ್ನು ಮನ್ನಿಸುವುದಿಲ್ಲವೋ ಅವನು ಜೀವವಿಲ್ಲ, ಎಂದು ವಿಚಾರ ಮಾಡುತ್ತ, ಜೀವದ ಅಭಾವವನ್ನು ಹೇಗೆ ಸ್ಥಾಪಿಸುತ್ತಾನೆ? (ಅರ್ಥಾತ್ ವಸ್ತುವಿನ ಸದ್‌ಭಾವ ಇಲ್ಲವೆ ಅಭಾವ ಇವುಗಳ ವಿಚಾರ ಮಾಡುವುದೇ ಜೀವದ ಸ್ವಭಾವ ಆಗಿದೆ.) ಜೀವವು ಇರದಿದ್ದರೆ ಸುಖ ಮತ್ತು ದುಃಖದ ವೇದನೆಯು ಯಾರಿಗೆ ಆಗುತ್ತದೆ? ಸಮಸ್ತ ಇಂದ್ರಿಯಗಳ ವಿಷಯವನ್ನು ವಿಶೇಷ ರೂಪದಿಂದ ಯಾರು ತಿಳಿಸುತ್ತಾರೆ? ಜೀವವು ಸಂಕಲ್ಪಮಯವಿದೆ. ಸಂಕಲ್ಪವು ಸುಖ-ದುಃಖ ಮಯವಿದೆ. ಎಲ್ಲೆಡೆಗೂ ದೇಹದಿಂದ ಕೂಡಿದ ಜೀವವು ವೇದನೆಯುಳ್ಳದಾಗಿದೆ. ಯಾಕಂದರೆ ದೇಹದಿಂದ ಕೂಡಿದ ಜೀವವೇ ಸಮಸ್ತ ಕರ್ಮವನ್ನೂ ಮಾಡುತ್ತದೆ. ಇದೇ ಕಾರಣದಿಂದ ಎರಡರಲ್ಲಿಯೂ ಪ್ರವರ್ತ್ಯಮಾನವಾದ ಏಕತ್ವವು ಕಂಡುಬರುತ್ತದೆ.

## ಅವತರಣ–೫

### ಮಹಾರಾಷ್ಟ್ರೀ ಪ್ರಾಕೃತ

ಎಏ ರಿವೂ ಮಹಾಜಸ, ಜಿಣಮಿ ಅಹಂ ನ ಎತ್ಥ ಸಂದೇಹೋ ।
ವಚ್ಚ ತುಮಂ ಅಇತುರಿಓ, ಕಂತಾಪರಿರಕ್ಖಣಂ ಕುಣಸು ॥ ೧ ॥

ಎವ ಭಣಿಓ ಣಿಯತ್ತೋ, ತೂರಂತೋ ಪಾವಿಓ ತಮುದ್ದೇಸಂ ।
ನ ಯ ಪೇಚ್ಛಇ ಜಣಯಸುಯಂ, ಸಹಸಾ ಓಮುಚ್ಛಿಓ ರಾಮೋ ॥ ೨ ॥

ಪುಣರವಿ ಯ ಸಮಾಸತ್ಥೋ, ದಿಟ್ಠೀ ನಿಕ್ಖಿವಇ ತತ್ಥ ತರುಗಹಣೇ ।
ಘಣಪೇಮ್ಮಾಉಲಹಿಯಓ, ಭಣಇ ತಓ ರಾಹವೋ ವಯಣಂ ॥ ೩ ॥

ಏಹೇಹಿ ಇಓ ಸುಂದರಿ, ವಾಯಾ ಮೇ ದೇಹಿ, ಮಾ ಚಿರಾವೇಹಿ ।
ದಿಟ್ಠಾ ಸಿ ರುಕ್ಖಗಹಣೇ, ಕಿಂ ಪರಿಹಾಸಂ ಚಿರಂ ಕುಣಸಿ ॥ ೪ ॥

ಕಂತಾವಿಓಗದುಹಿಓ, ತಂ ರಣ್ಣಂ ರಾಹವೋ ಗವೇಸನ್ತೋ ।
ಪೇಚ್ಛಇ ತಓ ಜಡಾಗಿಂ, ಕೇಂಕಾಯನ್ತಂ ಮಹಿಂ ಪಡಿಯಂ ॥ ೫ ॥

ಪಕ್ಖಿಸ್ಸ ಕಣ್ಣಜಾವಂ, ದೇಇ ಮರಂತಸ್ಸ ಸುಹಯ ಜೋಏಣಂ ।
ಮೋತ್ತೂಣ ಪೂಇದೇಹಂ, ತತ್ಥ ಜಡಾಊ ಸುರೋ ಜಾಓ ॥ ೬ ॥

ಪುಣರವಿ ಸರಿಊಣ ಪಿಯಂ, ಮುಚ್ಛಾ ಗಂತೂಣ ತತ್ಥ ಆಸತ್ಥೋ ।
ಪರಿಭಮಇ ಗವೇಸಂತೋ, ಸೀಯಾಸೀಯಾಕಉಲ್ಲಾವೋ ॥ ೭ ॥

ಭೋ ಭೋ ಮತ್ತ ಮಹಾಗಯ, ಎತ್ಥಾರಣ್ಣೇ ತುಮೇ ಭಮನ್ತೇಣಂ ।
ಮಹಿಲಾ ಸೋಮಸಹಾವಾ, ಜಇದಿಟ್ಠಾ ಕಿಂ ನ ಸಾಹೇಹಿ ॥ ೮ ॥

ತರೂವರ ತುಮಂ ಪಿ ವಚ್ಚಸಿ, ದೂರುನ್ನಯವಿಯಡಪತ್ತಲಚ್ಛಾಯ ।
ಎತ್ಥಂ ಅಪುಪ್ವವಿಲಯಾ, ಕಹತೇ ನೋ ಲಕ್ಖಿಯಾ ರಣ್ಣೇ ॥ ೯ ॥

ಸೋಊಣ ಚಕ್ಕಾವಾಈ, ವಾಹರಮಾಣೀ ಸರಸ್ಸ ಮಜ್ಝತ್ಥಾ ।
ಮಹಿಲಾಸಂಕಾಭಿಮುಹೋ, ಪುಣೊ ವಿ ಜಾಓಚ್ಚಿಯ ನಿರಾಸೋ ॥ ೧೦ ॥

(ಪಉಮಚರಿಯಂ, ೪೪, ೫೦–೫೯)

(ಅನುವಾದ)

(ರಾವಣನ ಸಿಂಹನಾದವನ್ನು ಲಕ್ಷ್ಮಣನದೆಂದು ತಿಳಿದು, ರಾಮನು ಖರದೂಷಣನ ಯುದ್ಧಭೂಮಿಯಲ್ಲಿ ಹೋದನು. ಆಗ ಅವನನ್ನು ಕಂಡು ಲಕ್ಷ್ಮಣನು ಹೇಳಿದನು)–ಎಲೈ ಮಹಾಯಶ, ಈ ವೈರಿಯನ್ನು ಗೆಲ್ಲಲಿಕ್ಕಂತೂ ನಾನೊಬ್ಬನೇ ಸಾಕು. ಇದರಲ್ಲಿ ಸಂದೇಹವಿಲ್ಲ. ತಾವು ಬಹಳ ಬೇಗನೆ ತಿರುಗಿ ಹೋಗಿರಿ. ಸೀತೆಯನ್ನು ಕಾಪಾಡಿರಿ. ಲಕ್ಷ್ಮಣನು ಈ ಪ್ರಕಾರ ಹೇಳಿದ ಮೇಲೆ ರಾಮನು ಅಲ್ಲಿಂದ ತಿರುಗಿದನು. ಬೇಗಬೇಗನೆ ತನ್ನ ಕುಟೀರದ ಹತ್ತಿರ ಬಂದನು. ಆದರೆ ಅಲ್ಲಿ ಅವನು ಜನಕ ಸುತೆಯನ್ನು ಕಾಣಲಿಲ್ಲ. ಆಗ ಅವನು ಸಂಪೂರ್ಣ ಮೂರ್ಛಿತನಾದನು. ತರುವಾಯ ಎಚ್ಚರವಾದ ಮೇಲೆ ಅವನು ವೃಕ್ಷಗಳಿಂದ ತುಂಬಿದ ವನದಲ್ಲಿ ತನ್ನ ದೃಷ್ಟಿಯನ್ನು ಬೀರಿದನು. ತನ್ನ ಗಾಢ ಪ್ರೇಮದಿಂದ ವ್ಯಾಕುಲನಾಗಿ. ನುಡಿಯಹತ್ತಿದನು–ಎಲೈ ಸುಂದರೀ, ಬೇಗನೆ ಇಲ್ಲಿ ಬಾ, ನನ್ನೊಡನೆ ಮಾತನಾಡು, ತಡಮಾಡಬೇಡ. ನಾನು ನಿನ್ನನ್ನು ವೃಕ್ಷಗಳ ಸಮೂಹದಲ್ಲಿ ಕಾಣುತ್ತಲಿದ್ದೇನೆ. ಇನ್ನೂಎಷ್ಟೊತ್ತಿನ ವರೆಗೆ ಏಕೆ ಪರಿಹಾಸ ಮಾಡುತ್ತಿರುವೆ? ಕಾಂತೆಯ ವಿಯೋಗದಿಂದ ದುಃಖಿಯಾದ ರಾಘವನು ಅರಣ್ಯದಲ್ಲಿ ಸುತ್ತುತ್ತ ಸುತ್ತುತ್ತ ಜಟಾಯುವನ್ನು ಕಂಡನು. ಅದು ಭೂಮಿಯ ಮೇಲೆ ಬಿದ್ದು ಚಡಪಡಿಸುತ್ತಿದ್ದಿತು. ರಾಮನು ಆ ಮರಣೋನ್ಮುಖ ಪಕ್ಷಿಯ ಕಿವಿಯಲ್ಲಿ ನಮೋಕಾರ ಮಂತ್ರದ ಜಪವನ್ನು ಹೇಳಿದನು. ಆ ಶುಭಯೋಗದಿಂದ ಜಟಾಯುವು ತನ್ನ ಆ ಅಶುಚಿ ದೇಹವನ್ನು ತೊರೆದು ದೇವನಾಗಿ ಜನಿಸಿತು. ರಾಮನು ತಿರುಗಿ ಪ್ರಿಯೆಯನ್ನು ನೆನೆದು ಮೂರ್ಛಿತನಾದನು. ಮುಂದೆ ಎಚ್ಚರಗೊಂಡ ಮೇಲೆ–ಹಾಯ್ ಸೀತೆ, ಹಾಯ್ ಸೀತೆ ಹೀಗೆ ಪ್ರಲಾಪ ಮಾಡುತ್ತ ಅವಳ ಶೋಧದಲ್ಲಿ ಪರಿಭ್ರಮಣ ಮಾಡತೊಡಗಿದನು. ಆನೆಯನ್ನು ಕಂಡು ಅವನು ನುಡಿಯುತ್ತಾನೆ–ಹೇ! ಮತ್ತಮಹಾಗಜ, ನೀನು ಈ ಅರಣ್ಯದಲ್ಲಿ ಸಂಚರಿಸುತ್ತಿರುವಾಗ ಒಬ್ಬ ಸೌಮ್ಯ ಸ್ವಭಾವದ ಮಹಿಳೆಯನ್ನು ಯಾವಾಗಾದರೂ ಕಂಡಿರುವಿಯಾ? ಕಂಡಿದ್ದರೆ ನನಗೆ ಏಕೆ ಹೇಳುವುದಿಲ್ಲ? ಹೇ ತರುವರಾ, ನೀನಂತೂ ಬಹು ಎತ್ತರವಾಗಿರುವಿ; ವಿಕಟವಾಗಿರುವಿ; ಎಲೆಗಳ ನೆರಳಿನಿಂದ ಕೂಡಿರುವಿ. ನೀನು ಇಲ್ಲಿ ಅಪೂರ್ವ ಸ್ತ್ರೀಯೊಬ್ಬಳನ್ನು ಕಂಡಿದ್ದರೆ ನನಗೆ ಹೇಳು. ರಾಮನು ಸರೋವರದ ಮಧ್ಯದಲ್ಲಿ ಚಕೋರಿಯ ಧ್ವನಿಯನ್ನು ಕೇಳಿದನು. ಅಲ್ಲಿ ತನ್ನ ಪತ್ನಿಯೇ ಎಂದು ಸಂಶಯವನ್ನು ತಾಳಿ, ಆ ದಿಸೆಯಲ್ಲಿ ಮುಂದರಿದನು.

ಆದರೆ ಮರಳಿ ಅವನು ನಿರಾಶೆಯನ್ನು ಹೊಂದಿದನು.

## ಅವತರಣ–೬

## ಮಹಾರಾಷ್ಟ್ರೀ ಪ್ರಾಕೃತ

ಜತ್ಥ ಚುಲುಕ್ಕ-ನಿವಾಣಂ ಪರಿಮಲ–ಜಮ್ಮೋ ಜಸೋ ಕುಸುಮ-ದಾಮಂ |
ನಹಮಿವ ಸವ್ವ-ಗಓ ದಿಸ-ರಮಣೀಣ ಸಿರಾಈ ಸುರಹೇಇ ॥ ೧ ॥

ಸವ್ವ–ವಯಾಣಂ ಮಜ್ಝಿಮವಯಂ ವ ಸುಮಣಾಣ ಜಾಇ-ಸುಮಣಂ ವ |
ಸಮ್ಮಾಣ ಮುತ್ತಿ-ಸಮ್ಮಂ ವ ಪುಹಇ-ನಯರಾಣ ಜಂ ಸೇಯಂ ॥ ೨ ॥

ಜಮ್ಮಂ ಜಾಣ ನ ಅಚ್ಛೀ ಣಾಣಂ ಅಚ್ಛೀಇಂ ತಾಣ ವಿ ಮುಣೀಣ |
ವಿಅಸಂತಿ ಜತ್ಥ ನಯಣಾ ಕಿಂ ಪುಣ ಅನ್ನಾಣ ನಯಣಾಇಂ ॥ ೩ ॥

ಗುರುಣೋ ವಯಣಾ ವಯಣಾಇಂ ತಾವ ಮಾಹಪ್ಪಮವಿಯ ಮಾಹಪ್ಪೋ |
ತಾವ ಗುಣಾಇಂ ಪಿ ಗುಣಾ ಜಾವ ನ ಜಸ್ಸಿಂ ಬುಹೇ ನಿಅಇ ॥ ೪ ॥

ಹರಿ-ಹರ-ವಿಹಿಣೋ ದೇವಾ ಜತ್ಥನಾಇಂ ವಸಂತಿ ದೇವಾಇಂ |
ಎಯಾಏ ಮಹಿಮಾಏ ಹರಿಓ ಮಹಿಮಾ ಸುರ ಪುರೀಏ ॥ ೫ ॥

ಜತ್ಥಂಜಲಿಣಾ ಕಣಯಂ ರಯಣಾಇಂ ವಿ ಅಬಓಲೀಇ ದೇಇ ಜಣೋ |
ಕಣಯ-ನಿಹೀ ಅಕ್ಖೀಣೊ ರಯಣ-ನಿಹೀ ಅಕ್ಖಯಾ ತಹ ವಿ ॥ ೬ ॥

ತತ್ಥ ಸಿರಿ-ಕುಮಾರವಾಲೋ ಬಾಹಾಏ ಸವ್ವಓ ವೀ ಧರಿಅ-ಧರೋ |
ಸು-ಪರಿಟ್ಠ-ಪರೀವಾರೋ ಸುಪಣಇಟ್ಠೋ ಆಸಿ ರಾ ಇನ್ದೋ ॥ ೭ ॥

(ಕುಮಾರವಾಲ-ಚರಿತ, ೧೨, ೨೨–೨೮)

## (ಅನುವಾದ)

ಈ ಅಣಹಿಲವುರ ನಗರದಲ್ಲಿ ಚಾಲುಕ್ಯ-ವಂಶೀ ರಾಜರ ಯಶಸ್ಸು ಸರ್ವ ದಿಶೆಗಳಲ್ಲಿ ಪಸರಿಸಿತ್ತು. ಅದು ದಿಶಾರೂಪೀ ರಮಣಿಯರು ತಮ್ಮ ಶಿರದಲ್ಲಿ ಧರಿಸಿದ ಪುಷ್ಪಮಾಲೆಯ ಸುಗಂಧದ ಪರಿಮಳದಂತೆ ಇತ್ತು. ಎಲ್ಲ ವಯಸ್ಸಿನಲ್ಲಿ ಮಧ್ಯಮ ವಯಸ್ಸು (ಯೌವನ) ಹೇಗೋ, ಪುಷ್ಪಗಳಲ್ಲಿ ಚಂಪಕವು ಹೇಗೋ, ಸುಖಗಳಲ್ಲಿ ಮೋಕ್ಷ ಸುಖವನ್ನು ಶ್ರೇಷ್ಠವೆಂದು ಮನ್ನಿಸಲಾದುದು ಹೇಗೋ, ಅದೇ ಪ್ರಕಾರ ಪೃಥ್ವಿಯೆಲ್ಲೆಲ್ಲ ನಗರಗಳಲ್ಲಿ ಅಣಹಿಲಪುರವು ಶ್ರೇಷ್ಠವಾಗಿತ್ತು. ಯಾರಿಗೆ ಕರ್ಮ-ಚಕ್ಷುಗಳು ಇಲ್ಲವೋ ಕೇವಲ ಜ್ಞಾನರೂಪೀ ಚಕ್ಷುಗಳು ಇರುವವೋ ಅಂಥ ಮುನಿಗಳ ನೇತ್ರಗಳೂ ಸಹ ಆ ನಗರವನ್ನು ನೋಡುವುದಕ್ಕಾಗಿ ಅರಳಿ ನಿಲ್ಲುತ್ತವೆ. ಅಂದ ಮೇಲೆ ಅನ್ಯರ ನೇತ್ರಗಳ ಗತಿಯೇನು? ಗುರುಗಳ (ಬೃಹಸ್ಪತಿ) ವಚನವು ಎಲ್ಲಿಯವರೆಗೆ ಇರುವುದೋ, ಅಲ್ಲಿಯವರೆಗೆ ಮಹಾತ್ಮ್ಯವೂ ಇತ್ತು, ಗುಣವೂ ಅಲ್ಲಿಯವರೆಗೆ ಗುಣವಾಗಿತ್ತು.

## (ಅನುವಾದ)

ನಾಗಕುಮಾರನು ತನ್ನ ಇಬ್ಬರು ಗೃಹಣಿಯರು, ಕುದುರೆಗಳು ಮತ್ತು ಆ ವ್ಯಾಲನೆಂಬ ಹೆಸರಿನ ವೀರನನ್ನು ಕೂಡಿಕೊಂಡು ಕಾಶ್ಮೀರ ದೇಶಕ್ಕೆ ತೆರಳಿದನು. ಅಲ್ಲಿಯ ಗಾಳಿಯು ಕೇಶರದ ಗಂಧದಿಂದ ಮಿಶ್ರಿತವಾಗಿತ್ತು. ಕಾಶ್ಮೀರ ಪಟ್ಟಣಕ್ಕೆ ತಲುಪಿದ ಮೇಲೆ ಅಲ್ಲಿಯ ರಾಜನಾದ ನಂದನು ಚೌರಿ, ಛತ್ರ, ಸೇವಕ ಮತ್ತು ರಥಾದಿ ಗಳಿಂದ ವಿರಾಜಮಾನನಾಗಿ ಸ್ವಾಗತಕ್ಕೆಂದು ಎದುರಿಗೆ ಬಂದನು. ಅಲ್ಲಿ ನಗರ ನಾರಿಯ್ರ ರಿಗೆ ಪ್ರೇಮಜ್ವರಗಳು ಕಾಣಿಸಿಕೊಂಡವು. ಕೆಲ ಕಾಂತೆಯರು ದ್ವಿಧಾ ಚಿತ್ತದಿಂದ ಕೊರಗ ತೊಡಗಿದರು. ಕೆಲವರು ಆ ಕಾಮದೇವನ ಅವತಾರವೆನಿಸುವ ನಾಗಕುಮಾರನ ದರ್ಶನ ದಲ್ಲಿ ತಲ್ಲೀನರಾದರು. ಕೆಲವರು ಮೂಢಾವಸ್ಥೆಯಲ್ಲಿ ತಮ್ಮ ಮನೆಗೆ ಬಂದ ಅಳಿಯನ ಪಾದಗಳಿಗೆ ವಂದಿಸಿ, ಅವುಗಳನ್ನು ತುಪ್ಪದಿಂದ ತೊಳೆದರು. ನೀರನ್ನು ತರುವ ಬದಲು ಎಣ್ಣೆಯನ್ನು ತಂದರು. ಎಲೆಯಲ್ಲಿ ಕಾಚಿನ ಬದಲು ಕಟ್ಟಿಗೆಯ ಪುಡಿಯನ್ನು ಹಾಕ ತೊಡಗಿದರು. ಕೆಲವರು ಅನ್ಯಮನಸ್ಕರಾಗಿ ಬಾಲಕನೆಂದು ತಿಳಿದು ಬೆಕ್ಕಿನ ಮರಿಯನ್ನೇ ಎತ್ತಿಕೊಂಡು ನಡೆದರು ಕೆಲವರು ಮಜ್ಜಿಗೆಯೆಂದು ಭಾವಿಸಿ ಹಾಲನ್ನೇ ಉಪಯೋಗಿ ಸಿದರು. ಕೆಲವರು ನೀರನ್ನೇ ಹಾಲೆಂದು ಮಥನಗೈದರು. ನೂಲವಿಲ್ಲದೆ ಹೂವನ್ನು ಪವ ಣಿಸುವ ಯತ್ನದಲ್ಲಿಯೂ ಹಲವರು ತೊಡಗಿದರು. ಇನ್ನು ಕೆಲವರು ಚೆಲುವನಾದ ನಾಗಕುಮಾರನ ಸಾನಿಧ್ಯದಲ್ಲಿ ಹೋಗಿ, ಸುಖದ ಇಚ್ಛೆಯಿಂದ–'ಹೇ ಪ್ರಿಯ, ನಾನು ತಮ್ಮ ದಾಸಿಯಾಗಿದ್ದೇನೆ.' ಎಂದು ಹೇಳತೊಡಗಿದರು.

## ಅವತರಣ–೮

### ಅಪಭ್ರಂಶ

ತಂ ತೇಹಲು ಧಣಕಂಚಣಪಉರು ದಿಟ್ಠು ಕುಮಾರಿಂ ವರಣಯರು |
ಸಿಯವಂತು ವಿಯಣು ವಿಚ್ಛಾಯಛವಿ ಣಂ ವಿಣು ಣೇರಿಂ ಕಮಲಸರು ||

ತಂ ಪುರಂ ಪವಿಸ್ಸಮಾಣಏಣ ತೇಣ ದಿಟ್ಠಯಂ |
ತಂ ಣ ತಿತ್ಥು ಕಿಂ ಪಿ ಜಂ ಣ ಲೋಯಣಾಣ ಇಟ್ಠಯಂ ||೧||

ವಾವಿಕೂವಸುಪ್ಪಹೂವಸುಪ್ಪಸಣ್ಣವಣ್ಣಯಂ |
ಮಢ ವಿಹಾರ ದೇಹುರೇಹಿ ಸುಟ್ಠುತಂ ರವಣ್ಣಯಂ ||೨||

ದೇವಮಂದಿರೇಸು ತೇಸು ಅಂತರಂ ಣಿಯಚ್ಛಏ |
ಸೊ ಣ ತಿತ್ಥು ಜೊ ಕಯಾಇ ಪುಚ್ಛಿಊಣ ಪಿಚ್ಛಏ ||೩||

ಸುರಹಿಗಂಧಪರಿಮಲಂ ಪಸೂಅಏಹಿಂ ಘಂಸಏ |
ಸೋಣ ತಿತ್ಥು ಜೋಕರೇಣ ಗಿಣ್ಹಿಊಣ ವಾಸಏ ||೪||

ಪಿಕ್ಕಸಾಲಿಧಣ್ಣಯಂ ಪಣಟ್ಠಯಮ್ಮಿ ತಾಣಏ ।
ಣ ಕೋಇ ತಿತ್ಥು ಜೋ ಘರಮ್ಮಿ ಲೇವಿ ತಂ ಪರಾಣಏ ॥೫॥

ಸರವರಮ್ಮಿ ಪಂಕಯಾಇಂ ಪವಿರಭಮರಕಂದಿರೆ ।
ಸೊ ಣ ತಿತ್ಥು ಜೊ ಖುಡೇವಿ ದೇಇ ತಾಇಂ ಮಂದಿರೆ ॥೬॥

ಹತ್ಥಗಿಜ್ಝವರ ಫಲಾಇಂ ವಿಂಭವಣಿ ಪಿಕ್ಕಏ ।
ಕೇಣ ಕಾರಣೇಣ ಕೋಇ ತೋಡಿಉಂ ಣ ಚಕ್ಖಏ ॥೭॥

ಪಿಚ್ಛಿಊಣ ಪರಧಣಾಇಂ ಖುಬ್ಭಏಣ ಲುಬ್ಭಏ ।
ಅಪ್ಪಣಮ್ಮಿ ಅಪ್ಪಏ ಪಿಯಪ್ಪಏ ಸುಹಿಂತಏ ॥೮॥

(ಭವಿಸಯತ್ತಕಹಾ—೪, ೭)

(ಅನುವಾದ)

ಭವಿಷ್ಯದತ್ತ ಕುಮಾರನು ಆ ಧನ ಕಾಂಚನದಿಂದ ಪೂರ್ಣ ಸಮೃದ್ಧ ನಗರವು ನಿರ್ಜನವಾಗಿರುವ ಕಾರಣ ಶೋಭಾಹೀನವಾಗಿರುವುದನ್ನು ಕಂಡನು. ಅದು ನೀರಿಲ್ಲದ ಕಮಲ ಸರೋವರದಂತೆ ಇತ್ತು. ಕುಮಾರನು ನಗರದಲ್ಲಿ ಪ್ರವೇಶಿಸಿದನು. ಕಣ್ಣಿಗೆ ಸಂತೋಷವನ್ನು ನೀಡುವ ಯಾವ ವಸ್ತುಗಳೂ ಅಲ್ಲಿಲ್ಲವೆಂಬುದನ್ನು ಕಂಡನು. ಕೊಳ ಹಾಗೂ ಬಾವಿಗಳು ಅಲ್ಲಿ ಬಹು ಸ್ವಚ್ಛನೀರಿನಿಂದ ತುಂಬಿ ತುಳುಕುತ್ತಿದ್ದವು. ಮಠ, ವಿಹಾರ ದೇವಗೃಹಗಳಿಂದ ನಗರವು ಬಹಳ ರಮಣೀಯವಾಗಿತ್ತು. ಅವನು ದೇವಾಲಯದಲ್ಲಿ ಪ್ರವೇಶಿಸಿದನು. ಪೂಜೆಯನ್ನು ಮಾಡುವ ಇಚ್ಛೆಯುಳ್ಳವರು ಅಲ್ಲಿ ಯಾರೂ ಇದ್ದುದು ಅವನಿಗೆ ಕಂಡುಬರಲಿಲ್ಲ. ಹೂವಿನ ಸುಗಂಧವು ನಾಲ್ಕುಕಡೆ ಬರುತ್ತಲಿತ್ತು. ಆದರೆ ಅದನ್ನು ಕೈಯಿಂದ ಕಡಿದು ವಾಸನೆ ನೋಡುವ ಇಚ್ಛೆಯುಳ್ಳವರು ಯಾರೂ ಇರಲಿಲ್ಲ. ಬೆಳೆದು ಹಣ್ಣಾದ ಭತ್ತವು ಹೊಲದಲ್ಲಿಯೇ ನಷ್ಟವಾಗಿ ಹೋಗುತ್ತಲಿತ್ತು. ಯಾರೂ ಅದನ್ನು ಉಳಿಸಿ ಮನೆಗೆ ತಕ್ಕೊಂಡು ಹೋಗುವವರೂ ಇರಲಿಲ್ಲ. ಸರೋವರಗಳಲ್ಲಿ ಭ್ರಮರಗಳಿಂದ ಸುತ್ತುವರಿಯಲ್ಪಟ್ಟ ಮತ್ತು ಗುಂಜಾರವದ ಮಧ್ಯದಲ್ಲಿರುವ ಕಮಲಗಳಿದ್ದುವು. ಆದರೆ ಅವುಗಳನ್ನು ಹರಿದು ಮಂದಿರಗಳಲ್ಲಿ ಒಯ್ಯುವಂಥವರು ಅಲ್ಲಿ ಯಾರೂ ಇರಲಿಲ್ಲ. ಅಲ್ಲಿ ಉತ್ತಮ ಫಲಗಳಿದ್ದವು ; ಕೈಗೆ ನಿಲುಕುವಂತೆಯೇ ಇದ್ದವು ; ಆದರೆ ಯಾವ ಕಾರಣದಿಂದ ಅವುಗಳನ್ನು ಕಡಿದು ಯಾರೂ ತಿನ್ನುವುದಿಲ್ಲವೋ ಏನೋ! ಇದನ್ನು ಅವನು ವಿಸ್ಮಯದಿಂದ ಕಂಡನು. ಇನ್ನೊಬ್ಬರ ಧನವನ್ನು ಕಂಡು ಕ್ಷುಬ್ಧ ಹಾಗೂ ಲುಬ್ಧವಾಗುವಂಥವರು ಅಲ್ಲಿ ಯಾರೂ ಇರಲಿಲ್ಲ. ನಗರದ ಇಂಥ ನಿರ್ಜನ ಅವಸ್ಥೆಯನ್ನು ಕಂಡು ಕುಮಾರನು ತನ್ನಷ್ಟಕ್ಕೆ ತನ್ನಲ್ಲಿಯೇ ವಿಕಲ್ಪವುಳ್ಳವನಾದನು. ವಿಚಾರದಲ್ಲಿಯೂ ಮುಳುಗಿದನು.

---

ವ್ಯಾಖ್ಯಾನ—೩

# ಜೈನ ದರ್ಶನ

### ತತ್ತ್ವ-ಜ್ಞಾನ :—

ಸಮಸ್ತ ಜೈನದರ್ಶನದ ಪರಿಚಯವನ್ನು ಸಂಗ್ರಹವಾಗಿ ಈ ಪ್ರಕಾರ ಕೊಡಲು ಸಾಧ್ಯವಿದೆ. ವಿಶ್ವದ ಮೂಲದಲ್ಲಿ ಜೀವ ಮತ್ತು ಅಜೀವ ಇವೆರಡು ಮುಖ್ಯ ತತ್ವಗಳಿವೆ. ಇವುಗಳ ಪರಸ್ಪರ ಸಂಪರ್ಕವೂ ಕಂಡುಬರುತ್ತದೆ. ಈ ಸಂಪರ್ಕದಿಂದ ಜೀವಕ್ಕೆ ನಾನಾ ಪ್ರಕಾರದ ಅವಸ್ಥೆಗಳೂ ಅನುಭವಗಳೂ ಉಂಟಾಗುವ ಬಂಧನ ಅಥವಾ ಶಕ್ತಿಯು ಉತ್ಪನ್ನವಾಗುತ್ತದೆ. ಆದರೆ ಈ ಸಂಪರ್ಕದ ಪ್ರವಾಹವನ್ನು ತಡೆದು, ಉತ್ಪನ್ನವಾದಂಥ ಬಂಧನಗಳನ್ನು ಜರ್ಜರಗೊಳಿಸಿ, ಇಲ್ಲವೆ ವಿನಷ್ಟಗೊಳಿಸಿ ನಿಂತಾಗ ಜೀವವು ತನ್ನ ಶುದ್ಧ, ಬುದ್ಧ ಮತ್ತು ಮುಕ್ತ ಅವಸ್ಥೆಯನ್ನು ಹೊಂದುವುದು ಸಾಧ್ಯವಿದೆ. ಇವೇ ಏಳು ಜೀವ, ಅಜೀವ, ಆಸ್ರವ, ಬಂಧ, ಸಂವರ, ನಿರ್ಜರಾ ಮತ್ತು ಮೋಕ್ಷ ಎಂದು ಜೈನದರ್ಶನದ ತತ್ವಗಳಾಗಿವೆ. ಜೀವ ಮತ್ತು ಅಜೀವ ಈ ಎರಡು ಪ್ರಕಾರದ ತತ್ವಗಳ ನಿರೂಪಣೆಯು ಜೈನ ತತ್ವಜ್ಞಾನದ ವಿಷಯವಾಗಿದೆ. ಆಸ್ರವ ಮತ್ತು ಬಂಧದ ವಿವೇಚನೆಯು ಜೈನ ಕರ್ಮಸಿದ್ಧಾಂತದಲ್ಲಿ ಬರುತ್ತದೆ. ಅದು ಜೈನ ಮನೋವಿಜ್ಞಾನ ಶಾಸ್ತ್ರವಾಗಿದೆ. ಸಂವರ ಹಾಗೂ ನಿರ್ಜರಾ ಇವು ಚಾರಿತ್ರ್ಯಕ್ಕೆ ಸಂಬಂಧಿಸಿದವುಗಳಾಗಿವೆ. ಇದೇ ಜೈನಧರ್ಮದಲ್ಲಿ ಬರುವ ಆಚಾರ-ಶಾಸ್ತ್ರವೆನಿಸುತ್ತದೆ. ಮೋಕ್ಷವು ಜೈನಧರ್ಮಕ್ಕನುಸರಿಸಿ ಜೀವನದ ಸರ್ವೋತ್ಕೃಷ್ಟ ಅವಸ್ಥೆಯಾಗಿದೆ. ಇದನ್ನು ಸಂಪಾದಿಸುವುದೇ ಸಮಸ್ತ ಧಾರ್ಮಿಕ ಕ್ರಿಯೆ ಮತ್ತು ಆಚರಣೆಗಳ ಅಂತಿಮ ಧ್ಯೇಯವಾಗಿದೆ. ಇಲ್ಲಿ ಜೈನ ದರ್ಶನದ ಇವೇ ಮುಖ್ಯ ಶಾಖೆಗಳನ್ನು ಕ್ರಮದಿಂದ ಪರಿಚಯ ಮಾಡಿಕೊಡಲಾಗುತ್ತದೆ, ವಿವೇಚನೆಯ ಪ್ರಯತ್ನವನ್ನು ಮಾಡಲಾಗುತ್ತದೆ.

### ಜೀವ ತತ್ತ್ವ :—

ಸಂಸಾರದಲ್ಲಿ ನಾನಾ ಪ್ರಕಾರದ ವಸ್ತುಗಳೂ ಅವುಗಳ ಪರಿಣತ ಅವಸ್ಥೆಗಳೂ ಕಂಡುಬರುತ್ತವೆ. ಕಣ್ಣಿಗೆ ಕಾಣುವ ಸಮಸ್ತ ಪದಾರ್ಥಗಳನ್ನೂ ಎರಡು ವಿಭಾಗವಾಗಿ ವಿಂಗಡಿಸಲಾಗುತ್ತದೆ. ಅವು ಚೇತನ ಮತ್ತು ಅಚೇತನ ಎಂದೆನಿಸುತ್ತವೆ. ಪದಾರ್ಥದ ಚೈತನ್ಯಕ್ಕೆ ಕಾರಣವು ಅದರಲ್ಲಿ ವ್ಯಾಪಿಸಿದ, ಆದರೆ ಇಂದ್ರಿಯಗಳಿಗೆ ಅಗೋಚರವಾದ ಯಾವ ತತ್ವವಿರುವುದೋ ಅದನ್ನು ಜೀವವೆಂದೂ ಇಲ್ಲವೆ ಆತ್ಮ

ವೆಂದೂ ಹೇಳುತ್ತಾರೆ. ಪ್ರಾಣಿಗಳ ಅಚೇತನ ತತ್ವಗಳಿಂದ ನಿರ್ಮಿತವಾದ ಶರೀರ ದಲ್ಲಿ, ಅದರಿಂದ ಸ್ವತಂತ್ರವಾಗಿದ್ದ ಈ ಆತ್ಮ ತತ್ವದ ಅಸ್ತಿತ್ವದ ಮಾನ್ಯತೆಯು ನಿಜ ವಾಗಿಯೂ ಭಾರತೀಯ ತತ್ವಜ್ಞಾನದ ಅತ್ಯಂತ ಪ್ರಾಚೀನ ಹಾಗೂ ಮೌಲಿಕ ಶೋಧ ವಾಗಿದೆ. ಇದನ್ನು ಬಹುತರ ಎಲ್ಲ ವೈದಿಕ ಮತ್ತು ಅವೈದಿಕ ದರ್ಶನಗಳಲ್ಲಿಸ್ವೀಕರಿಸ ಲಾಗಿದೆ. ಅಲ್ಲದೆ ಈ ಮಾನ್ಯತೆಯು ಸಮಸ್ತ ಭಾರತೀಯ ಸಂಸ್ಕೃತಿಯಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷ ರೂಪದಿಂದ ಸುಪ್ರತಿಷ್ಠಿತವಾದದ್ದು ಕಂಡು ಬರುತ್ತದೆ. ಕೇವಲ ಚಾರ್ವಾಕ ಅಥವಾ ಬಾರ್ಹಸ್ಪತ್ಯ ದರ್ಶನದಲ್ಲಿ ಮಾತ್ರ ಜೀವ ಇಲ್ಲವೆ ಆತ್ಮನ ಅಸ್ತಿತ್ವದ—ಶರೀರಾತ್ಮಕ ಭೌತಿಕ ತತ್ವದಿಂದ ಭಿನ್ನವಾದ—ಸತ್ತೆಯನ್ನು ಸ್ವೀಕರಿಸು ವದಿಲ್ಲ. ಈ ದರ್ಶನಕ್ಕನುಸರಿಸಿ ಪೃಥ್ವೀ, ಜಲ, ಅಗ್ನಿ, ವಾಯುಗಳಂಥ ಜಡ ಪದಾರ್ಥಗಳ ಸಂಯೋಗ ವಿಶೇಷತ್ವದಿಂದಲೇ ಈ ಶಕ್ತಿಯು ಉತ್ಪನ್ನವಾಗುತ್ತದೆ. ಅದನ್ನೇ ಚೈತನ್ಯವೆಂದು ಕರೆಯಲಾಗುತ್ತದೆ. ಯಥಾರ್ಥವಾಗಿಯೂ ಪ್ರಾಣಿಗಳಲ್ಲಿ ಈ ಜಡ ತತ್ವಗಳ ಹೊರತಾಗಿ ಮತ್ತಾವ ಅಂಥ ವಸ್ತುವೂ ಇಲ್ಲವೆನ್ನುತ್ತದೆ, ಆ ಚಾರ್ವಾಕ ಮತ. ಅಲ್ಲದೆ ಶರೀರದಲ್ಲಿ ಪೃಥಕ್ ಸತ್ತೆಯನ್ನು ವ್ಯಕ್ತಪಡಿಸುವಂಥದೂ ಪ್ರಾಣಿಗಳ ಉತ್ಪತ್ತಿಯ ಸಮಯದಲ್ಲಿ ಎರಡನೆಯ ಕಡೆಯಿಂದ ಬಂದು ಸೇರುವಂಥದೂ ಇಲ್ಲವೆ ಶರೀರದ ಭೌತಿಕ ಸಂತುಲನೆಯು ತಪ್ಪಿ ಉತ್ಪನ್ನವಾಗುವ ಅಚೇತನಾತ್ಮಕ ಮರಣಾವಸ್ಥೆಯ ಸಮಯದಲ್ಲಿ ದೇಹದಿಂದ ಹೊರಟು ಬೇರೆಡೆಗೆ ತೆರಳುವ ಯಾವ ವಸ್ತುವೂ ಇಲ್ಲವೆಂದು ಈ ದರ್ಶನವು ಹೇಳುತ್ತದೆ. ಈ ದರ್ಶನಕ್ಕನುಸರಿಸಿ, ಜಗತ್ತಿ ನಲ್ಲಿ ಕೇವಲ ಅಜೀವ ತತ್ವ ಒಂದೇ ಮಾತ್ರವಿದೆ. ಆದರೆ ಭಾರತವರ್ಷದಲ್ಲಿ ಈ ಜಡ ವಾದದ ಪರಂಪರೆಯು ಎಂದೂ ಬೆಳೆದು ಬಂದುದಿಲ್ಲ. ಇದನ್ನು ಪೂರ್ಣರೂಪದಿಂದ ಪ್ರತಿಪಾದಿಸುವ ಯಾವ ಪ್ರಾಚೀನ ಗ್ರಂಥವೂ ಸಹ ಲಭಿಸುವದಿಲ್ಲ. ಕೇವಲ ಆ ದರ್ಶನದ ವಿವಿಧ ಅವತರಣಗಳೂ ಉಲ್ಲೇಖಗಳೂ ನಮಗೆ ಆತ್ಮವಾದೀ ದರ್ಶನಗಳ ಕೃತಿಗಳಲ್ಲಿ ಖಂಡನೆಗೆಂದು ಸ್ವೀಕರಿಸಿದಂಥವು ನೋಡಲು ದೊರೆಯುತ್ತವೆ. ಅಲ್ಲದೆ ತತ್ವೋಪಪ್ಲವ ಸಿಂಹದಂಥ ಕೆಲವೊಂದು ಪ್ರಕರಣಗಳೂ ಅನಾತ್ಮದರ್ಶನಕ್ಕೆ ಪುಷ್ಟಿಯನ್ನು ಕೊಡು ವಂಥವು ಲಭಿಸುತ್ತವೆ.

ಬೌದ್ಧ ದರ್ಶನವು ಆತ್ಮವಾದಿಯೋ ಅಥವಾ ಅನಾತ್ಮವಾದಿಯೋ, ಈ ಪ್ರಶ್ನೆಯು ವಿವಾದಗ್ರಸ್ತವಾಗಿದೆ. ಬುದ್ಧನ ವಚನಗಳನ್ನು ಮೊದಲು ಮಾಡಿಕೊಂಡು ಕೊನೆಯ ಬೌದ್ಧಾಚಾರ್ಯರ ಕೃತಿಗಳವರೆಗೂ ಸಹ ಈ ಎರಡೂ ಪ್ರಕಾರದ ವಿಚಾರ ಪ್ರವಾಹ ಗಳನ್ನು ಪೋಷಿಸುವ ವಿಷಯಗಳು ಲಭಿಸುತ್ತವೆ. ಇವುಗಳಲ್ಲಿ ಒಂದೆಡೆಗೆ ಆತ್ಮವಾದ ಅರ್ಥಾತ್ ಜೀವದ ಸತ್ತೆಯನ್ನು ಸ್ವೀಕರಿಸುವುದು ಮಿಥ್ಯಾದೃಷ್ಟಿಯೆಂದು ಹೇಳಿದೆ; ಜೀವನ ಪ್ರವಾಹವನ್ನು ನದಿಯ ಪ್ರವಾಹದಂತೆ ಘಟನಾ ಪ್ರವಾಹ ರೂಪವೆಂದು ಹೇಳ ಲಾಗಿದೆ; ಅಂತೂ ನಿರ್ವಾಣದ ಅವಸ್ಥೆಯನ್ನು ದೀಪದ ಕುಡಿಯು ಆರಿ ಹೋಗುವ ಸ್ಥಿತಿಯಂತೆ ಎಂದು ಸ್ವೀಕರಿಸಿದೆ. ದೀಪದ ಪ್ರಕಾಶವು ಆಕಾಶ ಇಲ್ಲವೆ ಪಾತಾಳ ಅಥವಾ

ದಿಶಾ–ವಿದಿಶಾಗಳಲ್ಲಿ ಹೋಗದೆ ಕೇವಲ ನಂದಿ ಸಮಾಪ್ತವಾಗಿ ಹೋಗುತ್ತದೆ.

ಹೇಗೆಂದರೆ—

ದೀಪೊ ಯಥಾ ನಿವೃತಿಮುಭ್ಯುಪೇತೊ ನೈವಾವನಿಂ ಗಚ್ಛತಿ ನಾನ್ತರಿಕ್ಷಮ್ ।
ದಿಶಂ ನ ಕಾಂಚಿತ್ ವಿದಿಶಂ ನ ಕಾಂಚಿತ್ ಸ್ನೇಹಕ್ಷಯಾತ್ ಕೇವಲಮೇತಿ ಶಾಂತಿಮ್ ॥

ಜೀವೋ ತಥಾ ನಿವೃತಿಮುಭ್ಯುಪೇತೊ ನೈವಾವನಿಂ ಗಚ್ಛತಿ ನಾನ್ತರಿಕ್ಷಮ್ ।
ದಿಶಂ ನ ಕಾಂಚಿತ್ ವಿದಿಶಂ ನ ಕಾಂಚಿತ್ ಕ್ಲೇಶಕ್ಷಯಾತ್ ಕೇವಲಮೇತಿ ಶಾಂತಿಮ್ ॥

ಇನ್ನೊಂದೆಡೆಗೆ ಹೀಗೂ ಸ್ವೀಕರಿಸಿದ್ದು ಕಂಡು ಬರುತ್ತದೆ : ಜೀವನದಲ್ಲಿ ಜನ್ಮ–ಜನ್ಮಾಂತರಗಳಲ್ಲಿಯೂ ಸಾಗಿ ಬರುವಂಥ ತತ್ವವೊಂದಿದೆ, ಅದು ಶರೀರ ರೂಪೀ ಮನೆಯನ್ನು ನಿರ್ಮಿಸುತ್ತದೆ, ಶರೀರ–ಧಾರಣೆಯನ್ನು ದುಃಖಮಯವೆಂದು ತಿಳಿಯುತ್ತದೆ, ಮತ್ತು ಅದರಿಂದ ಬಿಡುಗಡೆಯನ್ನು ಹೊಂದುವುದಕ್ಕೂ ಉಪಾಯವನ್ನು ಹುಡುಕುತ್ತದೆ, ಪ್ರಯತ್ನವನ್ನೂ ಮಾಡುತ್ತದೆ, ಚಿತ್ತವನ್ನು ಸಂಸ್ಕಾರ ರಹಿತಗೊಳಿಸಿ, ತೃಷ್ಣೆಯನ್ನು ಕ್ಷಯಮಾಡಿ, ನಿರ್ವಾಣವನ್ನು ಸಂಪಾದನ ಮಾಡುತ್ತದೆ;

ಹೇಗೆಂದರೆ—

ಅನೇಕ–ಜಾತಿ–ಸಂಸಾರಂ ಸಂಧಾವಿಸ್ಸಂ ಅನಿಬ್ಬಿಸಂ ।
ಗಹಕಾರಕಂ ಗವೇಸಂತೊ ದುಕ್ಖಾ ಜಾತಿ ಪುನಪ್ಪುನಂ ॥
ಗಹಕಾರಕ ದಿಟ್ಠೋಸಿ ಪುನ ಗೇಹಂ ನ ಕಾಹಿಸಿ ।
ಸಬ್ಬಾ ತೆ ಫಾಸುಕಾ ಭಗ್ಗಾ ಗಹಕೂಟಂ ವಿಸಂಖಿತಂ ।
ವಿಸಂಖಾರಗತಂ ಚಿತ್ತಂ ತಣ್ಹಾ ನಂ ಖಯಮಜ್ಝಗಾ ॥

(ಧಮ್ಮಪದ, ೧೫೩, ೫೪)

ಇಲ್ಲಿ ಸ್ಪಷ್ಟವಾಗಿ ಭೌತಿಕ ಶರೀರದ ಹೊರತಾಗಿ ಆತ್ಮನಂಥ ಯಾವುದೋ ಭಿನ್ನವಾದ ಅನಾದಿ ಅನಂತ ತತ್ವವನ್ನು ಸ್ವೀಕರಿಸಿದ್ದುದಕ್ಕೆ ಪ್ರಮಾಣವು ದೊರೆಯುತ್ತದೆ.

### ಜೈನದರ್ಶನದಲ್ಲಿ ಜೀವತತ್ವ :—

ಜೈನಸಿದ್ಧಾಂತದಲ್ಲಿ ಜೀವದ ಮುಖ್ಯ ಲಕ್ಷಣವು ಉಪಯೋಗವೆಂದು ಮನ್ನಿಸಲಾಗಿದೆ. ಉಪಯೋಗದಲ್ಲಿ ದರ್ಶನ ಮತ್ತು ಜ್ಞಾನವೆಂದು ಎರಡು ಭೇದಗಳು ಇವೆ. ದರ್ಶನ ಎಂಬ ಪದವನ್ನು ಅನೇಕ ಅರ್ಥಗಳಲ್ಲಿ ಪ್ರಯೋಗಿಸಲಾಗುತ್ತದೆ. ಸಾಮಾನ್ಯ ಭಾಷೆಯಲ್ಲಿ ಯಾವುದಾದರೊಂದು ಪದಾರ್ಥವನ್ನು ಕಣ್ಣುಗಳಿಂದ ನೋಡುವುದಕ್ಕೆ ದರ್ಶನವೆಂದು ಹೇಳಲಾಗುತ್ತದೆ. ಶಾಸ್ತ್ರೀಯ ದೃಷ್ಟಿಯಿಂದ ಜೀವನ ಮತ್ತು ಪ್ರಕೃತಿಗಳಿಗೆ ಸಂಬಂಧಿಸಿದ ವ್ಯವಸ್ಥಿತ ಜ್ಞಾನಕ್ಕೆ ದರ್ಶನವೆಂದು ಹೇಳುವರು. ಈ ಅರ್ಥದಲ್ಲಿ ಸಾಂಖ್ಯ, ವೇದಾಂತ, ಜೈನ ಮತ್ತು ಬೌದ್ಧ ದರ್ಶನಗಳಂಥವು ಸಮಾವೇಶವಾಗುತ್ತವೆ. ಇನ್ನು ಜೈನ ಸಿದ್ಧಾಂತದಲ್ಲಿ ಜೀವದ ದರ್ಶನ ರೂಪ ಗುಣದ ಅರ್ಥವು ಆತ್ಮ-ಚೇತನಾ

ಎಂದಾಗುತ್ತದೆ. ಪ್ರತಿಯೊಂದು ಜೀವದಲ್ಲಿ, ತನ್ನ ಸತ್ತೆಯನ್ನು ಅನುಭವಿಸುವ ಶಕ್ತಿಯ ಹೆಸರು ದರ್ಶನವೆನಿಸುವುದು; ಬಾಹ್ಯ ಪದಾರ್ಥಗಳನ್ನು ತಿಳಿಯುವ, ಅರಿಯುವ ಶಕ್ತಿಯ ಹೆಸರು ಜ್ಞಾನವೆಂದಿದೆ. ಜೀವದ ಇವೇ ಎರಡು ಅರ್ಥಾತ್ ದರ್ಶನ ಮತ್ತು ಜ್ಞಾನ ಅಥವಾ ಸ್ವಸಂವೇದನ ಮತ್ತು ಪರಸಂವೇದನ ರೂಪ ಗುಣಗಳಿಗೆ ಉಪಯೋಗವೆಂದು ಹೇಳಿದೆ. ಯಾವ ಪದಾರ್ಥಗಳಲ್ಲಿ ಈ ಉಪಯೋಗ ಶಕ್ತಿಯು ಇರುತ್ತದೆಯೋ ಅಲ್ಲಿ ಜೀವ ಅಥವಾ ಆತ್ಮವು ವಿದ್ಯಮಾನವಿರುತ್ತದೆ. ಇನ್ನು ಎಲ್ಲಿ ಈ ಉಪಯೋಗ ಗುಣದ ಸರ್ವಥಾ ಅಭಾವವಿದೆಯೋ ಅಲ್ಲಿ ಜೀವದ ಅಸ್ತಿತ್ವವಿಲ್ಲೆಂದು ಮನ್ನಿಸಲಾಗಿದೆ. ಈ ಪ್ರಕಾರ ಜೀವದ ನಿಶ್ಚಿತ ಲಕ್ಷಣವು ಚೈತನ್ಯವಾಗಿದೆ. ಈ ಚೈತನ್ಯಯುಕ್ತ ಜೀವದ ಅರಿವು ವ್ಯವಹಾರದಲ್ಲಿ ಐದು ಇಂದ್ರಿಯಗಳು, ಮನ, ವಚನ ಮತ್ತು ಕಾಯ ರೂಪ, ಮೂರು ಬಲಗಳು ಹಾಗೂ ಶ್ವಾಸೋಚ್ಛ್ವಾಸ ಮತ್ತು ಆಯು ಈ ಹತ್ತು ಪ್ರಾಣರೂಪ ಲಕ್ಷಣ ಗಳ ಹೀನಾಧಿಕ ಸತ್ತೆಯಿಂದ ಉಂಟಾಗುತ್ತದೆ.

ಪಂಚ ವಿ ಇಂದಿಯಪಾಣಾ ಮನವಚಕಾಯೇಸು ತಿ-ಣ್ಣಿ ಬಲಪಾಣಾ ।
ಆಣಪ್ಪಾಣಪ್ಪಾಣಾ ಆಉಗಪಾಣೇಣ ಹೋಂತಿ ದಸ ಪಾಣಾ ॥ (ಗೋ. ಜೀ. ೧೨೯)

ಜೀವದ ಇನ್ನೂ ಕೆಲವು ಗುಣಗಳಿವೆ. ಅದರಲ್ಲಿ ಕರ್ತೃತ್ವ ಶಕ್ತಿಯಿದೆ, ಉಪ ಭೋಗದ ಸಾಮರ್ಥ್ಯವೂ ಇದೆ. ಅದು ಅಮೂರ್ತವಾಗಿದೆ, ಮತ್ತು ಅದು ಯಾವ ಶರೀರದಲ್ಲಿ ಇರುತ್ತದೆಯೋ ಅದರ ಸಮಸ್ತ ಅಂಗ-ಪ್ರತ್ಯಂಗಗಳಲ್ಲಿ ವ್ಯಾಪಿಸಿ ನಿಲ್ಲುತ್ತದೆ.

ಜೀವೋ ಉವಓಗಮಓ ಅಮುತ್ತಿ ಕತ್ತಾ ಸದೇಹಪರಿಮಾಣೋ ।
ಭೋತ್ತಾ ಸಂಸಾರತ್ಥೋ ಮುತ್ತೊ ಸೋ ವಿಸ್ಸಸೋಢ್ಢಗಈ॥ (ದ್ರವ್ಯಸಂಗ್ರಹ ಗಾ. ೨)

ಸಂಸಾರದಲ್ಲಿ ಇಂಥ ಜೀವಗಳ ಸಂಖ್ಯೆಯು ಅನಂತವಾಗಿದೆ. ಪ್ರತಿಯೊಂದು ಶರೀರದಲ್ಲಿಯೂ ಇರುವ ಜೀವವು ತನ್ನ ಸ್ವತಂತ್ರ ಅಸ್ತಿತ್ವವನ್ನು ಕಾಯ್ದುಕೊಂಡಿರು ತ್ತದೆ. ಈ ಅಸ್ತಿತ್ವವು ಜೀವವು ಸಂಸಾರದಲ್ಲಿರಲಿ, ಮೋಕ್ಷದಲ್ಲಿರಲಿ ಎಂದೂ ವಿನಾಶವನ್ನು ಹೊಂದುವುದಿಲ್ಲ. ಈ ಪ್ರಕಾರ ಜೀವದ ವಿಷಯದಲ್ಲಿ ಜೈನ ವಿಚಾರ ಪ್ರವಾಹವು ವೇದಾಂತ ದರ್ಶನಕ್ಕಿಂತ ಭಿನ್ನವಾಗಿದೆ. ವೇದಾಂತಕ್ಕೆ ಅನುಸರಿಸಿ ಬ್ರಹ್ಮ ಒಂದು. ಅದರ ದೃಶ್ಯಮಾನ ಸತ್ಯಗಳು ಅನೇಕವಾಗಿಲ್ಲ, ಅವು ಮಾಯಾಜಾಲವಾಗಿವೆ.

ಜೈನದರ್ಶನದಲ್ಲಿ ಸಂಸಾರದಲ್ಲಿರುವ ಅನಂತ ಜೀವಗಳಲ್ಲಿ **ಸಾಧಾರಣ ಮತ್ತು** ಪ್ರತ್ಯೇಕ ಎಂದು ಎರಡು ವಿಭಾಗಗಳನ್ನು ಮಾಡಲಾಗಿದೆ. ಪ್ರತ್ಯೇಕ ಜೀವಗಳು ಒಂದೊಂದು ಶರೀರದಲ್ಲಿ ಒಂದೊಂದು ಇರುತ್ತವೆ. ಇವು ಇಂದ್ರಿಯಗಳ ಭೇದಕ್ಕನು ಸರಿಸಿ ಐದು ವಿಧವಾಗಿವೆ—ಏಕೇಂದ್ರಿಯ ಜೀವಗಳಿಗೆ ಸ್ಪರ್ಶೇಂದ್ರಿಯ ಒಂದು ಮಾತ್ರ ಇರುತ್ತದೆ. ಇದರಲ್ಲಿಯೂ ಐದು ಪ್ರಕಾರಗಳಿವೆ—ಪೃಥ್ವೀಕಾಯ, ಜಲಕಾಯ, ಅಗ್ನಿಕಾಯ, ವಾಯುಕಾಯ ಮತ್ತು ವನಸ್ಪತಿ ಕಾಯ. ಸ್ಪರ್ಶ ಮತ್ತು ರಸನೆಗಳು

ಮಾತ್ರ ಇರುವ ಜೀವಗಳು ದ್ವೀಂದ್ರಿಯವೆನಿಸುತ್ತವೆ.

ಇದೇ ಪ್ರಕಾರ ಇರುವೆಗಳು ಸ್ಪರ್ಶ, ರಸನೆ, ಘ್ರಾಣಗಳಿಂದ ಕೂಡಿದ ಪ್ರಾಣಿಗಳು; ಮೂರು ಇಂದ್ರಿಯಗಳುಳ್ಳವು. ಭ್ರಮರಗಳಂಥವು ನೇತ್ರ ಸಹಿತ ನಾಲ್ಕು ಇಂದ್ರಿಯಗಳುಳ್ಳ ಜೀವಗಳೆನಿಸುತ್ತವೆ. ಉಳಿದ ಪಶು, ಪಕ್ಷಿ ಮತ್ತು ಮನುಷ್ಯ ವರ್ಗದ ಜೀವಗಳು ಶ್ರೋತ್ರೇಂದ್ರಿಯ ಸಹಿತ ಪಂಚೇಂದ್ರಿಯವೆನಿಸುತ್ತವೆ. ಏಕೇಂದ್ರಿಯ ಜೀವಗಳಿಗೆ ಸ್ಥಾವರ ಎಂದೂ ದ್ವೀಂದ್ರಿಯಾದಿ ಇತರ ಎಲ್ಲ ಜೀವಗಳಿಗೂ ತ್ರಸ ಎಂದೂ ಸಂಜ್ಞೆಯನ್ನು ಕೊಡಲಾಗಿದೆ. ಇನ್ನು ಒಂದೊಂದು ಶರೀರವನ್ನು ಧರಿಸಿರುವ ವೃಕ್ಷಾದಿ ಸಮಸ್ತ ಪ್ರಾಣಿಗಳ ದೇಹದಲ್ಲಿ ಇಂಥ ಸಾಧಾರಣ ಜೀವದ ಸತ್ತೆಯನ್ನು ಮನ್ನಿಸಲಾಗಿದೆ. ಇವುಗಳ ಆಹಾರ, ಶ್ವಾಸೋಚ್ಛ್ವಾಸಾದಿ ಜೀವನ ಕ್ರಿಯೆಗಳು ಸಾಮಾನ್ಯ ಅರ್ಥಾತ್ ಒಮ್ಮೆಲೇ ನಡೆಯುತ್ತವೆ. ಅವುಗಳ ಈ ಸಾಮಾನ್ಯ ಶರೀರಕ್ಕೆ ನಿಗೋದ ಎಂದು ಕರೆಯುತ್ತಾರೆ. ಪ್ರತಿಯೊಂದು ನಿಗೋದದಲ್ಲಿಯೂ ಒಂದೇ ಸಮಯದಲ್ಲಿ ಬದುಕುವ ಮತ್ತು ಸಾಯುವಂಥ ಜೀವಗಳ ಸಂಖ್ಯೆಯೂ ಅನಂತವೆಂದು ಮನ್ನಿಸಲಾಗಿದೆ—

> ಏಗ-ಣಿಗೋದ-ಸರೀರೇ ಜೀವಾ ದವ್ವಪ್ಪಮಾಣದೋ ದಿಟ್ಠಾ ।
> ಸಿದ್ಧೇಹಿಂ ಅಣಂತಗ-ಣಾ, ಸವ್ವೇಣ ವಿದೀದಕಾಲೇಣ ॥ (ಗೊ. ಜೀ. ೧೯೬)

ಈ ನಿಗೋದವರ್ತಿ ಜೀವಗಳ ಆಯು-ಪ್ರಮಾಣವು ಅತ್ಯಲ್ಪವೆಂದು ಮನ್ನಿಸಲಾಗಿದೆ. ಅದೆಷ್ಟೆಂದರೆ ಒಮ್ಮೆ ಶ್ವಾಸೋಚ್ಛ್ವಾಸ ಮಾಡುವಷ್ಟು ಕಾಲದಲ್ಲಿ ಅವು ಹದಿನೆಂಟು ಸಲ ಜೀವನವನ್ನೂ ಮರಣವನ್ನೂ ಹೊಂದುತ್ತವೆ. ಇವು ಆ ಜೀವಗಳ ಅನಂತ ರಾಶಿಯಾಗಿವೆ ಇವುಗಳೊಳಗಿಂದ ಕ್ರಮವಾಗಿ ಮೇಲ್ತರಗತಿಯ ಯೋನಿಗಳಲ್ಲಿ ಜೀವಗಳು ಬರುತ್ತಿರುತ್ತವೆ. ಅದರಿಂದ ಮುಕ್ತ ಜೀವಗಳು ಸಂಸಾರದಿಂದ ಹೊರಟು ಹೋಗುತ್ತಿದ್ದರೂ ಸಂಸಾರದಲ್ಲಿ ಜೀವನಧಾರೆಯು ಅನಂತ ರೂಪದಿಂದ ಮುಂದರಿಯುತ್ತಿರುತ್ತದೆ. ಈ ಪ್ರಕಾರ ಸಾಧಾರಣ ಜೀವಗಳ ಮಾನ್ಯತೆಯು ಜೈನ ಸಿದ್ಧಾಂತದ ವಿಶೇಷತೆಯಾಗಿದೆ. ಅನ್ಯ ದರ್ಶನಗಳಲ್ಲಿ ಈ ಪ್ರಕಾರದ ಯಾವ ಮಾನ್ಯತೆಯೂ ಇದ್ದುದು ಕಂಡುಬರುವುದಿಲ್ಲ. ವರ್ತಮಾನ ಕಾಲದ ವೈಜ್ಞಾನಿಕ ಮಾನ್ಯತೆಗನುಸರಿಸಿ ಒಂದು ಮಿಲಿಮೀಟರ ($\frac{1}{25}$") ಪ್ರಮಾಣ ರಕ್ತದಲ್ಲಿ ೫೦ ಲಕ್ಷ ಜೀವ ಕೋಷ (ಸೆಲ್ಸ) ಇದ್ದುದನ್ನು ಕಂಡುಹಿಡಿಯಲಾಗಿದೆ. ಜೈನ ದ್ರಷ್ಟಾರರು ಇದೇ ಪ್ರಕಾರ ಕೆಲವೊಂದು ಜ್ಞಾನದ ಆಧಾರದಿಂದ ಆ ನಿಗೋದ ಜೀವಗಳ ಪ್ರರೂಪಣೆಯನ್ನು ಮಾಡಿದ್ದರೆ ಆಶ್ಚರ್ಯಪಡುವ ಕಾರಣವಿಲ್ಲ. ಈ ಸಮಸ್ತ ಜೀವಗಳ ಶರೀರದಲ್ಲಿಯೂ ಸೂಕ್ಷ್ಮ ಮತ್ತು ಬಾದರ ಎಂಬ ಎರಡು ಪ್ರಕಾರಗಳನ್ನು ಮನ್ನಿಸಿದೆ. ಸೂಕ್ಷ್ಮ ಶರೀರವು ಅನ್ಯ ಯಾವ ದ್ರವ್ಯದಿಂದಲೂ ಬಾಧೆಯನ್ನು ಹೊಂದುವುದಿಲ್ಲ; ಬಾಧಿತವಾಗುವಂಥದು ಬಾದರ (ಸ್ಥೂಲ) ಶರೀರವು ಮಾತ್ರ ಎಂದು ಹೇಳಿದೆ. ಮೇಲೆ ಹೇಳಿದ ಪಂಚೇಂದ್ರಿಯ ಜೀವಗಳಲ್ಲಿಯೂ ಪುನಃ ಸಂಜ್ಞೀ ಅರ್ಥಾತ್ ಮನಸಹಿತ

ಮತ್ತು ಅಸೆಂಜ್ಞೀ ಅರ್ಥಾತ್ ಮನರಹಿತ ಎಂದು ಎರಡು ಭೇದಗಳನ್ನು ಮಾಡ ಲಾಗಿದೆ.

ಈ ಸಮಸ್ತ ಸಂಸಾರೀ ಜೀವಗಳಿಗೆ ದೃಶ್ಯಮಾನವಾದ ಮನುಷ್ಯಗತಿ ಮತ್ತು ಪಶು–ಪಕ್ಷಿ ಮೊದಲಾದ ಇತರ ಎಲ್ಲ ಪ್ರಾಣಿಗಳ ತಿರ್ಯಂಚಗತಿ ಎಂಬ ಎರಡು ಗತಿಗಳನ್ನು ಮನ್ನಿಸಲಾಗಿದೆ ; ಇವಲ್ಲದೆ ದೇವಗತಿ ಮತ್ತು ನರಕಗತಿ ಎಂಬ ಇನ್ನೆರಡು ಗತಿಗಳನ್ನು ಸಹ ಸ್ವೀಕರಿಸಲಾಗಿದೆ. ಮನುಷ್ಯ ಮತ್ತು ತಿರ್ಯಂಚಗತಿ ಗಳಲ್ಲಿ ಇರುವ ಪುಣ್ಯವಂತ ಜೀವಗಳು ತಮ್ಮ ಸತ್ಕರ್ಮದ ಸುಫಲಗಳನ್ನು ಭೋಗಿಸುವುದ ಕ್ಕೆಂದು ದೇವಗತಿಯನ್ನು ಪಡೆಯುತ್ತವೆ. ಅದರಂತೆ ಪಾಪೀ ಜೀವಗಳು ತಮ್ಮ ದುಷ್ಕರ್ಮಗಳ ದಂಡವನ್ನು ಭೋಗಿಸಲಿಕ್ಕೆಂದು ನರಕಗತಿಯನ್ನು ಹೊಂದುತ್ತವೆ. ಯಾವ ಜೀವಗಳು ಪುಣ್ಯ ಹಾಗೂ ಪಾಪಗಳೆರಡರಿಂದಲೂ ರಹಿತವಾಗಿ ವೀತರಾಗ ಭಾವ ಮತ್ತು ಕೇವಲ ಜ್ಞಾನಗಳನ್ನು ಸಂಪಾದಿಸುತ್ತವೆಯೋ ಅವು ಸಂಸಾರದ ಈ ನಾಲ್ಕೂಗತಿಗಳಿಂದ ಹೊರಬಿದ್ದು ಮೋಕ್ಷವನ್ನು ಹೊಂದುತ್ತವೆ. ಸಂಸಾರೀ ಜೀವ ಗಳ ಶರೀರ ರಚನೆಯಲ್ಲಿಯೂ ವಿಶೇಷತೆಯಿದೆ. ಮನುಷ್ಯ ಮತ್ತು ತಿರ್ಯಂಚ ಜೀವ ಗಳ ಶರೀರವು ಔದಾರಿಕ ಅರ್ಥಾತ್ ಸ್ಥೂಲವಾಗಿರುತ್ತದೆ. ಅದರಲ್ಲಿ ಇದೇ ಜೀವನ ಗಳಲ್ಲಿ ಯಾವ ವಿಪರಿವರ್ತನವೂ ಸಂಭವಿಸುವದಿಲ್ಲ. ಆದರೆ ದೇವ ಮತ್ತು ನರಕವಾಸಿ ಜೀವಗಳ ಶರೀರವು ವೈಕ್ರಿಯಿಕವಾಗಿರುತ್ತದೆ. ಇದರಲ್ಲಿ ನಾನಾ ಪ್ರಕಾರದ ವಿಕ್ರಿಯಾ ಇಲ್ಲವೆ ವಿಪರಿವರ್ತನಗಳು ಸಂಭವಿಸುತ್ತವೆ. ಈ ಶರೀರಗಳಲ್ಲದೆ ಸಂಸಾರೀ ಜೀವ ಗಳಿಗೆ ತೈಜಸ ಮತ್ತು ಕಾರ್ಮಣಗಳೆಂದು ಮತ್ತೆರಡು ಪ್ರಕಾರದ ಶರೀರಗಳಿರುತ್ತ ವೆಂದು ಮನ್ನಿಸಲಾಗಿದೆ. ಈ ಎರಡೂ ಶರೀರಗಳು ಸಮಸ್ತ ಪ್ರಾಣಿಗಳಿಗೆ ಯಾವಾ ಗಲೂ ವಿದ್ಯಮಾನವಾಗಿರುತ್ತವೆ. ಮರಣದ ತರುವಾಯ ಇನ್ನೊಂದು ಗತಿಗೆ ಹೋಗುವ ಸಮಯದಲ್ಲಿಯೂ ಸಹ ಜೀವವು ಇವುಗಳ ಸಂಗವನ್ನು ತೊರೆಯುವದಿಲ್ಲ. ತೈಜಸ ಶರೀರವು ಜೀವ ಮತ್ತು ಪುದ್ಗಲ ಪ್ರದೇಶಗಳಲ್ಲಿ ಸಂಯೋಗವನ್ನು ಸ್ಥಾಪಿಸಿರುತ್ತದೆ. ಹಾಗೆಯೇ ಕಾರ್ಮಣ ಶರೀರವು ಆ ಪುದ್ಗಲ ಪರಮಾಣುಗಳ ಪುಂಜವಾಗಿರುತ್ತದೆ. ಇವುಗಳನ್ನು ಜೀವವು ನಿರಂತರವಾಗಿ ತನ್ನ ಮನ, ವಚನ, ಕಾಯಗಳ ಕ್ರಿಯೆಯಿಂದ ಸಂಚಯ ಮಾಡುತ್ತಿರುತ್ತದೆ. ಈ ಎರಡು ಪ್ರಕಾರದ ಶರೀರಗಳಿಗೆ ನಾವು ಜೀವದ ಸೂಕ್ಷ್ಮ ಶರೀರವೆಂದು ಹೇಳುತ್ತೇವೆ. ಈ ನಾಲ್ಕು ಶರೀರಗಳ ಹೊರತಾಗಿ ಇನ್ನೂ ಒಂದು ವಿಶೇಷ ಪ್ರಕಾರದ ಆಹಾರಕ ಎಂಬ ಹೆಸರಿನ ಶರೀರವಿದ್ದುದನ್ನು ಸ್ವೀಕರಿಸ ಲಾಗಿದೆ. ಇದರ ನಿರ್ಮಾಣವನ್ನು ಋದ್ಧಿಧಾರಿ ಮುನಿಗಳು ತಮ್ಮ ಸಂಶಯಗಳನ್ನು ನಿವಾರಿಸಿಕೊಳ್ಳುವುದಕ್ಕೆಂದು ದುರ್ಗಮ ಪ್ರದೇಶಗಳಲ್ಲಿ ವಿಶೇಷ ಜ್ಞಾನಿಗಳ ಹತ್ತರ ತೆರಳಲಿಕ್ಕೆಂದೂ ಇಲ್ಲವೆ ತೀರ್ಥವಂದನೆಯ ಹೇತುವಿನಿಂದಲೂ ಮಾಡಿಕೊಳ್ಳುತ್ತಾರೆ.

ಶರೀರಧಾರೀ ಸಂಸಾರೀ ಜೀವಗಳು ತಮ್ಮ ತಮ್ಮ ಕರ್ಮಾಕ್ಕನುಸರಿಸಿ ಭಿನ್ನ – ಭಿನ್ನ ಲಿಂಗಗಳನ್ನು ಧರಿಸುತ್ತವೆ. ಏಕೇಂದ್ರಿಯ ಮೊದಲುಗೊಂಡು ಚತುರಿಂದ್ರಿಯಗಳ

ವರೆಗೆ ತಿರ್ಯಂಚ ಹಾಗೂ ನಾರಕೀ ಜೀವಗಳು ನಿಯಮದಿಂದ ನಪುಂಸಕವಾಗಿರುತ್ತವೆ. ಪಂಚೇಂದ್ರಿಯ ಮನುಷ್ಯ ಹಾಗೂ ತಿರ್ಯಂಚ ಪುರುಷ-ವೇದಿ, ಸ್ತ್ರೀವೇದೀ, ನಪುಂಸಕವೇದೀ ಈ ಮೂರೂ ಪ್ರಕಾರದವಾಗುತ್ತವೆ. ದೇವಗತಿಯಲ್ಲಿ ನಪುಂಸಕರಾಗುವುದಿಲ್ಲ. ಅವರಲ್ಲಿ ದೇವ ಹಾಗೂ ದೇವಿಯರು ಎಂಬ ಎರಡು ಭೇದಗಳು ಮಾತ್ರ ಇರುತ್ತವೆ.

ಜೀವಗಳಿಗೆ ಶರೀರಧಾರಣ ರೂಪ ಜನ್ಮವೂ ನಾನಾ ಪ್ರಕಾರದಿಂದ ಆಗುತ್ತದೆ. ಮನುಷ್ಯ ಮತ್ತು ತಿರ್ಯಂಚ ಜನ್ಮವು ಗರ್ಭದಿಂದ ಇಲ್ಲವೆ ಸಮ್ಮೂರ್ಛನದಿಂದ ಎರಡೂ ವಿಧದಿಂದಲೂ ಆಗುತ್ತದೆ. ಯಾವ ಪ್ರಾಣಿಯು ತಾಯಿಯ ಗರ್ಭದಿಂದ ಜರಾಯು ಯುಕ್ತ ಅಥವಾ ತತ್ತಿ ಇಲ್ಲವೆ ಚೀಲ (ಜರಾಯು ರಹಿತ ಅವಸ್ಥೆ) ರೂಪದಲ್ಲಿ ಉತ್ಪನ್ನವಾಗುತ್ತದೆಯೋ, ಅದು ಗರ್ಭಜವೆನಿಸುತ್ತದೆ ಇನ್ನು ಯಾವುದು ಗರ್ಭವಿಲ್ಲದೆ ಬಾಹ್ಯ ಸಂಯೋಗದಿಂದ ಶೀತ-ಉಷ್ಣಾದಿ ಅವಸ್ಥೆಗಳಲ್ಲಿ ಉತ್ಪನ್ನವಾಗುತ್ತದೆಯೋ ಅದಕ್ಕೆ ಸಮ್ಮೂರ್ಛನಾ ಜನ್ಮವೆನ್ನುತ್ತಾರೆ. ದೇವ ಮತ್ತು ನಾರಕೀ ಜೀವಗಳ ಉತ್ಪತ್ತಿಯು ಮೇಲೆ ಹೇಳಿದ ಎರಡೂ ಪ್ರಕಾರಗಳಿಗಿಂತ ಭಿನ್ನವಾದ ಉಪಪಾದ ರೂಪದಿಂದಾಗುತ್ತದೆಂದು ಹೇಳಲಾಗಿದೆ.

**ಅಜೀವತತ್ತ್ವ :—**

ಅಜೀವ ದ್ರವ್ಯದಲ್ಲಿ ಪುದ್‌ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲ ಎಂದು ಐದು ಭೇದಗಳಿವೆ. ಇವುಗಳಲ್ಲಿ ಪುದ್ಗಲವು ರೂಪುಳ್ಳದ್ದಾಗಿದೆ. ಉಳಿದವು ಅರೂಪಿಗಳಾಗಿವೆ. ವಿಶ್ವದಲ್ಲಿ ಕಂಡು ಬರುವ ಎಲ್ಲ ಮೂರ್ತಿಮಾನ್ ಪದಾರ್ಥ ಪುದ್ಗಲ ದ್ರವ್ಯದ ವಿವಿಧ ರೂಪಗಳಾಗಿವೆ. ಪೃಥ್ವೀ, ಜಲ, ಅಗ್ನಿ, ವಾಯು ಈ ನಾಲ್ಕು ತತ್ವ ಹಾಗೂ ವೃಕ್ಷ ಪಶು-ಪಕ್ಷಿ ಮೊದಲಾದ ಜೀವಗಳು ಮತ್ತು ಮನುಷ್ಯನ ಶರೀರ ಇವೆಲ್ಲವೂ ಪುದ್ಗಲದ ರೂಪಗಳೇ ಆಗಿವೆ. ಪುದ್ಗಲದ ಸೂಕ್ಷ್ಮತಮ ರೂಪವು ಪರಿಪೂರ್ಣವಾಗಿದೆ. ಇದು ಅತ್ಯಂತ ಸೂಕ್ಷ್ಮವಾಗಿರುವುದರಿಂದ ಇಂದ್ರಿಯ ಗ್ರಾಹ್ಯವಾಗಿರುವುದಿಲ್ಲ. ಅನೇಕ ಪರಮಾಣುಗಳ ಸಂಯೋಗದಿಂದ ಅದರಲ್ಲಿ ಪರಿಮಾಣವು ಉತ್ಪತ್ತಿಯಾಗುತ್ತವೆ. ಆಗ ಅದರಲ್ಲಿ ಸ್ಪರ್ಶ, ರಸ, ಗಂಧ ಮತ್ತು ವರ್ಣ–ಈ ನಾಲ್ಕು ಗುಣಗಳು ಪ್ರಕಟವಾಗುತ್ತದೆ. ಆಗಲೇ ಅದು ಪುದ್ಗಲ ಸ್ಕಂಧ (ಸಮೂಹ)ವು ಇಂದ್ರಿಯ ಗ್ರಾಹ್ಯವಾಗುತ್ತದೆ. ಶಬ್ದ, ಬಂಧ, ಸೂಕ್ಷ್ಮತಾ, ಸ್ಥೂಲತಾ, ಸಂಸ್ಥಾನ, ಅಂಧಕಾರ, ಛಾಯಾ ಮತ್ತು ಪ್ರಕಾಶ ಇವೆಲ್ಲ ಪುದ್ಗಲ ದ್ರವ್ಯದ ವಿಕಾರ ರೂಪಗಳೆಂದು ಮನ್ನಿಸಲಾಗಿದೆ. ಪುದ್ಗಲದ ಸ್ಥೂಲತಮ ರೂಪಗಳು ಮಹಾನ್ ಪರ್ವತಗಳು ಮತ್ತು ಪೃಥ್ವಿಯರೂಪದಲ್ಲಿ ಕಂಡುಬರುತ್ತವೆ. ಇವುಗಳಿಂದ ಮೊದಲುಗೊಂಡು ಸೂಕ್ಷ್ಮತಮ ಪರಮಾಣುವಿನವರೆಗೆ ಪುದ್ಗಲ ದ್ರವ್ಯದ ಅಸಂಖ್ಯಾತ ಭೇದಗಳೂ ರೂಪಗಳೂ ಇವೆ. ಪುದ್ಗಲ ಸ್ಕಂಧಗಳ ಭೇದಗಳು ಮತ್ತು ಸಂಘಾತಗಳು ನಿರಂತರ

ಆಗುತ್ತಲೇ ಇರುತ್ತವೆ. ಇದೇ ಪೂರಣ ಮತ್ತು ಗಲನದ ಕಾರಣದಿಂದ ಪುದ್ಗಲವೆಂಬ ಹೆಸರು ಸಾರ್ಥಕವಾಗಿದೆ. ಪುದ್ಗಲ ಶಬ್ದದ ಉಪಯೋಗವು ಜೈನಸಿದ್ಧಾಂತದ ಹೊರ ತಾಗಿ ಬೌದ್ಧಗ್ರಂಥಗಳಲ್ಲಿಯೂ ಕಂಡುಬರುತ್ತದೆ. ಆದರೆ ಅಲ್ಲಿ ಅದರ ಅರ್ಥವು ಕೇವಲ ಶರೀರವುಳ್ಳ ಜೀವಗಳೆಂದು ಮಾತ್ರ ಇದೆ. ಅಚೇತನ ಜಡಪದಾರ್ಥಗಳ ಸಲುವಾಗಿ ಅಲ್ಲಿ ಪುದ್ಗಲ ಶಬ್ದದ ಪ್ರಯೋಗವು ಆದುದು ಕಂಡುಬರುವುದಿಲ್ಲ.

### ಧರ್ಮ-ದ್ರವ್ಯ :—

ಎರಡನೆಯ ಅಜೀವ ದ್ರವ್ಯವು ಧರ್ಮವಾಗಿದೆ. ಇದು ಅರೂಪಿಯಾಗಿದ್ದು, ಸಮಸ್ತ ಲೋಕವನ್ನು ವ್ಯಾಪಿಸಿದೆ. ಈ ದ್ರವ್ಯವು ವ್ಯಾಪಿಸಿರುವುದರಿಂದಲೇ ಜೀವ ಮತ್ತು ಪುದ್ಗಲಗಳು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಗಮನ ಮಾಡುವುದು ಸಾಧ್ಯವಾಗಿದೆ. ಇದು ಜಲವು ಮೀನುಗಳ ಗಮನಾಗಮನಕ್ಕೆ ಸಹಾಯಕವಾಗುವ ರೀತಿಯಲ್ಲಿ ಇದೆ. ಈ ಪ್ರಕಾರ ' ಧರ್ಮ ' ಶಬ್ದದ ಇಂಥ ಪ್ರಯೋಗವು ಶಾಸ್ತ್ರೀಯ ವಾಗಿದೆ. ಅದರ ನೈತಿಕ ಆಚರಣ ಮೊದಲಾದ ಅರ್ಥವಾಚಕ ' ಧರ್ಮ ' ಎಂಬ ಪದ ವೆಂಬುದಾಗಿ ಭ್ರಮೆಯನ್ನು ಹೊಂದಕೂಡದು.

### ಅಧರ್ಮ-ದ್ರವ್ಯ :—

ಯಾವ ಪ್ರಕಾರ ಧರ್ಮ-ದ್ರವ್ಯವು ಜೀವ ಮತ್ತು ಪುದ್ಗಲಗಳಿಗೆ ಸ್ಥಾನಾಂತರಣ ರೂಪ ಗಮನಾಗಮನಕ್ಕೆ ಮಾಧ್ಯಮವಾಗಿದೆಯೋ ಅದೇ ಪ್ರಕಾರ ಅಧರ್ಮ ದ್ರವ್ಯವು ಚಲನ ಹೊಂದಿದ ಪದಾರ್ಥವನ್ನು ತಡೆಯುವುದರಲ್ಲಿ ಸಹಾಯಕವಾಗಿದೆ. ಯಾವ ಪ್ರಕಾರ ಗಿಡದ ನೆರಳು ದಣಿದ ದಾರಿಕಾರನು ನಿಲ್ಲುವುದಕ್ಕೆ ನಿಮಿತ್ತ ಕಾರಣವಾಗಿರು ತ್ತದೆಯೋ ಹಾಗೆ ಈ ಅಧರ್ಮ ದ್ರವ್ಯವಿರುತ್ತದೆ.

### ಆಕಾಶ-ದ್ರವ್ಯ :—

ನಾಲ್ಕನೆಯ ಅಜೀವ ದ್ರವ್ಯವು ಆಕಾಶವು. ಜೀವವೇ ಮೊದಲಾದ ಎಲ್ಲ ದ್ರವ್ಯ ಗಳಿಗೆ ಅವಕಾಶವನ್ನು ನೀಡುವುದೇ ಇದರ ಗುಣವಾಗಿದೆ. ಆಕಾಶವು ಅನಂತವಾಗಿದೆ. ಆದರೆ ಆಕಾಶದ ಎಷ್ಟು ಭಾಗದಲ್ಲಿ ಜೀವಾದಿ ಅನ್ಯ ದ್ರವ್ಯಗಳ ಸತ್ತೆಯು ಕಂಡುಬರು ವುದೋ ಅದಕ್ಕೆ ಲೋಕಾಕಾಶ ವೆಂದು ಹೇಳುವರು. ಇದು ಮರ್ಯಾದಿತವಾಗಿದೆ. ಲೋಕಾಕಾಶವನ್ನು ಬಿಡು ಇರುವ ಅನಂತ ಶುದ್ಧ ಆಕಾಶದ ಭಾಗಕ್ಕೆ ಅಲೋಕಾಕಾಶ ವೆಂದು ಹೆಸರು. ಇದರಲ್ಲಿ ಅನ್ಯ ಯಾವ ದ್ರವ್ಯಗಳ ಅಸ್ತಿತ್ವವು ಇಲ್ಲ. ಇರುವುದು ಶಕ್ಯವೂ ಇಲ್ಲ. ಯಾಕಂದರೆ ಅಲ್ಲಿ ಗಮನಾಗಮನಕ್ಕೆ ಸಾಧನವೆನಿಸುವ ಧರ್ಮದ್ರವ್ಯದ ಅಭಾವವಿದೆ. ಆಕಾಶದ್ರವ್ಯದ ಅಸ್ತಿತ್ವವನ್ನು ಎಲ್ಲಾ ದರ್ಶನಗಳೂ ಆಧುನಿಕ ವಿಜ್ಞಾ ನವೂ ಸಹ ಮನ್ನಿಸುತ್ತದೆ. ಆದರೆ ಧರ್ಮ ಮತ್ತು ಅಧರ್ಮ ದ್ರವ್ಯಗಳ ಕಲ್ಪನೆಯು

ಜೈನದರ್ಶನದ ವಿಶೇಷತೆಯಾಗಿದೆ. ದ್ರವ್ಯವು ಆಕಾಶದಲ್ಲಿ ಸ್ಥಿತವಾಗಿರುತ್ತದೆ, ಗಮನ ಶೀಲವಾಗಿರುತ್ತದೆ, ತಡೆದೂ ನಿಲ್ಲುತ್ತದೆ. ಸಾಮಾನ್ಯವಾಗಿ ಈ ಮೂರೂ ಅರ್ಥ ಕ್ರಿಯೆ ಗಳು ಆಕಾಶದ ಗುಣದಿಂದಲೇ ಸಂಭವಿಸುತ್ತವೆಂದು ಮನ್ನಿಸಲಾಗಿದೆ. ಆದರೆ ಸೂಕ್ಷ್ಮ ವಿಚಾರಕ್ಕನುಸರಿಸಿ ಒಂದು ದ್ರವ್ಯದಿಂದ ತನ್ನ ಶುದ್ಧ ರೂಪದಲ್ಲಿ ಒಂದೇ ಪ್ರಕಾರದ ಕ್ರಿಯೆಯು ಸಂಭವಿಸುತ್ತದೆಂದು ಮನ್ನಿಸಲಾಗುತ್ತದೆ. ವಿಶೇಷವಾಗಿ ಯಾವಾಗ ಈ ಕ್ರಿಯೆಗಳು ಪರಸ್ಪರ ಕೆಲವೊಂದು ವಿಭಿನ್ನತೆಗಾಗಿ ನಡೆಯುತ್ತವೆಯೋ, ಆಗ ನಮಗೆ ಅವುಗಳಿಗೆ ಕಾರಣವಾದ ಹಾಗೂ ಸಾಧನಭೂತವಾದ ದ್ರವ್ಯಗಳು ಭಿನ್ನಭಿನ್ನವಾಗಿ ರುತ್ತವೆಂದು ತೋರುತ್ತದೆ. ಇದೇ ವಿಚಾರಕ್ರಮಕ್ಕನುಸರಿಸಿ ಲೋಕಾಕಾಶದಲ್ಲಿ ಮೇಲೆ ಹೇಳಿದ ಮೂರು ಅರ್ಥ-ಕ್ರಿಯೆಗಳ ಸಾಧನ ರೂಪ ಮೂರು ಪ್ರಥಕ್ ಪ್ರಥಕ್ ದ್ರವ್ಯ ಅರ್ಥಾತ್ ಆಕಾಶ, ಧರ್ಮ ಮತ್ತು ಅಧರ್ಮಗಳ ಕಲ್ಪನೆಯನ್ನು ಮಾಡಲಾಗಿದೆ. ಆಧುನಿಕ ಭೌತಿಕ ವೈಜ್ಞಾನಿಕರ ಒಂದು ಮತವು ಹೀಗೂ ಇರುತ್ತದೆ; ಆಕಾಶದಲ್ಲಿ ಎಲ್ಲಿಯವರೆಗೆ ಭೌತಿಕ ತತ್ವಗಳ ಸತ್ತೆಯು ಕಂಡುಬರುವುದೋ ಅಲ್ಲಿಯವರೆಗೆ ಅವುಗಳ ಗಮನದಲ್ಲಿ ಆ ಆಕಾಶವು ತಡೆಯನ್ನುಂಟುಮಾಡುತ್ತದೆ. ಜೈನಸಿದ್ಧಾಂತಕ್ಕನುಸರಿಸಿ ಈ ಪರಿಸ್ಥಿತಿಯು ಅಲೋಕಾಕಾಶದಲ್ಲಿ ಗಮನಕ್ಕೆ ಸಾಧನವೆನಿಸುವ ಧರ್ಮ-ದ್ರವ್ಯದ ಅಭಾವವಿರುವುದರಿಂದ ಉಂಟಾಗುತ್ತದೆ.

**ಕಾಲ-ದ್ರವ್ಯ :—**

ಐದನೆಯ ಅಜೀವ ದ್ರವ್ಯವು ಕಾಲವು. ಇದನ್ನು ನಿಶ್ಚಯನಯಕಾಲ ಮತ್ತು ವ್ಯವಹಾರನಯಕಾಲ ಎಂದು ಎರಡು ವಿಧವಾಗಿ ವಿಭಾಗಿಸಿ ನಿರೂಪಿಸಲಾಗಿದೆ. ನಿಶ್ಚಯಕಾಲವು ತನ್ನ ದ್ರವ್ಯಾತ್ಮಕ ಸತ್ತೆಯನ್ನು ಕಾಯ್ದುಕೊಳ್ಳುತ್ತದೆ. ಅಲ್ಲದೆ ಅದು ಧರ್ಮ, ಅಧರ್ಮ ದ್ರವ್ಯಗಳಂತೆ ಸಮಸ್ತ ಲೋಕಾಕಾಶದಲ್ಲಿ ವ್ಯಾಪಿಸಿದೆ. ಆದರೆ ಉಳಿದ ದ್ರವ್ಯಗಳಂತೆ ಇದಲ್ಲ. ಅವುಗಳಂತೆ ಇದು ಅಸ್ತಿಕಾಯ ಅರ್ಥಾತ್ ಬಹು ಪ್ರದೇಶಿಯಾಗಿಲ್ಲ. ಇದು ಆದರ ವಿಶೇಷತೆಯಾಗಿದೆ. ಕಾಲದ್ರವ್ಯದ ಒಂದೊಂದು ಪ್ರದೇಶವು ಒತ್ತಟ್ಟಿಗೆ ಇರುತ್ತಿದ್ದು ತಮ್ಮ ತಮ್ಮ ರೂಪಗಳಲ್ಲಿ ಭಿನ್ನವಾಗಿರುತ್ತವೆ. ಇದನ್ನು ರತ್ನದ ರಾಶಿಗೂ, ಉಸುಕಿನ ಸಮೂಹಕ್ಕೂ ಹೋಲಿಸಬಹುದು. ಅವುಗಳ ಒಂದೊಂದು ಕಣವೂ ಪೃಥಕ್ ಪೃಥಕ್‌ವಾಗಿಯೇ ಇರುತ್ತವೆ. ನೀರು, ವಾಯು ಗಳಂತೆ ಒಂದು ಕಾಯ ರೂಪದಲ್ಲಿ ನಿರ್ಮಾಣವಾಗುವುದಿಲ್ಲ. ಈ ಒಂದೊಂದು ಕಾಲ ಪ್ರದೇಶವು ಸಮಸ್ತ ಪದಾರ್ಥಗಳಲ್ಲಿ ವ್ಯಾಪಿಸಿವೆ. ಅಲ್ಲದೆ ಅವುಗಳಲ್ಲಿ ಪರಿಣಮನ ಅರ್ಥಾತ್ ಪರ್ಯಾಯ-ಪರಿವರ್ತನ-ಕ್ರಿಯೆಯನ್ನು ಮಾಡುತ್ತವೆ. ಪದಾರ್ಥಗಳಲ್ಲಿ ಕಾಲಕೃತ ಸೂಕ್ಷ್ಮತಮ ವಿಪರಿವರ್ತನವಾಗಲಿಕ್ಕೆ ಅಥವಾ ಒಂದು ಪುದ್ಗಲದ ಪರ ಮಾಣುವು ಆಕಾಶದ ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಹೋಗಲಿಕ್ಕೆ ಎಷ್ಟು ಕಾಲಾವಕಾಶವು ಹತ್ತುವುದೋ ಅಷ್ಟು ಅವಧಿಗೆ ವ್ಯವಹಾರ ಕಾಲದ ಒಂದು

**ಸಮಯ** ಎಂದು ಹೇಳಲಾಗುತ್ತದೆ. ಇಂಥ ಅಸಂಖ್ಯಾತ ಸಮಯಗಳಿಂದ ಒಂದು ಆವಲಿ, ಸಂಖ್ಯಾತ ಆವಲಿಗಳಿಂದ ಒಂದು **ಉಚ್ಛ್ವಾಸ**, ಏಳು **ಉಚ್ಛ್ವಾಸ**ಗಳಿಂದ ಒಂದು **ಸ್ತೋಕ**, ಏಳು ಸ್ತೋಕಗಳಿಂದ ಒಂದು **ಲವ**, ೩೮½ ಲವಗಳಿಂದ ಒಂದು **ನಾಲೀ**, ಎರಡು ನಾಲೀಗಳಿಂದ ಒಂದು **ಮುಹೂರ್ತ**, ಮತ್ತು ಮೂವತ್ತು ಮುಹೂರ್ತಗಳಿಂದ ಒಂದು **ಅಹೋರಾತ್ರ**ವಾಗುತ್ತದೆ. ಅಹೋರಾತ್ರವನ್ನು ೨೪ ಗಂಟೆಯದೆಂದು ಮನ್ನಿಸಲಾಗಿದೆ. ಆ ಕ್ರಮದ ಪ್ರಮಾಣದಲ್ಲಿ ಒಂದು ಉಚ್ಛ್ವಾಸದ ಅಳತೆಯು ಒಂದು ಸೇಕಂದದ ೨೮೮೦/೩೭೭೩ ಅಂಶ ಅರ್ಥಾತ್ ಸುಮಾರು ೩/೪ ಸೇಕಂದವಾಗುತ್ತದೆ. ಇದಕ್ಕನುಸರಿಸಿ ಒಂದು ಮಿನಿಟನಲ್ಲಿ ಉಚ್ಛ್ವಾಸಗಳ ಸಂಖ್ಯೆಯು ೭೮.೬ ಆಗುತ್ತದೆ. ಇದು ಆಧುನಿಕ ವೈಜ್ಞಾನಿಕ ಮತ್ತು ಪ್ರಾಯೋಗಿಕ ಮಾನ್ಯತೆಗೆ ಅನುಸರಿಸಿ ಇದೆ. ಆವಲಿ ಮತ್ತು ಸಮಯಗಳ ಪ್ರಮಾಣವು ಸೇಕಂದಕ್ಕಿಂತ ಬಹು ಸೂಕ್ಷ್ಮವೆಂದು ಸಿದ್ಧವಾಗುತ್ತದೆ. ಅಹೋರಾತ್ರಕ್ಕಿಂತ ಹಿರಿದಾದ ಕಾಲ ವಿಭಾಗದ ಗಣನೆಯನ್ನು **ಪಕ್ಷ, ಮಾಸ, ಋತು, ಅಯನ, ವರ್ಷ, ಯುಗ, ಪೂರ್ವಾಂಗ, ಪೂರ್ವ, ನಯುತಾಂಗ, ನಯುತ** ಮೊದಲಾದ ಕ್ರಮದಿಂದ **ಅಪ್ರ**ಚಲದ ವರೆಗೆ ಮಾಡಲಾಗಿದೆ ಇದು ೮೪ ನ್ನು ೮೪ ರಿಂದ ೩೧ ಸಲ ಗುಣಿಸಿದಷ್ಟಾಗುತ್ತದೆ. ಇವೆಲ್ಲವೂ **ಸಂಖ್ಯಾತ-ಕಾಲದ** ಭೇದಗಳಾಗಿವೆ. ಇದರ ಉತ್ಕೃಷ್ಟ ಪ್ರಮಾಣವು ಇದಕ್ಕಿಂತ ಎಷ್ಟೋ ಪಟ್ಟು ದೊಡ್ಡದಾಗಿದೆ. ಅದರ ತರುವಾಯ **ಅಸಂಖ್ಯಾತ-ಕಾಲವು** ಪ್ರಾರಂಭವಾಗುತ್ತದೆ. ಅದರಲ್ಲಿಯೂ ಕೂಡ **ಜಘನ್ಯ, ಮಧ್ಯಮ** ಮತ್ತು **ಉತ್ಕೃಷ್ಟ** ಎಂಬ ಭೇದಗಳನ್ನು ಹೇಳಿದೆ. ಅದರ ಮುಂದೆಯೂ **ಅನಂತ-ಕಾಲದ** ಪ್ರರೂಪಣೆಯನ್ನು ಮಾಡಲಾಗಿದೆ. ಅದರಲ್ಲಿಯೂ ಜಘನ್ಯ, ಮಧ್ಯಮ ಮತ್ತು ಉತ್ಕೃಷ್ಟ ಭೇದಗಳನ್ನು ಹೇಳಲಾಗಿದೆ. ಯಾವ ಪ್ರಕಾರ ಈ ವ್ಯವಹಾರ ಕಾಲದ ಪ್ರಮಾಣವನ್ನು ಉತ್ಕೃಷ್ಟ ಅನಂತದ (ಅನಂತಾನಂತ) ವರೆಗೆ ಹೇಳಲಾಗಿದೆಯೋ ಅದೇ ಪ್ರಕಾರ ಆಕಾಶದ ಪ್ರದೇಶಗಳನ್ನು ಸಮಸ್ತ ದ್ರವ್ಯಗಳ ಅವಿಭಾಗಿ ಪ್ರತಿಚ್ಛೇದಗಳನ್ನೂ ಅನಂತಾನಂತವೆಂದು ಹೇಳಿದೆ. ಅದರಂತೆ ಕೇವಲ ಜ್ಞಾನಿಯ ಜ್ಞಾನ ಪ್ರಮಾಣವೂ ಅನಾಂತನಂತವೆಂದು ಸ್ವೀಕರಿಸಿದೆ.

**ದ್ರವ್ಯದ ಸಾಮಾನ್ಯ ಲಕ್ಷಣ :—**

ಜೈನ ದರ್ಶನಕ್ಕೆ ಅನುಸರಿಸಿ ಇವೇ ಪುದ್ಗಲ, ಧರ್ಮ, ಅಧರ್ಮ, ಆಕಾಶ ಮತ್ತು ಕಾಲ ಎಂಬ ಹೆಸರಿನ ಆರು ಮೂಲ ದ್ರವ್ಯಗಳಿವೆ. ಇವುಗಳಿಂದ ವಿಶ್ವದೊಳಗಿನ ಸಮಸ್ತ ಸತ್ತಾತ್ಮಕ ಪದಾರ್ಥಗಳ ನಿರ್ಮಾಣವಾಗಿದೆ. ಈ ನಿರ್ಮಾಣದಲ್ಲಿ ಕಂಡು ಬರುವ ವೈಚಿತ್ರ್ಯಗಳಿಗೆ ದ್ರವ್ಯದ ಒಂದು ವಿಶೇಷತೆಯೇ ಕಾರಣವಾಗಿದೆ. ದ್ರವ್ಯವು ಯಾವುದಿದೆಯೋ ಅದು ತನ್ನ ಸತ್ತೆಯನ್ನು ಕಾಯ್ದು ಕೊಳ್ಳುತ್ತದೆ. (ಸದ್ ದ್ರವ್ಯ-ಲಕ್ಷಣಮ್) ಆದರೆ ಜೈನ ಸಿದ್ಧಾಂತದಲ್ಲಿ ಸತ್‌ದ ಲಕ್ಷಣವು ವೇದಾಂತದಲ್ಲಿ ಹೇಳಿ

ದಂತೆ ಕೂಟಸ್ಥ-ನಿತ್ಯತೆಯನ್ನು ಮನ್ನಿಸಿಲ್ಲ. ಇಲ್ಲಿ ಸತ್ಯದ ಸ್ವರೂಪವನ್ನು ಹೇಳು ವಾಗ ಯಾವುದು ಉತ್ಪಾದ, ವ್ಯಯ ಮತ್ತು ಧ್ರೌವ್ಯ ಈ ಮೂರೂ ಲಕ್ಷಣಗಳಿಂದ ಕೂಡಿದ್ದು ಇರುತ್ತದೆಯೋ ಅದು ದ್ರವ್ಯವಾಗಿದೆ. (ಉತ್ಪಾದ-ವ್ಯಯ-ಧ್ರೌವ್ಯ ಯುಕ್ತಂ ಸತ್) ಇದಕ್ಕನುಸರಿಸಿ ಸತ್ತಾತ್ಮಕ ದ್ರವ್ಯಗಳಲ್ಲಿ ಪ್ರತಿಕ್ಷಣದಲ್ಲಿಯೂ ಕೆಲ ವೊಂದು ನವೀನತೆಯು ಉತ್ಪನ್ನವಾಗುತ್ತ ಇರುತ್ತದೆ, ಕೆಲವೊಂದು ಕ್ಷೀಣತೆಗಳೂ ಸಂಭವಿಸುತ್ತಿರುತ್ತವೆ. ಹೀಗಿದ್ದೂ ಒಂದು ತರದ ಸ್ಥಿರತೆಯೂ ಕೂಡ ಇರುತ್ತದೆ. ಇದ ರಿಂದ ಆ ದ್ರವ್ಯವು ತನ್ನ ದ್ರವ್ಯ ಸ್ವರೂಪವನ್ನು ಕಳೆದುಕೊಳ್ಳುವುದಿಲ್ಲ. ದ್ರವ್ಯದ ಈ ವಿಶೇಷತೆಯು ಅದರ ಎರಡು ಪ್ರಕಾರದ ಧರ್ಮಗಳಿಂದ ಸಾಧ್ಯವಿದೆ. ಪ್ರತಿಯೊಂದು ದ್ರವ್ಯವೂ ಗುಣ ಹಾಗೂ ಪರ್ಯಾಯಗಳಿಂದ ಕೂಡಿದೆ. (ಗುಣ-ಪರ್ಯಯವದ್ ದ್ರವ್ಯಮ್) ಗುಣವು ವಸ್ತುವಿನ ಧರ್ಮವಾಗಿದೆ. ಅದು ವಸ್ತುವಿನಿಂದ ಎಂದೂ ಭಿನ್ನಗೊಳ್ಳುವುದಿಲ್ಲ. ಅಲ್ಲದೆ ಅದರ ಧ್ರುವತೆಯನ್ನು ಸುರಕ್ಷಿತವಾಗಿಡುತ್ತದೆ. ಆದರೆ ಪರ್ಯಾಯವು ನಿರಂತರ ಬದಲಾಗುವಂಥ ದ್ರವ್ಯದ ಒಂದು ಧರ್ಮವಾಗಿದೆ. ಇದ ರಿಂದ ದ್ರವ್ಯದ ಸ್ವರೂಪದಲ್ಲಿ ಯಾವಾಗಲೂ ಕೆಲವೊಂದು ನಾವೀನ್ಯ ಮತ್ತು ಕೆಲ ವೊಂದು ಕ್ಷೀಣತೆಗಳ ರೂಪದಲ್ಲಿ ಪರಿವರ್ತನೆಯು ಆಗುತ್ತಿರುತ್ತದೆ. ಉದಾಹರಣಾರ್ಥ- ಸುವರ್ಣಧಾತುವಿನ ಯಾವ ವಿಶೇಷ ಗುರುತ್ವ ಮೊದಲಾದ ಗುಣಗಳಿವೆಯೋ ಅವು ಎಂದೂ ಅದರಿಂದ ಬೇರೆಯಾಗುವುದಿಲ್ಲ. ಆದರೆ ಅದರ ಮುದ್ರೆ, ಕುಂಡಲ, ಕಂಕಣ ಮೊದಲಾದ ಆಕಾರ ಮತ್ತು ಸಂಸ್ಥಾನ ರೂಪ ಪರ್ಯಾಯಗಳು ಬದಲಾಗುತ್ತಿರು ತ್ತವೆ. ಈ ಪ್ರಕಾರ ದೃಶ್ಯಮಾನ ಜಗತ್ತಿನ ಸಮಸ್ತ ಪದಾರ್ಥಗಳ ಯಥಾರ್ಥ ಸ್ವರೂಪದ ಪರಿಪೂರ್ಣ ನಿರೂಪಣವು ಜೈನ ದರ್ಶನದಲ್ಲಿ ಕಂಡುಬರುತ್ತದೆ. ಅದರಲ್ಲಿ ಅನ್ಯ ದರ್ಶನಗಳಲ್ಲಿ ನಿರೂಪಿಸಿದ ದ್ರವ್ಯದ ಅಂಶಿಕ ಸ್ವರೂಪದ ಸಮಾವೇಶವೂ ಆಗು ತ್ತದೆ. ಬೌದ್ಧ ದರ್ಶನದಲ್ಲಿ ಸಮಸ್ತ ವಸ್ತುಗಳು ಕ್ಷಣಭಂಗುರವೆಂದು ಮನ್ನಿಸಲಾ ಗಿದೆ. ಇದು ಜೈನ ದರ್ಶನಕ್ಕನುಸರಿಸಿ ದ್ರವ್ಯದಲ್ಲಿ ನಿರಂತರವಾಗುವ ಉತ್ಪಾದ-ವ್ಯಯ ರೂಪ ಧರ್ಮವು ಕಾರಣವಾಗಿದೆ. ಇದರಂತೆಯೇ ವೇದಾಂತದಲ್ಲಿ ಸತ್‌ನ್ನು ಕೂಟಸ್ಥ ನಿತ್ಯವೆಂದು ಮನ್ನಿಸಲಾಗಿದೆ. ಇದು ದ್ರವ್ಯದ ಧ್ರೌವ್ಯ ಗುಣಾತ್ಮಕತೆಯನ್ನು ಅವ ಲಂಬಿಸಿದೆ.

ಆಸ್ರವ-ತತ್ವ :—

ಜೈನ ಸಿದ್ಧಾಂತದ ಏಳು ತತ್ವಗಳಲ್ಲಿ ಮೊದಲಿನ ಎರಡು ಅರ್ಥಾತ್ ಜೀವ ಮತ್ತು ಅಜೀವ ತತ್ವಗಳ ನಿರೂಪಣೆಯನ್ನು ಈ ಮೊದಲು ಮಾಡಲಾಗಿದೆ. ಈಗ ಇಲ್ಲಿ ಮೂರನೆಯ ಮತ್ತು ನಾಲ್ಕನೆಯ ಆಸ್ರವ ಮತ್ತು ಬಂಧ ಎಂಬ ಹೆಸರಿನ ತತ್ವಗಳ ವ್ಯಾಖ್ಯೆಯನ್ನು ಮಾಡಲಾಗುವುದು. ಈ ವಿಷಯವು ಜೈನ ಕರ್ಮಸಿದ್ಧಾಂತದ್ದಾಗಿದೆ. ಇದಕ್ಕೆ ನಾವು ಆಧುನಿಕ ವೈಜ್ಞಾನಿಕ ಶಬ್ದಾವಲಿಯಲ್ಲಿ ಜೈನ ಮನೋವಿಜ್ಞಾನ

(ಸಾಯಿಕೊಲಾಜಿ) ಎಂದು ಹೇಳುತ್ತೇವೆ. ಸಚೇತನ ಜೀವವು ಸಂಸಾರದಲ್ಲಿ ಒಂದಿಲ್ಲೊಂದು ಪ್ರಕಾರದ ಶರೀರವನ್ನು ಧಾರಣ ಮಾಡಿದ್ದು ಕಂಡುಬರುತ್ತದೆ. ಈ ಶರೀರಕ್ಕೆ ಎರಡು ಪ್ರಕಾರದ ಅಂಗೋಪಾಂಗಗಳು ಇವೆ. ಇವುಗಳಲ್ಲಿ ಕೈಕಾಲುಗಳಂಥವು ಒಂದು ವಿಧ; ನಾಲಗೆ, ಮೂಗು, ಕಣ್ಣುಗಳಂಥವು ಇನ್ನೊಂದು ವಿಧ, ಇವುಗಳನ್ನೇ ಕ್ರಮವಾಗಿ ಕರ್ಮೇಂದ್ರಿಯಗಳು ಮತ್ತು ಜ್ಞಾನೇಂದ್ರಿಯ ಗಳೆಂದು ಹೇಳಲಾಗಿದೆ. ಇವುಗಳ ಮುಖಾಂತರವೇ ಜೀವವು ನಾನಾ ಪ್ರಕಾರದ ಕ್ರಿಯೆಗಳನ್ನು ಮಾಡುತ್ತದೆ. ವಿಕಸಿತ ಪ್ರಾಣಿಗಳಲ್ಲಿ ಈ ಕ್ರಿಯೆಗಳ ಸಂಚಾಲನವು ಆಂತರಿಕ ಒಂದು ಅನ್ಯಶಕ್ತಿಯಿಂದ ಆಗುತ್ತಿರುತ್ತದೆ. ಇದಕ್ಕೆ ಮನ ಎಂದು ಹೇಳಲಾಗುತ್ತದೆ. ಇವುಗಳಿಗೇನೇ ನೋಇಂದ್ರಿಯ ಎಂಬ ಹೆಸರನ್ನು ಕೊಡಲಾಗಿದೆ. ನಾಲಗೆಯಿಂದ ರುಚಿಯನ್ನು ತಿಳಿಯುವುದಲ್ಲದೆ ಶಬ್ದ ಅಥವಾ ವಾಣಿಯ ಉಚ್ಚಾರಣೆಯ ಕ್ರಿಯೆಯನ್ನೂ ಮಾಡಿಸಿಕೊಳ್ಳಲಾಗುತ್ತದೆ. ಈ ಪ್ರಕಾರ ಜೀವದ ಕ್ರಿಯೆಗಳಲ್ಲಿ ಕಾಯ, ವಾಕ್, ಮನ ಇವೂ ವಿಶೇಷ ರೂಪದಿಂದ ಪ್ರಬಲ ಸಾಧನವೆಂದು ಸಿದ್ಧವಾಗುತ್ತವೆ. ಇವುಗಳ ಕ್ರಿಯೆಗೇನೆ ಜೈನ ಸಿದ್ಧಾಂತದಲ್ಲಿ ಯೋಗ ಎಂದು ಹೇಳಿದೆ. ಇವುಗಳಿಗೆ ಅರ್ಥಾತ್ ಕಾಯಯೋಗ, ವಾಗ್ಯೋಗ ಮತ್ತು ಮನೋಯೋಗ ಗಳಿಂದ ಆತ್ಮ ಪ್ರದೇಶದಲ್ಲಿ ಒಂದು ಪರಿಸ್ಪಂದನವು ಉಂಟಾಗುತ್ತದೆ. ಆ ಕಾರಣದಿಂದ, ಆತ್ಮನಲ್ಲಿ ತನ್ನ ಸುತ್ತಲೂ ತುಂಬಿದ ಸೂಕ್ಷ್ಮಾತಿಸೂಕ್ಷ್ಮ ಪುದ್ಗಲ ಪರಮಾಣುಗಳು ಬಂದು ಆತ್ಮಕ್ಕೆ ಅಂಟಿಕೊಳ್ಳುವಂಥ ಒಂದು ಅವಸ್ಥೆಯು ಉಂಟಾಗುತ್ತದೆ. ಈ ಆತ್ಮ ಮತ್ತು ಪುದ್ಗಲ ಪರಮಾಣುಗಳ ಸಂಪರ್ಕದ ಹೆಸರೇ ಆಸ್ರವ ಎಂದಿದೆ. ಹೀಗೆ ಆತ್ಮನ ಸಂಪರ್ಕದಲ್ಲಿ ಬರುವ ಪುದ್ಗಲಕರ್ಮಾಣುಗಳಿಗೇನೇ ಕರ್ಮ ಎಂದು ಹೆಸರಿದೆ. ಯಾಕಂದರೆ ಇವುಗಳ ಆಗಮನವು ಮೇಲೆ ಹೇಳಿದ ಕಾಯ, ವಾಕ್ ಮತ್ತು ಮನಗಳ ಕರ್ಮದಿಂದ ಆಗುತ್ತದೆ. ಈ ಪ್ರಕಾರ ಆತ್ಮನ ಸಂಸರ್ಗದಲ್ಲಿ ಬರುವಂಥ ಆ ಪುದ್ಗಲ ಪರಮಾಣುಗಳಿಗೆ ಕರ್ಮ ಎಂಬ ಸಂಜ್ಞೆಯು ಲಾಕ್ಷಣಿಕವಾಗಿದೆ.

ಕಾಯ ಮೊದಲಾದ ಯೋಗ ರೂಪದಿಂದ ಆತ್ಮ ಪ್ರದೇಶದಲ್ಲಿ ಉತ್ಪನ್ನವಾಗುವ ಮೇಲೆ ಹೇಳಿದ ಪರಿಸ್ಪಂದನಾತ್ಮಕ ಕ್ರಿಯೆಯು ಎರಡು ವಿಧವಾಗಿದೆ:—ಒಂದು ಯಾವುದಾದರೂ ಕ್ರೋಧ, ಮಾನ ಮೊದಲಾದ ತೀವ್ರ ಮಾನಸಿಕ ವಿಕಾರವಿಲ್ಲದ ಸಾಧಾರಣ ಕ್ರಿಯೆಗಳ ರೂಪದಲ್ಲಿರುತ್ತದೆ. ಇನ್ನೊಂದು ಕ್ರೋಧ, ಮಾನ, ಮಾಯಾ ಮತ್ತು ಲೋಭ ಈ ನಾಲ್ಕು ತೀವ್ರ ಮನೋವಿಕಾರ ರೂಪಕಷಾಯಗಳ ಯೋಗದಿಂದ ಜನಿಸುವಂಥದು. ಮೊದಲನೆಯ ಪ್ರಕಾರದ ಕರ್ಮಾಸ್ರವವನ್ನು ಈರ್ಯಾಪಥಿಕ ಅರ್ಥಾತ್ ಮಾರ್ಗಗಾಮಿ ಎಂದು ಹೇಳಿದೆ. ಯಾಕಂದರೆ ಇದರಿಂದ ಆತ್ಮ ಮತ್ತು ಕರ್ಮ ಪ್ರದೇಶಗಳಲ್ಲಿ ಸ್ಥಿರಬಂಧವು ಉತ್ಪನ್ನವಾಗಿರುವುದಿಲ್ಲ. ಅವು ಬಂದುವು ಮತ್ತು ಹೋದುವು. ಇದು ಶುದ್ಧ ಒಣ ಅರಿವೆಯ ಮೇಲೆ ಕುಳಿತ ಧೂಳು ಬೇಗನೆ ಉರುಳಿ ಹೋಗುವಂತೆ ಇರುತ್ತದೆ; ಇದು ಬಹಳ ಹೊತ್ತಿನ

ವರೆಗೆ ಅರಿವೆಗೆ ಅಂಟಿಕೊಂಡಿರುವುದಿಲ್ಲ. ಈ ಪ್ರಕಾರದ ಕರ್ಮಾಸ್ರವವು ಸಮಸ್ತ ಸಂಸಾರೀ ಜೀವಗಳಲ್ಲಿ ನಿರಂತರವೂ ಆಗುತ್ತಿರುತ್ತದೆ. ಯಾಕಂದರೆ ಅವನ ಒಂದಿಲ್ಲೊಂದು ಪ್ರಕಾರದ ಮಾನಸಿಕ, ಶಾರೀರಿಕ ಇಲ್ಲವೆ ವಾಚಿಕ ಕ್ರಿಯೆಯು ಯಾವಾಗಲೂ ನಡೆದೇ ಇರುತ್ತದೆ. ಆದರೆ ಅದರ ಯಾವ ವಿಶೇಷ ಪರಿಣಾಮವು ಆತ್ಮನಮೇಲೆ ಆಗುವುದಿಲ್ಲ. ಆದರೆ ಯಾವಾಗ ಜೀವದ ಮಾನಸಿಕ ಮೊದಲಾದ ಕ್ರಿಯೆಗಳು ಕಷಾಯದಿಂದ ಕೂಡಿರುವವೋ ಆಗ ಆತ್ಮಪ್ರದೇಶದಲ್ಲಿ ಒಂದು ಪರಪದಾರ್ಥವನ್ನು ಗ್ರಹಿಸುವಂಥ ಸ್ಥಿತಿಯು ಉತ್ಪನ್ನವಾಗುತ್ತದೆ. ಇದರಿಂದಾಗಿ ಅದರ ಸಂಪರ್ಕದಲ್ಲಿ ಬರುವ ಕರ್ಮ ಪರಮಾಣುಗಳು ಅದರಿಂದ ಶೀಘ್ರವಾಗಿ ಬಿಡುಗಡೆಯನ್ನು ಹೊಂದುವುದಿಲ್ಲ. ಯಥಾರ್ಥವಾಗಿ ಕ್ರೋಧಾದಿ ವಿಕಾರಗಳ ಇದೇ ಪ್ರಕಾರದ ಶಕ್ತಿಯೇ ಕಾರಣವಾಗಿರುವುದರಿಂದ ಅದಕ್ಕೆ ಕಷಾಯವೆಂದು ಹೇಳಿದೆ. ಸಾಮಾನ್ಯವಾಗಿ ವಟವೃಕ್ಷದ ಹಾಲಿನಂಥ ಜಿಗುಟಾದ ರಸಕ್ಕೆ ಕಷಾಯ ಎಂದು ಅರ್ಥವಿದೆ. ಇದರಲ್ಲಿ ಅಂಟಿಸಿಕೊಳ್ಳುವ ಶಕ್ತಿ ಇರುತ್ತದೆ. ಅದೇ ಪ್ರಕಾರ ಕ್ರೋಧ, ಮಾನ ಮೊದಲಾದ ಮನೋವಿಕಾರಗಳು ಜೀವದಲ್ಲಿ ಕರ್ಮ ಪರಮಾಣುಗಳ ಅಶ್ಲೇಷ ಮಾಡಿಕೊಳ್ಳುವುದರಲ್ಲಿ ಕಾರಣೀಭೂತವಾಗಿರುವುದರಿಂದ ಕಷಾಯ ಎಂದು ಹೇಳಲಾಗಿದೆ. ಈ ಸಕಷಾಯ ಅವಸ್ಥೆಯಲ್ಲಿ ಉತ್ಪನ್ನವಾಗುವ ಕರ್ಮಾಸ್ರವಕ್ಕೆ ಸಾಂಪರಾಯಿಕ ಎಂದು ಹೇಳುವರು. ಯಾಕಂದರೆ ಆತ್ಮನಲ್ಲಿ ಅವುಗಳ ಪರಂಪರೆಯು ನಡೆಯುತ್ತದೆ. ಇಷ್ಟೇ ಅಲ್ಲ, ಅವು ಒಂದಿಲ್ಲೊಂದು ಪ್ರಭಾವವನ್ನು ಬೀರದೆ ಆತ್ಮದಿಂದ ತೊಲಗಿ ಹೋಗುವುದಿಲ್ಲ.

**ಬಂಧತತ್ವ :—**

ಮೇಲೆ ಹೇಳಿದ ಪ್ರಕಾರ ಜೀವದ ಸಕಷಾಯ ಅವಸ್ಥೆಯಲ್ಲಿ ಬಂದಂಥ ಕರ್ಮ-ಪರಮಾಣುಗಳು ಆತ್ಮ ಪ್ರದೇಶದೊಡನೆ ಸಂಬಂಧಿಸುವುದೇ ಕರ್ಮಬಂಧವೆನಿಸುವುದು. ಈ ಬಂಧವು ಪ್ರಕೃತಿ, ಸ್ಥಿತಿ, ಅನುಭಾಗ ಮತ್ತು ಪ್ರದೇಶ ಎಂದು ನಾಲ್ಕು ಪ್ರಕಾರವಾಗಿದೆ. ಪ್ರಕೃತಿ ಎಂದು ವಸ್ತುವಿನ ಶೀಲ ಅಥವಾ ಸ್ವಭಾವಕ್ಕೆ ಹೇಳುತ್ತಾರೆ. ಅಂತೂ ಕರ್ಮ ಪರಮಾಣುಗಳಲ್ಲಿ ಯಾವ ಪ್ರಕಾರದ ಪರಿಣಾಮ-ಉತ್ಪಾದಕ ಶಕ್ತಿಗಳು ಇರುತ್ತವೆಯೋ ಅವುಗಳಿಗೆ ಕರ್ಮ-ಪ್ರಕೃತಿಗಳೆನ್ನುವರು. ಕರ್ಮಗಳಲ್ಲಿ ಎಷ್ಟು ಕಾಲದ ವರೆಗೆ ಜೀವದ ಜೊತೆಗೆ ಇರುವ ಶಕ್ತಿಯು ಉತ್ಪನ್ನವಾಗುವುದೋ ಅದಕ್ಕೆ ಕರ್ಮ-ಸ್ಥಿತಿ ಎಂದು ಹೇಳಲಾಗುತ್ತದೆ. ಅವುಗಳ ತೀವ್ರ ಇಲ್ಲವೆ ಮಂದ ಫಲ ಕೊಡುವ ಶಕ್ತಿಯ ಹೆಸರು ಅನುಭಾಗ ಎಂದಿದೆ. ಹಾಗೆಯೇ ಆತ್ಮಪ್ರದೇಶದೊಡನೆ ಎಷ್ಟು ಕರ್ಮ-ಪರಮಾಣುಗಳ ಬಂಧವು ಆಯಿತೋ ಅದು ಪ್ರದೇಶ ಬಂಧವೆನಿಸುತ್ತದೆ. ಈ ನಾಲ್ಕು ಪ್ರಕಾರದ ಬಂಧ-ವ್ಯವಸ್ಥೆಯ ಹೊರತಾಗಿ. ಕರ್ಮಸಿದ್ಧಾಂತದಲ್ಲಿ ಕರ್ಮಗಳ ಸತ್ವ, ಉದಯ, ಉದೀರಣಾ, ಉತ್ಕರ್ಷಣ, ಸಂಕ್ರಮಣ, ಉಪಶಮ, ನಿಧತ್ತಿ ಮತ್ತು ನಿಕಾಚನೆಗಳ ವಿಚಾರವನ್ನೂ ಮಾಡಲಾಗುತ್ತದೆ. ಬಂಧಾದಿ

ಇವೂ ಕೂಡ ಹತ್ತು ಕರ್ಮಗಳ ಕರಣ ಅರ್ಥಾತ್ ಅವಸ್ಥೆಗಳೆಂದು ಸ್ವೀಕರಿಸಲಾಗಿದೆ. ಬಂಧದ ನಾಲ್ಕು ಪ್ರಕಾರಗಳನ್ನಂತೂ ಹೇಳಿಯೇ ಇದೆ. ಬಂಧವಾದ ಮೇಲೆ ಕರ್ಮವು ಯಾವ ಅವಸ್ಥೆಯಲ್ಲಿ ಆತ್ಮನ ಜೊತೆಗೆ ಇರುತ್ತದೆ, ಎಂಬುವ ವಿಚಾರವನ್ನು ಸತ್ವದ ವಿಷಯದಲ್ಲಿ ಮಾಡಲಾಗುತ್ತದೆ. ತನ್ನ ಸತ್ತೆಯಲ್ಲಿ ಇರುವ ಕರ್ಮವು ಯಾವಾಗ ತನ್ನ ಸ್ಥಿತಿಯನ್ನು ಪೂರ್ಣಹೊಂದಿ ಫಲ ಕೊಡಲು ಪ್ರಾರಂಭಿಸುತ್ತದೆಯೋ, ಆಗ ಅದಕ್ಕೆ ಕರ್ಮದ ಉದಯ ಎಂದು ಹೇಳುವರು. ಒಮ್ಮೊಮ್ಮೆ ಆತ್ಮವು ತನ್ನ ಭಾವ ಗಳ ತೀವ್ರತೆಯಿಂದ ಕರ್ಮದ ಸ್ಥಿತಿಯು ಪೂರ್ಣಗೊಳ್ಳುವ ಪೂರ್ವದಲ್ಲಿಯೇ ಅವು ಫಲೋನ್ಮುಖವಾಗುವಂತಾದರೆ ಅದಕ್ಕೆ ಉದೀರಣಾ ಎಂದು ಹೇಳುವರು. ಯಾವ ಪ್ರಕಾರ ಕಸಕು ಕಾಯಿಗಳಿಗೆ ವಿಶೇಷ ತಾವು ಕೊಟ್ಟು, ಅವು ಹಣ್ಣಾಗುವ ಪೂರ್ವ ದಲ್ಲಿಯೇ ಹಣ್ಣಾಗುವಂತೆ ಮಾಡಲಾಗುತ್ತದಷ್ಟೇ. ಅದೇ ಪ್ರಕಾರ ಈ ಕರ್ಮದ ಉದೀರಣಾವಸ್ಥೆಯು ಇರುತ್ತದೆ. ಕರ್ಮದ ಸ್ಥಿತಿ–ಕಾಲ ಮತ್ತು ಅನುಭಾಗ (ಫಲ ಕೊಡುವ ಶಕ್ತಿ) ಇವುಗಳಲ್ಲಿ ವಿಶೇಷ ಭಾವಗಳಿಂದ ವೃದ್ಧಿಯನ್ನುಂಟುಮಾಡುವುದೇ ಉತ್ಕರ್ಷಣ ಎನಿಸುವುದು. ಇದೇ ಪ್ರಕಾರ ಕರ್ಮದ ಸ್ಥಿತಿ–ಕಾಲ ಮತ್ತು ಅನುಭಾಗ ಗಳನ್ನು ಕಡಿಮೆ ಮಾಡುವದರ ಹೆಸರು ಅಪಕರ್ಷಣವೆಂದಿದೆ. ಕರ್ಮಪ್ರಕೃತಿಗಳ ಉಪಭೇದಗಳು ಒಂದರಿಂದ ಎರಡನೆಯ ರೂಪಕ್ಕೆ ಪರಿವರ್ತನವಾಗುವುದರ ಹೆಸರು ಸಂಕ್ರಮಣವೆಂದಿದೆ. ಕರ್ಮದ ಉದಯವನ್ನು ತಡೆಯುವುದಕ್ಕೆ ಉಪಶಮವೆನ್ನು ವರು. ಕರ್ಮವು ಉದಯವಾಗುವುದನ್ನೂ, ಅನ್ಯ ಪ್ರಕೃತಿ ರೂಪ ಸಂಕ್ರಮಣವಾಗು ವುದನ್ನೂ ಸಹ ತಡೆಯುವುದು ನಿಧತ್ತಿಕರಣವಾಗಿದೆ. ಹಾಗೂ ಕರ್ಮದ ಒಂದು ಅವಸ್ಥೆಯಲ್ಲಿ ಅದರ ಉದಯವಾಗದು. ಉದೀರಣವಾಗದು. ಸಂಕ್ರಮಣವಾಗದು, ಉತ್ಕರ್ಷಣ ಅಥವಾ ಅಪಕರ್ಷಣಗಳೂ ಆಗವು. ಇಂಥ ವಿಪರಿವರ್ತನಗಳಾಗದಂಥ ಅವಸ್ಥೆಗೇನೇ ನಿಕಾಚನ ಎನ್ನುವರು.

ಕರ್ಮದ ಈ ಹತ್ತು ಕರಣಗಳ ಸ್ವರೂಪದಿಂದ ಜೈನ ಕರ್ಮಸಿದ್ಧಾಂತವು ನಿಯತಿ ವಾದಿ ಇಲ್ಲೆಂಬುದು ಸ್ಪಷ್ಟವಾಗುತ್ತದೆ. ಅದರೊಡನೆಯೇ ಅದು ಸರ್ವಥಾ ಸ್ವಚ್ಛಂದ ವಾದಿಯೂ ಅಲ್ಲ. ಪ್ರತಿಯೊಂದು ಕರ್ಮದಿಂದಲೂ ಒಂದಿಲ್ಲೊಂದು ಪ್ರಕಾರದ ಶಕ್ತಿಯು ಉತ್ಪನ್ನವಾಗುತ್ತದೆ. ಅದು ಜೀವದ ಮೇಲೆ ತನ್ನ ಪ್ರಭಾವವನ್ನು ಬೀರದೆ ಬಿಡುವುದಿಲ್ಲ. ಅದರ ಜೊತೆಗೇನೇ ಜೀವದ ಸ್ವಾತಂತ್ರ್ಯವೂ ಸಹ ಎಂದೂ ಇಳಿಮುಖ ವಾಗಲಿ, ಕುಂಠಿತವಾಗಲಿ ಆಗುವುದಿಲ್ಲ, ಅಂದರೆ ಅದು ತನ್ನ ಕರ್ಮದ ಪ್ರಭಾವಕ್ಕೆ ಒಳಗಾಗಿ ಸುಧಾರಣೆಯನ್ನು ಹೊಂದಲು ಸರ್ವಥಾ ಅಸಮರ್ಥವಾಗುವಂತೆ ಇಲ್ಲ. ಈ ಪ್ರಕಾರ ಜೈನಸಿದ್ಧಾಂತದಲ್ಲಿ ಮನುಷ್ಯನಿಗೆ ತನ್ನ ಕರ್ಮದ ಉತ್ತರದಾಯಿತ್ವ, ಅದರಂತೆಯೇ ಪುರುಷಾರ್ಥದಿಂದ ತನ್ನ ಪರಿಸ್ಥಿತಿಯನ್ನು ಬದಲಿಸಿಕೊಳ್ಳುವ ಶಕ್ತಿ, ಇವೆರಡರಲ್ಲಿಯೂ ಬಹಳ ಚೆನ್ನಾಗಿ ಸಮನ್ವಯವನ್ನು ಸ್ಥಾಪಿಸಲಾಗಿದೆ.

**ಕರ್ಮಪ್ರಕೃತಿಗಳು :— (ಜ್ಞಾನಾವರಣ ಕರ್ಮ)**

ಕಟ್ಟಿದಂಥ ಕರ್ಮಗಳಲ್ಲಿ ಉತ್ಪನ್ನವಾಗುವಂಥ ಪ್ರಕೃತಿಗಳು ಎರಡು ಪ್ರಕಾರವಾಗಿವೆ—ಅವು ಮೂಲ ಮತ್ತು ಉತ್ತರ ಎಂದಿವೆ. ಮೂಲ ಪ್ರಕೃತಿಗಳು ಜ್ಞಾನಾವರಣೀಯ, ದರ್ಶನಾವರಣೀಯ, ಮೋಹನೀಯ, ಅಂತರಾಯ, ವೇದನೀಯ, ಆಯು, ನಾಮ ಮತ್ತು ಗೋತ್ರ ಎಂದು ಎಂಟು ಇವೆ. ಈ ಎಂಟು ಮೂಲ ಪ್ರಕೃತಿಗಳಲ್ಲಿಯೂ ತಮ್ಮ ತಮ್ಮ ಭೇದರೂಪ ವಿವಿಧ ಉತ್ತರ ಪ್ರಕೃತಿಗಳನ್ನೂ ಹೇಳಿದೆ. ಜ್ಞಾನಾವರಣೀಯ ಕರ್ಮವು ಆತ್ಮನ ಜ್ಞಾನ ಗುಣದ ಮೇಲೆ ಆವರಣವನ್ನು ಉತ್ಪನ್ನ ಮಾಡುತ್ತದೆ. ಆ ಕಾರಣದಿಂದ ಸಂಸಾರಾವಸ್ಥೆಯಲ್ಲಿ ಜ್ಞಾನದ ಪೂರ್ಣ ವಿಕಾಸವು ಆಗುವುದಿಲ್ಲ. ಇದು ವಸ್ತ್ರದ ಆವರಣದಿಂದ ಸೂರ್ಯ ಇಲ್ಲವೆ ದೀಪದ ಪ್ರಕಾಶವು ಮಂದವಾಗಿ ಕಂಡು ಬರುವಂತೆ ಇರುತ್ತದೆ. ಜ್ಞಾನಾವರಣೀಯ ಕರ್ಮದಲ್ಲಿ ಜ್ಞಾನದ ಭೇದಕ್ಕನುಸರಿಸಿ ಐದು ಉತ್ತರ ಪ್ರಕೃತಿಗಳು ಇವೆ. ಅವುಗಳಿಂದ ಕ್ರಮವಾಗಿ ಜೀವನ ಮತಿಜ್ಞಾನ, ಶ್ರುತಜ್ಞಾನ, ಅವಧಿಜ್ಞಾನ, ಮನಃಪರ್ಯಯ ಜ್ಞಾನ ಮತ್ತು ಕೇವಲಜ್ಞಾನ ಇವು ಆವೃತವಾಗುತ್ತವೆ.

**ದರ್ಶನಾವರಣಕರ್ಮ :—**

ದರ್ಶನಾವರಣೀಯ ಕರ್ಮವು ಆತ್ಮನ ದರ್ಶನ ಎಂಬ ಹೆಸರಿನ ಚೈತನ್ಯ ಗುಣವನ್ನು ಆವೃತಗೊಳಿಸುತ್ತದೆ. ಈ ಕರ್ಮದಲ್ಲಿ ನಿದ್ರಾ, ನಿದ್ರಾ-ನಿದ್ರಾ, ಪ್ರಚಲಾ, ಪ್ರಚಲಾ-ಪ್ರಚಲಾ, ಸ್ತ್ಯಾನಗೃದ್ಧಿ ; ಹಾಗೆಯೇ ಚಕ್ಷುದರ್ಶನಾವರಣೀಯ, ಅಚಕ್ಷು ದರ್ಶನಾವರಣೀಯ, ಅವಧಿ ದರ್ಶನಾವರಣೀಯ ಮತ್ತು ಕೇವಲ ದರ್ಶನಾವರಣೀಯ ಇವು ಒಂಭತ್ತು ಉತ್ತರ ಪ್ರಕೃತಿಗಳು ಇವೆ. ನಿದ್ರಾ ಕರ್ಮೋದಯದಿಂದ ಜೀವಕ್ಕೆ ನಿದ್ರೆಯು ಬರುತ್ತದೆ. ಅದರ ಗಾಢತರ ಅವಸ್ಥೆ ಅಥವಾ ಪುನಃ ಪುನಃ ವೃತ್ತಿಗೆ ನಿದ್ರಾ-ನಿದ್ರಾ ಎಂದು ಹೇಳುತ್ತಾರೆ. ಪ್ರಚಲಾ ಕರ್ಮದ ಉದಯದಿಂದ ಮನುಷ್ಯನಿಗೆ ಉಂಟಾಗುವ ನಿದ್ರೆಯಲ್ಲಿ ಮಲಕೊಂಡಲ್ಲಿಯೇ ವಿವಿಧ ಇಂದ್ರಿಯ ವ್ಯಾಪಾರವು ನಡೆದಿರುತ್ತದೆ: ನಿದ್ರಾವಸ್ಥೆಯಲ್ಲಿಯೇ ಅಡ್ಡಾಡಿದರೂ ಅಡ್ಡಾಡಿದನೇ. ಪ್ರಚಲಾ-ಪ್ರಚಲಾ ಕರ್ಮವು ಇದರದೇ ಗಾಢತರ ಅವಸ್ಥೆಯಾಗಿದೆ. ಇದರಲ್ಲಿ ಮೇಲೆ ಉಲ್ಲೇಖಿಸಿದ ಕ್ರಿಯೆಗಳು ಮೇಲಿಂದ ಮೇಲೆ ಮತ್ತು ಅಧಿಕ ತೀವ್ರತೆಯಿಂದ ನಡೆಯುತ್ತವೆ. ಸ್ತ್ಯಾನಗೃದ್ಧಿ ಕರ್ಮೋದಯದಿಂದ ಜೀವವು ಸ್ವಪ್ನಾವಸ್ಥೆಯಲ್ಲಿಯೂ ಉನ್ಮತ್ತನಾಗಿ ನಾನಾ ರೌದ್ರ ಕರ್ಮಗಳನ್ನು ಮಾಡುತ್ತದೆ. ಚಕ್ಷುದರ್ಶನಾವರಣೀಯ ಕರ್ಮದಿಂದ ನೇತ್ರೇಂದ್ರಿಯದ ದರ್ಶನ ಶಕ್ತಿಯು ಕ್ಷೀಣವಾಗುತ್ತದೆ. ಅಚಕ್ಷುದರ್ಶನಾವರಣೀಯದಿಂದ ಉಳಿದ ಇಂದ್ರಿಯಗಳ ಶಕ್ತಿಯು ಮಂದಗೊಳ್ಳುತ್ತ ಹೋಗುತ್ತದೆ. ಹಾಗೆಯೇ ಅವಧಿ ಮತ್ತು ಕೇವಲದರ್ಶನಾವರಣೀಯ ಕರ್ಮಗಳಿಂದ ಆಯಾ ದರ್ಶನಗಳ ವಿಕಾಸದಲ್ಲಿ ಬಾಧೆಯು ಉತ್ಪನ್ನವಾಗುತ್ತದೆ. ಮೇಲೆ ವಿವರಿಸಿದ ಭಿನ್ನ

ಭಿನ್ನ ಜ್ಞಾನ ಮತ್ತು ದರ್ಶನಗಳ ಸ್ವರೂಪದ ವರ್ಣನೆಯನ್ನು ಮುಂದೆ ಮಾಡಲಾಗುವದು.

### ಮೋಹನೀಯ ಕರ್ಮ :—

ಮೋಹನೀಯ ಕರ್ಮವು ಜೀವದ ಮೋಹ ಅರ್ಥಾತ್ ಆದರ ರುಚಿ ಮತ್ತು ಚಾರಿತ್ರ್ಯದಲ್ಲಿ ಅವಿವೇಕ, ವಿಕಾರ ಮತ್ತು ವಿಪರೀತತೆಯೇ ಮೊದಲಾದ ದೋಷಗಳನ್ನು ನಿರ್ಮಾಣಮಾಡುವುದು. ಇದರಲ್ಲಿ ಮುಖ್ಯವಾಗಿ ದರ್ಶನ-ಮೋಹನೀಯ ಮತ್ತು ಚಾರಿತ್ರ-ಮೋಹನೀಯ ಎಂಬ ಮುಖ್ಯ ಎರಡು ಭೇದಗಳು ಇವೆ. ಇವು ಕ್ರಮದಿಂದ ದರ್ಶನ ಮತ್ತು ಚಾರಿತ್ರ ಗುಣಗಳಲ್ಲಿ ದೂಷಣವನ್ನು ಉತ್ಪನ್ನ ಮಾಡುತ್ತವೆ. ದರ್ಶನ ಮೋಹನೀಯ ಕರ್ಮದ ಉತ್ತರ ಪ್ರಕೃತಿಗಳು ಮಿಥ್ಯಾತ್ವ, ಸಮ್ಯಗ್ಮಿಥ್ಯಾತ್ವ ಮತ್ತು ಸಮ್ಯಕ್‌ತ್ವ ಎಂದು ಮೂರು ಇವೆ. ಚಾರಿತ್ರ ಮೋಹನೀಯದಲ್ಲಿ ಕ್ರೋಧ, ಮಾನ, ಮಾಯೆ ಮತ್ತು ಲೋಭ ಎಂಬ ನಾಲ್ಕು ಭೇದಗಳು ಇವೆ. ಇವು ನಾಲ್ಕೂ ಪ್ರತ್ಯೇಕವಾಗಿ ಅನಂತಾನುಬಂಧೀ, ಅಪ್ರತ್ಯಾಖ್ಯಾನ, ಪ್ರತ್ಯಾಖ್ಯಾನ ಮತ್ತು ಸಂಜ್ವಲನ ಎಂಬ ಭೇದಗಳಿಗೆ ಅನುಸರಿಸಿ ನಾಲ್ಕು ನಾಲ್ಕು ಪ್ರಕಾರವಾಗುತ್ತದೆ. ಹೀಗೆ ಇವು ಒಟ್ಟು ಹದಿನಾರು ಉತ್ತರ ಪ್ರಕೃತಿಗಳು ಆಗುತ್ತವೆ. ಇವುಗಳಲ್ಲಿ ಹಾಸ್ಯ, ರತಿ, ಅರತಿ, ಶೋಕ, ಭಯ, ಗ್ಲಾನಿ ಹಾಗೂ ಪುರುಷ, ಸ್ತ್ರೀ ಮತ್ತು ನಪುಂಸವೇದ ಈ ಒಂಭತ್ತು ನೋಕಷಾಯಗಳನ್ನು ಸೇರಿಸಿದರೆ ಮೋಹನೀಯ ಕರ್ಮದ ಸಮಸ್ತ ಉತ್ತರ ಪ್ರಕೃತಿಗಳು ಇಪ್ಪತ್ತೆಂಟು ಆಗುತ್ತವೆ. ಮೋಹನೀಯ ಕರ್ಮವು ಎಲ್ಲಕ್ಕೂ ಹೆಚ್ಚು ಪ್ರಬಲ ಹಾಗೂ ಪ್ರಭಾವಶಾಲಿಯಾಗಿ ಕಂಡು ಬರುತ್ತದೆ. ಇದು ಪ್ರತಿಯೊಂದು ಪ್ರಾಣಿಯ ಮಾನಸಿಕ ಜೀವನದಲ್ಲಿ ಅತ್ಯಂತ ವ್ಯಾಪಕ ಮತ್ತು ಅದರ ಲೋಕ-ಚಾರಿತ್ರ್ಯದ ನಿರ್ಮಾಣದಲ್ಲಿ ಸಮರ್ಥವೆಂದು ಸಿದ್ಧವಾಗುತ್ತದೆ. ಜೀವನದ ಕ್ರಿಯೆಗಳ ಆದಿ ಸ್ರೋತವು ಜೀವದ ಮನೋವೃತ್ತಿಯಾಗಿದೆ. ವಿಶುದ್ಧ ಮನೋವೃತ್ತಿ ಮತ್ತು ದೃಷ್ಟಿಗಳ ಹೆಸರೇ ಸಮ್ಯಗ್ದರ್ಶನವೆಂದಿದೆ. ಈ ದರ್ಶನದ ವಿಕಾರದ ತರ-ತಮಗಳಿಗನುಸರಿಸಿ ಅಗಣಿತ ಅವಸ್ಥೆಗಳು ಉಂಟಾಗುತ್ತವೆ. ಅವುಗಳನ್ನು ಮುಖ್ಯವಾಗಿ ಮೂರು ಭಾಗಗಳಲ್ಲಿ ವಿಭಾಗಿಸಲಾಗುತ್ತದೆ. ಅವುಗಳಲ್ಲಿ ಒಂದು ಮೂಢ ಅವಸ್ಥೆಯು ಇದರಲ್ಲಿ ವಸ್ತುವಿನ ಯಥಾರ್ಥ ಸ್ವರೂಪವನ್ನು ಗ್ರಹಣ ಮಾಡುವ ಯೋಗ್ಯತೆಯು ಸರ್ವಥಾ ಇರುವದಿಲ್ಲ; ಅಲ್ಲದೆ ವಸ್ತುವಿನ ವಿಪರೀತ ಭಾವವನ್ನು ಗ್ರಹಣ ಮಾಡುವ ಸಂಭವವಿರುತ್ತದೆ; ಇದು ದರ್ಶನ ಮೋಹನೀಯ ಕರ್ಮದ ಮಿಥ್ಯಾತ್ವ ಪ್ರಕೃತಿಯಾಗಿದೆ. ಎರಡನೆಯದು, ಯಾವುದರಲ್ಲಿ ಈ ಮಿಥ್ಯಾತ್ವ ಪ್ರಕೃತಿಯ ಜಟಿಲತೆಯು ಕ್ಷೀಣವಾಗಿ ಅದರಲ್ಲಿ ಸಮ್ಯಗ್‌ದೃಷ್ಟಿಯೂ ಸಹ ಪ್ರಾದುರ್ಭಾವ ಹೊಂದಿದ್ದರೆ ಆಗ ಅದು ದರ್ಶನ-ಮೋಹನೀಯ ಕರ್ಮದ ಮಿಶ್ರ ಇಲ್ಲವೆ ಸಮ್ಯಗ್ಮಿಥ್ಯಾತ್ವ ಪ್ರಕೃತಿ ಎನಿಸುತ್ತದೆ. ಇನ್ನು ಮೂರನೆಯದು, ಯಾವುದರಲ್ಲಿ ಮಿಥ್ಯಾತ್ವವು ಕ್ಷೀಣ

ವಾಗಿ ದೃಷ್ಟಿಯು ಶುದ್ಧವಾಗಿರುತ್ತದೆಯೋ, ಆದರೂ ಅದರಲ್ಲಿ ಕೆಲವೊಂದು ಚಾಂಚಲ್ಯ, ಮಾಲಿನ್ಯ ಮತ್ತು ಅಗಾಢತ್ವಗಳು ರೂಪುಗೊಂಡು ನಿಂತಿರುತ್ತವೆಯೋ ಅದಕ್ಕೆ ಸಮ್ಯಕ್ತ್ವ ಪ್ರಕೃತಿ ಎಂದು ಹೇಳುತ್ತಾರೆ. ಧಾರ್ಮಿಕ ಜೀವನವನ್ನು ತಿಳಿದುಕೊಳ್ಳು ವುದಕ್ಕಾಗಿ ಈ ಮೂರು ಮಾನಸಿಕ ಅವಸ್ಥೆಗಳ ಜ್ಞಾನವು ಬಹಳ ಅವಶ್ಯಕವಾಗಿದೆ ಯಾಕಂದರೆ ಮೂಲದಲ್ಲಿ ಇವೇ ಅವಸ್ಥೆಗಳು ಚಾರಿತ್ರವನ್ನು ಸದೋಷ ಮತ್ತು ನಿರ್ದೋಷಗೊಳಿಸುತ್ತವೆ. ಚಾರಿತ್ರದಲ್ಲಿ ಸ್ಪಷ್ಟ ವಿಕಾರವನ್ನು ಉತ್ಪನ್ನಮಾಡುವಂಥ ಮಾನಸಿಕ ಭಾವಗಳು ಅನಂತವಾಗಿವೆ. ಆದರೆ ನಾವು ಅವುಗಳನ್ನು ಎರಡು ಸುಸ್ಪಷ್ಟ ವಾದ ವರ್ಗಗಳಲ್ಲಿ ವಿಭಾಗಿಸಲು ಸಾಧ್ಯವಿದೆ—ಒಂದು ರಾಗವೆಂಬುದು. ಇದು ಪದಾರ್ಥ ದೆಡೆಗೆ ಮನಸ್ಸನ್ನು ಆಕರ್ಷಿಸುತ್ತದೆ ಮತ್ತು ಆಸಕ್ತಗೊಳಿಸುತ್ತದೆ. ಇದನ್ನು ಶಾಸ್ತ್ರ ದಲ್ಲಿ ಪೆಜ್ಜ (ಸಂಸ್ಕೃತ—ಪ್ರೇಯಸ್) ಎಂದು ಹೇಳಲಾಗಿದೆ, ಇನ್ನೊಂದು ದ್ವೇಷ ಎಂಬುದು. ಇದು ಪದಾರ್ಥದ ವಿಷಯದಲ್ಲಿ ಜುಗುಪ್ಸೆಯನ್ನು ಹುಟ್ಟಿಸುತ್ತದೆ. ಇವೇ ಎರಡು ಮೂಲ ಕಷಾಯಗಳು ಅಥವಾ ಕಷಾಯ ಭಾವಗಳು, ಇವುಗಳ ಪ್ರಭೇದಗಳ ರೂಪಗಳೇ ಕ್ರೋಧ, ಮಾನ, ಮಾಯಾ ಮತ್ತು ಲೋಭ ಈ ನಾಲ್ಕು ಕಷಾಯ ಗಳೆಂದು ಮನ್ನಿಸಲಾಗಿದೆ. ಇವುಗಳಲ್ಲಿ ಪ್ರತಿಯೊಂದರ ತೀವ್ರತೆ ಮತ್ತು ಮಂದತೆ ಗಳಿಗನುಸರಿಸಿ ಅಗಣಿತ ಭೇದಗಳು ಆಗುತ್ತವೆ. ಆದರೆ ಅನುಕೂಲತೆಗೆಂದು ನಾಲ್ಕು ಭೇದಗಳನ್ನು ಮಾತ್ರ ಮನ್ನಿಸಲಾಗಿದೆ. ಅವುಗಳನ್ನು ಭೌತಿಕ ದೃಷ್ಟಾಂತಗಳಿಂದ ವಿವರಿಸಲಾಗುತ್ತದೆ. ಅನಂತಾನುಬಂಧೀ ಕ್ರೋಧವು ಕಲ್ಲಿನಲ್ಲಿ ಕೊರೆದ ರೇಖೆಯಂತೆ ಬಹಳ ಸ್ಥಿರವಾಗಿರುತ್ತದೆ. ಅದರ ಅಪ್ರತ್ಯಾಖ್ಯಾನ ರೂಪವು ಭೂಮಿಯಲ್ಲಿ ಕೊರೆದ ರೇಖೆಯಂತೆ ಇರುವದು. ಪ್ರತ್ಯಾಖ್ಯಾನವು ಧೂಳಿಯಲ್ಲಿ ಕೊರೆದ ರೇಖೆಗೆ ಸಮ ವಾದುದು ಸಂಜ್ವಲನವು ಜಲದಲ್ಲಿ ಕೊರೆದ ರೇಖೆಯಂತಿರುವುದು ಇವು ಕ್ರಮ ದಿಂದ ತೀವ್ರತೆಯಿಂದ ಮಂದವಾಗುತ್ತ ಹೋಗುತ್ತವೆ. ಇದೇ ಪ್ರಕಾರ ಮಾನದ ನಾಲ್ಕು ಅವಸ್ಥೆಗಳು ಅದರ ಕಠೋರತೆಗನುಸರಿಸಿ ಪಾಷಾಣ, ಅಸ್ಥಿ, ಕಾಷ್ಠ ಮತ್ತು ವೇತ್ರಗಳಿಗೆ ಸಮಾನವಾಗಿವೆ. ಮಾಯೆಯಲ್ಲಿ ಅದರ ವಕ್ರತೆ, ಜಟಿಲತೆ ಮತ್ತು ಹೀನತೆಗಳಿಗನುಸರಿಸಿ, ಬಿದರಿನ ಬೇರು, ಆಡಿನಕೋಡು, ಗೋಮೂತ್ರ ಮತ್ತು ಕುಡ ಗೋಲುಗಳ ಸಮಾನ ವಿವಿಧ ಸ್ವರೂಪದ ತರಗತಿಗಳನ್ನು ಸ್ವೀಕರಿಸಲಾಗಿದೆ ಹಾಗೆಯೇ ಲೋಭ ಕಷಾಯದಲ್ಲಿಯೂ ವಿವಿಧ ಬಣ್ಣಗಳ ಉದಾಹರಣೆಗಳಿಂದ ತೀವ್ರತೆಯಿಂದ ಮಂದತೆಯ ಕಡೆಗೆ ಸಾಗುವ ಅನಂತಾನುಬಂಧೀ ಮೊದಲಾದ ನಾಲ್ಕು ನಾಲ್ಕು ಅವಸ್ಥೆ ಗಳುಂಟಾಗುತ್ತವೆ.

'ನೋ' ಎಂಬುದರ ಅರ್ಥವು ಈಷತ್ ಅಥವಾ ಅಲ್ಪ ಎಂದಾಗುತ್ತದೆ. ಅದ ಕ್ಕನುಸರಿಸಿ ನೋಕಷಾಯವೆಂದು ಯಾವ ಮಾನಸಿಕ ವಿಕಾರಗಳನ್ನು ಹೇಳಿದೆಯೋ ಅವು ಮೇಲೆ ಹೇಳಿದ ಕಷಾಯಗಳ ಪ್ರಭೇದಗಳಾಗಿದ್ದರೂ ತಮ್ಮ ವಿಶೇಷತೆ ಹಾಗೂ ಜೀವನದಲ್ಲಿ ಸ್ಪಷ್ಟ ಬೇರೆ ಸ್ವರೂಪವನ್ನು ತೋರಿಸುವುದರಿಂದ ಅವುಗಳನ್ನು ಇಲ್ಲಿ ಬೇರೆ

ಯಾಗಿ ಗಮನಿಸಲಾಗಿದೆ. ಈ ನೋಕಷಾಯಗಳ ಸ್ವರೂಪವು ಅವುಗಳ ಹೆಸರು ಗಳಿಂದಲೇ ಸ್ಪಷ್ಟವಾಗುತ್ತದೆ. ಈ ಪ್ರಕಾರ ಮೋಹನೀಯ ಕರ್ಮದ ಇಪ್ಪತ್ತೆಂಟು ಉತ್ತರ ಪ್ರಕೃತಿಗಳಲ್ಲಿ ಒಂದು ವಿಶೇಷ ಪ್ರಕಾರದ ವ್ಯವಸ್ಥೆಗನುಸರಿಸಿ ಆ ಎಲ್ಲ ಮಾನ ಸಿಕ ಅವಸ್ಥೆಗಳು ಸಮಾವೇಶವಾಗುತ್ತವೆ- ಇವುಗಳನ್ನು ಬೇರೆ ಕಡೆಗೆ ರಸ ಮತ್ತು ಭಾವ ಎಂಬ ಹೆಸರುಗಳಿಂದ ಸಂಕ್ಷೇಪವಾಗಿ ಇಲ್ಲವೆ ವಿಸ್ತಾರವಾಗಿ ವರ್ಣಿಸಿದ್ದು ಕಂಡು ಬರುತ್ತದೆ. ಇದೇ ಮೋಹನೀಯ ಕರ್ಮದ ತೀವ್ರ ಮತ್ತು ಮಂದ ಅವಸ್ಥೆಗಳಿಗನು ಸರಿಸಿ ಅವುಗಳ ಆಧ್ಯಾತ್ಮಿಕ ಭೂಮಿಕೆಗಳು ವಿಕಸಿತಗೊಳ್ಳುತ್ತವೆ. ಇವುಗಳಿಗೆ ಗುಣ ಸ್ಥಾನಗಳೆಂದು ಹೇಳುತ್ತಾರೆ. ಇದರ ವಿವರಣೆಯನ್ನು ಮುಂದೆ ಮಾಡಲಾಗುತ್ತದೆ.

**ಅಂತರಾಯ ಕರ್ಮ :—**

ಯಾವ ಕರ್ಮವು ಜೀವದ ಬಾಹ್ಯ ಪದಾರ್ಥಗಳ ಆದಾನ-ಪ್ರದಾನ ಮತ್ತು ಭೋಗೋಪಭೋಗ ಅದರಂತೆಯೇ ಸ್ವಕೀಯ ಪರಾಕ್ರಮದ ವಿಕಾಸದಲ್ಲಿ ವಿಘ್ನ ಇಲ್ಲವೆ ಬಾಧೆಯನ್ನುಂಟು ಮಾಡುತ್ತದೆಯೋ ಅದಕ್ಕೆ ಅಂತರಾಯ ಕರ್ಮ ಎಂದು ಹೇಳ ಲಾಗಿದೆ. ಇದರ ಉತ್ತರ ಪ್ರಕೃತಿಗಳು ದಾನಾಂತರಾಯ, ಲಾಭಾಂತರಾಯ, ಭೋಗಾಂತರಾಯ, ಉಪಭೋಗಾಂತರಾಯ ಮತ್ತು ವೀರ್ಯಾಂತರಾಯ ಎಂದು ಐದು ವಿಧವಾಗಿವೆ. ಇವು ಕ್ರಮವಾಗಿ ಜೀವವು ದಾನ ಮಾಡುವಿಕೆ, ಲಾಭ ತಕ್ಕೊಳ್ಳುವಿಕೆ, ಭೋಗೋಪಭೋಗ ಪದಾರ್ಥಗಳ ಸುಖವನ್ನು ಒಮ್ಮೆ ಅಥವಾ ಹಲವು ಸಲ ತಕ್ಕೊಳ್ಳುವಿಕೆ, ಯಾವುದೇ ಪ್ರಕಾರದ ಪರಿಸ್ಥಿತಿಯನ್ನು ಎದುರಿಸಲು ಯೋಗ್ಯ ಸಾಮರ್ಥ್ಯ ರೂಪ ಗುಣಗಳ ವಿಕಾಸ ಇವುಗಳಲ್ಲಿ ಬಾಧಕವಾಗುತ್ತವೆ.

**ವೇದನೀಯ ಕರ್ಮ :—**

ಯಾವ ಕರ್ಮವು ಜೀವಕ್ಕೆ ಸುಖ ಅಥವಾ ದುಃಖ ರೂಪ ವೇದನೆಯನ್ನು ಉತ್ಪನ್ನ ಮಾಡುವುದೋ ಅದಕ್ಕೆ ವೇದನೀಯ ಎಂದು ಹೇಳುತ್ತಾರೆ. ಇದರ ಉತ್ತರ ಪ್ರಕೃತಿಗಳು ಸಾತಾವೇದನೀಯ ಮತ್ತು ಅಸಾತಾವೇದನೀಯ ಎಂದು ಎರಡು ವಿಧವಾಗಿ ಇವೆ. ಸಾತಾವೇದನೀಯವು ಜೀವಕ್ಕೆ ಸುಖವನ್ನು ಉಂಟು ಮಾಡುತ್ತದೆ. ಅಸಾತಾವೇದನೀಯವು ದುಃಖದ ಅನುಭವವನ್ನುಂಟು ಮಾಡುತ್ತದೆ. ಇಲ್ಲಿ ಅಂತ ರಾಯ ಕರ್ಮದ ಭೋಗ ಮತ್ತು ಉಪಭೋಗ ಪ್ರಕೃತಿಗಳು ಹಾಗೆಯೇ ವೇದನೀ ಯದ ಸಾತಾ-ಅಸಾತಾ ಪ್ರಕೃತಿಗಳ ಫಲೋದಯಗಳಲ್ಲಿ ಭೇದ ಮಾಡುವ ಅವಶ್ಯ ಕತೆಯು ಇದೆ. ಯಾವ ಮನುಷ್ಯನಿಗೆ ಊಟ, ಅರಿವೆ, ಮನೆ ಮೊದಲಾದವುಗಳು ಪ್ರಾಪ್ತವಾಗುವುದಿಲ್ಲವೋ ಅವನಿಗೆ ಲಾಭಾಂತರಾಯ ಕರ್ಮವು ಉದಯವಾಗಿದೆ ಯೆಂದು ಹೇಳಬಹುದು. ಇವೆಲ್ಲ ಲಭಿಸಿದ್ದರೂ ಕೂಡ ಯಾವುದಾದರೊಂದು ಪರಿಸ್ಥಿ ತಿಗೆ ವಶನಾಗಿ ಅವನು ಅವುಗಳ ಭೋಗವನ್ನು ಮಾಡಲು ಸಾಧ್ಯವಾಗದೆ ಹೋದರೆ

ಅವನಿಗೆ ಭೋಗ-ಉಪಭೋಗಾಂತರಾಯ ಕರ್ಮದ ಉದಯವಾಗಿದೆಯೆಂದು ಮನ್ನಿಸ ಲಾಗುವುದು. ಇನ್ನು ಈ ಎಲ್ಲ ವಸ್ತುಗಳು ಲಭಿಸಿ, ಅವುಗಳನ್ನು ಭೋಗಿಸಿಯೂ ಸುಖ ವಾಗದೆ ಇದ್ದರೆ ಮರಳಿ ದುಃಖದ ಅನುಭವವೇ ಆಗುತ್ತಿದ್ದರೆ ಅದು ಅಸಾತಾವೇದ ನೀಯ ಕರ್ಮದ ಫಲವಾಗಿದೆ. ಒಂದು ವ್ಯಕ್ತಿಗೆ ಲಾಭಾಂತರಾಯ ಕರ್ಮದ ಉಪಶ ಮನದಿಂದ ಭೋಗ್ಯ ವಸ್ತುಗಳೆಲ್ಲ ಪ್ರಾಪ್ತವಾಗಿರುತ್ತವೆ. ಆದರೆ ಅವುಗಳಿಂದ ಸುಖ ವನ್ನು ಅವನೆಂದೂ ಹೊಂದಿರುವುದಿಲ್ಲ. ಯಾಕಂದರೆ ಅವನಿಗೆ ಆಗ ಸಾತಾವೇದ ನೀಯ ಕರ್ಮದ ಉದಯವಿರುತ್ತದೆ. ಇನ್ನು ಅಸಾತಾವೇದನೀಯ ಕರ್ಮದ ಉದಯ ವಿದ್ದರೆ ಆ ವಸ್ತುಗಳಿಂದಲೂ ಅವನಿಗೆ ದುಃಖವೇ ಆಗುತ್ತದೆ.

### ಆಯು ಕರ್ಮ :—

ಯಾವ ಕರ್ಮದ ಉದಯದಿಂದ ಜೀವಕ್ಕೆ ದೇವ, ನರಕ, ಮನುಷ್ಯ ಅಥವಾ ತಿರ್ಯಂಚ ಗತಿಗಳಲ್ಲಿ ಆಯುಷ್ಯವು ನಿರ್ಧಾರಿತವಾಗುತ್ತದೆಯೋ ಅದು ಆಯು ಕರ್ಮ ವಾಗಿದೆ. ಇದರ ಉತ್ತರ ಪ್ರಕೃತಿಗಳು ದೇವಾಯು, ನರಕಾಯು, ಮನುಷ್ಯಾಯು ಮತ್ತು ತಿರ್ಯಂಚಾಯು ಎಂದು ನಾಲ್ಕು ಇವೆ.

### ಗೋತ್ರ ಕರ್ಮ :—

ಲೋಕ ವ್ಯವಹಾರಕ್ಕೆ ಸಂಬಂಧಿಸಿದ ಆಚರಣೆಗೆ ಗೋತ್ರವೆಂದು ಮನ್ನಿಸಲಾ ಗಿದೆ. ಯಾವ ಕುಲದಲ್ಲಿ ಲೋಕಪೂಜಿತ ಆಚರಣೆಯ ಪರಂಪರೆಯು ಇದೆಯೋ ಅದಕ್ಕೆ ಉಚ್ಚಗೋತ್ರವೆಂದೂ, ಯಾವುದರಲ್ಲಿ ಲೋಕನಿಂದಿತ ಆಚರಣೆಯ ಪರಂಪ ರೆಯು ಇದೆಯೋ ಅದಕ್ಕೆ ನೀಚಗೋತ್ರವೆಂದೂ ಹೆಸರುಗಳನ್ನು ಕೊಡಲಾಗಿದೆ. ಇಂಥ ಕುಲಗಳಲ್ಲಿ ಜನ್ಮವನ್ನು ಒದಗಿಸುವ ಕರ್ಮವು ಗೋತ್ರಕರ್ಮವೆನಿಸುತ್ತದೆ. ಇದಕ್ಕೆ ಉಚ್ಚಗೋತ್ರ ಮತ್ತು ನೀಚ ಗೋತ್ರಗಳೆಂದು ಎರಡು ಮಾತ್ರ ಉತ್ತರ ಪ್ರಕೃತಿಗಳು ಆಗುತ್ತವೆ. ಆದರೆ ಗೋತ್ರ ಶಬ್ದವನ್ನು ವೈದಿಕ ಪರಂಪರೆಯಲ್ಲಿಯೂ ಬಳಸಲಾಗು ತ್ತದೆ. ಆದರೆ ಜೈನ ಕರ್ಮ ಸಿದ್ಧಾಂತದಲ್ಲಿ ಅದರ ಉಚ್ಚತೆ ಮತ್ತು ನೀಚತೆಗಳಲ್ಲಿ ಆಚರಣೆಯ ಪ್ರಧಾನತೆಯನ್ನು ಸ್ವೀಕರಿಸಲಾಗಿದೆ.

### ನಾಮ ಕರ್ಮ :—

ಯಾವ ಪ್ರಕಾರ ಮೋಹನೀಯ ಕರ್ಮದಿಂದ ವಿಶೇಷ ರೂಪದಿಂದ ಪ್ರಾಣಿಗಳ ಮಾನಸಿಕ ಗುಣಗಳೂ ವಿಕಾರಗಳೂ ನಿರ್ಮಾಣವಾಗುತ್ತವೆಯೋ, ಅದೇ ಪ್ರಕಾರ ಅದರ ಶಾರೀರಿಕ ಗುಣಗಳ ನಿರ್ಮಾಣವು ನಾಮಕರ್ಮದ ವಿಶೇಷ ಸಾಮರ್ಥ್ಯದಿಂದ ಆಗುತ್ತದೆ. ನಾಮ ಕರ್ಮದ ಮುಖ್ಯ ಭೇದಗಳು ೪೨ ; ಹಾಗೂ ಅವುಗಳ ಉಪಭೇದ ಗಳ ಅಪೇಕ್ಷೆಯಿಂದ ೯೩ ಉತ್ತರ ಪ್ರಕೃತಿಗಳು ಆಗುತ್ತವೆಂದು ಮನ್ನಿಸಲಾಗಿದೆ.

ಅವು ಈ ಪ್ರಕಾರ ಇವೆ :—

(೧) ನಾಲ್ಕು ಗತಿ (ನರಕ, ತಿರ್ಯಂಚ, ಮನುಷ್ಯ ಮತ್ತು ದೇವ), (೨) ಐದು ಜಾತಿ (ಏಕೇಂದ್ರಿಯ, ದ್ವೀಂದ್ರಿಯ, ತ್ರೀಂದ್ರಿಯ, ಚತುರಿಂದ್ರಿಯ, ಪಂಚೇಂದ್ರಿಯ), (೩) ಐದು ಶರೀರ (ಔದಾರಿಕ, ವೈಕ್ರಿಯಿಕ, ಆಹಾರಕ, ತೈಜಸ ಮತ್ತು ಕಾರ್ಮಣ), (೪-೫) ಔದಾರಿಕಾದಿ ಐದು ಪ್ರಕಾರದ ಶರೀರಗಳ ಐದು ಬಂಧನ ಮತ್ತು ಅವುಗಳ ಐದು ಸಂಘಾತ, (೬) ಆರು ಶರೀರ ಸಂಸ್ಥಾನ (ಸಮಚತುರಸ್ರ, ನ್ಯಗ್ರೋಧ ಪರಿಮಂಡಲ, ಸ್ವಾತಿ, ಕುಬ್ಜ, ವಾಮನ ಮತ್ತು ಹುಂಡ), (೭) ಮೂರು ಶರೀರಾಂಗೋಪಾಂಗ (ಔದಾರಿಕ, ವೈಕ್ರಿಯಿಕ ಮತ್ತು ಆಹಾರಕ), (೮) ಆರು ಸಂಹನನ (ವಜ್ರವೃಷಭನಾರಾಚ, ವಜ್ರನಾರಾಚ, ನಾರಾಚ, ಅರ್ಧನಾರಾಚ, ಕೀಲಿತ ಮತ್ತು ಅಸಂಪ್ರಾಪ್ತಾಸ್ರಪಾಟಿಕಾ), (೯) ಐದು ವರ್ಣ (ಕೃಷ್ಣ, ನೀಲ, ರಕ್ತ, ಹರಿತ, ಶುಕ್ಲ), (೧೦) ಎರಡು ಗಂಧ (ಸುಗಂಧ ಮತ್ತು ದುರ್ಗಂಧ), (೧೧) ಐದು ರಸ (ಕಾರ, ಕಹಿ, ಹುಳಿ, ಸೀ ಮತ್ತು ಉಪ್ಪು), (೧೨) ಎಂಟು ಸ್ಪರ್ಶ (ಕಠೋರ, ಮೃದು, ಗುರು, ಲಘು, ಸ್ನಿಗ್ಧ, ರುಕ್ಷ. ಶೀತ ಮತ್ತು ಉಷ್ಣ), (೧೩) ನಾಲ್ಕು ಆನುಪೂರ್ವೀ (ನರಕಗತಿಯೋಗ್ಯ, ತಿರ್ಯಗ್ಗತಿ ಯೋಗ್ಯ, ಮನುಷ್ಯಗತಿ ಯೋಗ್ಯ ಮತ್ತು ದೇವಗತಿಯೋಗ್ಯ, (೧೪) ಅಗುರು-ಲಘು, (೧೫) ಉಪಘಾತ, (೧೬) ಪರಘಾತ, (೧೭) ಉಚ್ಛ್ವಾಸ, (೧೮) ಆತಪ, (೧೯) ಉದ್ಯೋತ, (೨೦) ಎರಡು ವಿಹಾಯೋಗತಿ (ಪ್ರಶಸ್ತ ಮತ್ತು ಅಪ್ರಶಸ್ತ), (೨೧) ತ್ರಸ, (೨೨) ಸ್ಥಾವರ, (೨೩) ಬಾದರ, (೨೪) ಸೂಕ್ಷ್ಮ, (೨೫) ಪರ್ಯಾಪ್ತ, (೨೬) ಅಪರ್ಯಾಪ್ತ, (೨೭) ಪ್ರತ್ಯೇಕ ಶರೀರ, (೨೮) ಸಾಧಾರಣ ಶರೀರ, (೨೯) ಸ್ಥಿರ, (೩೦) ಅಸ್ಥಿರ, (೩೧) ಶುಭ (೩೨) ಅಶುಭ, (೩೩) ಸುಭಗ, (೩೪) ದುರ್ಭಗ, (೩೫) ಸುಸ್ವರ, (೩೬) ದುಃಸ್ವರ, (೩೭) ಆದೇಯ, (೩೮) ಅನಾದೇಯ, (೩೯) ಯಶಃಕೀರ್ತಿ, (೪೦) ಅಯಶಃಕೀರ್ತಿ, (೪೧) ನಿರ್ಮಾಣ ಮತ್ತು (೪೨) ತೀರ್ಥಂಕರ.

ಮೇಲೆ ಹೇಳಿದ ಕರ್ಮ ಪ್ರಕೃತಿಗಳಲ್ಲಿ ಹೆಚ್ಚಿನವುಗಳ ಸ್ವರೂಪವು ಅವುಗಳ ಹೆಸರುಗಳಿಂದ ಇಲ್ಲವೆ ಮೊದಲು ಕೊಟ್ಟ ವಿವರಣೆಗಳಿಂದ ಸ್ಪಷ್ಟವಾಗಿ ಬಿಡುತ್ತದೆ. ಉಳಿದವುಗಳ ಸ್ವರೂಪವುಈ ಪ್ರಕಾರ ಇರುತ್ತದೆ :—ಐದು ಪ್ರಕಾರದ ಶರೀರಗಳಿಗೆ, ಐದು ಪ್ರಕಾರದ ಬಂಧನಗಳನ್ನು ಹೇಳಿತಷ್ಟೆ. ಅವುಗಳ ಕರ್ತವ್ಯವು ಇಂತಿದೆ— ಶರೀರ ನಾಮಕರ್ಮವು ಗ್ರಹಣ ಮಾಡಿದ ಪುದ್ಗಲ ಪರಮಾಣುಗಳಲ್ಲಿ ಪರಸ್ಪರ ಬಂಧನ ಮತ್ತು ಸಂಶ್ಲೇಷಗಳನ್ನು ಇದು ಉತ್ಪನ್ನ ಮಾಡುತ್ತದೆ. ಇದರ ಅಭಾವ ದಿಂದ ಆ ಪರಮಾಣು ಪುಂಜವು ರತ್ನರಾಶಿಯಂತೆ ವಿರಲ (ಪೃಥಕ್) ಆಗುತ್ತದೆ. ಬಂಧನ ಪ್ರಕೃತಿಯಿಂದ ಉತ್ಪನ್ನವಾದ ಸಂಶ್ಲಿಷ್ಟವು ಶರೀರದಲ್ಲಿ ಸಂಘಾತ ಅರ್ಥಾತ್ ನಿಶ್ಛಿದ್ರತ್ವವನ್ನು ತಂದುಕೊಡುವುದು ಸಂಘಾತ ಪ್ರಕೃತಿಯ ಕಾರ್ಯವಾಗಿದೆ.

ಸಂಸ್ಥಾನ ನಾಮ ಕರ್ಮದ ಕಾರ್ಯವು ಶರೀರದ ಆಕೃತಿಯನ್ನು ನಿರ್ಮಾಣಮಾಡುವುದಾಗಿದೆ. ಯಾವ ಶರೀರದ ಸಮಗ್ರ ಭಾಗವು ಉಚಿತ ಪ್ರಮಾಣದಲ್ಲಿ ನಿರ್ಮಾಣವಾಗುವುದೋ ಅದಕ್ಕೆ ಸಮಚತುರಸ್ರ ಎಂದು ಹೇಳಲಾಗುವುದು. ಯಾವ ಶರೀರವು ನಾಭಿಯಿಂದ ಮೇಲೆ ಇರುವ ಭಾಗವು ಅತಿ ಸ್ಥೂಲವೂ ಕೆಳಗಿನ ಭಾಗವು ಅತಿ ಲಘುವೂ ಇರುವುದೋ ಅದಕ್ಕೆ ನ್ಯಗ್ರೋಧಪರಿಮಂಡಲ (ಅರ್ಥಾತ್ ವಟವೃಕ್ಷಾಕಾರ) ಸಂಸ್ಥಾನ ಎಂದು ಹೇಳುತ್ತಾರೆ. ಇದಕ್ಕೆ ವಿರೋಧವಾಗಿ ಮೇಲ್ಭಾಗವು ಅತ್ಯಂತ ಲಘುವೂ ಕೆಳಭಾಗವು ಅತ್ಯಂತ ವಿಶಾಲವಾಗಿದ್ದರೆ ಅದು ಸ್ವಾತಿ (ಅರ್ಥಾತ್ ವಲ್ಮೀಕಿಯ ಆಕಾರದ್ದು) ಸಂಸ್ಥಾನವೆಂದು ತಿಳಿಯಲಾಗುತ್ತದೆ. ಗಿಡ್ಡ ಶರೀರಕ್ಕೆ ಕುಬ್ಜವೆಂದೂ, ಸರ್ವಾಂಗ ಹ್ರಸ್ವ ಶರೀರಕ್ಕೆ ವಾಮನವೆಂದೂ, ಸರ್ವ ಅಂಗೋಪಾಂಗಗಳಲ್ಲಿ ವಿಷಮಾಕಾರವಿದ್ದರೆ ಹುಂಡ ಸಂಸ್ಥಾನವೆಂದೂ ಹೇಳಲಾಗುತ್ತದೆ. ಇವೇ ಆರು ಭಿನ್ನ ಶರೀರ–ಆಕೃತಿಗಳನ್ನು ನಿರ್ಮಾಣ ಮಾಡುವಂಥ ಆರು ಸಂಸ್ಥಾನ ಪ್ರಕೃತಿಗಳೆಂದು ಸ್ವೀಕರಿಸಲಾಗಿದೆ. ಮೇಲೆ ಹೇಳಿದ ಔದಾರಿಕಾದಿ ಐದು ಶರೀರ–ಪ್ರಕೃತಿಗಳಲ್ಲಿಯೇ ತೈಜಸ ಮತ್ತು ಕಾರ್ಮಣ ಈ ಎರಡು ಪ್ರಕೃತಿಗಳಿಂದ ಯಾವ ಬೇರೆ ಶರೀರಗಳಾಗಲಿ, ಅಂಗೋಪಾಂಗಗಳಾಗಲಿ ನಿರ್ಮಾಣವಾಗುವುದಿಲ್ಲ, ಅದಕ್ಕಾಗಿ ಇವೆರಡನ್ನು ಬಿಟ್ಟು ಉಳಿದ ಅಂಗೋಪಾಂಗ ನಾಮ ಕರ್ಮದ ಮೂರೇ ಪ್ರಕೃತಿಗಳನ್ನು ಹೇಳಿದೆ. ವೃಷಭ ಎಂಬುದರ ಅರ್ಥವು ಅಸ್ಥಿ ಹಾಗೂ ನಾರಾಚದ ಅರ್ಥವು ಕೀಲ ಎಂದಾಗುತ್ತದೆ. ಆದರಿಂದ ಯಾವ ಶರೀರದ ಅಸ್ಥಿಗಳೂ ಅವುಗಳನ್ನು ಜೋಡಿಸುವ ಕೀಲುಗಳೂ ವಜ್ರದಂತೆ ದೃಢವಾಗಿರುವವೋ, ಆ ಶರೀರವು ವಜ್ರ–ವೃಷಭ–ನಾರಾಚ ಸಂಹನನ ಎನಿಸಿಕೊಳ್ಳುತ್ತದೆ. ವಜ್ರನಾರಾಚ ಸಂಹನನದಲ್ಲಿ ಕೀಲಗಳು ಮಾತ್ರ ವಜ್ರದಂತೆ ಭದ್ರವಾಗಿರುತ್ತವೆ ನಾರಾಚ ಸಂಹನನದಲ್ಲಿ ಕೀಲಗಳಂತೂ ಇರುತ್ತವೆ. ಆದರೆ ವಜ್ರದಂತೆ ದೃಢವಾಗಿರುವುದಿಲ್ಲ. ಅರ್ಧನಾರಾಚ ಸಂಹನನ ಶರೀರದಲ್ಲಿ ಕೀಲಗಳು ಪೂರ್ಣವಿರುವದಿಲ್ಲ, ಅರ್ಧವಾಗಿರುತ್ತವೆ. ಯಾವ ಶರೀರದಲ್ಲಿ ಎಲುವುಗಳನ್ನು ಜೋಡಿಸಿದ ಸ್ಥಾನಗಳಲ್ಲಿ ಎರಡು ಮತ್ತು ಅಲ್ಪ ಕೀಲಗಳು ಇದ್ದರೆ ಅದು ಕೀಲಕ ಸಂಹನನವೆನಿಸುತ್ತದೆ. ಯಾವುದರಲ್ಲಿ ಎಲವುಗಳ ಬಂಧವು ಕೀಲಗಳಿಂದ ಆಗಿರದೆ ಸ್ನಾಯು, ಮಾಂಸಾದಿಗಳಿಂದ ಅಂಟಿ ಸಂಘಟಿತವಾಗಿದ್ದರೆ ಅದನ್ನು ಅಸಂಪ್ರಾಪ್ತಾಸೃಪಾಟಿಕಾ ಸಂಹನನವೆಂದು ಹೇಳಿದೆ. ಈ ಆರು ಪ್ರಕಾರದ ಶರೀರ ಸಂಹನನಗಳನ್ನು ನಿರ್ಮಿಸುವುದಕ್ಕೆಂದು ಈ ಆರು ಪ್ರಕೃತಿಗಳನ್ನು ಸ್ವೀಕರಿಸಲಾಗಿದೆ. ಮೃತ್ಯುಕಾಲದಲ್ಲಿ ಜೀವದ ಪೂರ್ವ ಶರೀರದ ಆಕಾರವು ವಿನಾಶವಾಗಲು ಜೀವವನ್ನು ಹೊಸಗತಿಯ ಕಡೆಗೆ ತಕ್ಕೊಂಡು ಹೋಗುವ ಶಕ್ತಿಯನ್ನು ಪೂರೈಸುವ ಪ್ರಕೃತಿಯು ಆನುಪೂರ್ವಿ ಎನಿಸುತ್ತದೆ. ಇದರಲ್ಲಿ ಗತಿಗನುಸರಿಸಿ ನಾಲ್ಕು ಭೇದಗಳು ಇವೆ. ದೇಹದ ಅಂಗ ಪ್ರತ್ಯಂಗಗಳ ಇಂಥ ರಚನೆಯು ಸ್ವತಃ ಆ ದೇಹಧಾರೀ ಜೀವಕ್ಕೆ ಕ್ಲೇಶದಾಯಕವಾದರೆ ಅದಕ್ಕೆ ಉಪಘಾತ ; ಮತ್ತು ಅದರಿಂದ ಎರಡನೆಯವರಿಗೆ ಕ್ಲೇಶವು ಉಂಟಾಗುವಂತಿದ್ದರೆ

ಅದಕ್ಕೆ ಪರಘಾತ ಎಂದು ಹೇಳಲಾಗಿದೆ. ಈ ಪ್ರವೃತಿಗಳನ್ನು ಉತ್ಪನ್ನಗೊಳಿಸು ವಂಥ ಪ್ರಕೃತಿಯ ಹೆಸರುಗಳೂ ಸಹ ಉಪಘಾತ ಮತ್ತು ಪರಘಾತಗಳೆಂದಿವೆ. ದೊಡ್ಡ ಕೋಡು, ಉದ್ದ ಮೊಲೆ, ವಿಶಾಲ ಡೊಳ್ಳ ಹೊಟ್ಟೆ, ಪಿತ್ತ, ಕಫ ಮೊದಲಾದ ದೋಷ ಗಳು ಉಪಘಾತ ಕರ್ಮೋದಯದಿಂದ ಆಗುತ್ತವೆ. ಹಾಗೆಯೇ ಹಾವಿನ ಹಲ್ಲುಗಳು, ಚೇಳಿನ ಕೊಂಡಿಯೊಳಗಿನ ವಿಷ, ಸಿಂಹ-ವ್ಯಾಘ್ರಗಳ ಉಗುರು ದಾಡೆಗಳು ಪರಘಾತ ಕರ್ಮೋದಯದ ಉದಾಹರಣೆಗಳಾಗಿವೆ. ಆತಪದ ಅರ್ಥವು ಉಷ್ಣತಾ ಸಹಿತ ಮತ್ತು ಉದ್ಯೋತದ ಅರ್ಥವು ಉಷ್ಣತಾ ರಹಿತ ಪ್ರಕಾಶ ಎಂದಾಗುತ್ತದೆ. ಇವು ಗಳಿಗೆ ಉದಾಹರಣೆಯೆಂದು ಸೂರ್ಯ, ಚಂದ್ರರನ್ನು ಸ್ವೀಕರಿಸಬಹುದು. ಜೀವ-ಶರೀರಗಳಲ್ಲಿ ಈ ಧರ್ಮಗಳನ್ನು ಪ್ರಕಟಗೊಳಿಸುವಂಥ ಪ್ರಕೃತಿಗಳಿಗೆ ಆತಪ ಮತ್ತು ಉಪಘಾತಗಳೆಂದು ಹೇಳಿದೆ. ಕ್ರಮದಿಂದ ಸೂರ್ಯಮಂಡಲವರ್ತಿ ಪೃಥ್ವೀಕಾಯಿಕ ಶರೀರ ಮತ್ತು ಖದ್ಯೋತ ಎನ್ನಲಾಗುವದು. ಸ್ಥಾನಾಂತರಣದ ಹೆಸರು ಗತಿ ಎಂದಿದೆ. ಇದು ವಿಹಾಯಸ್ ಅರ್ಥಾತ್ ಆಕಾಶ-ಅವಕಾಶಗಳಲ್ಲಿ ನಡೆಯುವಂಥದು. ಕೆಲ ವೊಂದು ಜೀವಗಳ ಗತಿಯನ್ನು ಪ್ರಶಸ್ತವೆಂದು ಮನ್ನಿಸಲಾಗಿದೆ. ಆನೆ, ಹಂಸ ಮೊದಲಾದವುಗಳ ಗತಿಯು ಸುಂದರವಾಗಿರುತ್ತದೆ, ಉತ್ತಮವಾಗಿರುತ್ತದೆ. ಹಾಗೆಯೇ ಕತ್ತೆ, ಒಂಟೆಗಳ ನಡಿಗೆಯು ಒಳ್ಳೆಯದಿರುವುದಿಲ್ಲ. ಅದು ಅಪ್ರಶಸ್ತವೆನಿಸುತ್ತದೆ. ಈ ಎರಡು ಪ್ರಕಾರದ ಗತಿಗಳನ್ನು ವಿಧಿಸುವಂಥ ಪ್ರಶಸ್ತ ಮತ್ತು ಅಪ್ರಶಸ್ತ ವಿಹಾ ಯೋಗತಿ ಎಂಬ ಹೆಸರಿನ ಕರ್ಮ ಪ್ರಕೃತಿಗಳನ್ನು ಮನ್ನಿಸಲಾಗಿದೆ. ಯಾವುದರ ಇಂದ್ರಿಯ ಮೊದಲಾದ ಪುದ್ಗಲ ರಚನೆಯು ಪೂರ್ಣಗೊಂಡಿರುವುದೋ ಇಲ್ಲವೆ ಪೂರ್ಣ ಗೊಳ್ಳುವಂತೆ ಇರುವುದೋ ಅದು ಪರ್ಯಾಪ್ತ ಶರೀರವು. ಯಾವುದು ಪುದ್ಗಲ ರಚನೆಯು ಪೂರ್ಣವಾಗುವ ಪೂರ್ವದಲ್ಲಿ ಮರಣವನ್ನು ಹೊಂದುವಂಥದಿರುವುದೋ ಅದು ಅಪರ್ಯಾಪ್ತ ಶರೀರವಾಗಿದೆ. ಈ ಎರಡು ಭಿನ್ನ ಭಿನ್ನ ಪ್ರವೃತ್ತಿಗಳನ್ನು ವಿಧಿಸುವಪರ್ಯಾಪ್ತ ಮತ್ತು ಅಪರ್ಯಾಪ್ತ ಎಂಬ ಪ್ರಕೃತಿಗಳನ್ನು ಮನ್ನಿಸಲಾಗಿವೆ. ಯಾವ ಕರ್ಮದ ಉದಯದಿಂದ ಶರೀರದಲ್ಲಿ ರಸ, ರಕ್ತ, ಮಾಂಸ, ಮೇದ, ಮಜ್ಜಾ, ಅಸ್ಥಿ ಮತ್ತು ಶುಕ್ರ ಈ ಧಾತುಗಳಲ್ಲಿ ಸ್ಥಿರತೆಯು ಉತ್ಪನ್ನವಾಗುವುದೋ ಅದಕ್ಕೆ ಸ್ಥಿರ; ಮತ್ತು ಯಾವುದರಿಂದ ಆ ಧಾತುಗಳು ಕ್ರಮದಿಂದ ವಿಪರಿವರ್ತನವನ್ನು ಹೊಂದುವವೋ ಅದರ ಹೆಸರು ಅಸ್ಥಿರ ಪ್ರಕೃತಿ ಎಂದು ಇರುತ್ತದೆ. ಶರೀರದಲ್ಲಿ ರಕ್ತ ಮತ್ತು ಪ್ರಾಣವಾಯುಗಳ ಸಂಚಲನವು ನಿರಂತರವಾಗಿ ನಡೆಯುವಿಕೆಯು ಅಸ್ಥಿರ ಪ್ರಕೃತಿಯ ಕಾರ್ಯವಾಗಿದೆ. ಅದರಂತೆ ಅಸ್ಥಿ ಮೊದಲಾದ ಧಾತುಗಳಲ್ಲಿ ಕಂಡು ಬರುವ ಸ್ಥಿರತೆಯು ಸ್ಥಿರ ಪ್ರಕೃತಿಯ ಕಾರ್ಯವೆಂದು ಹೇಳಲಾಗುತ್ತದೆ. ಶರೀರದ ಅಂಗೋಪಾಂಗಗಳ ಶುಭಲಕ್ಷಣವು ಶುಭ-ಪ್ರಕೃತಿಯ ಹಾಗೂ ಅಶುಭ-ಲಕ್ಷಣವು ಅಶುಭ-ಪ್ರಕೃತಿಯ ಕಾರಣದಿಂದ ಉಂಟಾಗುತ್ತವೆ. ಇದೇ ಪ್ರಕಾರ ಅವುಗಳ ಸೌಂದರ್ಯ ಮತ್ತು ಕುರೂಪತೆಗಳಿಗೆ ಕಾರಣವಾದ ಸುಭಗ ಮತ್ತು ದುರ್ಭಗ

ಪ್ರಕೃತಿಗಳು ಇವೆ. ಯಾವ ಕರ್ಮದ ಉದಯದಿಂದ ಜೀವದಲ್ಲಿ ಆದೇಯತೆಯು ಅರ್ಥಾತ್ ಆದೇಯವು, ಇದರ ವಿಪರೀತ ಭಾವವುಳ್ಳ ಪ್ರಕೃತಿಯು ಅನಾದೇಯವೆನಿಸುತ್ತದೆ. ಬಹುಮಾನ್ಯತೆಯು ಉತ್ಪನ್ನವಾಗುತ್ತದೆಯೋ ಅದು ಯಾವ ಕರ್ಮದ ಉದಯದಿಂದ ಲೋಕದಲ್ಲಿ ಜೀವದ ಗುಣಗಳ ಖ್ಯಾತಿಯು ಆಗುವುದೋ ಅದು ಯಶಃಕೀರ್ತಿಯು; ಯಾವುದರಿಂದ ಕುಖ್ಯಾತಿಯು ಆಗುವುದೋ ಅದು ಅಯಶಃಕೀರ್ತಿಯೆಂಬ ಪ್ರಕೃತಿಯಾಗಿದೆ. ಯಾವ ಕರ್ಮದಿಂದ ಶರೀರದ ಅಂಗೋಪಾಂಗಗಳ ಪ್ರಮಾಣವೂ ಯಥೋಚಿತ ಸ್ಥಾನದ ನಿಯಂತ್ರಣವೂ ಉಂಟಾಗುತ್ತವೆಯೋ ಅದಕ್ಕೆ ನಿರ್ಮಾಣ ನಾಮ ಕರ್ಮವೆಂದು ಹೇಳುವರು. ಯಾವ ಕರ್ಮದ ಉದಯದಿಂದ ಜೀವಕ್ಕೆ ತ್ರಿಲೋಕಪೂಜ್ಯವೆನಿಸುವ ತೀರ್ಥಂಕರ ಪರ್ಯಾಯವು ಪ್ರಾಪ್ತವಾಗುವುದೋ ಅದು ತೀರ್ಥಂಕರ ಪ್ರಕೃತಿಯಾಗಿದೆ. ಈ ಪ್ರಕಾರ ನಾಮ ಕರ್ಮದ ಇಂಥ ವಿವಿಧ ಪ್ರಕೃತಿಗಳಿಂದ ಜೀವದ ಶರೀರ, ಅಂಗೋಪಾಂಗ, ಧಾತು-ಉಪಧಾತುಗಳ ರಚನೆ ಮತ್ತು ಅವುಗಳ ಕಾರ್ಯ-ವೈಚಿತ್ರ್ಯಗಳ ನಿರ್ಧಾರಣ ಹಾಗೂ ನಿಯಮನ ಮಾಡಲಾಗಿದೆ.

ಪ್ರಕೃತಿಬಂಧದ ಕಾರಣ :—

ಕರ್ಮ ಬಂಧದ ಕಾರಣವು ಸಾಮಾನ್ಯ ರೂಪದಿಂದ ಜೀವದ ಕಷಾಯಾತ್ಮಕ ಮನ-ವಚನ-ಕಾಯದ ಪ್ರವೃತ್ತಿಗಳೆಂದು ಹಿಂದೆ ಹೇಳಿತಷ್ಟೆ. ಇನ್ನು ಯಾವ ಕಷಾಯಾತ್ಮಕ ಪ್ರವೃತ್ತಿಯು ಯಾವ ಕರ್ಮ-ಪ್ರಕೃತಿಗೆ ಜನ್ಮವನ್ನು ನೀಡುತ್ತದೆಂಬುದರ ಸೂಕ್ಷ್ಮ ವಿಚಾರವನ್ನು ಸಹ ಮಾಡಲಾಗಿದೆ. ಅದು ಸಂಗ್ರಹ ರೂಪದಲ್ಲಿ ಹೀಗಿದೆ :— ತತ್ವಜ್ಞಾನವು ಮೋಕ್ಷದ ಸಾಧನವಾಗಿದೆ. ಈ ಸಾಧನೆಗೆ ಬಾಧಕವಾದ ಪ್ರವೃತ್ತಿಗಳಿವೆ —ಈ ತತ್ವಜ್ಞಾನವನ್ನು ಅನ್ಯರಿಂದ ಬಚ್ಚಿಡುವುದು, ಇಲ್ಲವೆ ಬುದ್ಧಿಪೂರ್ವಕವಾಗಿ ತಿಳಿದೂ ತಿಳಿದೂ ವಿಕೃತ ರೂಪದಲ್ಲಿ ಪ್ರಸ್ತಾಪಿಸುವುದು, ಜ್ಞಾನದ ವಿಷಯದಲ್ಲಿ ಅನ್ಯರೊಡನೆ ಮಾತ್ಸರ್ಯಭಾವವನ್ನು ತಾಳುವುದು, ಅನ್ಯರ ಜ್ಞಾನಾರ್ಜನೆಯಲ್ಲಿ ಬಾಧೆಯನ್ನುಂಟು ಮಾಡುವುದು, ಅವನನ್ನು ಜ್ಞಾನಾರ್ಜನೆಯಿಂದ ತಡೆಯುವುದು, ಮತ್ತು ನಿಜವಾದ ಜನರಲ್ಲಿ ದೂಷಣೆಯನ್ನು ಉತ್ಪನ್ನ ಮಾಡುವುದು—ಇವೆಲ್ಲವೂ ಬಾಧಕ ಪ್ರವೃತ್ತಿಗಳಾಗಿವೆ. ಈ ಕುಟಿಲ ವೃತ್ತಿಗಳು ಯಾವಾಗ ಸಮ್ಯಗ್ದರ್ಶನದ ವಿಷಯದಲ್ಲಿ ಹುಟ್ಟುತ್ತವೆಯೋ ಆಗ ದರ್ಶನಾವರಣ, ಜ್ಞಾನದ ವಿಷಯದಲ್ಲಿ ಉತ್ಪನ್ನವಾದಾಗ ಜ್ಞಾನಾವರಣ ಕರ್ಮ ಪ್ರಕೃತಿಗಳ ಬಂಧವನ್ನು ಉಂಟು ಮಾಡುತ್ತವೆ. ಆವು ಭಾವ ವೈಚಿತ್ರ್ಯಕ್ಕೆ ಅನುಸರಿಸಿ ಆಯಾ ಕರ್ಮಗಳ ಉತ್ತರ ಪ್ರಕೃತಿಗಳು ಬಂಧಿಸುತ್ತವೆ. ಅದೇ ಪ್ರಕಾರ ಪರಮಜ್ಞಾನಿಗಳು, ಉತ್ತಮ ಶಾಸ್ತ್ರ, ಒಳ್ಳೆಯ ಧರ್ಮನಿಷ್ಠ ವ್ಯಕ್ತಿಗಳು, ಧರ್ಮಾಚರಣೆ ಮತ್ತು ನಿಜವಾದ ದೇವ ಇವುಗಳ ವಿಷಯದಲ್ಲಿ ನಿಂದೆ ಹಾಗೂ ಅಪಮಾನಗಳನ್ನು ಹುಟ್ಟಿಸುವುದು, ಬೆಳೆಯಿಸುವುದು ದರ್ಶನ-ಮೋಹನೀಯ ಕರ್ಮದ ಪರಿಣಾಮಗಳಾಗಿವೆ. ಹಾಗೆಯೇ ಕ್ರೋಧಾದಿ ಕಷಾಯಗಳಿಂದ ಉಂಟಾಗುವ ಭಾವದ

ತೀವ್ರತೆಯಿಂದ ಚಾರಿತ್ರ-ಮೋಹನೀಯ ಕರ್ಮವು ಕಟ್ಟುತ್ತದೆ. ದಾನ, ಲಾಭ, ಭೋಗ, ಉಪಭೋಗ ಮತ್ತು ಶಕ್ತಿ (ವೀರ್ಯ) ಇವುಗಳ ಸಂಪಾದನೆಯಿಂದ ಜೀವನ ವನ್ನು ಸುಖಮಯವನ್ನಾಗಿ ಮಾಡಬಹುದಾಗಿದೆ. ಇವುಗಳಲ್ಲಿ ಕುಟಿಲ ಭಾವದಿಂದ ವಿಘ್ನವನ್ನು ಉಂಟು ಮಾಡುವುದರಿಂದ ಅಂತರಾಯ ಕರ್ಮದ ವಿವಿಧ ಪ್ರಕೃತಿಗಳು ಕಟ್ಟುತ್ತವೆ. ಈ ನಾಲ್ಕೂ ಕರ್ಮಗಳು ಜೀವದ ಗುಣಗಳ ವಿಕಾಸದಲ್ಲಿ ಬಾಧೆಯನ್ನು ತರುತ್ತವೆ. ಅಂದರೆ ಇವುಗಳ ಸತ್ತೆಯು ವಿದ್ಯಮಾನವಾಗಿರುವಾಗ ಜೀವವು ತನ್ನ ಜ್ಞಾನ-ದರ್ಶನಾದಿ ಗುಣಗಳನ್ನು ಪೂರ್ಣರೂಪದಿಂದ ವಿಕಾಸಗೊಳಿಸಿಕೊಳ್ಳಲಾಗುವುದಿಲ್ಲ. ಈ ಕಾರಣದಿಂದ ಈ ಕರ್ಮಗಳಿಗೆ ಘಾತಿ ಅಂತೂ ಪಾಪ ಕರ್ಮ ಎಂದು ಹೇಳಿದ್ದಾರೆ. ಉಳಿದ ವೇದನೀಯ, ಆಯು, ಗೋತ್ರ ಮತ್ತು ನಾಮ ಈ ನಾಲ್ಕು ಕರ್ಮಗಳು ಅಸ್ತಿತ್ವದಲ್ಲಿದ್ದರೂ ಕೂಡ ಜೀವನಿಗೆ ಕೇವಲ ಜ್ಞಾನ ಲಭಿಸುವಂಥ ಪೂರ್ಣ ಆಧ್ಯಾತ್ಮಿಕ ವಿಕಾಸದಲ್ಲಿ ಬಾಧೆಯು ಉಂಟಾಗುವುದಿಲ್ಲ. ಅದಕ್ಕಾಗಿ ಈ ಕರ್ಮ ಗಳಿಗೆ ಅಘಾತಿ ಕರ್ಮಗಳೆಂದು ಮನ್ನಿಸಲಾಗಿದೆ. ಸ್ವಂತಕ್ಕೆ ಇಲ್ಲವೆ ಅನ್ಯರಿಗೆ ದುಃಖ, ಶೋಕ, ತಾಪ, ಆಕ್ರಂದನ, ವಧ ಮೊದಲಾದ ರೂಪಗಳಲ್ಲಿ ಪೀಡೆಯನ್ನು ಕೊಡುವುದ ರಿಂದ ಅಸಾತಾ-ವೇದನೀಯ ಕರ್ಮವು ಕಟ್ಟುತ್ತದೆ. ಅದರಂತೆಯೇ ಜೀವಗಳ ವಿಷಯದಲ್ಲಿ ದಯಾಭಾವ, ವ್ರತೀ ಮತ್ತು ಸಂಯಮೀ ಪುರುಷರ ವಿಷಯದಲ್ಲಿ ಅನು ಕಂಪಾ ಹಾಗೂ ದಾನ, ಸಂಸಾರದಿಂದ ಬಿಡುಗಡೆಯನ್ನು ಹೊಂದುವುದಕ್ಕಾಗಿ ಸ್ವತಃ ವ್ರತ-ಸಂಯಮಗಳ ಅಭ್ಯಾಸ ಮಾಡುವುದು ಇದರಿಂದ ಸಾತಾ-ವೇದನೀಯ ಕರ್ಮದ ಬಂಧವಾಗುತ್ತದೆ. ಈ ಪ್ರಕಾರ ವೇದನೀಯ ಕರ್ಮದ ಎರಡು ಪ್ರಕಾರ ಗಳು ಸಿದ್ಧವಾದುವು. ಅವುಗಳಲ್ಲಿ ಒಂದು ದುಃಖ ಕೊಡುವಂಥದು ಇನ್ನೊಂದು ಸುಖ ವನ್ನು ನೀಡುವಂಥದು , ಅದರಿಂದ ಒಂದನ್ನು ಪಾಪ ಎಂದೂ ಇನ್ನೊಂದನ್ನು ಪುಣ್ಯ ಎಂದೂ ಹೇಳಲಾಗಿದೆ

ಇಲ್ಲಿ ಇನ್ನೊಂದು ಮಾತನ್ನೂ ನಾವು ಗಮನಿಸಬೇಕು. ಪುಣ್ಯ ಮತ್ತು ಪಾಪ ಇವೆರಡೂ ಪ್ರವೃತ್ತಿಗಳು ಕರ್ಮಬಂಧವನ್ನು ಉತ್ಪನ್ನ ಮಾಡುತ್ತವೆ. ಆದರೆ ಅವುಗ ಳಲ್ಲಿ ಮೊದಲನೆಯ ಪ್ರಕಾರದ ಕರ್ಮಬಂಧವು ಜೀವನ ಅನುಭವದಲ್ಲಿ ಅನುಕೂಲ ಮತ್ತು ಸುಖದಾಯಕವಾಗಿರುತ್ತದೆ. ಎರಡನೆಯ ಪ್ರಕಾರದ ಕರ್ಮವು ಪ್ರತಿಕೂಲವೂ ದುಃಖದಾಯಕವು ಎಂದು ಸಿದ್ಧವಾಗುತ್ತದೆ. ಅದಕ್ಕಾಗಿಯೇ ಪುಣ್ಯ ಮತ್ತು ಪಾಪ ಇವೆರಡೂ ನಹ ಶರೀರವನ್ನು ಬಂಧಿಸುವ ಶೃಂಖಲೆಯೆಂದು ಉಪಮಿಸಿ ಹೇಳುತ್ತಾರೆ. ಪಾಪ ರೂಪ ಶೃಂಖಲೆಯು ಕಬ್ಬಿಣದು ; ಪುಣ್ಯ ರೂಪ ಶೃಂಖಲೆಯು ಸುವರ್ಣದ್ದು ; ಇದು ಅಲಂಕಾರ ರೂಪದಲ್ಲಿದ್ದು ಪ್ರಿಯವಾಗಿರುತ್ತದೆ. ಜೀವದ ಈ ಪುಣ್ಯ ಮತ್ತು ಪಾಪ ರೂಪ ಪರಿಣಾಮಗಳಿಗೆ ಶುಭ ಮತ್ತು ಅಶುಭ ಕರ್ಮಗಳೆಂದೂ ಹೇಳುವರು. ಇವೆರಡೂ ಸಂಸಾರ ಭ್ರಮಣಕ್ಕೆ ಕಾರಣೀಭೂತವಾಗಿವೆ. ಒಳ್ಳೆಯದಾದ ಪುಣ್ಯವು ಜೀವವನ್ನು ಸ್ವರ್ಗಾದಿ ಶುಭ ಗತಿಗಳಿಗೆ ಒಯ್ದು ಸುಖಾನುಭವವನ್ನುಂಟು ಮಾಡು

ತ್ತದೆ. ಪಾಪವು ನರಕಾದಿಗಳಲ್ಲಿಯೂ ಪಶುಯೋನಿಯಲ್ಲಿಯೂ ಒಯ್ದು ದುಃಖವನ್ನು ನೀಡುತ್ತದೆ. ಈ ಎರಡು ಶುಭಾಶುಭ ಪರಿಣಾಮಗಳಿಂದ ಭಿನ್ನವಾದ ಜೀವದ ಶುದ್ಧಾವಸ್ಥೆಯೂ ಒಂದಿದೆ. ಅದೇ ಜೀವವನ್ನು ಕರ್ಮ ಬಂಧದಿಂದ ಬಿಡುಗಡೆಯನ್ನು ಮಾಡಿ, ಮೋಕ್ಷ ಗತಿಯನ್ನು ಒದಗಿಸುವಂಥದ್ದಾಗಿದೆ.

ಸಾಂಸಾರಿಕ ಕಾರ್ಯಗಳಲ್ಲಿ ಅತಿ ಆಸಕ್ತಿ ಮತ್ತು ಅತಿ ಪರಿಗ್ರಹಗಳು ನರಕಾಯು ಬಂಧಕ್ಕೆ ಕಾರಣವೆಂದು ಹೇಳಿದೆ. ಮಾಯಾಚಾರವು ತಿರ್ಯಂಚಾಯುವಿಗೆ ಕಾರಣವು. ಅಲ್ಪಾರಂಭ, ಅಲ್ಪ ಪರಿಗ್ರಹ ಮತ್ತು ಸ್ವಭಾವದ ಮೃದುತ್ವ ಇವು ಮನುಷ್ಯ ಆಯುವಿಗೆ ಕಾರಣಗಳು. ಹಾಗೆಯೇ ಸಂಯಮ ಹಾಗೂ ತಪಗಳು ದೇವಾಯು ಬಂಧಕ್ಕೆ ಕಾರಣವಾಗುತ್ತವೆ. ಇವುಗಳಲ್ಲಿ ದೇವ ಮತ್ತು ಮನುಷ್ಯ ಆಯುಗಳ ಬಂಧವು ಶುಭವು. ನರಕ ಮತ್ತು ತಿರ್ಯಂಚ ಆಯುಗಳ ಬಂಧವು ಅಶುಭವಾಗಿದೆ. ಪರ-ನಿಂದೆ, ಆತ್ಮ-ಪ್ರಶಂಸೆ, ಸದ್‌ಭೂತಗುಣಗಳ ಆಚ್ಛಾದನೆ ಹಾಗೂ ಅಸದ್‌ಭೂತ ಗುಣಗಳ ಉದ್‌ಭವನ ಇವು ನೀಚಗೋತ್ರಕ್ಕೆ ಕಾರಣಗಳು. ಇವುಗಳಿಗೆ ವಿಪರೀತವಾದ ಪ್ರವೃತ್ತಿಗಳು, ಮಾನದ ಅಭಾವ ಮತ್ತು ವಿನಯಗಳು ಉಚ್ಚಗೋತ್ರ ಬಂಧಕ್ಕೆ ಕಾರಣವಾಗುತ್ತವೆ. ಇಲ್ಲಿ ಸ್ಪಷ್ಟವಾಗಿ ಉಚ್ಚಗೋತ್ರದ ಬಂಧವು ಶುಭವು ಮತ್ತು ನೀಚ-ಗೋತ್ರದ ಬಂಧವು ಅಶುಭವೂ ಎಂದಾಗುತ್ತದೆ. ನಾಮ ಕರ್ಮದ ಎಷ್ಟು ಉತ್ತರ ಪ್ರಕೃತಿಗಳನ್ನು ಹೇಳಲಾಗಿದೆಯೋ ಅವೆಲ್ಲ ಅವುಗಳ ಸ್ವರೂಪದಿಂದಲೇ ಸ್ಪಷ್ಟವಾಗಿ ಎರಡು ಪ್ರಕಾರವಾಗಿವೆ. ಒಂದು ಶುಭ ಇನ್ನೊಂದು ಅಶುಭ. ಇವುಗಳಲ್ಲಿ ಅಶುಭ ನಾಮ ಕರ್ಮಬಂಧಕ್ಕೆ ಕಾರಣವು ಸಾಮಾನ್ಯವಾಗಿ ಮನ-ವಚನ-ಕಾಯ ಯೋಗಗಳ ವಕ್ರತೆ ಮತ್ತು ಕುತ್ಸಿತ ಕ್ರಿಯೆಗಳಾಗಿವೆ. ಇವುಗಳ ಜೊತೆಗೇನೇ ಮಿಥ್ಯಾ ಭಾವ, ಪೈಶುನ್ಯ, ಚಿತ್ತದ ಚಂಚಲತೆ ಸುಳ್ಳು ತೂಕ-ಮಾಪುಗಳನ್ನಿಟ್ಟು ಇನ್ನೊಬ್ಬರನ್ನು ಮೋಸಗೊಳಿಸುವ ವೃತ್ತಿ ಇವೇ ಮೊದಲಾದುವುಗಳು ಕೆಟ್ಟ ನಡತೆಗಳಾಗಿವೆ. ಇದಕ್ಕೆ ವಿರುದ್ಧವಾದ ಸದಾಚರಣಗಳು ಶುಭನಾಮ ಕರ್ಮ ಬಂಧಕ್ಕೆ ಕಾರಣವಾಗುತ್ತವೆ. ನಾಮ ಕರ್ಮಗಳಲ್ಲಿಯೇ ತೀರ್ಥಂಕರ ಪ್ರಕೃತಿಯನ್ನೂ ಸಹ ಹೇಳಿದೆ. ಅದು ಜೀವದ ಶುಭತಮ ಪರಿಣಾಮಗಳಿಂದ ಉತ್ಪನ್ನವಾಗುತ್ತದೆ. ಇಂಥ ಹದಿನಾರು ಉತ್ತಮ ವಿಶಿಷ್ಟ ಪರಿಣಾಮದಿಂದ ತೀರ್ಥಂಕರ ಗೋತ್ರವು ಕಟ್ಟುತ್ತದೆಂದು ಹೇಳಲಾಗಿದೆ. ಅವು ಈ ಪ್ರಕಾರ ಇವೆ :—

ಸಮ್ಯಗ್ದರ್ಶನದ ವಿಶುದ್ಧಿ, ವಿನಯ ಸಂಪನ್ನತೆ, ಶೀಲ ಮತ್ತು ವ್ರತಗಳ ನಿರ್ದೋಷ ಪರಿಪಾಲನ, ನಿರಂತರ ಜ್ಞಾನ-ಸಾಧನೆ, ಮೋಕ್ಷದ ಕಡೆಗೆ ಪ್ರವೃತ್ತಿ, ಶಕ್ತಿಗನುಸರಿಸಿ ತ್ಯಾಗ ಮತ್ತು ತಪ, ಒಳ್ಳೆಯ ಪ್ರಕಾರದ ಸಮಾಧಿ, ಸಾಧು ಜನರ ಸೇವಾ-ಸತ್ಕಾರ, ಪೂಜ್ಯ ಆಚಾರ್ಯ ವಿಶೇಷ ವಿದ್ವಾನ್ ಮತ್ತು ಶಾಸ್ತ್ರಗಳ ವಿಷಯದಲ್ಲಿ ಭಕ್ತಿ, ಅವಶ್ಯಕ ಧರ್ಮ ಕಾರ್ಯಗಳನ್ನು ನಿರಂತರ ಪಾಲಿಸುವುದು ; ಧಾರ್ಮಿಕ ಪ್ರೋತ್ಸಾಹ ಮತ್ತು ಧರ್ಮಿಷ್ಠರಲ್ಲಿ ವಾತ್ಸಲ್ಯ ಭಾವ.

**ಸ್ಥಿತಿ ಬಂಧ :—**

ಈ ಕರ್ಮ-ಪ್ರಕೃತಿಗಳು ಯಾವಾಗ ಬಂಧ ಅವಸ್ಥೆಯನ್ನು ಹೊಂದುತ್ತವೆಯೋ ಆಗಲೇ ಅವುಗಳಲ್ಲಿ ಜೀವದ ಕಷಾಯಗಳ ಮಂದತೆ ಹಾಗೂ ತೀವ್ರತೆಗಳಿಗನುಸರಿಸಿ, ಅವು ಎಷ್ಟುಕಾಲ ಸತ್ತೆಯಲ್ಲಿ ಇದ್ದಾವು, ಅವು ತಮ್ಮ ಫಲವನ್ನು ನೀಡಿ ಯಾವಾಗ ಕಳಚಿ ಹೋಗಬಲ್ಲುವು ಎಂಬ ಗುಣಗಳೂ ಸಹ ಉತ್ಪನ್ನವಾಗಿ ಬಿಡುತ್ತವೆ. ಇದಕ್ಕೇನೇ ಕರ್ಮದ ಸ್ಥಿತಿಬಂಧ ಎಂದು ಹೇಳಲಾಗುವುದು. ಈ ಸ್ಥಿತಿಯು ಜೀವದ ಪರಿಣಾಮಕ್ಕನುಸರಿಸಿ ಜಘನ್ಯ ಮಧ್ಯಮ ಮತ್ತು ಉತ್ಕೃಷ್ಟವೆಂದು ಮೂರು ಪ್ರಕಾರವಾಗಿರುತ್ತದೆ. ಜ್ಞಾನಾವರಣೀಯ, ದರ್ಶನಾವರಣೀಯ ಅಂತರಾಯ ಈ ಮೂರು ಕರ್ಮಗಳ ಜಘನ್ಯ ಅರ್ಥಾತ್ ತೀರ ಕಡಿಮೆ ಸ್ಥಿತಿಯು ಅಂತರ್ ಮುಹೂರ್ತವಾಗಿದೆ. ಉತ್ಕೃಷ್ಟ ಅರ್ಥಾತ್ ತೀರ ಹೆಚ್ಚಿನ ಸ್ಥಿತಿಯು ಮೂವತ್ತು ಕೋಡಾ ಕೋಡಿ ಸಾಗರ ಪ್ರಮಾಣವಾಗಿರುತ್ತದೆ. ವೇದನೀಯ ಕರ್ಮದ ಜಘನ್ಯ ಸ್ಥಿತಿಯು ಹನ್ನೆರಡು ಮುಹೂರ್ತ ಮತ್ತು ಉತ್ಕೃಷ್ಟ ಸ್ಥಿತಿಯು ಮೂವತ್ತು ಕೋಡಾಕೋಡಿ ಸಾಗರವಾಗಿದೆ. ಮೋಹನೀಯ ಕರ್ಮದ ಜಘನ್ಯ ಸ್ಥಿತಿಯು ಅಂತರ್ ಮುಹೂರ್ತ, ಮತ್ತು ಉತ್ಕೃಷ್ಟ ಸ್ಥಿತಿಯು ಎಪ್ಪತ್ತು ಕೋಡಾಕೋಡಿ ಸಾಗರದ್ದು; ಆಯು ಕರ್ಮವು ಕ್ರಮದಿಂದ ಅಂತರ್ ಮುಹೂರ್ತ ಮತ್ತು ಮೂವತ್ತು ಮೂರು ಸಾಗರದ್ದು; ಹಾಗೆಯೇ ನಾಮ ಮತ್ತು ಗೋತ್ರ ಕರ್ಮ ಇವೆರಡರ ಅವಧಿಗಳೂ ಸಹ ಎಂಟು ಅಂತರ್ ಮುಹೂರ್ತ ಮತ್ತು ಇಪ್ಪತ್ತು ಕೋಡಾಕೋಡಿ ಸಾಗರವೆಂದು ಹೇಳಿದೆ. ಜಘನ್ಯ ಮತ್ತು ಉತ್ಕೃಷ್ಟಗಳ ಮಧ್ಯದಲ್ಲಿಯ ಸಮಸ್ತ ಸ್ಥಿತಿಯು ಮಧ್ಯಮವೆನಿಸುತ್ತದೆ. ಒಂದು ಮುಹೂರ್ತ ಕಾಲದ ಪ್ರಮಾಣವು ಆಧುನಿಕ ಕಾಲ ಗಣನೆಗೆ ಅನುಸರಿಸಿ ೪೮ ಮಿನಿಟು ಆಗುತ್ತದೆ. ಒಂದು ಮುಹೂರ್ತದಲ್ಲಿ ಒಂದು ಸಮಯ ಕೊರತೆಯಾಗಿರುವ ಕಾಲಾವಧಿಗೆ ಭಿನ್ನ ಮುಹೂರ್ತವೆನ್ನುವರು. ಭಿನ್ನ ಮುಹೂರ್ತಕ್ಕಿಂತ ಒಂದು ನಿಮಿಷ ಕೊರತೆಯಾಗಿರುವ ಕಾಲ ಪ್ರಮಾಣದಿಂದ ಒಂದು ಆವಲಿಯ ವರೆಗಿನ ಕಾಲಾವಧಿಗೆ ಅಂತರ್ ಮುಹೂರ್ತವೆಂದು ಹೇಳುವರು. ಒಂದು ಆವಲಿಯು ಒಂದು ಸೇಕಂದದ ಅಲ್ಪಾಂಶಕ್ಕೆ ಸಮವಾಗಿರುತ್ತದೆ. ಸಾಗರ ಅಥವಾ ಸಾಗರೋಪಮ ಎಂಬುದು ಒಂದು ಉಪಮಾ ಪ್ರಮಾಣವಾಗಿದೆ. ಇದನ್ನು ಸಂಖ್ಯೆಯಲ್ಲಿ ಹೇಳಲಿಕ್ಕೆ ಆಗುವುದಿಲ್ಲ. ಸಂಖ್ಯಾತೀತ ವರ್ಷಗಳ ಕಾಲಾವಧಿಗೇನೇ ಸಾಗರವೆಂದು ಹೇಳುತ್ತಾರೆ. ಕೋಡಾಕೋಡಿಯ ಅರ್ಥವು ಒಂದು ಕೋಟಿಯ ವರ್ಗವೆಂದಿದೆ. (ಒಂದು ಕೋಟಿ × ಒಂದು ಕೋಟಿ) ಈ ಪ್ರಕಾರ ಕರ್ಮಗಳ ಉತ್ಕೃಷ್ಟಸ್ಥಿತಿಯು ೩೦, ೭೦, ೩೩ ಅಥವಾ ೭೦ ಕೋಡಾಕೋಡಿ ಸಾಗರೋಪಮವೆಂದು ಹೇಳಿದೆ. ಇದು ನಮಗೆ ಕೇವಲ ಅದರ ಪರಸ್ಪರ ದೀರ್ಘತೆ ಅಥವಾ ಅಲ್ಪತೆಯ ಬೋಧವನ್ನು ಮಾತ್ರ ಮಾಡಿಕೊಡುತ್ತದೆ. ಸಾಮಾನ್ಯವಾಗಿ ಎಲ್ಲ ಕರ್ಮಗಳ ಉತ್ಕೃಷ್ಟ ಸ್ಥಿತಿಗಳು ಅಪ್ರಶಸ್ತವೆಂದು ಮನ್ನಿಸಲಾಗಿದೆ. ಯಾಕಂದರೆ ಅವುಗಳ ಬಂಧವು ಸಂಕ್ಲೇಶರೂಪ ಪರಿಣಾಮ

ದಿಂದ ಆಗುತ್ತದೆ. ಸಂಕ್ಲೇಶದಲ್ಲಿ ಎಷ್ಟು ಪ್ರಮಾಣದಲ್ಲಿ ಹೀನತೆ ಮತ್ತು ವಿಶುದ್ಧಿಯ ವೃದ್ಧಿಯು ಆದೀತೋ, ಅದೇ ಪ್ರಮಾಣದಲ್ಲಿ ಅನುಪಾತದಿಂದ ಸ್ಥಿತಿಬಂಧದ ಹೀನತೆಯು ಆಗುತ್ತಾ ಹೋಗುತ್ತದೆ, ಮತ್ತು ಜಘನ್ಯ ಸ್ಥಿತಿಯ ಬಂಧವು ಉತ್ಕೃಷ್ಟ ವಿಶುದ್ಧಿಯ ಅವಸ್ಥೆಯಲ್ಲಿ ಆಗುತ್ತದೆ. ವಿಶುದ್ಧಿ ಮತ್ತು ಸಂಕ್ಲೇಶದ ಲಕ್ಷಣವನ್ನು ಧವಲಾಕಾರನು ಹೀಗೆ ಹೇಳಿದ್ದಾನೆ—ಸಾತಾ-ವೇದನೀಯ ಕರ್ಮದ ಬಂಧಯೋಗ್ಯ ಪರಿಣಾಮವನ್ನು ವಿಶುದ್ಧಿಯೆಂದೂ, ಅಸಾತಾ-ವೇದನೀಯದ ಬಂಧಯೋಗ್ಯ ಪರಿಣಾಮವನ್ನು ಸಂಕ್ಲೇಶವೆಂದೂ ಮನ್ನಿಸಲಿಕ್ಕೆ ಬೇಕು

**ಅನುಭಾಗ ಬಂಧ :—**

ಕರ್ಮಪ್ರಕೃತಿಗಳಲ್ಲಿ ಸ್ಥಿತಿ-ಬಂಧದ ಜೊತೆ [ಜೊತೆಯಲ್ಲಿಯೇ ಅವುಗಳಲ್ಲಿ ತೀವ್ರ ಅಥವಾ ಮಂದ ರಸದಾಯಿನಿ ಶಕ್ತಿಯು ಉತ್ಪನ್ನವಾಗುತ್ತದೆ. ಈಶಕ್ತಿಯ ಹೆಸರೇ ಅನುಭಾಗ ಬಂಧ ಎಂದಿದೆ. ಯಾವುದಾದರೊಂದು ಹಣ್ಣಿನಲ್ಲಿ ಅದರ ಸೀಯತ್ವವಾಗಲಿ, ಹುಳಿಯ ಗುಣವಾಗಲಿ ತೀವ್ರ ಇಲ್ಲವೆ ಮಂದ ರೂಪದಲ್ಲಿ ಅದರಲ್ಲಿಯೇ ಇರುವಂತೆ ಈ ಅನುಭಾಗ ಬಂಧವಿದೆ. ಈ ಅನುಭಾಗ ಬಂಧವೂ ಬಂಧಕ ಜೀವಗಳ ಭಾವಗಳಿಗೆ ಅನುಸರಿಸಿ ಉತ್ಪನ್ನವಾಗುತ್ತದೆ. ವಿಶುದ್ಧ ಪರಿಣಾಮಗಳಿಂದ ಸಾತಾ ವೇದನೀಯವೇ ಮೊದಲಾದ ಪುಣ್ಯ ಪ್ರಕೃತಿಗಳ ಉತ್ಕೃಷ್ಟ ಅನುಭಾಗ ಬಂಧವಾಗುತ್ತದೆ, ಮತ್ತು ಅಸಾತಾ ವೇದನೀಯಾದಿ ಪಾಪ ಪ್ರಕೃತಿಗಳು ಜಘನ್ಯ ರೂಪದಲ್ಲಿರುತ್ತವೆ. ಹಾಗೆಯೇ ಸಂಕ್ಲಿಷ್ಟ ಪರಿಣಾಮಗಳಿಂದ ಅಸಾತಾವೇದನೀಯಾದಿ ಪಾಪ ಪ್ರಕೃತಿಗಳ ಉತ್ಕೃಷ್ಟ ಅನುಭಾಗ ಬಂಧವಾಗುತ್ತದೆ, ಆಗ ಸಾತಾವೇದನೀ-ಯಾದಿ ಪುಣ್ಯ ಪ್ರಕೃತಿಗಳು ಜಘನ್ಯವಾಗಿರುತ್ತವೆ ಈ ಪ್ರಕಾರ ಸ್ಥಿತಿಬಂಧ ಮತ್ತು ಅನುಭಾಗ ಬಂಧಗಳ ಪರಸ್ಪರ ಸಂಬಂಧವು ಕಂಡು ಬರುತ್ತದೆ. ಇನ್ನು ಸ್ಥಿತಿ ಬಂಧದ ಉತ್ಕೃಷ್ಟತೆ ಮತ್ತು ಜಘನ್ಯತೆಗಳು ಕ್ರಮದಿಂದ ಸಂಕ್ಲೇಶ ಮತ್ತು ವಿಶುದ್ಧಿಗಳ ಆಧೀನವಾಗಿವೆ. ಅದರಲ್ಲಿ ಅನುಭಾಗ ಬಂಧದ ಉತ್ಕೃಷ್ಟತೆ ಮತ್ತು ಜಘನ್ಯತೆಗಳು ಪ್ರಶಸ್ತ ಮತ್ತು ಅಪ್ರಶಸ್ತ ಪ್ರಕೃತಿಗಳಲ್ಲಿ ಭಿನ್ನಪ್ರಕಾರದಿಂದ ಉತ್ಪನ್ನವಾಗುತ್ತವೆ ಪ್ರಶಸ್ತ ಪ್ರಕೃತಿಗಳ ಉತ್ಕೃಷ್ಟ ಅನುಭಾಗವು ವಿಶುದ್ಧಿಯ ಆಧೀನದಲ್ಲಿದೆ. ಅಪ್ರ-ಶಸ್ತವು ಸಂಕ್ಲೇಶದ ಆಧೀನದಲ್ಲಿದೆ. ಜಘನ್ಯತೆಯು ಇದರ ವಿಪರೀತವಾಗಿದೆ

ಕರ್ಮದ ಈ ಅನುಭಾಗ ರೂಪ ಫಲಕೊಡುವ ಶಕ್ತಿಯನ್ನು ಉದಾಹರಣೆಗಳಿಂದ ತಿಳಿಸಿಕೊಡಲಾಗುವುದು. ಯಾವ ಪ್ರಕಾರ ಬಳ್ಳಿ, ಕಟ್ಟಿಗೆ ಎಲುವು ಮತ್ತು ಕಲ್ಲುಗಳಲ್ಲಿ ಕೋಮಲತೆಯಿಂದ ಕಠೋರತೆಯ ಕಡೆಗೆ ಉತ್ತರೋತ್ತರ ವೃದ್ಧಿಯಾದುದು ಕಂಡುಬರುತ್ತದೆಯೋ, ಅದೇ ಪ್ರಕಾರ ಘಾತಿಯಾ ಕರ್ಮಗಳ ಅನುಭಾಗವು ಮಂದತೆಯಿಂದ ತೀವ್ರತೆಯ ಕಡೆಗೆ ಹೆಚ್ಚುತ್ತ ಹೋಗುತ್ತದೆ. ಬಳ್ಳಿಯಿಂದ ಕಟ್ಟಿಗೆಯ ಕೆಲವೊಂದು ಅಂಶದ ವರೆಗೆ ಘಾತಿ ಕರ್ಮಗಳ ಶಕ್ತಿಯು ದೇಶಘಾತಿ ಎನಿಸುವುದು.

ಯಾಕಂದರೆ ಈ ಅವಸ್ಥೆಯಲ್ಲಿ ಅದು ಜೀವದ ಗುಣಗಳನ್ನು ಆಂಶಿಕ ರೂಪದಿಂದ ಘಾತ ಇಲ್ಲವೆ ಆವರಣ ಮಾಡುತ್ತದೆ. ಮುಂದೆ ಕಟ್ಟಿಗೆಯಿಂದ ಕಲ್ಲಿನವರೆಗೆ ಇರುವ ಶಕ್ತಿಯು ಸರ್ವಘಾತಿ ಎನಿಸುತ್ತದೆ; ಅರ್ಥಾತ್ ಈ ಅನುಭಾಗವು ಉದಯದಲ್ಲಿ ಬಂದ ಮೇಲೆ ಆತ್ಮನ ಗುಣಗಳು ಪೂರ್ಣವಾಗಿ ಮುಚ್ಚಿಬಿಡುತ್ತವೆ. ಅಘಾತಿಯ ಕರ್ಮಗಳಲ್ಲಿಂದ ಪ್ರಶಸ್ತ ಪ್ರಕೃತಿಗಳ ಅನುಭಾಗವು ಬೆಲ್ಲ, ಮತ್ತು ಅಮೃತಗಳಿಗೆ ಸಮಾನವಾಗಿರುತ್ತದೆ. ಹಾಗೆಯೇ ಅಪ್ರಶಸ್ತ ಪ್ರಕೃತಿಗಳು ವಿಷ ಮತ್ತು ಹಾಲಾಹಲಕ್ಕೆ ಸಮಾನ ಆಗಿರುತ್ತವೆ. ಇವುಗಳ ಬಂಧವು ಉಪಯುಕ್ತ ವಿಶುದ್ಧಿ ಮತ್ತು ಸಂಕ್ಲೇಶಗಳ ವ್ಯವಸ್ಥೆಗಳಿಗನುಸರಿಸಿ ಉತ್ತರೋತ್ತರ ತೀವ್ರ ಮತ್ತು ಮಂದ ವಾಗುತ್ತವೆ.

### ಪ್ರದೇಶ ಬಂಧ :–

ಈ ಮೊದಲೇ ಹೇಳಿತಷ್ಟೆ : ಮನ, ವಚನ ಕಾಯಗಳ ಕ್ರಿಯೆಯ ಮುಖಾಂತರ ಜೀವ ಆತ್ಮ ಪ್ರದೇಶಗಳ ಸಂಪರ್ಕದಲ್ಲಿ ಕರ್ಮರೂಪ ಪುದ್ಗಲ ಪರಮಾಣುಗಳು ಬಂದು ಬಿಡುತ್ತವೆ. ಅವುಗಳಲ್ಲಿ ವಿವಿಧ ಪ್ರಕಾರದ ಕರ್ಮಶಕ್ತಿಯು ಉತ್ಪನ್ನವಾಗುತ್ತದೆ. ಈ ಪ್ರಕಾರ ಪುದ್ಗಲ ಪರಮಾಣುಗಳು ಜೀವ ಪ್ರದೇಶದೊಡನೆ ಸಂಬಂಧವನ್ನು ಹೊಂದುವುದು ಪ್ರದೇಶ- ಬಂಧ ವೆನಿಸುತ್ತದೆ. ಯಾವ ಪುದ್ಗಲ ಪರಮಾಣುಗಳನ್ನು ಜೀವವು ಗ್ರಹಿಸುವುದೋ ಅವು ಅತ್ಯಂತ ಸೂಕ್ಷ್ಮವೆಂದು ಮನ್ನಿಸಲಾಗಿದೆ. ಅಲ್ಲದೆ ಪ್ರತಿ ಸಮಯದಲ್ಲಿ ಕಟ್ಟುವಂಥ ಪರಮಾಣುಗಳ ಸಂಖ್ಯೆಯೂ ಅನಂತವೆಂದು ತಿಳಿಯ ಲಾಗಿದೆ. ಎಷ್ಟು ಕರ್ಮ ದ್ರವ್ಯವು ಬಂಧ ಸ್ಥಿತಿಯನ್ನು ಹೊಂದುವುದೋ ಅದರ ವಿಂಗಡನೆಯು ಜೀವದ ಪರಿಣಾಮಕ್ಕನುಸರಿಸಿ ಎಂಟು ಮೂಲ ಪ್ರಕೃತಿಗಳಲ್ಲಿ ವಿಂಗಡಿ ಸಲಾಗಿದೆ. ಇದರಲ್ಲಿ ಆಯೂ ಕರ್ಮದ ಭಾಗವು ಎಲ್ಲಕ್ಕೂ ಕಡಿಮೆ ಪ್ರಮಾಣದ್ದಾಗಿದೆ. ಅದಕ್ಕಿಂತ ಹೆಚ್ಚು ನಾಮಕರ್ಮವಿದೆ. ಅದಕ್ಕೆ ಸರಿಸಮಾನವಾಗಿ ಗೋತ್ರಕರ್ಮವಿರು ತ್ತದೆ. ಇವುಗಳಿಗಿಂತ ಹೆಚ್ಚು ಪ್ರಮಾಣದಲ್ಲಿ ಜ್ಞಾನಾವರಣ ದರ್ಶನಾವರಣ, ಮತ್ತು ಅಂತರಾಯ. ಈ ಮೂರು ಘಾತಿಯ ಕರ್ಮಗಳು ಪರಸ್ಪರ ಸಮಾನವಾಗಿವೆ. ಇವುಗಳಿ ಗಿಂತ ಹೆಚ್ಚು ಮೋಹನೀಯವಿರುತ್ತದೆ. ಇದಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ವೇದ ನೀಯ ಕರ್ಮದ ಭಾಗವಿರುತ್ತದೆ ಈ ಅನುಪಾತದ ಕಾರಣವು ಹೀಗಿದೆಯೆಂದು ಕಂಡುಬರುತ್ತದೆ :– ಆಯು ಕರ್ಮವು ಜೀವನದಲ್ಲಿ ಕೇವಲ ಒಮ್ಮೆ ಮಾತ್ರ ಕಟ್ಟು ತ್ತದೆ. ಸಾಮಾನ್ಯವಾಗಿ ಅದರಲ್ಲಿ ಹೆಚ್ಚು–ಕಡಿಮೆಯಾಗದೆ ಜೀವನದ ತುಂಬೆಲ್ಲ ಕ್ರಮ ವಾಗಿ ಕ್ಷಯಿಸುತ್ತ ಹೋಗುತ್ತಿರುತ್ತದೆ ಅದಕ್ಕಾಗಿ ಅದರ ದ್ರವ್ಯ ಪುಂಜವು ಎಲ್ಲವು ಗಳಿಗಿಂತ ಅಲ್ಪವೆಂದು ಮನ್ನಿಸಲಾಗಿದೆ. ನಾಮ ಮತ್ತು ಗೋತ್ರ ಕರ್ಮಗಳ ಹೆಚ್ಚು–ಕಡಿಮೆಯಾಗುವಿಕೆಯು ಜೀವನದಲ್ಲಿ ಆಯು ಕರ್ಮಕ್ಕಿಂತ ಸ್ವಲ್ಪ ಹೆಚ್ಚು ಇರುತ್ತದೆ. ಆದರೆ ಜ್ಞಾನಾವರಣ, ದರ್ಶನಾವರಣ, ಅಂತರಾಯಗಳ ಅಪೇಕ್ಷೆಯಿಂದ

ಈ ದ್ರವ್ಯಗಳ ಹಾನಿ ಲಾಭಗಳು ಕಡಿಮೆಯೇ ಇರುತ್ತವೆ. ಮೋಹನೀಯ ಕರ್ಮಕ್ಕೆ ಸಂಬಂಧಿಸಿದ ಕಷಾಯಗಳ ಉದಯ, ಉತ್ಕರ್ಷ ಮತ್ತು ಅಪಕರ್ಷ ಇವು ಮೇಲೆ ಹೇಳಿದ ಕರ್ಮಗಳಿಗಿಂತ ಹೆಚ್ಚಿಗೆ ಆಗುತ್ತವೆ. ಇನ್ನು ಇದಕ್ಕಿಂತಲೂ ಹೆಚ್ಚು ಸುಖ-ದುಃಖಗಳ ಅನುಭವವು ವೇದನೀಯ ಕರ್ಮದ ಕಾರ್ಯವೆಂದು ಕಂಡುಬರುತ್ತದೆ. ಇದೇ ಕಾರಣದಿಂದ ಈ ಕರ್ಮಗಳ ಭಾಗಗಳು ದ್ರವ್ಯರೂಪದಲ್ಲಿ ಹೀನಾಧಿಕವೆಂದು ಉಕ್ತಕ್ರಮದಲ್ಲಿ ಹೇಳಿದೆ. ಯಾವ ಪ್ರಕಾರ ಪ್ರತಿ ಸಮಯದಲ್ಲಿ ಅನಂತ ಪರಮಾಣುಗಳ ಪುದ್ಗಲ-ಪುಂಜಗಳು ಬಂಧವಾಗುತ್ತವೆಯೋ ಅದೇ ಪ್ರಕಾರ ಪೂರ್ವಸಂಚಿತ ಕರ್ಮ ದ್ರವ್ಯವು ತಮ್ಮ ತಮ್ಮ ಸ್ಥಿತಿಯನ್ನು ಪೂರ್ಣಗೊಳಿಸಿ ಉದಯದಲ್ಲಿ ಬರುತ್ತ ಇರುತ್ತವೆ, ಮತ್ತು ತಮ್ಮ ತಮ್ಮ ಪ್ರಕೃತಿಗೆ ಅನುಸರಿಸಿ ಜೀವಕ್ಕೆ ನಾನಾ ಪ್ರಕಾರದ ಅನುಕೂಲ ಇಲ್ಲವೆ ಪ್ರತಿಕೂಲ ಅನುಭವವನ್ನುಂಟು ಮಾಡುತ್ತಿರುತ್ತವೆ. ಹೀಗೆ ಈ ಕರ್ಮ-ಸಿದ್ಧಾಂತಕ್ಕನುಸರಿಸಿ ಜೀವದ ನಾನಾ ಸ್ಥಿತಿಗಳಿಗೆ ಮೂಲ ಕಾರಣವು ಅದು ತಾನು ಉತ್ಪನ್ನ ಮಾಡಿಕೊಂಡ ಪೂರ್ವ ಕರ್ಮ-ಬಂಧವೇ ಆಗಿದೆ. ತಾತ್ಕಾಲಿಕ ಭಿನ್ನ ಭಿನ್ನ ದ್ರವ್ಯಾತ್ಮಕ ಮತ್ತು ಭಾವಾತ್ಮಕ ಪರಿಸ್ಥಿತಿಗಳು ಕರ್ಮ ಫಲಕೊಡುವ ಶಕ್ತಿಯಲ್ಲಿ ಕೆಲವೊಂದು ಉತ್ಕರ್ಷಣ, ಅಪಕರ್ಷಣ, ಸಂಕ್ರಮಣ ಮೊದಲಾದ ವಿಶೇಷತೆಗಳನ್ನು ಅವಶ್ಯ ಉತ್ಪನ್ನ ಮಾಡುತ್ತವೆ. ಆದರೆ ಸಾಮಾನ್ಯ ರೂಪದಿಂದ ಕರ್ಮ-ಫಲ-ಭೋಗದ ಪ್ರವಾಹವು ಅವಿಚ್ಛಿನ್ನ ರೂಪದಿಂದ ನಡೆದು ಬಂದಿರುತ್ತದೆ. ಇದು ಗೀತೆಗನುಸರಿಸಿ ಭಗವಾನ್ ಕೃಷ್ಣನ ಶಬ್ದಗಳಲ್ಲಿ ಧ್ವನಿಗೊಡುತ್ತಲಿದೆ :-

> ಉದ್ಧರೇದಾತ್ಮಾನಾತ್ಮನಂ ನಾತ್ಮಾನಮವ ಸಾದಯೇತ್ ।
> ಆತ್ಮೈವ ಹ್ಯಾತ್ಮನೋ ಬಂಧುಃ ಆತ್ಮೈವ ರಿಪುರಾತ್ಮನಃ ॥
>
> (ಭಗವದ್ಗೀತಾ ೬, ೫)

### ಕರ್ಮಸಿದ್ಧಾಂತದ ವಿಶೇಷತೆ :—

ಇದು ಜೈನದರ್ಶನದ ಕರ್ಮಸಿದ್ಧಾಂತವಾಗಿದೆ 'ಮಾಡಿದ್ದುಣ್ಣೋ ಮಹಾರಾಯಾ', 'ಮಾಡಿದವನು ಮಣಿಯಂಥ ಕಡಬನ್ನು ಉಣ್ಣುವನು', 'ಬಿತ್ತಿದ್ದನ್ನು ಬೆಳೆದುಕೋ', As you sow, so you reap' ಮೊದಲಾದವುಗಳು ಪರಂಪರೆಯಿಂದ ಬಂದ ನುಡಿಗಳಾಗಿವೆ. ಬಹುತರ ಸಭ್ಯತೆಯ ವಿಕಾಸದ ಪ್ರಾರಂಭಕಾಲದಲ್ಲಿಯೇ ಮಾನವನು ಪ್ರಕೃತಿಯ ಕಾರ್ಯ-ಕಾರಣ ಸಂಬಂಧವನ್ನು ತಿಳಿದುಕೊಂಡಿದ್ದನು. ಯಾಕಂದರೆ ಅವನು ಪ್ರತಿಯೊಂದು ಕಾರ್ಯವು ಒಂದಿಲ್ಲೊಂದು ಕಾರಣದ ಅಧಾರದಿಂದಲೇ ಉತ್ಪನ್ನವಾಗುವುದನ್ನು ಕಾಣುತ್ತಿದ್ದನು. ಆ ಕಾರಣವೇ ಆ ಕಾರ್ಯವನ್ನು ಉತ್ಪನ್ನಗೊಳಿಸುತ್ತಿತ್ತು. ಒಮ್ಮೊಮ್ಮೆ ಒಂದು ಘಟನೆಗಾಗಿ ಯಾವ ಸ್ಪಷ್ಟ ಕಾರಣವೂ ಕಂಡು ಬರದೆ ಹೋದರೆ ಆಗ ಅವನು ಅದಕ್ಕೆ ಅದೃಷ್ಟ ಕಾರಣದ ಕಲ್ಪನೆಯನ್ನು ಮಾಡುತ್ತಿದ್ದನು. ಇನ್ನು ಘಟನೆಯು ಎಷ್ಟು ಅದ್ಭುತ ಹಾಗು ಅಸಾ

ಧಾರಣವಿದ್ದೀತೋ ಅಷ್ಟೇ ಅಸಾಧಾರಣ ಮತ್ತು ಅದ್ಭುತ ಕಾರಣವನ್ನು ಕಲ್ಪಿಸುವ ಆವಶ್ಯಕತೆಯು ಉಂಟಾಯಿತು. ಇದೇ ಗೊತ್ತಾಗದ ರಹಸ್ಯಮಯ ಕಾರಣವು ಭೂತ-ಪ್ರೇತಗಳ ರೂಪವನ್ನು ಧಾರಣಮಾಡಿತು; ಕೆಲವೆಡೆಗೆ ಈಶ್ವರ ಅಥವಾ ಈಶ್ವರೇಚ್ಛೆಯನ್ನು ಸೂಚಿಸಿತು; ಇನ್ನೊಂದೆಡೆಗೆ ಪ್ರಕೃತಿಯೇ ಕಾರಣವೆಂದಿತು. ಇನ್ನು ಹಲವೆಡೆಗೆ ಆ ಅದ್ಭುತ ಘಟನೆಗೆ ಮನುಷ್ಯನೇ ಸಂಬಂಧವುಳ್ಳವನಾಗಿದ್ದರೆ ಅವನ ದೈವ ಇಲ್ಲವೆ ಪೂರ್ವಕೃತ ಅದೃಷ್ಟ ಕರ್ಮವು ಕಾರಣವೆಂದು ತಿಳಿಯಲಾಯಿತು. ಜೈನ ದರ್ಶನದಲ್ಲಿ ಈ ಕೊನೆಯ ಕಾರಣವನ್ನು ಆಧಾರಭೂತವೆಂದು ಮನ್ನಿಸಿ, ತನ್ನ ಕರ್ಮ-ಸಿದ್ಧಾಂತದಲ್ಲಿ ಅದನ್ನು ವಿಸ್ತಾರವಾಗಿ ವರ್ಣಿಸಿದೆ. ಉಳಿದ ಬಹಳಷ್ಟು ಧರ್ಮಗಳಲ್ಲಿ ಈಶ್ವರನಿಗೇನೇ ಈ ಕರ್ತೃತ್ವವನ್ನು ಒಪ್ಪಿಸಿಕೊಡಲಾಗಿದೆ. ಇದಕ್ಕೆ ಕಾರಣವೂ ಇಲ್ಲದಿಲ್ಲ; ಅವರಲ್ಲಿ ಕರ್ಮ-ಸಿದ್ಧಾಂತದಂಥ ಮಾನ್ಯತೆಯು ಉತ್ಪನ್ನವಾಗಿಲ್ಲ; ಒಂದು ವೇಳೆ ಉತ್ಪನ್ನವಾಗಿದ್ದರೂ ವಿಶೇಷ ವಿಕಸಿತವಾಗಲಿಲ್ಲ. ವೇದಾಂತ ದರ್ಶನದಲ್ಲಿ ಈಶ್ವರನನ್ನು ಮನ್ನಿಸಿಯೂ ಸಹ ಅವನ ಕರ್ತೃತ್ವದ ಸಂಬಂಧದಲ್ಲಿ ಕೆಲವೊಂದು ದೋಷಗಳು ಉತ್ಪನ್ನವಾಗುವಂತೆ ಪ್ರಕಟಿಸಲಾಗಿದೆ. ಬಾದರಾಯಣನ ಸೂತ್ರಗಳಲ್ಲಿ ಮತ್ತು ಅವುಗಳ ಮೇಲಿನ ಶಂಕರಾಚಾರ್ಯಕೃತ ಭಾಷ್ಯಗಳಲ್ಲಿ (೨, ೧. ೩೪) ಸ್ಪಷ್ಟವಾಗಿ ಹೇಳಿದೆ. ಮನುಷ್ಯನ ಸುಖ-ದುಃಖಗಳ ಕರ್ತೃವು ಈಶ್ವರನೆಂದು ಮನ್ನಿಸಿದರೆ ಅವನು ಪಕ್ಷಪಾತಿ ಮತ್ತು ಕ್ರೂರತೆಗಳುಳ್ಳ ದೋಷಿಯೆನಿಸುವನು; ಯಾಕೆಂದರೆ ಅವನು ಕೆಲವೊಂದು ಜನರನ್ನು ಅತ್ಯಂತ ಸುಖಿಯನ್ನಾಗಿ ಮಾಡಿದ್ದಾನೆ. ಇನ್ನು ಕೆಲವರನ್ನು ಅತ್ಯಂತ ದುಃಖಿಗಳನ್ನಾಗಿ ಮಾಡಿದ್ದಾನೆ. ಈ ಸಂಗತಿಗಳನ್ನು ವಿವೇಚನೆ ಮಾಡಿ, ಕೊನೆಗೆ ಒಂದು ನಿಲುವಿಗೆ ಬರಲಾಗಿದೆ: ಈಶ್ವರನು, ಮನುಷ್ಯರ ಸಲುವಾಗಿ ಏನಾದರೂ ಮಾಡುತ್ತ ಇದ್ದರೆ ಅದನ್ನೆಲ್ಲ ಅವರವರ ಪೂರ್ವ ಕರ್ಮಕ್ಕನುಸರಿಸಿಯೇ ಮಾಡುತ್ತಾನೆ. ಅಂದಮೇಲೆ ಈ ಪರಿಸ್ಥಿತಿಯಲ್ಲಿ ಈಶ್ವರನಿಗೆ ಯಾವ ಕರ್ತೃತ್ವ ಸ್ವಾತಂತ್ರ್ಯವೂ ಇಲ್ಲವೆಂದು ಸಿದ್ಧವಾಗುತ್ತದೆ. ಜೈನ ಕರ್ಮ ಸಿದ್ಧಾಂತದಲ್ಲಿ ಮನುಷ್ಯನ ಕರ್ಮಗಳನ್ನು ಫಲದಾಯಕಗೊಳಿಸುವದಕ್ಕಾಗಿ ಬೇರೆನ್ನೊಂದು ಭಿನ್ನ ಶಕ್ತಿಯನ್ನು ಸ್ವೀಕರಿಸುವ ಆವಶ್ಯಕತೆ ಇದೆಯೆಂದೂ ತಿಳಿಯಲಾಗಲಿಲ್ಲ. ಅವರು ತಮ್ಮ ಕರ್ಮಸಿದ್ಧಾಂತದಿಂದ ಮನುಷ್ಯನ ವ್ಯಕ್ತಿತ್ವ, ಅವನ ಗುಣ, ಆಚರಣ ಮತ್ತು ಸುಖ-ದುಃಖಾತ್ಮಕ ಅನುಭವಗಳನ್ನು ಉತ್ಪನ್ನ ಮಾಡುವ ಕರ್ಮಶಕ್ತಿಗಳಿಗೆ ಒಂದು ಸುವ್ಯವಸ್ಥಿತ ವೈಜ್ಞಾನಿಕ ಸ್ವರೂಪವನ್ನು ಉಪಸ್ಥಿತಗೊಳಿಸುವ ಪ್ರಯತ್ನಮಾಡಿದರು. ಇದರಿಂದ ಜೈನ ದಾರ್ಶನಿಕರು ತಮ್ಮ ಪರಮಾತ್ಮ ಅಥವಾ ಈಶ್ವರನನ್ನು ಅವನ ಕರ್ತೃತ್ವದಲ್ಲಿ ಉಂಟಾಗುವ ದೋಷಗಳಿಂದ ಮುಕ್ತಗೊಳಿಸಿದರು. ಇನ್ನೊಂದು ದೃಷ್ಟಿಯಿಂದ ಪ್ರತಿಯೊಂದು ವ್ಯಕ್ತಿಗೂ ತನ್ನ ಆಚರಣೆಯ ವಿಷಯದಲ್ಲಿ ಪೂರ್ಣವಾಗಿ ಉತ್ತರದಾಯಿತ್ವವನ್ನು ಒದಗಿಸಿದ್ದಾರೆ. ಜೈನ ಕರ್ಮ-ಸಿದ್ಧಾಂತದ ಈ ಮಾತು ಭಗವದ್ಗೀತೆಯ ಈ ಕೆಳಗಿನ ವಾಕ್ಯಗಳಲ್ಲಿ ಧ್ವನಿತ

ಗೊಂಡುದು ವ್ಯಕ್ತವಾಗುತ್ತದೆ. ಆ ಶ್ಲೋಕಗಳು ಹೀಗಿವೆ :—

ನ ಕರ್ತೃತ್ವಂ ನ ಕರ್ಮಾಣಿ ಲೋಕಸ್ಯ ಸೃಜತಿ ಪ್ರಭುಃ ।
ನ ಕರ್ಮ-ಫಲ-ಸಂಯೋಗಂ ಸ್ವಭಾವಸ್ತು ಪ್ರವರ್ತತೇ ॥
ನಾದತ್ತೇ ಕಸ್ಯಚಿತ್ ಪಾಪಂ ನ ಪುಣ್ಯಂ ಕಸ್ಯಚಿತ್ ವಿಭುಃ ।
ಅಜ್ಞಾನೇನಾವೃತಂ ಜ್ಞಾನಂ ತೇನ ಮುಹ್ಯಂತಿ ಜನ್ತವಃ ॥

(ಭ. ಗೀ. ೫. ೧೪-೧೫)

## ಜೀವ ಮತ್ತು ಕರ್ಮಬಂಧ ಸಾದಿಯೋ ಅನಾದಿಯೋ ? :—

ಕರ್ಮಸಿದ್ಧಾಂತದ ವಿವೇಚನೆಯಲ್ಲಿ ನಾವು ಹೀಗೆ ಕಂಡುಕೊಂಡಿದ್ದೇವೆ. ಜೀವವು ಯಾವ ಪ್ರಕಾರ ತನ್ನ ಮನ-ವಚನ-ಕಾಯಗಳ ಕ್ರಿಯೆಯಿಂದಲೂ ರಾಗದ್ವೇಷಾತ್ಮಕ ಭಾವನೆಗಳಿಂದಲೂ ತನ್ನ ಅಂತರಂಗದಲ್ಲಿ ಇಂಥದೊಂದು ಶಕ್ತಿಯನ್ನು ಹುಟ್ಟಿಸಿ ಕೊಳ್ಳುತ್ತದಷ್ಟೆ. ಆ ಶಕ್ತಿಯಿಂದ ನಾನಾ ಪ್ರಕಾರದ ಸುಖ-ದುಃಖ ರೂಪ ಅನುಭವ ವನ್ನು ಹೊಂದುತ್ತದೆ, ಮತ್ತು ಅದು ಸಂಸಾರಚಕ್ರದಲ್ಲಿ ಪರಿಭ್ರಮಣ ಮಾಡುತ್ತದೆ. ಇಲ್ಲಿ ಒಂದೇ ಪ್ರಶ್ನೆಯಿದೆ. ಜೀವದ ಈ ಸಂಸಾರ-ಪರಿಭ್ರಮಣವು ಯಾವ ಪ್ರಕಾರ ಅದು ಅನಾದಿಯಿದೆಯೋ, ಅದೇ ಪ್ರಕಾರ ಅದು ಅನಂತದವರೆಗೆ ನಡೆಯುವುದು ಅನಿವಾರ್ಯವೆ ? ಇದು ಅನಿವಾರ್ಯವಾಗಿರದಿದ್ದರೆ ಇದನ್ನು ಕೊನೆಗೊಳಿಸುವುದು ಅಪೇಕ್ಷಣೀಯವೆ ? ಅಪೇಕ್ಷಣೀಯವೇ ಆಗಿದ್ದರೆ ಅದರ ಉಪಾಯವೇನು ? ಈ ವಿಷಯ ದಲ್ಲಿ ಭಿನ್ನ ಭಿನ್ನ ಧರ್ಮಗಳಲ್ಲಿ ಮತ್ತು ದರ್ಶನಗಳಲ್ಲಿ ನಾನಾ ವಿಧ ಮತಾಂತರಗಳು ಕಂಡುಬರುತ್ತವೆ. ವಿಜ್ಞಾನವು ಎಲ್ಲಿ ಪ್ರಕೃತಿಯ ಅನ್ಯ ಗುಣಧರ್ಮಗಳ ಶೋಧದಲ್ಲಿ ತನ್ನ ಅಸಾಮಾನ್ಯ ಸಾಮರ್ಥ್ಯವನ್ನು ಪ್ರಕಟಿಸಿದೆಯೋ, ಅಲ್ಲಿ ಅದು ಜೀವದ ಭೂತ ಮತ್ತು ಭವಿಷ್ಯದ ಸಂಬಂಧದಲ್ಲಿ ಏನನ್ನೂ ನಿಶ್ಚಯಪೂರ್ವಕವಾಗಿ ಹೇಳುವುದಿಲ್ಲ. ಅದ ರಲ್ಲಿ ಅದು ಅಸಮರ್ಥವೆನಿಸಿದೆ. ಹೀಗಾಗಿ ಈ ವಿಷಯದ ಮೇಲೆ ನಾವು ಧಾರ್ಮಿಕ ದರ್ಶನಗಳ ಸೀಮೆಯಲ್ಲಿಯೇ ವಿಚಾರಮಾಡಬೇಕಾಗುತ್ತದೆ. ಯಾವ ದರ್ಶನವು ಜೀವನ ಪ್ರವಾಹವು ಸಾದಿಯೆಂದು ಅರ್ಥಾತ್ ಅನಾದಿ ಅಲ್ಲವೆಂದು ಯಾವುದಾದ ರೊಂದು ಕಾಲದಲ್ಲಿ ಅದು ಪ್ರಾರಂಭವಾಗಿದೆಯೆಂದು ಮನ್ನಿಸುತ್ತದೆಯೋ, ಅದರ ಎದುರಿಗೆ ಒಂದು ಪ್ರಶ್ನೆಯು ಉದ್ಭವಿಸುತ್ತದೆ. ಈ ಜೀವನದ ಪ್ರಾರಂಭವು ಎಂದು ಆಯಿತು ? ಏಕೆ ಆಯಿತು ? ಎಂದು ಆರಂಭವಾಯಿತೆಂಬುದಕ್ಕೆ ಉತ್ತರವಿಲ್ಲ. ಆದರೆ ಏಕೆ ಆರಂಭವಾಯಿತೆಂಬುದಕ್ಕೆ ಈಶ್ವರ ಇಚ್ಛೆಯಿಂದ ಜೀವಗಳ ಉತ್ಪತ್ತಿಯಾಯಿ ತೆಂದು ಹೇಳಲಾಗುತ್ತದೆ. ಈ ವಿಚಾರಸರಣಿಯಲ್ಲಿ ಜೀವದಂಥ ಚೇತನ ದ್ರವ್ಯದ ಉತ್ಪತ್ತಿಗೆಂದು ಮತ್ತೊಂದು ಈಶ್ವರನಂಥ ಮಹಾನ್ ಚೇತನ ದ್ರವ್ಯದ ಕಲ್ಪನೆ ಯನ್ನು ಮಾಡುವುದು ಅವಶ್ಯಕವಾಗಿ ಬಿಡುತ್ತದೆ. ಈ ಮಹಾನ್ ಚೇತನದ ಸತ್ತೆ ಯನ್ನು ಅನಾದಿಯೆಂದು ಮನ್ನಿಸುವುದೂ ಅನಿವಾರ್ಯವಾಗುತ್ತದೆ. ಜೈನಧರ್ಮದಲ್ಲಿ

ಈ ಎರಡು ಹಂತದ ಕಲ್ಪನೆಯ ಸ್ಥಾನದಲ್ಲಿ ಸರಳವಾಗಿ ಜೀವಗಳು ಅನಾದಿಕಾಲದಿಂದ ಸಂಸಾರದೊಳಗೆ ಇದ್ದ ಬಗ್ಗೆ ಸ್ವೀಕೃತಿಯನ್ನು ಕೊಡುವುದು ಉಚಿತವೆಂದು ತಿಳಿಯ ಲಾಗಿದೆ. ಆದರೆ ಬಹು ಸಂಖ್ಯ ಜೀವಗಳು ಈ ಸಂಸಾರ–ಭ್ರಮಣವನ್ನು ಕೊನೆಗೊಳಿಸಿ, ತಮ್ಮ ಶುದ್ಧರೂಪದಲ್ಲಿ ಅತ್ಯಂತ ಪ್ರಗತಿಯನ್ನು ಹೊಂದುವುದು ಸಂಭವವೆಂದು ಮನ್ನಿಸಲಾಗಿದೆ. ಈ ಪ್ರಕಾರ ಯಾವ ಜೀವಗಳಿಗೆ ಸಂಸಾರದಿಂದ ಹೊರಬಿದ್ದು, ಮೋಕ್ಷವನ್ನು ಸಂಪಾದಿಸುವ ಶಕ್ತಿಯು ಇರುತ್ತದೆಯೋ, ಆ ಜೀವಗಳಿಗೆ 'ಭವ್ಯ' ಅರ್ಥಾತ್ 'ಆಗುವುದಕ್ಕೆ ತಕ್ಕವು' ಎಂದು ಮನ್ನಿಸಲಾಗಿದೆ. ಇನ್ನು ಯಾವ ಜೀವ ಗಳಲ್ಲಿ ಈ ಸಾಮರ್ಥ್ಯವು ಇರುವುದಿಲ್ಲವೋ ಅವುಗಳಿಗೆ ಅಭವ್ಯವೆಂದು ಹೇಳಿದೆ.

## ನಾಲ್ಕು ಪುರುಷಾರ್ಥಗಳು :—

ಜೀವವು ತನ್ನ ಸಂಸಾರಾನುಭವವನ್ನು ಕೊನೆಗೊಳಿಸುವುದು ಅಪೇಕ್ಷಣೀಯವೋ ಅಥವಾ ಅಲ್ಲವೋ ; ಈ ವಿಷಯದಲ್ಲಿ ಕೂಡ ಸ್ವಭಾವತಃ ಬಹಳಷ್ಟು ಮತಭೇದಗಳು ಕಂಡುಬರುತ್ತವೆ. ಈ ವಿಷಯದಲ್ಲಿ ಒಂದು ಪ್ರಶ್ನೆಯೂ ಸಹ ಉದ್ಭವಿಸುತ್ತದೆ. ಜೀವ ನದ ಅಂತಿಮ ಧ್ಯೇಯವು ಏನಿದೆ ? ಭಾರತೀಯ ಪರಂಪರೆಯಲ್ಲಿ ಜೀವನದ ಧ್ಯೇಯ ಮತ್ತು ಪುರುಷಾರ್ಥಗಳನ್ನು ನಾಲ್ಕು ಪ್ರಕಾರವೆಂದು ಮನ್ನಿಸಲಾಗಿದೆ. ಇವು ಧರ್ಮ ಅರ್ಥ, ಕಾಮ ಮತ್ತು ಮೋಕ್ಷ ಎಂದು ಇವೆ. ಇವುಗಳ ಬಗ್ಗೆ ಸಮುಚಿತ ವಿಚಾರ ಮಾಡುವುದರಿಂದ ಕೆಲವೊಂದು ಸಂಗತಿಗಳು ಸ್ಪಷ್ಟವಾಗುತ್ತವೆ. ಈ ನಾಲ್ಕು ಪುರು-ಷಾರ್ಥಗಳನ್ನು ಎರಡು ಭಾಗಗಳಲ್ಲಿ ವಿಭಾಗಿಸುವುದು ಯೋಗ್ಯವಾಗಿದೆ. ಒಂದು ಧರ್ಮ ಮತ್ತು ಅರ್ಥ ; ಇನ್ನೊಂದು ಕಾಮ ಮತ್ತು ಮೋಕ್ಷ. ಇವುಗಳಲ್ಲಿ ಯಥಾರ್ಥವಾಗಿ ಕಾಮ ಹಾಗೂ ಮೋಕ್ಷಗಳೆರಡೇ ನಿಜವಾಗಿಯೂ ಪುರುಷಾರ್ಥಗಳಾಗಿವೆ. ಕಾಮದ ಅರ್ಥವು ಸಾಂಸಾರಿಕ ಸುಖವೆಂದಿದೆ. ಮೋಕ್ಷದ ಅರ್ಥವು ಸಾಂಸಾರಿಕ ಸುಖ, ದುಃಖ ಮತ್ತು ಬಂಧನಗಳಿಂದ ಮುಕ್ತಿಯೆಂದಾಗುತ್ತದೆ. ಈ ಎರಡು ಪರಸ್ಪರ ವಿರೋಧಿ ಪುರುಷಾರ್ಥಗಳಿಗೆ ಸಾಧನವು ಅರ್ಥ ಮತ್ತು ಧರ್ಮಗಳಾಗಿವೆ. ಅರ್ಥದಿಂದ ಧನ-ಭೌತಿಕ ಮೊದಲಾದ ಸಾಂಸಾರಿಕ ಪರಿಗ್ರಹಗಳು ದೊರೆಯುತ್ತವೆ. ಅವುಗಳಿಂದ ದೌಲತ ಸುಖವು ಲಭಿಸುತ್ತದೆ. ಇನ್ನು ಯಾವ ಶಾರೀರಿಕ ಮತ್ತು ಅಧ್ಯಾತ್ಮಿಕ ಸಾಧನೆಗಳಿಂದ ಮೋಕ್ಷವು ಪ್ರಾಪ್ತವಾಗುತ್ತದೆಯೋ ಅದು ಧರ್ಮವೆಂದು ತಾತ್ಪ-ರ್ಯವು. ಭಾರತೀಯ ದರ್ಶನಗಳಲ್ಲಿ ಕೇವಲ ಚಾರ್ವಾಕ ಮತವೊಂದು ಮಾತ್ರ ಅರ್ಥದಿಂದ ಕಾಮ ಪುರುಷಾರ್ಥವನ್ನು ಹೊಂದುವುದೇ ಜೀವನದ ಅಂತಿಮ ಧ್ಯೇಯ ವೆಂದು ಸ್ವೀಕರಿಸುತ್ತದೆ. ಯಾಕೆಂದರೆ ಈ ಮತಕ್ಕನುಸರಿಸಿ ಶರೀರದಿಂದ ಭಿನ್ನವಾದ ಜೀವದಂಥ, ಶರೀರವು ಭಸ್ಮವಾದ ಮೇಲೆ ತನ್ನ ಅಸ್ತಿತ್ವವನ್ನು ಸ್ಥಿರವಾಗಿ ಇಟ್ಟು ಕೊಳ್ಳುವಂಥ ಯಾವ ಪೃಥಕ್ ತತ್ವವೇ ಇಲ್ಲ. ಅದಕ್ಕಾಗಿ ಈ ಮತಕ್ಕೆ ನಾಸ್ತಿಕ ವೆಂದು ಹೇಳಿದ್ದಾರೆ. ಉಳಿದ ವೇದಾಂತಾದಿ ವೈದಿಕ ಮತ್ತು ಜೈನ, ಬೌದ್ಧಗಳಂಥ

ಅವೈದಿಕ ದರ್ಶನಗಳು ಒಂದಿಲ್ಲೊಂದು ರೂಪದಿಂದ ಶರೀರದಿಂದ ಭಿನ್ನವಾದ ಒಂದು ಶಾಶ್ವತ ತತ್ತ್ವವನ್ನೂ ಸ್ವೀಕರಿಸಿವೆ. ಅದಕ್ಕಾಗಿ ಈ ಮತಗಳು ಆಸ್ತಿಕವೆಂದು ಎನಿಸಿವೆ. ಹಾಗೆಯೇ ಈ ಮತಗಳಿಗನುಸರಿಸಿ ಜೀವದ ಕೊನೆಯ ಪುರುಷಾರ್ಥವು ಕಾಮವಾಗಿರದೆ ಮೋಕ್ಷವಾಗಿದೆ. ಇದರ ಸಾಧನವು ಧರ್ಮವೆಂದು ಸ್ವೀಕರಿಸಲಾಗಿದೆ. ಧರ್ಮದ ಇದೇ ಶ್ರೇಷ್ಠತ್ವವನ್ನು ಗಮನಿಸಿ ನಾಲ್ಕು ಪುರುಷಾರ್ಥಗಳಲ್ಲಿ ಅದಕ್ಕೆ ಪ್ರಥಮ ಸ್ಥಾನವೀಯಲಾಗಿದೆ. ಅದರಂತೆ ಮೋಕ್ಷದ ಚರಮ ಪುರುಷಾರ್ಥತೆಯನ್ನು ಸೂಚಿಸುವುದಕ್ಕೆಂದೇ ಅದನ್ನು ಕೊನೆಯಲ್ಲಿ ಇಡಲಾಗಿದೆ. ಅರ್ಥ ಮತ್ತು ಕಾಮ ಇವೆರಡು ಸಾಧನಗಳು, ಸಾಧ್ಯ-ಜೀವನದ ಮಧ್ಯದ ಅವಸ್ಥೆಗಳಾಗಿವೆ. ಅದಕ್ಕಾಗಿ ಇವುಗಳ ಸ್ಥಾನವು ಪುರುಷಾರ್ಥಗಳ ಮಧ್ಯದಲ್ಲಿದೆ.

### ಮೋಕ್ಷ ನಿಜವಾದ ಸುಖ :—

ಈ ಪ್ರಕಾರ ಜೈನಧರ್ಮಕ್ಕನುಸರಿಸಿ ಜೀವನದ ಅಂತಿಮ ಧ್ಯೇಯವು ಕಾಮ ಅರ್ಥಾತ್ ಸಾಂಸಾರಿಕ ಸುಖವೆಂದು ಮನ್ನಿಸಿರದೆ ಮೋಕ್ಷವನ್ನು ಮನ್ನಿಸಲಾಗಿದೆ. ಸ್ವಾಭಾವಿಕವಾಗಿ ಇಲ್ಲಿ ಒಂದು ಪ್ರಶ್ನೆಯು ಉದ್ಭವಿಸುತ್ತದೆ. ಪ್ರತ್ಯಕ್ಷ ಸುಖ ಕೊಡುವಂಥ ಪದಾರ್ಥ ಹಾಗೂ ಪ್ರವೃತ್ತಿಗಳಿಗೆ ಮಹತ್ವವನ್ನು ಕೊಡದೆ ಮೋಕ್ಷ ರೂಪ ಪರೋಕ್ಷ ಸುಖದ ಮೇಲೆ ಇಷ್ಟು ಭಾರವನ್ನು ಹಾಕುವ ಅವಶ್ಯಕತೆಯಾದರೂ ಏನಿದೆ? ಇದರ ಉತ್ತರವಿಷ್ಟೆ, ತತ್ವಜ್ಞಾನಿಗಳಿಗೆ ಈ ಸಂಸಾರ ಸುಖವು ನಿಜವಾದ ಸುಖವಲ್ಲ, ಇದು ಸುಖಾಭಾಸ ಮಾತ್ರ ಇದಯೆಂದು ಅನಿಸಿದೆ. ಅದು ಚಿರಸ್ಥಾಯಿಯಾಗದೆ ಅಲ್ಪ ಕಾಲೀನವೆನಿಸುತ್ತದೆ ಬಹುತರ ಒಂದು ಸುಖದ ತೃಪ್ತಿಯು ಉತ್ತರೋತ್ತರ ಅನೇಕ ಹೊಸ ಹೊಸ ಲಾಲಸೆಗಳಿಗೆ ಜನ್ಮ ಕೊಡುವುದು ಕಂಡುಬರುತ್ತದೆ ಮತ್ತು ಯಾವಾಗ ನಾವು ಈ ಸುಖದ ಸಾಧನಗಳು ಅರ್ಥಾತ್ ಸಾಂಸಾರಿಕ ಸುಖ-ಸಾಮಗ್ರಿಗಳ ಪ್ರಮಾಣದ ಮೇಲೆ ವಿಚಾರ ಮಾಡುತ್ತೇವೆಯೋ, ಆಗ ಅದು ಅಸಂಖ್ಯ ಪ್ರಾಣಿಗಳ ಲಾಲಸೆಗಳನ್ನು ತೃಪ್ತಗೊಳಿಸಲು ಹೇಗೆ ಪೂರೈಸೀತು ; ಒಂದು ಜೀವದ ಅಭಿಲಾಷೆಯನ್ನು ನಹ ಅದು ಪೂರೈಸದು. ಅದಕ್ಕಾಗಿ ಒಬ್ಬ ಆಚಾರ್ಯರು ಹೀಗೆ ಹೇಳಿದ್ದಾರೆ :-

> ಆಶಾಗರ್ತಃ ಪ್ರತಿಪ್ರಾಣಿ ಯಸ್ಮಿನ್ ವಿಶ್ವಮಣೂಪಮಮ್ ।
> ಕಸ್ಯ ಕಿಂ ಕಿಯದಾಯಾತಿ ವೃಥಾ ವೋ ವಿಷಯೈಷಿತಾ ॥

ಅರ್ಥಾತ್ ಪ್ರತಿಯೊಂದು ಪ್ರಾಣಿಯ ಅಭಿಲಾಷಾ ರೂಪೀಗರ್ತವು ಬಹು ದೊಡ್ಡದಿದೆ. ಅದರಲ್ಲಿ ವಿಶ್ವದ ಸರ್ವಸಂಪತ್ತು ಒಂದು ಅಣುವಿಗೆ ಸಮವೆನಿಸುತ್ತದೆ. ಅಂದಮೇಲೆ ಎಲ್ಲರ ಆಶೆಯು ಪೂರ್ತಿಯು ಹೇಗೆ, ಏನು, ಎಷ್ಟು ಕೊಟ್ಟರೆ ಪೂರ್ತಿಯಾಗಲು ಸಾಧ್ಯವಿದೆ ? ಅಂತೂ ಸಾಂಸಾರಿಕ ವಿಷಯಗಳ ವಾಸನೆಯು ಸರ್ವಥಾ ವ್ಯರ್ಥವಾಗಿದೆ. ಅದು ಬಾಹ್ಯವಸ್ತುಗಳ ಅಧೀನವಾಗಿರುವುದರಿಂದಲೂ ಅದರ ಪ್ರಾಪ್ತಿಯು ಅನಿಶ್ಚಿತವಾಗಿದೆ. ಅದಕ್ಕಾಗಿ ಪ್ರಯತ್ನಿಸುವುದೂ ಸಹ ಆತುರತೆ ಹಾಗು

ವಿಪತ್ತಿಗಳಿಂದ ಪರಿಪೂರ್ಣವಾಗಿದೆ. ಆ ದಿಸೆಯಲ್ಲಿ ಪ್ರವೃತ್ತಿಸುವುದರಿಂದ ಯಾರಿಗೂ ಎಂದೂ ತೃಪ್ತಿಯು ಉಂಟಾಗಿಲ್ಲ, ಮತ್ತು ಅವರಿಗೆ ಸ್ಥಾಯಿ ಸುಖ-ಶಾಂತಿಗಳು ಲಭಿಸಿದಂತಿಲ್ಲ. ಅದಕ್ಕಾಗಿ ನಿಜವಾದ ಸ್ಥಾಯೀ ಸುಖಕ್ಕಾಗಿ ಮನುಷ್ಯನು ಅರ್ಥ ಸಂಚಯ ರೂಪ ಪ್ರವೃತ್ತಿ-ಪರಾಯಣತೆಯಿಂದ ಪರಾಙ್ಮುಖಗೊಂಡು, ಧರ್ಮ ಸಾಧನರೂಪ ವಿರಕ್ತಿ-ಪರಾಯಣತೆಯ ಅಭ್ಯಾಸ ಮಾಡಬೇಕಾಗಿದೆ. ಅದರ ಮೂಲಕ ಸಾಂಸಾರಿಕ ತೃಷ್ಣೆಯ ಮುಕ್ತಿರೂಪ ಆತ್ಮಾಧೀನ ಮೋಕ್ಷ ಸುಖದ ಪ್ರಾಪ್ತಿಯಾಗು ವುದು. ಆಚಾರ್ಯರು ದುಃಖ ಮತ್ತು ಸುಖದ ಪರಿಭಾಷೆಯನ್ನು ಕೂಡ ಹೀಗೆ ಮಾಡಿದ್ದಾರೆ:—

ಸರ್ವ ಪರವಂ ದುಃಖಂ ಸರ್ವಮಾತ್ಮವಶಂ ಸುಖಮ್ ।
ಏತದ್ ವಿದ್ಯಾತ್ ಸಮಾಸೇನ ಲಕ್ಷಣಂ ಸುಖ-ದುಃಖಯೋಃ ॥

(ಮನು. ೪, ೧೬೦)

ಯಾವುದು ಪರಾಧೀನವಾಗಿದೆಯೋ ಅದೆಲ್ಲವೂ ಕೊನೆಯಲ್ಲಿ ದುಃಖದಾಯಕ ವಾಗಿದೆ, ಮತ್ತು ಯಾವುದು ಸ್ವಾಧೀನವಿದೆಯೋ ಅದೇ ನಿಜವಾಗಿ ಸುಖದಾಯಕ ವೆಂದು ಸಿದ್ಧವಾಗುತ್ತದೆ.

## ಮೋಕ್ಷ ಮಾರ್ಗ :-

ಜೈನಧರ್ಮದಲ್ಲಿ ಮೋಕ್ಷ ಪ್ರಾಪ್ತಿಯ ಉಪಾಯವು ಶುದ್ಧ ದರ್ಶನ, ಜ್ಞಾನ ಮತ್ತು ಚಾರಿತ್ರವೆಂದು ಹೇಳಿದೆ. ತತ್ವಾರ್ಥಶಾಸ್ತ್ರದ ಪ್ರಥಮ ಸೂತ್ರವು **ಸಮ್ಯಗ್ದ ರ್ಶನ ಜ್ಞಾನ ಚಾರಿತ್ರಾಣಿ ಮೋಕ್ಷ ಮಾರ್ಗಃ** । ಎಂದಿದೆ. ಇವೇ ಮೂರಕ್ಕೆ ರತ್ನ ತ್ರಯವೆಂದು ಮನ್ನಿಸಲಾಗಿದೆ. ಧರ್ಮದ ಸ್ವರೂಪವು ಈ ರತ್ನತ್ರಯಗಳಲ್ಲಿಯೇ ಅಡಕ ವಾಗಿದೆ. ಧರ್ಮದ ಈ ಮೂರು ಅಂಗಗಳು ವೈದಿಕ ಪರಂಪರೆಯಲ್ಲಿಯೂ ಶ್ರದ್ಧಾ ಅಥವಾ ಭಕ್ತಿ, ಜ್ಞಾನ ಮತ್ತು ಕರ್ಮಗಳೆಂಬ ಹೆಸರಿನಿಂದ ಸ್ವೀಕರಿಸಿದ್ದಾರೆ. ಮನು ಸ್ಮೃತಿಯಲ್ಲಿ ಇದೇ ಧರ್ಮವನ್ನು ಪ್ರತಿಪಾದಿಸುವ ಪ್ರತಿಜ್ಞೆಯನ್ನು ಮಾಡಲಾಗಿದೆ: ಯಾವುದನ್ನು ನಿಜವಾದ (ಸಮ್ಯಗ್-ದೃಷ್ಟಿ) ವಿದ್ವಾನ್ (ಜ್ಞಾನಿ) ರು, ರಾಗ-ದ್ವೇಷ-ರಹಿತ (ಸಚ್ಚಾರಿತ್ರವಾನ್) ಮಹಾಪುರುಷರು ಸೇವನ ಮತ್ತು ಅನುಜ್ಞಾಪನ ಮಾಡಿ ರುವರೋ ಅದನ್ನೇ ಪ್ರತಿಪಾದಿಸುವೆ-ಎಂದಿದೆ. ಭಗವದ್ ಗೀತೆಯಲ್ಲಿಯೂ ಕೂಡ ಶ್ರದ್ಧೆಯುಳ್ಳವನೇ ಜ್ಞಾನವನ್ನು ಸಂಪಾದಿಸುತ್ತಾನೆ; ಆ ಮೇಲೆಯೇ ಅವನು ಸಂಯಮಿ ಯಾಗುತ್ತಾನೆ-ಎಂದು ಸ್ವೀಕರಿಸಲಾಗಿದೆ. ಅದು ಹೀಗಿದೆ :-

ವಿದ್ವದ್ಭಿಃ ಸೇವಿತಃ ಸದ್ಭಿರ್ನಿತ್ಯಮದ್ವೇಷರಾಗಿಭಿಃ ।
ಹೃದಯೇನಾಭ್ಯನುಜ್ಞಾತೋ ಧರ್ಮಸ್ತನ್ನಿಬೋಧತ ॥

(ಮನು. ೨, ೧)

ಶ್ರದ್ಧಾವಾನ್ ಲಭತೆ ಜ್ಞಾನಂ ತತ್ಪರಃ ಸಂಯತೇನ್ದ್ರಿಯಃ ।

(ಭ. ಗೀ. ೪, ೩೯)

ದರ್ಶನವೆಂಬುದಕ್ಕೆ ಅನೇಕ ಅರ್ಥಗಳಾಗುತ್ತವೆ. ಅವುಗಳ ಉಲ್ಲೇಖವನ್ನು ಈ ಮೊದಲೇ ಮಾಡಲಾಗಿದೆ. ಮೋಕ್ಷ ಮಾರ್ಗದಲ್ಲಿ ಪ್ರವೃತ್ತವಾಗುವುದಕ್ಕಾಗಿ ಮೊದಲನೆಯ ಹೆಜ್ಜೆಯೆಂದು ಸಮ್ಯಗ್ದರ್ಶನವನ್ನು ಹೇಳಿದೆ. ಶಾಸ್ತ್ರೋಕ್ತ ತತ್ವಗಳ ಸ್ವರೂಪದಲ್ಲಿ ನಿಜವಾದ ಶ್ರದ್ಧೆಯು ಉತ್ಪನ್ನವಾಗುವುದೇ ಸಮ್ಯಗ್ದರ್ಶನವೆನಿಸುತ್ತದೆ. ಇಂಥ ಸತ್ಯ ಧಾರ್ಮಿಕ ದೃಷ್ಟಿಯ ಮೂಲವು ತನ್ನ ಆತ್ಮವು ಶರೀರದಿಂದ ಭಿನ್ನವಾಗಿದೆ ಯೆಂಬ ಅರಿವನ್ನು ಸದಾ ಇಟ್ಟುಕೊಳ್ಳುವುದೇ ಆಗಿದೆ. ಎಲ್ಲಿಯವರೆಗೆ ಈ ಅರಿವು ಮೂಡುವುದಿಲ್ಲವೋ ಅಲ್ಲಿಯವರೆಗೆ ಜೀವವು ಮಿಥ್ಯಾತ್ವಿಯಾಗಿದೆ. ಈ ಮಿಥ್ಯಾತ್ವದಿಂದ ಬಿಡುಗಡೆಯನ್ನು ಹೊಂದಿ, ಆತ್ಮಬೋಧರೂಪ ಸಮ್ಯಕ್ತ್ವದ ಪ್ರಾದುರ್ಭಾವವು ಜೀವದ ಗ್ರಂಥಿ-ಭೇದವೆಂದು ಹೇಳಿದ್ದಾರೆ. ಸಾಂಸಾರಿಕ ಪ್ರವಾಹದಲ್ಲಿ ಎಂದಾದರೂ ಯಾವ ರೀತಿಯಲ್ಲಾದರೂ ವಿವಿಧ ಕಾರಣಗಳಿಂದ ಅದು ಸಿದ್ಧವಾಗಿ ಹೋಗುತ್ತದೆ. ಜೀವಗಳಿಗೆ ಈ ಅಕಸ್ಮಾತ್ ಘರ್ಷಣ-ಘೋಲನ-ನ್ಯಾಯದಿಂದ ಇದು ಪ್ರಾಪ್ತ ವಾಗುತ್ತದೆ ಪ್ರವಾಹ-ಪತಿತ ಕಲ್ಲಿನ ತುಂಡುಗಳು ಪರಸ್ಪರ ತಿಕ್ಕುತ್ತ ತಾಗುತ್ತ ಇರುವುದರಿಂದ ನಾನಾ ಪ್ರಕಾರದ ವಿಶೇಷ ಆಕಾರವನ್ನು ಹೊಂದುತ್ತವೆ. ಅದು ದೇವಮೂರ್ತಿಯ ಸ್ವರೂಪವನ್ನು ಹೊಂದುವವರೆಗೂಮುಂದರಿಯುತ್ತದೆ. ಇಂಥ ಕೆಲವೊಂದು ಜೀವಗಳಿಗೆ ಒಂದು ವಿಶೇಷ ಅವಸ್ಥೆಯಲ್ಲಿ ಪೂರ್ವಜನ್ಮದ ಸ್ಮರಣೆಯು ಉಂಟಾಗುತ್ತದೆ. ಇದರಿಂದ ಅವುಗಳಿಗೆ ಸಮ್ಯಕ್ತ್ವವು ಪ್ರಾಪ್ತವಾಗುತ್ತದೆ. ಒಮ್ಮೊಮ್ಮೆ ತೀವ್ರ-ದುಃಖದ-ವೇದನೆಯಿಂದ ಇಲ್ಲವೆ ಧರ್ಮೋಪದೇಶ ಕೇಳಿ ಅಥವಾ ಧರ್ಮೋತ್ಸವಗಳನ್ನು ನೋಡುವುದರಿಂದ ಸಮ್ಯಕ್ತ್ವವು ಜಾಗೃತವಾಗುತ್ತದೆ. ಸಮ್ಯಕ್ತ್ವವು ಪ್ರಾಪ್ತವಾದಮೇಲೆ ಅದರಲ್ಲಿ ದೃಢತೆಯು ಯಾವಾಗ ಬರುವುದೋ ಆಗ ಅದು ಕೆಲವೊಂದು ದೋಷಗಳಿಂದ ಮುಕ್ತ ಹಾಗೂ ಗುಣಗಳಿಂದ ಸಂಯುಕ್ತ ವಾಗಿರುತ್ತದೆ. ಧಾರ್ಮಿಕ ಶ್ರದ್ಧೆಯ ಸಂಬಂಧದಲ್ಲಿ ಸಂಶಯಗಳು ರೂಪುಗೊಂಡಿರು ವುದು, ಅದರ ಸಾಧನೆಯಿಂದ ತಮ್ಮ ಸಾಂಸಾರಿಕ ಆಕಾಂಕ್ಷೆಗಳನ್ನು ಪೂರ್ತಿಗೊಳಿಸಿ ಕೊಳ್ಳುವ ಭಾವನೆಯನ್ನಿಡುವುದು, ಧರ್ಮೋಪದೇಶ ಅಥವಾ ಧಾರ್ಮಿಕ ಪ್ರವೃತ್ತಿ ಗಳ ಸಂಬಂಧದಲ್ಲಿ ಸಂದೇಹ ಇಲ್ಲವೆ ಘೃಣಾ ಭಾವವನ್ನು ಇಡುವುದು, ಕುತ್ಸಿತ ದೇವ, ಶಾಸ್ತ್ರ ಮತ್ತು ಗುರುಗಳಲ್ಲಿ ಆಸ್ಥೆಯನ್ನು ಇಡುವುದು, ಇವು ಸಮ್ಯಕ್ತ್ವವನ್ನು ಮಲಿನ ಮಾಡುವಂಥ ದೋಷಗಳಾಗಿವೆ. ಈ ನಾಲ್ಕನ್ನೂ ದೂರಗೊಳಿಸಿ ಧರ್ಮವನ್ನು ನಿಂದೆಯಿಂದ ರಕ್ಷಿಸುವುದು, ಧಾರ್ಮಿಕ ಜನರನ್ನು ಸತ್ಪ್ರವೃತ್ತಿಯಲ್ಲಿ ದೃಢಗೊಳಿಸು ವುದು, ಅವರೊಡನೆ ಸದ್‌ಭಾವಪೂರ್ಣ ವ್ಯವಹಾರವನ್ನು ಇಟ್ಟುಕೊಳ್ಳುವುದು, ಧರ್ಮದ ಮಹತ್ವವನ್ನು ಸ್ಪಷ್ಟ ಮಾಡುವುದಕ್ಕೆ ಪ್ರಯತ್ನಿಸುವುದು, ಈ ನಾಲ್ಕು ಗುಣಗಳು ಜಾಗೃತವಾಗುವುದರಿಂದ ಅಷ್ಟಾಂಗ ಸಮ್ಯಕ್ತ್ವವು ಪೂರ್ಣಗೊಳ್ಳುತ್ತದೆ.

## ಸಮ್ಯಗ್ದೃಷ್ಟಿ-ಮಿಥ್ಯಾದೃಷ್ಟಿ ಪುರುಷ :—

ಮಿಥ್ಯಾತ್ವೀ ಮತ್ತು ಸಮ್ಯಕ್ತ್ವೀ ಮನುಷ್ಯರ ಚಾರಿತ್ರದಲ್ಲಿ ಕಣ್ಣಿಗೆ ಕಾಣುವಂಥ ಭೇದಗಳು ಏನು? ಎಂಬ ಪ್ರಶ್ನೆಯೂ ಇಲ್ಲಿ ಉದ್ಭವಿಸುವುದು ಸಾಧ್ಯವಿದೆ. ಮಿಥ್ಯಾತ್ವಕ್ಕೆ ವಿಪರೀತ, ಏಕಾಂತ, ಸಂಶಯ, ವಿನಯ ಮತ್ತು ಅಜ್ಞಾನ ಈ ಐದು ಲಕ್ಷಣಗಳನ್ನು ಹೇಳಿದೆ. ಅಸತ್‌ವನ್ನು ಸತ್ ಎಂದೂ, ಕೆಡುಕನ್ನು ಒಳ್ಳೆಯದೆಂದೂ, ಪಾಪವನ್ನು ಪುಣ್ಯವೆಂದೂ ಮನ್ನಿಸಿ ನಡೆಯುವುದು ಮಿಥ್ಯಾತ್ವೀ ಮನುಷ್ಯನ ವಿಪರೀತತೆಯಾಗಿದೆ. ಅವನಲ್ಲಿ ಹಟವಾದಿತ್ವವು ಕಂಡುಬರುತ್ತದೆ. ಅವನ ದೃಷ್ಟಿಕೋಣವು ಬಹು ಸಂಕುಚಿತವಾಗಿರುತ್ತದೆ. ತನ್ನ ಧಾರಣಾ ಬಿಡುವುದಕ್ಕಾಗಲಿ ಬದಲಿಸುವುದಕ್ಕಾಗಲಿ ಸಿದ್ಧನಿರುವುದಿಲ್ಲ. ಅನ್ಯರ ವಿಚಾರಗಳೊಡನೆ ಹೊಂದಿಸಿಕೊಳ್ಳುವುದಕ್ಕೆ ಸಂಪೂರ್ಣ ಅಸಮರ್ಥನಾಗಿರುತ್ತಾನೆ. ಅವನಲ್ಲಿ ಉದಾರ ದೃಷ್ಟಿಯ ಅಭಾವವಿರುತ್ತದೆ. ಇದೇ ಅವನ ಏಕಾಂತತಾ ಎನಿಸುತ್ತದೆ. ಸಂಶಯಶೀಲ ವೃತ್ತಿಯೂ ಕೂಡ ಮಿಥ್ಯಾತ್ವದ ಲಕ್ಷಣವಾಗಿದೆ. ಒಳ್ಳೆಯದರಲ್ಲಿ ಒಳ್ಳೆಯದಾದ ಮಾತಿನಲ್ಲಿಯೂ ಮಿಥ್ಯಾತ್ವಿಗೆ ಪೂರ್ಣ ವಿಶ್ವಾಸವಿರುವುದಿಲ್ಲ. ಹೀಗಾಗಿ ಪ್ರಬಲತರ ತರ್ಕ ಮತ್ತು ಪ್ರಮಾಣಗಳು ಅವನ ಸಂಶಯಗಳನ್ನು ದೂರಮಾಡಲು ಸಮರ್ಥವಾಗುವುದಿಲ್ಲ. ವಿನಯದ ಅರ್ಥವು ನಿಯಮ-ಪರಿಪಾಲನೆಯೆಂದಿದೆ. ಆದರೆ ವಿವೇಕ ಇಲ್ಲದೆ ಯಾವುದೇ ಪ್ರಕಾರದ ಒಳ್ಳೆಯದಿರಲಿ, ಕೆಟ್ಟದ್ದೇ ಇರಲಿ ನಿಯಮವನ್ನು ಪಾಲಿಸುವುದೇ ಶ್ರೇಷ್ಠ ಧರ್ಮವೆಂದು ತಿಳಿದುಕೊಂಡಿದ್ದಾದರೆ ಆ ವಿನಯವು ಮಿಥ್ಯಾತ್ವವೆನಿಸುತ್ತದೆ. ಎಲ್ಲಿಯವರೆಗೆ ಯಾವ ಕ್ರಿಯೆಯು ರೂಪದಲ್ಲಿ ಇರುವ ಸಾಧನದ ಸಂಬಂಧವು ಅವನ ಆತ್ಮಶುದ್ಧಿಯೇ ಮೊದಲಾದ ಗುರಿಯೊಡನೆ ಸ್ಪಷ್ಟವಾಗಿ ಇರದೆ ಇದ್ದರೆ ಹಾಗೂ ದೃಷ್ಟಿಯಲ್ಲಿ ಇಟ್ಟುಕೊಳ್ಳದೆ ಇದ್ದರೆ ಅಲ್ಲಿಯವರೆಗೆ ವಿನಯಾತ್ಮಕ ಕ್ರಿಯೆಗಳು ಫಲಹೀನವಾಗುತ್ತವೆ; ಒಮ್ಮೊಮ್ಮೆ ಅನರ್ಥಕಾರಿಯೂ ಆಗುತ್ತವೆ. ತತ್ವ ಮತ್ತು ಅತತ್ವಗಳ ಸಂಬಂಧದಲ್ಲಿ ತಿಳುವಳಿಕೆಯು ಇಲ್ಲದಿರುವಿಕೆಯೇ ಅಜ್ಞಾನವೆನಿಸುತ್ತದೆ. ಈ ಐದು ದೋಷಗಳಿಂದ ಮನುಷ್ಯನ ಮಾನಸಿಕ ವ್ಯಾಪಾರ, ಮಾತು-ಕತೆ ಹಾಗೂ ಆಚಾರ-ವಿಚಾರಗಳಲ್ಲಿ ಒಳ್ಳೆಯತನ, ಯಥಾರ್ಥತೆ ಮತ್ತು ಸ್ವ-ಪರ ಹಿತಗಳು ಸಾಧಿಸುವುದಿಲ್ಲ. ಈ ಕಾರಣದಿಂದ ಅವನು ಮಿಥ್ಯಾತ್ವಿಯೆನಿಸುತ್ತಾನೆ. ಇದಕ್ಕೆ ವಿಪರೀತವಾಗಿ ಮೇಲೆ ಹೇಳಿದ ಆತ್ಮ-ಶ್ರದ್ಧಾನ ರೂಪ ಸಮಕ್ತ್ವವು ಉದಯವಾಗುವುದರಿಂದ ಮನುಷ್ಯನ ಚಾರಿತ್ರದಲ್ಲಿ ಯಾವ ಸದ್‌ಭಾವನೆಯು ಉತ್ಪನ್ನವಾಗುತ್ತದೆಯೋ ಅದರ ನಾಲ್ಕು ಲಕ್ಷಣಗಳು ಹೀಗಿವೆ :–ಪ್ರಶಮ, ಸಂವೇಗ, ಅನುಕಂಪಾ ಮತ್ತು ಆಸ್ತಿಕ್ಯ. ಸಮ್ಯಕ್ತ್ವಿಯ ಚಿತ್ತವೃತ್ತಿಯು ರಾಗದ್ವೇಷಾತ್ಮಕ ಭಾವನೆಗಳಿಂದ ವಿಶೇಷ ವಿಚಲಿತವಾಗುವುದಿಲ್ಲ; ಮತ್ತು ಅವನ ಪ್ರವೃತ್ತಿಯಲ್ಲಿ ಶಾಂತಭಾವವು ಕಂಡುಬರುತ್ತದೆ. ಶಾರೀರಿಕ ಮತ್ತು ಮಾನಸಿಕ ಆಕುಲತೆಗಳನ್ನು ಉತ್ಪನ್ನ ಮಾಡುವಂಥ ಸಾಂಸಾರಿಕ ಪ್ರವೃತ್ತಿಗಳನ್ನು ಸಮ್ಯಕ್ತ್ವಿಯು ಅಹಿತಕರವೆಂದು ತಿಳಿದು, ಅವುಗಳಲ್ಲಿ ವಿರಕ್ತ ಮತ್ತು ಬಂಧ-ಮುಕ್ತ

ನಾಗಿರುವ ಇಚ್ಛೆಯುಳ್ಳವನಿರುತ್ತಾನೆ. ಇದೇ ಸಮ್ಯಕ್ತ್ವದ ಸಂವೇಗ ಗುಣವಾಗಿದೆ. ಅವನು ಜೀವಮಾತ್ರರಲ್ಲಿ ಆತ್ಮ ತತ್ವದ ಸತ್ತೆಯನ್ನು ಕಾಣುವನು. ಅಲ್ಲದೆ ಅವುಗಳ ದುಃಖದಿಂದ ದುಃಖಿಯೂ ಸುಖದಿಂದ ಸುಖಿಯೂ ಆಗುವನು. ಅವುಗಳ ದುಃಖವನ್ನು ನಿವಾರಿಸುವುದರಲ್ಲಿ ಪ್ರಯತ್ನಶೀಲನಾಗಿರುತ್ತಾನೆ. ಇದು ಸಮ್ಯಕ್ತ್ವದ ಅನುಕಂಪಾ ಗುಣವಾಗಿದೆ. ಸಮ್ಯಕ್ತ್ವದ ಅಂತಿಮ ಲಕ್ಷಣವು ಆಸ್ತಿಕ್ಯವಾಗಿದೆ. ಇವಹವನ್ನುಳಿದರೂ ಕೂಡ ಆತ್ಮನ ಶಾಶ್ವತ ಗುಣದಲ್ಲಿ ವಿಶ್ವಾಸವಿಡುವಿಕೆ ಮತ್ತು ಪರಮಾತ್ಮತ್ವದ ಕಡೆಗೆ ಸಾಗುವುದರಲ್ಲಿ ನಂಬಿಗೆ, ಒಳ್ಳೆಯ ದೇವ ಶಾಸ್ತ್ರ ಮತ್ತು ನಿಜವಾದ ಗುರುವಿನಲ್ಲಿ ಶ್ರದ್ಧೆ, ಇವು ಆಸ್ತಿಕ್ಯದ ಲಕ್ಷಣಗಳಾಗಿವೆ. ಈ ಪ್ರಕಾರ ಮಿಥ್ಯಾತ್ವವನ್ನುಳಿದು ಸಮ್ಯಕ್ತ್ವವನ್ನು ಸ್ವೀಕರಿಸುವುದರ ಅರ್ಥವು ಅಧಾರ್ಮಿಕತೆಯಿಂದ ಧಾರ್ಮಿಕತೆಯಲ್ಲಿ ಬರುವುದೆಂದಿದೆ ಇದನ್ನೇ ಅಸಭ್ಯತೆಯ ಕ್ಷೇತ್ರದಿಂದ ಹೊರಬಿದ್ದು ಸಭ್ಯತಾ ಮತ್ತು ಸಾಮಾಜಿಕತೆಯ ಕ್ಷೇತ್ರದಲ್ಲಿ ಪ್ರವೇಶಿಸುವುದೆನ್ನಲಾಗುವುದು. ಸಮ್ಯಗ್ದರ್ಶನದ ಪ್ರಾಪ್ತಿಯಿಂದ ಜೀವನದ ಪರಿಷ್ಕಾರ ಮತ್ತು ಅದರಲ್ಲಿ ಕ್ರಾಂತಿ ಇವುಗಳ ದಿಗ್ದರ್ಶನವನ್ನು ಮನುಸ್ಮೃತಿಯಲ್ಲಿಯೂ (೬,೭೪) ಉತ್ತಮ ರೀತಿಯಿಂದ ಮಾಡಲಾಗಿದೆ :—

> ಸಮ್ಯಗ್ದರ್ಶನಸಂಪನ್ನಃ ಕರ್ಮಭಿರ್ನ ನಿಬಧ್ಯತೆ ।
> ದರ್ಶನೇನ ವಿಹೀನಸ್ತು ಸಂಸಾರಂ ಪ್ರತಿಪದ್ಯತೆ ॥

ಸಮ್ಯಜ್ಞಾನ :—

ಮೇಲೆ ಹೇಳಿದ ಪ್ರಕಾರ ಸಮ್ಯಕ್ತ್ವದಿಂದ ಶುದ್ಧ ದೃಷ್ಟಿಯನ್ನು ಸಂಪಾದಿಸಿಕೊಂಡ ಮೇಲೆ ಮೋಕ್ಷ ಮಾರ್ಗದಲ್ಲಿ ಮುನ್ನಡೆಯಲು ಜ್ಞಾನೋಪಾಸನೆಯು ಎರಡನೆಯ ಸಾಧನವಾಗಿದೆ. ಸಮ್ಯಗ್ದರ್ಶನದಿಂದ ಯಾವ ಜೀವಾದಿ ತತ್ವಗಳಲ್ಲಿ ಶ್ರದ್ಧೆಯು ಉತ್ಪನ್ನವಾಗಿರುವುದೋ ಅವುಗಳ ವಿಧಿವತ್ ಯಥಾರ್ಥ ತಿಳುವಳಿಕೆಯನ್ನು ಪ್ರಾಪ್ತ ಮಾಡಿಕೊಳ್ಳುವುದೇ ಜ್ಞಾನವಾಗಿದೆ. ದರ್ಶನದ ಕ್ಷೇತ್ರವು ಅಂತರಂಗವು, ಜ್ಞಾನದ ಕ್ಷೇತ್ರವು ಬಹಿರಂಗವು, ಇದು ದರ್ಶನ ಮತ್ತು ಜ್ಞಾನಗಳಲ್ಲಿಯ ಭೇದದ ಸೂಕ್ಷ್ಮರೇಖೆಯಾಗಿದೆ. ದರ್ಶನವು ಆತ್ಮದ ಸತ್ತೆಯ ಅರಿವನ್ನುಂಟುಮಾಡಿಕೊಡುತ್ತದೆ. ಜ್ಞಾನವು ಬಾಹ್ಯ ಪದಾರ್ಥಗಳ ಬೋಧೆಯನ್ನುಂಟುಮಾಡುತ್ತದೆ. ಎರಡರಲ್ಲಿಯೂ ಪರಸ್ಪರ ಸಂಬಂಧವು ಕಾರಣ ಮತ್ತು ಕಾರ್ಯದ್ದಿದೆ. ಎಲ್ಲಿಯವರೆಗೆ ಆತ್ಮಾವಧಾನವು ಆಗುವುದಿಲ್ಲವೋ, ಅಲ್ಲಿಯ ವರೆಗೆ ಬಾಹ್ಯ ಪದಾರ್ಥಗಳು ಇಂದ್ರಿಯಗಳಿಂದ ಸನ್ನಿಕರ್ಷ ಆಗಿದ್ದರೂ ಸಹ ಬೋಧವು ಆಗುವುದಿಲ್ಲ. ಹೀಗಾಗಿ ದರ್ಶನದ ಯಾವ ಸಾಮಾನ್ಯಗ್ರಹಣ ರೂಪ ಪರಿಭಾಷೆಯನ್ನು, ಮಾಡಲಾಗಿದೆಯೋ ಅದರ ತಾತ್ಪರ್ಯವು ಹೀಗಿದೆ : ಆತ್ಮ ಚೈತನ್ಯವು ಯಾವ ಅವಸ್ಥೆಯನ್ನು ಹೊಂದುವುದರಿಂದ ಮನಸ್ಸಿನ ಮುಖಾಂತರ ವಸ್ತುಗಳ ಜ್ಞಾನರೂಪ ಗ್ರಹಣವು ಸಂಭವಿಸುತ್ತದೆಯೋ ಅದಕ್ಕೆ ಸಾಮಾನ್ಯಗ್ರಹಣವೆನ್ನಲಾಗುವುದು. ಈ ಚೈತನ್ಯ ಮತ್ತು ಅವಧಾನಗಳು ಪರ–ಪದಾರ್ಥ–ಗ್ರಹಣಕ್ಕಾಗಿ

ಯಾವ ವಿಶೇಷ ಇಂದ್ರಿಯಗಳನ್ನು, ಮಾನಸಿಕ ಹಾಗೂ ಆಧ್ಯಾತ್ಮಿಕ ವೃತ್ತಿಗಳನ್ನು ಜಾಗೃತಗೊಳಿಸುತ್ತವೆಯೋ, ಅದಕ್ಕನುಸರಿಸಿ ಇದರಲ್ಲಿ ನಾಲ್ಕು ಭೇದಗಳಾಗುತ್ತವೆ. ಅವು ಚಕ್ಷುದರ್ಶನ, ಅಚಕ್ಷುದರ್ಶನ, ಅವಧಿದರ್ಶನ ಮತ್ತು ಕೇವಲ ದರ್ಶನ ಎಂದಿವೆ. ಚಕ್ಷು ಇಂದ್ರಿಯವು ಪರ ಪದಾರ್ಥವನ್ನು ಸಾಕ್ಷಾತ್ ಸ್ಪರ್ಶ ಮಾಡದೆ ನಿರ್ದಿಷ್ಟ ದೂರದ ಮೇಲಿಂದ ಪದಾರ್ಥವನ್ನು ಗ್ರಹಿಸುತ್ತದೆ. ಈ ಇಂದ್ರಿಯ ಗ್ರಹಣವನ್ನು ಜಾಗೃತಗೊಳಿಸುವಂಥದು ಚಕ್ಷುದರ್ಶನ ರೂಪ ವೃತ್ತಿಯು. ಅದನ್ನುಳಿದು ಅಚಕ್ಷು ದರ್ಶನದಿಂದ ಉದ್‌ಬುದ್ಧವಾಗುವಂಥ, ಇಂದ್ರಿಯ ವೃತ್ತಿಗಳಿಂದ ಭಿನ್ನವಾದಂಥ ಶ್ರೋತ್ರ, ಘ್ರಾಣ, ಜಿಹ್ವಾ ಮತ್ತು ಸ್ಪರ್ಶ ಇಂದ್ರಿಯಗಳಿಂದ ಅವಿರಲ ಸನ್ನಿಕರ್ಷ ವಾಗುವುದರಿಂದ ಉಂಟಾಗುವ ಪದಾರ್ಥಜ್ಞಾನವು ಅಚಕ್ಷುದರ್ಶನವು. ಇನ್ನು ಇಂದ್ರಿಯಗಳಿಗೆ ಅಗೋಚರವೂ, ಸೂಕ್ಷ್ಮವೂ, ತಿರೋಹಿತ ಅಥವಾ ದೂರಸ್ಥ ಪದಾರ್ಥಗಳ ಬೋಧವನ್ನುಂಟುಮಾಡುವಂಥ ಅವಧಿ ಜ್ಞಾನದ ಉದ್ಭಾವಕ ಆತ್ಮ-ಚೈತನ್ಯದ ಹೆಸರು ಅವಧಿದರ್ಶನ ಎಂದಿದೆ. ಇನ್ನು ಯಾವ ಆತ್ಮಾವಧಾನದಿಂದ ಸಮಸ್ತ ಜ್ಞೇಯವನ್ನು ಗ್ರಹಣ ಮಾಡುವ ಶಕ್ತಿಯು ಜಾಗೃತವಾಗುತ್ತದೆಯೋ, ಆ ಸ್ವಾವಧಾನದ ಹೆಸರು ಕೇವಲದರ್ಶನ ಎಂದು ಇದೆ.

**ಮತಿಜ್ಞಾನ :—**

ಈ ಪ್ರಕಾರ ಆತ್ಮಾವಧಾನ ರೂಪ ದರ್ಶನದ ನಿಮಿತ್ತದಿಂದ ಉತ್ಪನ್ನವಾಗು ವಂಥ ಜ್ಞಾನದಲ್ಲಿ ಮತಿ, ಶ್ರುತ, ಅವಧಿ, ಮನಃ ಪರ್ಯಾಯ ಮತ್ತು ಕೇವಲ ಎಂದು ಐದು ಭೇದಗಳಿವೆ. ಜ್ಞೇಯ ಪದಾರ್ಥ ಮತ್ತು ಇಂದ್ರಿಯ-ವಿಶೇಷದ ಸನ್ನಿ ಕರ್ಷ ಆಗುವುದರಿಂದ ಮನದ ನೆರವಿನಿಂದ ಯಾವ ವಸ್ತು ಬೋಧವು ಉತ್ಪನ್ನವಾಗು ತ್ತದೆಯೋ ಅದು ಮತಿಜ್ಞಾನ ವಾಗಿದೆ. ಪದಾರ್ಥ ಮತ್ತು ಇಂದ್ರಿಯಗಳ ಸನ್ನಿಕರ್ಷ ವಾದ ಮೇಲೆ ಮನಸ್ಸಿನ ಸಚೇತ ಅವಸ್ಥೆಯಲ್ಲಿ ಯಾವುದು ಮೊಟ್ಟಮೊದಲು 'ಏನಿದೆ' ಎನ್ನುವಂಥ ಬೋಧವು ಆಗುವುದೋ ಅದಕ್ಕೆ ಅವಗ್ರಹ ಎಂದು ಹೇಳಲಾಗುತ್ತದೆ. ಆ ಅಸ್ಪಷ್ಟ ವಸ್ತುಬೋಧಕ ಸಂಬಂಧದಲ್ಲಿ ವಿಶೇಷವಾಗಿ ತಿಳಿಯುವ ಇಚ್ಛೆಯು ಈಹಾ ಎನಿಸುತ್ತದೆ. ಅದರ ಫಲಸ್ವರೂಪವಾಗಿ ವಸ್ತುವಿನ ಯಾವ ವಿಶೇಷ ಬೋಧವಾಗು ವುದೋ ಅದು ಅವಾಯವು; ಮತ್ತು ಅದನ್ನು ಕಾಲಾಂತರದಿಂದ ಸ್ಮರಿಸುವ ಆ ರೂಪ ಸಂಸ್ಕಾರದ ಹೆಸರು ಧಾರಣಾ ಎಂದಿದೆ. ಈ ಪ್ರಕಾರ ಮತಿಜ್ಞಾನದ ಈ ನಾಲ್ಕು ಭೇದಗಳಿವೆ. ಜ್ಞೇಯ ಪದಾರ್ಥವು ಸಂಖ್ಯೆಯಲ್ಲಿ ಒಂದೂ ಇರುವುದು ಸಾಧ್ಯ ವಿದೆ. ಅದರಂತೆ ಒಂದೇ ಪ್ರಕಾರದ ಅನೇಕ ಇರುವ ಸಂಭವವೂ ಇದೆ. ಪ್ರಕಾರದ ಅಪೇಕ್ಷೆಯಿಂದ ಅವು ಬಹಳ ಅರ್ಥಾತ್ ವಿವಿಧ ಪ್ರಕಾರದ ಒಂದೆಂದಿರಬಹುದು; ಇಲ್ಲವೆ ಬಹುವಿಧ; ಅರ್ಥಾತ್ ಅನೇಕ ಪ್ರಕಾರದ ಅನೇಕವಿರಬಹುದು. ಅವುಗಳ ಆದಿಗ್ರಹಣವು ಶೀಘ್ರವೂ ಆದೀತು, ಇಲ್ಲವೆ ತಡ ವಾಗಿಯೂ ಆದೀತು, ವಸ್ತುವಿನ

ಸರ್ವಾಂಗ-ಗ್ರಹಣವೂ ಆಗುವುದು ಶಕ್ಯವಿದೆ; ಇಲ್ಲವೆ ಹೀನಾಧಿಕ ಅಧ್ರುವ ರೂಪವೂ ಆಗುವ ಸಾಧ್ಯತೆಯಿದೆ. ಈ ಪ್ರಕಾರ ಗೃಹೀತ ಪದಾರ್ಥದ ಅಪೇಕ್ಷೆಯಿಂದ ಅವಗ್ರಾಹಾದಿ ನಾಲ್ಕು ಭೇಧಗಳಲ್ಲಿ ೧೨-೧೨ ಭೇದವಾಗುವುದರಿಂದ ಮತಿಜ್ಞಾನಕ್ಕೆ ೪೮ ಭೇದಗಳಾಗುತ್ತವೆ. ಗ್ರಹಣ ಮಾಡುವಂಥ ಐದು ಇಂದ್ರಿಗಳು ಮತ್ತು ಒಂದು ಮನ, ಈ ಆರರ ಅಪೇಕ್ಷೆಯಿಂದ ಮೇಲಿನ ೪೮ ಭೇದ ಆರುಪಟ್ಟು ಆಗಿ ೨೮೮ (೪೮×೬) ಆಗಿ ಬಿಡುತ್ತವೆ. ಈ ಭೇದಗಳು ಜ್ಞೇಯ-ಪದಾರ್ಥ ಮತ್ತು ಗ್ರಾಹಕ-ಇಂದ್ರಿಯಗಳ ಅಪೇಕ್ಷೆಯಿಂದ ಇವೆ. ಆದರೆ ಯಾವಾಗ ಪದಾರ್ಥಗಳ ಗ್ರಹಣವು ಅವ್ಯಕ್ತ ಪ್ರಣಾಲಿಯಿಂದ ಕ್ರಮದಿಂದ ಆಗುತ್ತದೆಯೋ, ಆಗ ಅದು ಯಾವ ಪ್ರಕಾರ ಮಣ್ಣಿನ ಹೊಸ ಪಾತ್ರೆಯು ಜಲಕಣಗಳಿಂದ ತೊಯ್ದು, ಪೂರ್ಣರೂಪದಿಂದ ಕ್ರಮ ದಿಂದ ತುಂಬಿಹೋಗುತ್ತದೆಯೋ ಹಾಗೆ ಇರುತ್ತದೆ. ಈ ಪ್ರತಿಕ್ರಿಯೆಗೆ ವ್ಯಂಜನಾ-ವಗ್ರಹ ಎಂದು ಹೇಳುವರು. ಇದರಲ್ಲಿ ಈ ಮೂರು ಭೇದಗಳು ಆಗುವುದಿಲ್ಲ. ಹಾಗೆಯೇ ಚಕ್ಷು ಮತ್ತು ಮನಗಳ ಅಪೇಕ್ಷೆಯ ಸಂಭವವೂ ಇಲ್ಲ. ಆದರಿಂದ ಕೇವಲ ೧×೧೨ ×೪=೪೮ ಭೇದಗಳು ಮಾತ್ರ ಆಗುತ್ತವೆ. ಇವುಗಳನ್ನು ಮೊದಲು ಹೇಳಿದ ೨೮೮ ಭೇದಗಳಲ್ಲಿ ಕೂಡಿಸಿದಾಗ ಮತಿಜ್ಞಾನದ ೩೩೬ ಪ್ರಕಾರಗಳಾಗುತ್ತವೆಂದು ಹೇಳಿದೆ. ಈ ಪ್ರಕಾರ ಜೈನ ಸಿದ್ಧಾಂತದಲ್ಲಿ ಇಂದ್ರಿಯ-ಜನ್ಯ ಜ್ಞಾನದ ಬಹು ಸೂಕ್ಷ್ಮ ಚಿಂತನ ಮತ್ತು ವಿವೇಚನೆಗಳು ಕಂಡುಬರುತ್ತವೆ. ಈ ವಿಷಯವನ್ನು ಪೂರ್ಣವಾಗಿ ತಿಳಿದು ಕೊಳ್ಳುವುದಕ್ಕೆ ಪದಾರ್ಥಭೇದ, ಇಂದ್ರಿಯ ವ್ಯಾಪಾರ ಮತ್ತು ಮನೋವಿಜ್ಞಾನದ ಗಹನ ಚಿಂತನೆಯು ಆವಶ್ಯಕತೆಯಿದೆ.

**ಶ್ರುತ ಜ್ಞಾನ :—**

ಮತಿಜ್ಞಾನದ ಆಶ್ರಯದಿಂದ ಯುಕ್ತಿ, ತರ್ಕ, ಅನುಮಾನ ಮತ್ತು ಶಬ್ದಾರ್ಥ ಗಳ ಮುಖಾಂತರ ಯಾವ ಪರೋಕ್ಷ ಪದಾರ್ಥಗಳ ತಿಳುವಳಿಕೆಯು ಉಂಟಾಗುತ್ತ ದೆಯೋ, ಅದು ಶ್ರುತಜ್ಞಾನವಾಗಿದೆ. ಈ ಪ್ರಕಾರ ಹೊಗೆಯನ್ನು ಕಂಡು ಅಗ್ನಿಯ ಅಸ್ತಿತ್ವ, ಕೈಯನ್ನು ಕಂಡು ಇಲ್ಲವೆ ಶಬ್ದವನ್ನು ಕೇಳಿ ಮನುಷ್ಯನ ಇರುವಿಕೆ, ಯಾತ್ರಿಕರ ಮುಖದಿಂದ ಯಾತ್ರಾವರ್ಣನೆಯನ್ನು ಕೇಳಿ ವಿದೇಶದ ಪರಿಚಯವನ್ನು ಪಡೆಯುವಿಕೆ, ಶಾಸ್ತ್ರವನ್ನು ಓದಿ ತತ್ವ, ಈ ಲೋಕ-ಪರಲೋಕ ಮತ್ತು ಆತ್ಮ-ಪರ ಮಾತ್ಮರ ವಿಷಯಗಳ ಜ್ಞಾನ, ಇವೆಲ್ಲವೂ ಶ್ರುತಜ್ಞಾನಗಳಾಗಿವೆ. ಶ್ರುತಜ್ಞಾನದ ಈ ಎಲ್ಲ ಪ್ರಕಾರಗಳಲ್ಲಿ ಹೆಚ್ಚು ಎಲ್ಲಕ್ಕೂ ವಿಶಾಲ, ಪ್ರಭಾವಶಾಲಿ ಮತ್ತು ಹಿತಕಾರಿಯಾ ದದ್ದು ಲಿಖಿತ ಸಾಹಿತ್ಯವಾಗಿದೆ. ಅದರಲ್ಲಿ ನಮ್ಮ ಪೂರ್ವಜರ ಚಿಂತನ ಹಾಗೂ ಅನು ಭವಗಳ ವರ್ಣನೆಯೂ ವಿವೇಚನೆಯೂ ಸಂಗ್ರಹೀತವಾಗಿದೆ. ಈ ಕಾರಣದಿಂದ ಇದನ್ನೇ ವಿಶೇಷ ರೂಪದಿಂದ ಶ್ರುತಜ್ಞಾನವೆಂದು ಮನ್ನಿಸಲಾಗಿದೆ. ಜೈನಧರ್ಮದ ದೃಷ್ಟಿಯಿಂದ ಯಾವ ಶ್ರುತಜ್ಞಾನಕ್ಕೆ ಪ್ರಧಾನತೆಯನ್ನು ಕೊಡಲಾಗಿದೆಯೋ, ಅದರಲ್ಲಿ

ಅಂತಿಮ ತೀರ್ಥಂಕರ ಭಗವಾನ್ ಮಹಾವೀರನ ಧರ್ಮೋಪದೇಶಗಳನ್ನು ಸಂಗ್ರಹಿಸ ಲಾಗಿದೆ. ಈ ಶ್ರುತ ಸಾಹಿತ್ಯದಲ್ಲಿ ಅಂಗಪ್ರವಿಷ್ಟ ಮತ್ತು ಅಂಗ-ಬಾಹ್ಯ ಎಂದು ಮುಖ್ಯವಾಗಿ ಎರಡು ಭೇದಗಳು ಇವೆ. ಅಂಗಪ್ರವಿಷ್ಟದಲ್ಲಿ ಆಚಾರಾಂಗಾದಿ ೧೨ ಶ್ರುತಾಂಗಗಳು ಸಮಾವೇಶವಾಗುತ್ತವೆ. ಇವು ಭಗವಾನ್ ಮಹಾವೀರನ ಸಾಕ್ಷಾತ್ ಶಿಷ್ಯರಿಂದ ರಚಿಸಿದಂಥವುಗಳಾಗಿವೆ. ಅವುಗಳ ವಿಷಯಾದಿಗಳ ಪರಿಚಯವನ್ನು ಈ ಮೊದಲಿನ ಸಾಹಿತ್ಯ ಎಂಬ ವಾಖ್ಯಾನದಲ್ಲಿ ಮಾಡಿಕೊಡಲಾಗಿದೆ. ಅಂಗಬಾಹ್ಯದಲ್ಲಿ ದಶವೈಕಾಲಿಕ, ಉತ್ತರಾಧ್ಯಯನಾದಿ ಉತ್ತರಕಾಲೀನ ಆಚಾರ್ಯರು ರಚಿಸಿದ ಗ್ರಂಥ ಗಳು ಸಮಾವೇಶವಾಗುತ್ತವೆ. ಇವೂ ಶ್ರುತಾಂಗಗಳ ಆಶ್ರಯದಿಂದ ಕಾಲ ಕಾಲಕ್ಕೆ ವಿಶೇಷ ಪ್ರಕಾರದ ಶ್ರೋತ್ರೃಗಳ ಹಿತದ ದೃಷ್ಟಿಯಿಂದ ವಿವಿಧ ವಿಷಯಗಳನ್ನು ಕುರಿತು, ಪ್ರಯೋಜನಕ್ಕನುಸರಿಸಿ ಸಂಕ್ಷೇಪ ಮತ್ತು ವಿಸ್ತಾರವಾಗಿ ರಚಿತಗೊಂಡಿವೆ. ಇವುಗಳ ಪರಿಚಯವನ್ನು ಸಹ ಸಾಹಿತ್ಯಖಂಡದಲ್ಲಿ ಮಾಡಿಕೊಡಲಾಗಿದೆ. ಇವೆರಡನ್ನು ಅರ್ಥಾತ್ ಮತಿಜ್ಞಾನ ಮತ್ತು ಶ್ರುತಜ್ಞಾನಗಳನ್ನು ಪರೋಕ್ಷ ಎಂದು ಮನ್ನಿಸ ಲಾಗಿದೆ. ಯಾಕೆಂದರೆ ಇವು ಆತ್ಮನ ಮೂಲಕ ಸಾಕ್ಷಾತ್ ರೂಪದಿಂದ ಆಗದೆ, ಇಂದ್ರಿಯಗಳು ಮತ್ತು ಮನಗಳ ಮಾಧ್ಯಮದಿಂದಲೇ ಉತ್ಪನ್ನವಾಗುತ್ತವೆ. ಆದರೂ ತರುವಾಯದ ಕಾಲದ ಜೈನ ನ್ಯಾಯದ ಪರಂಪರೆಯಲ್ಲಿ ಮತಿಜ್ಞಾನವನ್ನು ಇಂದ್ರಿಯ ಪ್ರತ್ಯಕ್ಷವಾಗುವುದರ ಅಪೇಕ್ಷೆಯಿಂದ ಸಾಂವ್ಯವಹಾರಿಕ ಪ್ರತ್ಯಕ್ಷವೆಂದು ಮನ್ನಿಸ ಲಾಗಿದೆ.

**ಅವಧಿ ಜ್ಞಾನ :—**

ಆತ್ಮನಲ್ಲಿ ಒಂದು ವಿಶೇಷ ಶಕ್ತಿಯಿದೆಯೆಂದು ಮನ್ನಿಸಲಾಗಿದೆ. ಅದರಿಂದ ಆತ್ಮಕ್ಕೆ ಇಂದ್ರಿಯಗಳಿಗೆ ಅಗೋಚರವಾದಂಥ ಅತಿಸೂಕ್ಷ್ಮ, ತಿರೋಹಿತ ಮತ್ತು ಇಂದ್ರಿಯ ಸನ್ನಿಕರ್ಷಕ್ಕೆ ಒಳಗಾಗದ ದೂರಸ್ಥ ಪದಾರ್ಥಗಳ ಜ್ಞಾನವೂ ಕೂಡ ಆಗಲು ಸಾಧ್ಯವಿದೆ. ಇಂಥ ಜ್ಞಾನಕ್ಕೆ ಅವಧಿ ಜ್ಞಾನ ಎಂದು ಹೇಳಲಾಗುತ್ತದೆ, ಯಾಕಂದರೆ ಇದು ದೇಶದ ಮರ್ಯಾದೆಯಲ್ಲಿಯೇ ಆಗುತ್ತಿರುತ್ತದೆ. ಅವಧಿ ಜ್ಞಾನ ದಲ್ಲಿ ಭವ–ಪ್ರತ್ಯಯ ಮತ್ತು ಗುಣ–ಪ್ರತ್ಯಯ ಎಂಬ ಎರಡು ಭೇದಗಳಿವೆ. ದೇವ ಹಾಗೂ ನಾರಕಿ ಜೀವಗಳಲ್ಲಿ ಸ್ವಭಾವತಃ ಈ ಜ್ಞಾನದ ಅಸ್ತಿತ್ವವು ಕಂಡುಬರುತ್ತದೆ. ಆದರಿಂದ ಅದು ಭವ-ಪ್ರತ್ಯಯವು. ಮನುಷ್ಯ ಮತ್ತು ಪಶುಗಳಲ್ಲಿ ಇದು ವಿಶೇಷಗುಣ ಇಲ್ಲವೆ ಋದ್ಧಿಯ ಪ್ರಭಾವದಿಂದಲೇ ಕಂಡುಬರುತ್ತದೆ. ಅದರಿಂದ ಇದಕ್ಕೆ ಗುಣ ಪ್ರತ್ಯಯ ಅವಧಿಜ್ಞಾನವೆಂದು ಹೇಳುವರು. ಇದರಲ್ಲಿ ಅನುಗಾಮೀ, ಅನನುಗಾಮೀ, ವರ್ಧಮಾನ ಹೀಯಮಾನ, ಅವಸ್ಥಿತ ಮತ್ತು ಅನವಸ್ಥಿತವೆಂದು ಆರು ಭೇದಗಳು ಇವೆ. ಅನುಗಾಮೀ ಅವಧಿಜ್ಞಾನವು ಜ್ಞಾತಾ ಎಲ್ಲಿ ಹೋದರೂ ಅಲ್ಲಿಗೆ ಅದು ಜೊತೆಗೆ ಹೋಗುತ್ತದೆ; ಆದರೆ ಅನನುಗಾಮೀ ಅವಧಿಜ್ಞಾನವು ಸ್ಥಾನ–ವಿಶೇಷ

ದಿಂದ ಬೇರೆಯಾದೊಡನೆ ಬಿಟ್ಟು ಹೋಗುತ್ತದೆ. ವರ್ಧಮಾನ ಅವಧಿ ಜ್ಞಾನವು ಒಮ್ಮೆ ಜನಿಸಿದ ಮೇಲೆ ದಿನದಿನಕ್ಕೆ ಹೆಚ್ಚುತ್ತ ಹೋಗುತ್ತದೆ. ಇದಕ್ಕೆ ವಿಪರೀತವಾಗಿ ಹೀಯಮಾನವು ಕುಂದುತ್ತ ಹೋಗುತ್ತದೆ. ಯಾವಾಗಲೂ ಒಂದೇ ರೂಪದಲ್ಲಿ ಇರುವ ಜ್ಞಾನವು ಅವಸ್ಥಿತವೆನಿಸುತ್ತದೆ. ಅಕ್ರಮವಾಗಿ ಒಮ್ಮೆ ಕಡಿಮೆ ಇನ್ನೊಮ್ಮೆ ಹೆಚ್ಚು ಆಗುವಂಥದು ಅನವಸ್ಥಿತ ಅವಧಿ ಜ್ಞಾನವು. ವಿಸ್ತಾರದ ಅಪೇಕ್ಷೆಯಿಂದ ಅವಧಿ ಜ್ಞಾನವು ದೇಶಾವಧಿ, ಪರಮಾವಧಿ ಮತ್ತು ಸರ್ವಾವಧಿ ಎಂದು ಮೂರು ಪ್ರಕಾರವಾಗಿರುತ್ತದೆ. ಇವುಗಳಲ್ಲಿ ಜ್ಞೇಯ-ಕ್ಷೇತ್ರ ಮತ್ತು ಪದಾರ್ಥಗಳ ಪರ್ಯಾಯ ಗಳ ಜ್ಞಾನದಲ್ಲಿ ಉತ್ತರೋತ್ತರ ಹೆಚ್ಚು ವಿಸ್ತಾರ ಹಾಗೂ ವಿಶುದ್ಧಿಗಳು ಕಂಡುಬರು ತ್ತವೆ. ದೇಶಾವಧಿಯು ಒಮ್ಮೆ ಉತ್ಪನ್ನವಾಗಿ ಬಿಟ್ಟೂ ಸಹ ಹೋಗುತ್ತದೆ. ಇದರಿಂದ ಅದು ಪ್ರತಿಪಾತೀ ಆಗಿದೆ. ಆದರೆ ಪರಮಾವಧಿ ಮತ್ತು ಸರ್ವಾವಧಿ ಅವಧಿಜ್ಞಾನ ಗಳು ಉತ್ಪನ್ನವಾದ ಮೇಲೆ ತಿರುಗಿ ಎಂದೂ ಬಿಟ್ಟು ಹೋಗುವುದಿಲ್ಲ. ಅದು ಮುಂದೆ ಕೇವಲಜ್ಞಾನದಲ್ಲಿ ಲಯವಾಗುತ್ತದೆ.

**ಮನಃಪರ್ಯಯ ಜ್ಞಾನ :—**

ಮನಃಪರ್ಯಾಯ ಜ್ಞಾನದಿಂದ ಇನ್ನೊಬ್ಬರು ಮನಸ್ಸಿನಲ್ಲಿ ಚಿಂತಿಸಿದ ಪದಾರ್ಥ ಗಳ ಬೋಧವು ಆಗುತ್ತದೆ. ಇದರಲ್ಲಿ ಋಜುಮತಿ ಮತ್ತು ವಿಪುಲಮತಿ ಎಂಬ ಎರಡು ಭೇದಗಳಿವೆ ಋಜುಮತಿಯ ಅಪೇಕ್ಷೆಯಿಂದ ವಿಪುಲಮತಿ ಮನಃಪರ್ಯಾಯ ಜ್ಞಾನವು ಹೆಚ್ಚು ವಿಶುದ್ಧವಾಗಿರುತ್ತದೆ. ಋಜುಮತಿಯು ಒಮ್ಮೆ ಉತ್ಪನ್ನವಾಗಿ ಬಿಟ್ಟೂ ಕೂಡ ಹೋಗುತ್ತದೆ. ಆದರೆ ವಿಪುಲಮತಿ ಜ್ಞಾನವು ಅಪ್ರತಿಪಾತಿಯಾಗಿದೆ, ಅರ್ಥಾತ್ ಒಮ್ಮೆ ಉತ್ಪನ್ನವಾದರೆ ಎಂದೂ ತೊಲಗುವಂಥದಲ್ಲ.

**ಕೇವಲಜ್ಞಾನ :—**

ಕೇವಲಜ್ಞಾನದಿಂದ ವಿಶ್ವಮಾತ್ರದ ಸಮಸ್ತ ರೂಪೀ–ಅರೂಪೀ ದ್ರವ್ಯಗಳು ಮತ್ತು ಅವುಗಳ ತ್ರಿಕಾಲವರ್ತಿ ಪರ್ಯಾಯಗಳು ಇವೆಲ್ಲವುಗಳ ಜ್ಞಾನವು ಯುಗಪತ್ ಆಗುತ್ತದೆ. ಅವಧಿ ಮೊದಲಾದ ಮೂರೂ ಜ್ಞಾನಗಳನ್ನು ಪ್ರತ್ಯಕ್ಷವೆಂದು ಮನ್ನಿಸ ಲಾಗಿದೆ. ಯಾಕಂದರೆ ಅವು ಸಾಕ್ಷಾತ್ ಆತ್ಮನಿಂದ ಇಂದ್ರಿಯ ಮತ್ತು ಮನಗಳ ಸಹಾಯವಿಲ್ಲದೆ ಉಂಟಾಗುತ್ತವೆ. ಮತಿ ಹಾಗೂ ಶ್ರುತಜ್ಞಾನಗಳನ್ನುಳಿದು ಜೀವವು ಎಂದೂ ಇರುವುದಿಲ್ಲ. ಯಾಕಂದರೆ ಜೀವವು ಅವುಗಳ ಸೂಕ್ಷ್ಮತಮ ಅಂಶಗಳಿಂದ ಸಹ ವಂಚಿತವಾದಲ್ಲಿ ಅದು ಜೀವತ್ವದಿಂದಲೂ ಚ್ಯುತವಾಗಿ ಹೋಗಬಹುದು ; ಮತ್ತು ಜಡ ಪದಾರ್ಥದ ರೂಪವನ್ನು ಧಾರಣಮಾಡಿ ಬಿಡಬಹುದು ಆದರೆ ಇದು ಆಗುವುದು ಅಸಂಭವವಿದೆ. ಹೇಗೆಂದರೆ ಯಾವ ಮೂಲದ್ರವ್ಯವೂ ದ್ರವ್ಯಾಂತರದಲ್ಲಿ ಪರಿಣತಿ ಯನ್ನು ಹೊಂದದು. ಮತಿ ಮತ್ತು ಶ್ರುತಜ್ಞಾನಗಳ ಅನುಭವವು ಎಲ್ಲ ಮನುಷ್ಯರಿಗೂ

ಆಗುತ್ತದೆ. ಅವಧಿ ಮತ್ತು ಮನಃಪರ್ಯಾಯ ಜ್ಞಾನದ ಅನುಭವ ಕೂಡ ಎಲ್ಲಿಯಾದರೂ ಕೆಲವೊಂದು ಉದಾಹರಣೆಗಳನ್ನು ಕಾಣಬಹುದು; ಕೇಳಬಹುದು. ಆದರೆ ಅವು ಋದ್ಧಿ-ವಿಶೇಷದ ಪರಿಣಾಮಗಳಾಗಿರುತ್ತವೆ. ಕೇವಲಜ್ಞಾನವು ಯೋಗಿ-ಗಮ್ಯವಾಗಿದೆ. ಜೈನ ಮಾನ್ಯತೆಗನುಸರಿಸಿ ಈ ಕಾಲ ಮತ್ತು ಈ ಕ್ಷೇತ್ರದಲ್ಲಿ ಯಾರಿಗೂ ಇದು ಉತ್ಪನ್ನವಾಗುವುದು ಅಸಂಭವವಾಗಿದೆ. ಮತಿ, ಶ್ರುತ ಮತ್ತು ಅವಧಿಜ್ಞಾನಗಳು ಮಿಥ್ಯಾತ್ವ ಅವಸ್ಥೆಯಲ್ಲಿಯೂ ಆಗಲು ಸಾಧ್ಯವಿದೆ ಆಗ ಆ ಜ್ಞಾನಗಳಿಗೆ **ಕುಮತಿ, ಕುಶ್ರುತಿ** ಮತ್ತು **ಕುಅವಧಿ** ಎಂದು ಹೇಳಲಾಗುತ್ತದೆ. ಯಾಕಂದರೆ ಆ ಅವಸ್ಥೆಯಲ್ಲಿ ಅರ್ಥ-ಬೋಧವು ಚೆನ್ನಾಗಿ ಆದರೂ ಆ ಜ್ಞಾನವು ಧಾರ್ಮಿಕ ದೃಷ್ಟಿಯಿಂದ ಸ್ವ-ಪರಹಿತಕಾರಿಯಾಗಿರುವುದಿಲ್ಲ; ಆದರಿಂದ ಹಿತವಾಗುವುದಕ್ಕಿಂತ ಅಹಿತವಾಗುವ ಸಂಭವವೇ ಹೆಚ್ಚಾಗಿರುತ್ತದೆ. ಈ ಪ್ರಕಾರ ಜ್ಞಾನದಲ್ಲಿ ಒಟ್ಟು ಎಂಟು ಭೇದಗಳನ್ನು ಹೇಳಲಾಗಿದೆ.

**ಜ್ಞಾನದ ಸಾಧನ :—**

ನ್ಯಾಯದರ್ಶನದಲ್ಲಿ ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದ ಎಂಬ ನಾಲ್ಕು ಪ್ರಕಾರದ ಪ್ರಮಾಣಗಳನ್ನು ಸ್ವೀಕರಿಸಿದ್ದಾರೆ. ಈ ಭೇದಗಳು ಉತ್ತರ ಕಾಲೀನ ಜೈನ ನ್ಯಾಯದಲ್ಲಿಯೂ ಸ್ವೀಕರಿಸಲಾಗಿದೆ. ಆದರೆ ಇವುಗಳಿಂದ ಮೇಲೆ ಹೇಳಿದ ಐದು ಪ್ರಕಾರದ ಜ್ಞಾನಗಳಿಗೆ ಯಾವ ವಿರೋಧ ಇಲ್ಲವೆ ವೈಷಮ್ಯವು ಉಂಟಾಗುವುದಿಲ್ಲ. ಇಲ್ಲಿ ಪ್ರತ್ಯಕ್ಷದ ತಾತ್ಪರ್ಯವು ಇಂದ್ರಿಯ-ಪ್ರತ್ಯಕ್ಷ ಎಂದೇ ಇದೆ. ಮೇಲೆ ಹೇಳಿದ ಪ್ರಮಾಣ-ಭೇದಗಳಲ್ಲಿ ಪರೋಕ್ಷ ಎಂದು ಹೇಳಿದುದನ್ನು ಜೈನ ನೈಯಾಯಿಕರು ಸಾಂವ್ಯವಹಾರಿಕ ಪ್ರತ್ಯಕ್ಷ ಎಂದು ಕರೆದಿದ್ದಾರೆ. ಈ ಪ್ರಕಾರ ಅದು ಮತಿಜ್ಞಾನದ ಭೇದವೆಂದು ಸಿದ್ಧವಾಗುತ್ತದೆ. ಉಳಿದ ಅನುಮಾನ, ಉಪಮಾನ ಮತ್ತು ಶಬ್ದ ಪ್ರಮಾಣಗಳ ಸಮಾವೇಶವು ಶ್ರುತಜ್ಞಾನದಲ್ಲಿ ಆಗುತ್ತದೆ.

**ಪ್ರಮಾಣ ಮತ್ತು ನಯ :—**

ಪದಾರ್ಥಗಳ ಜ್ಞಾನದ ಉತ್ಪತ್ತಿಯು ಪ್ರಮಾಣ ಮತ್ತು ನಯ ಎಂಬ ಎರಡು ಪ್ರಕಾರಗಳಿಂದ ಆಗುತ್ತದೆ. (ಪ್ರಮಾಣನಯೈರಧಿಗಮಃ। ತ. ಸೂ. ೧, ೬). ಈಗ ವರ್ಣಿಸಿದ ಐದು ಪ್ರಕಾರದ ಜ್ಞಾನದ ಎಲ್ಲ ವಿವರಣೆಯನ್ನು ಪ್ರಮಾಣದ ಅಪೇಕ್ಷೆಯಿಂದ ಮಾಡಿದುದಾಗಿದೆ. ಈ ಪ್ರಮಾಣಭೂತ ಜ್ಞಾನಗಳಿಂದ ದ್ರವ್ಯದ ಆದರೆ ಸಮಗ್ರ ರೂಪದಲ್ಲಿ ಬೋಧವು ಆಗುತ್ತದೆ. ಆದರೆ ಪ್ರತಿಯೊಂದು ಪದಾರ್ಥವೂ ತನ್ನ ಏಕಾತ್ಮಕ ಸತ್ತೆಯನ್ನು ಕಾಯ್ದುಕೊಂಡೂ ಕೂಡ ಅನಂತಗುಣಾತ್ಮಕ ಮತ್ತು ಅನಂತ ಪರ್ಯಾಯಾತ್ಮಕವಾಗಿರುತ್ತದೆ. ಈ ಅನಂತ ಗುಣ-ಪರ್ಯಾಯಗಳಲ್ಲಿಂದ ವ್ಯವಹಾರದಲ್ಲಿ ಬಹುತರ ಯಾವುದೇ ಒಂದು ವಿಶೇಷ ಗುಣಧರ್ಮದ ಉಲ್ಲೇಖದ ಅವಶ್ಯಕತೆಯು

ಉಂಟಾಗುತ್ತದೆ. ಯಾವಾಗ ನಾವು, ಆ ದೊಡ್ಡ ಪುಸ್ತಕವನ್ನು ತಕ್ಕೊಂಡು ಬಾ ಎಂದು ಹೇಳುತ್ತೇವೆಯೋ, ಆಗ ನಮ್ಮ ಕಾರ್ಯವು ನಡೆದು ಹೋಗುತ್ತದೆ. ಹಾಗೂ ನಾವು ಅಪೇಕ್ಷಿಸಿದ ಪುಸ್ತಕವು ನಮ್ಮ ಎದುರಿಗೆ ಬರುತ್ತದೆ. ಆದರೆ ಇದರ ಅರ್ಥವು ಆ ಪುಸ್ತಕದಲ್ಲಿ ದೊಡ್ಡ ಗಾತ್ರದ ಹೊರತಾಗಿ ಇನ್ನಾವ ಗುಣ ಧರ್ಮವೂ ಇಲ್ಲವೆಂದಲ್ಲ. ಅಂತೂ ಜ್ಞಾನದ ದೃಷ್ಟಿಯಿಂದ ಈ ಎಚ್ಚರಿಕೆಯನ್ನು ಇಟ್ಟುಕೊಳ್ಳುವ ಆವಶ್ಯಕತೆಯೂ ಇದೆ. ನಮ್ಮ ಮಾತುಕತೆಗಳಾಡುವುದರ ಮುಖಾಂತರ ನಾವು ಅನ್ಯರಿಗೆ ಯಾವ ಜ್ಞಾನವನ್ನು ನೀಡುತ್ತೇವೆಯೋ, ಅದರಿಂದ ಎರಡನೆಯವರ ಹೃದಯದಲ್ಲಿ ವಸ್ತುವಿನ ಅನೇಕ ಗುಣಾತ್ಮಕತೆಯ ಸ್ಥಾನದಲ್ಲಿ ಏಕಾಂತಿಕದ ಮುದ್ರೆಯು ಬೀಳ ಕೂಡದು. ಅದಕ್ಕಾಗಿಯೇ ಏಕಾಂತವನ್ನು ಮಿಥ್ಯಾತ್ವವೆಂದು ಹೇಳಲಾಗಿದೆ. ಸಿದ್ಧಾಂತವನ್ನು ಪ್ರತಿಪಾದಿಸುವಲ್ಲಿ ಒಂದು ವಿಶೇಷ ಶೈಲಿಯನ್ನು ಉಪಯೋಗಿಸಿಯೇ ವಿಷಯವನ್ನು ಮಂಡಿಸಲಾಗುತ್ತದೆ. ಆದರಿಂದ ವಕ್ತೃವಿನ ಒಂದು ಗುಣವನ್ನು ಉಲ್ಲೇಖಿಸುವ ಅಭಿಪ್ರಾಯವೂ ಪ್ರಕಟಗೊಂಡಿರಬೇಕು. ಅದರೊಡನೆಯೇ ಆ ಗುಣವು ಅನ್ಯ–ಗುಣ–ಸಾಪೇಕ್ಷವಾಗಿದೆಯೆಂಬ ಅಭಿಪ್ರಾಯವೂ ಸ್ಪಷ್ಟವಾಗಿರಬೇಕು. ಜೈನ ದರ್ಶನದ ಈ ವಿಚಾರ ಮತ್ತು ವಚನ ಶೈಲಿಗಳನ್ನು ಅನೇಕಾಂತ ಮತ್ತು ಸ್ಯಾದ್ವಾದ ಎಂದು ಹೇಳುತ್ತಾರೆ ಹೇಳುವವನ ಅಭಿಪ್ರಾಯಕ್ಕನುಸರಿಸಿ ಒಂದು ವಸ್ತುವನ್ನೇ ಇದೆಯೆಂದೂ ಇಲ್ಲವೆಂದೂ ನಹ ಹೇಳಬಹುದು. ಎರಡೂ ಅಭಿಪ್ರಾಯಗಳ ಸಮ್ಮಿಲನದಿಂದ ಹೌದು–ಅಲ್ಲ ಎಂಬರ್ಥದ ಮಿಶ್ರಿತ ವಚನಭಂಗವೂ ಒಂದು ರೂಪುಗೊಳ್ಳುವುದು ಸಾಧ್ಯವಿದೆ. ಇದೇ ಕಾರಣದಿಂದ ಅದನ್ನು ಅವಕ್ತವ್ಯ ಎಂದೂ ಹೇಳಲಾಗುತ್ತದೆ. ಅವನು ಪ್ರಸ್ತುತ ವಸ್ತುಸ್ವರೂಪ ಇದ್ದೂ ಕೂಡ ತಿರುಗಿ ಅವಕ್ತವ್ಯವೂ ಇದೆ ಎಂಬುದನ್ನು ಹೇಳಲೂ ಸಾಧ್ಯವಿದೆ. ಅಲ್ಲದೆ ಈ ವಸ್ತುವು ಇಲ್ಲವೆಂದರೂ ತಿರುಗಿ ಅದು ಅವಕ್ತವ್ಯವಿದೆ. ಇದ್ದರೂ ಕೂಡ ಅದು ಅವಕ್ತವ್ಯವಿದೆ. ಅಲ್ಲದೆ ಇದ್ದರೂ ಇರದಿದ್ದರೂ ನಹ ಅವಕ್ತವ್ಯವಿದೆ. ಇವೇ ಏಳು ಸಂಭಾವನಾತ್ಮಕ ವಿಚಾರಗಳಿಗೆ ಅನುಸರಿಸಿ ಏಳು ಪ್ರಮಾಣಭಂಗಿಗಳನ್ನು ಮನ್ನಿಸಲಾಗಿದೆ ಇವುಗಳನ್ನೇ ಸ್ಯಾದ್ ಅಸ್ತಿ, ಸ್ಯಾದ್ ನಾಸ್ತಿ, ಸ್ಯಾದ್ ಅಸ್ತಿ–ನಾಸ್ತಿ, ಸ್ಯಾದ್ ಅವಕ್ತವ್ಯಮ್, ಸ್ಯಾದ್ ಅಸ್ತಿ–ಅವಕ್ತವ್ಯಮ್, ಸ್ಯಾದ್–ನಾಸ್ತಿ–ಅವಕ್ತವ್ಯಮ್ ಮತ್ತು ಸ್ಯಾದ್ ಅಸ್ತಿ–ನಾಸ್ತಿ ಅವಕ್ತವ್ಯಮ್ ಎಂದು ಹೇಳಲಾಗುತ್ತದೆ. ಬಹುತರ ಒಂದು ಉದಾಹರಣೆಯಿಂದ ಈ ಸ್ಯಾದ್ವಾದ ಶೈಲಿಯ ಸಾರ್ಥಕತೆಯು ಹೆಚ್ಚು ಸ್ಪಷ್ಟವಾಗುತ್ತದೆ. ತಾವು ಜ್ಞಾನಿಗಳಾಗಿರುವಿರಾ ? ಎಂದು ಯಾರಾದರೂ ಕೇಳಿದರೆನ್ನೋಣ. ಇದರ ಉತ್ತರದಲ್ಲಿ ಈ ಭಾವದಿಂದ, ನಾನು ಸ್ವಲ್ಪ ಇಲ್ಲ ಸ್ವಲ್ಪ ಅವಶ್ಯ ಏನಾದರೂ ತಿಳಿದುಕೊಂಡಿದ್ದೇನೆ. ನಾನು ಹೇಳಲು ಸಾಧ್ಯವಿದೆ "ನಾನು ಸ್ಯಾದ್ ಜ್ಞಾನಿಯಾಗಿದ್ದೇನೆ. ಹೀಗೂ ಹೇಳಲು ಸಾಧ್ಯವಿದೆ : ತನ್ನ ಜ್ಞಾನಕ್ಕಿಂತ ಅಜ್ಞಾನದ ಪ್ರಮಾಣವೇ ಹೆಚ್ಚು ಎಂದು ಹೇಳುವ ಕಡೆಗೆ ಗಮನವಿದ್ದಲ್ಲಿ " ನಾನು ಸ್ಯಾದ್ ಅಜ್ಞಾನಿಯಾಗಿದ್ದೇನೆ "

ಎಷ್ಟೋ ಸಂಗತಿಗಳ ಜ್ಞಾನವಿದೆ, ಮತ್ತು ಹಲವು ಸಂಗತಿಗಳ ಜ್ಞಾನವು ಇಲ್ಲ. ಆಗ ನಾನು ಹೇಳಬಹುದು : "ನಾನು ಜ್ಞಾನಿಯೂ ಹೌದು, ಮತ್ತು ಅಲ್ಲವೂ ನಹ." ಹೀಗೆಂದರು ಅನುಚಿತವಾಗಲಾರದು. ಈ ದ್ವಿವಿಧ ಕಾರಣಕ್ಕಾಗಿ ನಾನು ಇಷ್ಟೇ ಹೇಳಬಹುದು : "ನಾನು ಜ್ಞಾನಿಯೋ ಅಲ್ಲವೋ ಎಂಬುದನ್ನು ನಾನು ಹೇಳುವುದು ನಾಧ್ಯವಿಲ್ಲ." ಹೀಗೆಂದಾಗಲೂ ನನ್ನ ವಚನವು ಅಸತ್ಯವಾಗಲಾರದು. ಇದೇ ಆಧಾರದ ಮೇಲೆ ನಾನು ನತ್ಯದೊಡನೆ ಇದನ್ನೂ ಕೂಡ ಹೇಳಲು ಸಾಧ್ಯವಿದೆ: "ನನಗೆ ಕೆಲವೊಂದು ಜ್ಞಾನವಿದೆಯಾದರೂ ನೀವು ನನ್ನಿಂದ ಯಾವುದನ್ನು ತಿಳಿಯ ಲಿಕ್ಕೆ ಅಪೇಕ್ಷಿಸುವಿರೋ ಅದರ ಮೇಲೆ ಬೆಳಕನ್ನು ಬೀರಲು ನನಗೆ ಸಾಧ್ಯವಿದೆಯೋ ಇಲ್ಲವೋ ಎಂಬುದನ್ನು ನನಗೆ ಹೇಳಲು ಶಕ್ಯವಿಲ್ಲ." ಈ ಮಾತನ್ನು ಎರಡನೆಯ ಪ್ರಕಾರದಿಂದಲೂ ಹೇಳಲಿಕ್ಕೆ ಸಾಧ್ಯವಿದೆ. "ನಾನು ಜ್ಞಾನಿಯಂತೂ ಅಲ್ಲ. ಆದರೂ ತಮ್ಮ ಸಂಗತಿಯ ಮೇಲೆ ಕೆಲವೊಂದು ಬೆಳಕನ್ನು ಬೀರಬಲ್ಲೆ," ಅಥವಾ ಈ ಪ್ರಕಾರವೂ ಹೇಳಬಹುದಾಗಿದೆ. "ನನಗೆ ಕೆಲವೊಂದು ಜ್ಞಾನವಿದೆಯಾದರೂ ಕೆಲವೊಂದು ವಿಷಯ ದಲ್ಲಿ ಇಲ್ಲ. ಆದರಿಂದ ಪ್ರಕೃತ ವಿಷಯದಲ್ಲಿ ನನಗೆ ಜ್ಞಾನವಿದೆಯೋ ಅಥವಾ ಇಲ್ಲವೋ ಎಂಬುದನ್ನು ನಾನು ಹೇಳುವುದು ನಾಧ್ಯವಿಲ್ಲ." ಈ ಸಮಸ್ತ ವಚನ ಪ್ರಣಾಲಿ ಗಳು ತಮ್ಮ ತಮ್ಮ ನಾರ್ಥಕತೆಯನ್ನು ಕಾಯ್ದುಕೊಳ್ಳುತ್ತವೆ. ಅಲ್ಲದೆ ಪೃಥಕ್ ಪೃಥಕ್‌ವಾಗಿ ವಸ್ತುಸ್ಥಿತಿಯ ಒಂದು ಅಂಶವನ್ನೂ ಪ್ರಕಟಿಸುತ್ತವೆ, ಅಂದರೆ ಅದರ ಪೂರ್ಣ ಸ್ವರೂಪವನ್ನಲ್ಲ. ಅದಕ್ಕಾಗಿ ಜೈನ ನ್ಯಾಯವು ಈ ಸಂಗತಿಯ ಕಡೆಗೆ ದೃಷ್ಟಿ ಯನ್ನು ಇಟ್ಟಿದೆ ; ಮೇಲೆ ಸೂಚಿಸಿದವುಗಳಲ್ಲಿ ಬೇಕಾದುದನ್ನು ತನ್ನ ಅಭಿಪ್ರಾಯ ಕ್ಕನುಸರಿಸಿ ಮಾತುಗಾರನು ತನ್ನ ಇಚ್ಛೆಗನುಸರಿಸಿ ಮಾತನ್ನು ಬಳಸಬಲ್ಲನು. ಆದರೆ ಅದರ ಜೊತೆಗೆ ಸ್ಯಾತ್ ಪದವನ್ನು ಅವಶ್ಯ ಜೋಡಿನಲಿಕ್ಕೆ ಬೇಕು ಇದರಿಂದ ವಸ್ತು ಸ್ಥಿತಿಯಲ್ಲಿ ಅನ್ಯ ಸಂಭಾವ್ಯಗಳೂ ಇವೆಯೆಂಬುದು ಸ್ಪಷ್ಟವಾಗುತ್ತದೆ. ಒಟ್ಟಿನಲ್ಲಿ ಅವನ ಮಾತನ್ನು ಸಾಪೇಕ್ಷ ರೂಪದಿಂದಲೇ ನಾವು ತಿಳದುಕೊಳ್ಳುತ್ತೇವೆ. ಈ ಪ್ರಕಾರ ಈ ಸ್ಯಾದ್ವಾದ ಪ್ರಣಾಲಿಯು ಯಾವ ಅದ್ವಿತೀಯ ವಸ್ತುವೂ ಅಲ್ಲ. ಯಾಕಂದರೆ ವ್ಯವಹಾರದಲ್ಲಿ ನಾವು ಸ್ಯಾತ್ ಶಬ್ದವನ್ನು ಪ್ರಯೋಗಿಸದೆಯೂ ಸಹ ಕೆಲವೊಂದು ಈ ಸಾಪೇಕ್ಷಭಾವಗಳನ್ನು ಗಮನಿಸುತ್ತಲೇ ಇರುತ್ತೇವೆ. ಆದರೆ ಶಾಸ್ತ್ರಾರ್ಥದಲ್ಲಿ ಒಮ್ಮೊಮ್ಮೆ ಈ ಮಾತನ್ನು ಗಮನಿಸದೆ ಸಾಪೇಕ್ಷತೆಯ ಕಡೆಗೆ ಧ್ಯಾನ ಕೊಡದೆ ಹೋದಾಗ ಬಹು ದೊಡ್ಡ ದೊಡ್ಡ ವಿರೋಧಗಳೂ ಮತಭೇದಗಳೂ ಉಪಸ್ಥಿತ ವಾಗುತ್ತವೆ. ಇದರಲ್ಲಿ ಸಾಮಂಜಸ್ಯವಾಗುವುದು ಕಠಿಣವಾಗಿಬಿಡುತ್ತದೆ. ಜೈನ ಸ್ಯಾದ್ವಾದ ಪ್ರಣಾಲಿಯಿಂದ ಇಂಥ ವಿರೋಧ ಹಾಗೂ ಮತಭೇದಗಳಿಗೆ ಅವಕಾಶ ಕೊಡದಿರುವುದಕ್ಕೆ ಪ್ರಯತ್ನಮಾಡಲಾಗಿದೆ. ಎಲ್ಲಿ ವಿರೋಧವು ಕಂಡುಬರುವುದೋ ಅಲ್ಲಿ ಈ ಸ್ಯಾತ್ ಪದವನ್ನು ಪ್ರಯೋಗಿಸಿ ಅದನ್ನು ಸುಲಭಗೊಳಿಸಲಿಕ್ಕೂ ಸಾಮಂಜ ಸ್ಯವನ್ನು ರೂಪಿಸಲಿಕ್ಕೂ ವಿಚಾರದ ಸಸಿಯೊಂದನ್ನು ನೆಡನಲಾಗಿದೆ. ವ್ಯಾಕರಣಾತ್ಮಕ

ಉತ್ಪತ್ತಿಗನುಸರಿಸಿ ಸ್ಯಾತ್ ಅಸ್ ಧಾತುವಿನ ವಿಧಿಲಿಂಗ ಅನ್ಯಪುರುಷ ಏಕವಚನದ ರೂಪವಾಗಿದೆ. ಅದರ ಅರ್ಥವು " ಹೀಗಾಗಲಿ " " ಇದೂ ಒಂದು ಸಂಭವವಿದೆ," ಎಂದಾಗುತ್ತದೆ. ಜೈನ ನ್ಯಾಯದಲ್ಲಿ ಈ ಪದವನ್ನು ಸಾಪೇಕ್ಷ ವಿಧಾನ ವಾಚಕ ಅವ್ಯಯವನ್ನು ಸಿದ್ಧಗೊಳಿಸಿ. ತನ್ನ ಅನೇಕಾಂತ ವಿಚಾರ ಶೈಲಿಯನ್ನು ಪ್ರಕಟಗೊಳಿಸುವ ಸಾಧನವನ್ನಾಗಿ ರೂಪಿಸಿಕೊಂಡಿದೆ. ಇದನ್ನು ಅನಿಶ್ಚಯ ಬೋಧಕವೆಂದು ತಿಳಿಯುವುದು ಯಾವಾಗಲೂ ಯುಕ್ತಿಯುಕ್ತವೆಂದು ಎನಿಸದು.

**ನಯ :—**

ಪದಾರ್ಥಗಳ ಅನಂತ ಗುಣ ಮತ್ತು ಪರ್ಯಾಯಗಳಲ್ಲಿ ತಮ್ಮ ಪ್ರಯೋಜನಕ್ಕನುಸರಿಸಿ, ಯಾವುದಾದರೊಂದು ಗುಣ-ಧರ್ಮದ ಸಂಬಂಧದಲ್ಲಿ ಹೇಳುವ ಅಭಿಪ್ರಾಯಕ್ಕೆ ನಯವೆಂದು ಹೆಸರಿದೆ. ನಯಗಳ ಮುಖಾಂತರವೇ ವಸ್ತುವಿನ ನಾನಾ ಗುಣಗಳ ವಿವೇಚನೆಯು ಸಾಧ್ಯವಿದೆ ಮಾತಿನಲ್ಲಿಯೂ ಸಹ ಒಂದು ಕಾಲದಲ್ಲಿ ಯಾವುದಾದರೂ ಒಂದೇ ಗುಣ ಧರ್ಮವನ್ನು ಉಲ್ಲೇಖಿಸುವ ಸಂಭವವಿದೆ. ಇದರ ಯಥೋಚಿತ ಪ್ರಸಂಗವು ನಯ ವಿಚಾರದ ಮುಖಾಂತರವೇ ಸಂಭವ ಸಾಧ್ಯವಿದೆ. ಇದರಿಂದ ಎಷ್ಟು ಪ್ರಕಾರದ ಮಾತು ಸಾಧ್ಯವೋ, ಅಷ್ಟು ಪ್ರಕಾರದ ನಯಗಳು ಆಗುವುದು ಸಾಧ್ಯವಿದೆ, ಎಂಬುದು ಸ್ಪಷ್ಟವಾಗುತ್ತದೆ. ಆದರೂ ವರ್ಗೀಕರಣದ ಅನುಕೂಲತೆಗಾಗಿ ನಯಗಳ ಸಂಖ್ಯೆಯು ಏಳೆಂದು ಸ್ಥಿರಗೊಳಿಸಲಾಗಿದೆ. ಅವು ನೈಗಮ, ಸಂಗ್ರಹ, ವ್ಯವಹಾರ, ಋಜುಸೂತ್ರ, ಶಬ್ದ, ಸಮಭಿರೂಢ ಮತ್ತು ಏವಂಭೂತ ಎಂದಿವೆ. ನೈಗಮದ ಅರ್ಥವು ಹೀಗಿದೆ-ನ ಏಕಃ ಗಮಃ ಅರ್ಥಾತ್ ಒಂದೇ ಮಾತಿದೆ. ಯಾವಾಗ ಸಾಮಾನ್ಯವಾಗಿ ಯಾವುದೇ ವಸ್ತುವಿನ ಭೂತ, ಭವಿಷ್ಯತ್, ವರ್ತಮಾನ ಪರ್ಯಾಯಗಳನ್ನು ಹೊಂದಿಸಿ ಕೂಡಿಸಿ ಸಂಗತಿಯನ್ನು ಹೇಳಲಾಗುವುದೋ ಆಗ ಹೇಳುವವನ ಅಭಿಪ್ರಾಯವು ನೈಗಮ-ನಯಾತ್ಮಕವಾಗುತ್ತದೆ ಒಬ್ಬ ವ್ಯಕ್ತಿಯು ' ಉರಿಯನ್ನು ಮಾಡಿದ್ದೀಯಾ ?' ಎಂದು ಕೇಳಿದಾಗ ಅದಕ್ಕೆ ಉತ್ತರವೆಂದು ' ನಾನು ರೊಟ್ಟಿಯನ್ನು ಮಾಡುತ್ತಿದ್ದೇನೆ ' ಎನ್ನುವನು ಇವನ ಮಾತು ನೈಗಮನಯಕ್ಕನುಸರಿಸಿ ಸರಿಯೆಂದು ಮನ್ನಿಸಲಾಗುವುದು ಯಾಕಂದರೆ ಕೇಳುವವನ ಅಭಿಪ್ರಾಯವು ಬೆಂಕಿಯನ್ನು ಉರಿಸುವುದನ್ನು ಪ್ರತ್ಯಕ್ಷ ಕಂಡರೂ ಹಾಗೆ ಕೇಳುವುದರ ಅಭಿಪ್ರಾಯವು ಹಾಗೆಯೇ ಇತ್ತು : " ಅಗ್ನಿಯನ್ನು ಯಾತಕ್ಕಾಗಿ ಉರಿಸುತ್ತಿರುವಿ ?" ಇಲ್ಲಿ ನಾವು ನೈಗಮ ನಯದ ಆಶ್ರಯದಿಂದ ಪ್ರಶ್ನೆಯನ್ನು ಕೇಳುವವನ ಹಾಗು ಅದಕ್ಕೆ ಉತ್ತರಿಸುವವನ ಅಭಿಪ್ರಾಯಗಳನ್ನು ತಿಳಿಯದೆ ಹೋದರೆ ಪ್ರಶ್ನೆ ಮತ್ತು ಉತ್ತರಗಳಲ್ಲಿ ಸುಸಂಗತಿಯನ್ನು ಕಾಣದೆ ಹೋಗುತ್ತೇವೆ ಇದೇ ಪ್ರಕಾರ, ಯಾವಾಗ ಚೈತ್ರ ಶುಕ್ಲ ತ್ರಯೋದಶಿಯನ್ನು ಭಗವಾನ್ ಮಹಾವೀರ ತೀರ್ಥಂಕರರ ಜನ್ಮ ದಿನವೆಂದು ಮನ್ನಿಸುತ್ತೇವೆಯೋ, ಆಗ ಸಾವಿರಾರು ವರ್ಷಗಳ ಪೂರ್ವದ ಭೂತಕಾಲದ

ಘಟನೆಯನ್ನು ಈ ಕಾಲದ ಇಂದಿನ ದಿವಸಕ್ಕೆ ಹೊಂದಿಸುವುದು ನೈಗಮನಯದಿಂದಲೇ ಸಾಧ್ಯವಿದೆ. ಸಂಗ್ರಹನಯದಿಂದ ನಾವು ಉತ್ತರೋತ್ತರ ವಸ್ತುಗಳನ್ನು ವಿಶಾಲ ದೃಷ್ಟಿಯಿಂದ ತಿಳಿದುಕೊಳ್ಳಲಿಕ್ಕೆ ಪ್ರಯತ್ನಿಸುತ್ತೇವೆ. ಇಲ್ಲಿಯ ಎಲ್ಲ ಪ್ರದೇಶವಾಸಿಗಳು, ಎಲ್ಲ ಜಾತಿಯವರು, ಎಲ್ಲ ಪಂಥದವರು, ನಲವತ್ತು ಕೋಟಿ ಮನುಷ್ಯರು ಭಾರತವಾಸಿಗಳಾಗಿರುವ ಅಪೇಕ್ಷೆಯಿಂದ ಒಂದೇ ಆಗಿದ್ದಾರೆ. ಅಥವಾ ಭಾರತವಾಸಿಗಳು, ಚೀನೀಯರು ಏಶಿಯಾನಿವಾಸಿಗಳಾಗಿರುವುದರಿಂದ ಒಂದೇ ಎನಿಸುತ್ತಾರೆ. ಅಥವಾ ಎಲ್ಲ ದೇಶಗಳ ಸಮಸ್ತ ವಿಶ್ವವಾಸಿ ಜನರೆಲ್ಲ ಒಂದೇ ಮಾನವ ಜಾತಿಯವರಾಗಿದ್ದಾರೆ. ಇವೆಲ್ಲ ಮಾತುಗಳೂ ಸಂಗ್ರಹನಯದ ಅಪೇಕ್ಷೆಯಿಂದ ಸತ್ಯವಾಗಿವೆ. ಇದಕ್ಕೆ ವಿಪರೀತವಾಗಿ ಮಹಾದ್ವೀಪಗಳ ಅಪೇಕ್ಷೆಯಿಂದ ಏಶಿಯಾನಿವಾಸಿಗಳು, ಯುರೋಪವಾಸಿಗಳು, ಅಮೇರಿಕ ವಾಸಿಗಳು ಮೊದಲಾದ ಭೇದಗಳಲ್ಲಿ ವಿಭಾಜಿಸಲಾಗುತ್ತದೆ. ಇವುಗಳನ್ನು ಪುನಃ ಒಳ ಪ್ರದೇಶ, ಪ್ರಾಂತೀಯ. ರಾಜನೈತಿಕ, ಧಾರ್ಮಿಕ. ಜಾತೀಯ ಮೊದಲಾದ ಉತ್ತರೋತ್ತರ ಅಲ್ಪ, ಅಲ್ಪತರ ವರ್ಗಗಳಲ್ಲಿ ವಿಭಾಗಿಸಲಾಗುತ್ತದೆ. ಆಗ ನಮ್ಮ ಅಭಿಪ್ರಾಯವು ವ್ಯವಹಾರನಯಾತ್ಮಕ ಎನಿಸುನುತ್ತದೆ. ಈ ಪ್ರಕಾರ ಸಂಗ್ರಹ ಮತ್ತು ವ್ಯವಹಾರ ನಯಗಳು ಪರಸ್ಪರ ಸಾಪೇಕ್ಷವಾಗಿವೆ. ವಿಸ್ತಾರ ಮತ್ತು ಸಂಕೋಚಾತ್ಮಕ ದೃಷ್ಟಿಗಳನ್ನು ಪ್ರಕಟಗೊಳಿಸುವಂಥವಿವೆ. ಎರಡೂ ಸತ್ಯವಾಗಿವೆ. ಎರಡೂ ತಮ್ಮ-ತಮ್ಮ ಸಾರ್ಥಕತೆಯನ್ನು ಕಾಯ್ದುಕೊಂಡಿರುತ್ತವೆ. ಇವುಗಳಲ್ಲಿ ಪರಸ್ಪರ ವಿರೋಧವಿಲ್ಲ. ಇವುಗಳಲ್ಲಿ ಒಂದು ಇನ್ನೊಂದಕ್ಕೆ ಪರಿಪೂರಕವಿದೆ. ನಾವು ಅಭೇದ ದೃಷ್ಟಿಯಿಂದ ಸಂಗ್ರಹನಯವನ್ನು ಭೇದ ದೃಷ್ಟಿಯಿಂದ ವ್ಯವಹಾರನಯವನ್ನೂ ಆಶ್ರಯಿಸುತ್ತೇವೆ. ಈ ನೈಗಮಾದಿ ಮೂರೂ ನಯಗಳು ದ್ರವ್ಯಾರ್ಥಿಕವೆಂದು ಮನ್ನಿಸಲಾಗಿದೆ. ಯಾಕಂದರೆ ಇವುಗಳಲ್ಲಿ ಪ್ರತಿಪಾದ್ಯ ವಸ್ತುವಿನ ದ್ರವ್ಯಾತ್ಮಿಕತೆಯನ್ನು ಗ್ರಹಿಸಿ ವಿಚಾರ ಮಾಡಲಾಗುತ್ತದೆ. ಆಗ ಅದರ ಪರ್ಯಾಯಗಳು ಗುಣವಾಗಿರುತ್ತವೆ. ಋಜುಸೂತ್ರಾದಿ ಮುಂದಿನ ನಾಲ್ಕು ನಯಗಳು ಪರ್ಯಾಯಾರ್ಥಿಕವೆಂದು ಹೇಳಲಾಗಿದೆ. ಯಾಕಂದರೆ ಇವುಗಳಲ್ಲಿ ಪದಾರ್ಥಗಳ ಪರ್ಯಾಯ ವಿಶೇಷವನ್ನೇ ವಿಚಾರದಲ್ಲಿ ಇಟ್ಟುಕೊಳ್ಳಲಾಗಿದೆ.

" ನೀನು ಏನಿರುವಿ ?" ಎಂದು ಯಾರಾದರೂ ನನ್ನನ್ನು ಕೇಳಿದರೆ " ನಾನು ವ್ಯಾಖ್ಯಾನಕಾರನಾಗಿದ್ದೇನೆ." ಎಂದು ಉತ್ತರಿಸುತ್ತೇನೆ. ಈ ಉತ್ತರವು ಋಜುಸೂತ್ರ ನಯದಿಂದ ಸತ್ಯವೆಂದು ತೋರೀತು ; ಯಾಕೆಂದರೆ ನಾನು ಈ ಉತ್ತರದಿಂದ ನನ್ನ ಒಂದು ಪರ್ಯಾಯ ಅಥವಾ ಅವಸ್ಥಾ-ವಿಶೇಷವನ್ನು ಪ್ರಕಟ ಮಾಡುತ್ತಿರುತ್ತೇನೆ. ಇದು ಒಂದು ಕಾಲ-ಮರ್ಯಾದೆಗೆಂದು ಮಾತ್ರ ನಿಶ್ಚಿತಗೊಂಡಿರುತ್ತದೆ. ಈ ಪ್ರಕಾರ ವರ್ತಮಾನ ಪರ್ಯಾಯವನ್ನು ಮಾತ್ರ ವಿಷಯ ಮಾಡಿಕೊಳ್ಳುವಂಥ ನಯಕ್ಕೆ ಋಜುಸೂತ್ರವೆಂದು ಹೇಳಲಾಗುತ್ತದೆ. ಮುಂದಿನ ಶಬ್ದಾದಿ ಮೂರು ನಯಗಳು ವಿಶೇಷರೂಪದಿಂದ ಸಂಬಂಧವನ್ನು ಶಬ್ದ-ಪ್ರಯೋಗದೊಡನೆ ಇಟ್ಟುಕೊಳ್ಳು

ತ್ತವೆ. ಒಂದು ಶಬ್ದಕ್ಕೆ ಒಂದು ವಾಚ್ಯಾರ್ಥವನ್ನು ಮನ್ನಿಸಲಾಗಿದೆ. ಅದರ ಲಿಂಗ ಮತ್ತು ವಚನಗಳೂ ನಿಶ್ಚಿತವಾಗಿರುತ್ತವೆ. ಇವುಗಳನ್ನು ಶಬ್ದನಯದಿಂದ ಯಥೋಚಿತವೆಂದು ಮನ್ನಿಸಲಾಗಿದೆ. ಸಂಸ್ಕೃತದಲ್ಲಿ ಸ್ತ್ರೀಗಾಗಿ 'ಕಲತ್ರ' ಶಬ್ದವನ್ನು ನಪುಂಸಕಲಿಂಗದಲ್ಲಿ ಅಥವಾ 'ದಾರಾ' ಶಬ್ದವನ್ನು ಪುಲ್ಲಿಂಗ ಬಹುವಚನದಲ್ಲಿ ಪ್ರಯೋಗಿಸುವರು. ಇದರಂತೆಯೇ ದೇವ ಮತ್ತು ದೇವೀ ಇವುಗಳ ವಾಚ್ಯಾರ್ಥವು ಸ್ವರ್ಗಲೋಕದ ಪ್ರಾಣಿಗಳೆಂದು ಆಗುತ್ತದೆ. ಇವೆಲ್ಲವೂ ಶಬ್ದನಯದ ಅಪೇಕ್ಷೆಯಿಂದ ಉಪಯುಕ್ತವೆಂದು ಸಿದ್ಧವಾಗುತ್ತವೆ. ಇದೇ ಪ್ರಕಾರ ವ್ಯುತ್ಪತ್ತಿಯ ಅಪೇಕ್ಷೆಯಿಂದ ಭಿನ್ನಾರ್ಥಕ ಶಬ್ದಗಳನ್ನು ಯಾವಾಗ ನಾವು ರೂಢಿಯ ಪ್ರಕಾರ ಏಕಾರ್ಥವಾಚಿಯನ್ನಾಗಿ ಮಾಡಿಕೊಂಡು, ಪ್ರಯೋಗಿಸುತ್ತೇವೆಯೋ ಆಗ ಅದು ಸಮಭಿರೂಢ ನಯದ ಅಪೇಕ್ಷೆಯಿಂದ ಉಚಿತವೆಂದು ಸಿದ್ಧವಾಗುತ್ತದೆ. ಉದಾಹರಣೆಗಾಗಿ ದೇವರಾಜ ಎಂಬುದಕ್ಕೆ ಇಂದ್ರ, ಪುರಂದರ ಅಥವಾ ಶಕ್ರ, ಕುದುರೆ ಎಂಬುದಕ್ಕೆ ಅಶ್ವ, ಅರ್ವ ಅಥವಾ ಗಂಧರ್ವ, ಸೈಂಧವ ಮೊದಲಾದ ಶಬ್ದ ಪ್ರಯೋಗಗಳು ಇವೆ. ಈ ಶಬ್ದಗಳಿಗೆ ತಮ್ಮ-ತಮ್ಮ ಭಿನ್ನ ಅರ್ಥಗಳಿವೆ. ಆದರೂ ರೂಢಿಯ ಮೂಲಕ ಅವು ಪರ್ಯಾಯವಾಚಿಯಾಗಿ ರೂಪುಗೊಂಡುವು ಇದೇ ಸಮಭಿರೂಢ ನಯವೆನಿಸುತ್ತದೆ. ಏವಂಭೂತ ನಯದ ಅಪೇಕ್ಷಯಿಂದ ವಸ್ತುವಿನ ಯಾವ ಸಮಯದಲ್ಲಿ, ಯಾವ ಪರ್ಯಾಯವು ಇರುವುದೋ, ಆ ಸಮಯದೊಳಗೆ ಅದೇ ಪರ್ಯಾಯವನ್ನು ಹೇಳುವ ಶಬ್ದವನ್ನು ಪ್ರಯೋಗಿಸಲಾಗುತ್ತದೆ ಒಬ್ಬ ಮನುಷ್ಯನು ಓದಿಸುತ್ತಿರುವಾಗ ಪಾಠಕ, ಪೂಜೆ ಮಾಡುವಾಗ ಪೂಜಾರಿ, ಯುದ್ಧಮಾಡುವಾಗ ಯೋದ್ಧಾ ಎಂದು ಹೇಳಲಾಗುತ್ತದಷ್ಟೆ.

### ದ್ರವ್ಯಾರ್ಥಿಕ-ಪರ್ಯಾರ್ಥಿಕ ನಯ :—

ಈ ನಯಗಳ ಸ್ವರೂಪದ ಬಗ್ಗೆ ವಿಚಾರ ಮಾಡುವುದರಿಂದ ಒಂದು ಮಾತು ಸ್ಪಷ್ಟವಾಗುತ್ತದೆ. ಜೈನ ಸಿದ್ಧಾಂತದಲ್ಲಿ ಈ ನಯಗಳಿಂದ ಯಾವ ವಕ್ತೃವಿನ ವಚನವನ್ನು ಕೇಳಿದಾಗಲೂ ಅವನ ಅಭಿಪ್ರಾಯದ ಸುಸಂಗತಿಯನ್ನು ಯಥೋಚಿತ ವಸ್ತುಸ್ಥಿತಿಯೊಡನೆ ತೋರಿಸುವ ಪ್ರಯತ್ನವನ್ನು ಮಾಡಲಾಗಿದೆ. ಮೇಲೆ ಹೇಳಿದ ಏಳು ನಯಗಳಂತೂ ಯಥಾರ್ಥವಾಗಿಯೂ ಪ್ರಮುಖ ರೂಪದ ದೃಷ್ಟಾಂತಗಳಾಗಿವೆ. ಆದರೆ ನಯಗಳ ಸಂಖ್ಯೆಯಂತೂ ಅಪರಿಮಿತವಾಗಿದೆ. ಯಾಕೆಂದರೆ ದ್ರವ್ಯ-ವ್ಯವಸ್ಥೆಯ, ಸಂಬಂಧದಲ್ಲಿ ಎಷ್ಟು ಪ್ರಕಾರದ ವಿಚಾರಗಳು ಮತ್ತು ವಚನಗಳು ಆಗುತ್ತವೆಯೋ ಅಷ್ಟೇ ಅವುಗಳ ದೃಷ್ಟಿಕೋಣಗಳನ್ನು ಸ್ಪಷ್ಟಮಾಡುವ ನಯಗಳನ್ನು ಹೇಳಲಾಗುತ್ತದೆ. ಉದಾಹರಣೆಗೆಂದು, ಜೈನ ತತ್ವಜ್ಞಾನದಲ್ಲಿ ಆರು ದ್ರವ್ಯಗಳೆಂದು ಮನ್ನಿಸಲಾಗಿದೆ. ಆದರೆ ಯಾರಾದರೂ ಹೀಗೂ ಹೇಳಬಲ್ಲರು. ದ್ರವ್ಯವಂತೂ ಯಥಾರ್ಥವಾಗಿ ಒಂದೇ ಇದೆ. ಅಂದರೂ ನಯವಾದಕ್ಕನುಸರಿಸಿ ಇದನ್ನು ಸತ್ತಾಮಾತ್ರ-

ಗ್ರಾಹೀ ಶುದ್ಧದ್ರವ್ಯಾರ್ಥಿಕನಯದ ಅಪೇಕ್ಷೆಯಿಂದ ಸತ್ಯವೆಂದು ಸ್ವೀಕರಿಸಲಾಗು ತ್ತದೆ. ಸಿದ್ಧಿ ಮತ್ತು ಮುಕ್ತಿ ಇವು ಜೀವದ ಪರಮಾತ್ಮಾವಸ್ಥೆಯೆಂದು ಮನ್ನಿಸ ಲಾಗಿದೆ. ಆದರೆ ಯಾರೂ ಹೀಗೂ ಹೇಳಬಲ್ಲರು :—ಜೀವನಂತೂ ಸರ್ವತ್ರ ಮತ್ತು ಸರ್ವದಾ ಸಿದ್ಧವಿದೆ. ಮುಕ್ತವಿದೆ. ಇದನ್ನೂ ಕೂಡ ಜೈನರು ಈ ಮಾತು ಕರ್ಮೋ ಪಾಧಿ ನಿರಪೇಕ್ಷ ಶುದ್ಧದ್ರವ್ಯಾರ್ಥಿಕ ನಯದಿಂದ ಹೇಳಲಾಗಿದೆಯೆಂದು ಸ್ವೀಕಾರ ಮಾಡುವರು. ಗುಣ ಮತ್ತು ಗುಣೀ, ದ್ರವ್ಯ ಮತ್ತು ಪರ್ಯಾಯ, ಇವುಗಳಲ್ಲಿ ಯಥಾರ್ಥವಾಗಿಯೂ ಭಾವಾತ್ಮಕ ಭೇದವಿದೆ. ಆದರೆ ಯಾರಾದರೂ ಒಮ್ಮೆ ಜ್ಞಾನವೇ ಆತ್ಮವಾಗಿದೆ ಎನ್ನಬಹುದು. ಮನುಷ್ಯನು ಅಮರನಾಗಿರುವನು ; ಕಂಕ ಣವೂ ಸುವರ್ಣವೇ ಇದೆ ; ಇದನ್ನು ಭೇದವಿಕಲ್ಪ—ನಿರಪೇಕ್ಷ ಶುದ್ಧ ದ್ರವ್ಯಾರ್ಥಿಕ ನಯದಿಂದ ಸತ್ಯವೆಂದು ಮನ್ನಿಸಲಾಗುವುದು. ಸಿದ್ಧಾಂತಕ್ಕನುಸರಿಸಿ ಜ್ಞಾನ-ದರ್ಶನಗಳೇ ಆತ್ಮದ ಗುಣಗಳಾಗಿವೆ ; ರಾಗ-ದ್ವೇಷಾದಿಗಳು ಆದರ ಕರ್ಮ ಜನ್ಯ ವಿಭಾವಗಳಾಗಿವೆ ; ಇದನ್ನು ಗಮನಿಸಿ ಯಾರಾದರೂ ಜೀವವು ರಾಗ-ದ್ವೇಷಿಯಿದೆ ಯೆನ್ನಬಹುದು. ಈ ಮಾತು ಕರ್ಮೋಪಾಧಿ ಸಾಪೇಕ್ಷ ಅಶುದ್ಧ-ದ್ರವ್ಯಾರ್ಥಿಕ ನಯದಿಂದ ಮನ್ನಿಸಲು ಯೋಗ್ಯವಾಗಿದೆ. ಇರುವೆಯಿಂದ ಮನುಷ್ಯನ ವರೆಗೆ ಸಂಸಾರೀ ಜೀವಗಳ ಜಾತಿಗಳಿವೆ ; ಮತ್ತು ಜೀವವು ಪರಮಾತ್ಮಾ ಯಾವಾಗ ಆಗು ವುದೋ ಆಗ ಅದು ವಿಶುದ್ಧವಾಗಿ ಈ ಸಮಸ್ತ ಸಾಂಸಾರಿಕ ಗತಿಗಳಿಂದ ಮುಕ್ತವಾಗಿ ಬಿಡುತ್ತದೆ. ಆದರೆ ಕೆಲವೊಂದು ಸಲ ಇರುವೆಯೂ ಪರಮಾತ್ಮಾ ಇದೆಯೆಂದು ಹೇಳಿ ಯಾರು. ಆದರೆ ಈ ಮಾತೂ ಸಹ ಪರಮಭಾವಗ್ರಾಹಕ ದ್ರವ್ಯಾರ್ಥಿಕ ನಯ ದಿಂದ ಸರಿಯೆಂದು ತಿಳಿಯಲಿಕ್ಕೆ ಬೇಕು. ಎಲ್ಲ ದ್ರವ್ಯಗಳೂ ತಮ್ಮ ದ್ರವ್ಯತ್ವದ ಅಪೇಕ್ಷೆಯಿಂದ ಚಿರಸ್ಥಾಯಿಯಾಗಿವೆ. ಆದರೆ ಕೆಲವು ಜನರು ಸಂಸಾರದ ಸಮಸ್ತ ವಸ್ತುಗಳು ಕ್ಷಣ ಭಂಗುರ ಇವೆಯೆಂದು ಹೇಳುವರು. ಅವರು ವಸ್ತುವಿನ ಸತ್ತೆಯನ್ನು ಗುಣ ಮಾಡಿ, ಉತ್ಪಾದ-ವ್ಯಯ ಗುಣಾತ್ಮಕ ಅನಿತ್ಯ ಶುದ್ಧ ಪರ್ಯಾಯಾರ್ಥಿಕ ನಯದಿಂದ ಹೇಳಿದ್ದಾರೆಂದು ನಾವು ತಿಳಿಯಬೇಕು. ಯಾವುದೋ ಒಂದು ವಸ್ತು ವಿನ ಇಲ್ಲವೆ ದೃಶ್ಯದ ಅಥವಾ ಮನುಷ್ಯನ ಚಿತ್ರವು ಆ ವಸ್ತುವಾದಿಗಳಿಂದ ಸರ್ವಥಾ ಪೃಥಕ್‌ವಾಗಿದೆ. ಆದರೆ ಯಾರಾದರೂ ಚಿತ್ರವನ್ನು ಕಂಡು ಇದು ಹಿಮಾಲಯವಿದೆ, ಇವನು ರಾಮಚಂದ್ರನಿದ್ದಾನೆ, ಎಂದು ಹೇಳಿಯಾರು. ಇದು ಜೈನ ನ್ಯಾಯದ ದೃಷ್ಟಿ ಯಿಂದ ಇವೆಲ್ಲ ಮಾತುಗಳು ಸ್ವಜಾತಿ ಅಸದ್-ಭೂತ ಉಪನಯದಿಂದ ಸರಿಯಾ ಗಿವೆ. ಇನ್ನು ಯಾವನೇ ವ್ಯಕ್ತಿಯು ತನ್ನ ಪುತ್ರ ಕಲತ್ರಾದಿ ಬಂಧುವರ್ಗದಿಂದ, ಮತ್ತು ಮನೆ-ಮಠಾದಿ ಸಂಪತ್ತುಗಳಿಂದ ಸರ್ವಥಾ ಭಿನ್ನನಾಗಿದ್ದಾನೆ. ಆದರೆ ಒಬ್ಬನು ನಾನು ಮತ್ತು ಅವು ಒಂದೇ ಆಗಿದ್ದೇವೆ ಎಂದಾನು ; ಅವು ನನ್ನವು ; ನಾನು ಅವು ಗಳಿಗೆ ಸೇರಿದವನು, ಆದರೆ ಈ ಮಾತು ಅಸದ್‌ಭೂತ ಉಪಚಾರನಯದಿಂದ ಯಥಾರ್ಥವೆಂದು ಮನ್ನಿಸಲಾಗುವುದು.

ಈ ಪ್ರಕಾರ ನಯಗಳಿಗೆ ಅನೇಕ ಉದಾಹರಣೆಗಳನ್ನು ಕೊಡಲಾಗುತ್ತದೆ. ಅವುಗಳಲ್ಲಿ ಈ ನ್ಯಾಯ ಪ್ರತಿಪಾದಕ ಆಚಾರ್ಯರ ಒಂದು ವಿಚಾರವು ಸ್ಪಷ್ಟವಾಗಿ ಕಂಡುಬರುತ್ತದೆ :–ಮನುಷ್ಯನು ಯಾವಾಗ ಹೇಗೆ, ಎಲ್ಲಿ, ಯಾವ ಪ್ರಕಾರ ಅನು ಭವಿಸಿದನೋ, ವಿಚಾರ ಮಾಡಿದನೋ ಹಾಗೆ ಅವುಗಳನ್ನು ಅವನು ವಚನಬದ್ಧ ಮಾಡಿ ದನು. ಇವೆಲ್ಲವುಗಳಲ್ಲಿ ಸ್ವಲ್ಪ ಇಲ್ಲ ಸ್ವಲ್ಪ ಸತ್ಯಾಂಶವು ಅವಶ್ಯವಾಗಿ ವಿದ್ಯಮಾನವಿದೆ. ಈ ಮಾತನ್ನು ಕೇಳಿದಾಗ ವಿದ್ವಾಂಸನಾದವನು ಅದರಲ್ಲಿ ತನ್ನ ನಿರ್ಧಾರಿತ ಮತಕ್ಕೆ ಕೆಲವೊಂದು ವಿರೋಧವು ಕಂಡುಬಂದರೂ ಸಹ ಅದರ ಖಂಡನದಲ್ಲಿ ಪ್ರವೃತ್ತನಾಗ ಕೂಡದು. ಯಾಕಂದರೆ ಆ ಮಾತನ್ನು ಯಾವ ಅಪೇಕ್ಷೆಯಿಂದ ಹೇಳಿದೆ ಎಂಬುದನ್ನು ತಿಳಿದುಕೊಳ್ಳಲಿಕ್ಕೆ ಅವನು ಅವಶ್ಯ ಪ್ರಯತ್ನಿಸಲಿಕ್ಕೆ ಬೇಕು. ಅಲ್ಲದೆ ಅದು ಯಾವ ಅಪೇಕ್ಷೆಯಿಂದ ಎಲ್ಲಿಯವರೆಗೆ ಸತ್ಯವೆಂದು ಕಂಡುಕೊಳ್ಳಬೇಕು ಮೇಲಾಗಿ ತನ್ನ ನಿಶ್ಚಿತ ಮತಕ್ಕೆ ಯಾವ ರೀತಿ ಸಾಮಂಜಸ್ಯವನ್ನು ಅದು ಸ್ಥಾಪಿಸಬಲ್ಲುದೆಂಬುದನ್ನು ನೋಡಬೇಕು. ಜೈನ ಸ್ಯಾದ್ವಾದ, ಅನೇಕಾಂತ ಅಥವಾ ನಯವಾದದ ವಾದವು, ತನ್ನ ನ್ಯಾಯ ಶೈಲಿಯಿಂದ ಸಮಸ್ತ ವಿರೋಧವೆಂದು ಕಂಡುಬರುವ ಮತ ಮತ್ತು ವಿಚಾರಗಳಲ್ಲಿರುವ ಹೇಳುವವರ ದೃಷ್ಟಿಕೋಣವನ್ನು ಕಂಡುಹಿಡಿದು, ಅವುಗಳ ವಿರೋಧವನ್ನು ಪರಿಹರಿಸುವುದು ಸಾಧ್ಯವಿದೆ ಎಂಬುದೇ ಆಗಿದೆ ಹೀಗಾಗಿ ವಿರೋಧಿ ಗಳಿಗೆ ತಮ್ಮ ಸ್ಪಷ್ಟೀಕರಣರಿಂದ ಅವರವರ ಮತಗಳ ಸೀಮೆಗಳನ್ನು ತಿಳಿಸಿ ಹೇಳಿ, ಅವುಗಳನ್ನು ತಮ್ಮ ಜ್ಞಾನದ ಅಂಗವೆಂದು ರೂಪಿಸಿಕೊಳ್ಳಲು ಬರುತ್ತದೆ.

### ನಾಲ್ಕು–ನಿಕ್ಷೇಪಗಳು :—

ಜೈನ ನ್ಯಾಯದ ಈ ಅನೇಕಾಂತ–ಪ್ರಣಾಲಿಯಿಂದ ಪ್ರೇರಿತರಾಗಿಯೇ ಜೈನಾ ಚಾರ್ಯರು ಪ್ರಕೃತಿಯ ತತ್ವಗಳ ಸಂಶೋಧನೆ ಮತ್ತು ಪ್ರತಿಪಾದನಗಳಲ್ಲಿ ತುಂಬ ಎಚ್ಚರಿಕೆಯನ್ನು ವಹಿಸಲು ಪ್ರಯತ್ನಿಸಿದ್ದಾರೆ. ಅವರ ದೃಷ್ಟಿಕೋಣದ ವಿಷಯದಲ್ಲಿ ಭ್ರಾಂತಿಯು ಉತ್ಪನ್ನವಾಗುವಂತಿಲ್ಲ. ಇದೇ ಸಾವಧಾನತೆಯ ಪರಿಣಾಮ ಸ್ವರೂಪ ವಾಗಿ ನಾವು ನಾಲ್ಕು ಪ್ರಕಾರದ ನಿಕ್ಷೇಪಗಳನ್ನೂ ಅವುಗಳ ವಿವಿಧ ಭೇದ–ಪ್ರಭೇದ ಗಳ ವ್ಯಾಖ್ಯಾನವನ್ನೂ ಕಾಣುತ್ತೇವೆ. ದ್ರವ್ಯದ ಸ್ವರೂಪವು ನಾನಾ ವಿಧವಾಗಿದೆ. ಅದನ್ನು ತಿಳಿದುಕೊಳ್ಳಲಿಕ್ಕೂ ತಿಳಿಸಿಕೊಡಲಿಕ್ಕೂ ನಾವು ಯಾವ ಪದ್ಧತಿಗಳನ್ನು ಬಳಸುತ್ತೇವೆಯೋ ಅವುಗಳಿಗೆ ನಿಕ್ಷೇಪವೆಂದು ಹೇಳಲಾಗುತ್ತದೆ. ವ್ಯಾಖ್ಯಾನದಲ್ಲಿ ನಾವು ವಸ್ತುಗಳ ಉಲ್ಲೇಖವನ್ನು ವಿವಿಧ ಹೆಸರುಗಳಿಂದಲೂ ಸಂಜ್ಞೆಗಳಿಂದಲೂ ಮಾಡು ತ್ತೇವೆ. ಆಗ ಕೆಲವು ಕಡೆಗೆ ಅವುಗಳ ವ್ಯುತ್ಪತ್ತಿಯಿಂದಲೂ ಹಲವು ಕಡೆಗೆ ರೂಢಿ ಯಿಂದಲೂ ಅವುಗಳ ವಾಚ್ಯವು ವಸ್ತುವನ್ನು ಪ್ರಕಟಿಸುತ್ತದೆ. ಈ ಪ್ರಕಾರ ಪುಸ್ತಕ, ಕುದುರೆ ಮತ್ತು ಮನುಷ್ಯ, ಈ ಧ್ವನಿಗಳು ಸ್ವತಃ ಆಯಾ ವಸ್ತುಗಳು ಆಗಿಲ್ಲ, ಆದರೆ ಆ ವಸ್ತುಗಳ ನಾಮ ನಿಕ್ಷೇಪಗಳಾಗಿವೆ. ಇವುಗಳಿಂದ ಲೋಕ-ವ್ಯವಹಾರವು ನಡೆಯು

ತ್ತದೆ. ಇದೇ ಪ್ರಕಾರ, ಮಂದಿರಗಳಲ್ಲಿ ಸ್ಥಾಪಿತವಾದ ಮೂರ್ತಿಗಳು ದೇವತೆಗಳಲ್ಲ, ಆದರೆ ಅವು ದೇವತೆಗಳ ಸಾಕಾರ ಸ್ಥಾಪನಾ ರೂಪಗಳಾಗಿವೆ. ಯಾವ ಪ್ರಕಾರ ಹಾಸುಗಂಬಳಿಯ ಮೇಲೆ ತೆಗೆದ ಗಿಳಿ, ಆನೆಗಳು ಆ ಪ್ರಾಣಿಗಳಲ್ಲ. ಅವುಗಳ ಸಾಕಾರ ಅಥವಾ ನಿರಾಕಾರ ಸ್ಥಾಪನಾ ಮಾತ್ರ ಆಗಿವೆ. ಒಳ್ಳೆಯದಕ್ಕೆಂದೇ ಅವುಗಳಲ್ಲಿ ಪೂಜ್ಯ ಇಲ್ಲವೆ ಅಪೂಜ್ಯ ಭಾವನೆಗಳನ್ನು ನಾವು ಮಾಡಿಕೊಳ್ಳುತ್ತೇವೆ. ಇದನ್ನು ನಾವು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು. ಇದು ಸ್ಥಾಪನಾ ನಿಕ್ಷೇಪದ ಸ್ವರೂಪ ವಾಗಿದೆ. ಇದೇ ಪ್ರಕಾರ ದ್ರವ್ಯ–ನಿಕ್ಷೇಪದಿಂದ ನಾವು ವಸ್ತುವಿನ ಭೂತ ಮತ್ತು ಭವಿಷ್ಯತ್‌ಕಾಲೀನ ಪರ್ಯಾಯಗಳನ್ನು ಇಲ್ಲವೆ ಅವಸ್ಥೆಗಳನ್ನು ಪ್ರಕಟಮಾಡುತ್ತೇವೆ. ಮೊದಲು ಒಬ್ಬನು ರಾಜನಾಗಿರುತ್ತಾನೆ. ಈಗ ಆತನು ರಾಜನಾಗಿರದಿದ್ದರೂ ರಾಜ ನೆಂದು ಕರೆಯಿಸಿಕೊಳ್ಳುತ್ತಾನೆ. ಒಮ್ಮೊಮ್ಮೆ ಡಾಕ್ಟರ ಕೋರ್ಸಿಗೆ ಇದ್ದ ವಿದ್ಯಾರ್ಥಿ ಯನ್ನೂ ಡಾಕ್ಟರನೆಂದು ಸಂಬೋಧಿಸುತ್ತೇವೆ. ಇದಕ್ಕೆ ವಿಪರೀತವಾಗಿ ಯಾವಾಗ ನಾವು ಯಾವ ವಸ್ತುವನ್ನು, ಯಾವ ಸಮಯದಲ್ಲಿ, ಯಾವ ರೂಪದಲ್ಲಿ ಇರುತ್ತ ದೆಯೋ, ಅದನ್ನು ಆ ಸಮಯದಲ್ಲಿ ಅದೇ ಅರ್ಥಬೋಧಕ ಶಬ್ದದಿಂದ ಪ್ರಕಟಗೊಳಿ ಸುತ್ತೇವೆ. ಆಗ ಇದು ಭಾವ ನಿಕ್ಷೇಪ ಎನಿಸುತ್ತದೆ. ವ್ಯಾಖ್ಯಾನ ಕೊಡುವ ವೇಳೆ ಯಲ್ಲಿ ಒಬ್ಬ ವ್ಯಕ್ತಿಯು ವ್ಯಾಖ್ಯಾತನೆನಿಸುತ್ತಾನೆ, ಧ್ಯಾನ ಮಾಡುವಾಗ ಧ್ಯಾನಿಯೆನಿ ಸುತ್ತಾನೆ. ಇದೇ ಪ್ರಕಾರ ವಸ್ತು ವಿವೇಚನೆಯಲ್ಲಿ ದ್ರವ್ಯ, ಕ್ಷೇತ್ರ, ಕಾಲ ಮತ್ತು ಭಾವಗಳ ಸಂಬಂಧದಲ್ಲಿ ಸತರ್ಕತೆಯನ್ನು ಇಟ್ಟುಕೊಳ್ಳುವುದು; ವಸ್ತುವನ್ನೂ ಅದರ ಸತ್ತಾ, ಸಂಖ್ಯಾ, ಕ್ಷೇತ್ರ ಸ್ಪರ್ಶನ, ಕಾಲ, ಅಂತರ, ಭಾವ ಮತ್ತು ಅಲ್ಪ–ಬಹುತ್ವ ಗಳಿಗೆ ಅನುಸರಿಸಿ ತಿಳಿದುಕೊಳ್ಳುವುದು: ಹಾಗೆಯೇ ಅವುಗಳ ನಿರ್ದೇಶ, ಸ್ವಾಮಿತ್ವ, ಸಾಧನ, ಅಧಿಕರಣ, ಸ್ಥಿತಿ ಮತ್ತು ವಿಧಾನಗಳ ಕಡೆಗೂ ಧ್ಯಾನವನ್ನು ಕೊಡುತ್ತ ಇರುವುದು; ಇವೆಲ್ಲವುಗಳ ಆದೇಶ ಕೊಡಲಾಗಿದೆ. ಈ ಪ್ರಕಾರ ಜೈನಶಾಸ್ತ್ರದ ಅಭ್ಯಾ ಸಿಯು ಏಕಾಂತ ದೃಷ್ಟಿಯಿಂದ ದೂರ ಉಳಿಯಲಿಕ್ಕೆ ಪೂರ್ಣ ಪ್ರಯತ್ನ ಮಾಡಿ ದ್ದಾನೆ.

**ಸಮ್ಯಕ್ ಚಾರಿತ್ರ :—**

ಸಮ್ಯಕ್ತ್ವ ಮತ್ತು ಜ್ಞಾನದ ಸಾಧನೆಯ ಹೊರತಾಗಿ ಕರ್ಮಗಳ ಸಂವರ ಹಾಗೂ ನಿರ್ಜರಾಗಳಿಂದ ಮೋಕ್ಷಸಾಧನೆಗಾಗಿ ಚಾರಿತ್ರದ ಅವಶ್ಯಕತೆಯಿದೆ.

ಜೀವನದಲ್ಲಿ ಧಾರ್ಮಿಕತೆಯು ಯಾವ ಪ್ರಕಾರ ಉತ್ಪನ್ನವಾಗುತ್ತದೆಂಬುದನ್ನು ಮೇಲೆ ಹೇಳಿದೆ. ಸಮ್ಯಕ್ತ್ವವು ಅಧಾರ್ಮಿಕತೆಯ ಕ್ಷೇತ್ರದಿಂದ ಹೊರತೆಗೆದು ಧಾರ್ಮಿಕ ಕ್ಷೇತ್ರದಲ್ಲಿ ತರುವಂಥ ವಸ್ತುವಾಗಿದೆ. ಇದರಿಂದ ವ್ಯಕ್ತಿಗೆ ಒಂದು ಹೊಸ ಚೈತನ್ಯವು ಲಭಿಸುತ್ತದೆ. ನಾನು ಕೇವಲ ಈ ಶರೀರದೊಡನೆ ಬದುಕುವ ಹಾಗೂ ಮರಣ ಹೊಂದುವವನಲ್ಲ; ಒಂದು ಅವಿನಾಶೀ ತತ್ವವಾಗಿದ್ದೇನೆ. ಈ ಅರಿವೇ

ಸಮ್ಯಕ್ತ್ವವು ನೀಡುವ ನವೀನ ಚೈತನ್ಯವು. ಇಷ್ಟೇ ಅಲ್ಲ, ಈ ಚೇತನೆಯೊಡನೆ ಕ್ರಮದಿಂದ ಅವನಿಗೆ ಸಂಸಾರದ ಅನ್ಯ ತತ್ವಗಳ ಯಾವ ಜ್ಞಾನವು ಪ್ರಾಪ್ತವಾಗುವುದೋ, ಅದರಿಂದ ಅವನು ತನ್ನ ಜೀವನದ ಕಡೆಗೆ ಹಾಗೂ ತನ್ನ ಸುತ್ತುಮುತ್ತಲಿನ ಜೀವ ಜಗತ್ತಿನ ಕಡೆಗೆ ಇಡುವ ದೃಷ್ಟಿಕೋಣವು ಬದಲಾಗುತ್ತದೆ. ಮಿಥ್ಯಾತ್ವದ ಅವಸ್ಥೆಯಲ್ಲಿ ತನ್ನ ಸ್ವಾರ್ಥ, ತನ್ನ ಪೋಷಣೆ ಮತ್ತು ಅನ್ಯರ ವಿಷಯದಲ್ಲಿ ದ್ವೇಷ ಹಾಗೂ ಈರ್ಷ್ಯಾ ಭಾವಗಳು ಪ್ರಮುಖವಾಗಿದ್ದುವು. ಆದರೆ ಸಮ್ಯಕ್ತ್ವಿಗೆ ತನ್ನ ಸುತ್ತು ಮುತ್ತಲಿನ ಜೀವಗಳಲ್ಲಿಯೂ ತನ್ನಂತೆಯೇ ಇರುವ ಆತ್ಮತತ್ವದ ದರ್ಶನವಾಗಿರುತ್ತದೆ. ಅದರಿಂದ ಅವುಗಳ ಬಗ್ಗೆ ಸ್ನೇಹ, ಕಾರುಣ್ಯ ಮತ್ತು ಸಾಹಾನುಭೂತಿಯ ಭಾವನೆಗಳು ಉತ್ಪನ್ನವಾಗಿ ಬಿಡುತ್ತವೆ. ಯಾವ ವೃತ್ತಿಗಳಿಂದ ಜೀವ ಜೀವಗಳಲ್ಲಿ ಸಂಘರ್ಷಣೆಯು ಕಂಡುಬರುತ್ತದೆಯೋ, ಅವುಗಳಿಂದ ವಿರಕ್ತಿಯು ಉಂಟಾಗುತ್ತ ಹೋಗುತ್ತದೆ. ಇಂಥವನ ದೃಷ್ಟಿಯಲ್ಲಿ ಒಂದೆಡೆಗೆ ಜೀವನದ ಅನುಪಮ ಮಹಾತ್ಮ್ಯ, ಇನ್ನೊಂದೆಡೆಗೆ ಜೀವಗಳಿಗೆ ಘೋರ ದುಃಖವನ್ನು ಉತ್ಪನ್ನ ಮಾಡುವ ಪ್ರವೃತ್ತಿಗಳು ಸ್ಪಷ್ಟವಾಗಿ ಎದುರಿಗೆ ಬಂದು ಬಿಡುತ್ತವೆ. ಈ ನವೀನ ದೃಷ್ಟಿಯ ಫಲಸ್ವರೂಪವಾಗಿ ಅವನಿಗೆ ತನ್ನ ವೃತ್ತಿಯಲ್ಲಿ ಸಮ್ಯಕ್ತ್ವದ ಮೇಲೆ ಹೇಳಿದ ನಾಲ್ಕು ಲಕ್ಷಣಗಳು–ಇವು ಪ್ರಶಮ, ಸಂವೇಗ, ಅನುಕಂಪಾ ಮತ್ತು ಆಸ್ತಿಕ್ಯ ಎಂಬ ನಾಲ್ಕು ಲಕ್ಷಣಗಳು— ಪ್ರಕಟವಾಗುತ್ತವೆ. ಇವುಗಳಿಂದ ಅವನ ಜೀವನ ಧಾರೆಯಲ್ಲಿ ಒಂದು ಹೊಸ ಒಲವು ಬಂದುಬಿಡುತ್ತದೆ. ಹೀಗಾಗಿ ಅವನು ದುರಾಚರಣೆಯನ್ನು ತೊರೆದು ಸದಾಚಾರಿಯಾಗುತ್ತಾನೆ ಈ ಸದಾಚಾರದ ಮೂಲಪ್ರೇರಣೆಯು ತನ್ನ ಹಾಗೂ ಅನ್ಯರ ಹಿತ ಮತ್ತು ಕಲ್ಯಾಣದ ಭಾವನೆಯಾಗಿರುತ್ತದೆ. ಆತ್ಮಹಿತದಿಂದ ಪರಹಿತದ ಮೇಳ ಮಾಡುವುದರಲ್ಲಿ ಯಾವ ತೊಡಕು ಉತ್ಪನ್ನವಾಗುತ್ತದೆಯೋ, ಅದೇ ವಿಚಾರಗಳ ವಿಷಮತೆ ಮತ್ತು ಕ್ರಿಯಾ ಸ್ವಾತಂತ್ರ್ಯವಾಗಿದೆ. ವಿಚಾರಗಳ ವಿಷಮತೆಯನ್ನು ದೂರಗೊಳಿಸಲಿಕ್ಕೆ ಸಮ್ಯಗ್‌ಜ್ಞಾನಿಗೆ ಸ್ಯಾದ್ವಾದ ಮತ್ತು ಅನೇಕಾಂತಗಳ ಸಾಮಂಜಸ್ಯವನ್ನು ಉತ್ಪನ್ನ ಮಾಡುವ ವಿಚಾರ ಶೈಲಿಯಿಂದ ಸಹಾಯವು ಲಭಿಸುತ್ತದೆ. ಇನ್ನು ಆಚರಣದ ಶುದ್ಧಿಗಾಗಿ ತನ್ನ ಸಮಾನವಾಗಿ ಅನ್ಯರನ್ನು ರಕ್ಷಿಸುವ ವಿಚಾರ ಅರ್ಥಾತ್ ಅಹಿಂಸೆಯು ಸಿದ್ಧಾಂತರೂಪದಲ್ಲಿ ಅವನ ಕೈಗೆ ಲಭಿಸುತ್ತದೆ.

**ಅಹಿಂಸಾ :—**

ಜೀವ–ಜಗತ್ತಿನಲ್ಲಿ ಒಂದು ಮರ್ಯಾದೆಯ ವರೆಗೆ ಅಹಿಂಸೆಯ ಪ್ರವೃತ್ತಿಯು ಸ್ವಾಭಾವಿಕವಾಗಿದೆ. ಪಶು-ಪಕ್ಷಿ ಮತ್ತು ಅವುಗಳಿಗಿಂತ ಕೆಳ ತರಗತಿಯ ಜೀವಜಂತುಗಳಲ್ಲಿ ತನ್ನ ಜಾತಿಯ ಜೀವಗಳನ್ನು ಕೊಲ್ಲುವುದು ಮತ್ತು ತಿನ್ನುವುದು ಈ ಪ್ರವೃತ್ತಿಗಳು ಬಹುತರ ಕಂಡುಬರುವುದಿಲ್ಲ. ಹುಲಿ, ಸಿಂಹ ಮೊದಲಾದ ಹಿಂಸ್ರ ಪ್ರಾಣಿಗಳಲ್ಲಿಯೂ ಸಹ ತಮ್ಮ ಸಂತತಿಯನ್ನಂತೂ ರಕ್ಷಿಸುತ್ತವೆ. ಇಷ್ಟೇ ಅಲ್ಲ, ಅನ್ಯ ಜಾತಿಯ

ಜೀವಗಳನ್ನೂ ನಹ ತಮಗೆ ಹಸಿವೆಯ ವೇದನೆಯು ತೀರ ಹೆಚ್ಚಾದಾಗ ಮಾತ್ರ ಕೊಲ್ಲುತ್ತವೆ. ಪ್ರಾಣಿಗಳಲ್ಲಿ ಸ್ವಾಭಾವಿಕವಾಗಿಯೇ ಅಹಿಂಸೋನ್ಮುಖ ವೃತ್ತಿಯನ್ನು ಪರಿಚಯ ಮಾಡಿಕೊಡುವ ಕೆಲವೊಂದು ಸಹಜ ಚೇತನಗಳು ಕಂಡುಬರುತ್ತವೆ. ಇವು ಮೈಥುನ, ಸಂತಾನಪಾಲನೆ, ಸಾಮೂಹಿಕ ಜೀವನ ಮೊದಲಾದ ಪ್ರವೃತ್ತಿಗಳು ಪ್ರಧಾನವಾಗಿರುವ ಜೀವಗಳಲ್ಲಿ ಇರುತ್ತವೆ. ಪ್ರಕೃತಿಯಲ್ಲಿಯೂ ಕೂಡ ಯಾವ ಪ್ರಾಣಿಯು ಎಷ್ಟು ಮಟ್ಟಿಗೆ ಅಹಿಂಸಕ ವೃತ್ತಿಯುಳ್ಳದಾಗಿರುತ್ತದೆಯೋ, ಅಷ್ಟೇ ಹೆಚ್ಚು ಅದು ಶಿಕ್ಷಣಕ್ಕೆ ಯೋಗ್ಯ ಹಾಗೂ ಉಪಯುಕ್ತವೆಂದು ಕಂಡುಬರುತ್ತದೆ. ಕುರಿ, ಆಕಳು, ಎಮ್ಮೆ, ಕುದುರೆ, ಒಂಟೆ, ಆನೆ ಮೊದಲಾದ ಪಶುಗಳು ಮಾಂಸಾಹಾರಿಗಳಾಗಿಲ್ಲ. ಅದರಿಂದ ಅವು ಮನುಷ್ಯನ ಜೀವನ ವ್ಯಾಪಾರದಲ್ಲಿ ಉಪಯುಕ್ತವೆಂದು ಸಿದ್ಧವಾಗಿವೆ. ಯಥಾರ್ಥವಾಗಿಯೂ ಇವುಗಳಲ್ಲಿಯೇ ಪ್ರಕೃತಿಯ ಶೀತೋಷ್ಣ ಮೊದಲಾದ ದ್ವಂದ್ವಾತ್ಮಕ ಶಕ್ತಿಯನ್ನು ಸಹನ ಮಾಡುವ ಮತ್ತು ಪರಿಶ್ರಮಮಾಡುವ ಶಕ್ತಿಯು ವಿಶೇಷರೂಪದಿಂದ ಕಂಡುಬರುತ್ತದೆ. ಅವು ಹಿಂಸ್ರ ಪಶುಗಳಿಂದ ತಮ್ಮನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಗುಂಪನ್ನು ಕಟ್ಟಿಕೊಂಡು ಸಾಮೂಹಿಕ ಶಕ್ತಿಯ ಉಪಯೋಗವನ್ನೂ ನಹ ಮಾಡಿಕೊಳ್ಳುವುದು ಕಂಡುಬರುತ್ತದೆ. ಮನುಷ್ಯನಂತೂ ಸಾಮಾಜಿಕ ಪ್ರಾಣಿಯೇ ಆಗಿದ್ದಾನೆ. ಸಮಾಜವು ಎಲ್ಲಿಯ ವರೆಗೆ ರೂಪುಗೊಳ್ಳುವುದಿಲ್ಲವೋ ಅಲ್ಲಿಯ ವರೆಗೆ ವ್ಯಕ್ತಿಗಳಲ್ಲಿ ಹಿಂಸಾತ್ಮಕ ವೃತ್ತಿಯ ಪರಿತ್ಯಾಗವಾಗುವುದಿಲ್ಲ. ಇಷ್ಟೇ ಅಲ್ಲ, ಸಮಾಜವು ರೂಪುಗೊಳ್ಳಲಿಕ್ಕೆಂದು ವ್ಯಕ್ತಿಗಳಲ್ಲಿ ಪರಸ್ಪರ ರಕ್ಷಣೆ ಮತ್ತು ಸಹಾಯ ಮಾಡುವ ಭಾವನೆಗಳೂ ನಹ ಅವಶ್ಯಕವಾಗಿವೆ. ಇದೇ ಕಾರಣದಿಂದ ಮನುಷ್ಯ-ಸಮಾಜದಲ್ಲಿ ಎಷ್ಟು ಧರ್ಮಗಳು ಸ್ಥಾಪಿಸಲ್ಪಟ್ಟಿವೆಯೋ ಅವುಗಳಲ್ಲಿ ಕಲವೊಂದು ಮರ್ಯಾದೆಯ ಒಳಗೇ ಅಹಿಂಸೆಯ ಉಪದೇಶವು ಕಂಡುಬರುತ್ತದೆ ಅದು ಕುಟುಂಬ, ಜಾತಿ, ಧರ್ಮ ಅಥವಾ ಮನುಷ್ಯ ಮಾತ್ರರ ವರೆಗೆ ಮಾತ್ರ ಸೀಮಿತವಿರುತ್ತದೆ. ಭಾರತೀಯ ಸಾಮಾಜಿಕ ಜೀವನದಲ್ಲಿ ಪ್ರಾರಂಭದಲ್ಲಿಯೇ ಯಾವ ಶ್ರಮಣ-ಪರಂಪರೆಗೂ ವೈದಿಕ ಪರಂಪರೆಗೂ ವಿರೋಧ ಉಂಟಾಯಿತೋ ಅದು ಈ ಅಹಿಂಸಾ ನೀತಿಯ ಮೂಲಕವೇ ಆಗಿತ್ತು. ಧಾರ್ಮಿಕ ವಿಧಿಗಳಲ್ಲಿ ನರಬಲಿಯ ಪ್ರಚಾರವಂತೂ ಬಹಳ ಮೊದಲಿನ ಕಾಲದಿಂದಲೂ ಉತ್ತರೋತ್ತರ ಮಂದವಾಗುತ್ತ ಹೋಗಿತ್ತು. ಆದರೆ ಪಶುಬಲಿಯು ಯಜ್ಞ ಕ್ರಿಯೆಗಳ ಒಂದು ಸಾಮಾನ್ಯ ಅಂಗವಾಗಿ ಉಳಿದಿತ್ತು. ಇದನ್ನು ಶ್ರಮಣ ಸಾಧುಗಳು ಸದಾ ವಿರೋಧಿಸುತ್ತಲೇ ಇದ್ದರು. ಮುಂದಿನ ಕಾಲದಲ್ಲಿ ಶ್ರಮಣರಲ್ಲಿ ಜೈನ ಮತ್ತು ಬೌದ್ಧ ಎಂಬ ಎರಡು ವಿಭಾಗಗಳಾದುವು. ಇವೆರಡರಲ್ಲಿಯೂ ಅಹಿಂಸೆಯ ಸಿದ್ಧಾಂತದ ಮೇಲೆಯೇ ಶಕ್ತಿಯನ್ನೆಲ್ಲ ಕೇಂದ್ರೀಕರಿಸಲಾಗಿದೆ. ಅದು ಇಲ್ಲಿಯ ವರೆಗೂ ನಡೆದುಬಂದಿದೆ. ಹೀಗಿದ್ದರೂ ಬೌದ್ಧ ಧರ್ಮದಲ್ಲಿ ಅಹಿಂಸೆಯ ಚಿಂತನ, ವಿವೇಚನ ಮತ್ತು ಪಾಲನ ಬಹಳಷ್ಟು ಪರಿಮಿತವಾಗಿದೆ. ಆದರೆ ಈ ಸಿದ್ಧಾಂತವು ಜೈನಧರ್ಮದಲ್ಲಿ ಸಮಸ್ತ ಸದಾಚಾರದ ತಳಹದಿಯಷ್ಟೇ ಅಲ್ಲ, ಧರ್ಮದ

ಸರ್ವೋತ್ಕೃಷ್ಟ ಅಂಗವಾಗಿದೆ. ಅಹಿಂಸಾ ಪರಮೋ ಧರ್ಮಃ ಎಂಬ ವಾಕ್ಯವನ್ನು ನಾವು ಎರಡು ವಿಧದಿಂದ ಓದುವುದು ಸಾಧ್ಯವಿದೆ ಮೂರೂ ಶಬ್ದಗಳನ್ನು ಯಾವಾಗ ಪೃಥಕ್-ಪೃಥಕ್‌ವಾಗಿ ಯಾವಾಗ ಓದಿಕೊಳ್ಳುತ್ತೇವೆಯೋ ಆಗ ಅದರ ಅರ್ಥವು ಅಹಿಂಸೆಯೇ ಪರಮಧರ್ಮ ಎಂದು ಆಗುತ್ತದೆ ಯಾವಾಗ ನಾವು ಅಹಿಂಸಾ-ಪರಮೋ ಎಂಬುದನ್ನು ಒಂದು ಸಮಾಸ ಪದವೆಂದು ಮನ್ನಿಸಿದರೆ ಆ ವಾಕ್ಯವು ಧರ್ಮದ ಪರಿಭಾಷೆಯಾಗಿ ರೂಪುಗೊಳ್ಳುತ್ತದೆ. ಆಗ ಅದರ ಅರ್ಥವು ಯಾವುದರಲ್ಲಿ ಅಹಿಂಸೆಗೆ ಶ್ರೇಷ್ಠ ಸ್ಥಾನವಿರುವುದೋ ಅದೇ ಧರ್ಮವೆನಿಸುತ್ತದೆ. ಸಮಸ್ತ ಜೈನಾಚಾರವು ಇದೇ ಅಹಿಂಸೆಯ ಸಿದ್ಧಾಂತವನ್ನು ಅವಲಂಬಿಸಿದೆ ಯಾವುದೇ ಆಚಾರಕ್ಕೆ ಸಂಬಂಧಿಸಿದ ನಿಯಮಗಳನ್ನು ನಿರ್ದಿಷ್ಟಗೊಳಿಸಿದ್ದರೂ ಅವೆಲ್ಲ ಅಹಿಂಸೆಯ ಸರ್ವಾಂಗ ಪಾಲನೆಗಾಗಿಯೇ ಇವೆ. ಇದೇ ತಿರುಳನ್ನು ಮನುಸ್ಮೃತಿಯು (೨, ೧೫೯) ಅಹಿಂಸಯೈವ ಭೂತಾನಾಂ ಕಾರ್ಯಂ ಶ್ರೇಯೋನುಶಾಸನಮ್ । ಎಂಬ ಒಂದೇ ಪಂಕ್ತಿಯಲ್ಲಿ ಚನ್ನಾಗಿ ಸ್ವೀಕರಿಸಲಾಗಿದೆ.

ಶ್ರಾವಕ-ಧರ್ಮ :—

ಅಹಿಂಸಾ, ಅನೃಷಾ, ಅಸ್ತೇಯ, ಅಮೈಥುನ ಮತ್ತು ಅಪರಿಗ್ರಹ ಎಂದು ಮುಖ್ಯ ವ್ರತಗಳು ಐದು ಇವೆ ಇವುಗಳ ಅರ್ಥವು ಹಿಂಸೆಯನ್ನು ಮಾಡಕೂಡದು ಸುಳ್ಳು ನುಡಿಯಲಾಗದು ಕಳವು ಮಾಡಕೂಡದು, ವ್ಯಭಿಚಾರವು ಬೇಡ ಮತ್ತು ಪರಿಗ್ರಹವನ್ನು ಮಾಡದಿರು-ಎಂದಾಗುತ್ತದೆ ಈ ವ್ರತಗಳ ಸ್ವರೂಪದ ಬಗ್ಗೆ ವಿಚಾರ ಮಾಡುವುದರಿಂದ ಕೆಲವೊಂದು ಸಂಗತಿಗಳು ಸ್ಪಷ್ಟವಾಗುತ್ತವೆ. ಈ ವ್ರತಗಳಿಂದ ಮನುಷ್ಯನ ಯಾವ ವೃತ್ತಿಗಳನ್ನು ನಿಯಂತ್ರಿಸಲಾಗುವುದೋ, ಅವು ಸಮಾಜದಲ್ಲಿ ಮುಖ್ಯ ರೂಪದಿಂದ ವೈರ-ವಿರೋಧಗಳ ಜನಕ ರೂಪದಲ್ಲಿ ಇರುತ್ತವೆ. ಇನ್ನೂ ಒಂದು ಮಾತಿನ ಕಡೆಗೆ ನಾವು ಗಮನವೀಯಬೇಕಾಗಿದೆ. ಆಚರಣೆಯ ಪರಿಷ್ಕಾರವನ್ನು ಸರಲತಮರೀತಿಯಿಂದ ಕೆಲವೊಂದು ನಿಷೇಧಾತ್ಮಕ ನಿಯಮಗಳಿಂದಲೇ ಮಾಡಲಾಗಿದೆ ವ್ಯಕ್ತಿಯು ಮಾಡುವ ಕ್ರಿಯೆಗಳು ಮೂಲದಲ್ಲಿ ಅವನ ಸ್ವಾರ್ಥದಿಂದ ಪ್ರೇರಿತವಾಗಿರುತ್ತವೆ. ಈ ಕ್ರಿಯೆಗಳಲ್ಲಿ ಯಾವುದು ಒಳ್ಳೆಯದು, ಯಾವುದು ಕೆಟ್ಟದ್ದು, ಎಂಬುದನ್ನು ಯಾವುದಾದರೊಂದು ನಿಶ್ಚಿತ ಮಾನದಂಡದ ನಿರ್ಣಯವಾದಾಗಲೇ ಹೇಳಲು ಸಾಧ್ಯವಿದೆ. ಹಿಂಸೆ, ಕಳ್ಳತನ, ಸುಳ್ಳು, ಕುಶೀಲ ಮತ್ತು ಪರಿಗ್ರಹ ಇವು ಸಾಮಾಜಿಕ ಪಾಪವಂತೂ ಇವೆ. ಇವುಗಳನ್ನು ಎಷ್ಟು ಅಂಶದಲ್ಲಿ ತ್ಯಾಗ ಮಾಡುವನೋ ಅಷ್ಟು ಆ ವ್ಯಕ್ತಿಯು ಸಭ್ಯ ಮತ್ತು ಸಮಾಜ-ಹಿತೈಷಿ ಎಂದು ಮನ್ನಿಸಲಾಗುವನು. ಎಷ್ಟು ವ್ಯಕ್ತಿಗಳು ಈ ವ್ರತಗಳನ್ನು ಪಾಲಿಸುವರೋ ಅಷ್ಟೇ ಸಮಾಜವು ಶುದ್ಧವೂ ಸುಖಿಯೂ ಮತ್ತು ಪ್ರಗತಿಶೀಲವೂ ಆದೀತು. ಜೈನ ಶಾಸ್ತ್ರಗಳಲ್ಲಿ ಈ ವ್ರತಗಳಿಗೆ ಬಹಳ ಮಹತ್ವ ಕೊಡಲಾಗಿದೆ. ಇವುಗಳ ಸೂಕ್ಷ್ಮ

ಹಾಗೂ ಸುನಿಶ್ಚಿತ ವಿವೇಚನೆಯನ್ನು ಮಾಡಲಾಗಿದೆ. ಇದರಿಂದ ಜೈನ ಶಾಸ್ತ್ರಕಾರರು ಕೈಕೊಂಡ ವೈಯಕ್ತಿಕ ಮತ್ತು ಸಾಮಾಜಿಕ ಜೀವನದ ಶೋಧನದ ಪ್ರಯತ್ನದ ಕಲ್ಪನೆಯು ಬರುತ್ತದೆ. ಅವರು ಮೊಟ್ಟ ಮೊದಲು ತಮ್ಮ ಅನುಭವದಿಂದ ಈ ಎಲ್ಲ ವ್ರತಗಳನ್ನು ಒಂದೇ ರೀತಿಯಿಂದ ಎಲ್ಲರೂ ಪಾಲಿಸುವುದು ಸಾಧ್ಯವಿಲ್ಲವೆಂದು ಕಂಡುಕೊಂಡರು. ಅದಕ್ಕಾಗಿ ಅವರು ಈ ವ್ರತಗಳಲ್ಲಿ ಎರಡು ಮೆಟ್ಟಲುಗಳನ್ನು ನಿರ್ಮಿಸಿದರು. ಅವುಗಳಲ್ಲಿ ಒಂದು ಅಣು ಇನ್ನೊಂದು ಮಹತ್ ಅರ್ಥಾತ್ ಏಕಾಂಶ ಮತ್ತು ಸರ್ವಾಂಶ. ಗೃಹಸ್ಥರ ಆವಶ್ಯಕತೆ ಮತ್ತು ಅನಿವಾರ್ಯತೆಗಳನ್ನು ಗಮನಿಸಿ, ಅವರು ಇವುಗಳನ್ನು ಆಂಶಿಕ ಅಣುವ್ರತ ರೂಪದಿಂದ ಪಾಲನ ಮಾಡಲಿಕ್ಕೆ ಉಪದೇಶಿಸಿದರು. ತ್ಯಾಗಿಗಳಿಗೂ ಮುನಿಗಳಿಗೂ ಪರಿಪೂರ್ಣರೂಪದಲ್ಲಿ ಮಹಾವ್ರತಗಳನ್ನಾಗಿ ಆಚರಿಸಲು ಹೇಳಿದರು. ಈ ವ್ರತಗಳ ಮೂಲಕ ಯಾವ ಪ್ರಕಾರ ಪಾಪಗಳ ನಿರಾಕರಣದ ಉಪದೇಶವನ್ನು ಮಾಡಿರುವರೋ, ಅದರ ಸ್ವರೂಪವು ಇಲ್ಲಿ ಕೆಳಗೆ ಕಾಣಿಸಿದ ಪ್ರಕಾರ ಸಂಗ್ರಹ ರೂಪದಲ್ಲಿ ಇರುತ್ತದೆ

**ಅಹಿಂಸಾಣುವ್ರತ :—**

ಪ್ರಮಾದಕ್ಕೆ ವಶನಾಗಿ ಪ್ರಾಣಾಘಾತ ಮಾಡುವುದೇ ಹಿಂಸೆಯು. ಮನವನ್ನು ರಾಗದ್ವೇಷಾತ್ಮಕ ಕಷಾಯಗಳಿಂದ ಶುದ್ಧವಾಗಿಡುವುದರಲ್ಲಿ ಶಿಥಿಲತೆಯನ್ನು ವ್ಯಕ್ತಪಡಿಸುವುದೇ ಪ್ರಮಾದವಾಗಿದೆ. ಪ್ರಾಣ-ಘಾತದ ತಾತ್ಪರ್ಯವಿಷ್ಟೆ. ಜೀವವಧೆ ಎಂಬುದೇ ಅಲ್ಲ, ಯಾವುದೇ ಪ್ರಕಾರದ ಪೀಡೆಯನ್ನು ಉಂಟುಮಾಡುವುದಾಗಿದೆ. ಈ ಹಿಂಸೆಯಲ್ಲಿ ದ್ರವ್ಯ ಹಿಂಸಾ ಮತ್ತು ಭಾವ ಹಿಂಸಾ ಎಂದು ಎರಡು ಭೇದಗಳಿವೆ. ತನ್ನ ಶಾರೀರಿಕ ಕ್ರಿಯೆಗಳಿಂದ ಯಾವುದೇ ಜೀವದ ಶರೀರವನ್ನು ಪ್ರಾಣ ಹೀನವನ್ನಾಗಿ ಮಾಡುವುದು, ಇಲ್ಲವೆ ವಧ, ಬಂಧನಾದಿಗಳಿಂದ ಅದಕ್ಕೆ ಪೀಡೆಯನ್ನುಂಟು ಮಾಡುವುದು ದ್ರವ್ಯ ಹಿಂಸೆಯಾಗಿದೆ. ತನ್ನ ಮನಸ್ಸಿನಲ್ಲಿ ಯಾವುದೇ ಜೀವದ ಹಿಂಸೆಯ ವಿಚಾರ ಮಾಡುವುದು ಭಾವ ಹಿಂಸೆಯಾಗಿದೆ. ಯಥಾರ್ಥವಾಗಿ ಪಾಪವು ಮುಖ್ಯವಾಗಿ ಈ ಭಾವ ಹಿಂಸೆಯಲ್ಲಿಯೇ ಇದೆ. ಯಾಕಂದರೆ ಅವನಿಂದ ಅನ್ಯ ಪ್ರಾಣಿಯ ಹಿಂಸೆಯಾಗಲಿ, ಆಗದಿರಲಿ, ಚಿಂತಕನ ಸ್ವತಃ ವಿಶುದ್ಧ ಅಂತರಂಗದ ಘಾತವಾಗುತ್ತದೆ. ಆದಕ್ಕಾಗಿ ಹೀಗೆ ಹೇಳಿದೆ :-

ಸ್ವಯ-ಮೇವಾತ್ಮನಾತ್ಮಾನಂ ಹಿನಸ್ತ್ಯಾತ್ಮಾ ಪ್ರಮಾದವಾನ್ ।
ಪೂರ್ವಂ ಪ್ರಾಣ್ಯಂತರಾಣಾಂ ತು ಪಶ್ಚಾತ್ಸ್ಯಾದ್ವಾ ನಾ ವಧಃ ॥
(ಸರ್ವಾರ್ಥಸಿದ್ಧಿ ಸೂ. ೭, ೧೩)

ಅರ್ಥಾತ್ ಪ್ರಮಾದೀ ಮನುಷ್ಯನು ತನ್ನ ಹಿಂಸಾತ್ಮಕ ಭಾವದಿಂದ ತಾನೇ ತನ್ನ ಹಿಂಸೆಯನ್ನು ಮೊದಲು ಮಾಡಿಕೊಂಡು ಬಿಡುತ್ತಾನೆ ; ತರುವಾಯ ಅವನಿಂದ-ಎರಡ

ನೆಯ ಪ್ರಾಣಿಯು ವಧೆಯಾಗಲಿ, ಆಗದೇ ಇರಲಿ ಇದಕ್ಕೆ ವಿಪರೀತವಾಗಿ ಯಾವಾಗ ವ್ಯಕ್ತಿಯು ತನ್ನ ಭಾವನೆಯನ್ನು ಶುದ್ಧವಾಗಿಟ್ಟುಕೊಂಡು, ತನ್ನ ಶಕ್ತಿಯಿದ್ದಷ್ಟು ಜೀವ ರಕ್ಷಣೆಗೆ ಪ್ರಯತ್ನಮಾಡುತ್ತ ಇದ್ದರೆ ದ್ರವ್ಯ ಹಿಂಸೆಯಾದರೂ ಸಹ ಅವನು ಪಾಪಕ್ಕೆ ಗುರಿಯಾಗಲಾರನು. ಈ ವಿಷಯದಲ್ಲಿ ಎರಡು ಪ್ರಾಚೀನ ಗಾಥೆಗಳು ಇಲ್ಲಿ ಉಲ್ಲೇಖನೀಯವಾಗಿವೆ :—

ಉಚ್ಚಾಲಿದಮ್ಮಿ ಪಾದೇ ಇರಿಯಾಸಮಿದಸ್ಸ ಣಿಗ್ಗಮಟ್ಠಾಣೆ ।
ಆವಾದೆಜ್ಜ ಕುಲಿಂಗೋ ಮರೆಜ್ಜ ತಂ ಜೋಗಮಾಸೆಜ್ಜ ॥ ೧ ॥
ಣ ಹಿ ತಸ್ಸ ತಣ್ಣಿಮಿತ್ತೋ ಬಂಧೋ ಸುಹುಮೋ ವಿ ದೇಸಿದೋ ಸಮಯೆ ।
ಜಮ್ಹಾ ಸೋ ಅಪಮತ್ತೋ ಸಾ ಉ ಪಮಾಉ ತ್ತಿ ಣಿದ್ದಿಟ್ಠಾ ॥ ೨ ॥

ಅರ್ಥಾತ್ ಗಮನಕ್ಕೆ ಸಂಬಂಧಿಸಿದ ನಿಯಮಗಳನ್ನು ಸಾವಧಾನದಿಂದ ಪಾಲನ ಮಾಡುವಂಥ ಸಂಯಮಿಯು ಯಾವಾಗ ತನ್ನ ಪಾದವನ್ನು ಎತ್ತಿ ಇಡುವನೋ ಆಗಲೇ ಅದರ ಕೆಳಗೆ ಸಿಕ್ಕು ಕೆಲವು ಜೀವ-ಜಂತುಗಳು ನುಗ್ಗಾಗಿ ನತ್ತುಹೋದುವು. ಆದರೆ ಆದರಿಂದ ಆ ಸಂಯಮಿಗೆ ಶಾಸ್ತ್ರಾನುಸಾರ ಸ್ವಲ್ಪವೂ ಕೂಡ ಕರ್ಮಬಂಧವು ಆಗ ಲಿಲ್ಲ. ಯಾಕಂದರೆ ಸಂಯಮಿಯು ಪ್ರಮಾದವನ್ನು ಮಾಡಲಿಲ್ಲ. ಹಿಂಸೆಯಂತೂ ಪ್ರಮಾದದಿಂದಲೇ ಆಗುತ್ತದೆ. ಭಾವಹಿಂಸೆಯು ಎಷ್ಟು ಕೆಡಕು ಎಂಬುದನ್ನು ಈ ಗಾಥೆಯು ಪ್ರಕಟಗೊಳಿಸುತ್ತದೆ :—

ಮರದು ವ ಜಿಯದು ವ ಜೀವೋ ಅಯದಾಚಾರಸ್ಸ ಣಿಚ್ಛಿದಾ ಹಿಂಸಾ ।
ಪಯದಸ್ಸ ಣತ್ಥಿ ಬಂಧೋ ಹಿಂಸಾಮಿತ್ತೇಣ ಸಮಿದಸ್ಸ ॥

ಅರ್ಥಾತ್ ಜೀವವು ಸಾಯಲಿ ಅಥವಾ ಸಾಯದಿರಲಿ, ಯಾವನು ತನ್ನ ಆಚಾರ ದಲ್ಲಿ ಯತ್ನಶೀಲನಾಗಿರುವುದಿಲ್ಲವೋ, ಅವನು ಭಾವ ಮಾತ್ರದಿಂದ ಹಿಂಸೆಯ ದೋಷಕ್ಕೆ ಅವಶ್ಯವಾಗಿ ಪಾತ್ರನಾಗುತ್ತಾನೆ. ಇದಕ್ಕೆ ವಿರುದ್ಧವಾಗಿ ಯಾವ ಸಂಯಮಿಯು ತನ್ನ ಆಚರಣೆಯಲ್ಲಿ ಸತರ್ಕನಾಗಿರುತ್ತಾನೆಯೋ, ಅವನು ದ್ರವ್ಯ ಹಿಂಸಾ ಮಾತ್ರದಿಂದ ಅವನು ಕರ್ಮಬಂಧಕ್ಕೆ ಒಳಪಡುವುದಿಲ್ಲ. ಅಹಿಂಸೆಯ ಉಪದೇಶದಲ್ಲಿ ಮುಖ್ಯ ಭಾರವು ನಿಜವಾಗಿಯೂ ಮನುಷ್ಯನ ಮಾನಸಿಕ ಶುದ್ಧಿಯ ಮೇಲಿದೆಯೆಂಬುದು ಸ್ಪಷ್ಟವಾಗು ತ್ತದೆ.

ಗೃಹಸ್ಥ ಮತ್ತು ಮುನಿಗಳಿಗಾಗಿ ಅಹಿಂಸಾ ವ್ರತವನ್ನು ಕ್ರಮದಿಂದ ಅಣು ಮತ್ತು ಮಹತ್ ರೂಪದಲ್ಲಿ ಪಾಲನ ಮಾಡುವ ಉಪದೇಶ ಮಾಡಲಾಗಿದೆಯಷ್ಟೆ. ಇದು ಜೈನ ವ್ಯವಹಾರ ದೃಷ್ಟಿಯ ಪರಿಣಾಮವಾಗಿದೆ. ಮುನಿಗಳಂತೂ ಸೂಕ್ಷ್ಮಕ್ಕಿಂತ ಸೂಕ್ಷ್ಮವಾಗಿರುವ ಏಕೇಂದ್ರಿಯ ಮೊದಲುಗೊಂಡು ಯಾವ ಜೀವವನ್ನೂ ತಿಳುವಳಿಕೆ ಯಿಂದ ಹಿಂಸಿಸಲಾರರು. ಅವರು ಜೀವ ರಕ್ಷಣೆಗಾಗಿ ಸ್ವತಃ ಎಷ್ಟೋ ಕಷ್ಟಗಳನ್ನು ಸಹಿಸದೆ ಇರುವುದಿಲ್ಲ. ಆದರೆ ಗೃಹಸ್ಥರ ಮರ್ಯಾದೆಗಳನ್ನೂ ಲಕ್ಷ್ಯದಲ್ಲಿಟ್ಟುಕೊಂಡು

ಅವರ ಅನುಕೂಲತೆಗಾಗಿ ವನಸ್ಪತಿಯೇ ಮೊದಲಾದ ಸ್ಥಾವರ ಹಿಂಸೆಯ ತ್ಯಾಗದ ಬಗ್ಗೆ ಅಷ್ಟು ಒತ್ತಿ ಹೇಳಿಲ್ಲ. ದ್ವೀಂದ್ರಿಯಾದಿ ತ್ರಸಜೀವಗಳ ಸಂಬಂಧದಲ್ಲಿ ಹಿಂಸೆಯಲ್ಲಿ ಆರಂಭೀ, ಉದ್ಯೋಗೀ, ವಿರೋಧೀ ಮತ್ತು ಸಂಕಲ್ಪೀ ಎಂದು ನಾಲ್ಕು ಭೇದ ಗಳನ್ನು ಮಾಡಿದ್ದಾರೆ. ತಿರುಗಾಡುವುದರಿಂದ ಆರಂಭಿಸಿ ಬೀಸುವುದು, ಕುಟ್ಟುವುದು, ಅಡಿಗೆಮಾಡುವುದೇ ಮೊದಲಾದ ಗೃಹಸ್ಥ ಜೀವನಕ್ಕೆ ಸಂಬಂಧಿಸಿದ ಕ್ರಿಯೆಗಳನ್ನು ಆರಂಭ ಎಂದು ಹೇಳಲಾಗುತ್ತದೆ. ಇದರಲ್ಲಿ ಅನಿವಾರ್ಯವಾಗಿ ಆಗುವ ಹಿಂಸೆಯು ಆರಂಭೀ ಹಿಂಸೆ ಎನಿಸುತ್ತದೆ. ಒಕ್ಕಲತನ, ವ್ಯಾಪಾರ, ಅಂಗಡಿಯನ್ನಿಡುವಿಕೆ, ವಾಣಿಜ್ಯ ಮತ್ತು ಉದ್ಯೋಗ ಮೊದಲಾದವುಗಳಲ್ಲಿ ಆಗುವ ಹಿಂಸೆಯು ಉದ್ಯೋಗಿ ಹಿಂಸೆಯು, ಸ್ವಜನ ಮತ್ತು ಪರಜನರ ಹಾಗೂ ಧರ್ಮ, ದೇಶ ಮತ್ತು ಸಮಾಜದ ರಕ್ಷಣೆಗಾಗಿ ಅಪರಿಹಾರ್ಯವಾದ ಹಿಂಸೆಯು ವಿರೋಧೀ ಹಿಂಸೆಯಾಗಿದೆ. ಕೇವಲ ವಿನೋದಕ್ಕಾಗಿಯೂ, ವೈರಿಯ ಸೇಡನ್ನು ತಕ್ಕೊಳ್ಳಲಿಕ್ಕೆಂದೂ. ತನ್ನ ಪೌರುಷದ ಪ್ರದರ್ಶನಕ್ಕಾಗಿಯೂ, ಇನ್ನುಳಿದ ಯಾವುದೇ ಸ್ವಾರ್ಥಸಾಧನೆಗಾಗಿಯೂ ತಿಳಿದೂ ತಿಳಿದೂ ಮಾಡುವ ಹಿಂಸೆಯು ಸಂಕಲ್ಪೀ ಹಿಂಸೆಯೆನಿಸುತ್ತದೆ. ಈ ನಾಲ್ಕೂ ಪ್ರಕಾರದ ಹಿಂಸೆಗಳಲ್ಲಿ ಗೃಹಸ್ಥನು ವ್ರತರೂಪದಿಂದ ಕೇವಲ ಸಂಕಲ್ಪೀ ಹಿಂಸೆಯನ್ನು ಮಾತ್ರ ತ್ಯಜಿಸಲು ಸಾಧ್ಯವಿದೆ. ಉಳಿದ ಮೂರು ಪ್ರಕಾರದ ಹಿಂಸೆಗಳಲ್ಲಿ ಅವನು ಸ್ವತಃ ತನ್ನ ಪರಿಸ್ಥಿತಿ ಹಾಗೂ ವಿವೇಕಗಳಿಗೆ ಅನುಸರಿಸಿ ಸಂಯಮಿಯಾಗಿರಲಿಕ್ಕೆ ಉಪದೇಶ ವೀಯಲಾಗಿದೆ.

### ಅಹಿಂಸಾಣುವ್ರತದ ಅತಿಚಾರಗಳು :—

ಪ್ರಾಣಘಾತದ ಹೊರತಾಗಿ ಅನ್ಯರೀತಿಯಿಂದಲೂ ಪೀಡೆಯನ್ನು ಕೊಟ್ಟು ಹಿಂಸೆಯನ್ನು ಮಾಡುವ ಅನೇಕ ಪ್ರಕಾರಗಳಿವೆ. ಇವುಗಳಿಂದ ಉಳಿದುಕೊಳ್ಳುವುದು ವ್ರತಿಗೆ ಅವಶ್ಯಕವಾಗಿದೆ. ವಿಶೇಷವಾಗಿ ಪರಿವಾರದವರು ಹಾಗೂ ಪಶುಗಳೊಡನೆ ಐದು ಪ್ರಕಾರದ ಕ್ರೂರತೆಗಳನ್ನು ಅತಿಚಾರ (ಅತಿಕ್ರಮಣ)ವೆಂದು ಹೇಳಿ ಅವು ಗಳನ್ನು ನಿಷೇಧಿಸಲಾಗಿದೆ. ಅವು ಹೀಗಿವೆ :—ಅವುಗಳನ್ನು ಕಟ್ಟಿಹಾಕುವುದು, ಕಟ್ಟಿಗೆ, ಬಾರುಕೋಲುಗಳಿಂದ ಹೊಡೆಯುವುದು, ಕಿವಿ ಮೂಗುಗಳನ್ನು ಕೊಯ್ಯು ವುದು, ಅವುಗಳ ಶಕ್ತಿಯನ್ನು ಮೀರಿ ಭಾರ ಹೊರಿಸುವುದು, ಕಾಲಕಾಲಕ್ಕೆ ಅನ್ನ ನೀರುಗಳನ್ನು ಕೊಡದೆ ಇರುವುದು. ಈ ಅತಿಚಾರಗಳಿಂದ ಉಳಿದುಕೊಳ್ಳುವುದಲ್ಲದೆ, ಅಹಿಂಸೆಯ ಭಾವವನ್ನು ದೃಢಗೊಳಿಸುವದಕ್ಕಾಗಿ ಐದು ಭಾವನೆಗಳ ಉಪದೇಶವನ್ನು ಮಾಡಲಾಗಿದೆ —ತನ್ನ ಮನಸ್ಸಿನ ವಿಚಾರ, ವಚನಪ್ರಯೋಗ, ಗಮನಾಗಮನ, ವಸ್ತುಗಳನ್ನು ಇಡುವುದು–ಎತ್ತುವುದು ಹಾಗೂ ಊಟೋಪಚಾರದ ಕ್ರಿಯೆಗಳಲ್ಲಿ ಜಾಗರೂಕವಾಗಿರುವುದು. ಈ ಪ್ರಕಾರ ಜೈನಶಾಸ್ತ್ರ–ಪ್ರಣೀತ ಹಿಂಸೆಯ ಸ್ವರೂಪ ದಿಂದಲೂ ಅಹಿಂಸಾ ವ್ರತದ ವಿವೇಚನೆಯಿಂದಲೂ ಒಂದು ಮಾತು ಸ್ಪಷ್ಟವಾಗು

ತ್ತದೆ. ಈ ವ್ರತದ ವಿಧಾನವು ವ್ಯಕ್ತಿಯನ್ನು ಸುಶೀಲ, ಸುಸಭ್ಯ ಮತ್ತು ಸಮಾಜ ಹಿತೈಷಿಯನ್ನಾಗಿ ಮಾಡುತ್ತದೆ. ಅಲ್ಲದೆ ಅನಿಷ್ಟಕಾರಿ ಪ್ರವೃತ್ತಿಗಳಿಂದ ದೂರವಿಡುವುದು. ಈ ಸಂಯಮದ ಅವಶ್ಯಕತೆಯು ಸಂಸಾರದಲ್ಲಿ ಇಂದೂ ಕೂಡ ಅತ್ಯಧಿಕವಾಗಿದೆ. ಯಾವ ಪ್ರಕಾರ ಈ ವ್ರತವು ವ್ಯಕ್ತಿಯ ಆಚರಣೆಯನ್ನು ಶುದ್ಧೀಕರಿಸುವುದೋ ಅದೇ ಪ್ರಕಾರ ಅದು ದೇಶ ಮತ್ತು ಸಮಾಜದ ನೀತಿಯನ್ನು ರೂಪಿಸಿ ಸಂಸಾರದಲ್ಲಿ ಸುಖ ಮತ್ತು ಶಾಂತಿಯನ್ನು ಸ್ಥಾಪಿಸುವುದರಲ್ಲಿ ಸಹಾಯಕವಾಗುತ್ತದೆ. ಅಹಿಂಸೆಯ ಈ ಸದ್ಗುಣಕ್ಕಾಗಿಯೇ ಈ ಸಿದ್ಧಾಂತವು ಜೈನ ಮತ್ತು ಬೌದ್ಧ ಧರ್ಮಗಳ ವರೆಗೆ ಮಾತ್ರ ಸೀಮಿತವಾಗಿ ಉಳಿಯಲಿಲ್ಲ. ಅದು ವೈದಿಕ ಪರಂಪರೆಯಲ್ಲಿಯೂ ಇಂದಿಗೆ ಕೆಲವು ಶತಕಗಳ ಪೂರ್ವದಲ್ಲಿಯೇ ಪ್ರವಿಷ್ಟವಾಗಿದೆ ಒಂದು ರೀತಿಯಿಂದ ಸಮಗ್ರ ದೇಶದ ಮೇಲೆಲ್ಲ ತನ್ನ ಪ್ರಭಾವವನ್ನು ಬೀರಿದೆ. ಅದಕ್ಕಾಗಿ ನಮ್ಮ ದೇಶದಲ್ಲಿ ತನ್ನ ರಾಜನೀತಿಗಾಗಿ ಅಹಿಂಸೆಯನ್ನು ಆಧಾರಭೂತ ಸಿದ್ಧಾಂತ ರೂಪದಲ್ಲಿ ಸ್ವೀಕಾರ ಮಾಡಲಾಗಿದೆ

## ಸತ್ಯಾಣುವ್ರತ ಮತ್ತು ಅದರ ಅತಿಚಾರಗಳು :—

ಅಸದ್ ವಚನ ಮಾತಾಡುವುದು–ಅನೃತ, ಅಸತ್ಯ, ಮೃಷಾ ಅಥವಾ ಸುಳ್ಳು ಎನಿಸುತ್ತದೆ. ಅಸತ್‌ದ ಅರ್ಥವು ಯಾವುದು ಸತ್ ಅರ್ಥಾತ್ ವಸ್ತು ಸ್ಥಿತಿಗೆ ಅನುಕೂಲ ಹಾಗೂ ಹಿತಕಾರಕ ಅಲ್ಲದುದು ಅದಕ್ಕಾಗಿ ಶಾಸ್ತ್ರದಲ್ಲಿ **ಸತ್ಯಂ ಬ್ರೂಯಾತ್, ಪ್ರಿಯಂ ಬ್ರೂಯಾತ್, ನ ಬ್ರೂಯಾತ್ ಸತ್ಯಮಪ್ರಿಯಮ್।** ಎಂದು ಹೇಳಿದೆ. ಅರ್ಥಾತ್ ಸತ್ಯ ಮಾತನಾಡು ಪ್ರಿಯ ಮಾತಾಡು, ಅನ್ಯರಿಗೆ ಅಪ್ರಿಯವಾಗುವಂತೆ ಸತ್ಯವನ್ನು ಮಾತಾಡದೆ ಇರು ಈ ಪ್ರಕಾರ ಸತ್ಯ ಭಾಷಣ ವ್ರತದ ಮೂಲ ಭಾವನೆಯು ಆತ್ಮ ಪರಿಣಾಮದ ಶುದ್ಧಿ ಹಾಗೂ ಸ್ವ ಮತ್ತು ಪರಕೀಯ ಪೀಡೆ ಮತ್ತು ಅಹಿತ ರೂಪ ಹಿಂಸೆಯ ನಿವಾರಣೆಯೇ ಆಗಿದೆ. ಇದನ್ನು ಪಾಲಿಸುವುದರಲ್ಲಿ ಗೃಹಸ್ಥನಿಗೆ ಒಂದು ಮರ್ಯಾದೆಯಿದೆ. ಸ್ನೇಹ ಇಲ್ಲವೆ ಮೋಹವಶನಾಗಿ ಹಾಗೂ ಸ್ವಪರ–ರಕ್ಷಾ ನಿಮಿತ್ತ ಅಸತ್ಯ ಭಾಷೆಯನ್ನಾಡುವ ಪ್ರಸಂಗ ಬಂದೀತು ; ಆಗ ಅವನು ವಿಶೇಷ ಪಾಪಕ್ಕೆ ಪಕ್ಕಾಗಲಾರನು. ಯಾಕಂದರೆ ಅವನ ಭಾವನೆಯು ಮೂಲದಲ್ಲಿ ದೂಷಿತವಾಗಿರುವುದಿಲ್ಲ. ಪಾಪ–ಪುಣ್ಯ ವಿಚಾರದಲ್ಲಿ ದ್ರವ್ಯಕ್ರಿಯೆಗಿಂತ ಭಾವಕ್ರಿಯೆಯ ಮಹತ್ವವು ಹೆಚ್ಚಿಗೆ ಇರುತ್ತದೆ ಆದರೆ ಸುಳ್ಳು ಉಪದೇಶ ಮಾಡುವುದು, ಇನ್ನೊಬ್ಬರ ಗುಪ್ತಸಂಗತಿಯನ್ನು ಪ್ರಕಟಗೊಳಿಸುವುದು, ಸುಳ್ಳು ಲೇಖನ ಸಿದ್ಧಗೊಳಿಸುವುದು, ಇನ್ನೊಬ್ಬರಿಂದ ತಂದ ವಸ್ತುವನ್ನು ಮರೆತುಬಿಡುವುದು ಅಥವಾ ಕಡಿಮೆಯೆಂದು ಹೇಳುವುದು, ಅನ್ಯರ ಅಂಗಚೇಷ್ಟೆಗಳನ್ನೂ ಸೂಚನೆಗಳನ್ನೂ ತಿಳಿದುಕೊಂಡು ಅವರ ಮಂತ್ರಭೇದವನ್ನು ಪ್ರಕಟಗೊಳಿಸುವುದು, ಇವು ಐದು ಈ ವ್ರತದ ಅತಿಚಾರಗಳಾಗಿವೆ ಇವು ಸ್ಪಷ್ಟವಾಗಿಯೂ ಸಾಮಾಜಿಕ ಜೀವನದಲ್ಲಿ ಅಹಿತಕಾರಿ

ಗಳಾಗಿವೆ. ಸತ್ಯವ್ರತವನ್ನು ಪರಿಪಾಲಿಸುವದಕ್ಕಾಗಿ ಐದು ಭಾವನೆಗಳ ವಿಧಾನ ವನ್ನೂ ಕೂಡ ಮಾಡಲಾಗಿದೆ. ಅವುಗಳಲ್ಲಿ ನಾಲ್ಕು ಕ್ರೋಧ, ಲೋಭ, ಭೀಭತ್ಸ ಮತ್ತು ಹಾಸ್ಯಮೋಜುಗಳನ್ನು ಪರಿತ್ಯಜಿಸುವುದು. ಹಾಗೆಯೇ ಮಾತಿನಲ್ಲಿ ಔಚಿತ್ಯ ವನ್ನು ಕಾಯ್ದುಕೊಳ್ಳುವ ಅಭ್ಯಾಸ ಇಟ್ಟುಕೊಳ್ಳಬೇಕು. ಇವು ಐದು ಭಾವನೆಗಳಾಗಿವೆ.

**ಅಸ್ತೇಯಾಣುವ್ರತ ಮತ್ತು ಅದರ ಅತಿಚಾರಗಳು :—**

ಕೊಡದೆ ಇದ್ದ ಯಾವುದೇ ವಸ್ತುವನ್ನು ತಕ್ಕೊಂಡುಬಿಡುವುದು ಅದತ್ತಾ ದಾನ ರೂಪದ ಸ್ತೇಯ ಅಥವಾ ಕಳವು ಎನಿಸುತ್ತದೆ. ಅಣುವ್ರತಿಯಾದ ಗ್ರಹಸ್ಥನಿ ಗಾಗಿ ಅವಶ್ಯಕ ಎನಿಸುವಷ್ಟು ನೀರು–ಮಣ್ಣುಗಳಂಥ ವಸ್ತುಗಳನ್ನು ತಕ್ಕೊಳ್ಳಲಿಕ್ಕೆ ನಿಷೇಧವಿಲ್ಲ. ಇವುಗಳ ಮೇಲೆ ಅನ್ಯರ ಸ್ಪಷ್ಟ ಅಧಿಕಾರವು ಇರುವುದಿಲ್ಲ. ಮಹಾವ್ರತಿ ಗಳಾದ ಮುನಿಗಳಿಗೆ ಕೊಡದೆ ಇದ್ದುದನ್ನು ಎಳ್ಳಷ್ಟು ಸಹ ತಕ್ಕೊಳ್ಳುವುದಕ್ಕೂ ನಿಷೇಧವಿದೆ. ಸ್ವತಃ ಕಳವು ಮಾಡದೆ. ಅನ್ಯರಿಂದ ಕಳ್ಳತನ ಮಾಡಿಸುವುದು, ಕಳ ವಿನ ಮಾಲನ್ನು ತನ್ನ ಹತ್ತರ ಇಟ್ಟುಕೊಳ್ಳುವುದು. ಸರಕಾರವು ನಿಯಮಿಸಿದ ಸೀಮೆಯ ಹೊರಗೆ ಸಾಮಾನುಗಳನ್ನು ಕಳಿಸುವುದು, ಹೊರಗಿಂದ ತರುವುದು, ತೂಕ –ಮಾಪುಗಳ ಸಾಧನಗಳನ್ನು ನಿಯತ್ಯಪರಿಮಾಣಕ್ಕಿಂತ ಹೆಚ್ಚು-ಕಡಿಮೆ ಇಡುವುದು, ನಕಲೀ ವಸ್ತುಗಳನ್ನು ಒಳ್ಳೆಯ ವಸ್ತುಗಳೆಂದು ಮಾರುವುದು–ಇವು ಐದು ಅಚೌ ರ್ಯಾಣುವ್ರತದ ಅತಿಚಾರಗಳಾಗಿವೆ. ಇವುಗಳನ್ನು ಗೃಹಸ್ಥನು ತ್ಯಜಿಸಲಿಕ್ಕೆ ಬೇಕು. ಮುನಿಗಳಿಗಂತೂ ತೀರ ಕಟ್ಟು-ನಿಟ್ಟಾದ ವಿಧಾನವನ್ನು ಮಾಡಲಾಗಿದೆ. ಅವರು ಕೇವಲ ಪರ್ವತದ ಗುಹೆಗಳಲ್ಲಿಯೂ ಗಿಡಗಳ ಪೊದರುಗಳಲ್ಲಿಯೂ ಪರಿತ್ಯಕ್ತ ಮನೆಗಳಲ್ಲಿಯೂ ನಿವಾಸ ಮಾಡಬೇಕೆಂದು ಹೇಳಿದೆ. ಇಂಥ ಸ್ಥಾನಗಳಲ್ಲಿಯೂ ಸಹ ಅನ್ಯರಿಗೆ ತೊಂದರೆಯಾಗುತ್ತಿದ್ದರೆ ಅಂಥವುಗಳನ್ನೂ ಸಹ ಸ್ವೀಕರಿಸಕೂಡದೆಂದು ಹೇಳಿದೆ. ಭಿಕ್ಷೆಯಿಂದ ಸ್ವೀಕರಿಸಿದ ಅನ್ನದಲ್ಲಿಯೂ ಸಹ ಶುದ್ಧಿಯನ್ನು ಅಪೇಕ್ಷಿಸಲಾ ಗಿದೆ. ಅಲ್ಲದೆ ಅದು ಆವಶ್ಯಕದಕ್ಕಿಂತ ಹೆಚ್ಚಿಗೆ ಇರಕೂಡದು. ಮುನಿಯು ತನ್ನ ಸಹ ಧರ್ಮಿ ಸಾಧುಗಳೊಡನೆ ತನ್ನದು- ನಿನ್ನದು ಎನ್ನುವ ವಿವಾದದಲ್ಲಿ ಬೀಳಕೂಡದು. ಈ ಪ್ರಕಾರ ಈ ವ್ರತದಿಂದ ವ್ಯಾಪಾರದಲ್ಲಿ ಸಾತ್ವಿಕತನ ಮತ್ತು ಸತ್ಯನಡತೆಗಳನ್ನೂ ಸಾಧು ಸಮಾಜದಲ್ಲಿ ಪೂರ್ಣ ನಿಸ್ಪೃಹತೆಯನ್ನೂ ಸ್ಥಾಪಿಸುವ ಪ್ರಯತ್ನ ಮಾಡ ಲಾಗಿದೆ.

**ಬ್ರಹ್ಮಚರ್ಯಾಣುವ್ರತ ಮತ್ತು ಅದರ ಅತಿಚಾರಗಳು :—**

ಸ್ತ್ರೀ-ಅನುರಾಗ ಮತ್ತು ಕಾಮಕ್ರೀಡೆಯ ಪರಿತ್ಯಾಗದ ಹೆಸರು ಅವ್ಯಭಿಚಾರ ಇಲ್ಲವೆ ಬ್ರಹ್ಮಚರ್ಯ ವ್ರತ ಎಂದಿದೆ. ಅಣುವ್ರತಿಯಾದ ಶ್ರಾವಕ ಅಥವಾ ಶ್ರಾವಿಕೆ ಯರು ತಮ್ಮ ಪತಿ-ಪತ್ನಿಯರನ್ನು ಳಿದು ಬೇರೆ ಸಮಸ್ತ ಸ್ತ್ರೀ-ಪುರುಷರೊಡನೆ ತಾಯಿ,

ತಂಗಿ, ಪುತ್ರಿ ಅಥವಾ ತಂದೆ, ಅಣ್ಣ ಮತ್ತು ಪುತ್ರರಂತೆ ಶುದ್ಧ ವ್ಯವಹಾರವನ್ನು ಇಟ್ಟುಕೊಳ್ಳಬೇಕು. ಮಹಾವ್ರತಿಯಂತೂ ಸಂಪೂರ್ಣ ಕಾಮ-ಕ್ರೀಡೆಯನ್ನು ಪರಿತ್ಯಜಿಸುವನು. ಇನ್ನೊಬ್ಬರ ಮದುವೆ ಮಾಡುವುದು, ಗೃಹಿಣಿ ಇಲ್ಲವೆ ವೇಶ್ಯಾಗಮನ, ಅಪ್ರಾಕೃತ ರೂಪದಿಂದ ಕಾಮ ಕ್ರೀಡೆಯನ್ನು ಮಾಡುವುದು, ಕಾಮದ ತೀವ್ರ ಅಭಿಲಾಷೆಯನ್ನು ಇಡುವುದು, ಇವು ಐದು ಈ ವ್ರತದ ಅತಿಚಾರಗಳಾಗಿವೆ. ಶೃಂಗಾರಾತ್ಮಕ ಕಥೆ ಹಾಗೂ ಸುದ್ದಿಗಳನ್ನು ಕೇಳುವುದು ಸ್ತ್ರೀ-ಪುರುಷರ ಮನೋಹರ ಅಂಗಗಳ ನಿರೀಕ್ಷಣ, ಮೊದಲು ಮಾಡಿದ ಕಾಮ-ಕ್ರೀಡೆಯ ಸ್ಮರಣ, ಕಾಮ-ಪೋಷಕ ರಸ ಔಷಧ ಮೊದಲಾದವುಗಳ ಸೇವನ ಹಾಗೂ ಶರೀರ-ಶೃಂಗಾರ, ಈ ಐದೂ ಪ್ರವೃತ್ತಿಗಳನ್ನೂ ಪರಿತ್ಯಜಿಸುವುದು, ಈ ವ್ರತವನ್ನು ದೃಢಗೊಳಿಸುವ ಐದು ಭಾವನೆಗಳೆನಿಸುತ್ತವೆ. ಈ ಪ್ರಕಾರ ಈ ವ್ರತದಿಂದ ವ್ಯಕ್ತಿಯ ಕಾಮವಾಸನೆಯನ್ನು ಮರ್ಯಾದಿತಗೊಳಿಸಲಾಗಿದೆ. ಅದರಂತೆ ಸಮಾಜದಲ್ಲಿ ಅದಕ್ಕೆ ಸಂಬಂಧಿಸಿದ ದೋಷಗಳನ್ನು ಪರಿಹರಿಸುವ ಪ್ರಯತ್ನವನ್ನೂ ಮಾಡಲಾಗಿದೆ.

### ಅಪರಿಗ್ರಹಾಣುವ್ರತ ಮತ್ತು ಅದರ ಅತಿಚಾರ :—

ಪಶು, ಪರಿವಾರ ಜನ ಮೊದಲಾದ ಸಜೀವ, ಅದರಂತೆ ಮನೆ–ಹೊಲ, ಧನ–ಧಾನ್ಯ ಮೊದಲಾದ ನಿರ್ಜೀವ ವಸ್ತುಗಳಲ್ಲಿ ಮಮತ್ವ ಬುದ್ಧಿಯನ್ನು ಇಡುವುದು ಪರಿಗ್ರಹವೆನಿಸುತ್ತದೆ ಈ ಪರಿಗ್ರಹ ರೂಪ ಲೋಭಕ್ಕೆ ಅಳತೆಯೇ ಇಲ್ಲ. ಇದೇ ಲೋಭವು ಕಾರಣವಾಗಿ ಸಮಾಜದಲ್ಲಿ ಬಹು ಆರ್ಥಿಕ ವಿಷಮತೆಗಳೂ ವೈರ–ವಿರೋಧ ಮತ್ತು ಸಂಘರ್ಷಗಳು ಉತ್ಪನ್ನವಾಗುತ್ತವೆ. ಅದಕ್ಕಾಗಿ ಈ ವೃತ್ತಿಯ ನಿವಾರಣ ಹಾಗೂ ನಿಯಂತ್ರಣಗಳ ವಿಷಯದಲ್ಲಿ ತುಂಬ ಲಕ್ಷ್ಯವನ್ನೂ ಪೂರೈಸಲಾಗಿದೆ. ರಾಜ್ಯ–ನಿಯಮಗಳಿಂದ ಪರಿಗ್ರಹ ವೃತ್ತಿಯನ್ನೂ ಸೀಮಿತಗೊಳಿಸುವುದು ಸರ್ವಥಾ ಅಸಫಲವಾಗುತ್ತದೆ. ಯಾಕಂದರೆ ಅದರಿಂದ ಜನತೆಯ ಮನೋವೃತ್ತಿಯಂತೂ ಶುದ್ಧವಾಗುವುದಿಲ್ಲ ಅದಕ್ಕಾಗಿ ಬಾಹ್ಯ ನಿಯಮನದಿಂದ ಅವನ ಮಾನಸಿಕ ವೃತ್ತಿಯು ಛಲ–ಕಪಟ–ಅನಾಚಾರಗಳ ಕಡೆಗೆ ಸಾಗುತ್ತದೆ ಅಂತಲೇ ಧರ್ಮದಲ್ಲಿ ಪರಿಗ್ರಹ ವೃತ್ತಿಯನ್ನು ಮನುಷ್ಯನ ಆಭ್ಯಾಂತರ ಚೇತನೆಯಿಂದ ನಿಯಂತ್ರಣಗೊಳಿಸಲು ಪ್ರಯತ್ನಮಾಡಲಾಗಿದೆ ಮಹಾವ್ರತೀ ಮುನಿಗಳಿಗಂತೂ ಎಳ್ಳಷ್ಟೂ ಪರಿಗ್ರಹ ಇಟ್ಟುಕೊಳ್ಳುವದನ್ನು ನಿಷೇಧಿಸಲಾಗಿದೆ. ಆದರೆ ಗೃಹಸ್ಥನಿಗೆ ಕುಟುಂಬ–ಪರಿಪಾಲನಾದಿ ಕರ್ತವ್ಯಗಳ ವಿಚಾರಮಾಡಿ, ಅವನಿಗೆ ಸ್ವತಃ ತನಗಾಗಿ ಪರಿಗ್ರಹದ ಸೀಮೆಯನ್ನು ನಿರ್ಧರಿಸಿಕೊಳ್ಳುವ ಕಡೆಗೆ ಪ್ರಚೋದಿಸಲಾಗಿದೆ. ಈ ಸೀಮೆಯನ್ನು ನಿರ್ಧರಿಸುವುದರಿಂದ ಹೊರಗಿನ ಧನ–ಧಾನ್ಯಗಳ ಸಂಚಯವನ್ನಂತೂ ಅವನು ಮಾಡಲಾರನು. ಆದರೆ ಅದು ಅನಾಯಾಸವಾಗಿ ಪರಿಮಿತ ಮರ್ಯಾದೆಗಿಂತ ಹೆಚ್ಚಾಗಿ ಕೂಡ ಬೀಳುತ್ತ ಇದ್ದರೆ ಆ ಹೆಚ್ಚಿನ ಸಂಪತ್ತಿಯನ್ನು ಅವನು ಔಷಧ,

ನಿವೃತ್ತಗೊಳಿಸಿ, ಶುದ್ಧ ಧ್ಯಾನ ಅಥವಾ ಧರ್ಮ-ಚಿಂತನದಲ್ಲಿ ತೊಡಗಿಸುವ ಆದೇಶ ವನ್ನೀಯಲಾಗಿದೆ. ಇದಕ್ಕೇನೇ ವ್ಯವಹಾರದಲ್ಲಿ ಜೈನರು ಸಂಧ್ಯಾ ಎಂದು ಹೇಳು ತ್ತಾರೆ. ತಿನ್ನುಣ್ಣುವುದು ಮತ್ತು ಮನೆ ವ್ಯಾಪಾರಗಳನ್ನು ತ್ಯಜಿಸಿ, ದೇವ-ವಂದನೆ ಪೂಜನೆ ಹಾಗೆಯೇ ಜಪ ಮತ್ತು ಶಾಸ್ತ್ರ-ಸ್ವಾಧ್ಯಾಯ ಮೊದಲಾದ ಧಾರ್ಮಿಕ ಕ್ರಿಯೆಗಳಲ್ಲಿಯೇ ದಿನವನ್ನು ಕಳೆಯುವುದು ಪ್ರೋಷಧೋಪವಾಸ ಎನಿಸುತ್ತದೆ. ಇದನ್ನು ಗೃಹಸ್ಥನು ತನ್ನ ಶಕ್ತ್ಯಾನುಸಾರ ಪ್ರತಿಯೊಂದು ಪಕ್ಷದ ಅಷ್ಟಮಿ-ಚತು ರ್ದಶಿ ತಿಥಿಗಳಲ್ಲಿ ನಡೆಯಿಸಬೇಕು. ಇದರಿಂದ ಅವನಿಗೆ ಹಸಿವು ನೀರಡಿಕೆಗಳ ವೇದ ನೆಯ ಮೇಲೆ ವಿಜಯವು ಲಭಿಸುತ್ತದೆ. ಪ್ರತಿದಿನದ ಆಹಾರದಲ್ಲಿ ವಿಶೇಷ ಪ್ರಕಾರದ ಕಾರ-ಸವಿ ರಸಗಳನ್ನೂ ಫಲ-ಅನ್ನಾದಿ ವಸ್ತುಗಳನ್ನೂ ಹಾಗೆಯೇ ವಸ್ತ್ರಭೂಷಣ ಶಯನಾಸನ ಮತ್ತು ವಾಹನಾದಿಗಳ ಉಪಯೋಗವನ್ನು ತ್ಯಾಗ ಮಾಡುವುದು; ಅಲ್ಲದೆ ಅವುಗಳಿಗೆ ಮರ್ಯಾದೆಯನ್ನು ಹಾಕಿಕೊಳ್ಳುವುದು ಭೋಗೋಪಭೋಗ ಪರಿಮಾಣ ವ್ರತವಾಗಿದೆ. ತಮ್ಮ ಮನೆಗೆ ಬಂದ ಮುನಿ ಮೊದಲಾದ ಸಾಧು ಜನ ರಿಗೆ ಸತ್ಕಾರ ಪೂರ್ವಕ ಆಹಾರ ಔಷಧಾದಿ ದಾನವೀಯುವುದು ಅತಿಥಿಸಂವಿಭಾಗ ವ್ರತವಾಗಿದೆ. ಇವು ನಾಲ್ಕೂ ಶಿಕ್ಷಾವ್ರತವೆನಿಸುತ್ತವೆ. ಯಾಕಂದರೆ ಇವುಗಳಿಂದ ಗೃಹಸ್ಥನಿಗೆ ಧಾರ್ಮಿಕ ಜೀವನದ ಶಿಕ್ಷಣ ಮತ್ತು ಅಭ್ಯಾಸಗಳು ಆಗುತ್ತವೆ. ಸಾಮಾನ್ಯ ರೂಪದಿಂದ ಈ ಏಳು ವ್ರತಗಳನ್ನು ಸಪ್ತಶೀಲ ಅಥವಾ ಸಪ್ತ ಶಿಕ್ಷಾಪದ ಗಳೆಂದೂ ಹೇಳಲಾಗಿದೆ. ಈ ಸಮಸ್ತ ವ್ರತಗಳಿಂದ ಜೀವನದ ಪರಿಶೋಧನವನ್ನು ಮಾಡಿಕೊಂಡು, ಗೃಹಸ್ಥನು ಮರಣವನ್ನು ಧಾರ್ಮಿಕ ರೀತಿಯಿಂದ ಹೊಂದುವುದಕ್ಕೆ ಶಿಕ್ಷಣ ಕೊಡಲಾಗಿದೆ.

**ಸಲ್ಲೇಖನಾ :—**

ಮಹಾನ್ ಸಂಕಟ, ದುರ್ಭಿಕ್ಷ, ಅಸಾಧ್ಯ ರೋಗ ಮತ್ತು ವೃದ್ಧತ್ವ ಈ ಅವಸ್ಥೆ ಯಲ್ಲಿ ಸಾಧಕನಿಗೆ ಯಾವಾಗ ತಾನು ಈ ವಿಪತ್ತಿನಿಂದ ಉಳಿಯುವುದು ಸಾಧ್ಯವಿಲ್ಲ ವೆಂದು ತೋರುತ್ತದೆಯೋ, ಆಗ ಅವನು ಕಷ್ಟ-ಸಂಕಟಗಳಲ್ಲಿ ಸಿಕ್ಕು ಒದ್ದಾಡಿ ವ್ಯಾಕುಲತೆಯಿಂದ ಸಾಯುವದಕ್ಕಿಂತ ಕ್ರಮದಿಂದ ತನ್ನ ಆಹಾರ-ಪಾನಾದಿಗಳನ್ನು ಒಂದು ವಿಧಿಗನುಸರಿಸಿ ಕಡಿಮೆ ಮಾಡಿ ಮರಣವನ್ನು ಹೊಂದುವುದು ಶ್ರೇಯಸ್ಕರ ವಾಗಿದೆ. ಇದರಿಂದ ಅವನ ಮನಸ್ಸಿನಲ್ಲಿ ಕ್ಲೇಶ ಮತ್ತು ವ್ಯಾಕುಲತೆಗಳು ಉತ್ಪನ್ನ ವಾಗಲಾರವು. ಅವನು ಶಾಂತಭಾವದಿಂದ ತನ್ನ ಶರೀರವನ್ನು ತ್ಯಜಿಸಬೇಕು. ಅದು ಸಿರಿವಂತನೊಬ್ಬನು ತನ್ನ ಮನೆಯು ಸುಖದ ಸಾಧನವೆಂದು ತಿಳಿದಿದ್ದರೂ ಅದಕ್ಕೆ ಬೆಂಕಿ ಹತ್ತಿದಾಗ ಸ್ವತಃ ಅದರೊಳಗಿಂದ ಸುರಕ್ಷಿತ ಹೊರಗೆ ಬರುವುದೇ ತನ್ನ ಕಲ್ಯಾಣ ವೆಂದು ತಿಳಿಯುವಂತೆ ಇರಬೇಕು. ಇದಕ್ಕೇನೇ ಸಲ್ಲೇಖನಾ ಅಥವಾ ಸಮಾಧಿಮರಣ ಎಂದು ಹೇಳಲಾಗಿದೆ. ಇದನ್ನು ಆತ್ಮಘಾತವೆಂದು ತಿಳಿಯಕೂಡದು. ಯಾಕಂದರೆ

ಆತ್ಮಘಾತವು ತೀವ್ರ ರಾಗ-ದ್ವೇಷಪ್ರವೃತ್ತಿಯ ಪರಿಣಾಮವಾಗಿದೆ. ಅದು ಶಸ್ತ್ರ ಇಲ್ಲವೆ ವಿಷ ಪ್ರಯೋಗ ಮೊದಲಾದ ಘಾತಕ ಕ್ರಿಯೆಗಳಿಂದ ನಡೆಯುತ್ತದೆ. ಸಲ್ಲೇಖನದಲ್ಲಿ ಇವುಗಳ ಸರ್ವಥಾ ಅಭಾವವಿದೆ. ಈ ಪ್ರಕಾರ ಇದು ಒಂದು ಯೋಜನೆಗೆ ಅನುಸರಿಸಿ ಶಾಂತಿಪೂರ್ವಕ ಮರಣವನ್ನು ಹೊಂದುವುದಾಗಿದೆ. ಇದೊಂದು ಜೀವನಕ್ಕೆ ಸಂಬಂಧಿಸಿದ ಸುಯೋಜನೆಯ ಅಂಗವಾಗಿದೆ.

### ಶ್ರಾವಕರ ಹನ್ನೊಂದು ಪ್ರತಿಮೆಗಳು :—

ಮೇಲೆ ಹೇಳಿದ ಗೃಹಸ್ಥ ಧರ್ಮದ ವ್ರತಗಳನ್ನು ಲಕ್ಷ್ಯಗೊಟ್ಟು ನಿರೀಕ್ಷಿಸಿದಲ್ಲಿ ಒಂದು ಸಂಗತಿಯು ಸ್ಪಷ್ಟವಾಗುತ್ತದೆ. ಆ ಧರ್ಮವನ್ನು ಎಲ್ಲ ವ್ಯಕ್ತಿಗಳು, ಎಲ್ಲ ಕಾಲದಲ್ಲಿ ಪೂರ್ಣವಾಗಿ ಪಾಲನ ಮಾಡುವ ಸಂಭವವಿಲ್ಲ. ಅದಕ್ಕಾಗಿ ಪರಿಸ್ಥಿತಿ, ಅನುಕೂಲತೆ ಹಾಗೂ ವ್ಯಕ್ತಿಯ ಶಾರೀರಿಕ ಮತ್ತು ಮಾನಸಿಕ ವೃತ್ತಿಗಳಿಗೆ ಅನುಸರಿಸಿ, ಶ್ರಾವಕ ಧರ್ಮದಲ್ಲಿ ಹನ್ನೊಂದು ನೆಲೆಗಳನ್ನು ರೂಪಿಸಿದ್ದಾರೆ. ಇವುಗಳಿಗೆ ಶ್ರಾವಕರ ಹನ್ನೊಂದು ಪ್ರತಿಮೆಗಳೆಂದು ಹೇಳುವರು. ಗೃಹಸ್ಥನ **ಪ್ರಥಮ** ಪ್ರತಿಮೆಯು ಅವನ **ಸಮ್ಯಗ್‌ದೃಷ್ಟಿಯ** (ದರ್ಶನ) ಪ್ರಾಪ್ತಿಯೊಡನೆಯೇ ಪ್ರಾರಂಭವಾಗುತ್ತದೆ. ಇದರ ವರ್ಣನೆಯನ್ನು ಈ ಮೊದಲೇ ಮಾಡಲಾಗಿದೆ. ಈ ಪ್ರಥಮ ಪತಿಮಾಧಾರಿ ಶ್ರಾವಕನು ಯಾವ ವ್ರತವನ್ನೂ ಸಹ ವಿಧಿವತ್ ಪಾಲಿಸ:ವದಿಲ್ಲ ಅವನು ಚಾಂಡಾಲ ಕರ್ಮಗೈಯುತ್ತಿದ್ದರೂ ಆತ್ಮ ಮತ್ತು ಪರ ಇವುಗಳ ಸತ್ತೆಯನ್ನು ಅರಿತುಕೊಳ್ಳುವುದರಿಂದ ಅವನ ದೃಷ್ಟಿಯು ಶುದ್ಧವೆಂದು ಮನ್ನಿಸಲಾಗಿದೆ. ಅವನ ಪ್ರಭಾವದಿಂದ ಆ ಪಶುಗಳು ನರಕಯೋನಿಯಲ್ಲಿ ಹೋಗುವುದು ತಪ್ಪುತ್ತದೆ. ಬಹಳಷ್ಟು ಪರಿಸ್ಥಿತಿಗೆ ವಶನಾಗಿ ಅವನು ಅಹಿಂಸಾದಿ ವ್ರತಗಳನ್ನು ಪಾಲಿಸಲು ಸಾಧ್ಯವಾಗಿಲ್ಲ. ಆದರೆ ಯಾವಾಗ ಅವನ ದೃಷ್ಟಿಯು ಸುಧಾರಿಸಿತೋ ಆಗ ಅವನು ಭವ್ಯನೆಂದು ಸಿದ್ಧವಾಯಿತು. ಅವನು ಇಂದಿಲ್ಲ ನಾಳೆ ಚಾರಿತ್ರ–ಶುದ್ಧಿಯನ್ನು ಪಡೆದು ಮೋಕ್ಷದ ಅಧಿಕಾರಿಯಾಗದ ಹೊರತಾಗಿ ನಿಲ್ಲುವದಿಲ್ಲ.

ಶ್ರಾವಕನ **ಎರಡನೆಯ** ಪ್ರತಿಮೆಯು ಅವನು ಅಹಿಂಸಾದಿ ಪೂರ್ವೋಕ್ತ ವ್ರತಗಳನ್ನು ವಿಧಿಪೂರ್ವಕ ಗ್ರಹಣ ಮಾಡುವುದರಿಂದ ಪ್ರಾರಂಭವಾಗುತ್ತದೆ. ಅವನು ಕ್ರಮವಾಗಿ ಐದು ಅಣುವ್ರತ ಮತ್ತು ಏಳು ಶಿಕ್ಷಾಪದಗಳನ್ನು ನಿರತಿಚಾರ ಪಾಲನ ಮಾಡುವ ಅಭ್ಯಾಸ ಮಾಡುತ್ತ ಹೋಗುತ್ತಾನೆ. **ಮೂರನೆಯ** ಪ್ರತಿಮೆಯು **ಸಾಮಾಯಿಕವೆಂದಿದೆ.** ಸಾಮಾಯಿಕದ ಅಭ್ಯಾಸವು ಮೇಲೆ ಹೇಳಿದಂತೆ ಶಿಕ್ಷಾವ್ರತಗಳಲ್ಲಿಯೇ ಎರಡನೆಯ ಪ್ರತಿಮೆಯಲ್ಲಿ ಪ್ರಾರಂಭವಾಗಿಬಿಡುತ್ತದೆ. ಆದರೆ ಮೂರನೆಯ ಪ್ರತಿಮೆಯಲ್ಲಿಯೇ ಅವನು ಕ್ರೋಧಾದಿ ಕಷಾಯಗಳ ಮೇಲೆ ವಿಜಯವನ್ನು ಸಂಪಾದಿಸುವಂಥ ಸ್ಥಿತಿಯು ಸಾಮಾಯಿಕದಿಂದ ಉಂಟಾಗುತ್ತದೆ. ಸಾಮಾನ್ಯವಾಗಿ ಸಂಸಾರಿಕ ಉತ್ತೇಜನಗಳಿಂದ ಅವನ ಶಾಂತಿಯು ಭಂಗವಾಗುವುದಿಲ್ಲ. ಹಾಗೆಯೇ ಅವನು

ಗಳಿಂದ ತನ್ನ ತಲೆಗೂದಲುಗಳನ್ನು ತೆಗೆಯಿಸಿಕೊಳ್ಳುತ್ತಾನೆ, ಹಾಗೂ ಪಾತ್ರೆಯಲ್ಲಿ ಊಟ ಮಾಡುತ್ತಾನೆ. ಆದರೆ ಎರಡನೆಯ ಪ್ರಕಾರದ ಉದ್ದಿಷ್ಟ-ತ್ಯಾಗಿಯು ವಸ್ತ್ರದ ಹೆಸರಿನಲ್ಲಿ ಕೇವಲ ಕೋಪಿನವೊಂದನ್ನು ಮಾತ್ರ ಧಾರಣ ಮಾಡಿರುತ್ತಾನೆ. ಸ್ವತಃ ಕೇಶ ಲೋಚ ಮಾಡಿಕೊಳ್ಳುತ್ತಾನೆ ಪಿಂಛಿ-ಕಮಂಡಲುಗಳನ್ನು ಇಟ್ಟುಕೊಳ್ಳುತ್ತಾನೆ. ಊಟವನ್ನು ಕೇವಲ ತನ್ನ ಕೈಯಲ್ಲಿ ತೆಗೆದುಕೊಂಡು ಮಾಡುತ್ತಾನೆ. ತಾಟು-ಬಟ್ಟಲು ಗಳನ್ನು ಸ್ವೀಕರಿಸುವುದಿಲ್ಲ. ಈ ಉದ್ದಿಷ್ಟ-ತ್ಯಾಗ ಪ್ರತಿಮೆಯ ಸಾರ್ಥಕ ಲಕ್ಷಣವು ಶ್ರಾವಕನು ತನಗಾಗಿ ಮಾಡಿದ ಅನ್ನದ ಊಟವನ್ನು ಮಾಡಕೂಡದೆಂಬುದೇ ಆಗಿದೆ. ಈಗ ಅವನು ಭಿಕ್ಷಾವೃತ್ತಿಯನ್ನು ಸ್ವೀಕಾರ ಮಾಡಿರುತ್ತಾನೆ.

ಈ ಪ್ರತಿಮೆಗಳಿಂದ ಒಂದು ಮಾತು ಕಂಡುಬರುತ್ತದೆ. ಯಾವ ವ್ರತಗಳ ಸಮಾವೇಶವು ಹನ್ನೆರಡು ವ್ರತಗಳಲ್ಲಿ ಆಗಿರುತ್ತದೆಯೋ , ಯಾವ ವ್ರತಗಳ ಪಾಲನ ವಿಧಾನವು ಎರಡನೆಯ ಪ್ರತಿಮೆಯಲ್ಲಿಯೇ ಪ್ರಾರಂಭವಾಗಿರುತ್ತದೆಯೋ , ಅವೇ ಉಳಿದ ಪ್ರತಿಮೆಗಳಲ್ಲಿಯೂ ಪುನರಾವೃತ್ತಿಯಾಗಿರುತ್ತವೆ ಆದರೆ ಅದರಲ್ಲಿ ಭೇದ ವಿಷ್ಟೆ : ಯಾವ ಯಾವ ವ್ರತಗಳ ವಿಧಾನವನ್ನು ಯಾವ ಯಾವ ಪ್ರತಿಮೆಯಲ್ಲಿ ಮಾಡಲಾಗಿದೆಯೋ ಅದರಲ್ಲಿಯೇ ಅದು ಪರಿಪೂರ್ಣತೆಯನ್ನು ಹೊಂದುತ್ತದೆ. ಅದರ ಅಭ್ಯಾಸವಾಗಲೆಂದು ತೀರ ಕೆಳಗಿನ ಪ್ರತಿಮೆಯಲ್ಲಿಯೇ ಅದನ್ನು ಸ್ವೀಕರಿಸಲಾಗು ತ್ತದೆ. ವ್ಯವಹಾರದಲ್ಲಿ ಮೊದಲನೆಯ ಪ್ರತಿಮೆಯಿಂದಲೇ ರಾತ್ರಿ-ಭೋಜನ ತ್ಯಾಗ ವನ್ನು ಒತ್ತಿ ಹೇಳಲಾಗಿದೆ ಆದರ ಪ್ರತಿಮಾನುಸಾರ ವಿಧಾನವು ಆರನೆಯ ಹಂತ ದಲ್ಲಿ ಬರುತ್ತದೆ ಈ ತ್ಯಾಗವನ್ನು ಗುರುಜನರ ಸಮ್ಮುಖದಲ್ಲಿ ಪ್ರತಿಜ್ಞೆಯನ್ನು ತೆಗೆದುಕೊಂಡು ಇದೇ ಪ್ರತಿಮೆಯಲ್ಲಿ ಸ್ವೀಕರಿಸುತ್ತಾನೆ ಆಮೇಲೆ ಈ ವ್ರತದ ಉಲ್ಲಂಘನ ಮಾಡುವುದು ಬಹು ದೊಡ್ಡ ತಪ್ಪು ಎಂದು ತಿಳಿಯಲಾಗುತ್ತದೆ ಈ ವ್ಯವಸ್ಥೆಯನ್ನು ಒಂದು ಉದಾಹರಣೆಯಿಂದ ತಿಳಿಸಿಕೊಡಬಹುದಾಗಿದೆ ಮೊದಲನೆಯ ವರ್ಗದಲ್ಲಿ ಕಲಿ ಯುವಂಥ ವಿಧ್ಯಾರ್ಥಿಗೆ ತಕ್ಕ ಒಂದು ಪಠ್ಯ-ಪುಸ್ತಕವನ್ನು ನಿಯಮಿಸಿರುತ್ತದೆ, ಆದರ ಯಥೋಚಿತ ಜ್ಞಾನವಾಗದ ಹೊರತಾಗಿ ಎರಡನೆಯ ವರ್ಗಕ್ಕೆ ಹೋಗುವುದು ಯೋಗ್ಯವೆಂದು ತೋರುವುದಿಲ್ಲ. ಆದರೆ ಒಂದನೆಯ ವರ್ಗದಲ್ಲಿ ಇದ್ದಾಗಲೂ ಎರಡ ನೆಯ ವರ್ಗದ ಪುಸ್ತಕ ಓದುವುದಕ್ಕಾಗಿ ಯಾವ ನಿರ್ಬಂಧವೂ ಇಲ್ಲ; ಅದು ವರ್ಜ್ಯ ವೇನಲ್ಲ. ಆದರೆ ಒಂದು ವಿಧದಲ್ಲಿ ಅಪೇಕ್ಷಣೀಯವೇ ಆಗಿದೆ. ಅಂದರೂ ಅದು ಪ್ರಥಮ ವರ್ಗದಲ್ಲಿ ಅವನ ಪೂರ್ಣ ಜ್ಞಾನದ ಪರೀಕ್ಷೆಯಲ್ಲಿ ವಿಷಯವೂ ಆಗಲಾರದು. ಇದೇ ಪ್ರಕಾರ ವ್ರತಗಳ ಸಾಧನೆಯು ಯಥಾಶಕ್ತಿ ಮೊದಲನೆಯ ಅಥವಾ ಎರಡನೆಯ ಪ್ರತಿಮೆಯಿಂದಲೇ ಪ್ರಾರಂಭವಾಗಿ ಬಿಡುತ್ತದೆ. ಆದರೆ ಅವುಗಳನ್ನು ವಿಧಿವತ್ ಪೂರ್ಣ ಪರಿಪಾಲನ ಮಾಡುವುದನ್ನು ಉತ್ತರೋತ್ತರ ಮುಂದಿನ ಪ್ರತಿಮೆಗಳಲ್ಲಿ ವಿಧಿ ಸಲಾಗಿದೆ. ಈ ವ್ಯವಸ್ಥೆಯು ಜೈನ-ಅನೇಕಾಂತ ದೃಷ್ಟಿಗೆ ಅನುಕೂಲವಾಗಿದೆ.

**ಮುನಿಧರ್ಮ :—**

ಮೇಲೆ ಹೇಳಿದ ಶ್ರಾವಕನ ಸರ್ವೋತ್ಕೃಷ್ಟ ಹನ್ನೊಂದನೆಯ ಪ್ರತಿಮೆಯ ತರುವಾಯ ಮುನಿಧರ್ಮವು ಪ್ರಾರಂಭವಾಗುತ್ತದೆ. ಇದರಲ್ಲಿ ಮೊಟ್ಟಮೊದಲು ಪರಿಗ್ರಹವನ್ನು ಪೂರ್ಣರೂಪದಿಂದ ತ್ಯಜಿಸಿ ನಗ್ನವೃತ್ತಿಯನ್ನು ಸ್ವೀಕರಿಸಲಾಗುತ್ತದೆ. ಅಹಿಂಸಾದಿ ಐದು ವ್ರತಗಳನ್ನು ಮಹಾವ್ರತ ರೂಪದಿಂದ ಪಾಲಿಸುವ ಪ್ರತಿಜ್ಞೆಯನ್ನು ತಕ್ಕೊಳ್ಳಲಾಗುತ್ತದೆ. ಮುನಿಗಳು ಅಡ್ಡಾಡುವುದರಲ್ಲಿ ವಿಶೇಷ ಸಾವಧಾನತೆಯನ್ನು ವಹಿಸಬೇಕಾಗುತ್ತದೆ. ತಮ್ಮ ಮುಂದೆ ಐದು ಮೊಳ ನೆಲವನ್ನು ನಿರೀಕ್ಷಿಸುತ್ತ ನಡೆಯಬೇಕು. ಅಂಧಕಾರದಲ್ಲಿಯಂತೂ ನಡೆಯುವಂತಿಲ್ಲ. ಇದರ ಹೆಸರೇ **ಈರ್ಯಾ ಸಮಿತಿಯು.** ನಿಂದೆ, ಪಿಶುನತನ, ಹಾಸ್ಯ, ಕಟು ಮೊದಲಾದ ದೂಷಿತ ಭಾಷೆಯನ್ನು ಪರಿತ್ಯಜಿಸಿ, ಮುನಿಯು ಯಾವಾಗಲೂ ಸಂಯತ, ತೂಕದ, ಸತ್ಯ, ಪ್ರಿಯ ಮತ್ತು ಕಲ್ಯಾಣಕಾರಿಯಾದ ವಾಣಿಯನ್ನೇ ಪ್ರಯೋಗಿಸಲಿಕ್ಕೆ ಬೇಕು. ಇದು ಮುನಿಗಳ **ಭಾಷಾಸಮಿತಿ**ಯಾಗಿದೆ. ಭಿಕ್ಷೆಯಿಂದ ಕೇವಲ ಶುದ್ಧ ನಿರಾಮಿಷ ಆಹಾರವನ್ನು ನಿರ್ಲೋಭ ಭಾವದಿಂದ ಗ್ರಹಣ ಮಾಡುವುದು ಮುನಿಯ **ಏಷಣಾ ಸಮಿತಿ**ಯಾಗಿದೆ. ಕೆಲವೊಂದು ವಸ್ತುಗಳನ್ನು ನಿರ್ಗ್ರಂಥ ಮುನಿಯು ತನ್ನ ಹತ್ತರ ಇಟ್ಟುಕೊಳ್ಳಬಹುದು. ಅವು ಜ್ಞಾನ ಮತ್ತು ಚಾರಿತ್ರ್ಯದ ಪರಿಪಾಲನ-ನಿಮಿತ್ತವೇ ಆಗಿರಬೇಕು. ಜ್ಞಾನಾರ್ಜನೆಗಾಗಿ ಶಾಸ್ತ್ರ, ಜೀವ ರಕ್ಷಾ-ನಿಮಿತ್ತ ಪಿಚ್ಛಿಕಾ ಹಾಗೂ ಶೌಚಕ್ಕೆಂದು ಕಮಂಡಲು ಇರಬಹುದು. ಇವುಗಳನ್ನು ಕ್ರಮವಾಗಿ ಜ್ಞಾನೋಪಧಿ, ಸಂಯಮೋಪಧಿ ಮತ್ತು ಶೌಚೋಪಧಿ ಎಂದು ಹೇಳುತ್ತಾರೆ. ಇವುಗಳನ್ನು ಇಡುವುದರಲ್ಲಿಯೂ ತಕ್ಕೊಳ್ಳುವುದರಲ್ಲಿಯೂ ಜೀವರಕ್ಷಣೆಯಾಗಲೆಂದು ಸಾವಧಾನತೆಯನ್ನು ವಹಿಸಲಿಕ್ಕೆ ಬೇಕು. ಇದಕ್ಕೇನೇ ಆದಾನ-ನಿಕ್ಷೇಪ ಸಮಿತಿ ಎನ್ನುವರು. ಮಲ-ಮೂತ್ರಾದಿಗಳ ತ್ಯಾಗವನ್ನು ಕೆಲವೊಂದು ಅಂತರದ ಮೇಲೆ, ಏಕಾಂತದಲ್ಲಿ ಒಣನೆಲದ ಮೇಲೆ, ಜೀವ-ಜಂತುಗಳು ಇಲ್ಲದಂಥ ಸ್ಥಳದಲ್ಲಿ ಮಾಡಬೇಕು. ಆದರಿಂದ ಯಾರಿಗೂ ಯಾವ ಆಪತ್ತಿಯೂ ಉಂಟಾಗಬಾರದು. ಇದು ಮುನಿಯ **ಪ್ರತಿಸ್ಥಾಪನ ಸಮಿತಿ**ಯಾಗಿದೆ.

ಚಕ್ಷುವೇ ಮೊದಲಾದ ಐದು ಇಂದ್ರಿಯಗಳನ್ನು ನಿಯಂತ್ರಿಸುವುದು, ಅವು ತಮ್ಮ-ತಮ್ಮ ವಿಷಯಗಳಲ್ಲಿ ಲೋಲುಪತೆಯಿಂದ ಆಕರ್ಷಿತಗಾಗದಂತೆ ನೋಡಿಕೊಳ್ಳುವುದು, ಇವು ಮುನಿಗಳ ಐದು ಇಂದ್ರಿಯನಿಗ್ರಹ ಎನಿಸುತ್ತವೆ. ಜೀವಮಾತ್ರರಲ್ಲಿ, ಮಿತ್ರ-ಶತ್ರುಗಳಲ್ಲಿ, ದುಃಖ-ಸುಖಗಳಲ್ಲಿ, ಲಾಭಾ-ಲಾಭಗಳಲ್ಲಿ ರೋಷ-ತೋಷಭಾವಗಳನ್ನು ಪರಿತ್ಯಜಿಸಿ, **ಸಮತಾಭಾವವನ್ನು** ಇಟ್ಟುಕೊಳ್ಳುವುದು. ತೀರ್ಥಂಕರರ ಗುಣಕೀರ್ತನರೂಪ **ಸ್ತುತಿ**ಯನ್ನು ಮಾಡುವುದು. ಅರ್ಹಂತ ಮತ್ತು ಸಿದ್ಧರ ಪ್ರತಿಮೆಗಳನ್ನೂ ಆಚಾರ್ಯಾದಿಗಳನ್ನೂ ಮನ-ವಚನ-ಕಾಯಗಳಿಂದ ಪ್ರಣಾಮ ಮಾಡುವುದು **ವಂದನಾ** ಎನಿಸುವುದು. ನಿಯಮಿತ ರೂಪದಿಂದ ಆತ್ಮ-ಶೋಧನ-

ನಿಮಿತ್ತ ತನ್ನ ಅಪರಾಧಗಳನ್ನು ನಿಂದಾ-ಗರ್ಹಾರೂಪ ಪ್ರತಿಕ್ರಮಣ ಮಾಡುವುದು. ಸಮಸ್ತ ಅಯೋಗ್ಯ ಆಚರಣೆಗಳನ್ನು ಪರಿವರ್ಜಿಸುವುದು, ಅರ್ಥಾತ್ ಅನುಚಿತ ಹೆಸರನ್ನು ಉಚ್ಚರಿಸದಿರುವುದು, ಅನುಚಿತ ಸ್ಥಾಪನೆಯನ್ನು ಮಾಡದಿರುವುದು, ಅನುಚಿತ ದ್ರವ್ಯ, ಕ್ಷೇತ್ರ, ಕಾಲ, ಭಾವಗಳ ಪರಿತ್ಯಾಗ ರೂಪ ಪ್ರತ್ಯಾಖ್ಯಾನಗೈಯುವುದು. ಹಾಗೆಯೇ ತನ್ನ ಶರೀರದ ಮೇಲಿನ ಮಮತ್ವವನ್ನೂ ಸಹ ಬಿಡುವುದ ವಿಸರ್ಗಭಾವವಾಗಿದೆ. ಇವು ಆರು ಮುನಿಗಳ ಆವಶ್ಯಕ ಕ್ರಿಯೆಗಳಾಗಿವೆ. ಕಾಲ-ಕಾಲಕ್ಕೆ ತಮ್ಮ ಕೈಗಳಿಂದ ಕೇಶಲೋಚ, ಅಚೇಲಕವೃತ್ತಿ, ಸ್ನಾನ-ತ್ಯಾಗ, ದಂತ-ಧಾವನ-ತ್ಯಾಗ, ಕ್ಷಿತಿಶಯನ, ಸ್ಥಿತಿಭೋಜನ ಅರ್ಥಾತ್ ಎದ್ದು ನಿಂತು ಆಹಾರ ಸ್ವೀಕರಿಸುವುದು, ಮಧ್ಯಾಹ್ನ ಕಾಲದಲ್ಲಿ ಕೇವಲ ಒಮ್ಮೆ ಮಾತ್ರ ಭೋಜನ ಮಾಡುವುದು ಇವು ಮುನಿಯ ಅನ್ಯ ಏಳು ವಿಶೇಷ ಸಾಧನೆಗಳಾಗಿವೆ. ಈ ಪ್ರಕಾರ ಮುನಿಗಳ ಒಟ್ಟು ಇಪ್ಪತ್ತೆಂಟು ಮೂಲಗುಣಗಳನ್ನು ನಿಯತಗೊಳಿಸಲಾಗಿದೆ.

**ಇಪ್ಪತ್ತೆರಡು ಪರೀಷಹಗಳು :—**

ಮೇಲಿನ ನಿಯಮಗಳಿಂದ ಒಂದು ಸಂಗತಿಯು ಸ್ಪಷ್ಟವಾಗುತ್ತದೆ. ಸಾಧುಗಳ ಮುಖ್ಯ ಸಾಧನೆಯು ಸಮತ್ವವಾಗಿದೆ ಇದನ್ನು ಭಗವದ್ಗೀತೆಯಲ್ಲಿಯೂ ಯೋಗದ ಮುಖ್ಯ ಲಕ್ಷಣವೆಂದು ಹೇಳಿದೆ. (**ಸಮತ್ವಂ ಯೋಗ ಉಚ್ಯತೆ**) ಈ ಸಮತಾಭಾವವನ್ನು ಭಗ್ನಗೊಳಿಸುವಂಥ ಅನೇಕ ಪರಿಸ್ಥಿತಿಗಳ ಕೂಡ ಮುನಿಗಳು ಹೋರಾಡಬೇಕಾಗುತ್ತದೆ. ಅವೇ ಸ್ಥಿತಿಗಳು ವ ಎನಿಯ ಸಮತ್ವವನ್ನು ಪರೀಕ್ಷಿಸುವ ವಿಶೇಷ ಸ್ಥಲಗಳಾಗಿವೆ. ಇಂಥ ಪರಿಸ್ಥಿತಿಗಳಂತೂ ಅಗಣಿತವಾಗಿವೆ ಆದರೆ ಅವುಗಳೊಳಗಿನ ಇಪ್ಪತ್ತೆರಡನ್ನು ವಿಶೇಷರೂಪದಿಂದ ಇಲ್ಲಿ ಉಲ್ಲೇಖಿಸಲಾಗಿದೆ ಸನ್ಮಾರ್ಗದಿಂದ ಚ್ಯುತಗೊಳ್ಳದಂತೆ ಅವುಗಳಿಗೆ ಸಂಬಂಧಿಸಿದ ಕ್ಲೇಶಗಳ ಮೇಲೆ ವಿಜಯ ಸಂಪಾದಿಸುವ ಆದೇಶವನ್ನು ಕೊಡಲಾಗಿದೆ. ಸಾಧುವು ತನ್ನ ಹತ್ತಿರ ತಿನ್ನುಣ್ಣುವ ಸಾಮಾನುಗಳನ್ನು ಇಟ್ಟುಕೊಳ್ಳುವುದಿಲ್ಲ. ಅಲ್ಲದೆ ಸ್ವತಃ ಬೇಯಿಸಿ ತಿನ್ನುವುದಿಲ್ಲ. ಆದಕ್ಕಾಗಿ ಅವನು ಭಿಕ್ಷಾವೃತ್ತಿಯನ್ನು ಅವಲಂಬಿಸಿ ಇರಬೇಕಾಗುತ್ತದೆ, ಅದೂ ದಿನಕ್ಕೆ ಒಂದು ನಲ ಮಾತ್ರ. ಅವನಿಗೆ ಕಾಲ-ಕಾಲದಲ್ಲಿ ಒಂದು ಇಲ್ಲವೆ ಅನೇಕ ದಿನಗಳ ವರೆಗೆ ಉಪವಾಸವನ್ನೂ ಸಹ ಮಾಡಬೇಕಾಗುತ್ತದೆ. ಹೀಗಾಗಿ ನಡು-ನಡುವೆ ಅವನನ್ನು ಹಸಿವು ನೀರಡಿಕೆಗಳು ಕಾಡಬಹುದು. ಅದಕ್ಕಾಗಿಯೇ ಕ್ಷುಧಾ (೧) ಮತ್ತು ತೃಷಾ (೨) ಈ ಪರೀಷಹಗಳನ್ನು ಪ್ರಾರಂಭದಲಿಯೇ ಗೆಲ್ಲಲಿಕ್ಕೆ ಬೇಕು ಮೈಮೇಲೆ ಬಟ್ಟೆಗಳು ಇಲ್ಲದೆ ಇರುವುದರಿಂದ ಅವರಿಗೆ ಶೀತ (೩) ಉಷ್ಣ (೪) ಗುಂಗಾಡುಗಳ ಕಾಟ- ಕಡಿತ (೫) ಮತ್ತು ನಗ್ನತೆ (೬) ಯ ಕ್ಲೇಶವಾಗುವುದು ಅನಿವಾರ್ಯವಾಗಿದೆ. ಇವುಗಳನ್ನು ಅವರು ಶಾಂತಿ ಪೂರ್ವಕ ಸಹನ ಮಾಡಲಿಕ್ಕೆ ಬೇಕು. ಏಕಾಂತದಲ್ಲಿ ಇರುವುದು, ಹಸಿವು-ನೀರಡಿಕಾದಿಗಳ ಬಾಧೆಗಳನ್ನು ಸಹಿಸುವುದು, ಅಲ್ಲದೆ ಇಂದ್ರಿಯ ವಿಷಯಗಳ ಅಭಾವ

ದಿಂದ ಅವರಿಗೆ ಒಮ್ಮೊಮ್ಮೆ ಮುನಿ ಅವಸ್ಥೆಯಲ್ಲಿ ಅರುಚಿಯು ಉತ್ಪನ್ನವಾಗುವ ಸಂಭವವೂ ಇದೆ. ಈ ಅರತಿ (೭) ಪರೀಷಹವನ್ನೂ ಸಹ ಅವರು ಗೆಲ್ಲಲಿಕ್ಕೆ ಬೇಕು. ಮುನಿಗಳಿಗೆ ಆಗ-ಈಗ ಮತ್ತು ವಿಶೇಷವಾಗಿ ಭಿಕ್ಷೆಯ ಸಮಯದಲ್ಲಿ ನಗರಗಳಲ್ಲಿಯೂ ಗ್ರಾಮಗಳಲ್ಲಿಯೂ ಪರಿಭ್ರಮಣ ಮಾಡಬೇಕಾಗುತ್ತದೆ, ಗೃಹಸ್ಥರ ಮನೆಗೂ ಹೋಗಬೇಕಾಗುತ್ತದೆ. ಅಂಥ ಸಂದರ್ಭದಲ್ಲಿ ಸುಂದರ ಹಾಗೂ ತರುಣ ಸ್ತ್ರೀಯರೂ ಅವರ ಹಾವ-ಭಾವ-ವಿಲಾಸಗಳೂ ದೃಷ್ಟಿಗೆ ಬೀಳುವುದು ಅನಿವಾರ್ಯವಾಗಿದೆ. ಇದರಿಂದ ಅವರ ಮನಸ್ಸಿನಲ್ಲಿ ಚಂಚಲತೆಯು ಉತ್ಪನ್ನವಾಗುವುದು ಶಕ್ಯವಿದೆ. ಇದನ್ನು ಗೆಲ್ಲುವುದಕ್ಕೆ ಸ್ತ್ರೀ-ಪರೀಷಹ (೮) ಜಯವೆನ್ನುವರು. ಮುನಿಗಳಿಗೆ ಮಳೆಗಾಲ ನಾಲ್ಕು ತಿಂಗಳನ್ನು ಬಿಟ್ಟು, ಉಳಿದ ಕಾಲದಲ್ಲಿ ಒಂದೇ ಸ್ಥಳದಲ್ಲಿ ಹೆಚ್ಚು ದಿನ ನಿಲ್ಲದೆ ದೇಶ ಪರಿಭ್ರಮಣ ಮಾಡುತ್ತ ಇರಬೇಕಾಗುತ್ತದೆ. ಈ ನಿರಂತರ ಪ್ರವಾಸದಿಂದ ಅವರಿಗೆ ಮಾರ್ಗದಲ್ಲಿ ಒದಗುವ ಅನೇಕ ಕಷ್ಟಗಳನ್ನು ಸಹನ ಮಾಡಬೇಕಾಗುತ್ತದೆ. ಇದೇ ಮುನಿಯ ಚರ್ಯಾ (೯) ಪರೀಷಹವಾಗಿದೆ, ವಾಸಿಸುವುದಕ್ಕಾಗಿ ಮುನಿಗಳಿಗಾಗಿ ಸ್ಮಶಾನ, ವನ, ಹಾಳು ಮನೆ, ಪರ್ವತ ಗುಹೆಗಳಾದಿ ಸ್ಥಾನಗಳನ್ನು ವಿಧಿಸಿದ್ದಾರೆ. ಅಂಥಲ್ಲಿ ಅವರಿಗೆ ನಾನಾ ಪ್ರಕಾರದ ಕಷ್ಟಗಳೂ ಸಿಂಹ-ವ್ಯಾಘ್ರಾದಿ ಹಿಂಸ್ರ ಪಶುಗಳಿಂದ ಆಕ್ರಮಣವೂ ಆಗುತ್ತವೆ. ಅವನ್ನೆಲ್ಲ ಸಹಿಸಬೇಕಾಗುವುದು. ಇದೇ ಸಾಧುಗಳ ನಿಷದ್ಯಾ (೧೦) ಪರೀಷಹ ವಿಜಯವಾಗಿದೆ. ಮುನಿಗೆ ತೀರ ಅಲ್ಪ ಕಾಲ ಮಲಗುವುದಕ್ಕೆಂದು ಹುರುಬುರಕ ನೆಲ, ಕಲ್ಲು ಮೊದಲಾದವುಗಳು ಲಭಿಸಿಯಾವು. ಇದರ ಕ್ಲೇಶವನ್ನು ಸಹನ ಮಾಡುವುದು ಶಯ್ಯಾ (೧೧) ಪರೀಷಹ ಜಯವಾಗಿದೆ. ವಿರೋಧೀ ಜನರು ಮುನಿಗಳಿಗೆ ಕೆಟ್ಟ ಮಾತುಗಳನ್ನು ಆಡಬಹುದು. ಇದನ್ನು ಸಹಿಸುವುದು ಆಕ್ರೋಶ ಪರೀಷಹ (೧೨) ಜಯವೆನಿಸುತ್ತದೆ. ಒಮ್ಮೊಮ್ಮೆ ಕೆಲವರು ಇದಕ್ಕೂ ಮುಂದರಿದು ಬಡಿ-ಹೊಡಿ ಮಾಡುವರು. ಇದನ್ನು ಸಹಿಸುವುದಕ್ಕೆ ವಧ (೧೩) ಪರೀಷಹ ಜಯವೆನ್ನುವರು. ಮುನಿಗಳಿಗೆ ತಮ್ಮ ಆಹಾರ. ವಸತಿ, ಔಷಧ ಮೊದಲಾದವುಗಳಿಗೆ ಗೃಹಸ್ಥರ ಹತ್ತಿರ ಯಾಚನೆಯನ್ನು ಸಹ ಮಾಡಬೇಕಾಗುತ್ತದೆ. ಇಂಥ ಸಂದರ್ಭದಲ್ಲಿ ತನ್ನಲ್ಲಿ ದೀನತೆಯ ಭಾವವು ಉಂಟಾಗಕೂಡದು. ಹೀಗೆ ವರ್ತಿಸುವುದಕ್ಕೆ ಯಾಚನಾ (೧೪) ಪರೀಷಹ ಜಯವೆನ್ನುವರು. ಆಗ ಬೇಡಿದ ವಸ್ತುವು ದೊರೆಯದೆ ಇದ್ದರೆ ಸಿಟ್ಟಾಗಕೂಡದು. ಹಾಗೆ ದೊರಯದೆ ಇರುವುದರಿಂದ ತಮ್ಮ ತಪಸ್ಸಿನ ವೃದ್ಧಿಯಲ್ಲಿ ಲಾಭವೇ ಆಯಿತು ; ಹೀಗೆಂದು ಭಾವಿಸಿ ಸಂತೋಷದಲ್ಲಿ ಇರುವುದೇ ಅಲಾಭ ವಿಜಯ (೧೫) ಎನಿಸುತ್ತದೆ. ಶರೀರವು ರೋಗ, ವ್ಯಾಧಿ ಮತ್ತು ಪೀಡೆಗಳಿಗೆ ವಶವಾಗಿರುವಾಗ ಆ ನೋವನ್ನು ಶಾಂತಿಪೂರ್ವಕ ಸಹಿಸುವುದಕ್ಕೆ ರೋಗ ವಿಜಯ (೧೬) ಪರೀಷಹ ಎಂದು ಹೆಸರಿದೆ. ಚರ್ಯಾ, ಶಯ್ಯಾ ಮತ್ತು ನಿಷದ್ಯಾದಿಗಳ ಸಮಯದಲ್ಲಿ ಹುಲ್ಲು, ಮುಳ್ಳುಗಳು ಚುಚ್ಚುವುದರಿಂದ ಕಷ್ಟವು ಒದಗುತ್ತದೆ. ಇದನ್ನು ಸಹನ ಮಾಡುವುದಕ್ಕೆ ತೃಣ ಸ್ಪರ್ಶ (೧೭) ವಿಜಯವೆನ್ನಲಾಗುವುದು. ಸಾಧುಗಳು ತಮ್ಮ ಶರೀರದ ಮೋಹವನ್ನು

ಬಿಡುವುದಕ್ಕಾಗಿ ಸ್ನಾನ ಮಾಡದಿರುವುದು, ಹಲ್ಲು ಮೊದಲಾದ ಅಂಗ ಪ್ರತ್ಯಂಗ ಗಳನ್ನು ಸ್ವಚ್ಛ ಮಾಡದಿರುವುದು, ಶರೀರಕ್ಕೆ ಅನ್ಯ ಇನ್ನಾವುದೇ ಪ್ರಕಾರದ ಸಂಸ್ಕಾರ ವನ್ನು ಮಾಡದಿರುವುದು, ಇವುಗಳಿಂದ ಮಲಿನತೆಯು ಉತ್ಪನ್ನವಾಗುತ್ತದೆ. ಇದರಿಂದ ಹೇಸಿಗೆ ಮತ್ತು ದುಃಖದ ಭಾವಗಳು ಉತ್ಪನ್ನವಾಗದಂತೆ ಇರುವುದಕ್ಕೆ **ಮಲ ಪರೀ ಷಹ ವಿಜಯ** (೧೮) ಎಂದು ಹೇಳಲಾಗುತ್ತದೆ. ಸಾಮಾನ್ಯವಾಗಿ ವ್ಯಕ್ತಿಗೆ ವಿಶೇಷ ಸತ್ಕಾರ-ಪುರಸ್ಕಾರ ದೊರೆಯುವುದರಿಂದ ಹರ್ಷ ಮತ್ತು ದೊರೆಯದೆ ಇರುವುದರಿಂದ ರೋಷ ಹಾಗೂ ಖೇದ ಭಾವಗಳು ಉತ್ಪನ್ನವಾಗುತ್ತವೆ. ಆದರೆ ಮುನಿಗಳು ಈ ಎರಡೂ ಅವಸ್ಥೆಗಳಲ್ಲಿ ಸಿಟ್ಟು ಸಂತಸಗಳ ಭಾವನೆಯಿಂದ ವಿಚಲಿತವಾಗಕೂಡದು. ಇದು ಅವರ **ಸತ್ಕಾರ-ಪುರಸ್ಕಾರ** (೧೯) ವಿಜಯವಾಗಿದೆ. ವಿಶೇಷ ಜ್ಞಾನದ ಮದವೂ ಉತ್ಪನ್ನವಾಗುವುದೂ ಬಹಳ ಸಾಮಾನ್ಯವಾಗಿದೆ. ಸಾಧುವು ಈ ಮದದಿಂದ ಮುಕ್ತ ನಾಗಿರಲಿಕ್ಕೆ ಬೇಕು. ಇದು ಅವನ **ಪ್ರಜ್ಞಾ ವಿಜಯ** (೨೦) ವೆನಿಸುತ್ತದೆ. ಇನ್ನು ಜ್ಞಾನವು ಲಭಿಸದೆ ಇದ್ದಾಗಲೂ ಉದ್ವಿಗ್ನವಾಗಕೂಡದು. ಇದು ಅವನ **ಅಜ್ಞಾನ ವಿಜಯ** (೨೧) ವಾಗಿದೆ. ಬಹುಕಾಲ ತಪಸ್ಸನ್ನು ಆಚರಿಸುತ್ತಿದ್ದರೂ ಕೂಡ ಅವಧಿ ಇಲ್ಲವೆ ಮನಃಪರ್ಯಯ ಜ್ಞಾನಾದಿಗಳು ಪ್ರಾಪ್ತವಾಗುವ ಋದ್ಧಿ-ಸಿದ್ಧಿಗಳು ಉಪ ಲಬ್ಧವಾಗದೆ ಇದ್ದರೆ ಮುನಿಯ ಶ್ರದ್ಧೆಯು ವಿಚಲಿತಗೊಳ್ಳುವ ಸಂಭವವಿರುತ್ತದೆ. ಈ ಎಲ್ಲ ಸಿದ್ಧಿಗಳು ಲಭಿಸುವಂಥವೋ ಅಥವಾ ಇಲ್ಲವೋ, ಕೇವಲ ಜ್ಞಾನಿಗಳಾದ ಋಷಿ, ಮುನಿ, ತೀರ್ಥಂಕರಾದಿಗಳು ಆಗಿರುವರೋ ಇಲ್ಲವೋ, ಈ ಎಲ್ಲ ತಪಸ್ಸು ನಿರರ್ಥ ಕವೇ ಇದೆ, ಹೀಗೆ ಅಶ್ರದ್ಧೆಯು ಉತ್ಪನ್ನವಾಗದಂತೆ ನೋಡಿಕೊಳ್ಳುವುದು **ಅದರ್ಶನ ವಿಜಯ** (೨೨) ಎನಿಸುತ್ತದೆ. ಈ ಇಪ್ಪತ್ತೆರಡು ಪರೀಷಹ-ಜಯಗಳು ಮುನಿಗಳ ವಿಶೇಷ ಸಾಧನಗಳಾಗಿವೆ. ಇವುಗಳಿಂದ ಅವನು ತನ್ನನ್ನು ಪೂರ್ಣ ಇಂದ್ರಿಯ-ವಿಜಯಿ ಮತ್ತು ಯೋಗಿಯನ್ನಾಗಿ ರೂಪಿಸಿಕೊಳ್ಳುತ್ತಾನೆ.

**ದಶ ಧರ್ಮ :—**

ಮೇಲೆ ಹೇಳಿದ ಇಪ್ಪತ್ತೆರಡು ಪರೀಷಹಗಳಲ್ಲಿ ಮನಸ್ಸನ್ನು ಹೊಯ್ದಾಡಿಸಿ, ವಿಚಲಿತಗೊಳಿಸಿ, ರಾಗ, ದ್ವೇಷರೂಪ ದುರ್ಭಾವಗಳಿಂದ ದೂಷಿತಗೊಳಿಸುವಂಥ ಯಾವ ಮಾನಸಿಕ ಅವಸ್ಥೆಗಳು ಇರುವವೋ ಅವುಗಳನ್ನು ಉಪಶಮಗೊಳಿಸಲಿಕ್ಕೆಂದು ದಶ ಧರ್ಮಗಳನ್ನು ಮತ್ತು ಹನ್ನೆರಡು ಅನುಪ್ರೇಕ್ಷೆಗಳನ್ನು (ಭಾವನೆಗಳು) ವಿಧಿಸ ಲಾಗಿದೆ. ಧರ್ಮಗಳ ಮುಖಾಂತರ ಮನಸ್ಸನ್ನು ಕಷಾಯಗಳಿಂದ ಗೆಲ್ಲುವದಕ್ಕೆ ಅದರ ವಿರೋಧೀ ಗುಣಗಳ ಅಭ್ಯಾಸ ಮಾಡಿಸಲಾಗುತ್ತದೆ. ಹಾಗೆಯೇ ಅನುಪ್ರೇಕ್ಷೆ ಗಳಿಂದ ತತ್ತ್ವಚಿಂತನದ ಮೂಲಕ ಸಾಂಸಾರಿಕ ವೃತ್ತಿಯಲ್ಲಿ ಅನಾಸಕ್ತಿಯನ್ನು ಉತ್ಪನ್ನಗೊಳಿಸಿ, ವೈರಾಗ್ಯದ ಸಾಧನೆಯಲ್ಲಿ ವಿಶೇಷ ಪ್ರವೃತ್ತಿಯನ್ನು ಉಂಟು ಮಾಡಲಾಗುತ್ತದೆ. ದಶ ಧರ್ಮಗಳು ಹೀಗಿವೆ :— ಉತ್ತಮ ಕ್ಷಮಾ, ಮಾರ್ದವ,

ಆರ್ಜವ, ಶೌಚ, ಸತ್ಯ, ಸಂಯಮ, ತಪ, ತ್ಯಾಗ, ಆಕಿಂಚನ್ಯ ಮತ್ತು ಬ್ರಹ್ಮಚರ್ಯ. ಸಿಟ್ಟಿಗೆ ತರಿಸುವಂಥ ಬೈಗಳು-ನಿಂದೆ, ಹೊಡೆತ, ಅಪಮಾನ ಮೊದಲಾದ ಪರಿಸ್ಥಿತಿಯಲ್ಲಿಯೂ ಮನಸ್ಸನ್ನು ಕಲುಷಿತವಾಗದಂತೆ ಇರುವುದು ಕ್ಷಮಾ ಧರ್ಮವಾಗಿದೆ. ೧. ಕುಲ, ಜಾತಿ, ರೂಪ, ಜ್ಞಾನ, ತಪ, ವೈಭವ, ಪ್ರಭುತ್ವ ಹಾಗೂ ಶೀಲ ಮೊದಲಾದುವುಗಳ ವಿಷಯದಲ್ಲಿ ಅಭಿಮಾನಪಡುವುದು ಮದವೆನಿಸುತ್ತದೆ. ಈ ಮಾನ ಕಷಾಯವನ್ನು ಗೆದ್ದು ಮನಸ್ಸಿನಲ್ಲಿ ಯಾವಾಗಲೂ ಮೃದುತ್ವ ಭಾವವನ್ನಿಡುವುದು ಮಾರ್ದವ ಧರ್ಮವಾಗಿದೆ. ೨. ಮನದಲ್ಲಿ ಒಂದನ್ನು ವಿಚಾರಿಸುವುದು, ಮಾತಿನಲ್ಲಿ ಇನ್ನೊಂದನ್ನು ಹೇಳುವುದು ಮತ್ತು ಕೃತಿಯಲ್ಲಿ ಬೇರೊಂದನ್ನೇ ಮಾಡುವುದು ಇದು ಕುಟಿಲತೆ ಇಲ್ಲವೆ ಮಾಯಾಚಾರ ಎನಿಸುತ್ತದೆ. ಈ ಮಾಯಾ ಕಷಾಯವನ್ನು ಗೆದ್ದು, ಮನ-ವಚನ-ಕಾಯಗಳ ಕ್ರಿಯೆಯಲ್ಲಿ ಏಕರೂಪತೆಯನ್ನು (ಋಜುತ್ವ) ಇಟ್ಟುಕೊಳ್ಳುವುದು ಆರ್ಜವ ಧರ್ಮವಾಗಿದೆ. ೩. ಮನಸ್ಸನ್ನು ಮಲಿನಗೊಳಿಸುವಂಥ ಎಷ್ಟು ದುರ್ಭಾವನೆಗಳು ಇವೆಯೋ ಅವುಗಳಲ್ಲಿ ಲೋಭವು ಎಲ್ಲಕ್ಕೂ ಪ್ರಬಲ ಅನಿಷ್ಟಕಾರಿಯಾಗಿದೆ. ಈ ಲೋಭ ಕಷಾಯವನ್ನು ಗೆದ್ದು ಮನಸ್ಸನ್ನು ಪವಿತ್ರಗೊಳಿಸುವುದು ಶೌಚಧರ್ಮವಾಗಿದೆ. ೪. ಅಸತ್ಯ ವಚನದ ಪ್ರವೃತ್ತಿಯನ್ನು ತಡೆದು ಯಾವಾಗಲೂ ಯಥಾರ್ಥ ಹಿತ-ಮಿತ-ಪ್ರಿಯ ವಚನ ಮಾತನಾಡುವುದು ಸತ್ಯಧರ್ಮವಾಗಿದೆ. ೫. ಇಂದ್ರಿಯಗಳ ವಿಷಯದ ಕಡೆಗೆ ಇರುವ ಮನಸ್ಸಿನ ಪ್ರವೃತ್ತಿಯನ್ನು ತಡೆದು, ಅದನ್ನು ಸತ್ಯ ಪ್ರವೃತ್ತಿಯ ಕಡೆಗೆ ಹಚ್ಚುವುದು ಸಂಯಮ ಧರ್ಮವೆನಿಸುತ್ತದೆ. ೬. ವಿಷಯಗಳನ್ನೂ ಕಷಾಯಗಳನ್ನೂ ನಿಗ್ರಹಗೊಳಿಸಿ, ಮುಂದೆ ಹೇಳಲಿರುವ ಹನ್ನೆರಡು ವಿಧ ತಪಗಳಲ್ಲಿ ಚಿತ್ತವನ್ನು ಸ್ಥಿರಗೊಳಿಸುವುದು ತಪಧರ್ಮವಾಗಿದೆ. ೭. ಯಾವ ಪ್ರತ್ಯುಪಕಾರದ ಅಪೇಕ್ಷೆಯನ್ನಿಡದೆಯೂ ಸ್ವಾರ್ಥ ಭಾವನೆ ಇಲ್ಲದೆಯೋ ಅನ್ಯರ ಹಿತ ಹಾಗೂ ಕಲ್ಯಾಣಗಳಿಗಾಗಿ ವಿದ್ಯಾ ಮೊದಲಾದವುಗಳ ದಾನ ನೀಡುವುದು ತ್ಯಾಗಧರ್ಮವಾಗಿದೆ. ೮. ಮನೆ-ಮಂದಿರ, ಧನ-ದ್ರವ್ಯ, ಬಂಧು-ಬಾಂಧವ, ಶತ್ರು-ಮಿತ್ರ ಇವರೆಲ್ಲರ ಮಮತ್ವವನ್ನು ಬಿಡುವುದು ; ಇವು ನನ್ನವಲ್ಲ, ಶರೀರವೂ ಸಹ ನನ್ನ ಕೂಡ ಸದಾ ನಿಲ್ಲುವಂಥದಲ್ಲ, ಇಂಥ ಅನಾಸಕ್ತಿ ಭಾವವನ್ನು ಉತ್ಪನ್ನಗೊಳಿಸುವುದು ಅಕಿಂಚನ ಧರ್ಮವಾಗಿದೆ. ೯. ಹಾಗೆಯೇ ರಾಗೋತ್ಪಾದಕ ಪರಿಸ್ಥಿತಿಯಲ್ಲಿಯೂ ಮನಸ್ಸನ್ನು ಕಾಮವೇದನೆಯಿಂದ ವಿಚಲಿತವಾಗಗೊಡದಿರುವುದು, ಅದನ್ನು ಆತ್ಮ ಚಿಂತನೆಯಲ್ಲಿಯೇ ತೊಡಗಿ ಸಿಡುವುದು ಬ್ರಹ್ಮಚರ್ಯ ಧರ್ಮವೆನಿಸುತ್ತದೆ. ೧೦.

ಈ ದಶ ಧರ್ಮಗಳಲ್ಲಿಯೇ ಸಾಮಾನ್ಯವಾಗಿ ನಾಲ್ಕು ಕಷಾಯಗಳೂ ಹಾಗೂ ಅಣುವ್ರತ ಮತ್ತು ಮಹಾವ್ರತಗಳಿಂದ ನಿರ್ಧಾರಗೊಂಡ ಐದು ಪಾಪಗಳ ಅಭಾವವೂ ಸಮಾವೇಶವಾಗುತ್ತವೆ. ಧರ್ಮಗಳ ವ್ಯವಸ್ಥೆಯು ವಿಶೇಷವಾಗಿ ಹೀಗಿದೆ :— ಅವುಗಳಲ್ಲಿ ಕಷಾಯ ಮತ್ತು ಪಾಪಗಳ ಅಭಾವ ಮಾತ್ರವಲ್ಲ ; ಆದರೆ ಅವುಗಳ ಉಪ

ಶಾಮಕ ವಿಧಾನಾತ್ಮಕ ಕ್ಷಮಾದಿ ಗುಣಗಳ ಮೇಲೆ ಜೋರು ಕೊಡಲಾಗಿದೆ. ನಾಲ್ಕು ಕಷಾಯಗಳನ್ನು ಉಪಶಮಗೊಳಿಸುವಂಥವು ಮೊದಲಿನ ನಾಲ್ಕು ಧರ್ಮಗಳಾಗಿವೆ. ಹಾಗೆಯೇ ಹಿಂಸಾ, ಅಸತ್ಯ, ಚೌರ್ಯ, ಅಬ್ರಹ್ಮ ಮತ್ತು ಪರಿಗ್ರಹಗಳನ್ನು ಉಪ ಶಮನಗೊಳಿಸುವಂಥವು ಕ್ರಮದಿಂದ ಸಂಯಮ, ಸತ್ಯ, ತ್ಯಾಗ, ಬ್ರಹ್ಮಚರ್ಯ ಮತ್ತು ಅಕಿಂಚನ ಧರ್ಮಗಳಾಗಿವೆ. ಈ ಒಂಭತ್ತಲ್ಲದೆ ತಪದ ವಿಧಾನವು ಮುನಿಚರ್ಯೆ ಯನ್ನು ವಿಶೇಷ ರೂಪದಿಂದ ಗೃಹಸ್ಥ ಧರ್ಮದಿಂದ ಮುಂದರಿಸುವಂಥದ್ದಾಗಿದೆ.

### ಹನ್ನೆರಡು ಅನುಪ್ರೇಕ್ಷೆಗಳು :—

ಅನಾಸಕ್ತಿಯೋಗದ ಅಭ್ಯಾಸಕ್ಕಾಗಿ ಯಾವ ಹನ್ನೆರಡು ಅನುಪ್ರೇಕ್ಷೆಗಳನ್ನು ಅಥವಾ ಭಾವನೆಗಳನ್ನು ಹೇಳಲಾಗಿದೆಯೋ ಅವು ಈ ಪ್ರಕಾರ ಇವೆ :— ಆರಾಧಕನು ಸಂಸಾರದ ಸ್ವಭಾವವು ಬಹು ಕ್ಷಣ ಭಂಗುರವಾಗಿದೆಯೆಂಬುದನ್ನು ನೆನೆಯುತ್ತಿರ ಬೇಕು. ಇಲ್ಲಿ ನನ್ನದು-ನಿನ್ನದು ಎಂದು ತಿಳಿಯುವಂಥದು ಏನಿದೆಯೋ ಅದೆಲ್ಲವೂ ಅನಿತ್ಯವಾಗಿದೆ, ಅದರಿಂದ ಅದರಲ್ಲಿ ಆಸಕ್ತಿಯು ನಿಷ್ಫಲವಾಗಿದೆ; ಇದು ಅನಿತ್ಯತೆ ಭಾವನೆಯಾಗಿದೆ. (೧). ಜನ್ಮ-ಜರಾ-ಮೃತ್ಯು ರೂಪ ಭಯಗಳಿಂದ ಯಾರೂ ಯಾರನ್ನೂ ರಕ್ಷಿಸುವಂತಿಲ್ಲ. ಈ ಭಯಗಳಿಂದ ಬಿಡುಗಡೆಯನ್ನು ಹೊಂದುವ ಉಪಾ ಯವು ಆತ್ಮನಲ್ಲಿಯೇ ಇದೆ. ಬೇರೆಡೆಗೆ ಇಲ್ಲ. ಇದು ಅಶರಣ ಭಾವನೆಯಾಗಿದೆ. (೨). ಸಂಸಾರದಲ್ಲಿ ಜೀವವು ನಾಲ್ಕೂ ಗತಿಗಳಲ್ಲಿ ಸುತ್ತುತ್ತಿರುತ್ತದೆ. ಮೋಹಕ್ಕೆ ವಶ ವಾಗಿ ದುಃಖವನ್ನು ಹೊಂದುತ್ತದೆ. ಈ ವಿಚಾರವನ್ನು ಮಾಡುವುದು ಸಂಸಾರ ಭಾವನೆಯಾಗಿದೆ. (೩). ಜೀವವು ಒಂಟಿಗನಾಗಿಯೇ ಹುಟ್ಟುತ್ತದೆ. ಬಾಲ್ಯ, ಯೌವನ ಮತ್ತು ವೃದ್ಧತ್ವಗಳನ್ನು ಹೊಂದಿ, ತಾನೊಬ್ಬನೇ ಮೃತ್ಯುವಿಗೆ ಅಧೀನ ವಾಗುತ್ತದೆ. ಈ ವಿಚಾರವು ಏಕತ್ವ ಭಾವನೆಯಾಗಿದೆ (೪). ದೇಹಾದಿ ಸಮಸ್ತ ಇಂದ್ರಿಯ-ಗ್ರಾಹ್ಯ ಪದಾರ್ಥಗಳು ಆತ್ಮನಿಂದ ಭಿನ್ನವಾಗಿವೆ ಇವುಗಳೊಡನೆ ಆತ್ಮನ ನಿಜವಾದ ಸಂಬಂಧವೇನೂ ಇಲ್ಲ ಇದು ಅನ್ಯತ್ವ ಭಾವನೆಯು. (೫). ಈ ಶರೀರವು ರಕ್ತ ಮಾಂಸ ಮತ್ತು ಎಲುಗಳ ಪಿಂಡವಾಗಿದೆ. ಹಾಗೂ ಮಲ, ಮೂತ್ರಾದಿ ಅಶುಚಿ ಪದಾರ್ಥಗಳಿಂದ ತುಂಬಿದೆ ಇದನ್ನು ಪ್ರೀತಿಸುವುದು ಶೃಂಗರಿಸುವುದು ನಿಷ್ಫಲ ವಾಗಿದೆ. ಇದು ಅಶುಚಿತ್ವ ಭಾವನೆಯಾಗಿದೆ. (೬). ಕ್ರೋಧಾದಿ ಕಷಾಯಗಳಿಂದ ಹಾಗೂ ಮನ-ವಚನ-ಕಾಯಗಳ ಪ್ರವೃತ್ತಿಯಿಂದ ಆಗುವ ಕರ್ಮಾಸ್ರವದ ವಿಚಾರ ಮಾಡುವುದು ಆಸ್ರವ ಭಾವನೆಯಾಗಿದೆ. (೭). ವ್ರತಗಳು ಹಾಗೂ ಸಮಿತಿ, ಗುಪ್ತಿ, ಧರ್ಮ, ಪರೀಷಹ ವಿಜಯ ಮತ್ತು ಈ ಅನುಪ್ರೇಕ್ಷಗಳು ಇವುಗಳಿಂದ ಹೇಗೆ ಕರ್ಮಾ ಸ್ರವವನ್ನು ತಡೆಯುವುದು ಸಾಧ್ಯವಿದೆ ಎಂದು ಚಿಂತಿಸುವುದೇ ಸಂವರ ಭಾವನೆ ಯಾಗಿದೆ. (೮). ವ್ರತ ಮೊದಲಾದವುಗಳಿಂದಲೂ ವಿಶೇಷ ರೂಪದ ಹನ್ನೆರಡು ವಿಧ ತಪಗಳಿಂದಲೂ ಕಟ್ಟಿದಂಥ ಕರ್ಮವೂ ಕ್ಷಯವಾಗುವ ಬಗೆಯನ್ನು ವಿಚಾರಿಸುವುದೇ

ನಿರ್ಜರಾ ಭಾವನೆಯಾಗಿದೆ. (೯). ಈ ಅನಂತ ಆಕಾಶ, ಅದರೊಳಗಿನ ಲೋಕ, ಅಲೋಕ ವಿಭಾಗ, ಅವುಗಳ ಅನಾದಿತ್ವ, ಅಕರ್ತೃತ್ವ ಹಾಗೂ ಲೋಕದಲ್ಲಿ ಇರುವ ಸಮಸ್ತ ಜೀವಾದಿ ದ್ರವ್ಯಗಳ ವಿಚಾರ ಮಾಡುವುದು ಲೋಕ ಭಾವನೆಯಾಗಿದೆ. (೧೦). ಈ ಅನಾದಿ ಸಂಸಾರದಲ್ಲಿ ಈ ಜೀವವು ಅಜ್ಞಾನ ಹಾಗೂ ಮೋಹಗಳಿಗೆ ವಶನಾಗಿ ನಾನಾ ವಿಧ ಯೋನಿಗಳಲ್ಲಿ ಹುಟ್ಟುವ ದುಃಖವನ್ನು ಹೊಂದುತ್ತದೆ. ಇದಕ್ಕೆ ಅದರ ಪುಣ್ಯ ಪ್ರಭಾವದಿಂದ ಈ ಮನುಷ್ಯ ಯೋನಿಯು ಲಭಿಸಿದೆ. ಈ ಮಾನವ ಜನ್ಮವನ್ನು ಸಾರ್ಥಕಗೊಳಿಸುವಂಥ ದರ್ಶನ-ಜ್ಞಾನ-ಚಾರಿತ್ರರೂಪದ ಮೂರು ರತ್ನಗಳು ತೀರ ದುರ್ಲಭವಾಗಿವೆ. ಹೀಗೆಂದು ವಿಚಾರಿಸುವುದು ಬೋಧಿದುರ್ಲಭ ಭಾವನೆಯಾಗಿದೆ. (೧೧). ನಿಜವಾದ ಧರ್ಮದ ಸ್ವರೂಪವೇನಿದೆ ? ಅದನ್ನು ಪಡೆದು ಯಾವ ಪ್ರಕಾರ ಜೀವವು ಸಂಸಾರಿಕ ದುಃಖದಿಂದ ಮುಕ್ತಿಯನ್ನು ಹೊಂದುತ್ತದೆ ? ಇದನ್ನೆಲ್ಲ ಚಿಂತಿಸುವುದೇ ಧರ್ಮ ಭಾವನೆಯಾಗಿದೆ (೧೨). ಈ ಪ್ರಕಾರ ಈ ಹನ್ನೆರಡು ಭಾವನೆಗಳಿಂದ ಸಾಧಕನು ತನ್ನ ಧಾರ್ಮಿಕ ಪ್ರವೃತ್ತಿಯಲ್ಲಿ ದೃಢತೆಯನ್ನು ಹೊಂದುತ್ತಾನೆ; ಸ್ಥಿರತೆಯನ್ನು ಸಂಪಾದಿಸುತ್ತಾನೆ.

**ಮೂರು ಗುಪ್ತಿಗಳು :—**

ಮೇಲೆ ಅನೇಕ ಸಲ ಹೇಳಲಾಗಿದೆಯಷ್ಟೆ. ಮನ-ವಚನ-ಕಾಯಗಳ ಕ್ರಿಯಾರೂಪ ಯೋಗದಿಂದ ಕರ್ಮಾಸ್ರವ ಆಗುತ್ತದೆ. ಕರ್ಮಬಂಧವನ್ನು ತಡೆಯುವುದು, ಕಟ್ಟಿದ ಕರ್ಮಗಳ ನಿರ್ಜರೆಯನ್ನು ಮಾಡಿಕೊಳ್ಳುವುದು, ಇದರಲ್ಲಿ ಈ ತ್ರಿಯೋಗದ ಸಾಧನೆಯು ತೀರ ಅವಶ್ಯಕವಾಗಿದೆ ಯಥಾರ್ಥವಾಗಿಯೂ ಸಮಸ್ತ ಧಾರ್ಮಿಕ ಸಾಧನೆಯ ಮೂಲದಲ್ಲಿ ಮನ-ವಚನ-ಕಾಯಗಳ ಪ್ರವೃತ್ತಿ-ನಿವೃತ್ತಿಗಳೇ ಪ್ರಧಾನವಾಗಿವೆ. ಅದಕ್ಕಾಗಿ ಅವುಗಳ ಸದಸತ್ ಪ್ರವೃತ್ತಿಗಳನ್ನು ವಿಶೇಷ ರೂಪದಿಂದ ವಿವರಿಸಿ ಸಾಧಕನು ಅವುಗಳ ಸಂಬಂಧದಲ್ಲಿ ವಿಶೇಷ ಸಾವಧಾನವಾಗಿರುವ ಆದೇಶವನ್ನು ಕೊಡಲಾಗಿದೆ. ಮನ ಮತ್ತು ವಚನ ಇವೆರಡರ ಪ್ರವೃತ್ತಿಯು ನಾಲ್ಕು ಪ್ರಕಾರದವುಗಳೆಂದು ಹೇಳಿದೆ. ಅವು ಸತ್ಯ, ಅಸತ್ಯ, ಉಭಯ ಮತ್ತು ಅನುಭಯ ಎಂದಿವೆ. ಸತ್ಯದಲ್ಲಿ ಯಥಾರ್ಥತೆ ಹಾಗೂ ಹಿತ ಇವೆರಡೂ ಸಂಗತಿಗಳು ಸಮಾವೇಶವಾಗಿವೆಯೆಂದು ಮನ್ನಿಸಲಾಗಿದೆ. ಇದೇ ಸತ್ಯದ ಅನುಚಿಂತನದಲ್ಲಿ ಪ್ರವೃತ್ತವಾದ ಮನಸ್ಸಿನ ಅವಸ್ಥೆಯನ್ನು ಸತ್ಯಮನವೆಂದೂ, ಅದಕ್ಕೆ ವಿಪರೀತವಾದುದು ಅಸತ್ಯಮನವೆಂದೂ, ಮಿಶ್ರಿತ ಭಾವಕ್ಕೆ ಉಭಯ ಮನವೆಂದೂ ಮತ್ತು ಸತ್ಯಾಸತ್ಯ ಎರಡರಲ್ಲಿಯೂ ಹೀನ ಮಾನಸಿಕ ಅವಸ್ಥೆಗೆ ಅನುಭಯ ರೂಪವೆಂದು ಹೇಳಲಾಗಿದೆ. ಈ ಅವಸ್ಥೆಗಳಲ್ಲಿ ಸತ್ಯ ಮನೋಯೋಗದ ಸಾಧನೆಗೇನೇ ಮನೋಗುಪ್ತಿ ಎನ್ನುವರು. ಶಬ್ದಾತ್ಮಕ ವಚನವು ಯಥಾರ್ಥವಾಗಿಯೂ ಮನಸ್ಸಿನ ಅವಸ್ಥೆಯನ್ನು ವ್ಯಕ್ತಮಾಡುವ ಪ್ರತೀಕ ಮಾತ್ರವಾಗಿದೆ. ಅದರಿಂದ ಮೇಲೆ ಹೇಳಿದ ನಾಲ್ಕು ಮನಸ್ಥಿತಿಗಳಿಗೆ ಅನುಕೂಲವಾದ

ವಚನ ಪದ್ಧತಿಗಳಲ್ಲಿಯೂ ನಾಲ್ಕು ವಿಧವಾಗುತ್ತವೆ. ಆದರೂ ಲೋಕವ್ಯವಹಾರದಲ್ಲಿ ಸತ್ಯವಚನವೂ ಹತ್ತು ಪ್ರಕಾರದ ರೂಪವನ್ನು ಧರಿಸುತ್ತದೆ. ಒಮ್ಮೊಮ್ಮೆ ಶಬ್ದವು ತನ್ನ ಮೂಲ ವಾಚ್ಯಾರ್ಥದಲ್ಲಿ ಚ್ಯುತಿಯನ್ನು ಹೊಂದಿಯೂ ಜನಪದ, ಸಮ್ಮತಿ, ಸ್ಥಾಪನಾ, ನಾಮ, ರೂಪ, ಅಪೇಕ್ಷಾ, ವ್ಯವಹಾರ, ಸಂಭಾವನಾ, ಭಾವ ಮತ್ತು ಉಪಮಾ ಇವುಗಳಿಗೆ ಸಂಬಂಧಿಸಿದ ರೂಢಿಗಳಿಂದ ಸತ್ಯವನ್ನು ಪ್ರಕಟಗೊಳಿಸುತ್ತದೆ. ಅನ್ಯ ವಿಧದಿಂದಲೂ ವಾಣಿಯಲ್ಲಿ, ಆಮಂತ್ರಣೀ, ಆಜ್ಞಾಪನೀ, ಯಾಚನೀ, ಆಪೃಚ್ಛನೀ, ಪ್ರಜ್ಞಾಪನೀ, ಪ್ರತ್ಯಾಖ್ಯಾನೀ, ಸಂಶಯವಚನೀ, ಇಚ್ಛಾನುಲೋಮನೀ ಮತ್ತು ಅನಕ್ಷರಗತಾ ಎಂದು ಒಂಭತ್ತು ಭೇದಗಳಾಗುತ್ತವೆ. ಇವುಗಳ ಸಂಬಂಧವು ಸತ್ಯ–ಅಸತ್ಯಕ್ಕೆ ಏನೂ ಇಲ್ಲ. ಆದಕ್ಕಾಗಿ ಇವುಗಳಿಗೆ ಅನುಭಯ ವಚನ ರೂಪವೆಂದು ಹೇಳಲಾಗಿದೆ ಸಾಧಕನು ಈ ಪ್ರಕಾರ ಮನ ಮತ್ತು ವಚನಗಳ ಸತ್ಯಾಸತ್ಯ ಸ್ವರೂಪವನ್ನು ವಿಚಾರ ಮಾಡಿ, ತನ್ನ ಮನ-ವಚನಗಳ ಪ್ರವೃತ್ತಿಯನ್ನು ಸಮತೂಕ ದಲ್ಲಿಟ್ಟುಕೊಳ್ಳಬೇಕು. ಅದಕ್ಕನುಸರಿಸಿಯೇ ಕಾಯಿಕ ಕ್ರಿಯೆಗಳಲ್ಲಿ ಪ್ರವೃತ್ತನಾಗ ಲಿಕ್ಕೆ ಬೇಕು. ಇದೇ ಮುನಿಗಳ ತ್ರಿಗುಪ್ತಿರೂಪ ಆಚರಣವಾಗಿದೆ.

## ಆರು ಪ್ರಕಾರದ ಬಾಹ್ಯ ತಪಗಳು :—

ಮೇಲೆ ಹೇಳಿದ ಸಮಸ್ತ ವ್ರತಾದಿ ಸಾಧನಗಳು ಕರ್ಮಾಸ್ರವವನ್ನು ನಿರೋಧ ರೂಪ ಸಂವರ ಮಾಡುವಂಥವೂ ಕಟ್ಟಿದಂಥ ಕರ್ಮಗಳ ಕ್ಷಯ ರೂಪ ನಿರ್ಜರಾ ಮಾಡು ವಂಥವೂ ಇರುತ್ತವೆ. ಕರ್ಮ ನಿರ್ಜರೆಗಾಗಿ ವಿಶೇಷ ರೂಪದಿಂದ ಉಪಯೋಗ ಬೀಳುವಂಥದು ತಪ ಸಾಧನೆಯೆಂದು ಮನ್ನಿಸಲಾಗಿದೆ. ಇದರಲ್ಲಿ ಮುಖ್ಯವಾಗಿ ಬಾಹ್ಯ ಮತ್ತು ಆಭ್ಯಂತರ ಎಂದು ಎರಡು ಭೇದಗಳಿವೆ. ಅನಶನ, ಅವಮೋದರ್ಯ, ವೃತ್ತಿ ಪರಿಸಂಖ್ಯಾನ, ರಸಪರಿತ್ಯಾಗ, ವಿವಿಕ್ತಶಯ್ಯಾಸನ ಹಾಗೂ ಕಾಯಕ್ಲೇಶ ಇವು ಬಾಹ್ಯ ತಪದ ಆರು ಪ್ರಕಾರಗಳಾಗಿವೆ ಎಲ್ಲ ಪ್ರಕಾರದ ಆಹಾರದ ಪರಿತ್ಯಾಗವು ಅನಶನವು, ಅಲ್ಪ ಆಹಾರ ಮಾತ್ರ ಗ್ರಹಣ ಮಾಡುವುದು ಅವಮೋದರ್ಯ ಅಥವಾ ಊನೋದರ ತಪವಾಗಿದೆ. ಒಂದೇ ಮನೆಯಿಂದ ಊಟವನ್ನು ಸ್ವೀಕರಿಸಿ ಯೇನು, ಈ ಪ್ರಕಾರ ಕೊಟ್ಟ ಆಹಾರವನ್ನು ಮಾತ್ರ ತಕ್ಕೊಳ್ಳುವೆ, ಇತ್ಯಾದಿ ರೂಪದಿಂದ ಆಹಾರಕ್ಕೆ ಸಂಬಂಧಿಸಿದ ಪರಿಸ್ಥಿತಿಗಳನ್ನು ನಿಯಂತ್ರಿಸುವುದು ವೃತ್ತಿ ಪರಿಸಂಖ್ಯಾನವಾಗಿದೆ. ಅದರಂತೆಯೇ ತುಪ್ಪ ಮೊದಲಾದ ವಿಶೇಷ ಪೌಷ್ಟಿಕ ಹಾಗೂ ವಿಕಾರಿ ವಸ್ತುಗಳನ್ನು ತ್ಯಜಿಸುವುದು, ಸವಿಯೇ ಮೊದಲಾದ ರಸಗಳನ್ನು ನಿಯಮನಗೊಳಿಸುವುದು ರಸಪರಿತ್ಯಾಗವಾಗಿದೆ. ಶೂನ್ಯ ಗೃಹಾದಿ ಏಕಾಂತ ಸ್ಥಾನ ಗಳಲ್ಲಿ ವಾಸಮಾಡುವುದು ವಿವಿಕ್ತಶಯ್ಯಾಸನವಾಗಿದೆ ಹಾಗೆಯೇ ಬಿಸಿಲು, ಚಳಿ, ಮಳೆ ಮೊದಲಾದ ಬಾಧೆಗಳನ್ನು ವಿಶೇಷ ರೂಪದಿಂದ ಸಹನ ಮಾಡುವುದು, ಆಸನ ವಿಶೇಷದಲ್ಲಿ ದೀರ್ಘ ಕಾಲದ ವರೆಗೆ ಸ್ಥಿರವಾಗಿ ಇರುವುದು ಮೊದಲಾದವುಗಳ

ಅಭ್ಯಾಸವು ಕಾಯ ಕ್ಲೇಶ ತಪ ಎನಿಸುತ್ತದೆ.

### ಆರು ಪ್ರಕಾರದ ಅಭ್ಯಂತರ ತಪಗಳು :—

ಅಭ್ಯಂತರ ತಪದಲ್ಲಿ ಪ್ರಾಯಶ್ಚಿತ್ತ. ವಿನಯ. ವೈಯಾವೃತ್ಯ. ಸ್ವಾಧ್ಯಾಯ, ವ್ಯುತ್ಸರ್ಗ ಮತ್ತು ಧ್ಯಾನ ಎಂದು ಆರು ಭೇದಗಳಿವೆ. ಪ್ರಮಾದದಿಂದ ಉತ್ಪನ್ನವಾಗು ವಂಥ ದೋಷಗಳ ಪರಿಹಾರಕ್ಕಾಗಿ ಆಲೋಚನ, ಪ್ರತಿಕ್ರಮಣ ಮೊದಲಾದ ಚಿತ್ತ ಶೋಧಕ ಕ್ರಿಯೆಗಳಲ್ಲಿ ಪ್ರವೃತ್ತವಾಗುವುದಕ್ಕೆ ಪ್ರಾಯಶ್ಚಿತ್ತ ತಪ ಎನ್ನಲಾಗುವುದು. ಜ್ಞಾನ, ದರ್ಶನ ಚಾರಿತ್ರ ಮತ್ತು ಉಪಚಾರಗಳ ಸಾಧನೆಯಲ್ಲಿ ವಿಶೇಷ ರೂಪ ದಿಂದ ಪ್ರವೃತ್ತವಾಗುವುದು ವಿನಯ ತಪವೆನಿಸುತ್ತದೆ. ಜ್ಞಾನ-ದರ್ಶನ-ಚಾರಿತ್ರಗಳ ಸ್ವರೂಪವನ್ನು ಹೇಳಿ ಆಗಿದೆ. ಆಚಾರ್ಯಾದಿ ಗುರುಜನರು. ಶಾಸ್ತ್ರಗಳು, ಪ್ರತಿಮೆ ಗಳು ಮೊದಲಾದ ಪೂಜ್ಯ ಪಾತ್ರಗಳ ವಿಷಯದಲ್ಲಿ ಪ್ರತ್ಯಕ್ಷ ಹಾಗೂ ಪರೋಕ್ಷದಲ್ಲಿ ಮನ-ವಚನ-ಕಾಯಗಳ ಕ್ರಿಯೆಯಿಂದ ಆದರ-ಸತ್ಕಾರ, ಗುಣಾನುವಾದ ಮೊದಲಾ ದವುಗಳನ್ನು ಮಾಡುವುದು ಉಪಚಾರ ವಿನಯವಾಗಿದೆ. ಆಚಾರ್ಯ, ಉಪಾಧ್ಯಾಯ, ತಪಸ್ವೀ, ಶಿಕ್ಷಾ-ಶೀಲ, ರೋಗಿ, ಗಣ, ಕುಲ, ಸಂಘ, ಸಾಧು ಹಾಗೂ ಲೋಕ- ಸಮ್ಮತ ಅನ್ಯ ಯೋಗ್ಯ ಜನರ ಪೀಡಾ-ಬಾಧೆಗಳನ್ನು ದೂರ ಮಾಡುವುದಕ್ಕಾಗಿ ಸೇವೆ ಯಲ್ಲಿ ಪ್ರವೃತ್ತವಾಗುವುದಕ್ಕೆ ವೈಯಾವೃತ್ಯ ತಪವೆನ್ನುವರು. ಧರ್ಮ ಶಾಸ್ತ್ರಗಳ ವಾಚನ, ಪೃಚ್ಛನ, ಅನುಚಿಂತನ, ಪುನಃ ಪುನಃ ಪ್ರವೃತ್ತಿ ಮತ್ತು ಧರ್ಮೋಪ ದೇಶ ಇವೆಲ್ಲವೂ ಸ್ವಾಧ್ಯಾಯ ತಪಗಳಾಗಿವೆ. ಗೃಹ, ಧನ-ಧಾನ್ಯಾದಿ ಬಾಹ್ಯೋಪಾಧಿ ಗಳನ್ನು ಹಾಗೂ ಕ್ರೋಧಾದಿ ಅಂತರಂಗೋಪಾಧಿಗಳನ್ನು ತ್ಯಾಗ ಮಾಡುವುದು ವ್ಯುತ್ಸರ್ಗ ತಪವಾಗಿದೆ.

### ಧ್ಯಾನ-(ಆರ್ತ ಮತ್ತು ರೌದ್ರ) :—

ಆರನೆಯದಾದ ಅಂತರಂಗ ತಪವು ಧ್ಯಾನವಾಗಿದೆ. ಇದರಲ್ಲಿ ಆರ್ತ, ರೌದ್ರ ಧರ್ಮ ಮತ್ತು ಶುಕ್ಲ ಎಂಬ ನಾಲ್ಕು ಭೇದಗಳನ್ನು ಮನ್ನಿಸಲಾಗಿದೆ. ಅನಿಷ್ಟದ ಸಂಯೋಗ, ಇಷ್ಟದ ವಿಯೋಗ, ದುಃಖದ ವೇದನೆ, ಭೋಗದ ಅಭಿಲಾಷೆಯಿಂದ ಸಂಕ್ಲೇಶ ಭಾವಗಳು ಉತ್ಪನ್ನವಾಗುತ್ತವೆ. ಅವುಗಳನ್ನು ಅನಿಷ್ಟ ಪರಿಸ್ಥಿತಿಗಳನ್ನು ಬದಲಿಸುವುದಕ್ಕಾಗಿಯೂ ಯಾವ ಚಿಂತನವನ್ನು ಮಾಡಲಾಗುತ್ತದೆಯೋ ಅದೆಲ್ಲವೂ ಆರ್ತಧ್ಯಾನವಾಗಿದೆ. ಸುಳ್ಳು ಮಾತನಾಡುವುದು, ಕಳವು ಮಾಡುವುದು, ಧನ- ಸಂಪತ್ತಿಗಳನ್ನು ರಕ್ಷಿಸುವುದು, ಹಾಗೆಯೇ ಜೀವಗಳ ಘಾತವನ್ನು ಮಾಡುವುದರಲ್ಲಿ ಯಾವ ಕ್ರೂರ ಪರಿಣಾಮಗಳು ಉತ್ಪನ್ನವಾಗುತ್ತವೆಯೋ ಅದು ರೌದ್ರ ಧ್ಯಾನವಾ ಗಿದೆ ಇವೆರಡೂ ಧ್ಯಾನಗಳು ವ್ಯಕ್ತಿಗೆ ಸ್ವತಃ ದುಃಖವನ್ನು ಕೊಡುತ್ತವೆ. ಸಮಾಜ ದಲ್ಲಿಯೂ ಅಶಾಂತಿ ಉತ್ಪನ್ನವಾಗುವುದಕ್ಕೆ ಕಾರಣವಾಗುತ್ತವೆ. ಹೀಗಾಗಿ ಅದರಿಂದ

ಅಶುಭ ಕರ್ಮಗಳ ಬಂಧವಾಗುತ್ತದೆ. ಆದಕ್ಕಾಗಿ ಈ ಧ್ಯಾನವು ಅಶುಭವಾಗಿದೆ, ತ್ಯಾಜ್ಯವಾಗಿದೆ. ಉಳಿದ ಎರಡು ಧ್ಯಾನಗಳು ಜೀವನಿಗೆ ಕಲ್ಯಾಣಕಾರಿಯಾಗಿರುವುದ ರಿಂದ ಶುಭವಾಗಿವೆ.

### ಧರ್ಮಧ್ಯಾನ :—

ಇಂದ್ರಿಯಗಳನ್ನು ಹಾಗೂ ರಾಗ-ದ್ವೇಷ ಭಾವನೆಗಳಿಂದ ಮನವನ್ನು ನಿರೋಧ ಮಾಡಿ ಅದನ್ನು ಧಾರ್ಮಿಕ ಚಿಂತನೆಯ ಕಡೆಗೆ ಹಚ್ಚುವುದು ಧರ್ಮಧ್ಯಾನವಾಗಿದೆ. ಈ ಚಿಂತನದ ವಿಷಯವು ಆಜ್ಞಾ-ವಿಚಯ, ಅಪಾಯ-ವಿಚಯ, ವಿಪಾಕ-ವಿಚಯ ಮತ್ತು ಸಂಸ್ಥಾನ-ವಿಚಯ ಎಂಬ ನಾಲ್ಕು ಪ್ರಕಾರವಿದೆ. ಯಾವಾಗ ಧ್ಯಾನ ಮಾಡು ವವನು ಶಾಸ್ತ್ರಗಳಲ್ಲಿ ಹೇಳಿದ ತತ್ವಗಳ ಸ್ವರೂಪ, ಕರ್ಮಬಂಧವೇ ಆದಿ ಜ್ಞಾನದ ವ್ಯವಸ್ಥೆ ಮತ್ತು ಚಾರಿತ್ರದ ನಿಯಮಾದಿಗಳ ಬಗ್ಗೆ ಸೂಕ್ಷ್ಮ ಚಿಂತನದಲ್ಲಿ ಧ್ಯಾನ ವನ್ನು ಹಚ್ಚುವನೋ ಆಗ ಅದು ಆಜ್ಞಾ ವಿಚಯ ಎಂಬ ಹೆಸರಿನ ಧ್ಯಾನವಾಗು ತ್ತದೆ. ಆಜ್ಞಾ ಎಂಬುದರ ಅರ್ಥವು ಶಾಸ್ತ್ರೋಪದೇಶ ಎಂದಿದೆ. ವಿಚಯದ ಅರ್ಥವು ಶೋಧ, ಸಂಶೋಧನೆ ಎಂದಾಗುತ್ತದೆ. ಈ ಪ್ರಕಾರ ಶಾಸ್ತ್ರಾದೇಶದ ಸಂಶೋಧನೆ ಅರ್ಥಾತ್ ಧರ್ಮದ ಸಿದ್ಧಾಂತಗಳನ್ನು ತರ್ಕ, ನ್ಯಾಯ, ಪ್ರಮಾಣ, ದೃಷ್ಟಾಂತ ಮೊದಲಾದ ಯೋಚನೆಯಿಂದ ತಿಳಿದುಕೊಳ್ಳುವ ಮಾನಸಿಕ ಪ್ರಯತ್ನವು ಧರ್ಮ-ಧ್ಯಾನವಾಗಿದೆ. ಅಪಾಯದ ಅರ್ಥವು ವಿಘ್ನ, ಬಾಧೆ ಎಂದಿದೆ. ಧರ್ಮದ ಮಾರ್ಗ ದಲ್ಲಿ ಉಂಟಾಗುವ ವಿಘ್ನ-ಬಾಧೆಗಳನ್ನು ದೂರಗೊಳಿಸಿ, ಧರ್ಮದ ಪ್ರಭಾವನೆಯನ್ನು ಹೆಚ್ಚಿಸುವುದಕ್ಕಾಗಿ ಚಿಂತನೆ ಮಾಡುವುದು ಅಪಾಯ-ವಿಚಯ ಧರ್ಮಧ್ಯಾನವಾಗಿದೆ. ಜ್ಞಾನಾವರಣಾದಿ ಕರ್ಮಗಳು ಯಾವ ಪ್ರಕಾರ ಫಲ ಕೊಡುತ್ತವೆ, ಜೀವನದ ವಿವಿಧ ಅನುಭವಗಳು ಯಾವ-ಯಾವ ಕರ್ಮೋದಯದಿಂದ ಪ್ರಾಪ್ತವಾದುವು; ಈ ಪ್ರಕಾರ ಕರ್ಮ ಫಲಕ್ಕೆ ಸಂಬಂಧಿಸಿದ ಚಿಂತನವು ವಿಪಾಕ-ವಿಚಯ ಧರ್ಮಧ್ಯಾನವಾಗಿದೆ ಲೋಕದ ಸ್ವರೂಪ ಹೇಗಿದೆ, ಅದರ ಊರ್ಧ್ವ, ಅಧಃ, ತಿರ್ಯಕ್ ಲೋಕದ ರಚ ನೆಯು ಹೇಗಿದೆ, ಮತ್ತು ಅವುಗಳಲ್ಲಿ ಜೀವಗಳ ಸ್ಥಿತಿಯು ಹೇಗೆ ಹೇಗೆ ಕಂಡುಬರು ತ್ತದೆ, ಇತ್ಯಾದಿಗಳ ಚಿಂತನೆಯು ಸಂಸ್ಥಾನ ವಿಚಯ ಎಂಬ ಹೆಸರಿನ ಧರ್ಮಧ್ಯಾನ ವಾಗಿದೆ. ಈ ನಾಲ್ಕು ಪ್ರಕಾರದ ಧರ್ಮಧ್ಯಾನಗಳಿಂದ ಧ್ಯಾನಿಯ ದೃಷ್ಟಿಯು ಶುದ್ಧ ವಾಗುತ್ತದೆ, ಶ್ರದ್ಧೆಯು ದೃಢಗೊಳ್ಳುತ್ತದೆ, ಬುದ್ಧಿಯು ನಿರ್ಮಲವಾಗುತ್ತದೆ. ಚಾರಿತ್ರ-ಪಾಲನವು ವಿಶುದ್ಧವಾಗುತ್ತದೆ, ಸ್ಥಿರಗೊಳ್ಳುತ್ತದೆ ಅದರಿಂದ ಧರ್ಮಧ್ಯಾನಕ್ಕೆ ಆತ್ಮಕಲ್ಯಾಣದ ದೃಷ್ಟಿಯಿಂದ ಬಹಳ ಮಾಹಾತ್ಮ್ಯವಿದೆ.

### ಶುಕ್ಲ ಧ್ಯಾನ :—

ಶುಕ್ಲಧ್ಯಾನದಲ್ಲಿಯೂ ಕೂಡ ಪೃಥಕ್ತ್ವ—ವಿತರ್ಕ—ವಿಚಾರ, ಏಕತ್ವ—ವಿತರ್ಕ-

ಅವೀಚಾರ, ಸೂಕ್ಷ್ಮ–ಕ್ರಿಯಾ–ಪ್ರತಿಪಾತೀ ಮತ್ತು ವ್ಯುಪರತ–ಕ್ರಿಯಾ–ನಿವೃತ್ತಿ ಎಂಬ ನಾಲ್ಕು ಭೇದಗಳಿವೆ. ಅನೇಕ ಜೀವಾದಿ ದ್ರವ್ಯಗಳನ್ನು ಮತ್ತು ಅವುಗಳ ಪರ್ಯಾಯಗಳನ್ನು ತಮ್ಮ ಮನ–ವಚನ–ಕಾಯ ಈ ಮೂರು ಯೋಗಗಳಿಂದ ಚಿಂತಿಸುವುದು ಪೃಥಕ್ತ್ವ ಎನಿಸುತ್ತದೆ. ವಿತರ್ಕದ ಅರ್ಥವು ಶ್ರುತ ಅಥವಾ ಶಾಸ್ತ್ರ ಎಂದಿದೆ. ವೀಚಾರದ ಅರ್ಥವು ವಿಚರಣ ಅಥವಾ ಪರಿವರ್ತನ ಎಂದಾಗುತ್ತದೆ. ದ್ರವ್ಯದಿಂದ ಪರ್ಯಾಯ ಮತ್ತು ಪರ್ಯಾಯದಿಂದ ದ್ರವ್ಯ, ಒಂದು ಶಾಸ್ತ್ರವಚನ ದಿಂದ ಬೇರೊಂದು ಶಾಸ್ತ್ರವಚನ, ಹಾಗೆಯೇ ಒಂದು ಯೋಗದಿಂದ ಇನ್ನೊಂದು ಯೋಗದ ಆಲಂಬನದ ಧ್ಯಾನ, ಹೀಗೆ ಧಾರಾವಾಹಿಯಾಗಿ ಸಾಗುವುದಕ್ಕೆ ಪೃಥಕ್ತ್ವ–ವಿತರ್ಕವೀಚಾರ ಧ್ಯಾನವೆಂದು ಹೇಳಲಾಗುತ್ತದೆ. ಯಾವಾಗ ಆಲಂಬನ ಭೂತ ದ್ರವ್ಯ ಮತ್ತು ಅದರ ಪರ್ಯಾಯದ ಮತ್ತು ಯೋಗದ ಸಂಕ್ರಮಣವಾಗದೆ, ಒಂದೇ ದ್ರವ್ಯ ಅಥವಾ ದ್ರವ್ಯ ಪರ್ಯಾಯವು ಯಾವುದೇ ಒಂದೇ ಯೋಗದಿಂದ ಧ್ಯಾನಿ ಸಲ್ಪಡುತ್ತಿದ್ದರೆ ಅದು ಏಕತ್ವ–ವಿತರ್ಕ–ಅವೀಚಾರ ಧ್ಯಾನವಾಗುವುದು. ಯಾವ ಧ್ಯಾನದಲ್ಲಿ ವಿತರ್ಕ ಅರ್ಥಾತ್ ಶ್ರುತವಚನದ ಆಧಾರವಿರುವುದಿಲ್ಲವೋ, ಮತ್ತು ವೀಚಾರ ಅರ್ಥಾತ್ ಯೋಗ–ಸಂಕ್ರಮಣವು ಇರುತ್ತದೆ, ಆದರೆ ಕೇವಲ ಸೂಕ್ಷ್ಮ ಕಾಯ ಯೋಗ ಮಾತ್ರ ಅವಲಂಬನವಾಗಿರುತ್ತದೆ, ಆಗ ಅದು ಸೂಕ್ಷ್ಮ–ಕ್ರಿಯಾ–ಪ್ರತಿಪಾತೀ ಎಂಬ ಹೆಸರಿನ ಮೂರನೆಯ ಶುಕ್ಲಧ್ಯಾನವಾಗುವುದು. ಯಾವಧ್ಯಾನ ದಲ್ಲಿ ವಿತರ್ಕವಿರುವುದಿಲ್ಲ, ವೀಚಾರ ವಿರುವುದಿಲ್ಲ, ಯೋಗದ ಅವಲಂಬನವಿರುವುದಿಲ್ಲ; ಆಗ ಅದು ವ್ಯುಪರತ ಕ್ರಿಯಾನಿವರ್ತಿ ಎಂಬ ಹೆಸರಿನ ಸರ್ವೋತ್ಕೃಷ್ಟ ಶುಕ್ಲ ಧ್ಯಾನವೆನಿಸುವುದು ಈ ಧ್ಯಾನವು ಕೇವಲ ಜ್ಞಾನದ ಚರಮ ಅವಸ್ಥೆಯಲ್ಲಿಯೇ ಆಗು ತ್ತದೆ. ಮತ್ತು ಆತ್ಮನಿಂದ ಶರೀರದ ಪರಿತ್ಯಾಗವು ಆದ ಮೇಲೆ ಸಿದ್ಧರ ಆತ್ಮಜ್ಞಾನದ ರೂಪವನ್ನು ಧಾರಣ ಮಾಡಿಬಿಡುತ್ತದೆ. ಈ ಪ್ರಕಾರ ಶುಕ್ಲಧ್ಯಾನದಿಂದಲೇ ಯೋಗಿಯು ಕ್ರಮದಿಂದ ಆತ್ಮವನ್ನು ಉತ್ತರೋತ್ತರ ಕರ್ಮ–ಮಲದಿಂದ ದೂರ ಗೊಳಿಸಿ, ಕೊನೆಗೆ ಮೋಕ್ಷಪದವನ್ನು ಪಡೆಯುತ್ತಾನೆ.

**ಹದಿನಾಲ್ಕು ಗುಣಸ್ಥಾನಗಳು ಹಾಗೂ ಮೋಕ್ಷ :—**

ಮೇಲೆ ಮೋಕ್ಷ–ಪ್ರಾಪ್ತಿಯ ಹೇತುವಿಗಾಗಿ ಸಮ್ಯಗ್ದರ್ಶನ, ಜ್ಞಾನ ಮತ್ತು ಚಾರಿತ್ರಗಳ ಪ್ರರೂಪಣೆಯನ್ನು ಮಾಡಲಾಗಿದೆ. ಮಿಥ್ಯಾತ್ವದಿಂದ ಪ್ರಾರಂಭವಾಗಿ ಮೋಕ್ಷ ಪ್ರಾಪ್ತಿಯ ವರೆಗೆ ಯಾವ ಆಧ್ಯಾತ್ಮಿಕ ಸ್ಥಿತಿಗಳಲ್ಲಿಂದ ಜೀವವು ಹೊರ ಬೀಳು ವುದೋ ಅವುಗಳಿಗೆ ಗುಣಸ್ಥಾನವೆಂದು ಹೇಳುವರು. ಸಾಮಾನ್ಯವಾಗಿ ಈ ಸ್ಥಿತಿ ಯಲ್ಲಿ ಪರಿವರ್ತನ ಮಾಡುವಂಥ ಯಾವ ಕರ್ಮಗಳಿವೆಯೋ, ಅವುಗಳ ನಾನಾ ಪ್ರಕೃತಿಗಳ ಸ್ವರೂಪವನ್ನು ಸಹ ಈ ಮೊದಲು ಹೇಳಲಾಗಿದೆ ಆ ಕರ್ಮಗಳ ಪರಿಸ್ಥಿತಿ ಗಳಿಗನುಸರಿಸಿ ಜೀವಕ್ಕೆ ಯಾವ ಭಾವವು ಉಂಟಾಗುವುದೋ ಅದರಲ್ಲಿ ನಾಲ್ಕು

ಪ್ರಕಾರಗಳು ಇವೆ. ಅವುಗಳನ್ನು ಔದಯಿಕ, ಔಪಶಮಿಕ, ಕ್ಷಾಯಿಕ ಮತ್ತು ಕ್ಷಾಯೋಪಶಮಿಕ ಎಂದು ಹೇಳಲಾಗುತ್ತದೆ. ಕರ್ಮದ ಉದಯದಿಂದ ಉತ್ಪನ್ನ ವಾಗುವ ಭಾವವು ಔದಯಿಕವೆನಿಸುತ್ತದೆ. ಇದರ ಭಾವಗಳು ರಾಗ, ದ್ವೇಷ, ಅಜ್ಞಾನ, ಅಸಂಯಮ, ರತಿ ಮೊದಲಾದವುಗಳಾಗಿವೆ. ಕರ್ಮಗಳ ಉಪಶಮನ ಅರ್ಥಾತ್ ಉದಯರಹಿತ ಅವಸ್ಥೆಯಲ್ಲಿ ಉಂಟಾಗುವ ಭಾವವು ಔಪಶಮಿಕ ವಾಗಿದೆ. ಇದರಲ್ಲಿ ಸಮ್ಯಕ್ತ್ವದ ಪ್ರಾಪ್ತಿ, ಸದಾಚಾರ, ವ್ರತ–ನಿಯಮ–ಪಾಲನ ಮೊದಲಾದ ಭಾವಗಳು ಸಮಾವೇಶವಾಗುತ್ತವೆ. ಕರ್ಮಗಳ ಉಪಶಮನ ಕಾಲದಲ್ಲಿ ಜೀವವು ಅದೇ ಪ್ರಕಾರ ಶುದ್ಧವಾಗುತ್ತ ಹೋಗುತ್ತದೆ. ಅದಕ್ಕೆ ಹೋಲಿಕೆಯೆಂದು ಸ್ಫಟಿಕದಿಂದ ಆಗುವ ನೀರಿನ ಸ್ವಚ್ಛತೆಯ ಕ್ರಿಯೆಯನ್ನು ಹೇಳಬಹುದಾಗಿದೆ. ನೀರಿನಲ್ಲಿ ಸ್ಫಟಿಕವೇ ಮೊದಲಾದ ಶೋಧಕ ವಸ್ತುಗಳ ಪ್ರಭಾವದಿಂದ ಅದರ ಎಲ್ಲ ಮಲವೂ ತಳದಲ್ಲಿ ಕೂಡುತ್ತದೆ, ಮೇಲಿನ ನೀರು ನಿರ್ಮಲವಾಗುತ್ತದೆ. ಆದರೆ ಆತ್ಮ-ಪರಿಣಾಮಗಳ ಈ ವಿಶುದ್ಧಿಯು ಚಿರಸ್ಥಾಯಿಯಾಗಿರುವುದಿಲ್ಲ. ಯಾಕಂದರೆ ಉಪಶಾಂತವಾದ ಮಲವು ನೀರು ಸ್ವಲ್ಪ ಕಲಕಿದರೆ ಸಾಕು, ಅದು ಪುನಃ ಮೇಲೆದ್ದು ಸಮಗ್ರ ಜಲವನ್ನು ಮಲಿನಗೊಳಿಸಿ ಬಿಡುತ್ತದೆ. ಅದೇ ಪ್ರಕಾರ ಉಪಶಾಂತವಾದ ಕರ್ಮಗಳು ಶೀಘ್ರವಾಗಿಯೇ ಪುನಃ ಕಷಾಯೋದಯದಿಂದ ಫಲದಾಯಕವಾಗುತ್ತವೆ. ಜೀವದ ಪರಿಣಾಮವನ್ನು ಪುನಃ ಮಲಿನ ಗೊಳಿಸುತ್ತವೆ. ಆದರೆ ಒತ್ತಟ್ಟಿಗೆ ಕೂಡಿದ ಮಲವನ್ನು ಜಲದಿಂದ ಬೇರೆಗೊಳಿಸಿ ಬಿಟ್ಟರೆ ಆ ನೀರು ಸ್ಥಿರವಾಗಿ ಶುದ್ಧವಾಗಿ ಬಿಡುತ್ತದೆ. ಅದೇ ಪ್ರಕಾರ ಕರ್ಮದ ಕ್ಷಯದಿಂದ ಆಗುವ ಶುದ್ಧ ಆತ್ಮ- ಪರಿಣಾಮವನ್ನು ಜೀವದ ಕ್ಷಾಯಿಕ ಭಾವವೆಂದು ಹೇಳಲಾಗುತ್ತದೆ ಇವುಗಳಲ್ಲಿ ಕೇವಲ ಜ್ಞಾನ-ದರ್ಶನ ಮೊದಲಾದವು ಸಮಾವೇಶಗೊಳ್ಳುತ್ತವೆ ಕರ್ಮಗಳ ಸರ್ವಘಾತೀ ಸ್ಪರ್ಧಕಗಳ ಉದಯ–ಕ್ಷಯ ಮತ್ತು ಸತ್ತಾಗತ ಸರ್ವಘಾತೀ ಸ್ಪರ್ಧಕಗಳ ಉಪಶಮ, ಹಾಗೆಯೇ ದೇಶಘಾತೀ ಸ್ಪರ್ಧಕಗಳ ಉದಯ ಹೊಂದುವಿಕೆಯಿಂದ ಜೀವಕ್ಕೆ ಯಾವ ಪರಿಣಾಮವು ಉಂಟಾಗುತ್ತದೆಯೋ ಅದು ಕ್ಷಾಯೋಪಶಮಿಕ ಭಾವವೆನಿಸುತ್ತದೆ. ಈ ಪರಿಣಾಮವು ಕ್ಷಾಯಿಕ ಮತ್ತು ಔಪಶಮಿಕ ಭಾವಗಳ ಅಪೇಕ್ಷೆಯಿಂದ ಕೆಲವೊಂದು ಮಲಿನತೆಗಾಗಿ ಉಂಟಾಗಿರುತ್ತವೆ. ಯಾವ ಪ್ರಕಾರ ಮಣ್ಣುಗೂಡಿದ ನೀರನ್ನು ಬಟ್ಟೆಯಿಂದ ಶೋಧಿಸಿದ ಮೇಲೆ ಅದರಲ್ಲಿಯ ಮಲವು-ಮಣ್ಣಿನ ಹುಡಿಯು-ಬಹಳಷ್ಟು ದೂರವಾಗುವುದು , ಉಳಿದ ಕೆಲ ಮಣ್ಣಿನಂಶವು ಪಾತ್ರದ ತಳಕ್ಕೆ ಕೂತು ಬಿಡುವುದು , ಕೆಲವು ಭಾಗ ನೀರಿನಲ್ಲಿಯೇ ಕೂಡಿ ಉಳಿದು ಬಿಡುವುದು , ಹೀಗಾಗಿ ಆಗ ನೀರು ಅಲ್ಪ ಮಲಿನತೆಯಿಂದ ಕೂಡಿದ್ದಾಗುತ್ತದೆ. ಇದು ಸಾಮಾನ್ಯ ಮತಿ–ಶ್ರುತ ಜ್ಞಾನ, ಅಣುವ್ರತ ಪಾಲನ ಮೊದಲಾದ ಕ್ಷಾಯೋಪಶಮಿಕ ಭಾವಗಳ ಉದಾಹರಣೆಯಾಗಿದೆ. ಈ ನಾಲ್ಕು ಭಾವಗಳ ಹೊರತಾಗಿ ಜೀವದ ಜೀವತ್ವ, ಭವ್ಯತ್ವ, ಧ್ರುವ್ಯತ್ವ ಮೊದಲಾದ ಸ್ವಾಭಾವಿಕ ಗುಣಗಳು ಪಾರಿಣಾಮಿಕಭಾವವೆನಿಸುತ್ತವೆ.

ಸಾಮಾನ್ಯವಾಗಿ ಈ ಜೀವಗತ ಭಾವಗಳ ಘನಿಷ್ಠ ಸಂಬಂಧವು ಸಮಸ್ತ ಕರ್ಮಗಳ ಕೂಡ ಇದೆ; ಆದರೆ ವಿಶೇಷವಾಗಿ ಮೋಹನೀಯ ಕರ್ಮಗಳ ಕೂಡ ಹೆಚ್ಚಾಗಿದೆ; ಮತ್ತು ಅವುಗಳ ನಾನಾ ಅವಸ್ಥೆಗಳಿಗನುಸರಿಸಿ ಜೀವದ ಆ ಹದಿನಾಲ್ಕು ಆಧ್ಯಾತ್ಮಿಕ ಭೂಮಿಕೆಗಳು ಉತ್ಪನ್ನವಾಗುತ್ತವೆ. ಇವುಗಳಿಗೆ ಗುಣಸ್ಥಾನವೆಂದು ಹೇಳಿದೆ. ಮೋಹನೀಯ ಕರ್ಮದ ಮಿಥ್ಯಾತ್ವ ಪ್ರಕೃತಿಯ ಉದಯದಿಂದ ಜೀವದ ಆ ಸಮಸ್ತ ಮಿಥ್ಯಾಭಾವವು ಉತ್ಪನ್ನವಾಗುತ್ತದೆ. ಅದರಲ್ಲಿ ಹೆಚ್ಚು ಜೀವಗಳು ಅನಾದಿ ಕಾಲದಿಂದ ವಿದ್ಯಮಾನವಾಗಿವೆ. ಇದು ಜೀವದ ಮಿಥ್ಯಾತ್ವವೆಂಬ ಹೆಸರಿನ ಪ್ರಥಮ ಗುಣಸ್ಥಾನವಾಗಿದೆ. ನಿಮಿತ್ತ ಲಭಿಸಿದೊಡನೆ ಯಾವಾಗ ಜೀವಕ್ಕೆ ಔಪಶಮಿಕ, ಕ್ಷಾಯಿಕ ಮತ್ತು ಕ್ಷಾಯೋಪಶಮಿಕ ಭಾವರೂಪ ಸಮ್ಯಕ್ತ್ವದ ಪ್ರಾಪ್ತಿಯು ಆಗುತ್ತದೆಯೋ ಆಗ ಅದು ನಾಲ್ಕನೆಯದಾದ ಸಮ್ಯಕ್ತ್ವವೆಂಬ ಹೆಸರಿನ ಗುಣಸ್ಥಾನದಲ್ಲಿ ಸಮಾವೇಶವಾಗುತ್ತದೆ. ಇವುಗಳಲ್ಲಿ ಕ್ಷಾಯಿಕ ಸಮ್ಯಕ್ತ್ವವಂತೂ ಸ್ಥಾಯಿಯಾಗಿರುತ್ತದೆ. ಔಪಶಮಿಕ ಸಮ್ಯಕ್ತ್ವವು ಅನಿವಾರ್ಯವಾಗಿ ಅಲ್ಪಕಾಲವಿರುವಂಥದು. ಕ್ಷಾಯೋಪಶಮಿಕ ಸಮ್ಯಕ್ತ್ವವು ದೀರ್ಘಾವಧಿಯದೂ ಇರುತ್ತದೆ, ಅಲ್ಪ ಕಾಲೀನವೂ ಇರಬಲ್ಲುದು. ಆದರೆ ಇವುಗಳಲ್ಲಿ ಯಾವುದೇ ಸಮ್ಯಕ್ತ್ವವು ಲಭಿಸಿದರೂ ಕೂಡ ಒಂದು ನಿಯಮಿತ ಕಾಲ ಮರ್ಯಾದೆಯಲ್ಲಿ ಆ ಜೀವವು ನಿಶ್ಚಯವಾಗಿಯೂ ಮೋಕ್ಷಕ್ಕೆ ಅಧಿಕಾರಿಯಾಗುತ್ತದೆ. ಅಂದರೂ ಅದು ಒಂದಿಲ್ಲೊಂದು ದಿನ ಕ್ಷಾಯಿಕ ಸಮ್ಯಕ್ತ್ವವನ್ನು ಪಡೆಯುವುದು ಅನಿವಾರ್ಯವಾಗಿದೆ. ಎಲ್ಲಿಯವರೆಗೆ ಅದು ಅದಕ್ಕೆ ಲಭಿಸುವದಿಲ್ಲವೋ, ಅಲ್ಲಿಯ ವರೆಗೆ ಆ ಜೀವವು ತನ್ನ ಪರಿಣಾಮಗಳಿಗೆ ಅನುಸರಿಸಿ ಮೇಲಿನ ಅಥವಾ ಕೆಳಗಿನ ಗುಣಸ್ಥಾನಗಳಲ್ಲಿ ಏರುತ್ತ ಇಳಿಯುತ್ತ ಇರುತ್ತದೆ. ಒಮ್ಮೆ ಅದು ಸಮ್ಯಕ್ತ್ವದಿಂದ ಚ್ಯುತಗೊಂಡರೆ ಆಗ ಮೂರನೆಯ ಗುಣಸ್ಥಾನಕ್ಕೂ ಇಳಿಯುತ್ತದೆ. ಅದರಲ್ಲಿ ಉಂಟಾಗುವ ಮಿಶ್ರಭಾವದ ಕಾರಣದಿಂದ ಸಮ್ಯಗ್ಮಿಥ್ಯಾತ್ವ ಗುಣಸ್ಥಾನವೆಂದು ಅದಕ್ಕೆ ಹೆಸರು ಎರಡನೆಯ ಗುಣಸ್ಥಾನಕ್ಕೆ ಸಾಸಾದನ ಎಂದು ಹೇಳಲಾಗುತ್ತದೆ; ಯಾಕಂದರೆ ಇದರಲ್ಲಿ ಜೀವವು ಸಮ್ಯಕ್ತ್ವದಿಂದ ಚ್ಯುತವಾಗಿಯೂ ಸಹ ಪೂರ್ಣವಾಗಿ ಮಿಥ್ಯಾತ್ವಭಾವವನ್ನು ಹೊಂದಿರುವುದಿಲ್ಲ; ಮತ್ತು ಅದರಲ್ಲಿ ಸಮ್ಯಕ್ತ್ವದ ಕೆಲವೊಂದು ಆಸ್ವಾದನ (ಅನುಭವನ) ರೂಪುಗೊಂಡಿರುತ್ತದೆ. ಅದು ಯಥಾರ್ಥವಾಗಿಯೂ ನಾಲ್ಕನೆಯ ಗುಣಸ್ಥಾನದಿಂದ ಉರುಳಿ ಪ್ರಥಮ ಸ್ಥಾನಕ್ಕೆ ಹೋಗಿ ತಲುಪುವ ಪೂರ್ವದ ಮಧ್ಯವರ್ತಿ ಅವಸ್ಥೆಯೊಂದು ಇರುತ್ತದೆ. ಅದು ಸ್ವಾಭಾವಿಕವಾಗಿಯೂ ಅತ್ಯಲ್ಪ ಕಾಲಾವಧಿ ಆಗಿರುತ್ತದೆ. ಜೀವವು ಆ ಭಾವದಿಂದ ಹೊರಬಿದ್ದು ಶೀಘ್ರವಾಗಿಯೇ ಪ್ರಥಮ ಮಿಥ್ಯಾತ್ವ ಗುಣಸ್ಥಾನದಲ್ಲಿ ಬಂದು ಬೀಳುತ್ತದೆ.

ಸಮ್ಯಕ್ತ್ವ ಎಂಬ ಹೆಸರಿನ ನಾಲ್ಕನೆಯ ಗುಣಸ್ಥಾನದಲ್ಲಿ ಆತ್ಮ–ಚೇತನಾರೂಪ ಧಾರ್ಮಿಕ ದೃಷ್ಟಿಯಂತೂ ಪ್ರಾಪ್ತವಾಗುತ್ತದೆ. ಯಾಕಂದರೆ ಕಷಾಯಗಳ ಅನಂತಾನುಬಂಧೀ ನಾಲ್ಕು ಪ್ರಕೃತಿಗಳ ಉಪಶಮ, ಕ್ಷಯ ಅಥವಾ ಕ್ಷಯೋಪಶಮ

ಗಳು ಉಂಟಾಗಿಬಿಡುತ್ತವೆ. ಆದರೆ ಅಪ್ರತ್ಯಾಖ್ಯಾನಾವರಣ ಕಷಾಯದ ಉದಯವು ಆಗಿರುತ್ತದೆ. ಆದರಿಂದ ಈ ಗುಣಸ್ಥಾನವು ಅವಿರತ-ಸಮ್ಯಕ್ತ್ವವೆನಿಸುತ್ತದೆ. ಯಾವಾಗ ಈ ಪ್ರಕೃತಿಗಳ ಉಪಶಮಾದಿಗಳು ಉಂಟಾಗುತ್ತವೆಯೋ ಆಗ ಜೀವಕ್ಕೆ ಅಣುವ್ರತ ಧಾರಣ ಮಾಡಲು ಯೋಗ್ಯ ಪರಿಣಾಮವು ಉತ್ಪನ್ನವಾಗುತ್ತದೆ. ಆಗ ಅದು ದೇಶವಿರತ ಮತ್ತು ಸಂಯತಾಸಂಯತ ಎಂಬ ಹೆಸರಿನ ಐದನೆಯ ಗುಣಸ್ಥಾನ ವನ್ನು ಸಂಪಾದಿಸುತ್ತದೆ. ಈ ಗುಣಸ್ಥಾನದ ಸೀಮೆಯು ಅಣುವ್ರತಗಳವರೆಗೆ ಮಾತ್ರವೇ ಇದೆ. ಯಾಕಂದರೆ ಇಲ್ಲಿ ಪ್ರತ್ಯಾಖ್ಯಾನಾವರಣ ಕಷಾಯಗಳ ಉದಯವು ಉಂಟಾಗಿರುತ್ತದೆ. ಯಾವಾಗ ಈ ಕಷಾಯಗಳೂ ಸಹ ಉಪಶಮಾದಿಗಳನ್ನು ಹೊಂದುತ್ತವೆಯೋ ಆಗ ಜೀವದ ಪರಿಣಾಮವು ಮತ್ತೂ ವಿಶುದ್ಧವಾಗಿ ಅದು ಮಹಾ ವ್ರತಗಳನ್ನು ಧಾರಣ ಮಾಡುತ್ತದೆ. ಇದು ಆರನೆಯ ಗುಣಸ್ಥಾನವು. ಇದಕ್ಕಿಂತ ಮೇಲಿನ ಸಮಸ್ತ ಗುಣಸ್ಥಾನಗಳು ಸಾಮಾನ್ಯವಾಗಿ ಸಂಯತ ಎಂದು ಹೇಳಲಾಗು ತ್ತದೆ. ಆದರೆ ಅವುಗಳಲ್ಲಿಯೂ ವಿಶುದ್ಧಿಯ ತರ-ತಮ ಭಾವಗಳು ಕಂಡುಬರುತ್ತವೆ. ಅದಕ್ಕನುಸರಿಸಿ ಆರನೆಯ ಗುಣಸ್ಥಾನವು ಪ್ರಮತ್ತ-ವಿರತವೆನಿಸುತ್ತದೆ. ಯಾಕಂದರೆ ಇದರಲ್ಲಿ ಸಂಯಮ ಭಾವವು ಪೂರ್ಣವಾಗುತ್ತಿದ್ದರೂ ಪ್ರಮಾದರೂಪ ಮಂದ ಕಷಾಯ ಗಳ ಉದಯವಿರುತ್ತದೆ. ಇದಕ್ಕೆ ಕಾರಣವಿಷ್ಟೆ. ಆದರ ಪರಿಣತಿಯು ಸ್ತ್ರೀಕಥಾ, ಚೋರಕಥಾ, ರಾಜಕಥಾ ಮೊದಲಾದ ವಿಕಥೆಗಳ ಕಡೆಗೂ ಇಂದ್ರಿಯ ವಿಷಯಾದಿ ಗಳ ಕಡೆಗೂ ಒಲಿದಿರುತ್ತದೆ. ಯಾಕಂದರೆ ಅದರಲ್ಲಿ ಸಂಜ್ವಲನ ಕಷಾಯದ ಉದಯ ವಿರುತ್ತದೆ. ಯಾವಾಗ ಸಂಜ್ವಲನ ಕಷಾಯವೂ ಕೂಡ ಉಪಶಮವಾಗಿ ಹೋಗು ತ್ತದೆಯೋ ಆಗ ಅದಕ್ಕೆ ಅಪ್ರಮತ್ತಸಂಯತ ಎಂಬ ಹೆಸರಿನ ಏಳನೆಯ ಗುಣ ಸ್ಥಾನದ ಪ್ರಾಪ್ತಿಯಾಗುತ್ತದೆ. ಇಲ್ಲಿಂದ ಮುಂದಿನ ಸಮಸ್ತ ಅವಸ್ಥೆಗಳು ಧ್ಯಾನಕ್ಕೆ ಸಂಬಂಧಿಸಿದವುಗಳಾಗಿವೆ. ಯಾಕಂದರೆ ಧ್ಯಾನಾವಸ್ಥೆಯ ಹೊರತಾಗಿ ಪ್ರಮಾದಗಳ ಅಭಾವವು ಸಂಭವವಿಲ್ಲ. ಈ ಧ್ಯಾನಾವಸ್ಥೆಯಲ್ಲಿ ಯಾವಾಗ ಸಂಯಮಿಯು ಯಥಾ ಪ್ರವೃತ್ತಕರಣ ಅರ್ಥಾತ್ ವಿಶುದ್ಧಿಯ ಪೂರ್ವಪರಂಪರೆಯನ್ನು ಮುಂದರಿಸುತ್ತಾ ನೆಯೋ, ಮತ್ತು ಪ್ರತಿಕ್ಷಣದಲ್ಲಿಯೂ ಶುದ್ಧತರವಾಗುತ್ತ ಇಂಥದೊಂದು ಅಸಾಧಾರಣ ಆಧ್ಯಾತ್ಮಿಕ ವಿಶುದ್ಧಿಯನ್ನು ಹೊಂದುತ್ತಾನೆಯೋ, ಅದು ಈ ಮೊದಲು ಅವನೆಂದೂ ಪಡೆದಿರದಂಥದು ಇರುತ್ತದೆ. ಆಗ ಅವನು ಅಪೂರ್ವಕರಣ ಎಂಬ ಹೆಸರಿನ ಎಂಟ ನೆಯ ಗುಣಸ್ಥಾನವನ್ನು ಹೊಂದುತ್ತಾನೆ. ಈ ಗುಣಸ್ಥಾನದಲ್ಲಿ ಸ್ವಲ್ಪ ಕಾಲ ನಿಂತ ಮೇಲೆ ಧ್ಯಾನಿಯ ಪ್ರತಿ ಸಮಯದ ಒಂದೊಂದು ಪರಿಣಾಮವು ತನ್ನ ತನ್ನ ವಿಶೇಷ ವಿಶುದ್ಧಿಗಾಗಿ ಭಿನ್ನರೂಪವಾಗತೊಡಗುತ್ತದೆ. ಆಗ ಅನಿವೃತ್ತಿಕರಣ ಎಂಬ ಹೆಸರಿನ ಒಂಭತ್ತನೆಯ ಗುಣಸ್ಥಾನವು ಆರಂಭವಾಗುತ್ತದೆ. ಈ ಗುಣಸ್ಥಾನದಲ್ಲಿರುವ ಸಮಸ್ತ ಸಾಧಕರ ಆ ಸಮಯವರ್ತಿ ಪರಿಣಾಮವು ಒಂದೇ ಸ್ವರೂಪದ್ದಾಗಿರುತ್ತದೆ. ಅರ್ಥಾತ್ ಪ್ರಥಮ ಸಮಯ ದಲ್ಲಿರುವ ಸಮಸ್ತ ಧ್ಯಾನಿಗಳ ಪರಿಣಾಮವು ಒಂದೇ ರೀತಿಯಾಗಿರು

ತ್ತದೆ. ಎರಡನೆಯ ಸಮಯದ ಪರಿಣಾಮವು ಮೊದಲ ಸಮಯಕ್ಕಿಂತ ಭಿನ್ನವಾಗಿರುವುದು. ಆದರೆ ಅದೂ ಕೂಡ ಎಲ್ಲ ಧ್ಯಾನಿಗಳಲ್ಲಿಯೂ ಸಮಾನವಾಗಿರುವುದು. ಈ ಪ್ರಕಾರ ಈ ಗುಣಸ್ಥಾನದಲ್ಲಿ ಇರುವ ಕಾಲದಲ್ಲಿ ಎಷ್ಟು ಸಮಯಗಳು ಆಗುತ್ತವೆಯೋ ಅಷ್ಟೇ ಭಿನ್ನ ಪರಿಣಾಮಗಳು ಆಗುವವು. ಅವು ಎಲ್ಲ ಸಾಧಕರಿಗೂ ಅದೇ ಸಮಯದಲ್ಲಿ ಒಂದೇ ಪ್ರಕಾರವಾಗಿರುವವು; ಅನ್ಯ ಸಮಯದಲ್ಲಿ ಅಲ್ಲ. ಈ ಗುಣ ಸ್ಥಾನಕ್ಕೆ ಸಂಬಂಧಿಸಿದ ವಿಶೇಷ ವಿಶುದ್ಧಿಯಿಂದ ಕರ್ಮವು ತೀರ ಉಪಶಮನ ಮತ್ತು ಕ್ಷಯವನ್ನು ಹೊಂದುತ್ತದೆ. ಅದು ಎಷ್ಟೆಂದರೆ ಲೋಭ ಕಷಾಯದ ಅತಿ ಸೂಕ್ಷ್ಮಾಂಶವನ್ನು ಬಿಟ್ಟರೆ ಉಳಿದ ಸಮಸ್ತ ಕಷಾಯಗಳು ಕ್ಷೀಣ ಅಥವಾ ಉಪಶಾಂತವಾಗಿ ಹೋಗಿರುತ್ತವೆ. ಆಗ ಜೀವಕ್ಕೆ ಸೂಕ್ಷ್ಮ ಸಾಂಪರಾಯ ಎಂಬ ಹೆಸರಿನ ಹತ್ತನೆಯ ಗುಣಸ್ಥಾನವು ಪ್ರಾಪ್ತವಾಗಿಬಿಡುತ್ತದೆ. ಇಲ್ಲಿಯ ಆತ್ಮಶುದ್ಧಿಯ ಸ್ವರೂಪವನ್ನು ಹೀಗೆ ಹೇಳಲಾಗಿದೆ— ಕೇಶರದಲ್ಲಿ ರಂಗಿಸಿದ ವಸ್ತ್ರವನ್ನು ನೀರಿನಲ್ಲಿ ತೊಳೆದು ಹಾಕಿದರೂ ಸಹ ಅದರಲ್ಲಿ ಕೇಶರೀ ರಂಗವು ಅತಿ ಸೂಕ್ಷ್ಮವಾಗಿ ಆಭಾಸ ರೂಪದಲ್ಲಿ ಇದ್ದುಬಿಡುತ್ತದೆ. ಅದೇ ಪ್ರಕಾರ ಈ ಗುಣಸ್ಥಾನದಲ್ಲಿರುವವರ ಲೋಭವು ಸಂಜ್ವಲನ ಕಷಾಯದ ಸದ್ಭಾವವಾಗಿರುತ್ತದೆ.

### ಉಪಶಮ ಮತ್ತು ಕ್ಷಪಕ ಶ್ರೇಣಿಗಳು :—

ಏಳನೆಯ ಗುಣಸ್ಥಾನದಿಂದ ಮುಂದೆ ಜೀವವು ಉಪಶಮ ಮತ್ತು ಕ್ಷಪಕ, ಈ ಎರಡು ಶ್ರೇಣಿಗಳ ಮೂಲಕ ಮುಂದಿನ ಗುಣಸ್ಥಾನಗಳಲ್ಲಿ ಮುಂದರಿಯುತ್ತದೆ. ಅದು ಕರ್ಮಗಳ ಉಪಶಮಗೈಯುತ್ತ ಹತ್ತನೆಯ ಗುಣಸ್ಥಾನದವರೆಗೆ ಬಂದಿತೆಂದರೆ ಮುಂದೆದು ಅವಶಿಷ್ಟ ಲೋಭ ಸಂಜ್ವಲನ ಕಷಾಯವನ್ನೂ ಸಹ ಉಪಶಮಗೊಳಿಸಿ, ಉಪಶಾಂತಮೋಹವೆಂಬ ಹೆಸರಿನ ಹನ್ನೊಂದನೆಯ ಗುಣಸ್ಥಾನವನ್ನು ಹೊಂದೀತು. ಅದರಲ್ಲಿ ಕಿಂಚಿತ್ ಕಾಲವಿದ್ದು ನಿಯಮತಃ ಕೆಳಗಿನ ಗುಣ ಸ್ಥಾನದಲ್ಲಿ ಉರುಳುವುದು. ಈ ಪ್ರಕಾರ **ಉಪಶಮ ಶ್ರೇಣಿಯ** ಇದೇ ಚರಮ ಸೀಮೆಯಾಗಿದೆ. ಆದರೆ ಯಾವ ಜೀವವು ಏಳನೆಯ ಗುಣಸ್ಥಾನದಿಂದ **ಕ್ಷಾಯಿಕ ಶ್ರೇಣಿಯ** ಮೂಲಕ ಅರ್ಥಾತ್ ಕರ್ಮಗಳನ್ನು ಕ್ಷಯಗೊಳಿಸುತ್ತ ಮೇಲೇರುತ್ತದೆಯೋ, ಅದು ಹತ್ತನೆಯ ಗುಣ ಸ್ಥಾನದ ತರುವಾಯ ಅದೇ ಉಳಿದ ಲೋಭ ಸಂಜ್ವಲನ ಕಷಾಯದ ಕ್ಷಯವನ್ನು ಮಾಡಿ, ಹನ್ನೊಂದನೆಯ ಗುಣಸ್ಥಾನದಲ್ಲಿ ಹೋಗದೆ, ನೆಟ್ಟಗೆ ಕ್ಷೀಣ ಮೋಹ ಎಂಬ ಹೆಸರಿನ ಹನ್ನೆರಡನೆಯ ಗುಣಸ್ಥಾನವನ್ನು ಸಂಪಾದಿಸುತ್ತದೆ. ಈ ಪ್ರಕಾರ ಹನ್ನೊಂದನೆಯ ಮತ್ತು ಹನ್ನೆರಡನೆಯ ಈ ಎರಡೂ ಗುಣಸ್ಥಾನಗಳಲ್ಲಿ ಮೋಹನೀಯ ಕರ್ಮದ ಅಭಾವದಿಂದ ಉತ್ಪನ್ನವಾದ ಆತ್ಮವಿಶುದ್ಧಿಯ ಮಾತ್ರೆಯು ಒಂದೇ ಆಗಿರುತ್ತದೆ. ಜೀವವು ಪೂರ್ಣತಃ ವೀತರಾಗ ಆಗಿಬಿಡುತ್ತದೆ. ಆದರೆ ಜ್ಞಾನಾವರಣೀಯವೇ ಆದಿ ಕರ್ಮಗಳ ಸದ್ಭಾವದ ಕಾರಣ ಕೇವಲಜ್ಞಾನವು

ಪ್ರಾಪ್ತವಾಗುವುದಿಲ್ಲ. ಅದಕ್ಕಾಗಿಯೇ ಈ ಅವಸ್ಥೆಯನ್ನು ಛದ್ಮಸ್ಥ ವೀತರಾಗ ಎಂದು ಹೇಳಲಾಗುತ್ತದೆ. ಈ ಎರಡೂ ಗುಣಸ್ಥಾನಗಳಲ್ಲಿ ಭೇದವಿಷ್ಟೆ : ಹನ್ನೊಂದನೆಯ ಗುಣಸ್ಥಾನದಲ್ಲಿ ಮೋಹನೀಯ ಕರ್ಮವು ಉಪಶಾಂತ ಅವಸ್ಥೆಯಲ್ಲಿ ಇನ್ನೂ ಶೇಷ ಉಳಿದಿರುತ್ತದೆ. ಅದು ಅಂತರ್ ಮುಹೂರ್ತದಲ್ಲಿ ಪುನಃ ಚೇತರಿಸಿ ಜೀವವನ್ನು ಕೆಳಗಿನ ಗುಣಸ್ಥಾನದಲ್ಲಿ ನುಗಿಸಿಬಿಡುತ್ತದೆ. ಆದರೆ ಹನ್ನೆರಡನೆಯ ಗುಣಸ್ಥಾನದಲ್ಲಿ ಮೋಹವು ಸಂಪೂರ್ಣ ಕ್ಷೀಣವಾಗಿ ಹೋಗಿರುವ ಕಾರಣದಿಂದ ಇಂಥ ಪತನಕ್ಕೆ ಯಾವ ಅವಕಾಶವೂ ಇಲ್ಲ. ಇನ್ನು ಮುಂದೆ ಕೇವಲ ತನ್ನ ಜ್ಞಾನಾವರಣೀ ಮತ್ತು ದರ್ಶನಾವರಣೀ ಕರ್ಮಗಳ ಶೇಷ ಪ್ರಕೃತಿಗಳ ಕ್ಷಯವನ್ನು ಮಾಡಿ ಕೇವಲ ಜ್ಞಾನವನ್ನು ಸಂಪಾದಿಸುವುದು ಮಾತ್ರ ಉಳಿದಿರುತ್ತದೆ. ಈ ಕಾರ್ಯವು ಸಂಪನ್ನವಾದ ಮೇಲೆ ಜೀವಕ್ಕೆ ಸಯೋಗ ಕೇವಲಿ ಎಂಬ ಹೆಸರಿನ ಹದಿಮೂರನೆಯ ಗುಣಸ್ಥಾನವು ಲಭಿಸಿಬಿಡುತ್ತದೆ. ಈ ಗುಣಸ್ಥಾನದಲ್ಲಿರುವ ಜೀವಗಳಿಗೆ ಕೇವಲಜ್ಞಾನವು ಪ್ರಾಪ್ತವಾಗುತ್ತದೆ. ಆ ಜ್ಞಾನದ ಮೂಲಕ ಆ ಜೀವಕ್ಕೆ ವಿಶ್ವದ ಸಮಸ್ತ ವಸ್ತುಗಳ ಪ್ರತ್ಯಕ್ಷ ಜ್ಞಾನವು ಅಂಗೈನೆಲ್ಲಿಯಂತೆ ಆಗಿಬಿಡುತ್ತದೆ. ಈ ಕೇವಲಗಳಲ್ಲಿಯೂ ಎರಡು ಭೇದಗಳಿವೆ. ಒಂದು ಸಾಮಾನ್ಯ ಕೇವಲಿಗಳು. ಇನ್ನೊಂದು ತೀರ್ಥಂಕರ ನಾಮ ಕರ್ಮದ ಉದಯದಿಂದ ಧರ್ಮದ ವ್ಯವಸ್ಥೆಯನ್ನು ಮಾಡುವ ತೀರ್ಥಂಕರರಾಗುವುದು. ಈ ಗುಣ ಸ್ಥಾನದಲ್ಲಿರುವ ಜೀವಗಳಿಗೆ ಇನ್ನೂ ಕೂಡ ಶರೀರದ ಸಂಬಂಧವು ಇರುತ್ತದೆ. ಅಲ್ಲದೆ ನಾಮ, ಗೋತ್ರ, ಆಯು ಮತ್ತು ವೇದನೀಯ ಈ ನಾಲ್ಕು ಅಘಾತಿಯ ಕರ್ಮಗಳ ಉದಯವು ಇರುತ್ತದೆ. ಆದರಿಂದ ಇವರಿಗೆ ಸಯೋಗಿ ಎಂದು ಹೇಳುವುದು ಸಾರ್ಥಕವಾಗಿದೆ. ಯಾವಾಗ ಕೇವಲಿಯ ಆಯುಷ್ಯವು ಸ್ವಲ್ಪ ಮಾತ್ರ ಶೇಷ ಉಳಿದಿದ್ದು, ಅವನ ನಾಮ, ಗೋತ್ರ ಮತ್ತು ವೇದನೀಯ ಈ ಮೂರು ಕರ್ಮಗಳ ಸ್ಥಿತಿಯು ಆಯುಃ ಕರ್ಮಕ್ಕಿಂತ ಹೆಚ್ಚಿಗೆ ಉಳಿದಲ್ಲಿ ಅವನು ಆಗ ಸಮುದ್ಘಾತ-ಕ್ರಿಯೆಯಿಂದ ಆಯು ಪ್ರಮಾಣವನ್ನು ಮಾಡಿಕೊಳ್ಳಲಾಗುತ್ತದೆ. ಈ ಕ್ರಿಯೆಯಲ್ಲಿ ಮೊದಲು ಆತ್ಮ-ಪ್ರದೇಶವನ್ನು ದಂಡ ರೂಪದಿಂದ ಲೋಕಾಗ್ರದವರೆಗೆ ಬೆಳೆಯಿಸಲಾಗುತ್ತದೆ. ಆ ಮೇಲೆ ಎರಡೂ ಮಗ್ಗಲುಗಳಲ್ಲಿ ಹಬ್ಬಿಸಿ ಕಪಾಟರೂಪ ಅಗಲ ಮಾಡಿಕೊಳ್ಳಲಾಗುತ್ತದೆ. ಆ ಮೇಲೆ ಹಿಂದು-ಮುಂದಿನ ಮಗ್ಗಲು ಮತ್ತು ಉಳಿದ ಎರಡು ದಿಸೆಗಳಲ್ಲಿ ಪಸರಿಸಿ ಅದಕ್ಕೆ ಪ್ರತರ ರೂಪವನ್ನು ಕೊಡಲಾಗುತ್ತದೆ. ಕೊನೆಯಲ್ಲಿ ಲೋಕದ ಅವಶಿಷ್ಟ ಕೋಣ ರೂಪ ಭಾಗಗಳಲ್ಲಿ ಪಸರಿಸಿ ಸಮಸ್ತ ಲೋಕವನ್ನು ವ್ಯಾಪಿಸಿ ತುಂಬಿ ನಿಲ್ಲುತ್ತದೆ. ಈ ಕ್ರಿಯೆಗಳು ಒಂದೊಂದು ಸಮಯದಲ್ಲಿಯೇ ಪೂರ್ಣಗೊಂಡು ಬಿಡುತ್ತವೆ. ಇವನ್ನು ಕ್ರಮದಿಂದ ದಂಡ, ಕಪಾಟ ಪ್ರತರ ಮತ್ತು ಲೋಕ ಪೂರಣ ಸಮುದ್ಘಾತಗಳೆಂದು ಹೇಳಲಾಗುತ್ತದೆ. ಉಳಿದ ನಾಲ್ಕು ಸಮಯಗಳಲ್ಲಿ ವಿಪರೀತ ಕ್ರಮದಿಂದ ಆತ್ಮ ಪ್ರದೇಶವನ್ನು ಪುನಃ ಸಂಕೋಚಗೊಳಿಸಿ ಶರೀರ ಪ್ರಮಾಣದಲ್ಲಿ ಮಾಡಿಕೊಳ್ಳಲಾಗುತ್ತದೆ. ಈ ಕ್ರಿಯೆಯಿಂದ ಯಾವ ಪ್ರಕಾರ

ತೊಯ್ದ ವಸ್ತ್ರವನ್ನು ಹರಹುವುದರಿಂದ ಅದರ ಅದ್ರ್ರತೆಯು ಬೇಗನೇ ಆರಿ ಹೋಗುವುದೋ, ಹಾಗೆಯೇ ಆತ್ಮ ಪ್ರದೇಶವನ್ನು ವಿಸ್ತರಿಸುವುದರಿಂದ ಅದರಲ್ಲಿ ಸಂಸಕ್ತ ಕರ್ಮ-ಪ್ರದೇಶಗಳ ಸ್ಥಿತಿಯು ಅನುಭಾಗಾಂಶಗೊಂಡು ಕ್ಷೀಣವಾಗಿ ಆಯುಃಪ್ರಮಾಣವಾಗಿ ಬಿಡುತ್ತವೆ. ಇದರ ತರುವಾಯ ಕೇವಲಿಯು ಕಾಯಯೋಗದಿಂದಲೂ ಮುಕ್ತನಾಗಿ, ಅಯೋಗಿ ಕೇವಲೀ ಎಂಬ ಹೆಸರಿನ ಹದಿನಾಲ್ಕನೆಯ ಗುಣಸ್ಥಾನವನ್ನು ಹೊಂದುತ್ತಾನೆ. ಈ ಅಷ್ಟಕರ್ಮ-ವಿಮುಕ್ತ ಸರ್ವೋತ್ಕೃಷ್ಟ ಸಾಂಸಾರಿಕ ಅವಸ್ಥೆಯ ಕಾಲವು ಅತಿ ಸ್ವಲ್ಪ ಕೆಲವೊಂದು ಸಮಯ ಮಾತ್ರ ಇರುತ್ತದೆ. ಇದನ್ನು ಪೂರ್ಣಗೊಳಿಸಿ ಜೀವವು ತನ್ನ ಶುದ್ಧ, ಶಾಶ್ವತ, ಅನಂತ ಜ್ಞಾನ-ದರ್ಶನ- ಸುಖ ಮತ್ತು ವೀರ್ಯಗಳಿಂದ ಯುಕ್ತನಾಗಿ, ಪರಮ ಅವಸ್ಥೆಯನ್ನು ಸಂಪಾದಿಸಿ, ಸಿದ್ಧನಾಗಿ ಹೋಗುತ್ತಾನೆ.

> ಸಮ್ಯಗ್ಜ್ಞಾನತ್ರಯೇಣ ಪ್ರವಿದಿತ-ನಿಖಿಲಜ್ಞೇಯತತ್ತ್ವಪ್ರಪಂಚಾಃ
> ಪ್ರೋದ್ಧೂಯ ಧ್ಯಾನವಾತೈಃ ಸಕಲಮಥ ರಜಃ ಪ್ರಾಪ್ತಕೈವಲ್ಯರೂಪಾಃ ।
> ಕೃತ್ವಾ ಸತ್ವೋಪಕಾರಂ ತ್ರಿಭುವನ ಪತಿಭಿರ್ದತ್ತಯಾತ್ರೋತ್ಸವಾ ಯೇ
> ತೇ ಸಿದ್ಧಾಃ ಸಂತು ಲೋಕತ್ರಯಶಿಖರಪುರೀವಾಸಿನಃ ಸಿದ್ಧಯೇ ವಃ ॥

ವ್ಯಾಖ್ಯಾನ—೪

# ಜೈನ ಕಲೆ

## ಜೀವನ ಮತ್ತು ಕಲೆ :—

ಜೈನ ತತ್ವಜ್ಞಾನದ ಸಂಬಂಧದಲ್ಲಿ ಈಗಾಗಲೇ ಹೇಳಲಾಗಿದೆಯಷ್ಟೆ. ಜೀವದ ಲಕ್ಷಣವು ಉಪಯೋಗವಾಗಿದೆ. ಆ ಉಪಯೋಗದಲ್ಲಿ ಎರಡು ಪ್ರಕಾರಗಳಿವೆ. ಒಂದು ಜೀವನಿಗೆ ತನ್ನ ಸತ್ತೆಯ ಎಚ್ಚರಿಸುತ್ತದೆ. ಅದೇ ನಾನಿದ್ದೇನೆ ಎಂಬುದು. ಎರಡನೆಯದು ತನ್ನ ಸುತ್ತಲೂ ಅನ್ಯ ಪದಾರ್ಥಗಳೂ ಸಹ ಇವೆ ಎಂಬ ಅರಿವೂ ಕೂಡ ಅದಕ್ಕೆ ಇರುತ್ತದೆ. ಪ್ರಕೃತಿಯ ಈ ಅನ್ಯ ಪದಾರ್ಥಗಳು ಅದಕ್ಕೆ ನಾನಾ ಪ್ರಕಾರಗಳಿಂದ ಉಪಯೋಗವುಳ್ಳವುಗಳೆಂದು ಸಿದ್ಧವಾಗುತ್ತದೆ. ಕೆಲವೊಂದು ಪದಾರ್ಥಗಳು ಆಹಾರಗಳಿಂದಾಗಿ ಅದರ ಶರೀರವನ್ನು ಪೋಷಿಸುತ್ತವೆ. ಇನ್ನೂ ಹಲವಾರು ಪದಾರ್ಥಗಳು ವೃಕ್ಷ, ಪರ್ವತ, ಗುಹೆ ಮೊದಲಾದವುಗಳು ಪ್ರಕೃತಿಯ ವಿಪರೀತ ಶಕ್ತಿಗಳಾದ ಬಿರುಗಾಳಿ, ಮಳೆ, ಬಿಸಿಲಾದಿಗಳಿಂದ ರಕ್ಷಿಸುತ್ತವೆ, ಆಶ್ರಯವನ್ನೂ ಕೊಡುತ್ತವೆ. ಉಳಿದ ಜೀವಗಳಲ್ಲಿ, ಪಶು ಪಕ್ಷಿ ಮೊದಲಾದವುಗಳಂಥವು ಪ್ರಕೃತಿಯ ಪದಾರ್ಥಗಳನ್ನು ಜೀವಿಸಲಿಕ್ಕೆ ಬೇಕಾಗುವಷ್ಟನ್ನು ಮಾತ್ರ ಉಪಯೋಗಿಸುತ್ತವೆ. ಆದರೆ ಮನುಷ್ಯನು ತನ್ನ ಜ್ಞಾನ-ಶಕ್ತಿಯ ಕಾರಣದಿಂದ ಅವುಗಳಿಗಿಂತ ಕೆಲವೊಂದು ವಿಶೇಷತೆಗಳನ್ನು ಹೊಂದಿರುತ್ತಾನೆ. ಮನುಷ್ಯನಲ್ಲಿ ಜಿಜ್ಞಾಸೆಯು ಉಂಟಾಗುತ್ತದೆ. ಅವನು ಪ್ರಕೃತಿಯನ್ನು ವಿಶೇಷರೂಪದಿಂದ ತಿಳಿದುಕೊಳ್ಳಲಿಕ್ಕೆ ಇಚ್ಛಿಸುತ್ತಾನೆ. ಇದೇ ಜ್ಞಾನ ಗುಣದ ಕಾರಣದಿಂದ ಅವನಿಗೆ ಪ್ರಕೃತಿಯ ಮೇಲೆ ವಿಶೇಷ ಅಧಿಕಾರವನ್ನು ಸಂಪಾದಿಸಿರುತ್ತಾನೆ. ವಿಜ್ಞಾನ ಮತ್ತು ದರ್ಶನ ಶಾಸ್ತ್ರಗಳ ವಿಕಾಸವನ್ನು ಮಾಡಿಕೊಂಡಿದ್ದಾನೆ. ಮನುಷ್ಯನಲ್ಲಿ ಕೆಡಕು ಹಾಗೂ ಒಳ್ಳೆಯದರ ವಿವೇಕ ಇರುವುದೊಂದು ಎರಡನೆಯ ವಿಶೇಷ ಗುಣವಾಗಿದೆ. ಇದೇ ಗುಣದ ಪ್ರೇರಣೆಯಿಂದ ಅವನು ಧರ್ಮ, ನೀತಿ ಮತ್ತು ಸದಾಚಾರಗಳ ನಿಯಮಗಳನ್ನೂ ಆದರ್ಶಗಳನ್ನೂ ಸ್ಥಾಪಿಸಿಕೊಂಡಿದ್ದಾನೆ. ಈ ಆದರ್ಶಗಳಿಗನುಸರಿಸಿಯೇ ಜೀವನವನ್ನು ನಿರ್ಮಲ ಹಾಗೂ ಸುಸಂಸ್ಕೃತ ಮಾಡಿಕೊಳ್ಳಲಿಕ್ಕೆ ಪ್ರಯತ್ನಿಸುತ್ತಾನೆ. ಇದೇ ಕಾರಣದಿಂದ ಮಾನವ ಸಮಾಜವು ದಿನ ದಿನಕ್ಕೆ ಸಭ್ಯವಾಗುತ್ತ ನಡೆದಿದೆ. ಇದರಿಂದ ಪ್ರಪಂಚದಲ್ಲಿ ವಿವಿಧ ಮಾನವ ಸಂಸ್ಕೃತಿಗಳು ಅರಳಿ ನಿಂತಿವೆ. ಮನುಷ್ಯನ ಮೂರನೆಯ ವಿಶೇಷ ಗುಣವು ಸೌಂದರ್ಯದ ಉಪಾಸನೆಯಾಗಿದೆ. ತನ್ನ ಪೋಷಣೆ ಹಾಗೂ ರಕ್ಷಣೆಗಳಿಗಾಗಿ ಮನುಷ್ಯನು ಯಾವ ಪದಾರ್ಥಗಳನ್ನು ಸ್ವೀಕರಿಸುತ್ತಾನೆಯೋ ಮತ್ತು ರಕ್ಷಿಸುತ್ತಾನೆಯೋ ಅವುಗಳನ್ನು ಅವನು ಉತ್ತರೋತ್ತರ ಸುಂದರಗೊಳಿಸಲಿಕ್ಕೆ ಸಹ ಪ್ರಯತ್ನಿಸುತ್ತಾನೆ. ಅವನು ತನ್ನ

ತಿನ್ನುವ ಪದಾರ್ಥಗಳನ್ನು ತಯಾರಿಸಿಕೊಂಡು ಶಿಸ್ತಿನಿಂದ ಸುಂದರ ತರವಾಗಿ ತಿನ್ನುವುದರಲ್ಲಿ ಸಂತೋಷವನ್ನು ಹೊಂದುತ್ತಾನೆ. ಪ್ರಾರಂಭದಲ್ಲಿ ಅವನು ಚಳಿ, ಮಳೆ, ಬಿಸಿಲುಗಳಿಂದ ರಕ್ಷಿಸಿಕೊಳ್ಳುವುದಕ್ಕಾಗಿ ನಾರಿನ ಬಟ್ಟೆ. ಚರ್ಮ ಮೊದಲಾದವುಗಳನ್ನು ಶರೀರಾಚ್ಛಾದನೆಗಳಿಗಾಗಿ ಸ್ವೀಕರಿಸಿದನು. ಅವುಗಳಲ್ಲಿ ಕ್ರಮದಿಂದ ಪರಿಷ್ಕಾರ ಮಾಡುತ್ತ ಮಾಡುತ್ತ ವಿವಿಧ ಪ್ರಕಾರದ ನೂಲಿನ, ಉಣ್ಣೆಯ, ರೇಶಿಮೆಯ ವಸ್ತ್ರಗಳನ್ನು ಸಿದ್ಧಗೊಳಿಸತೊಡಗಿದನು. ಅವುಗಳನ್ನು ನಾನಾ ರೀತಿಯಿಂದ ಕತ್ತರಿಸಿ, ಹೊಲಿದು ಸುಂದರವಾದ ವೇಷ-ಭೂಷಣಗಳನ್ನು ನಿರ್ಮಾಣಮಾಡಿಕೊಂಡನು. ಆದರೆ ಗೃಹನಿರ್ಮಾಣ, ಮೂರ್ತಿ ನಿರ್ಮಾಣ, ಚಿತ್ರನಿರ್ಮಾಣ ಅದರಂತೆ ಸಂಗೀತ ಮತ್ತು ಕಾವ್ಯ ಕೃತಿಗಳು ಇವೇ ಮೊದಲಾದವುಗಳಲ್ಲಿ ಮಾನವನ ಸೌಂದರ್ಯೋಪಾಸನೆಯು ಚರಮ ಸೀಮೆಯನ್ನು ತಲುಪಿರುತ್ತದೆ. ಅಲ್ಲದೆ ಮಾನವೀಯ ಸಭ್ಯತೆಯ ವಿಕಾಸದಲ್ಲಿ ವಿಶೇಷ ಸಹಾಯಕವಾಗಿದೆ. ಈ ಐದೂ ಕಲೆಗಳ ಪ್ರಾರಂಭವು ಮಾನವ ಜೀವನದ ಉಪಯುಕ್ತತೆಗೆಂದೇ ಆಗಿದೆ. ಮನುಷ್ಯನು ಪ್ರಾಕೃತಿಕ ಗುಹೆಗಳಲ್ಲಿ ವಾಸಿಸುತ್ತ-ವಾಸಿಸುತ್ತ ಕ್ರಮದಿಂದ ಆಶ್ರಯಕ್ಕೆಂದು ಕಟ್ಟಿಗೆ, ಮಣ್ಣು ಮತ್ತು ಕಲ್ಲುಗಳಿಂದ ಮನೆಯನ್ನು ನಿರ್ಮಿಸಿಕೊಂಡನು. ತನ್ನ ಪೂರ್ವಜರ ನೆನಪನ್ನು ಕಾಯ್ದುಕೊಳ್ಳುವುದಕ್ಕಾಗಿ ಪ್ರಾರಂಭದಲ್ಲಿ ನಿರಾಕಾರ ಮತ್ತು ಮುಂದೆ ಸಾಕಾರ ಕಲ್ಲು ಮೊದಲಾದವುಗಳನ್ನು ಸ್ಥಾಪಿಸಿದನು. ತನ್ನ ಅನುಭವಗಳ ಸ್ಮೃತಿಗಾಗಿ ರೇಖಾಚಿತ್ರಗಳನ್ನು ಎಳೆದನು. ತನ್ನ ಮಕ್ಕಳನ್ನು ಸಮಾಧಾನಪಡಿಸಲಿಕ್ಕೆಂದು ಅಲ್ಲದೆ ಅವರ ಮನಸ್ಸಿಗೆ ಆನಂದವನ್ನುಂಟುಮಾಡಲು ಗೀತಗಳನ್ನು ಹಾಡಿದನು; ಕುಣಿದಾಡಿದನು ; ಕಥೆಗಳನ್ನು ಹೇಳಿದನು. ಆದರೆ ಈ ಪ್ರವೃತ್ತಿಗಳಲ್ಲಿ ಅವನು ದಿನದಿನಕ್ಕೆ ಬಹಳಷ್ಟು ಪ್ರಗತಿಯನ್ನು ಸಾಧಿಸಿದನು. ಕಾಲಾಂತರದಲ್ಲಿ ಅವುಗಳ ಭೌತಿಕ ಉಪಯೋಗಕ್ಕಿಂತ ಅವುಗಳ ಸೌಂದರ್ಯದ ಪಕ್ಷವೇ ಹೆಚ್ಚು ಪ್ರಮುಖ ಹಾಗೂ ಪ್ರಬಲವಾಗುವಂತಾಯಿತು. ಈ ಪ್ರಕಾರ ಆ ಉಪಯುಕ್ತ ಕಲೆಗಳು ಲಲಿತಕಲೆಗಳ ರೂಪವನ್ನು ಧರಿಸಿಕೊಂಡುವು. ಮತ್ತು ಯಾವುದೇ ದೇಶದ ಮತ್ತು ಸಮಾಜದ ಸಭ್ಯತೆ ಹಾಗೂ ಸಂಸ್ಕೃತಿಗಳಿಗೆ ಇವೇ ಅನಿವಾರ್ಯ ಪ್ರತೀಕಗಳೆಂದು ಮನ್ನಿಸುತ್ತ ನಡೆದರು. ಬೇರೆ ಬೇರೆ ದೇಶ, ಸಮಾಜ ಮತ್ತು ಧರ್ಮಗಳ ಇತಿಹಾಸವನ್ನು ಪೂರ್ಣವಾಗಿ ತಿಳಿದುಕೊಳ್ಳಲಿಕ್ಕೆಂದು ಅವುಗಳ ಆಶ್ರಯದಲ್ಲಿರುವ ಈ ಕಲೆಗಳ ವಿಕಾಸದ ಇತಿಹಾಸವನ್ನು ತಿಳಿಯುವುದು ಅವಶ್ಯವೆಂದು ಕಂಡು ಬಂತು.

ಮೇಲೆ ಹೇಳಿದ ಸಂಗತಿಗಳಿಂದ ಒಂದು ಸಂಗತಿಯು ಸ್ಪಷ್ಟವಾಗುತ್ತದೆ. ಕಲೆಯ ಮೌಲಿಕ ಪ್ರೇರಣೆಯು ಮನುಷ್ಯನ ಜಿಜ್ಞಾಸೆಯಂತೆಯೇ ಸೌಂದರ್ಯದ ಇಚ್ಛಾರೂಪ ಅವನ ಸ್ವಾಭಾವಿಕ ವೃತ್ತಿಯೂ ಇರುತ್ತದೆ. ಇದರಿಂದ ಕಲೆಯ ಧ್ಯೇಯ ಕಲೆಯೇ ಇದೆ ಎಂದೂ ಕೂಡ ಹೇಳಲಾಗುತ್ತಿದೆ. ಆದರೆ ಮೇಲೆ ಹೇಳಿದ ಪ್ರಾಕೃತಿಕ ಸೌಂದರ್ಯ-ವೃತ್ತಿಗಳು ತಮ್ಮ ಅಭಿವ್ಯಕ್ತಿಗಾಗಿ ಯಾವ ಆಲಂಬನಗಳನ್ನು ಗ್ರಹಣ

ಮಾಡಿರುವವೋ, ಅವುಗಳ ಪ್ರಕಾಶಗಳಲ್ಲಿ ಕಲೆಯ ಧ್ಯೇಯವು ಜೀವನದ ಉತ್ಕರ್ಷವೆಂದೂ ಸಹ ಹೇಳಲಾಗುತ್ತದೆ. ಈ ಸಂಗತಿಯು ಸಾಮಾನ್ಯವಾಗಿ ಭಾರತೀಯ, ಅದರಲ್ಲೂ ವಿಶೇಷರೂಪದಿಂದ ಜೈನ ಕಲಾಕೃತಿಗಳ ಅಧ್ಯಯನದಿಂದ ಸ್ಪಷ್ಟವಾಗಿಬಿಡುತ್ತದೆ. ಇಲ್ಲಿಯ ಕಲೆಗಾರನು ಯಾವಾಗಲೂ ಸಹ ಪ್ರಕೃತಿಯ ಪ್ರತಿಬಿಂಬವನ್ನು ಇದ್ದುದು ಇದ್ದ ಹಾಗೆಯೇ ಇಡಲು ಎಂದೂ ಇಚ್ಛಿಸಿಲ್ಲ. ಅಷ್ಟರಲ್ಲಿಯೇ ಅವನು ಸಂತುಷ್ಟಿಯನ್ನು ಹೊಂದಿಲ್ಲ. ಅವನು ಯಾವಾಗಲೂ ತನ್ನ ಕಲಾಕೃತಿಯಿಂದ ಮನುಷ್ಯನ ಭಾವನೆಯ ಪರಿಷ್ಕಾರವೂ ಉತ್ಕರ್ಷವೂ ಆಗುವಂತೆ ಸತತ ಪ್ರಯತ್ನಿಸುತ್ತಿದ್ದಾನೆ. ಅವನ ಕಲಾಕೃತಿಯಲ್ಲಿ ಎಲ್ಲಿಯಾದರೂ ಕೆಲವೊಂದು ಧರ್ಮ ಇಲ್ಲವೆ ನೀತಿಯ ಉಪದೇಶವು ಸ್ಪಷ್ಟವಾಗಿಯಾಗಲಿ, ಅಸ್ಪಷ್ಟವಾಗಿಯಾಗಲಿ ಹುದುಗಿಕೊಂಡಿರುತ್ತದೆ. ಇದೇ ಕಾರಣದಿಂದಾಗಿ ಇಲ್ಲಿಯ ಎಲ್ಲ ಕಲಾಕೃತಿಗಳೂ ಧರ್ಮದ ಆಶ್ರಯದಲ್ಲಿ ಬೆಳೆದುವು, ಹಾಗೂ ಪುಷ್ಟಿಯನ್ನು ಹೊಂದಿದವು. ಯುನಾನಿಯ ಕಲಾಕಾರರು ಪ್ರಕೃತಿಯ ಯಥಾರ್ಥ ಪ್ರತಿಬಿಂಬದಲ್ಲಿಯೇ ತಮ್ಮ ಕಲೆಯ ಸಫಲತೆಯನ್ನು ಮನ್ನಿಸುತ್ತಾರೆ. ಆದರಿಂದ ಅವರ ಕಲೆಯನ್ನು ನಾವು ಪೂರ್ಣವಾಗಿ ಆದಿಭೌತಿಕ ಮತ್ತು ಧರ್ಮ ನಿರಪೇಕ್ಷವೆಂದು ಹೇಳುತ್ತೇವೆ. ಆದರೆ ಭಾರತೀಯ ಕಲಾಕಾರರು ಪ್ರಕೃತಿಯ ಈ ಯಾಂತ್ರಿಕ (ಫೋಟೋಗ್ರಾಫಿಕ) ಚಿತ್ರಣ ಮಾತ್ರದಿಂದ ತಮ್ಮ ಕಲೆಯ ಆದರ್ಶದ ದೃಷ್ಟಿಯು ಪೂರ್ಣ ಸಫಲತೆಯನ್ನು ಹೊಂದಿತೆಂದು ತಿಳಿಯುವುದಿಲ್ಲ. ಅವರ ಅಭಿಪ್ರಾಯದ ಪ್ರಕಾರ ಅವರ ಕಲಾಕೃತಿಯಿಂದ ದರ್ಶಕನು ಏನನ್ನೂ ಕಲಿಯದೆ ಇದ್ದರೆ, ತಿಳಿಯದೆ ಇದ್ದರೆ, ಕೆಲವೊಂದು ಧಾರ್ಮಿಕ, ನೈತಿಕ ಮತ್ತು ಭಾವಾತ್ಮಕ ಉಪದೇಶವನ್ನು ಹೊಂದದಿದ್ದರೆ ಆ ಕೃತಿಯ ಪ್ರಯೋಜನವಾದರೂ ಏನು ? ಲಾಭವಾದರೂ ಏನು ? ಈ ಜನ-ಕಲ್ಯಾಣ ಭಾವನೆಯ ಫಲ-ಸ್ವರೂಪವಾಗಿಯೇ ನಮ್ಮ ಕಲಾಕೃತಿಗಳಲ್ಲಿ ನೈಸರ್ಗಿಕತೆಯನ್ನುಳಿದು ಮತ್ತೇನಾದರೂ ಕಾಣಲಿಕ್ಕೆ ಸಿಕ್ಕುತ್ತದೆ. ಅದಕ್ಕೆ ನಾವು ಕಲಾತ್ಮಕ ಅತಿಶಯೋಕ್ತಿ ಎಂದು ಹೇಳುತ್ತೇವೆ. ಸ್ಥಾಪತ್ಯದ ಕೃತಿಗಳಲ್ಲಿ ನಮ್ಮ ಕಲೆಗಾರರು ತಮ್ಮ ದಿವ್ಯ ವಿಮಾನದ ಕಲ್ಪನೆಯನ್ನು ಸಾರ್ಥಕಗೊಳಿಸಲು ಇಚ್ಛಿಸುತ್ತಾರೆ. ದೇವರ ಮೂರ್ತಿಗಳಲ್ಲಿಯಂತೂ ಅವರು ದಿವ್ಯತೆಯನ್ನೇ ತುಂಬುತ್ತಾರೆ. ಮಾನವ ಮೂರ್ತಿಗಳಲ್ಲಿ ಹಾಗೂ ಚಿತ್ರಗಳಲ್ಲಿಯೂ ಅವರು ಆಧ್ಯಾತ್ಮಿಕ ಉತ್ಕರ್ಷದ ಆರೋಪವನ್ನು ಮಾಡಲು ಪ್ರಯತ್ನಿಸಿದ್ದಾರೆ. ಪಶು-ಪಕ್ಷಿ ಮತ್ತು ವೃಕ್ಷಾದಿಗಳ ಚಿತ್ರಣವು ಯಥಾವತ್ತಾಗಿ ಇರುತ್ತಿದ್ದರೂ ಅವುಗಳಿಗೆ ಒಂದು ವಿಶಿಷ್ಟ ಭೂಮಿಕೆಯನ್ನು ರೂಪಿಸಿರುತ್ತಾರೆ. ಆದರಿಂದ ಕೆಲವೊಂದು ಶ್ರದ್ಧೆ, ಭಾವ ಶುದ್ಧಿ ಮತ್ತು ನೈತಿಕ ಪರಿಷ್ಕಾರಗಳು ಉತ್ಪನ್ನವಾಗುತ್ತವೆ. ಈ ಪ್ರಕಾರ ಜೈನ ಕಲೆಯ ಉದ್ದೇಶವು ಜೀವನದ ಉತ್ಕರ್ಷಣವಾಗಿದೆ. ಅದರ ಸಮಸ್ತ ಪ್ರೇರಣೆಯು ಧಾರ್ಮಿಕವಾಗಿದೆ. ಅವರು ಕಲೆಯಿಂದ ಜೈನ ತತ್ವಜ್ಞಾನ ಮತ್ತು ಆಚಾರಗಳ ಆದರ್ಶಕ್ಕೆ ಮೂರ್ತಿಮಾನ್ ರೂಪ ಕೊಡಲು ಪ್ರಯತ್ನ ಮಾಡಿದ್ದಾರೆ.

**ಕಲೆಯ ಭೇದ-ಪ್ರಭೇದಗಳು :—**

ಪ್ರಾಚೀನತಮ ಜೈನ ಆಗಮಗಳಲ್ಲಿ ಬಾಲಕರಿಗೆ ಅವರ ಶಿಕ್ಷಣ-ಕಾಲದಲ್ಲಿ ಶಿಲ್ಪ ಮತ್ತು ಕಲೆಗಳ ಶಿಕ್ಷಣಕ್ಕೆ ಹೆಚ್ಚು ಮಹತ್ವವನ್ನಿತ್ತುದು ಕಂಡು ಬರುತ್ತದೆ. ಅಲ್ಲದೆ ಅವುಗಳನ್ನು ಕಲಿಸುವಂಥ ಕಲಾಚಾರ್ಯರ ಹಾಗೂ ಶಿಲ್ಪಾಚಾರ್ಯರ ಉಲ್ಲೇಖವು ಬೇರೆ ಬೇರೆಯಾಗಿ ಲಭಿಸುತ್ತದೆ. ಗೃಹಸ್ಥರಿಗಾಗಿ ಹೇಳಿದ ಷಟ್‌ಕರ್ಮಗಳಲ್ಲಿ ಅಸಿ, ಮಸಿ, ಕೃಷಿ, ವಿದ್ಯಾ ಮತ್ತು ವಾಣಿಜ್ಯಗಳನ್ನು ಹೇಳಿ ಶಿಲ್ಪವನ್ನು ವಿಶೇಷ ರೂಪದಿಂದ ಉಲ್ಲೇಖಿಸಲಾಗಿದೆ. ಜೈನ ಸಾಹಿತ್ಯದಲ್ಲಿ ಅಲ್ಲಲ್ಲಿ ಎಪ್ಪತ್ತೆರಡು ಕಲೆಗಳ ಉಲ್ಲೇಖವು ಕಂಡು ಬರುತ್ತದೆ. ಸಮವಾಯಾಂಗ ಸೂತ್ರಕ್ಕೆ ಅನುಸರಿಸಿ ಎಪ್ಪತ್ತೆರಡು ಕಲೆಗಳ ಹೆಸರುಗಳು ಹೀಗಿವೆ:— ೧. ಲೇಖ, ೨. ಗಣಿತ, ೩. ರೂಪ, ೪. ನೃತ್ಯ, ೫. ಗೀತ, ೬. ವಾದ್ಯ, ೭. ಸ್ವರಗತ, ೮. ಪುಷ್ಕರಗತ, ೯. ಸಮತಾಲ, ೧೦. ದ್ಯೂತ, ೧೧. ಜನವಾದ, ೧೨. ಪೋಕ್ಖಚ್ಚಂ, ೧೩. ಅಷ್ಟಾಪದ, ೧೪. ದಗಮಟ್ಟಿಯ (ಉದಕಮೃತ್ತಿಕಾ), ೧೫. ಅನ್ನವಿಧಿ, ೧೬. ಪಾನವಿಧಿ, ೧೭. ವಸ್ತ್ರವಿಧಿ, ೧೮. ಶಯನವಿಧಿ, ೧೯. ಅಜ್ಜಂ (ಆರ್ಯಾ), ೨೦. ಪ್ರಹೇಲಿಕಾ, ೨೧. ಮಾಗಧಿಕಾ, ೨೨. ಗಾಥಾ, ೨೩. ಶ್ಲೋಕ, ೨೪. ಗಂಧಯುಕ್ತಿ, ೨೫. ಮಧುಸಿಕ್ಥ, ೨೬. ಆಭರಣವಿಧಿ, ೨೭. ತರುಣೀ-ಪ್ರತಿಕರ್ಮ, ೨೮. ಸ್ತ್ರೀಲಕ್ಷಣ, ೨೯. ಪುರುಷಲಕ್ಷಣ, ೩೦. ಹಯಲಕ್ಷಣ, ೩೧. ಗಜಲಕ್ಷಣ, ೩೨. ಗೋಣ (ವೃಷಭ ಲಕ್ಷಣ), ೩೩. ಕುಕ್ಕುಟ ಲಕ್ಷಣ, ೩೪. ಮೇಂಢಾ ಲಕ್ಷಣ, ೩೫ ಚಿತ್ರಲಕ್ಷಣ, ೩೬. ಛತ್ರಲಕ್ಷಣ, ೩೭. ದಂಡಲಕ್ಷಣ, ೩೮. ಅಸಿಲಕ್ಷಣ, ೩೯. ಮಣಿಲಕ್ಷಣ, ೪೦. ಕಾಕಣಿಲಕ್ಷಣ, ೪೧. ಚರ್ಮಲಕ್ಷಣ, ೪೨. ಚಂದ್ರಲಕ್ಷಣ, ೪೩. ಸೂರ್ಯಚರಿತ, ೪೪. ರಾಹುಚರಿತ, ೪೫. ಗ್ರಹಚರಿತ, ೪೬. ಸೌಭಾಗ್ಯಕರ, ೪೭. ದುರ್ಭಾಗ್ಯಕರ, ೪೮. ವಿದ್ಯಾಗತ, ೪೯. ಮಂತ್ರಗತ, ೫೦. ರಹಸ್ಯಗತ, ೫೧. ಸಮಾಸ, ೫೨. ಚಾರ, ೫೩ ಪ್ರತಿಚಾರ, ೫೪. ವ್ಯೂಹ, ೫೫. ಪ್ರತಿವ್ಯೂಹ, ೫೬. ಸ್ಕಂಧಾವಾರಮಾನ, ೫೭. ನಗರಮಾನ, ೫೮. ವಾಸ್ತುಮಾನ, ೫೯. ಸ್ಕಂಧಾವಾರನಿವೇಶ, ೬೦. ವಾಸ್ತುನಿವೇಶ, ೬೧ ನಗರನಿವೇಶ, ೬೨. ಈಸತ್ಥಂ (ಈಷ್ವಸ್ತ್ರಂ), ೬೩. ಛರುಪ್ಪವಾಯಂ (ತ್ಸರುಪ್ರವಾದ್), ೬೪. ಅಶ್ವಶಿಕ್ಷಾ, ೬೫. ಹಸ್ತಿಶಿಕ್ಷಾ, ೬೬. ಧನುರ್ವೇದ, ೬೭. ಹಿರಣ್ಯಪಾಕ, ಸುವರ್ಣಪಾಕ, ಮಣಿಪಾಕ, ಧಾತುಪಾಕ, ೬೮. ಬಾಹುಯುದ್ಧ, ದಂಡಯುದ್ಧ, ಮುಷ್ಟಿಯುದ್ಧ, ಯಷ್ಟಿ-ಯುದ್ಧ, ಯುದ್ಧ, ನಿಯುದ್ಧ, ಜುದ್ಧಾಇಜುದ್ಧಾ, ೬೯. ಸೂತ್ರಕ್ರೀಡಾ, ನಾಲಿಕಾಕ್ರೀಡಾ, ವೃತ್ತಕ್ರೀಡಾ, ಧರ್ಮಕ್ರೀಡಾ, ಚರ್ಮಕ್ರೀಡಾ, ೭೦. ಪತ್ರಛೇದ್ಯ, ಕಟಕಛೇದ್ಯ, ೭೧. ಸಜೀವ-ನಿರ್ಜೀವ, ೭೨. ಶಕುನರುತ.

೧. ಲೇಖ ಎಂಬುದರ ಅರ್ಥವು ಅಕ್ಷರವಿನ್ಯಾಸ ಎಂದಿದೆ. ಈ ಕಲೆಯಲ್ಲಿ ಲಿಪಿ ಹಾಗೂ ಲೇಖದ ವಿಷಯ ಈ ಎರಡು ಸಂಗತಿಗಳ ವಿಚಾರ ಮಾಡಲಾಗಿದೆ. ಲಿಪಿಗಳು ದೇಶ ಭೇದಗಳಿಗೆ ಅನುಸರಿಸಿ ಹದಿನೆಂಟು ಪ್ರಕಾರದವುಗಳೆಂದು ಹೇಳಲಾಗಿದೆ. ಅವು

ಗಳ ಹೆಸರುಗಳು ಹೀಗಿವೆ :—೧. ಬ್ರಾಹ್ಮೀ, ೨. ಜವಣಾಲಿಯಾ, ೩. ದೋಸಾ ಊರಿಯಾ, ೪. ಖರೋಷ್ಟಿಕಾ, ೫. ಖರಸಾವಿಯಾ, ೬. ಪಹಾರಾ ಇಯಾ, ೭. ಉಚ್ಚತ್ತರಿಯಾ, ೮. ಅಕ್ಖರಮುಟ್ಠಿಯಾ, ೯. ಭೋಗವ ಇಯಾ, ೧೦. ವೆಣತಿಯಾ, ೧೧. ನಿಹ್ನಇಯಾ, ೧೨. ಅಂಕಲಿಪಿ, ೧೩. ಗಣಿತಲಿಪಿ, ೧೪. ಗಂಧರ್ವಲಿಪಿ, ೧೫. ಭೂತಲಿಪಿ, ೧೬. ಆದರ್ಶ ಲಿಪಿ, ೧೭. ಮಾಹೇಶ್ವರ ಲಿಪಿ, ದಾಮಿಲಿ ಲಿಪಿ ಮತ್ತು ೧೮. ಬೋಲಿಂದಿ (ಪೋಲಿದಿ ಆಂಧ್ರ) ಲಿಪಿ. ಈ ಲಿಪಿಗಳಲ್ಲಿ ಬ್ರಾಹ್ಮಿ ಮತ್ತು ಖರೋಷ್ಠೀ ಈ ಎರಡು ಲಿಪಿಗಳಲ್ಲಿರುವ ಲೇಖಗಳು ಮಾತ್ರ ಪ್ರಚುರವಾಗಿ ದೊರೆತಿವೆ. ಖರೋಷ್ಠಿಯ ಪ್ರಯೋಗವು ಕ್ರಿ.ಶ.ಪೂ. ಮೂರನೆಯ ಶತಮಾನದ ಮೌರ್ಯ ಸಮ್ರಾಟ್ ಅಶೋಕನ ಲೇಖಗಳಿಂದ ಆರಂಭವಾಗಿ ಕ್ರಿ.ಶ. ಎರಡನೆಯ ಮೂರನೆಯ ಶತಮಾನಗಳ ವರೆಗೆ ಪಂಜಾಬ ಮತ್ತು ಪಶ್ಚಿಮೋತ್ತರ ಪ್ರದೇಶದಿಂದ ಚೀನ ತುರ್ಕಸ್ತಾನಗಳ ವರೆಗೆ ಪ್ರಚಾರದಲ್ಲಿ ಇದ್ದುದು ಕಂಡುಬರುತ್ತದೆ. ಬ್ರಾಹ್ಮೀ ಲಿಪಿಯ ಪರಂಪರೆಯು ದೇಶ ದಲ್ಲಿ ಇಂದಿನವರೆಗೂ ಪ್ರಚಲಿತವಾಗಿದೆ. ಈಗ ಭಾರತದಲ್ಲಿ ಪ್ರಚಾರದಲ್ಲಿರುವ ಎಲ್ಲ ಲಿಪಿಗಳೂ ಅದರಿಂದಲೇ ವಿಕಾಸವನ್ನು ಹೊಂದಿವೆ. ಇದರಲ್ಲಿ ಎಲ್ಲಕ್ಕೂ ಪ್ರಾಚೀನ ಲೇಖವು ಬಹುತರ ಬಾರಲೀ (ಆಜಮೇರ)ಯಲ್ಲಿ ಲಭಿಸಿದ ಚಿಕ್ಕದೊಂದು ಬರಹ ವಾಗಿದೆ. ಅದರಲ್ಲಿ ವೀರ (ಮಹಾವೀರ) ೮೪, ಬಹಳ ಮಾಡಿ ನಿರ್ವಾಣ ಕಾಲದಿಂದ ೮೪ನೆಯ ವರ್ಷ, ಹಾಗೂ ಮಧ್ಯಮಿಕ ಸ್ಥಾನದ ಉಲ್ಲೇಖವಿದೆ. ಅಶೋಕನ ಶಿಲಾ ಲೇಖಗಳಲ್ಲಿ ಇದರ ಪ್ರಯೋಗವು ಹೆಚ್ಚು ಪ್ರಚಾರ ರೂಪದಲ್ಲಿ ಬಂದಿದೆ. ಅಂದಿನಿಂದ ಇಂದಿನವರೆಗೆ ಭಿನ್ನ ಭಿನ್ನ ಕಾಲ ಮತ್ತು ಭಿನ್ನ ಭಿನ್ನ ಪ್ರದೇಶಗಳಲ್ಲಿ ಈ ಲಿಪಿಯು ವಿಕಾಸಗೊಳ್ಳುತ್ತಿರುವ ಸ್ಥಿತಿಯಲ್ಲಿ ಪ್ರಯೋಗಿಸಿದ್ದು ವಿವಿಧ ಲೇಖಗಳಲ್ಲಿ ನೋಡಲು ಸಿಕ್ಕುತ್ತದೆ. ಬ್ರಾಹ್ಮೀ ಲಿಪಿಯ ವಿಷಯದಲ್ಲಿ ಜೈನ ಆಗಮ ಹಾಗೂ ಪುರಾಣಗಳಲ್ಲಿ ಅದರ ಆವಿಷ್ಕಾರವನ್ನು ಆದಿತೀರ್ಥಂಕರನಾದ ಋಷಭನಾಥನು ಮಾಡಿದನೆಂದು ಹೇಳಲಾಗಿದೆ. ಅದನ್ನು ಅವನು ತನ್ನ ಪುತ್ರಿಯಾದ ಬ್ರಾಹ್ಮಿಗೆ ಮೊದಲು ಕಲಿಸಿದನು. ಅದರಿಂದಲೇ ಈ ಲಿಪಿಯ ಹೆಸರು ಬ್ರಾಹ್ಮಿಯೆಂದು ರೂಢಿಯಲ್ಲಿ ಬಂದಿದೆ. ಸಮವಾ ಯಾಂಗ ಸೂತ್ರದಲ್ಲಿ ಬ್ರಾಹ್ಮಿ ಲಿಪಿಗೆ ೪೬ ಮೂಲಾಕ್ಷರಗಳು (ಸ್ವರ ಮತ್ತು ವ್ಯಂಜನ) ಎಂದು ಉಲ್ಲೇಖವಿದೆ. ಐದನೆಯ ಜೈನಾಗಮವಾದ ಭಗವತೀ ವಿಯಾಹಪಣ್ಣತ್ತಿ ಸೂತ್ರದ ಪ್ರಾರಂಭದಲ್ಲಿ ಅರಹಂತರೆ ಮೊದಲಾದ ಪಂಚಪರಮೇಷ್ಠಿಗಳ ನಮಸ್ಕಾರದ ಜೊತೆಯಲ್ಲಿ 'ನಮೋ ಬಂಭೀಏ ಲಿವೀಏ | ನಮೋ ಸುಯಸ್ಸ' ಈ ಪ್ರಕಾರ ಬ್ರಾಹ್ಮಿ ಲಿಪಿ ಹಾಗೂ ಶ್ರುತಗಳಿಗೆ ನಮಸ್ಕಾರವನ್ನು ಮಾಡಲಾಗಿದೆ. ಇನ್ನುಳಿದ ಲಿಪಿಗಳ ವಿಷಯದಲ್ಲಿ ಹೆಚ್ಚು ಸಂಗತಿಗಳು ತಿಳಿದು ಬಂದಿಲ್ಲ. ಜವಣಾಲಿಯಾ ಎಂಬುದು ಯವನಾನೀ ಅಥವಾ ಯುನಾನೀ ಲಿಪಿಯ ಸಂಕೇತವಾಗಿರುವ ಸಂಭವವಿದೆ. ಅಕ್ಷರಮುಷ್ಟಿಕಾ ಎಂಬುದನ್ನು ವಾತ್ಸ್ಯಾಯನನು ತನ್ನ ಕಾಮ ಸೂತ್ರದಲ್ಲಿ ೬೪

ಕಲೆಗಳಲ್ಲಿ ಒಂದೆಂದು ಸ್ವೀಕರಿಸಿದ್ದಾನೆ. ಅದರ ಟೀಕಾಕಾರನಾದ ಯಶೋಧರನು ಅಕ್ಷರಮುಷ್ಟಿಕಾ ಇದಕ್ಕೆ ಸಾಭಾಸಾ ಮತ್ತು ನಿರಾಭಾಸಾ ಎಂಬ ಈ ಎರಡು ಭೇದ ಗಳನ್ನು ಉಲ್ಲೇಖಿಸಿದ್ದಾನೆ. ಸಾಭಾಸಾ ಎಂಬುದರ ವಿವರವನ್ನು ಆಚಾರ್ಯ ರವಿ ಗುಪ್ತನು 'ಚಂದ್ರಪ್ರಭಾ ವಿಜಯ' ಕಾವ್ಯದಲ್ಲಿ ಬೇರೆಯಾಗಿ ಕೊಟ್ಟಿದ್ದಾನೆ. ಇದರ ಉದಾಹರಣೆಗಳಿಂದ ಆದಿ ಅಕ್ಷರ ಮಾತ್ರದಿಂದ ಪೂರ್ಣ ಶಬ್ದದ ಸಂಕೇತವನ್ನು ಸೂಚಿಸುವುದು ಸಾಭಾಸಾ ಎನಿಸುತ್ತದೆಂದು ತಿಳಿಯುತ್ತದೆ. ಅಂಗುಲಿ ಮೊದಲಾದವು ಗಳ ಸಂಕೇತದಿಂದ ಶಬ್ದಗಳ ಅಭಿವ್ಯಕ್ತಿಯನ್ನು ಮಾಡುವುದು ನಿರಾಭಾಸಾ ಅಕ್ಷರ ಮುಷ್ಟಿಕಾ ಎಂದು ಹೇಳಲಾಗುವುದು. ಇವುಗಳ ಸಮಾವೇಶವು ಬಹಳ ಮಾಡಿ ಮೇಲೆ ಹೇಳಿದ ೭೨ ಕಲೆಗಳಲ್ಲಿ ೫೦ ಹಾಗೂ ೫೧ನೆಯವುಗಳಾದ ರಹಸ್ಯಗಳ ಮತ್ತು ಸಭಾಸ ಎಂಬ ಹೆಸರಿನ ಕಲೆಗಳಲ್ಲಿ ಆಗುತ್ತದೆ. ಅಂಕ ಲಿಪಿಯಿಂದ ೧, ೨ ಮೊದಲಾದ ಸಂಖ್ಯಾವಾಚಕ ಚಿಹ್ನಗಳನ್ನು **ಗಣಿತ ಲಿಪಿಯೊಡನೆ** ಹೊಂದಿಸಿ ಅಧಿಕ (+), ಊಣಾ (—), ಗುಣಾ (×), ಭಾಗ (÷) ಮೊದಲಾದ ಚಿಹ್ನಗಳನ್ನೂ, ಹಾಗೆಯೇ **ಗಂಧರ್ವ ಲಿಪಿಯಿಂದ** ಸಂಗೀತ ಶಾಸ್ತ್ರದ ಸ್ವರಗಳ ಚಿಹ್ನಗಳನ್ನೂ ಸಂಕೇತಿಸಲಾಗಿದೆ. **ಆದರ್ಶಲಿಪಿಯು** ಅಕ್ಷರಗಳನ್ನು ತಿರುವು-ಮುರುವು ಆಗಿ ಬರೆಯುವುದರಿಂದ ಬಹಳ ಮಾಡಿ ಉಂಟಾಗುತ್ತಿರಬೇಕು. ಅದನ್ನು ಕನ್ನಡಿಯಲ್ಲಿ ಪ್ರತಿಬಿಂಬಿಸಿದಾಗ ನೆಟ್ಟಗೆ ಓದಲು ಬರುವಂತಿರುತ್ತದೆ **ಭೂತಲಿಪಿಯು** ಭೋಟ (ತಿಬೇಟ) ದೇಶದ ಲಿಪಿ ಯಾಗಿರಲು ಸಾಕು. **ಮಾಹೇಶ್ವರೀ** ಎಂಬುದು ಮಹೇಶ್ವರದ್ದೂ (ಓಂಕಾರ ಮಾಂಧಾತಾ-ಮಧ್ಯಪ್ರದೇಶ), ಹಾಗೆಯೇ **ದಾಮಿಲೀ** ಲಿಪಿಯು ದ್ರವಿಡ (ದಮಿಲ- ತಮಿಲ) ದೇಶದ್ದೂ ಆಗಿವೆ. ಇದೇ ಪ್ರಕಾರ **ಭೋಗವಇಯಾ** ಎಂಬುದರ ಅಭಿ ಪ್ರಾಯವು ನಾಗರ ಪ್ರಾಚೀನ ರಾಜಧಾನಿಯಾದ ಭೋಗವತಿಯಲ್ಲಿ ಪ್ರಚಲಿತವಾಗಿದ್ದ ಯಾವುದಾದರೊಂದು ವಿಶೇಷ ಲಿಪಿಯಾಗಿರಬಹುದಾಗಿದೆ. ಹೀಗೆ ಹೇಳಿದಾಗ ಆಶ್ಚರ್ಯ ಪಡುವ ಕಾರಣವಿಲ್ಲ.

ಹದಿನೆಂಟು ಲಿಪಿಗಳ ಇನ್ನೊಂದು ಸೂಚಿಯು ವಿಶೇಷ ಆವಶ್ಯಕ ಸೂತ್ರದಲ್ಲಿ (ಗಾ. ೪೬೪) ರ ಟೀಕೆಯಲ್ಲಿ ಈ ಪ್ರಕಾರ ದೊರೆಯುತ್ತದೆ:—೧ **ಹಂಸಲಿಪಿ, ೨ ಭೂತಲಿಪಿ, ೩ ಯಕ್ಷಲಿಪಿ, ೪ ರಾಕ್ಷಸಲಿಪಿ, ೫ ಓಡ (ಉಡಿಯಾ) ಲಿಪಿ, ೬ ಯವನೀ, ೭ ತುರುಷ್ಕೀ, ೮ ಕೀರೀ, ೯ ದ್ರಾವಿಡೀ, ೧೦ ಸೈಂಧವೀ ೧೧ ಮಾಲವಿನೀ, ೧೨ ನಡೀ, ೧೩, ನಾಗರೀ, ೧೪ ಲಾಟೀ, ೧೫ ಪಾರಸೀ, ೧೬ ಅನಿಮಿತ್ತೀ, ೧೭ ಚಾಣಕ್ಯೀ** ಮತ್ತು **೧೮ ಮೂಲದೇವೀ.** ಈ ನಾಮಾವ ಲಿಯು ಸಮಯಾಂಗದ ಲಿಪಿ ಸೂಚಿಗಿಂತ ಬಹಳಷ್ಟು ಬೇರೆಯಾಗಿದೆ. ಇದರಲ್ಲಿ ಭೂತ ಲಿಪಿ, ಯವನೀ ಮತ್ತು ದ್ರಾವಿಡೀ ಇವು ಮೂರು ಮಾತ್ರ ಎರಡರಲ್ಲಿಯೂ ಸಮಾನ ವಾಗಿವೆ. ಉಳಿದ ಹೆಸರುಗಳಲ್ಲಿ ಹೆಚ್ಚು ಸ್ಪಷ್ಟವಾಗಿ ಭಿನ್ನ ಭಿನ್ನ ಜಾತಿ ಹಾಗೂ ದೇಶ ವಾಚಕವಾಗಿವೆ. ಮೊದಲಿನ ನಾಲ್ಕು ಹಂಸ, ಭೂತ, ಯಕ್ಷ ಮತ್ತು ರಾಕ್ಷಸ

ಆಯಾ ಅನಾರ್ಯ ಜಾತಿಗಳ ಲಿಪಿಗಳಿಂದೂ ಹಾಗೂ ಭಾಷೆಗಳಿಂದು ಪ್ರತೀತವಾಗು ತ್ತದೆ. ಉಡಿಯಾದಿಂದ ಪಾರಸಿಯವರೆಗೆ ೧೧ ಭಾಷೆಗಳು ಸ್ಪಷ್ಟವಾಗಿಯೂ ದೇಶ ವಾಚಕವಾಗಿವೆ. ಉಳಿದ ಮೂರರಲ್ಲಿ ಚಾಣಕ್ಯೀ ಮತ್ತು ಮೂಲದೇವಿಯ ಪರಂಪ ರೆಯು ಬಹಳ ಕಾಲದವರೆಗೆ ನಡೆಯುತ್ತ ಬಂದಿದೆ. ಅವುಗಳ ಸ್ವರೂಪವನ್ನು ಕಾಮ ಸೂತ್ರದ ಟೀಕಾಕಾರನಾದ ಯಶೋಧರನು ಕೌಟೀಲೀಯ ಅಥವಾ ದುರ್ಬೋಧ ಹಾಗೂ ಮೂಲದೇವಿಯ ಎಂಬ ಹೆಸರುಗಳಿಂದ ಹೇಳಿದ್ದಾನೆ. ಯಶೋಧರನು ಇನ್ನೊಂದು ಮೂರನೆಯದಾದ ಗೂಢಲೇಖ್ಯ ಎಂಬ ಹೆಸರಿನ ಲಿಪಿಯ ವ್ಯಾಖ್ಯಾನ ವನ್ನೂ ಕೂಡ ಮಾಡಿದ್ದಾನೆ. ಇದರ ಸ್ವರೂಪವು ಸ್ಪಷ್ಟವಾಗಿ ತಿಳಿಯುವುದಿಲ್ಲ. ಬಹುತರ ಅದು ಯಾವುದಾದರೂ ಒಂದು ಅಂಕಲಿಪಿಯಾಗಿರಬಹುದಾಗಿದೆ. ಈ ಲಿಪಿಯ ಸಂಬಂಧವು ಅನಿಮಿತ್ತೀ ಎಂದು ಹೇಳುವುದರಲ್ಲಿ ವ್ಯಕ್ತವಾಗಿದೆ ಎಂದರೆ ಆಶ್ಚರ್ಯ ಪಡುವ ಕಾರಣವಿಲ್ಲ. ಯಶೋಧರನಿಗೆ ಅನುಸರಿಸಿ ಪ್ರತಿಯೊಂದು ಶಬ್ದದ ಕೊನೆಯಲ್ಲಿ 'ಕ್ಷ' ಅಕ್ಷರವನ್ನು ಜೋಡಿಸುವುದು ಹಾಗೂ ಹ್ರಸ್ವ ಮತ್ತು ದೀರ್ಘ ಅನುಸ್ವಾರ ಮತ್ತು ವಿಸರ್ಗಗಳನ್ನು ಅದಲು-ಬದಲು ಮಾಡುವುದರಿಂದ ಕೌಟಿಲೀಯ ಲಿಪಿಯು ರೂಪುಗೊಳ್ಳುತ್ತದೆ. ಇದರಂತೆಯೇ ಅ ಮತ್ತು ಕ, ಖ ಹಾಗೂ ಗ, ಘ ಮತ್ತು ಐ, ಚವರ್ಗ ಮತ್ತು ಟವರ್ಗ, ತವರ್ಗ ಹಾಗೂ ಪವರ್ಗ ಅಲ್ಲದೆ ಯ ಮತ್ತು ಶ ಇವುಗಳನ್ನು ಪರಸ್ಪರ ವ್ಯತ್ಯಾಸ ಮಾಡುವುದರಿಂದ ಮೂಲದೇವಿ ಲಿಪಿಯು ಸಿದ್ಧ ವಾಗುತ್ತದೆ. ಮೂಲದೇವನು ಪ್ರಾಚೀನ ಜೈನ ಕಥೆಗಳಲ್ಲಿ ಬಹು ಪ್ರಸಿದ್ಧನೂ ಚತು ರನೂ ಹಾಗೂ ಧೂರ್ತನಾದ ನಾಯಕನಾಗಿದ್ದಾನೆ. (ಮೂಲದೇವ ಕಥಾ ಉ. ಸೂ. ಟೀಕೆಯಲ್ಲಿ ನೋಡಬಹುದು).

ಲೇಖದ ಆಧಾರ ಪತ್ರವು ವಲ್ಕಲ, ಕಾಷ್ಠ, ದಂತ, ಲೋಹ, ತಾಮ್ರ, ರಜತ ಮೊದಲಾದುವುಗಳಿಂದ ಮಾಡಿದವುಗಳಾಗಿದ್ದುವು. ಅವುಗಳ ಮೇಲೆ ಬರೆಯುವ ಕ್ರಿಯೆಯು ಉತ್ಕೀರ್ಣನ (ಅಕ್ಷರಗಳನ್ನು ಕೊರೆಯುವಿಕೆ) ಸ್ಯೂತ (ಹೊಲಿದು), ವ್ಯೂತ (ಹೆಣೆಯುವಿಕೆ), ಛಿನ್ನ (ಕಡಿಯುವಿಕೆ), ಭಿನ್ನ (ಒಡೆಯುವಿಕೆ), ದಗ್ಧ (ಸುಟ್ಟು ತೆಗೆಯುವಿಕೆ) ಮತ್ತು ಸಂಕ್ರಾಂತಿತ (ಮೆಟ್ಟಲುಗಳಿಂದ) ಈ ಪದ್ಧತಿಗಳಿಂದ ಮಾಡಲಾಗುತ್ತಿತ್ತು. ಲಿಪಿಯ ಅನೇಕ ದೋಷಗಳನ್ನೂ ಸಹ ಹೇಳಿದೆ. ಅವುಗಳಲ್ಲಿ ಅತಿಕೃಶ, ಅತಿಸ್ಥೂಲ, ವಿಷಮ, ವಕ್ರಪಾದ ಮತ್ತು ಒಂದು ವರ್ಣದ ಸ್ಥಳದಲ್ಲಿ ಮತ್ತೊಂದನ್ನು ಬರೆಯುವುದು (ಘದ ಸ್ಥಳದಲ್ಲಿ ಥ, ಭದ ಸ್ಥಳದಲ್ಲಿ ಮದ ಸ್ಥಳದಲ್ಲಿ ಯ ಇತ್ಯಾದಿ); ಪದಚ್ಛೇದ ಮಾಡದಿರುವುದು ಇವು ಮುಖ್ಯವಾಗಿವೆ. ವಿಷಯಗಳಿಗೆ ಅನುಸರಿಸಿಯೂ ಕೂಡ ಲೇಖಗಳನ್ನು ವಿಂಗಡಿಸಲಾಗಿದೆ. ಹಾಗೆಯೇ ಸ್ವಾಮಿ-ಭೃತ್ಯ, ಪಿತಾ-ಪುತ್ರ, ಗುರು-ಶಿಷ್ಯ, ಪತಿ-ಪತ್ನಿ, ಶತ್ರು-ಮಿತ್ರ ಮೊದಲಾದವರಿಗೆ ಪತ್ರ ಬರೆ ಯುವ ಭಿನ್ನಭಿನ್ನ ಶೈಲಿಗಳನ್ನೂ ಸಹ ಸ್ಥಿರ ಪಡಿಸಿದ್ದರು.

ಜೈನ ಸಮಾಜದಲ್ಲಿ ಲೇಖನ ಪ್ರಣಾಲಿಯ ಪ್ರಯೋಗವು ಬಹು ಪ್ರಾಚೀನ

ವಾಗಿರುವಂತೆ ಕಂಡುಬರುತ್ತದೆ. ಆದರೂ ಒಂದೂವರೆ ಸಾವಿರ, ಸಾವಿರ ವರ್ಷಗಳ ಪೂರ್ವದಲ್ಲಿ ಬರೆದ ಗ್ರಂಥಗಳ ಸ್ಪಷ್ಟ ಉದಾಹರಣೆಯು ಲಭಿಸದಿರುವುದಕ್ಕೆ ಒಂದು ದೊಡ್ಡ ಕಾರಣವೂ ಇದೆ. ಪ್ರಾಚೀನ ಕಾಲದಿಂದಲೂ ವಿದ್ಯಾಪ್ರಚಾರ ಕಾರ್ಯವು ಮುನಿಗಳಿಂದ ನಡೆಯುತ್ತಿತ್ತು. ಜೈನ ಮುನಿಗಳಂತೂ ಸಂಪೂರ್ಣ ಅಪರಿಗ್ರಹಿಗಳು. ಅವರು ತಮ್ಮ ಜೊತೆಯಲ್ಲಿ ಗ್ರಂಥಗಳನ್ನು ಇಟ್ಟುಕೊಳ್ಳದೆ ಸ್ಮೃತಿಯ ಆಧಾರ ದಿಂದಲೇ ಮುಂದರಿಯುತ್ತಿದ್ದರು. ಅಂತಿಮ ತೀರ್ಥಂಕರರಾದ ಮಹಾವೀರನ ಉಪದೇಶಗಳನ್ನು ಅವನ ಸಾಕ್ಷಾತ್ ಗಣಧರರು ತತ್ಕಾಲದಲ್ಲಿಯೇ ಗ್ರಂಥ–ರಚನೆಯ ರೂಪದಲ್ಲಿ ಸ್ಥಿರಗೊಳಿಸಿದ್ದರು. ಆದರೆ ಮೌರ್ಯರ ಕಾಲದಲ್ಲಿ ಅವುಗಳಲ್ಲಿ ಒಂದು ಅಂಶದ ಜ್ಞಾನವು ಲುಪ್ತವಾಗಿ ಹೋಯಿತು. ಪಾಟಲೀಪುತ್ರದ ವಾಚನದಲ್ಲಿ ಹನ್ನೆರಡನೆಯ ಅಂಗವಾದ ದೃಷ್ಟಿವಾದದ ಸಂಕಲನವನ್ನು ಮಾಡಲಿಕ್ಕೆ ಆಗಲಿಲ್ಲ. ಯಾಕಂದರೆ ಅದರ ತಿಳುವಳಿಕೆಯುಳ್ಳ–ಒಬ್ಬನೇ ಒಬ್ಬನಾದ–ಭದ್ರಬಾಹುವು ಆ ಮುನಿ ಸಂಘದಲ್ಲಿ ಸಮ್ಮಿಲಿತನಾಗಲು ಆಗಲಿಲ್ಲ. ವೀರ ನಿರ್ವಾಣದ ಹತ್ತನೆಯ ಶತಮಾನದಲ್ಲಿ ಮತ್ತೆ ಆಗಮಗಳ ಸ್ಥಿತಿಯು ಅಸ್ತ-ವ್ಯಸ್ತ ಅವಸ್ಥೆಯನ್ನು ಹೊಂದಿತ್ತು. ಹೀಗಾಗಿ ಮಥುರೆ ಯಲ್ಲಿ ಸ್ಕಂದಿಲ ಆಚಾರ್ಯ ಮತ್ತು ಅವನ ತರುವಾಯ ಕೆಲವೊಂದು ಕಾಲದ ಮೇಲೆ ವಲಭಿಯಲ್ಲಿ ದೇವರ್ಧಿಗಣಿ ಕ್ಷಮಾಶ್ರಮಣನ ಅಧ್ಯಕ್ಷತೆಯಲ್ಲಿ ಆಗಮಗಳ ವಾಚನ ಗಳನ್ನು ಮಾಡಲಾಯಿತು. ಪಾಟಲಿಪುತ್ರೀಯ ಮತ್ತು ಮಾಥುರೀಯ ವಾಚನ ಗಳಲ್ಲಿಯ ಗ್ರಂಥಗಳಂತೂ ಈಗ ಸಿಗುವುದಿಲ್ಲ. ಆದರೆ ವಲಭಿ ವಾಚನದಿಂದ ಸಂಕಲಿ ಸಿದ ಆಗಮಗಳ ಪ್ರತಿಗಳು ದೊರೆಯುತ್ತವೆ. ಅಂದಿನಿಂದ ನಿರಂತರವಾಗಿ ತಾಡಪತ್ರ, ಆದರೆ ತರುವಾಯ ಕಾಗದಗಳ ಮೇಲೆ ಉತ್ತರೋತ್ತರ ಸುಂದರ ಹಾಗೂ ಕಲಾ ಪೂರ್ಣ ರೀತಿಯಿಂದ ಬರೆದಂಥ ಪ್ರತಿಗಳು ಲಭಿಸುತ್ತವೆ. ಅವು ಜೈನ ಲಿಪಿ ಕಲೆಯ ಇತಿಹಾಸಕ್ಕಾಗಿ ಬಹಳ ಮಹತ್ವಪೂರ್ಣ ಪ್ರತೀಕಗಳಾಗಿವೆ. ಮೇಲೆ ಹೇಳಿದ ಮೂರೂ ವಾಚನಗಳ ಹೆಸರುಗಳೂ ಸಹ ಆಗಾಗ ಗ್ರಂಥಗಳನ್ನು ಓದಲಾಯಿತು ಹಾಗೂ ಸಂಕಲಿ ಸಲಾಯಿತೆಂದೇ ಸೂಚಿಸುತ್ತವೆ. ಇದರಿಂದ ಲಿಖಿತ ಗ್ರಂಥಗಳ ಪರಂಪರೆಯ ಪ್ರಾಚೀನ ತೆಯು ಸಿದ್ಧವಾಗುತ್ತದೆ. ದಶವೈಕಾಲಿಕ ಸೂತ್ರದ ಹರಿಭದ್ರನ ಟೀಕೆಯಲ್ಲಿ ಐದು ಪ್ರಕಾರದ ಪುಸ್ತಕಗಳ ವರ್ಣನೆಯು ದೊರೆಯುತ್ತದೆ. ಅವುಗಳ ಹೆಸರುಗಳು ಗಂಡೀ, ಕಚ್ಛಪೀ, ಮುಷ್ಟೀ ಸಂಪುಷ್ಟ–ಫಲಕ ಮತ್ತು ಛೇದಪಾಟೀಗಳೆಂದು ಇವೆ. ಉದ್ದಗಲ ಗಳಲ್ಲಿ ಸಮಾನ ಅರ್ಥಾತ್ ಚಚ್ಚೌಕ ಪುಸ್ತಕಗಳಿಗೆ ಗಂಡೀ ಎಂದು ಹೆಸರು. ಯಾವ ಪುಸ್ತಕವು ಮಧ್ಯದಲ್ಲಿ ಅಗಲವೂ ಮತ್ತು ಎರಡೂ ಮಗ್ಗುಲುಗಳಲ್ಲಿ ಕಿರಿದಗಲುಗಳಾ ಗುತ್ತ ಹೋಗುತ್ತದೆಯೋ ಅದು ಕಚ್ಛಪಿಯು. ಯಾವ ಪುಸ್ತಕವು ಕೇವಲ ನಾಲ್ಕು ಅಂಗುಲ ಗೋಲಾಕಾರ ಇಲ್ಲವೆ ಚೌಕೋನವಾಗಿರುವುದರಿಂದ ಮುಟ್ಟಿಗೆಯಲ್ಲಿ ಹಿಡಿಯ ಲಿಕ್ಕೆ ಬರುತ್ತದೆಯೋ ಅದು ಮುಷ್ಟಿಯೆನಿಸುವುದು. ಕಟ್ಟಿಗೆಯ ಪಟ್ಟಿಯ ಮೇಲೆ ಬರೆದಂಥ ಪುಸ್ತಕಗಳು ಸಂಪುಟ–ಫಲಕವೆನಿಸುತ್ತವೆ. ಹಾಗೆಯೇ ಚಿಕ್ಕ ಪುಟ್ಟ ಎಲೆ

ಗಳ ಮೇಲೆ ದೊಡ್ಡದಾಗಿರಲಿ ಅಥವಾ ಉದ್ದವಾಗಿರಲಿ ಅಂತೂ ಸಂಕರ ತಾಡಪತ್ರ ಗಳುಳ್ಳ ಪುಸ್ತಕವು ಛೇದಪಾಟಿ ಎನಿಸುತ್ತದೆ.

(೨) **ಗಣಿತ ಶಾಸ್ತ್ರದ** ವಿಕಾಸವು ಜೈನ ಪರಂಪರೆಯಲ್ಲಿ ಕರಣಾನುಯೋಗದ ಅಂಗವಾಗಿ ಬಹಳಷ್ಟು ಆಗಿದೆ. ಎಲ್ಲಿ ಎಪ್ಪತ್ತೆರಡು ಕಲೆಗಳ ಸಂಕ್ಷೇಪ ಉಲ್ಲೇಖ ವಿದೆಯೋ ಅಲ್ಲೆಲ್ಲ ಬಹುತರ ಅವರು ಲೇಖಾದಿಗಳನ್ನೂ ಗಣಿತವನ್ನೂ ಪ್ರಾಧಾನ್ಯವಾ ಗಿಟ್ಟುಕೊಂಡೇ ಸೂಚಿಸಿದ್ದಾರೆ. ಇದರಿಂದ ಗಣಿತದ ಮಹತಿಯು ಸಿದ್ಧವಾಗುತ್ತದೆ. (೩) **ರೂಪಗತದ** ತಾತ್ಪರ್ಯವು ಮೂರ್ತಿಕಲೆ ಮತ್ತು ಚಿತ್ರಕಲೆಗಳು ಎಂದಿದೆ. ಅವು ಗಳ ನಿರೂಪಣೆಯನ್ನು ಮುಂದೆ ಮಾಡಲಾಗುತ್ತದೆ. (೪ ರಿಂದ ೯) **ನೃತ್ಯ, ಗೀತ, ವಾದ್ಯ, ಸ್ವರಗತ, ಪುಷ್ಕರಗತ ಮತ್ತು ಸಮತಾಲ** ಇವುಗಳ ವಿಷಯವು ಸಂಗೀತ ವಾಗಿದೆ. ಈ ಕಲೆಗಳ ಸಂಬಂಧದಲ್ಲಿ ಜೈನ ಶಾಸ್ತ್ರ ಮತ್ತು ಪುರಾಣಗಳಲ್ಲಿ ಬಹಳಷ್ಟು ವರ್ಣನೆಯನ್ನು ಮಾಡಲಾಗಿದೆ. ಅಲ್ಲದೆ ಈ ವಿದ್ಯೆಗಳನ್ನು ಬಾಲಕ- ಬಾಲಿಕೆಯರಿಗೆ ಆವಶ್ಯಕವಾಗಿ ಕಲಿಸಬೇಕೆಂದು ಹೇಳಲಾಗಿದೆ. ಕಥೆಯೇ ಮೊದಲಾದವುಗಳಲ್ಲಿ ಬಹುತರ ವೀಣಾವಾದನದ ಪ್ರಾವೀಣ್ಯದ ಆಧಾರದ ಮೇಲೆಯೇ ಯುವಕ-ಯುವತಿಯರ ವಿವಾಹ ಸಂಬಂಧದ ಉಲ್ಲೇಖಗಳು ದೊರೆಯುತ್ತವೆ. (೧೦ ರಿಂದ ೧೩) **ದ್ಯೂತ, ಜನವಾದ, ಪೋಕ್ಖಚ್ಚಂ** ಮತ್ತು **ಅಷ್ಟಾಪದ** ಇವು ದ್ಯೂತ ಕ್ರೀಡೆಯ ಪ್ರಕಾರಗಳಾಗಿವೆ. (೧೪) **ದಗಮಟ್ಟಿಯಾ- ಉದಕಮೃತ್ತಿಕಾ** ನೀರು ಮಣ್ಣುಗಳಿಂದ ಕೆಸರನ್ನು ಸಿದ್ಧಗೊಳಿಸು ಮನೆ, ಮೂರ್ತಿಗಳ ಆಕಾರ ಕ್ರೀಡೆ, ಶೃಂಗಾರ ನಿರ್ಮಾಣ ಹೇತುಗಳುಳ್ಳ ಕಲೆಗಳಾ ಗಿವೆ. (೧೫-೧೬) **ಅನ್ನವಿಧಿ ಮತ್ತು ಪಾನವಿಧಿಗಳು** ವಿವಿಧ ಪ್ರಕಾರದ ತಿನ್ನುವ ಸಾಮಾನುಗಳನ್ನು ಸ್ವಾದಿಸುವ ವಸ್ತುಗಳನ್ನು ಲೇಹ್ಯ-ಪೇಯಗಳನ್ನು ನಿರ್ಮಿಸುವ ಕಲೆಗಳಾಗಿವೆ. (೧೭) **ವಸ್ತ್ರವಿಧಿಯು** ನಾನಾ ಪ್ರಕಾರದ ವಸ್ತ್ರಗಳನ್ನು ಹೆಣೆಯು ವುದು ಹಾಗೂ ಹೊಲಿಯುವ ಕಲೆಯಾಗಿದೆ. (೧೮) **ಶಯನವಿಧಿಯು** ಅನೇಕ ಪ್ರಕಾರದ ಮಂಚ-ಪಲ್ಲಂಗಳ ರಚನೆ, ಹಾಸಿಗೆಯ ಶೃಂಗಾರ ವಿಧಾನಗಳ ಕಲೆಯಾಗಿದೆ. (೧೯ ರಿಂದ ೨೩) **ಆರ್ಯಾ, ಪ್ರಹೇಲಿಕಾ, ಮಾಗಧಿಕಾ, ಗಾಥಾ** ಮತ್ತು **ಶ್ಲೋಕ** ಈ ಹೆಸರಿನ ಛಂದಸ್ಸುಗಳು ಮತ್ತು ಕಾವ್ಯ ರೀತಿಯ ರಚನೆಗಳನ್ನು ಮಾಡುವ ಕಲೆ ಯಾಗಿದೆ. (೨೪) **ಗಂಧಯುಕ್ತಿಯೆಂಬುದು** ವಿವಿಧ ಪ್ರಕಾರದ ಸುಗಂಧ ದ್ರವ್ಯ ಗಳನ್ನೂ ರಾಸಾಯನಿಕ ಸಂಯೋಗದಿಂದ ಹೊಸ ಹೊಸ ಸುಗಂಧಗಳನ್ನು ನಿರ್ಮಾಣ ಮಾಡುವ ಕಲೆಯಾಗಿದೆ. (೨೫) **ಮಧುಸಿಕ್ಥವೆಂದು** ಅಲಕ್ತಕ, ಲಾಕ್ಷಾರಸ ಅಥವಾ ಮಹಾವರಕ್ಕೆ ಹೇಳಲಾಗುವುದು. ಈ ದ್ರವ್ಯಗಳಿಂದ ಪಾದಗಳನ್ನೂ ರಂಗಿತಗೊಳಿಸುವ ಕಲೆಯೇ ಮಧುಸಿಕ್ಥವೆನಿಸುವುದು. (೨೬-೨೭) **ಆಭರಣವಿಧಿ ಮತ್ತು ತರುಣೀ ಪ್ರತಿಕರ್ಮವು** ಭೂಷಣ ಮತ್ತು ಅಲಂಕಾರಗಳನ್ನು ಧರಿಸುವ ಹಾಗೂ, ಸ್ತ್ರೀಯರು ಶೃಂಗರಿಸಿಕೊಳ್ಳುವ ಕಲೆಯಾಗಿದೆ.

ಶ್ರಿ. ಪ್ರ. (೪, ೩೬೧-೬೪) ದಲ್ಲಿ ಪುರುಷರ ೧೬ ಮತ್ತು ಸ್ತ್ರೀಯರ ೧೪

ಆಭರಣಗಳ ಹೆಸರುಗಳ ಸೂಚಿಯು ವಿಕಲ್ಪ ರೂಪದಿಂದ ದೊರೆಯುತ್ತದೆ. ಅದು ಈ ಪ್ರಕಾರ ಇದೆ :

**ಪ್ರಥಮ ಸೂಚೀ :—**

೧ ಕುಂಡಲ, ೨ ಅಂಗದ, ೩ ಹಾರ, ೪ ಮುಕುಟ, ೫ ಕೇಯೂರ, ೬ ಭಾಲಪಟ್ಟ, ೭ ಕಟಕ, ೮ ಪ್ರಾಲಂಬ, ೯ ಸೂತ್ರ ೧೦ ನೂಪುರ, ೧೧ ಮುದ್ರಿಕಾ ಯುಗಲ, ೧೨ ಮೇಖಲಾ, ೧೩ ಗ್ರೈವೇಯಕ (ಕಂಠಿ), ೧೪ ಕರ್ಣಪೂರ, ೧೫ ಖಡ್ಗ ಮತ್ತು ೧೬ ಚೂರಿ.

ಎರಡನೆಯದಾದ ವೈಕಲ್ಪಿಕ ಸೂಚಿಯಲ್ಲಿ ಹದಿಮೂರು ಆಭರಣಗಳ ಹೆಸರುಗಳು ಸಮಾನವಾಗಿವೆ. ಆದರೆ ಕೇಯೂರ, ಭಾಲಪಟ್ಟ, ಕರ್ಣಪೂರ ಈ ಮೂರು ಹೆಸರುಗಳು ಇಲ್ಲ. ಅದರಂತೆ ಕಿರೀಟ, ಅರ್ಧಹಾರ ಮತ್ತು ಚೂಡಾಮಣಿ ಈ ಮೂರು ಹೆಸರುಗಳು ಹೊಸದಾಗಿ ಬಂದಿವೆ. ಕೇಯೂರ ಹಾಗೂ ಅಂಗದ ಎಂಬಿವು ಒಂದೇ ಮಾದರಿಯ ಆಭೂಷಣಗಳಾಗಿರುವ ಸಂಭವವಿದೆ. ಇದರಂತೆಯೇ ಭಾಲಪಟ್ಟ ಮತ್ತು ಚೂಡಾಮಣಿಗಳೂ ಇರಲು ಸಾಕು. ಕಿರೀಟವು ಒಂದು ಪ್ರಕಾರದ ಮುಕುಟವೇ ಆಗಿದೆ. ಈ ಪ್ರಕಾರ ಎರಡನೆಯ ಸೂಚಿಯಲ್ಲಿ ಯಾವ ಹೊಸ ಆಭರಣ-ವಿಶೇಷವೂ ಇದ್ದಂತೆ ಕಾಣುವುದಿಲ್ಲ ಆದರೆ ಮೊದಲನೆಯ ಸೂಚಿಯಲ್ಲಿ ಕರ್ಣಪೂರ ಎಂಬ ಹೆಸರಿನ ಆಭರಣವು ಇದ್ದಂತೆ ಇಲ್ಲ ಮೇಲೆ ಹೇಳಿದ ೧೬ ಅಲಂಕಾರಗಳಲ್ಲಿ ಖಡ್ಗ ಹಾಗೂ ಚೂರಿಗಳನ್ನುಳಿದು ೧೪ ಆಭೂಷಣಗಳು ಸ್ತ್ರೀಯರವೆಂದು ಮನ್ನಿಸಲಾಗಿದೆ. ಭೂಷಣ, ಆಭರಣ ಮತ್ತು ಅಲಂಕಾರಗಳ ಒಂದು ವಿಶಾಲ ಸೂಚಿಯನ್ನು ನಾವು ಅಂಗವಿಜ್ಜಾ (ಪೃ. ೩೫೫-೫೬) ದಲ್ಲಿ ಕಾಣುತ್ತೇವೆ. ಇದರಲ್ಲಿ ೩೫೦ ಹೆಸರುಗಳು ಕಂಡುಬರುತ್ತವೆ ಈ ಸೂಚಿಯು ಕೇವಲ ಆಭರಣಗಳ ಬಗ್ಗೆ ಮಾತ್ರವಲ್ಲ. ಇದರಲ್ಲಿ ಧಾತುಗಳ ಅಪೇಕ್ಷೆಯಿಂದಲೂ ಸಹ ಬೇರೆ ಬೇರೆ ಹೆಸರುಗಳನ್ನು ಹೇಳಲಾಗಿದೆ. ಉದಾಹರಣೆಗೆಂದು ಸುವರ್ಣಮಯ, ರೂಪ್ಯಮಯ, ತಾಮ್ರಮಯ ಆದಿ, ಅಥವಾ ಶಂಖಮಯ, ಕೇಶಮಯ, ದಂತಮಯ, ಕಾಷ್ಠಮಯ, ಪುಷ್ಪಮಯ, ಪತ್ರಮಯ ಮೊದಲಾದವುಗಳನ್ನು ಗಮನಿಸಬಹುದು. ಎರಡನೆಯದಾಗಿ ಇದರಲ್ಲಿ ಭಿನ್ನ-ಭಿನ್ನ ಅಂಗಗಳ ಅಪೇಕ್ಷೆಯಿಂದ ಆಭರಣಗಳ ಹೆಸರುಗಳ ಪುನರಾವೃತ್ತಿಯೂ ಆಗಿದೆ. ಶಿರಾಭರಣ, ಕರ್ಣಾಭರಣ, ಅಂಗುಲ್ಯಾಭರಣ, ಕಟಿಯಾಭರಣ, ಚರಣಾಭರಣಗಳೆಂದು ಇದ್ದುದನ್ನೂ ನೋಡಬಹುದು. ಮೂರನೆಯದಾಗಿ ಇದರಲ್ಲಿ ಅಂಜನ, ಚೂರ್ಣ, ಅಲಕ್ತಕ, ಗಂಧವರ್ಣ ಮೊದಲಾದವುಗಳೂ ಅದರಂತೆಯೇ ನಾನಾ ಪ್ರಕಾರಗಳ ಸುಗಂಧೀ ಚೂರ್ಣಗಳ ಹೆಸರುಗಳನ್ನೂ ಸಹ ಸಂಗ್ರಹಿಸಲಾಗಿದೆ. ಹಾಗೆಯೇ ತೈಲ, ಪರಿಧಾನ, ಉತ್ತರಾಸಂಗ ಮೊದಲಾದ ವಸ್ತ್ರಗಳೂ, ಛತ್ರ, ಪತಾಕಾದಿಗಳ ಶೋಭಾ ಸಾಮಗ್ರಿಗಳೂ ಸಹ ಸಮಾವೇಶ

ಗೊಂಡಿವೆ. ಆದರೂ 'ಶುದ್ಧ ಅಲಂಕಾರಗಳ ಸಂಖ್ಯೆಯು ನೂರಕ್ಕಿಂತ ಹೆಚ್ಚಾಗಿಯೇ ಇದ್ದುದು ಕಂಡುಬರುತ್ತದೆ. ಈ ಗ್ರಂಥದಲ್ಲಿ ನಾನಾ ಪ್ರಕಾರದ ಪಾತ್ರೆಗಳು, ತಿನ್ನುವ ಹಾಗೂ ಕುಡಿಯುವ ಪದಾರ್ಥಗಳು, ವಸ್ತ್ರ ಹಾಗೂ ಆಚ್ಛಾದನಗಳು, ಒಟ್ಟಿನಲ್ಲಿ ಶಯನಾಸನಾದಿಗಳ ಸುವಿಸ್ತೃತ ಸೂಚಿಯನ್ನು ಬೇರೆ ಬೇರೆಯಾಗಿ ಕೊಟ್ಟಿದನ್ನು ಕಾಣುತ್ತೇವೆ. ಇದರಲ್ಲಿ ಮೇಲೆ ಹೇಳಿದ ವಿವಿಧ ಕಲೆಗಳೂ ವಿಶೇಷವಾಗಿ ಅನ್ನವಿಧಿ (೧೫), ಪಾನವಿಧಿ (೧೬), ವಸ್ತ್ರವಿಧಿ (೧೭), ಶಯನವಿಧಿ (೧೮), ಗಂಧಯುಕ್ತಿ (೨೪), ಮಧುಸಿಕ್ಥ (೨೫), ಆಭರಣವಿಧಿ (೨೬), ತರುಣೀ ಪ್ರತಿಕರ್ಮ (೨೭), ಪತ್ರ ಛೇದ್ಯ ಹಾಗೂ ಕಟಕಛೇದ್ಯ (೭೦) ಇಷ್ಟು ಕಲೆಗಳ ಸ್ವರೂಪ ಮತ್ತು ಉಪಯೋಗಗಳ ಮೇಲೆ ಬಹಳಷ್ಟು ಪ್ರಕಾಶವನ್ನು ಬೀರಲಾಗಿದೆ.

ಸ್ತ್ರೀ-ಲಕ್ಷಣದಿಂದ ಚರ್ಮ-ಲಕ್ಷಣದ ವರೆಗೆ (೨೮ರಿಂದ ೪೧) ಇರುವ ಕಲೆಗಳು ಆ ಆ ಸ್ತ್ರೀ,ಮನುಷ್ಯರು, ಪಶುಗಳು ಮತ್ತು ವಸ್ತುಗಳ ಲಕ್ಷಣವನ್ನು ತಿಳಿಯುವ ಹಾಗೂ ಗುಣ-ದೋಷಗಳನ್ನು ಕಂಡು ಹಿಡಿಯುವಂಥವುಗಳಾಗಿವೆ. ಸ್ತ್ರೀ ಪುರುಷರ ಲಕ್ಷಣ ಹಾಗೂ ಸಾಮುದ್ರಿಕ ಶಾಸ್ತ್ರಕ್ಕೆ ಸಂಬಂಧಿಸಿದ ವಿವಿಧ ಗ್ರಂಥಗಳನ್ನು ವಿಸ್ತಾರದಿಂದ ವರ್ಣಿಸಲಾಗಿದೆ. ಆನೆ, ಕುದುರೆ, ಎತ್ತುಗಳ ಲಕ್ಷಣಗಳನ್ನು ಬೇರೆ ಬೇರೆಯಾಗಿ ಆಯಾ ವಿಷಯಗಳ ಜೀವ ಶಾಸ್ತ್ರಗಳಲ್ಲಿ ವಿವರವಾಗಿ ವಿವೇಚಿಸಲಾಗಿದೆ. ಚಂದ್ರ ಲಕ್ಷಣದಿಂದ ಗ್ರಹಚರಿತದ ವರೆಗೆ (೪೨ರಿಂದ ೪೫) ಬರುವ ಕಲೆಗಳು ಜ್ಯೋತಿಷ ಶಾಸ್ತ್ರಕ್ಕೆ ಸಂಬಂಧಿಸಿದವುಗಳಾಗಿವೆ. ಅವುಗಳಲ್ಲಿ ಯಾವ ಯಾವ ಜ್ಯೋತಿಷ ಮಂಡಲಗಳ ಜ್ಞಾನದ ಸಾಧನೆಯನ್ನು ಮಾಡಲಾಗುತ್ತಿತ್ತೆಂಬುದರ ವರ್ಣನೆಯು ಇದೆ. ಸೌಭಾಗ್ಯಕರದಿಂದ ಮಂತ್ರಗತಂಗಳ ವರೆಗೆ (೪೬ರಿಂದ ೪೯) ಇರುವ ಕಲೆಗಳು ಮಂತ್ರ-ತಂತ್ರ ವಿದ್ಯೆಗಳಿಗೆ ಸಂಬಂಧವುಳ್ಳವುಗಳಾಗಿವೆ. ಇವುಗಳಿಂದ ತಮ್ಮ ಹಾಗೂ ತಮ್ಮ ಇಷ್ಟ ಜನರ ಇಷ್ಟ ಸಾಧನೆಯೂ ಶತ್ರುಗಳ ಅನಿಷ್ಟ ಸಾಧನೆಯೂ ಆಗುವಂತೆ ಇರುತ್ತದೆ. ರಹಸ್ಯಗತ ಮತ್ತು ಸಭಾನಾ (೫೦-೫೧)ಗಳ ವಿಷಯದಲ್ಲಿ ಈ ಮೊದಲೇ ಹೇಳಿಯೂ ಆಗಿದೆ. ಅವು ಬಹಳ ಮಾಡಿ ವಾತ್ಸಾಯನನು ಹೇಳಿದ ಅಕ್ಷರಮುಷ್ಟಿಕಾದಿ ಪ್ರಕಾರಗಳಾಗಿವೆ. ಚಾರ, ಪ್ರತಿಚಾರ, ವ್ಯೂಹ ಮತ್ತು ಪ್ರತಿವ್ಯೂಹ (೫೨ರಿಂದ ೫೫) ಇವು ಯುದ್ಧಕ್ಕೆ ಸಂಬಂಧಿಸಿದ ವಿದ್ಯೆಗಳಾಗಿವೆ. ಇವುಗಳಿಂದ ಕ್ರಮವಾಗಿ ಸೈನ್ಯವನ್ನು ಮುಂದರಿಸುವುದು, ಶತ್ರು ಸೈನ್ಯದ ಗತಿಯನ್ನು ವಿಫಲಗೊಳಿಸುವುದು, ಅದಕ್ಕಾಗಿ ತಮ್ಮ ಸೈನ್ಯದ ಸಂಚಾರ ಮಾಡುವುದು, ಚಕ್ರವ್ಯೂಹಾದಿ ರೂಪಗಳಲ್ಲಿ ಸೈನ್ಯದ ವಿನ್ಯಾಸಗೊಳಿಸುವುದು, ಶತ್ರುಗಳ ವ್ಯೂಹ ರಚನೆಯನ್ನು ಒಡೆಯುವುದಕ್ಕೆ ಯೋಗ್ಯವಾಗುವಂತೆ ಸೈನ್ಯವನ್ನು ನಡೆಯಿಸುವುದನ್ನು ವಿವರಿಸಲಾಗಿದೆ. ಸ್ಕಂಧಾವಾರ-ಮಾನದಿಂದ ನಗರನಿವೇಶದ (೫೬ರಿಂದ ೬೧) ವರೆಗೆ ಬರುವ ಕಲೆಗಳ ವಿಷಯವು ಶಿಬಿರಾದಿಗಳನ್ನು ಇಳಿಸುವುದು, ಅದಕ್ಕೆ ಯೋಗ್ಯ ಭೂಮಿ, ಗೃಹ ಮೊದಲಾದವುಗಳ ಮಾನ-ಪ್ರಮಾಣ ನಿಶ್ಚಿತಗೊಳಿಸುವುದಾಗಿದೆ. ಈಸತ್ಥ (ಇಷು-ಅಸ್ತ್ರ) ಅರ್ಥಾತ್ ಬಾಣ-

ವಿದ್ಯಾ (೬೨), ಮತ್ತು ಥರುಪ್ಪವಾಯ (ತ್ಸರುಪ್ರವಾದ) (೬೩), ಚೂರಿ, ಕರಾರಿ, ಖಡ್ಗ ಮೊದಲಾದುವುಗಳನ್ನು ಪ್ರಯೋಗಿಸುವ ವಿದ್ಯೆಯಾಗಿದೆ. ಅಶ್ವ ಶಿಕ್ಷಾ ಮೊದಲಾದವುಗಳಿಂದ ಯಷ್ಟಿ-ಯುದ್ಧದ (೬೪-೬೮) ವರೆಗಿನ ಕಲೆಗಳು ಅವುಗಳ ಹೆಸರುಗಳಿಂದಲೇ ಸ್ಪಷ್ಟವಾಗುತ್ತವೆ. ಯುದ್ಧ, ನಿಯುರ್ದ್ಧ ಹಾಗೂ ಜುದ್ಧಾ ಇಂಜುದ್ಧ (೬೮) ಎಂಬುದೂ ಕೂಡ ನಾನಾ ವಿಧದ ಯುದ್ಧ ಮಾಡುವ ಕಲೆ ಯಾಗಿದೆ. ಸೂತ್ರಕ್ರೀಡಾ ಎಂಬುದು ಗೊಂಬೆಯಾಟವಾಗಿದೆ. ಇದರಲ್ಲಿ ನೂಲಿ ನಿಂದ ಹಾಗೂ ಬೆರಳಿನ ಕುಶಲತೆಯಿಂದ ಗೊಂಬೆಗಳನ್ನು ಕುಣಿಸಿ ಆಡಿಸುವ ಕಲೆಯನ್ನು ವಿವರಿಸಲಾಗಿದೆ. ನಾಲಿಕಾ ಕ್ರೀಡೆಯು ಒಂದು ಪ್ರಕಾರದ ದ್ಯೂತ ಕ್ರೀಡೆಯಾಗಿದೆ ವೃತ್ತ ಕ್ರೀಡಾ, ಥರ್ಮ ಕ್ರೀಡಾ ಮತ್ತು ಚರ್ಮ ಕ್ರೀಡಾ ಇವು ಕ್ರಮದಿಂದ ಮಂಡಲ ವನ್ನು ಕಟ್ಟುವುದು, ವಾಯುವನ್ನು ತುಂಬುವುದು, ಅದರಿಂದ ಚರ್ಮದ ಚೀಲಗಳ ಮೂಲಕ ವಿವಿಧ ಕ್ರೀಡೆಗಳನ್ನು ಆಡುವ ಕಲೆಯನ್ನು ಸೂಚಿಸುತ್ತವೆ. (೬೯) ಪತ್ರ ಚ್ಛೇದ್ಯ ಮತ್ತು ಕಟಕಚ್ಛೇದ್ಯ (೭೦) ಇವು ಕ್ರಮದಿಂದ ಎಲೆ ಮತ್ತು ಹುಲ್ಲುಗಳನ್ನು ನಾನಾ ಪ್ರಕಾರದಿಂದ ಕತ್ತರಿಸಿ, ಸುಂದರ ಆಕಾರದ ವಸ್ತುಗಳನ್ನು ರಚಿಸುವ ಕಲೆಯನ್ನು ವಿವರಿಸುತ್ತವೆ. ಸಜೀವ-ನಿರ್ಜೀವ (೭೧) ಎಂಬುದು ವಾತ್ಸಾಯನನು ಉಲ್ಲೇಖಿಸಿರುವ ಯಂತ್ರಮಾಂತ್ರಿಕಾ ಎಂಬ ಹೆಸರಿನ ವಿದ್ಯೆಯೇ ಆಗಿರಬೇಕೆಂದು ಗೊತ್ತಾಗುತ್ತದೆ. ಇದರ ವಿಷಯದಲ್ಲಿ ಟೀಕಾಕಾರನಾದ ಯಶೋಧರನು ಗಮನಾಗಮನ ಹಾಗೂ ಸಂಗ್ರಾಮಕ್ಕಾಗಿ ಸಜೀವ ಇಲ್ಲವೆ ನಿರ್ಜೀವ ಯಂತ್ರಗಳನ್ನು ರಚಿಸುವ ಕಲೆಯೆಂದು ಹೇಳಿದ್ದಾನೆ. ಇದನ್ನು ಸ್ವತಃ ವಿಶ್ವಕರ್ಮನೇ ವಿವರಿಸಿದ್ದಾನೆ. ಶಕುನಿರುತ (೭೨) ಎಂಬುದು ಪಕ್ಷಿಗಳ ಮಾತುಗಳನ್ನು ತಿಳಿದುಕೊಳ್ಳುವ ಕಲೆಯಾಗಿದೆ.

ಎಪ್ಪತ್ತೆರಡು ಕಲೆಗಳ ಇನ್ನೊಂದು ಸೂಚಿಯು ಔಪಪಾತಿಕ ಸೂತ್ರ (೧೦೭) ದರಲ್ಲಿಯೂ ಕಂಡುಬರುತ್ತದೆ. ಅದು ಸಮವಾಯಾಂತರ್ಗತ ಸೂಚಿಯಿಂದ ದೊರೆಯು ತ್ತದೆ. ಇದರಲ್ಲಿ ಕೆಲವೊಂದು ಹೆಸರುಗಳು ಹೆಚ್ಚು-ಕಡಿಮೆಯಾಗಿರುವುದು ಕಂಡು ಬರುತ್ತದೆ. ಮೇಲೆ ಹೇಳಿದ ನಾಮಾವಲಿಯಿಂದ ಇದರಲ್ಲಿ ಮಧುಸಿಕ್ಥ (೨೫), ಮೇಂಢಾಲಕ್ಷಣ, ದಂಡಲಕ್ಷಣ, ಚಂದ್ರ ಲಕ್ಷಣಗಳಿಂದ ಆರಂಭವಾಗಿ ಸಭಾಸದ ವರೆಗೂ (೪, ರಿಂದ ೫೧) ದಂಡಯುದ್ಧ, ಯಷ್ಟಿಯುದ್ಧ ಮತ್ತು ಥರ್ಮಕ್ರೀಡಾ ಈ ಹೆಸರುಗಳೂ ಇಲ್ಲ. ಹಾಗೆಯೇ ಪಾಶಕ (ಬಲೆಯಿಂದ ಜೂಜನ್ನಾಡುವುದು), ಗೀತಿಕಾ (ಗೇಯ ಛಂದದ ರಚನೆ), ಹಿರಣ್ಯಯುಕ್ತಿ, ಸುವರ್ಣಯುಕ್ತಿ, ಚೂರ್ಣ ಯುಕ್ತಿ, (ಬೆಳ್ಳಿ, ಬಂಗಾರ ಮತ್ತು ಮುತ್ತು ಮೊದಲಾದ ರತ್ನಗಳಿಂದ ಕೆತ್ತಿ ಭಿನ್ನ ಭಿನ್ನ ಆಭರಣಗಳನ್ನು ಮಾಡುವುದು), ಗರುಡವ್ಯೂಹ, ಶಕಟವ್ಯೂಹ, ಲಶಾಯುದ್ಧ ಹಾಗೂ ಮುಕ್ತಾಕ್ರೀಡಾ ಈ ಹೆಸರುಗಳು ಹೊಸದಾಗಿ ಬಂದಿವೆ. ಔಪಪಾತಿಕ ಸೂತ್ರ ದಲ್ಲಿ ಗಣಿಸಲಾದ ಕಲೆಗಳು ಎಪ್ಪತ್ತೆರಡು ಎಂದು ಇದ್ದರೂ ಆದರೆ ಬೇರೆ ರೂಪದಿಂದ ಎಣಿಸಿದರೆ ಅವುಗಳ ಒಟ್ಟು ಸಂಖ್ಯೆಯು ಎಂಭತ್ತು ಆಗುತ್ತದೆ. ಇವಲ್ಲದೆ ಬೇರೆ

ಬೇರೆ ಜೈನ ಪುರಾಣ ಹಾಗೂ ಕಾವ್ಯಗಳಲ್ಲಿ ಎಲ್ಲೆಲ್ಲಿ ಶಿಕ್ಷಣದ ಪ್ರಸಂಗವು ಬರುವುದೋ ಅಲ್ಲೆಲ್ಲ ಬಹುತರ ಕಲೆಗಳ ವಿಷಯವನ್ನೂ ಹೇಳಲಾಗಿದೆ. ಆದರೆ ಅವುಗಳ ಸಂಖ್ಯೆ ಮತ್ತು ಹೆಸರುಗಳಲ್ಲಿ ಭೇದಗಳು ಕಂಡುಬರುತ್ತವೆ. ಉದಾಹರಣೆಗೆಂದು ಹತ್ತನೆಯ ಶತಮಾನದಲ್ಲಿ ಪುಷ್ಪದಂತನು ರಚಿಸಿದ ಅಪಭ್ರಂಶ ಕಾವ್ಯವಾದ ನಾಗಕುಮಾರ-ಚರಿತ (೩, ೧) ರಲ್ಲಿ ಕಥಾನಾಯಕನಿಗೆ ಒಬ್ಬ ನಾಗನಿಂದ ಶಿಕ್ಷಣ ಕೊಡುವ ಪ್ರಸಂಗವು ಬಂದಿದೆ. ಅಲ್ಲಿ ಅವನು ಸಿದ್ಧರಿಗೆ ನಮಸ್ಕಾರ ಮಾಡಿ ಕೆಳಗೆ ಕಾಣಿಸಿದ ಕಲೆಗಳನ್ನು ಕಲಿಸಿದ್ದಾನೆ:—(೧) ಹದಿನೆಂಟು ಲಿಪಿಗಳು, (೨) ಕಾಲಾಕ್ಷರ, (೩) ಗಣಿತ, (೪) ಗಾಂಧರ್ವ, (೫) ವ್ಯಾಕರಣ, (೬) ಛಂದ, (೭) ಅಲಂಕಾರ, (೮) ನಿಘಂಟು, (೯) ಜ್ಯೋತಿಷ (ಗ್ರಹಗಮನ-ಪ್ರವೃತ್ತಿಗಳು), (೧೦) ಕಾವ್ಯ, (೧೧) ನಾಟಕ ಶಾಸ್ತ್ರ, (೧೨) ಪ್ರಹರಣ, (೧೩) ಪಟಹ. (೧೪) ಶಂಖ, (೧೫) ತಂತ್ರೀ. (೧೬) ತಾಲ ಮೊದಲಾದ ವಾದ್ಯಗಳು, (೧೭) ಪತ್ರಭೇದ್ಯ, (೧೮) ಪುಷ್ಪಭೇದ್ಯ, (೧೯) ಫಲಭೇದ್ಯ, (೨೦) ಅಶ್ವಾರೋಹಣ, (೨೧) ಗಜಾರೋಹಣ, (೨೨) ಚಂದ್ರಬಲ (೨೩) ಸ್ವರೋದಯ, (೨೪) ಸಪ್ತಭೌಮ ಪ್ರಾಸಾದ-ಪ್ರಮಾಣ, (೨೫) ತಂತ್ರ, (೨೬) ಮಂತ್ರ. (೨೭) ವಶೀಕರಣ. (೨೮) ವ್ಯೂಹ-ವಿರಚನ, (೨೯) ಪ್ರಹಾರಣ, (೩೦) ನಾನಾ ಶಿಲ್ಪ (೩೧) ಚಿತ್ರಲೇಖನ, (೩೨) ಚಿತ್ರಾಭಾಸ, (೩೩) ಇಂದ್ರಜಾಲ (೩೪) ಸ್ತಂಭನ, (೩೫) ಮೋಹನ, (೩೬) ವಿದ್ಯಾ-ಸಾಧನ, (೩೭) ಜನಸಂಕ್ಷೋಭನ, (೩೮) ನರ-ನಾರೀಲಕ್ಷಣ, (೩೯) ಭೂಷಣವಿಧಿ, (೪೦) ಕಾಮವಿಧಿ, (೪೧) ಸೇವಾವಿಧಿ, (೪೨) ಗಂಧಯುಕ್ತಿ. (೪೩) ಮಣಿಯುಕ್ತಿ, (೪೪) ಔಷಧಯುಕ್ತಿ ಮತ್ತು (೪೫) ನರೇಶ್ವರ-ವೃತ್ತಿ (ರಾಜನೀತಿ).

ಮೇಲೆ ಕಾಣಿಸಿದ ಸಮವಾಯಾಂಗದ ಕಲಾ-ಸೂಚಿಯಲ್ಲಿ ಒಮ್ಮೊಮ್ಮೆ ಒಂದು ಸಂಖ್ಯೆಯಲ್ಲಿ ನಡುವೆ ಅನೇಕ ಕಲೆಗಳ ಹೆಸರುಗಳು ಕಂಡುಬರುತ್ತವೆ. ಇವುಗಳನ್ನು ಬೇರೆ ಬೇರೆಯಾಗಿ ಎಣಿಸಿದರೆ ಒಟ್ಟು ಕಲೆಗಳ ಸಂಖ್ಯೆಯು ೮೬ ಆಗುತ್ತದೆ. ಮಹಾಯಾನ ಬೌದ್ಧ ಪರಂಪರೆಯ ಲಲಿತ ವಿಸ್ತಾರ ಎಂಬ ಗ್ರಂಥದಲ್ಲಿ ಉಲ್ಲೇಖಿಸಿದ ಕಲೆಗಳ ಸಂಖ್ಯೆಯು ೮೬ ಇದೆ. ಆದರೆ ಅಲ್ಲಿ ಅನೇಕ ಕಲೆಗಳ ಹೆಸರುಗಳು ಈ ಸೂಚಿಗಿಂತ ಭಿನ್ನವಾಗಿವೆ. ಅವು ಅಕ್ಷುಣ್ಣ-ವೇಧಿತ್ವ, ಮರ್ಮವೇಧಿತ್ವ, ಶಬ್ದವೇಧಿತ್ವ ವೈಷಿಕ ಇತ್ಯಾದಿ.

ಕಲೆಗಳ ಅನ್ಯ ಸೂಚಿಯು ವಾತ್ಸ್ಯಾಯನ ಕೃತ ಕಾಮಸೂತ್ರದಲ್ಲಿ ದೊರೆಯುತ್ತದೆ. ಇದೇ ಸೂಚಿಯು ಕೆಲವೊಂದು ಮಾರ್ಪಾಡುಗಳನ್ನು ಹೊಂದಿದ್ದು, ಭಾಗವತ ಪುರಾಣದ ಟೀಕೆಗಳಲ್ಲಿಯೂ ಕಂಡುಬರುತ್ತದೆ. ಇದರಲ್ಲಿ ಕಲೆಗಳ ಸಂಖ್ಯೆಯು ೬೪ ಇದೆ. ಇದರಲ್ಲಿ ಪ್ರಸ್ತುತ ಕಲಾಸೂಚಿಯಿಂದ ಅನೇಕ ಭಿನ್ನತೆಗಳಿದ್ದುದು ಕಂಡು ಬರುತ್ತದೆ. ಅಂಥ ಕೆಲವೊಂದು ಕಲೆಗಳು ಹೀಗಿವೆ:—ವಿಶೇಷಕ ಛೇದ್ಯ (ಹಣೆಯ ಮೇಲೆ ಚಂದನ ಮೊದಲಾದವುಗಳನ್ನು ಹಚ್ಚಿಕೊಳ್ಳುವ

ಕಲೆ), ತಂಡುಲ ಕುಸುಮ ಬಲಿವಿಕಾರ (ಪೂಜಾನಿಮಿತ್ತ ಮತ್ತು ಅಕ್ಷತೆ ಮತ್ತು ಹೂವು ಗಳನ್ನು ವಿವಿಧ ಪ್ರಕಾರ ಸುಂದರ ಆಕೃತಿಯಲ್ಲಿಟ್ಟು ವಿರಚಿಸುವುದು), ಚಿತ್ರಯೋಗ (ವಿವಿಧ ಪ್ರಕಾರದ ಆಶ್ಚರ್ಯ), ಹಸ್ತಲಾಘವ (ಕೈಗಳ ಕುಶಲತೆ), ತಕ್ಷಕರ್ಮ (ಕತ್ತರಿಸಿ, ಕಡಿದು ಬಹಳಷ್ಟು ಸುಂದರ ವಸ್ತುಗಳನ್ನು ಸಿದ್ಧಗೊಳಿಸುವುದು), ಉತ್ಸಾದನ, ಸಂವಾಹನ, ಕೇಶಮರ್ದನ, ಪುಷ್ಪಶಕಟಿಕಾ ಮೊದಲಾದವುಗಳು. ಕಾಮಸೂತ್ರದ ಟೀಕಾಕಾರನಾದ ಯಶೋಧರನು ತನ್ನದೊಂದು ಸ್ವತಂತ್ರ ಸೂಚಿ ಯನ್ನು ಕೊಟ್ಟಿದ್ದಾನೆ. ಅವನು ಶಾಸ್ತ್ರಗಳಲ್ಲಿ ಲಭಿಸಿದ ಮೂಲ ಕಲೆಗಳು ೬೪ ಎಂದು ಹೇಳಿದ್ದಾನೆ. ಈ ಮೂಲ ಕಲೆಗಳ ಭೇದೋಪಭೇದಗಳು ೫೧೮ ಆಗುತ್ತವೆಂದೂ ಸಹ ಸೂಚಿಸಿದ್ದಾನೆ. ಅವನ ಈ ಮೂಲ ಕಲೆಗಳ ವರ್ಗೀಕರಣವನ್ನು ಸಹ ಮಾಡಿದ್ದಾನೆ. ಅದಕ್ಕನುಸರಿಸಿ ಶೀತ ಮೊದಲಾದ ೨೪ ಕರ್ಮಾಶ್ರಯ; ಆಯು ಪ್ರಾಪ್ತಿ ಮೊದ ಲಾದ ೧೫ ನಿರ್ಜೀವ, ದ್ಯೂತಾಶ್ರಯ, ಉಪಸ್ಥಾನವಿಧಿಯೇ ಮೊದಲಾದ ಐದು ಸಜೀವ ಆಶ್ರಯ, ಪುರುಷಭಾವಗ್ರಹಣ ಮೊದಲಾದ ೧೬ ಶಯನೋಪ ಚಾರಿಕ, ಹಾಗೂ ಸಾಶ್ರುಪಾತ, ಪಾತಶಾಪನ ಮೊದಲಾದ ನಾಲ್ಕು ಉತ್ತರ ಕಲೆಗಳನ್ನು ಹೇಳಲಾಗಿದೆ. ಇದಲ್ಲದೆ ಅನೇಕ ಪುರಾಣ ಹಾಗೂ ಕಾವ್ಯ ಗ್ರಂಥಗಳ ಲ್ಲಿಯೂ ಕಲೆಗಳ ಹೆಸರುಗಳು ದೊರೆಯುತ್ತವೆ. ಅವು ಸಂಖ್ಯೆ ಹಾಗೂ ಹೆಸರು ಗಳಲ್ಲಿಯೂ ಭಿನ್ನಭಿನ್ನವಾಗಿರುವುದು ಕಂಡುಬರುತ್ತದೆ, ಕಾದಂಬರಿಯಲ್ಲಿ ೪೫ ಕಲೆ ಗಳನ್ನು ಹೇಳಿದೆ. ಅದರಲ್ಲಿ ಪ್ರಮಾಣ, ಧರ್ಮಶಾಸ್ತ್ರ, ಪುಸ್ತಕ-ವ್ಯಾಪಾರ, ಆಯು ರ್ವೇದ, ಸುರುಂಗೋಪಭೇದ ಮೊದಲಾದವುಗಳು ವಿಶೇಷವಾಗಿವೆ.

## ವಾಸ್ತು ಕಲೆ

**ಜೈನ ಕಟ್ಟಡಗಳ ಆದರ್ಶ :—**

ಮೇಲೆ ಹೇಳಿದ ಕಲಾ ಸೂಚಿಯಲ್ಲಿ ವಾಸ್ತು ಕಲೆಯ ಹೆಸರು ಕೂಡ ಬಂದಿದೆ. ಅದರಂತೆ ಸ್ಕಂಧಾವಾರ, ನಗರ ಮತ್ತು ವಾಸ್ತು ಇವುಗಳ ಅಳತೆ ಹಾಗೂ ಸ್ಥಳಗಳ ನಿರ್ದೇಶವನ್ನು ಭಿನ್ನ ಭಿನ್ನವಾಗಿ ಮಾಡಿದ್ದು ಕಂಡುಬರುತ್ತದೆ. ವಾಸ್ತುನಿವೇಶ ಮತ್ತು ಮಾನೋನ್ಮಾನಗಳ ಸಂಬಂಧಗಳಲ್ಲಿ ತಮ್ಮ ಪರಂಪರೆಯಲ್ಲಿ ಜೈನ ಕಲೆಯು ಜೈನಧರ್ಮದ ತ್ರೈಲೋಕ್ಯ ಸಂಬಂಧದ ಮಾನ್ಯತೆಯಿಂದ ಪ್ರಭಾವಿತವಾದುದು ಕಂಡು ಬರುತ್ತದೆ. ಹೀಗಾಗಿ ಇಲ್ಲಿ ಅದರ ಸಾಮಾನ್ಯ ರೂಪದ ಸ್ವರೂಪವನ್ನು ತಿಳಿದುಕೊಳ್ಳುವ ಅವಶ್ಯಕತೆಯು ಇದೆ. ಜೈನ ಸಾಹಿತ್ಯದ ಕರಣಾನುಯೋಗ ಪ್ರಕರಣದಲ್ಲಿ, ಅನಂತ ಆಕಾ ಶದ ಮಧ್ಯದಲ್ಲಿ ಇರುವ ಲೋಕಾಕಾಶವು ಎತ್ತರಕ್ಕೆ ಹದಿನಾಲ್ಕು ರಜ್ಜು ಪ್ರಮಾಣವಿದ್ದೆ, ಅದರಲ್ಲಿ ಏಳು ರಜ್ಜು ಪ್ರಮಾಣದ ಮೇಲ್ಭಾಗವು ಊರ್ಧ್ವಲೋಕವಾಗಿದೆ. ಇದರಲ್ಲಿ

ಹದಿನಾರು 'ಸ್ವರ್ಗಗಳಿವೆ, ಎಂದು ಮೊದಲಾಗಿ ಹೇಳಲಾಗಿದೆ. ಏಳು ರಜ್ಜು ಪ್ರಮಾಣ ದಲ್ಲಿರುವ ಕೆಳಗಿನ ಭಾಗವು ಅಧೋಲೋಕವೆನಿಸುತ್ತದೆ. ಇದರಲ್ಲಿ ಏಳು ನರಕಗಳು ಇವೆ. ಇದರ ಮಧ್ಯದಲ್ಲಿ ಝಲ್ಲರಿಯ ಆಕಾರದ ಮಧ್ಯಲೋಕವಿದೆ. ಇದರಲ್ಲಿ ಗೋಲಾ ಕಾರವೂ ವಲಯಾಕಾರವೂ ಇರುವ ಜಂಬೂದ್ವೀಪ, ಲವಣ ಸಮುದ್ರ ಮೊದಲಾದ ಉತ್ತರೋತ್ತರ ದುಪ್ಪಟ್ಟು ಪ್ರಮಾಣವುಳ್ಳ ಅಸಂಖ್ಯ ದ್ವೀಪಸಮುದ್ರಗಳಿವೆ. ಇದರ ಸವಿಸ್ತಾರವಾದ ವರ್ಣನೆಯನ್ನು ನಾವು ಯತಿವೃಷಭ ಕೃತ ತ್ರಿಲೋಕ-ಪ್ರಜ್ಞಪ್ತಿಯಲ್ಲಿ ಕಾಣುತ್ತೇವೆ. ಇದರಲ್ಲಿ ವಾಸ್ತು-ಮಾನ ಮತ್ತು ವಿನ್ಯಾಸಗಳಿಗೆ ಸಂಬಂಧಿಸಿದ ಉಪ ಯುಕ್ತ ಪ್ರಕರಣದ ಸಂಕ್ಷಿಪ್ತ ವಿಷಯ ಪರಿಚಯವು ಕೆಳಗೆ ಕಾಣಿಸಿದ ಪ್ರಕಾರ ಇದೆ.

ತಿಲೋಯಪಣ್ಣತ್ತಿಯ ಮೂರನೆಯ ಅಧಿಕಾರದ ೨೨ ರಿಂದ ೬೨ ಗಾಹೆಗಳ ವರೆಗೆ ಅಸುರಕುಮಾರ ಮೊದಲಾದ ಭವನವಾಸೀ ದೇವ ಸಮೂಹದ ಭವನಗಳು, ವೇದಿಕೆಗಳು, ಕೂಟಗಳು, ಜಿನಮಂದಿರ ಮತ್ತು ಪ್ರಾಸಾದಗಳು ಇವುಗಳ ವರ್ಣನೆಗಳಿವೆ. ಭವನಗಳ ಆಕಾರವು ಸಮಚತುಷ್ಕೋಣವೆಂದಿದೆ. ಪ್ರತಿಯೊಂದು ಭವನದ ನಾಲ್ಕೂ ದಿಕ್ಕುಗಳಲ್ಲಿ ನಾಲ್ಕು ವೇದಿಗಳು ಇರುತ್ತವೆ. ಅವುಗಳ ಹೊರಭಾಗದಲ್ಲಿ ಅಶೋಕ, ಸಪ್ತಚ್ಛದ, ಚಂಪಕ ಮತ್ತು ಆಮ್ರ ಈ ವೃಕ್ಷಗಳ ಉಪವನಗಳಿರುತ್ತವೆ. ಈ ಉಪವನ ಗಳಲ್ಲಿ ಚೈತ್ಯವೃಕ್ಷಗಳಿರುತ್ತವೆ. ಅವುಗಳ ನಾಲ್ಕೂ ದಿಕ್ಕುಗಳಲ್ಲಿ ತೋರಣ, ಎಂಟು ಮಹಾಮಂಗಲ ದ್ರವ್ಯ ಮತ್ತು ಮಾನಸ್ತಂಭ ಸಹಿತ ಜಿನ-ಪ್ರತಿಮೆಗಳು ವಿರಾಜಮಾನವಾಗಿವೆ. ವೇದಿಗಳ ಮಧ್ಯದಲ್ಲಿ ವೇತ್ರಾಸನದ ಆಕಾರದಲ್ಲಿರುವ ಮಹಾಕೂಟ ಇರುತ್ತವೆ. ಪ್ರತಿಯೊಂದು ಕೂಟದ ಮೇಲೆಯೂ ಒಂದೊಂದು ಜಿನಮಂದಿರಗಳು ಇವೆ. ಪ್ರತಿಯೊಂದು ಜಿನಾಲಯವೂ ಕ್ರಮದಿಂದ ಮೂರು ಕೋಟೆಗಳಿಂದ ಸುತ್ತಲ್ಪಟ್ಟಿವೆ. ಪ್ರತಿಯೊಂದು ಕೋಟೆಯಲ್ಲಿಯೂ ನಾಲ್ಕು-ನಾಲ್ಕು ಗೋಪುರಗಳಿವೆ. ಈ ಕೋಟೆಗಳ ಮಧ್ಯದಲ್ಲಿರುವ ವೀಥಿಗಳಲ್ಲಿ ಒಂದೊಂದು ಮಾನ ಸ್ತಂಭ ಮತ್ತು ಒಂಭತ್ತು-ಒಂಭತ್ತು ಸ್ತೂಪ, ಹಾಗೂ, ವನ ಅಲ್ಲದೆ ಧ್ವಜಗಳು ಮತ್ತು ಚೈತ್ಯಗಳು ಇರುತ್ತವೆ. ಜಿನಾಲಯಗಳ ನಾಲ್ಕೂ ಮಗ್ಗಲಿಗೆ ಇರುವ ಉಪವನಗಳಲ್ಲಿ ಮೂರು-ಮೂರು ಮೇಖಲೆಗಳಿಂದ ಕೂಡಿದ ಬಾವಿಗಳಿವೆ. ಧ್ವಜ ಗಳು ಮಹಾಧ್ವಜಾ ಮತ್ತು ಕ್ಷುದ್ರಧ್ವಜಾ ಎಂದು ಎರಡು ವಿಧವಾಗಿರುತ್ತವೆ. ಮಹಾಧ್ವಜಗಳಲ್ಲಿ ಸಿಂಹ, ಗಜ, ವೃಷಭ, ಗರುಡ, ಮಯೂರ, ಚಂದ್ರ, ಸೂರ್ಯ, ಹಂಸ, ಪದ್ಮ ಮತ್ತು ಚಕ್ರ ಈ ಚಿಹ್ನಗಳಿರುತ್ತವೆ. ಜಿನಾಲಯಗಳಲ್ಲಿ ವಂದನ, ಅಭಿಷೇಕ, ನೃತ್ಯ, ಸಂಗೀತ ಮತ್ತು ಆಲೋಕಗಳಿಗೆ ಬೇರೆ ಬೇರೆ ಮಂಟಪಗಳಿರು ತ್ತವೆ. ಕ್ರೀಡಾಗೃಹ, ಸ್ವಾಧ್ಯಾಯಶಾಲೆ (ಗುಣನ ಗೃಹ), ಚಿತ್ರಶಾಲೆ (ಪಟ್ಟಶಾಲೆ) ಇವೂ ಸಹ ಇರುತ್ತವೆ. ಮಂದಿರಗಳಲ್ಲಿ ಜಿನೇಂದ್ರನ ಮೂರ್ತಿಗಳಲ್ಲದೆ ದೇವಚ್ಛಂದ ದಲ್ಲಿ ಶ್ರೀದೇವಿ, ಶ್ರುತದೇವಿ ಹಾಗೂ ಯಕ್ಷಗಳ ಮೂರ್ತಿಗಳೂ, ಅಷ್ಟಮಂಗಲ ದ್ರವ್ಯ ಗಳೂ ಇರುತ್ತವೆ. ಗಿಂಡಿ, ಕಲಶ, ದರ್ಪಣ, ಧ್ವಜ, ಚಮರ, ಛತ್ರ, ವ್ಯಜನ

ಮತ್ತು ಸುಪ್ರತಿಷ್ಠ ಇವು ಎಂಟು ಮಂಗಲ ದ್ರವ್ಯಗಳಾಗಿವೆ. ಜಿನ ಪ್ರತಿಮೆಗಳ ನೆರೆ-ಹೊರೆಯಲ್ಲಿ ನಾಗ ಮತ್ತು ಯಕ್ಷರ ಯುಗಲಗಳಿದ್ದು ಕೈಯಲ್ಲಿ ಚಮರಗಳನ್ನು ಧರಿಸಿರುತ್ತಾರೆ. ಅಸುರರ ಭವನಗಳು ಏಳು, ಎಂಟು, ಒಂಭತ್ತು, ಹತ್ತು ಅಂತಸ್ತು ಗಳಿಂದ (ಭೂಮಿಗಳಿಂದ) ಕೂಡಿರುತ್ತವೆ. ಅವುಗಳಲ್ಲಿ ಜನ್ಮ, ಅಭಿಷೇಕ, ಶಯನ, ಪರಿಚರ್ಯೆ ಮತ್ತು ಮಂತ್ರಣಾ ಇವುಗಳಿಗಾಗಿ ಬೇರೆ ಬೇರೆ ಕೋಣೆಗಳು ಇರುವವು. ಇವುಗಳಲ್ಲಿ ಸಾಮಾನ್ಯ ಗೃಹ, ಗರ್ಭಗೃಹ, ಕದಲೀಗೃಹ, ಚಿತ್ರಗೃಹ, ಆಸನಗೃಹ, ನಾದಗೃಹ ಮತ್ತು ಲತಾಗೃಹ ಮೊದಲಾದ ವಿಶೇಷ ಗೃಹಗಳಿರುತ್ತವೆ. ಹಾಗೆಯೇ ತೋರಣ, ಪ್ರಾಕಾರ, ಪುಷ್ಕರಣೀ, ಬಾವಿ ಮತ್ತು ಕುಂಡ, ಮತ್ತು ವಾರಣ ಹಾಗೂ ಗವಾಕ್ಷ, ಧ್ವಜ-ಪತಾಕೆಗಳು, ನಾನಾ ಪ್ರಕಾರದ ಪುತ್ತಳಿಗಳು ಇವೆಲ್ಲವುಗಳಿಂದ ಮನೋಹರವಾಗಿ ಸುಸಜ್ಜಿತವಾಗಿರುತ್ತವೆ.

ಮೇರುವಿನ ರಚನೆ :—

ಜಿನೇಂದ್ರ ಮೂರ್ತಿಗಳನ್ನು ಪ್ರತಿಷ್ಠಿಸುವ ಕಾಲದಲ್ಲಿ ಪಂಚ-ಕಲ್ಯಾಣ ಮಹೋತ್ಸವಗಳನ್ನು ಆಚರಿಸಲಾಗುತ್ತದೆ. ಅವುಗಳ ಸಂಬಂಧವು ತೀರ್ಥಂಕರರ ಗರ್ಭ, ಜನ್ಮ, ತಪ, ಜ್ಞಾನ ಮತ್ತು ನಿರ್ವಾಣ ಈ ಐದು ಮಹತ್ವಪೂರ್ಣ ಘಟನೆ ಗಳೊಡನೆ ಇರುತ್ತದೆ. ಜನ್ಮ ಮಹೋತ್ಸವಕ್ಕಾಗಿ ಮಂದರ ಮೇರುವಿನ ರಚನೆ ಯನ್ನೂ ಮಾಡಲಾಗುತ್ತದೆ. ಯಾಕಂದರೆ ತೀರ್ಥಂಕರರ ಜನ್ಮವಾದ ಮೇಲೆ ಅದೇ ಮಹಾನ್ ಪರ್ವತದ ಮೇಲೆ ಇರುವ ಪಾಂಡುಕಶಿಲೆಯ ಮೇಲೆ ಇಂದ್ರನು ಅವನ ಅಭಿಷೇಕವನ್ನು ಮಾಡಿದ್ದನು. ಮಂದರ ಮೇರುವಿನ ವರ್ಣನೆಯು ತ್ರಿಲೋಕ ಪ್ರಜ್ಞಪ್ತಿ (೪, ೧೭೮೦) ಮೊದಲಾದವುಗಳಲ್ಲಿ ನೋಡಲಿಕ್ಕೆ ದೊರೆಯುತ್ತದೆ. ಮಂದರ ಮೇರುವು ಜಂಬೂದ್ವೀಪ ಹಾಗೂ ಮಹಾವಿದೇಹ ಕ್ಷೇತ್ರಗಳ ಮಧ್ಯದಲ್ಲಿದೆ. ಈ ಮಹಾಪರ್ವತವು ಗೋಲಾಕಾರವಾಗಿದೆ. ಅದರ ಒಟ್ಟು ಎತ್ತರವು ಒಂದು ಲಕ್ಷ ಯೋಜನವಿದೆ. ಮೂಲ ಆಯಾಮವು ೧೦೦೯೦ ಯೋಜನಕ್ಕಿಂತ ಸ್ವಲ್ಪ ಹೆಚ್ಚು ಇದೆ. ಇದರ ೧೦೦೦ ಯೋಜನದಷ್ಟು ಕೆಳಭಾಗವು ಅಸ್ತಿವಾರದ ರೂಪದಲ್ಲಿ ಭೂಮಿಯ ಒಳಭಾಗದಲ್ಲಿದೆ. ಉಳಿದದ್ದು ಭೂಮಿಯ ಮೇಲೆ ಆಕಾಶದ ಕಡೆಗೆ ವ್ಯಾಪಿಸಿದೆ. ಅದರ ವಿಸ್ತಾರವು ಮೇಲೆ ಮೇಲೆ ಹೋದಂತೆ ಕಡಿಮೆಯಾಗುತ್ತ ಹೋಗುತ್ತದೆ. ಅದರಿಂದ ಅದು ಪೃಥ್ವೀತಳದ ಮೇಲೆ ೧೦೦೦೦ ಯೋಜನ ಹಾಗೂ ಶಿಖರ ಭೂಮಿಯ ಮೇಲೆ ೧೦೦೦ ಯೋಜನ ಮಾತ್ರ ವಿಸ್ತಾರ ಯುಕ್ತವಾಗಿದೆ. ಪೃಥ್ವಿಯಿಂದ ೫೦೦ ಯೋಜನ ಮೇಲೆ ಹೋದಲ್ಲಿ ೫೦೦ ಯೋಜನ ಸಂಕೋಚ ವಾಗುತ್ತ ಹೋಗಿದೆ. ತರುವಾಯ ಅದು ೧೧೦೦೦ ಯೋಜನಗಳವರೆಗೆ ಸಮಾನ ವಿಸ್ತಾರ ರೂಪದಲ್ಲಿ ಮೇಲೆದ್ದು, ಅಲ್ಲಿಂದ ಮುಂದೆ ಕ್ರಮದಿಂದ ಸಂಕೋಚ ವಾಗುತ್ತ ೫೧೫೦೦ ಯೋಜನದ ಮೇಲೆ ಎಲ್ಲ ಮಗ್ಗಲುಗಳಿಂದಲೂ ಅದು ಪುನಃ

೫೦೦ ಯೋಜನ ಸಂಕೀರ್ಣವಾಗುತ್ತದೆ. ತರುವಾಯ ೧೧೦೦೦ ಯೋಜನದವರೆಗೆ ಸಮಾನ ವಿಸ್ತಾರವನ್ನು ಕಾಯ್ದುಕೊಂಡು, ಪುನಃ ಕ್ರಮದಿಂದ ಕಡಿಮೆಯಾಗುತ್ತ ಹೋಗಿ, ೨೫೦೦೦ ಯೋಜನ ಮೇಲೆ ಅದು ೪೯೪ ಯೋಜನ ಪ್ರಮಾಣ ಸಂಕುಚಿತವಾಗಿ ಹೋಗಿದೆ. (೧೦೦೦+೫೦೦+೧೧೦೦೦+೫೧೫೦೦+೧೧೦೦೦+೨೫೦೦೦ =೧೦೦೦೦೦ ಯೋಜನವು). ೧೦೦೦ ಯೋಜನ ವಿಸ್ತಾರವುಳ್ಳ ಶಿಖರದ ಮಧ್ಯದಲ್ಲಿ ಹನ್ನೆರಡು ಯೋಜನ ವಿಸ್ತಾರವುಳ್ಳ ನಲವತ್ತು ಯೋಜನ ಎತ್ತರವಾದ ಚೂಲಿಕೆ ಇದೆ. ಅದು ಕ್ರಮದಿಂದ ಮೇಲೆ ಹೋದಂತೆ ಅಗಲ ಕಡಿಮೆಯಾಗುತ್ತ ಹೋಗಿ ಕೊನೆಯಲ್ಲಿ ನಾಲ್ಕು ಯೋಜನ ಪ್ರಮಾಣ ಮಾತ್ರ ಉಳಿದಿದೆ. ಮೇರುವಿನ ಶಿಖರದ ಮೇಲೆ ಮತ್ತು ಚೂಲಿಕೆಯ ತಳ ಭಾಗದಲ್ಲಿ ಅದರ ನಾಲ್ಕೂ ಮಗ್ಗಲಿಗೆ ಸುತ್ತುವರಿದಿರುವ ಪಾಂಡುವೆಂಬ ಹೆಸರಿನ ವನವಿದೆ. ಅದರ ಮಧ್ಯದಲ್ಲಿ ನಾಲ್ಕೂ ಮಗ್ಗಲಿಗೆ ಮಾರ್ಗಗಳು, ಅಟ್ಟಾಲಿಕೆಗಳು, ಗೋಪುರಗಳು ಮತ್ತು ಧ್ವಜಪತಾಕೆಗಳು ಇವೆಲ್ಲವುಗಳಿಂದ ಸುಂದರವಾದ ತಟವೇದಿಯು ಇದೆ. ಈ ವೇದಿಯ ಮಧ್ಯಭಾಗದಲ್ಲಿ ಪರ್ವತದ ಚೂಲಿಕೆಯನ್ನು ನಾಲ್ಕೂ ಕಡೆಯಿಂದ ಸುತ್ತುವರಿದಂಥ ಪಾಂಡುವನ ಖಂಡದ ಉತ್ತರ ದಿಕ್ಕಿನಲ್ಲಿ ಅರ್ಧಚಂದ್ರಮನ ಆಕಾರದಲ್ಲಿರುವ ಪಾಂಡುಕಶಿಲೆಯು ಇದೆ. ಅದು ಪೂರ್ವ ಪಶ್ಚಿಮ ೧೦೦ ಯೋಜನ ಉದ್ದವೂ ಮತ್ತು ಉತ್ತರ-ದಕ್ಷಿಣ ೫೦ ಯೋಜನ ಅಗಲವೂ ಎಂಟು ಯೋಜನ ಎತ್ತರವೂ ಇದೆ. ಈ ಪಾಂಡು ಶಿಲೆಯ ಮಧ್ಯದಲ್ಲಿ ಒಂದು ಸಿಂಹಾಸನವಿದೆ. ಅದರ ಎರಡೂ ಮಗ್ಗಲಿಗೆ ಎರಡು ಭದ್ರಾಸನಗಳಿವೆ. ಅಭಿಷೇಕದ ಕಾಲದಲ್ಲಿ ಜಿನೇಂದ್ರ ಭಗವಾನ್‌ನನ್ನು ಮಧ್ಯದಲ್ಲಿರುವ ಸಿಂಹಾಸನದ ಮೇಲೆ ವಿರಾಜಮಾನಗೊಳಿಸುತ್ತಾರೆ. ಸೌಧರ್ಮ ಇಂದ್ರನು ದಕ್ಷಿಣದ ಪೀಠದ ಮೇಲೆಯೂ ಈಶಾನೇಂದ್ರನು ಉತ್ತರ ಪೀಠದ ಮೇಲೆಯೂ ನಿಂತು, ಅಭಿಷೇಕ ಮಾಡುತ್ತಾರೆ.

### ನಂದೀಶ್ವರ ದ್ವೀಪದ ರಚನೆ :—

ಮಧ್ಯಲೋಕದ ಮಧ್ಯದಲ್ಲಿ ಒಂದು ಲಕ್ಷ ಯೋಜನ ವಿಸ್ತಾರವುಳ್ಳ ಜಂಬೂದ್ವೀಪವಿದೆ. ಅದನ್ನು ಕ್ರಮದಿಂದ ಸುತ್ತುವರಿದ ಉತ್ತರೋತ್ತರ ಎರಡು ಪಟ್ಟು ವಿಸ್ತಾರವಾಗುತ್ತ ಹೋಗುವಂಥ ಲವಣ ಸಮುದ್ರ ಮತ್ತು ಧಾತಕೀಖಂಡ ದ್ವೀಪ, ಕಾಲೋದ ಸಮುದ್ರ ಮತ್ತು ಪುಷ್ಕರವರದ್ವೀಪ, ಪುಷ್ಕರವರ ಸಮುದ್ರ ಮತ್ತು ವಾರುಣೀವರದ್ವೀಪ, ವಾರುಣೀವರ ಸಮುದ್ರ ಇದೇ ಪ್ರಕಾರ ಒಂದೇ ಹೆಸರಿನ ಕ್ಷೀರವರ, ಘೃತವರ ಮತ್ತು ಕ್ಷೌದ್ರವರ ಎಂಬ ಹೆಸರುಳ್ಳ ದ್ವೀಪ ಹಾಗೂ ಸಮುದ್ರಗಳಿವೆ. ಅದರ ತರುವಾಯ ಜಂಬೂದ್ವೀಪದಿಂದ ಎಂಟನೆಯ ದ್ವೀಪವು ನಂದೀಶ್ವರ ಎಂಬ ಹೆಸರಿನದಿದೆ. ಇದಕ್ಕೆ ಜೈನಧರ್ಮದಲ್ಲಿ, ಜೈನ ವಾಸ್ತು ಹಾಗೂ ಮೂರ್ತಿ ಕಲೆಯ ಪರಂಪರೆಯಲ್ಲಿ ವಿಶೇಷ ಮಹಾತ್ಮ್ಯವು ಕಂಡುಬರುತ್ತದೆ. ಈ ವಲಯಾಕಾರ

ದ್ವೀಪದ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ವಲಯ ಸೀಮೆಗಳ ಮಧ್ಯ ಭಾಗದಲ್ಲಿ ನಾಲ್ಕು ಅಂಜನಗಿರಿ ಎಂಬ ಹೆಸರಿನ ಪರ್ವತಗಳು ಇವೆ. ಪ್ರತಿಯೊಂದು ಅಂಜನ ಗಿರಿಯ ನಾಲ್ಕೂ ದಿಕ್ಕುಗಳಲ್ಲಿ ಒಂದೊಂದು ಚೌಕೋಣಾಕಾರದ ದ್ರಹ (ವಾಪಿಕಾ) ಇವೆ. ಇವುಗಳ ಹೆಸರುಗಳು ಕ್ರಮದಿಂದ ನಂದಾ, ನಂದವತೀ, ನಂದೋತ್ತರಾ ಮತ್ತು ನಂದೀಘೋಷಾ ಎಂದಿವೆ. ಇದರ ನಾಲ್ಕೂ ಮಗ್ಗಲಿಗೆ ಅಶೋಕ, ಸಪ್ತಚ್ಛದ, ಚಂಪಕ ಮತ್ತು ಮಾವು ಈ ವೃಕ್ಷಗಳ ನಾಲ್ಕು ನಾಲ್ಕು ವನಗಳಿವೆ. ನಾಲ್ಕೂ ವಾಪಿಕೆ ಗಳ ಮಧ್ಯದಲ್ಲಿ ಒಂದೊಂದು ಪರ್ವತವಿದೆ. ಅದು ಮೊಸರಿನಂತೆ (ದಧಿ) ಶ್ವೇತವರ್ಣ ವಾಗಿರುವುದರಿಂದ ದಧಿಮುಖವೆಂದು ಹೆಸರನ್ನು ಹೊಂದಿದೆ. ಅದು ಗೋಲಾಕಾರ ವಾಗಿದೆ. ಅದರ ಮೇಲ್ಭಾಗದಲ್ಲಿ ತಟವೇದಿಗಳೂ ವನಗಳೂ ಇರುತ್ತವೆ. ನಂದಾದಿ ನಾಲ್ಕೂ ವಾಪಿಕೆಗಳ ಎರಡು ಹೊರಗಿನ ಮೂಲೆಗಳಲ್ಲಿ ಒಂದೊಂದು ಸುವರ್ಣಮಯ ಗೋಲಾಕಾರ ರತಿಕರ ಎಂಬ ಹೆಸರಿನ ಪರ್ವತಗಳಿವೆ. ಈ ಪ್ರಕಾರ ಒಂದೊಂದು ದಿಕ್ಕುಗಳಲ್ಲಿ ಒಂದು ಅಂಜನಗಿರಿ, ನಾಲ್ಕು ದಧಿಮುಖ ಮತ್ತು ಎಂಟು ರತಿಕರ ಈ ಪ್ರಕಾರ ಒಟ್ಟು ಕೂಡಿ ಹದಿಮೂರು ಪರ್ವತಗಳಾದುವು. ಇದೇ ಪ್ರಕಾರ ೧೩-೧೩ ಪರ್ವತಗಳು ನಾಲ್ಕೂ ದಿಕ್ಕುಗಳಲ್ಲಿ ಇರುವುದರಿಂದ ಒಟ್ಟು ಪರ್ವತಗಳ ಸಂಖ್ಯೆಯು ೫೨ ಆಗುತ್ತದೆ. ಇವುಗಳ ಮೇಲೆ ಒಂದೊಂದು ಜಿನಮಂದಿರಗಳು ಸ್ಥಾಪಿತವಾಗಿವೆ. ಇದೇ ನಂದೀಶ್ವರ ದ್ವೀಪದ ೫೨ ಜಿನಮಂದಿರಗಳಾಗಿವೆ. ಇವು ಚೈತ್ಯಾಲಯಗಳೆಂದೂ ಪ್ರಸಿದ್ಧವಾಗಿವೆ. ಯಾವ ಪ್ರಕಾರ ಪೂರ್ವ ದಿಕ್ಕಿನ ನಾಲ್ಕು ವಾಪಿಕೆಗಳಿಗೆ ಮೇಲೆ ಹೇಳಿದ ನಂದಾದಿಕ ಎಂಬ ನಾಲ್ಕು ಹೆಸರುಗಳು ಇವೆಯೋ, ಅದೇ ಪ್ರಕಾರ ದಕ್ಷಿಣ ದಿಕ್ಕಿನ ನಾಲ್ಕು ವಾಪಿಕೆಗಳ ಹೆಸರುಗಳು ಅರಜಾ, ವಿರಜಾ, ಅಶೋಕಾ ಮತ್ತು ವೀತಶೋಕಾ ಎಂದು ಇವೆ. ಪಶ್ಚಿಮ ದಿಸೆಯಲ್ಲಿ ವಿಜಯಾ, ವೈಜಯಂತೀ, ಜಯಂತೀ ಮತ್ತು ಅಪರಾಜಿತಾ, ಹಾಗೆಯೇ ಉತ್ತರ ದಿಕ್ಕಿನಲ್ಲಿ ರಮ್ಯಾ, ರಮಣೀಯಾ, ಸುಪ್ರಭಾ ಮತ್ತು ಸರ್ವತೋಭದ್ರಾ ಎಂಬ ಹೆಸರಿನ ವಾಪಿಕೆಗಳು ಇವೆ. ಪ್ರತಿ ಯೊಂದು ವಾಪಿಕೆಯ ನಾಲ್ಕೂ ದಿಕ್ಕಿಗೆ ಇರುವ ಅಶೋಕಾದಿ ವೃಕ್ಷಗಳ ನಾಲ್ಕು-ನಾಲ್ಕು ವನಗಳು ಇರುತ್ತವಷ್ಟೆ. ಅವುಗಳ ನಾಲ್ಕೂ ದಿಕ್ಕುಗಳಲ್ಲಿ ಸೇರಿ ೬೪ ವನಗಳಾ ಗುತ್ತವೆ. ಈ ವನಗಳಲ್ಲಿ ಪ್ರತಿಯೊಂದರ ಮಧ್ಯದಲ್ಲಿಯೂ ಒಂದೊಂದು ಪ್ರಾಸಾದವಿದೆ. ಅದು ಪ್ರತಿಯೊಂದೂ ಚೌರಸ ಆಕಾರದಲ್ಲಿದ್ದು, ಎತ್ತರದಲ್ಲಿ ಉದ್ದಳತೆಯ ಎರಡು ಪಟ್ಟಿನಷ್ಟು ಇರುತ್ತವೆ. ಪ್ರಾಸಾದಗಳಲ್ಲಿ ವ್ಯಂತರ ದೇವರು ತಮ್ಮ ಪರಿವಾರ ಸಹಿತ ಇರುತ್ತಾರೆ. (ತ್ರಿ. ಪ್ರ. ೫,೫೨-೮೨). ಈಗಿನ ಕಾಲದ ಜೈನ ಮಂದಿರಗಳಲ್ಲಿ ಅಲ್ಲಲ್ಲಿ ನಂದೀಶ್ವರ ಪರ್ವತದ ೫೨ ಜಿನಾಲಯಗಳ ರಚನೆಯ ಪ್ರತಿಕೃತಿಗಳನ್ನು ಮಾಡಿದ್ದುಂಟು. ಚಿತ್ರಗಳನ್ನು ಸಹ ತೆಗೆದಿರಿಸಿದ್ದುಂಟು. ಸಧ್ಯಕ್ಕೆ ಸಮ್ಮೇದಶಿಖರ (ಪಾರಸನಾಥ) ಪರ್ವತದ ಸಮೀಪದಲ್ಲಿ ಮೇಲೆ ಹೇಳಿದ ಪ್ರಕಾರ ೫೨ ಜಿನ ಮಂದಿರ ಗಳಿಂದ ಕೂಡಿದ ನಂದೀಶ್ವರದ ರಚನೆಯನ್ನು ಮಾಡಿದ್ದಾರೆ.

**ಸಮವಸರಣ ರಚನೆ :—**

ತೀರ್ಥಂಕರರಿಗೆ ಕೇವಲಜ್ಞಾನವು ಉತ್ಪನ್ನವಾದ ಮೇಲೆ ಇಂದ್ರನ ಆಜ್ಞೆಯಿಂದ ಕುಬೇರನು ಅವರ ಸಮವಸರಣದ ಅರ್ಥಾತ್ ಸಭಾಭವನದ ರಚನೆಯನ್ನು ಮಾಡುತ್ತಾನೆ. ಅದರಲ್ಲಿ ತೀರ್ಥಂಕರರ ಧರ್ಮೋಪದೇಶವು ಆಗುತ್ತದೆ. ಸಮವಸರಣ ರಚನೆಯ ವರ್ಣನೆಯು ಬಹಳಷ್ಟು ವಿಸ್ತಾರವಾಗಿ ಬಂದುದು ದೊರೆಯುತ್ತದೆ. ಅದರ ಆಧಾರದಿಂದ ಜೈನ ವಾಸ್ತುಕಲೆಯ ವಿವಿಧ ರೂಪಗಳು ಪ್ರಭಾವಿತವಾದಂತೆ ಕಂಡು ಬರುತ್ತವೆ. (ತ್ರಿ. ಪ್ರ. ೪,೭೧೧–೯೪೩)ರಲ್ಲಿ ಸಮವಸರಣದ ಸಂಬಂಧದಲ್ಲಿ ಸಾಮಾನ್ಯ ಭೂಮಿ, ಸೋಪಾನ, ವೀಧಿ, ಧೂಲಿಶಾಲ, ಚೈತ್ಯಪ್ರಾಸಾದ, ನೃತ್ಯಶಾಲಾ, ಮಾನ ಸ್ತಂಭ, ಸ್ತೂಪ, ಮಂಡಪ, ಗಂಧಕುಟೀ ಮೊದಲಾದವುಗಳ ವಿನ್ಯಾಸ, ಪ್ರಮಾಣ, ಆಕಾರ ಇತ್ಯಾದಿಗಳ ಬಗ್ಗೆ ಬಹಳಷ್ಟು ವರ್ಣನೆಯು ಲಭಿಸುತ್ತದೆ. ಇದೇ ವರ್ಣನೆಯು ಜಿನಸೇನ ಕೃತ ಆದಿಪುರಾಣ (ಪರ್ವ ೨೩) ದಲ್ಲಿಯೂ ಬಂದಿರುತ್ತದೆ. ಸಮವಸರಣದ ರಚನೆಯು ಸುಮಾರು ಹನ್ನೆರಡು ಯೋಜನ ಆಯಾಮದಲ್ಲಿ ಸೂರ್ಯಮಂಡಲ ಸಮವಾಗಿ ಗೋಲಾಕಾರವಾಗಿರುತ್ತದೆ. ಇದರ ಪೀಠವು ಬಹಳ ಎತ್ತರವಾಗಿರುತ್ತದೆ. ಅಲ್ಲಿಯವರೆಗೆ ತಲುಪಬೇಕಾದರೆ ಸಮವಸರಣ ಭೂಮಿಯಿಂದ ನಾಲ್ಕು ದಿಕ್ಕುಗಳಲ್ಲಿ ಒಂದೊಂದು ಮೊಳ ಎತ್ತರದ ಎರಡು ಸಾವಿರ ಮೆಟ್ಟಲುಗಳನ್ನು ನಿರ್ಮಿಸಬೇಕಾಗುತ್ತದೆ. ಅಲ್ಲಿಂದ ಮುಂದೆ ವೀಧಿಗಳು ಇರುತ್ತವೆ. ಅವುಗಳ ಎರಡೂ ಮಗ್ಗಲಿಗೆ ವೇದಿಕೆಗಳನ್ನು ರಚಿಸಿರುತ್ತಾರೆ ಆಮೇಲೆ ಹೊರಗಿನ ಧೂಲಿಶಾಲ ಎಂಬ ಕೋಟೆಯು ಇರುತ್ತದೆ. ಅದರ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ವಿಜಯ, ವೈಜಯಂತ, ಜಯಂತ ಮತ್ತು ಅಪರಾಜಿತ ಎಂಬ ಹೆಸರಿನ ಗೋಪುರ ದ್ವಾರಗಳಿರುತ್ತವೆ. ಈ ಗೋಪುರಗಳು ಮೂರು ಭೂಮಿಗಳುಳ್ಳವು — ಅಟ್ಟಾಲಿಕೆಗಳುಳ್ಳವುಗಳಾಗಿ ರಮಣೀಯವಾಗಿರುತ್ತವೆ. ಅವುಗಳ ಬಾಹ್ಯ, ಮಧ್ಯ, ಒಳಗಿನ ಪಾರ್ಶ್ವ ಭಾಗಗಳಲ್ಲಿ ಮಂಗಲದ್ರವ್ಯ, ನಿಧಿ, ಧೂಪಘಟ ಗಳಿಂದ ಕೂಡಿದ ದೊಡ್ಡ ದೊಡ್ಡ ಪುತ್ತಳಿಗಳನ್ನು ನಿರ್ಮಿಸಲಾಗಿರುತ್ತದೆ. ಅಷ್ಟ ಮಂಗಲ ದ್ರವ್ಯಗಳನ್ನು ಭವನಗಳ ಪ್ರಕರಣದಲ್ಲಿ ತಿಳಿಸಿದೆ. ನವನಿಧಿಗಳ ಹೆಸರುಗಳು ಹೀಗಿವೆ :—ಕಾಲ, ಮಹಾಕಾಲ, ಪಾಂಡು, ಮಾಣವಕ, ಶಂಖ, ಪದ್ಮ, ನೈಸರ್ಪ, ಪಿಂಗಲ ಮತ್ತು ನಾನಾ ರತ್ನ. ಈ ನವನಿಧಿಗಳು ಕ್ರಮದಿಂದ ಋತುಗಳಿಗೆ ಅನು ಕೂಲವಾದ ಮಾಲೆ ಮೊದಲಾದ ನಾನಾ ದ್ರವ್ಯಗಳನ್ನೂ, ಭೋಜನ, ಧಾನ್ಯ, ಆಯುಧ, ವಾದ್ಯ, ವಸ್ತ್ರ, ಮಂದಿರ, ಆಭರಣ ಮತ್ತು ರತ್ನಗಳನ್ನು ಒದಗಿಸುವ ಶಕ್ತಿ ಯುಳ್ಳಂಥವುಗಳಾಗಿರುತ್ತವೆ. ಗೋಪುರಗಳ ಬಾಹ್ಯ ಭಾಗದಲ್ಲಿ ಮಕರ ತೋರಣ ಗಳೂ ಹಾಗೂ ಒಳಭಾಗದಲ್ಲಿ ರತ್ನತೋರಣಗಳೂ ಇರುತ್ತವೆ. ಮಧ್ಯ ಭಾಗದ ಎರಡೂ ಮಗ್ಗಲುಗಳಲ್ಲಿ ಒಂದೊಂದು ನಾಟ್ಯಶಾಲೆಗಳು ಇರುತ್ತವೆ. ಈ ಗೋಪುರ ಗಳ ದ್ವಾರಪಾಲಕರು ಜ್ಯೋತಿಷ್ಕ ದೇವರಿರುತ್ತಾರೆ. ಇವರು ತಮ್ಮ ಕೈಗಳಲ್ಲಿ ರತ್ನ ದಂಡವನ್ನು ಧರಿಸಿರುತ್ತಾರೆ. ಕೋಟೆಯ ಒಳಗೆ ಹೋದ ಮೇಲೆ ಒಂದೊಂದು

ಜಿನಭವನದ ಅಂತರಾಳದಿಂದ ಐದೈದು ಚೈತ್ಯಪ್ರಾಸಾದಗಳು ದೊರೆಯುತ್ತವೆ. ಇವು ಉಪವನ ಮತ್ತು ವಾಪಿಕೆಗಳಿಂದ ಶೋಭಿಸುತ್ತವೆ. ಹಾಗೆಯೇ ವೀಥಿಗಳ ಎರಡೂ ಪಾರ್ಶ್ವ ಭಾಗಗಳಲ್ಲಿ ಎರಡೆರಡು ನಾಟ್ಯ ಶಾಲೆಗಳು ಶರೀರಾಕೃತಿಯ ಹನ್ನೆರಡು ಪಟ್ಟು ಎತ್ತರವಾಗಿರುತ್ತವೆ. ಒಂದೊಂದು ನಾಟ್ಯ ಶಾಲೆಯಲ್ಲಿ ೩೨ ರಂಗಭೂಮಿಗಳು ಇರುತ್ತವೆ. ಇವುಗಳಲ್ಲಿ ಒಂದೊಂದರ ಮೇಲೂ ೩೨ ಭವನವಾಸೀ ಕನ್ಯೆಯರು ಅಭಿನಯ ಹಾಗೂ ನೃತ್ಯ ಮಾಡುವಷ್ಟು ಸ್ಥಳವಿರುತ್ತದೆ.

ಮಾನಸ್ತಂಭ :—

ಮಾರ್ಗಗಳ ನಟ್ಟನಡುವೆ ಒಂದೊಂದು ಮಾನಸ್ತಂಭಗಳು ಸ್ಥಾಪಿತವಾಗಿರುತ್ತವೆ. ಇವು ಆಕಾರದಲ್ಲಿ ಗೋಲ, ಮತ್ತು ನಾಲ್ಕು ಗೋಪುರದ್ವಾರಗಳೂ ಧ್ವಜ ಪತಾಕೆಗಳೂ ಇರುವ ಒಂದೊಂದು ಕೋಟೆಯಿಂದ ಸುತ್ತುವರಿದಿರುತ್ತವೆ. ಇದರನಾಲ್ಕೂ ಕಡೆಗೆ ಸುಂದರ ವನಖಂಡಗಳು ಇರುತ್ತವೆ. ಇವುಗಳಲ್ಲಿ ಪೂರ್ವಾದಿ ದಿಶಾಕ್ರಮದಿಂದ ಸೋಮ, ಯಮ, ವರುಣ ಮತ್ತು ಕುಬೇರ ಈ ಲೋಕಪಾಲಕರ ರಮಣೀಯವಾದ ಕ್ರೀಡಾನಗರಗಳಿರುತ್ತವೆ. ಮಾನಸ್ತಂಭವು ಕ್ರಮವಾಗಿ ಚಿಕ್ಕ ಚಿಕ್ಕದಾಗುತ್ತ ಹೋಗುವಂಥ ಮೂರು ಗೋಲಾಕಾರ ಪೀಠಗಳ ಮೇಲೆ ಸ್ಥಾಪಿತವಾಗಿರುತ್ತದೆ. ಮಾನಸ್ತಂಭದ ಎತ್ತರವು ತೀರ್ಥಂಕರರ ಶರೀರಾಕೃತಿಯ ಹನ್ನೆರಡು ಪಟ್ಟು ಇರುವುದೆಂದು ಹೇಳಿದೆ. ಮಾನಸ್ತಂಭವು ಮೂರು ಖಂಡಗಳಲ್ಲಿ ವಿಭಾಜಿತವಾಗಿರುತ್ತದೆ. ಇದರ ಮೂಲ ಭಾಗವು ವಜ್ರದ್ವಾರಗಳಿಂದ ಕೂಡಿದುದು, ಮಧ್ಯಭಾಗವು ಸ್ಫಟಿಕ ಮಣಿಮಯ ವೃತ್ತಾಕಾರವಾದುದು, ಮೇಲಿನ ಭಾಗವು ವೈಡೂರ್ಯ ಮಣಿಮಯವಾಗಿರುತ್ತದೆ. ಅದರ ನಾಲ್ಕೂ ದಿಕ್ಕುಗಳಿಗೆ ಚವರಿ, ಘಂಟೆ, ಗೆಜ್ಜೆ, ರತ್ನಹಾರ ಮತ್ತು ಧ್ವಜಗಳೂ ಶೋಭಿಸುತ್ತವೆ. ಮಾನಸ್ತಂಭದ ಶಿಖರದ ಮೇಲೆ ನಾಲ್ಕೂ ದಿಕ್ಕುಗಳಲ್ಲಿ ಎಂಟು ಎಂಟು ಪ್ರಾತಿಹಾರ್ಯಗಳಿಂದ ಕೂಡಿದ ಒಂದೊಂದು ಜಿನೇಂದ್ರ-ಪ್ರತಿಮೆಯು ವಿರಾಜಮಾನವಾಗಿರುತ್ತದೆ. ಪ್ರಾತಿಹಾರ್ಯಗಳ ಹೆಸರುಗಳು ಹೀಗಿವೆ :—ಅಶೋಕವೃಕ್ಷ, ದಿವ್ಯಪುಷ್ಪ ವೃಷ್ಟಿ, ದಿವ್ಯಧ್ವನಿ, ಚಾಮರ, ಆಸನ, ಭಾಮಂಡಲ, ದುಂದುಭಿ ಮತ್ತು ಛತ್ರ. ಪ್ರತಿಯೊಂದು ಮಾನಸ್ತಂಭದ ಪೂರ್ವಾದಿ ನಾಲ್ಕೂ ದಿಕ್ಕುಗಳಲ್ಲಿ ಒಂದೊಂದು ವಾಪಿಕೆಗಳು ಇರುತ್ತವೆ. ಪೂರ್ವಾದಿ ದಿಸೆಗಳಲ್ಲಿರುವ ಮಾನಸ್ತಂಭದ ವಾಪಿಕೆಗಳ ಹೆಸರುಗಳು ಹೀಗಿವೆ :—ನಂದೋತ್ತರಾ, ನಂದಾ, ನಂದೀಮತಿ ಮತ್ತು ನಂದೀಘೋಷಾ. ದಕ್ಷಿಣ ಮಾನಸ್ತಂಭದ ವಾಪಿಕೆಗಳು: ವಿಜಯಾ, ವೈಜಯಂತಾ, ಜಯಂತಾ ಮತ್ತು ಅಪರಾಜಿತಾ. ಪಶ್ಚಿಮ ಮಾನಸ್ತಂಭಕ್ಕೆ ಸಂಬಂಧಿಸಿದ ವಾಪಿಕೆಗಳು :—ಅಶೋಕಾ, ಸುಪ್ರತಿಯುದ್ಧಾ, ಕುಮುದಾ ಮತ್ತು ಪುಂಡರೀಕಾ ಉತ್ತರ ಮಾನಸ್ತಂಭದ ವಾಪಿಕೆಗಳು :—ಹೃದಯಾನಂದಾ, ಮಹಾನಂದಾ, ಸುಪ್ರತಿಬುದ್ಧಾ ಮತ್ತು ಪ್ರಭಂಕರಾ. ಈ ವಾಪಿಕೆಗಳು ಚೌರಸ

ಆಕಾರದ ಕಟ್ಟೆಗಳು ಮತ್ತು ತೋರಣಗಳಿಂದ ಯುಕ್ತವಾಗಿದ್ದು, ಜಲಕ್ರೀಡೆಗೆ ಯೋಗ್ಯ ದಿವ್ಯ ದ್ರವ್ಯಗಳು ಹಾಗೂ ಸೋಪಾನಗಳಿಂದ ಕೂಡಿರುತ್ತವೆ. ಮಾನಸ್ತಂಭದ ಪ್ರಯೋಜನವು, ಅದರ ದರ್ಶನ ಮಾತ್ರದಿಂದ ದರ್ಶಕನ ಮದವು ದೂರವಾಗಿ ಬಿಡುತ್ತದೆ; ಅವನ ಮನಸ್ಸಿನಲ್ಲಿ ಧಾರ್ಮಿಕ ಶ್ರದ್ಧೆಯು ಉತ್ಪನ್ನವಾಗುತ್ತದೆ; ಹೀಗಿದೆಯೆಂದು ಹೇಳಲಾಗಿದೆ.

### ಚೈತ್ಯವೃಕ್ಷ ಮತ್ತು ಸ್ತೂಪ :—

ಸಮವಸರಣದ ಮುಂದಿನ ವನ ಭೂಮಿಗಳಲ್ಲಿ ಅಶೋಕ, ಸಪ್ತಚ್ಛದ ಚಂಪಕ ಮತ್ತು ಆಮ್ರ ಈ ನಾಲ್ಕು ಚೈತ್ಯವೃಕ್ಷಗಳು ಇರುತ್ತವೆ. ಇವುಗಳ ಎತ್ತರವೂ ಕೂಡ ತೀರ್ಥಂಕರರ ಶರೀರದ ಮಾನದಿಂದ ಹನ್ನೆರಡು ಪಟ್ಟು ಇರುತ್ತದೆ. ಪ್ರತಿಯೊಂದು ಚೈತ್ಯವೃಕ್ಷವನ್ನು ಆಶ್ರಯಿಸಿದ ನಾಲ್ಕೂ ದಿಕ್ಕುಗಳಲ್ಲಿ ಎಂಟು ಪ್ರಾತಿಹಾರ್ಯಗಳಿಂದ ಕೂಡಿದ ನಾಲ್ಕು-ನಾಲ್ಕು ಜಿನ ಪ್ರತಿಮೆಗಳು ಇರುತ್ತವೆ. ವನ ಭೂಮಿಯಲ್ಲಿ ದೇವಭವನ ಮತ್ತು ಭವನ ಭೂಮಿಗಳ ಪಾರ್ಶ್ವಭಾಗಗಳಲ್ಲಿ ಪ್ರತಿಯೊಂದೂ ವೀಧಿಯ ಮಧ್ಯದಲ್ಲಿ ಒಂಭತ್ತು-ಒಂಭತ್ತು ಸ್ತೂಪಗಳಿರುತ್ತವೆ. ಈ ಸ್ತೂಪಗಳು ತೀರ್ಥಂಕರರು ಮತ್ತು ಸಿದ್ಧರ ಪ್ರತಿಮೆಗಳಿಂದ ವ್ಯಾಪಿಸಿದ್ದು, ಹಾಗೂ ಛತ್ರದ ಮೇಲೆ ಛತ್ರ ಮತ್ತು ಎಂಟು ಮಂಗಲ ದ್ರವ್ಯಗಳೂ ಧ್ವಜಗಳೂ ಇವುಗಳಿಂದ ಶೋಭಿಸುತ್ತವೆ. ಈ ಸ್ತೂಪಗಳ ಎತ್ತರವೂ ಚೈತ್ಯವೃಕ್ಷಗಳಿಗೆ ಸಮನಾಗಿ, ತೀರ್ಥಂಕರರ ಶರೀರಾಕೃತಿಯ ಹನ್ನೆರಡುಪಟ್ಟಿನಷ್ಟು ಇರುತ್ತದೆ.

### ಶ್ರೀಮಂಟಪ :—

ಸಮವಸರಣದ ನಟ್ಟ ನಡುವೆ ಗಂಧಕುಟಿ ಮತ್ತು ಅದರ ನೆರೆಹೊರೆಯಲ್ಲಿ ಗೋಲಾಕಾರವಾಗಿರುವ ಹನ್ನೆರಡು **ಶ್ರೀಮಂಟಪ** ಅರ್ಥಾತ್ ಕೋರಡಿಗಳು ಇರುತ್ತವೆ. ಈ ಶ್ರೀ ಮಂಟಪಗಳು ಪ್ರತಿಯೊಂದು ದಿಸೆಯಲ್ಲಿ ವೀಥೀಪಥವನ್ನು ಬಿಟ್ಟು, ೪-೪ ಭಿತ್ತಿಗಳ ಅಂತರದಿಂದ ಮೂರು-ಮೂರು ಇರುತ್ತವೆ. ಇವುಗಳ ಎತ್ತರವೂ ತೀರ್ಥಂಕರ ಶರೀರದ ಎತ್ತರದ ಹನ್ನೆರಡು ಪಟ್ಟು ಇರುತ್ತದೆ. ಧರ್ಮೋಪದೇಶದ ಸಮಯದಲ್ಲಿ ಈ ಕೋರಡಿಗಳು ಕ್ರಮದಿಂದ ಪೂರ್ವದಿಂದ ಪ್ರದಕ್ಷಿಣಕ್ರಮದಿಂದ (೧) ಗಣಧರರು (೨) ಕಲ್ಪವಾಸಿನಿದೇವಿಯರು, (೩) ಆರ್ಯಿಕಾ ಮತ್ತು ಶ್ರಾವಿಕೆಯರು. (೪) ಜ್ಯೋತಿಷೀ ದೇವಿಯರು. (೫) ವ್ಯಂತರ ದೇವಿಯರು, (೬) ಭವನವಾಸಿನೀ ದೇವಿಯರು. (೭) ಭವನವಾಸೀ ದೇವರು, (೮) ವ್ಯಂತರ ದೇವರು, (೯) ಜ್ಯೋತಿಷ್ಕ ದೇವರು (೧೦) ಕಲ್ಪವಾಸೀ ದೇವರು ಮತ್ತು ಇಂದ್ರರು, (೧೧) ಚಕ್ರವರ್ತಿಗಳು ಮೊದಲಾದ ಮನುಷ್ಯರು ಮತ್ತು (೧೨) ಆನೆ, ಸಿಂಹಾದಿ ಸಮಸ್ತ ತಿರ್ಯಂಚ ಜೀವಗಳು ಕೂಡ್ರುವುದಕ್ಕಾಗಿ ನಿಯಮಿತವಾಗಿರುತ್ತವೆ.

### ಗಂಧಕುಟೀ :—

ಶ್ರೀ ಮಂಟಪದ ಮಧ್ಯದಲ್ಲಿ-ನಟ್ಟ ನಡುವೆ-ಮೂರು ಪೀಠಿಕೆಗಳ ಮೇಲೆ ಗಂಧ ಕುಟಿಯ ರಚನೆಯಾಗಿರುತ್ತದೆ. ಇದರ ಆಕಾರವು ಚೌರಸ ರೂಪದಲ್ಲಿ ಇರುತ್ತದೆ. ಅಂತಿಮ ತೀರ್ಥಂಕರ ಮಹಾವೀರರ ಗಂಧಕುಟಿಯ ಎತ್ತರವು ೭೫ ಧನುಷ ಅರ್ಥಾತ್ ಸುಮಾರು ೫೦೦ ಫೂಟವೆಂದು ಹೇಳಲಾಗಿದೆ. ಗಂಧಕುಟಿಯ ಮಧ್ಯದಲ್ಲಿ ಉತ್ತಮ ಸಿಂಹಾಸನವಿರುತ್ತದೆ. ಇದರ ಮೇಲೆ ತೀರ್ಥಂಕರರು ವಿರಾಜಮಾನರಾಗಿದ್ದು ಧರ್ಮೋಪದೇಶವನ್ನು ಮಾಡುತ್ತಾರೆ.

### ನಗರ ವಿನ್ಯಾಸ :—

ಜೈನಾಗಮಗಳಲ್ಲಿ ದೇಶದ ಅನೇಕ ಮಹಾನ್ ನಗರಗಳಾದ ಚಂಪಾ, ರಾಜ ಗೃಹ, ಶ್ರಾವಸ್ತೀ, ಕೌಶಾಂಬೀ, ಮಿಥಿಲಾ ಮೊದಲಾದವುಗಳ ಉಲ್ಲೇಖವು ಮೇಲಿಂದ ಮೇಲೆ ಬರುತ್ತದೆ. ಆದರೆ ಅವೆಲ್ಲವುಗಳ ವರ್ಣನೆಯು ಒಂದೇರೀತಿಯಾಗಿದೆ. ಅಲ್ಲದೆ ಅದು ಪೂರ್ಣ ವರ್ಣನೆಯನ್ನು ಕೇವಲ ಒಂದು ಸೂತ್ರದಲ್ಲಿಯೇ ಕೊಟ್ಟುಬಿಡುವಷ್ಟರ ಮಟ್ಟಿಗೆ ಇದೆ. ಬೇರೆಡೆಗೆ 'ವಣ್ಣಓ' (ವರ್ಣನೆ ಮಾಡಿದ) ಎಂದು ಹೇಳಿ, ಅದರ ಸಂಕೇತವನ್ನು ಮಾತ್ರ ಮಾಡಿ ಬಿಡಲಾಗಿದೆ. ಇದರಿಂದ, ಆ ಕಾಲದ ನಗರ ರಚನೆಯು ಬಹುತರ ಎಲ್ಲಕಡೆಗೂ ಒಂದೇ ರೀತಿಯಾಗಿ ಇದ್ದುದು ಗೊತ್ತಾಗುತ್ತದೆ. ಆ ನಗರ ರಚನೆ ಮತ್ತು ಸ್ವರೂಪವನ್ನು ಪೂರ್ಣವಾಗಿ ತಿಳಿಯಲಿಕ್ಕೆಂದು ಇಲ್ಲಿ **ಉವವಾಇಯ ಸೂತ್ರ (೧) ದಿಂದ ಚಂಪಾನಗರಿಯ ಪೂರ್ಣ ವರ್ಣನೆಯನ್ನು** ಕೊಡಲಾಗಿದೆ.

"ಚಂಪಾನಗರಿಯು ಧನ-ಸಂಪತ್ತಿಯಿಂದ ಸಮೃದ್ಧವಾಗಿತ್ತು. ನಗರವಾಸಿಗಳು ಬಹಳ ಸಂತೋಷದಲ್ಲಿ ಇರುತ್ತಿದ್ದರು. ನಗರವು ಜನರಿಂದ ತುಂಬಿ ತುಳುಕುತ್ತಿತ್ತು. ಅದರ ನೆರೆಹೊರೆಯ ಹೊಲಗಳಲ್ಲಿ ಸಾವಿರಾರು ನೇಗಿಲುಗಳು ಕೆಲಸದಲ್ಲಿ ತೊಡಗಿರು ತ್ತಿದ್ದುವು. ಕೋಳಿಗಳ ಹಿಂಡುಗಳು ಸಂಚರಿಸುತ್ತಿದ್ದುವು ಅಲ್ಲಿ ಜೋಳ, ಕಬ್ಬು, ಧಾನ್ಯಗಳು ನಾಕಷ್ಟು ಬೆಳೆಯುತ್ತಿದ್ದುವು. ಅಲ್ಲಿ ಆಕಳು, ಎಮ್ಮೆ ಮತ್ತು ಆಡು ಕುರಿಗಳು ಬಹಳಷ್ಟು ಇರುತ್ತಿದ್ದುವು. ಸುಂದರ ಆಕಾರದ ಬಹಳಷ್ಟು ಚೈತ್ಯಗಳೂ ಅಲ್ಲಿ ನಿರ್ಮಾಣಗೊಂಡಿರುತ್ತಿದ್ದುವು. ಸುಂದರಿಯರೂ ಶೀಲವತಿಯರೂ ಆದ ಯುವತಿ ಯರು ಇರುತ್ತಿದ್ದರು. ಆ ನಗರವು ಲೂಟಿಗಾರರು, ದಾರಿಬಡಕರು, ಗಂಟುಗಳ್ಳರು, ದರೋಡೆಗಾರರು, ದುಃಸಾಹಸಿಗಳು, ತಸ್ಕರರು, ದುರಾಚಾರಿಗಳು ಮತ್ತು ರಾಕ್ಷಸರು ಇಲ್ಲದೆ ಇರುವುದರಿಂದ ಕ್ಷೇಮಕರವಾಗಿಯೂ ನಿರುಪದ್ರವವೂ ಆಗಿತ್ತು. ಅಲ್ಲಿ ಭಿಕ್ಷೆಯು ಸುಖದಿಂದ ದೊರೆಯುತ್ತಿತ್ತು. ಜನರು ನಿಶ್ಚಿಂತರಾಗಿ ಸುಖದಿಂದ ಬಾಳುತ್ತಿದ್ದರು. ಕೋಟ್ಯಾವಧಿ ಕುಟುಂಬಗಳು ಸ್ವಾಸ್ಥ್ಯದಿಂದ ವಾಸಮಾಡಿಕೊಂಡಿದ್ದುವು. ಅಲ್ಲಿ ನಟರು, ನರ್ತಕರು, ಡೊಂಬರು, ಮಲ್ಲರು, ಮುಷ್ಟಿಯುದ್ಧ ಮಾಡುವವರು, ವಿದೂಷಕರು, ಕಥೆ ಹೇಳುವವರು, ನಗೆಗಾರರು, ನಗೆಯ ಕುಣಿತದವರು, ಆಖ್ಯಾಯಿ

ಕರು, ಚಿತ್ರದರ್ಶಕರು, ದೊಡ್ಡ ಬಿದರಿನ ಮೇಲೆ ಕುಣಿಯುವವರು, ವುಂಗಿ ಮತ್ತು ವೀಣೆಗಳನ್ನು ಬಾರಿಸುವವರು, ವಿವಿಧ ವಾದ್ಯಗಳನ್ನು ಬಾರಿಸುವವರು ಬಂದು ಹೋಗಿ ಇರುತ್ತಿದ್ದರು. ಅಲ್ಲಿ ಆರಾಮ, ಉದ್ಯಾನ, ಬಾವಿ, ಕೆರೆ, ಸರೋವರ, ವಾಪಿಗಳು ಬಹಳಷ್ಟು ಇದ್ದವು. ಇವುಗಳಿಂದ ಅದು ನಂದನವನದಂತೆ ರಮಣೀಯವಾಗಿತ್ತು. ಆ ನಗರಿಗೆ ಸುತ್ತಲೂ ಆಳವೂ ಗಂಭೀರವೂ ಆದ ಕಂದಕವಿತ್ತು. ಅದು, ಚಕ್ರ, ಗದೆ, ಮುಸುಂಡಿ, ಅವರೋಧ, ಶತಘ್ನಿ ಮೊದಲಾದವುಗಳಿಂದ ಪ್ರವೇಶಕ್ಕೆ ಕಠಿಣವೆನಿಸಿತ್ತು. ಧನುಸ್ಸಿಕ್ಕೆ ಸಮಾನವಾದ ಗೋಲಾಕಾರದ ಪ್ರಾಕಾರದಿಂದ ಸುತ್ತುವರಿದಿತ್ತು. ಅದರ ಮೇಲೆ ಕಪಿಶೀರ್ಷಕ ಮತ್ತು ಗೋಲಗುಮ್ಮಟಗಳಿದ್ದುವು. ಅಲ್ಲಿ ಎತ್ತರವಾದ ಅಟ್ಟಾಲಿಕೆಗಳು, ಚರಿಯಾಪಥಗಳು, ದ್ವಾರ, ಗೋಪುರ, ತೋರಣ ಹಾಗೂ ಸುಂದರ ರೀತಿಯಿಂದ ವಿಭಾಜಿತವಾದ ರಾಜಮಾರ್ಗಗಳು ಇದ್ದುವು. ಪ್ರಾಕಾರ ಹಾಗೂ ಮನೆಗಳನ್ನೂ ಕುಶಲಕಲೆಯಿಂದ ನಿರ್ಮಾಣ ಮಾಡಿದ್ದರು. ಇಲ್ಲಿಯ ಅಂಗಡಿಗಳಲ್ಲಿ ವ್ಯಾಪಾರಿಗಳಿಂದ ನಾನಾ ಪ್ರಕಾರದ ಶಿಲ್ಪ ಹಾಗೂ ಸುಖೋಪಭೋಗದ ವಸ್ತುಗಳು ಇಡಲ್ಪಟ್ಟಿದ್ದುವು. ಅದು ಸಿಂಘಾಟಕ (ತ್ರಿಕೋಣ), ಚೌಕೋಣ ಹಾಗೂ ಚೌಕೋಣ ಆಕಾರದ ಮಾರ್ಗದ ಕೂಟಗಳಲ್ಲಿ ವಿವಿಧ ವಸ್ತುಗಳನ್ನು ಮಾರುವ ಅಂಗಡಿಗಳಿದ್ದುವು. ಅದರ ರಾಜಮಾರ್ಗಗಳು ರಾಜನ ಗಮನಾಗಮನದಿಂದ ಸುರಮ್ಯವಾಗಿದ್ದವು. ಅಲ್ಲಿ ಅನೇಕ ಸುಂದರವಾದ ಉತ್ತಮ ಕುದುರೆಗಳು, ಮದ್ದಾನೆಗಳು, ರಥಗಳು, ಮೇಣೆ-ಪಲ್ಲಕಿಗಳು ಇವೇ ಮೊದಲಾದ ಉತ್ತಮ ವಾಹನಗಳಿದ್ದುವು. ಇಲ್ಲಿಯ ಜಲಾಶಯಗಳು ಅರಳಿದ ಕಮಲಗಳಿಂದ ಶೋಭಿಸುತ್ತಿದ್ದುವು. ಆ ಪಟ್ಟಣವು ಉಜ್ವಲ, ಶ್ವೇತ ಮಹಾಭವನಗಳಿಂದ ಧಳಧಳಿಸುತ್ತಿದ್ದಿತು; ಕಣ್ಣುಗಳನ್ನು ಕೋರೈಸುವಂತಿದ್ದುವು. ಅವೆಲ್ಲವುಗಳನ್ನು ನೋಡಿ, ಮನಸ್ಸು ಪ್ರಸನ್ನವಾಗುತ್ತಿತ್ತು. ಹೀಗೆ ಅದು ದರ್ಶನೀಯವೂ ಸುಂದರ ಮತ್ತು ಮನೋಜ್ಞವಾಗಿತ್ತು."

ಪ್ರಾಚೀನ ನಗರದ ಈ ವರ್ಣನೆಯನ್ನು (ಮೂರು ಭಾಗಗಳಲ್ಲಿ ವಿಭಾಜಿಸಲಾಗುತ್ತದೆ. (೧) ಅದರ ಸಮೃದ್ಧಿ ಮತ್ತು ಧನ-ವೈಭವಗಳಿಗೆ ಸಂಬಂಧಿಸಿದ್ದು. (೨) ಅಲ್ಲಿರುವ ವಿವಿಧ ಪ್ರಕಾರದ ಕಲೆ, ವಿದ್ಯೆ ಮತ್ತು ಮನೋರಂಜನದ ಸಾಧನಗಳ ಸಂಬಂಧ ಕುರಿತು. (೩) ನಗರದ ರಚನೆಗೆ ಸಂಬಂಧಿಸಿದ್ದು. ನಗರ ರಚನೆಯಲ್ಲಿ ಕೆಲವೊಂದು ಮಾತುಗಳು ಸ್ಪಷ್ಟ ಮತ್ತು ಧ್ಯಾನವೀಯಲು ಯೋಗ್ಯವಾಗಿವೆ. ನಗರ ರಕ್ಷಣೆಗಾಗಿ ಅದರ ಸುತ್ತಲೂ ಪರಿಖಾ ಅಥವಾ ಕಂದಕವು ಇರುತ್ತಿತ್ತು. ಅದರ ಒಳಗೆ ಪ್ರಾಕಾರ ಎಂದರೆ ಕೋಟೆಯು ಇರುವುದು ಇದಕ್ಕೆ ನಾಲ್ಕೂ ದಿಕ್ಕುಗಳಲ್ಲಿ ನಾಲ್ಕು ದ್ವಾರಗಳಿದ್ದುವು. ಪ್ರಾಕಾರದ ಆಕಾರವು ಧನುಸ್ಸಿನಂತೆ ಗೋಲವೆಂದು ಹೇಳಿದೆ. ಆ ದ್ವಾರಗಳಲ್ಲಿ ಗೋಪುರ ಮತ್ತು ತೋರಣಗಳನ್ನು ಶೋಭೆಯ ದೃಷ್ಟಿಯಿಂದ ನಿರ್ಮಿಸುತ್ತಿದ್ದರು. ಕೋಟೆಯು ಕಪಿಶೀರ್ಷಿಕೆಗಳಿಂದ ಕೂಡಿರುತ್ತಿದ್ದುವು. ಅವುಗಳ ಮೇಲೆ ಶತಘ್ನಿ ಮೊದಲಾದ ನಾನಾ ಪ್ರಕಾರದ ಅಸ್ತ್ರ, ಶಸ್ತ್ರಗಳನ್ನು ಸ್ಥಾಪಿಸಿದ್ದರು.

ನಗರದಲ್ಲಿ ರಾಜಮಾರ್ಗಗಳು, ಪಾದಚಾರಿಗಳ ದಾರಿಗಳು ಬಹಳ ವ್ಯವಸ್ಥಿತ ರೀತಿ ಯಿಂದ ನಿರ್ಮಿಸಿದಂಥವು ಇದ್ದುವು. ಇವುಗಳಲ್ಲಿ ತ್ರಿಕೋಣಾಕಾರದ ಹಾಗೂ ಚೌಕೋಣ ಆಕಾರದ ಕೂಡುದಾರಿಗಳ ಸ್ಥಾನಗಳಿದ್ದುವು. ಅಲ್ಲಲ್ಲಿ ಬಹುತರ ಪ್ರತಿಯೊಂದು ಓಣಿ ಯಲ್ಲಿ ವಿಶಾಲವಾದ ಬಯಲುಸ್ಥಳಗಳು ಇದ್ದುವು. ಉದ್ಯಾನ, ಸರೋವರ ಕೂಪಗಳ ನಿರ್ಮಾಣವನ್ನೂ ಸಹ ಅಲ್ಲಲ್ಲಿ ಮಾಡಲಾಗಿತ್ತು. ಮನೆಗಳನ್ನು ಸಾಲಾಗಿ ಕಟ್ಟಲಾಗು ತ್ತಿತ್ತು. ದೇವಾಲಯ, ಪೇಟೆ, ಅಂಗಡಿ ಇವು ಸುವ್ಯವಸ್ಥಿತವಾಗಿದ್ದುವು.

ಜೈನ ಸೂತ್ರಗಳಿಂದ ಲಭಿಸುವ ನಗರದ ಈ ವರ್ಣನೆಯು ಪುರಾಣ, ಬೌದ್ಧ ಗ್ರಂಥಗಳು ಹಾಗೂ ಕೌಟಿಲೀಯ ಅರ್ಥಶಾಸ್ತ್ರ ಮೊದಲಾದವುಗಳಲ್ಲಿ ಬರುವ ವರ್ಣನೆ ಗಳ ಕೂಡ ಹೊಂದುತ್ತದೆ. ಅಲ್ಲದೆ ಪುರಾತತ್ವಕ್ಕೆ ಸಂಬಂಧಿಸಿದ ಭೂಶೋಧನೆಗಳಲ್ಲಿ ದೊರೆತ ನಗರಗಳ ಅವಶೇಷಗಳಿಂದಲೂ ಇದು ಪ್ರಾಮಾಣಿಕವಾಗುತ್ತದೆ. ಉದಾ ಹರಣಾರ್ಥ, ಪ್ರಾಚೀನ ಪಾಂಚಾಲ ದೇಶದ ರಾಜಧಾನಿಯಾದ ಅಹಿಚ್ಛತ್ರದ ಅಗೆತ ದಲ್ಲಿ ಅದರ ಪರಿಖಾ ಮತ್ತು ಪ್ರಾಕಾರಗಳ ಅವಶೇಷಗಳು ಪ್ರಾಪ್ತವಾಗಿವೆ. ಈ ಸ್ಥಾನವು ಜೈನಪರಂಪರೆಗನುಸರಿಸಿ ಇಪ್ಪತ್ತಮೂರನೆಯ ತೀರ್ಥಂಕರನಾದ ಪಾರ್ಶ್ವ ನಾಥನು ತಪಸ್ಸು ಮಾಡುವಾಗ ಉಪಸರ್ಗವಾದಂಥಾದ್ದು. ಇಲ್ಲಿಯೇ ಧರಣೇಂದ್ರ ನಾಗನು ಅವನನ್ನು ರಕ್ಷಿಸಿದ್ದನು. ಇದೇ ಕಾರಣದಿಂದ ಅದಕ್ಕೆ ಅಹಿಚ್ಛತ್ರ ಎಂಬ ಹೆಸರೂ ಕೂಡ ಉಂಟಾಯಿತು ಪ್ರಾಕಾರವು ಸುಟ್ಟ ಇಟ್ಟಿಗೆಗಳಿಂದ ಕಟ್ಟಿದ್ದಿದೆ. ೪೦–೫೦ ಫೂಟುಗಳಷ್ಟು ತಳಹದಿಯನ್ನು ಹಾಕಲಾಗಿದೆ. ಕೋಟೆಯ ದ್ವಾರದಿಂದ ಹೋಗುವ ರಾಜಮಾರ್ಗವು ನೇರವಾಗಿ ನಗರದ ಕೇಂದ್ರ ಸ್ಥಳಕ್ಕೇನೇ ಹೋಗುತ್ತದೆ ಆ ಕೇಂದ್ರ ಸ್ಥಳದಲ್ಲಿ ವಿಶಾಲವಾದ ದೇವಾಲಯವಿದ್ದುದು ಕಂಡುಬರುತ್ತದೆ. ಭಾರ ಹುತ, ಸಾಂಚಿ, ಅಮರಾವತೀ, ಮಥುರಾಮೊದಲಾದ ಸ್ಥಾನಗಳಲ್ಲಿ ಪ್ರಾಪ್ತವಾದ ಶಿಲೆಯಲ್ಲಿ ಕೆತ್ತಿದ ಚಿತ್ರಗಳಲ್ಲಿ ರಾಜಗೃಹ, ಶ್ರಾವಸ್ತೀ, ವಾರಾಣಸೀ, ಕಪಿಲವಸ್ತು, ಕುಶೀನಗರ ಮೊದಲಾದವುಗಳ ಪ್ರತಿಕೃತಿಗಳನ್ನು (ಮಾಡೆಲ್ಲು) ತೋರಿಸಲಾಗಿದೆ. ಅವು ಗಳಿಂದಲೂ ಪರಿಖಾ, ಪ್ರಾಕಾರ, ದ್ವಾರ, ಗೋಪುರ, ಮತ್ತು ಅಟ್ಟಾಲಿಕೆಗಳ ವ್ಯವಸ್ಥೆಯಿದ್ದುದು ಕಂಡುಬರುತ್ತದೆ. ದೇಶದ ಪ್ರಾಚೀನ ನಗರಗಳ ವ್ಯವಸ್ಥೆ ಹಾಗೂ ಸೌಂದರ್ಯದ ಪರಿಚಯವು ನಮಗೆ ಮೆಗೆಸ್ಥನೀಜ, ಫಾಹಿಯಾನ ಮೊದಲಾದ ಯುನಾನೀ ಹಾಗೂ ಚೀನೀ ಯಾತ್ರಿಕರು ಮಾಡಿರುವ ಸುಪ್ರಸಿದ್ಧ ಪಾಟಲಿಪುತ್ರ ನಗರದ ವರ್ಣನೆಯಿಂದಲೂ ಸಹ ದೊರೆಯುತ್ತದೆ. ಇವರ ಸಮರ್ಥನೆಯು ಪಾಟಣಾದ ಸಮೀಪದಲ್ಲಿರುವ ಬುಲಂದೀಬಾಗ ಮತ್ತು ಕುಮಾರಾಹಾರ ಎಂಬ ಹೆಸರಿನ ಸ್ಥಾನ ಗಳಲ್ಲಿ ಅಗೆಯುವುದರಲ್ಲಿ ದೊರೆತ ಪ್ರಾಕಾರ ಮತ್ತು ರಾಜಪ್ರಾಸಾದ ಮೊದಲಾದ ಭಗ್ನಾವಶೇಷಗಳಿಂದಲೂ ಲಭಿಸುತ್ತದೆ. ಮೆಗೆಸ್ಥನೀಜನ ವರ್ಣನೆಗನುಸರಿಸಿ ಪಾಟಲೀ ಪುತ್ರ ನಗರದ ಪ್ರಾಕಾರವು ಕಾಷ್ಠಮಯವಾಗಿತ್ತು. ಇದಕ್ಕೆ ಪುಷ್ಟಿಯೂ ಕೂಡ ಭಗ್ನಾವಶೇಷಗಳಿಂದ ದೊರೆತಿದೆ. ಉಪಲಬ್ಧ ಪಾಷಾಣ ಸ್ತಂಭಗಳ ಭಗ್ನಾವಶೇಷ

ಗಳಿಂದ ಶಾಲೆಗಳೂ ಪ್ರಾಸಾದಗಳೂ ಯಾವ ರೂಪದಲ್ಲಿ ನಿರ್ಮಾಣ ಕಲೆಯನ್ನು ಹೊಂದಿದ್ದವೆಂಬುದು ಸ್ವಲ್ಪಿಲ್ಲ ಸ್ವಲ್ಪ ಗೊತ್ತಾಗುತ್ತದೆ. ಇವೆಲ್ಲವುಗಳಿಂದ ಜೈನ ಗ್ರಂಥಗಳಲ್ಲಿ ದೊರೆಯುವ ನಗರಾದಿಗಳ ವರ್ಣನೆಯ ಸಮರ್ಥನೆಯು ಆಗುತ್ತದೆ.

## ಚೈತ್ಯರಚನೆ :

ಜೈನ ಸೂತ್ರಗಳಲ್ಲಿ ನಗರಗಳ ವರ್ಣನೆಯಲ್ಲಿ ಹಾಗೂ ಸ್ವತಂತ್ರ ರೂಪದಲ್ಲಿಯೂ ಚೈತ್ಯಗಳ ವರ್ಣನೆಯು ಮೇಲಿಂದ ಮೇಲೆ ಬರುತ್ತದೆ. ಔಪಪಾತಿಕ ಸೂತ್ರದಿಂದ (೨) ಚಂಪಾನಗರಿಯ ಹೊರಗೆ ಉತ್ತರ–ಪೂರ್ವ ದಿಸೆಯಲ್ಲಿ ಇದ್ದ ಪೂರ್ಣಭದ್ರ ಎಂಬ ಹೆಸರಿನ ಚೈತ್ಯದ ವರ್ಣನೆಯನ್ನು ಕೊಡಲಾಗುತ್ತದೆ. " ಈ ಚೈತ್ಯವು ಬಹು ಪ್ರಾಚೀನವು. ಪೂರ್ವಜರಿಂದ ಎಂದೋ ನಿರ್ಮಾಣಗೊಂಡುದಾಗಿದೆ. ಸುವಿದಿತವೂ ಸುವಿಖ್ಯಾತವೂ ಆಗಿತ್ತು. ಅದು ಛತ್ರ, ಘಂಟೆ, ಧ್ವಜ ಮತ್ತು ಪತಾಕೆಗಳಿಂದ ಮಂಡಿತವಾಗಿತ್ತು. ಅಲ್ಲಿ ಚಮರೆಗಳು ತೂಗಾಡುತ್ತಿದ್ದವು. ಅಲ್ಲಿ ಗೋಶೀರ್ಷ ಮತ್ತು ಸರಸ ರಕ್ತಚಂದನಗಳಿಂದ ಶೋಭಿಸುವ ಕೈಗಳ ಗುರುತುಗಳಿದ್ದುವು. ಚಂದನ ಕಲಶ ಗಳು ಸ್ಥಾಪಿತವಾಗಿದ್ದುವು. ಅಲ್ಲಿ ದೊಡ್ಡ ದೊಡ್ಡ ಗೋಲಾಕಾರದ ಮಾಲೆಗಳು ತೂಗಾಡುತ್ತಿದ್ದುವು. ಸುಗಂಧಿತ ಪುಷ್ಪಗಳಿಂದ ಶೃಂಗರಿಸಲಾಗಿತ್ತು. ಅದು ಕಾಲಾಗರು, ಧೂಪಗಳಿಂದ ಸುಗಂಧದ ವಾತಾವರಣದಿಂದ ತುಂಬಿತ್ತು. ಅಲ್ಲಿ ನಟರು, ನರ್ತಕರು, ನಾನಾ ಪ್ರಕಾರದ ಆಟಗಾರರು, ಸಂಗೀತಗಾರರು, ಭೋಜಕರು ಮತ್ತು ಮಾಗಧಿಗಳ ಗುಂಪಿಗೆ ಗುಂಪೇ ನೆರೆದಿತ್ತು. ಅಲ್ಲಿ ಬಹಳ ಜನರು ಬಂದು ಹೋಗುತ್ತಿದ್ದರು. ಜನರು ಘೋಷಣೆಯನ್ನು ಮಾಡಿ ಮಾಡಿ ದಾನವನ್ನೀಯುತ್ತಿದ್ದರು ಅರ್ಚನೆ, ವಂದನೆ, ನಮಸ್ಕಾರ, ಪೂಜೆ, ಸತ್ಕಾರ, ಸನ್ಮಾನಗಳು ನಡೆಯುತ್ತಿದ್ದುವು. ಅದು ಕಲ್ಯಾಣ, ಮಂಗಲ ಹಾಗೂ ದೇವತಾರೂಪ ಚೈತ್ಯ ವಿನಯಪೂರ್ವಕ ಪರ್ಯುಪಾಸನೆಯನ್ನು ಮಾಡಲಿಕ್ಕೆ ಯೋಗ್ಯವಾಗಿತ್ತು. ಅದು ದಿವ್ಯವಾಗಿತ್ತು. ಎಲ್ಲ ಮಾನಸಿಕ ಇಚ್ಛೆಗಳನ್ನು ಪೂರ್ತಿ ಮಾಡುವುದಕ್ಕೆ ಸತ್ಯೋಪಾಯಭೂತವಾಗಿತ್ತು. ಇಲ್ಲಿ ಪ್ರಾತಿಹಾರ್ಯಗಳ ಸದ್ಭಾವನೆಯು ಇತ್ತು. ಅದು ಚೈತ್ಯಯಾಗದ ಸಹಸ್ರ ಭಾಗದ ಪ್ರತೀಕ್ಷಕವಾಗಿತ್ತು. ಬಹಳಷ್ಟು ಜನರು ಬಂದು ಬಂದು ಆಪೂರ್ಣಭದ್ರ ಚೈತ್ಯವನ್ನು ಪೂಜಿಸುತ್ತಿದ್ದರು."

## ಜೈನ ಚೈತ್ಯ ಮತ್ತು ಸ್ತೂಪಗಳು :

ಸಮವಸರಣದ ವರ್ಣನೆಯಲ್ಲಿ ಚೈತ್ಯವೃಕ್ಷಗಳು ಹಾಗೂ ಸ್ತೂಪಗಳ ಉಲ್ಲೇಖ ವನ್ನು ಮಾಡಲಾಗಿದೆ. ಭಗವತೀ ವ್ಯಾಖ್ಯಾ ಪ್ರಜ್ಞಪ್ತಿಸೂತ್ರ (೩, ೨, ೧೪೩)ದಲ್ಲಿ ಭಗವಾನ್ ಮಹಾವೀರನು ತನ್ನ ಛದ್ಮಸ್ಥ ಅವಸ್ಥೆಯಲ್ಲಿ ಸುಂಸುಮಾರಪುರದ ಉಪ ವನದಲ್ಲಿ ಅಶೋಕ ವೃಕ್ಷದ ಕೆಳಗೆ ಧ್ಯಾನ ಮಾಡಿದ ವರ್ಣನೆಯು ಇದೆ. ತ್ರಿ. ಪ್ರ. (೪, ೯೧೫)ದಲ್ಲಿ, ಯಾವ ವೃಕ್ಷದ ಕೆಳಗೆ, ಯಾವ ಕೇವಲಿಗೆ ಕೇವಲ ಜ್ಞಾನವು

ಪ್ರಾಪ್ತವಾಗಿರುತ್ತದೆಯೋ. ಅದೇ ಆ ತೀರ್ಥಂಕರರ ಅಶೋಕ ವೃಕ್ಷವೆಂದು ಹೇಳ ಲಾಗುತ್ತದೆ ಎಂದೂ ಹೇಳಿದೆ. ಅದೇ ಪ್ರಕಾರ ಅಶೋಕ ಎಂಬುದು ಒಂದು ವೃಕ್ಷದ ಹೆಸರೂ ಸಹ ಇದೆ. ಅದರಂತೆ ಕೇವಲ ಜ್ಞಾನದ ಸಂಬಂಧದಲ್ಲಿ ಸಮಸ್ತ ವೃಕ್ಷಗಳ ಸಂಜ್ಞೆಯೂ ಕೂಡ ಅದಾಗಿದೆ. ಇದೇ ಕಾರಣದಿಂದ ವೃಕ್ಷಗಳ ಕೆಳಗಡೆಯಲ್ಲಿ ಪ್ರತಿಮೆ ಗಳನ್ನು ಸ್ಥಾಪನೆ ಮಾಡುವ ಪರಂಪರೆಯು ಪ್ರಾರಂಭವಾಗಿರಬೇಕೆಂದು ಅನುಮಾನಿಸ ಲಾಗುತ್ತದೆ. ಸ್ವಾಭಾವಿಕವಾಗಿ ವೃಕ್ಷದ ಕೆಳಗೆ ಮೂರ್ತಿಯನ್ನು ಸ್ಥಾಪಿಸುವದಕ್ಕೆಂದು ವೃಕ್ಷದ ನಾಲ್ಕೂ ಮಗ್ಗಲಿಗೆ ವೇದಿಕೆಯನ್ನು ನಿರ್ಮಿಸುವ ಅವಶ್ಯಕತೆಯು ಉಂಟಾ ಯಿತು. ಇವು ವೇದಿಕೆಗಳು. ಈ ವೇದಿಕೆಗಳನ್ನು ಇಟ್ಟಿಗೆ ಮೊದಲಾದವುಗಳಿಂದ ನಿರ್ಮಿಸುವುದರಿಂದ ಆ ವೃಕ್ಷಗಳನ್ನು ಚೈತ್ಯವೃಕ್ಷಗಳೆಂದು ಹೇಳುವ ಪರಿಪಾಠವು ಉಂಟಾಗಿರಬೇಕು. ಇಟ್ಟಿಗೆಗಳಿಂದ ಕಟ್ಟಿದ ವೇದಿಕೆಗಳನ್ನು ಚಿತಿ ಅಥವಾ ಚಯನ ಎಂದು ಹೇಳುವ ಪರಂಪರೆಯು ಬಹಳ ಪ್ರಾಚೀನ ಕಾಲದ್ದಾಗಿದೆ. ವೈದಿಕ ಸಾಹಿತ್ಯ ದಲ್ಲಿ ಯಜ್ಞದ ವೇದಿಯನ್ನೂ ಸಹ ಇದೇ ಹೆಸರಿನಿಂದ ಕರೆಯುತ್ತಿದ್ದುದರ ಉಲ್ಲೇಖವು ದೊರೆಯುತ್ತದೆ. ಇದೇ ಪ್ರಕಾರ ಚಯನದಿಂದ ನಿರ್ಮಾಣಗೊಂಡ ಸ್ತೂಪಗಳೂ ಸಹ ಚೈತ್ಯಸ್ತೂಪವೆಂಬ ಹೆಸರನ್ನು ಹೊಂದಿದವು.

ಆವಶ್ಯಕ ನಿರ್ಯುಕ್ತಿ (ಗಾ. ೪೩೫)ಯಲ್ಲಿ ತೀರ್ಥಂಕರರು ನಿರ್ವಾಣವನ್ನು ಹೊಂದಿದ ಮೇಲೆ ಸ್ತೂಪ, ಚೈತ್ಯ ಜಿನಗೃಹಗಳನ್ನು ನಿರ್ಮಾಣ ಮಾಡುವ ಉಲ್ಲೇಖವಿದೆ. ಇದರ ಮೇಲೆ ಟೀಕೆಯನ್ನು ಮಾಡುತ್ತ ಹರಿಭದ್ರಸೂರಿಯು ಭಗವಾನ್ ಋಷಭದೇವನ ನಿರ್ವಾಣದ ತರುವಾಯ ಅವನ ಸ್ಮೃತಿಗೆಂದು ಅವನ ಮಗನಾದ ಭರತನು ಅವನ ನಿರ್ವಾಣಸ್ಥಾನವಾದ ಕೈಲಾಸ ಪರ್ವತದ ಮೇಲೆ ಒಂದು ಚೈತ್ಯ ಹಾಗೆಯೇ ಸಿಂಹ-ನಿಷಿದ್ಯಾ-ಆಯತನ ನಿರ್ಮಾಣ ಮಾಡಿಸಿದುದರ ಉಲ್ಲೇಖ ವನ್ನು ಮಾಡಲಾಗಿದೆ. ಅರ್ಧಮಾಗಧಿ ಜಂಬೂದೀವಪಣ್ಣತ್ತಿಯಲ್ಲಿಯಂತೂ (೨ ೩೩) ನಿರ್ವಾಣದ ತರುವಾಯ ತೀರ್ಥಂಕರರ ಶರೀರ ಸಂಸ್ಕಾರ ಹಾಗೂ ಚೈತ್ಯ-ಸ್ತೂಪ- ನಿರ್ಮಾಣ ಬಗ್ಗೆ ವಿಸ್ತಾರವಾಗಿ ವರ್ಣನೆಯನ್ನು ಮಾಡಲಾಗಿದೆ ಅದು ಈ ಪ್ರಕಾರ ಇದೆ :—

" ತೀರ್ಥಂಕರರ ನಿರ್ವಾಣವಾದ ಮೇಲೆ ದೇವೇಂದ್ರನು ಗೋಶೀರ್ಷ ಮತ್ತು ಚಂದನ ಕಟ್ಟಿಗೆಗಳನ್ನು ಒತ್ತಟ್ಟಿಗೆ ಕೂಡಿಸಿ ಚಿತೆಯನ್ನು ಸಿದ್ಧಗೊಳಿಸಲಿಕ್ಕೆ ಆಜ್ಞೆ ಯನ್ನು ಮಾಡಿದನು. ಕ್ಷೀರಸಾಗರದಿಂದ ಕ್ಷೀರೋದಧಿಯನ್ನು ತರಲಿಕ್ಕೆ ಹೇಳಿದನು. ತೀರ್ಥಂಕರರ ಶರೀರವನ್ನು ತೊಳೆಯಲು ಸೂಚಿಸಿದನು. ಅದಕ್ಕೆ ಗೋಶೀರ್ಷ ಚಂದನ ಗಳನ್ನು ಲೇಪಿಸಲು ಹೇಳಿದನು. ತರುವಾಯ ಇಂದ್ರನು ಹಂಸ ಚಿಹ್ನೆ-ಯುಕ್ತ ವಸ್ತ್ರ ಶಾಟಿಕಾ ಹಾಗೂ ಸರ್ವ ಅಲಂಕಾರಗಳಿಂದ ಶರೀರವನ್ನು ಶೋಭಿಸುವಂತೆ ಮಾಡಿ ದನು. ಶಿಬಿಕೆಯ ಮುಖಾಂತರ ತಂದು ಚಿತೆಯಲ್ಲಿ ಸ್ಥಾಪಿಸಿದನು. ಅಗ್ನಿಕುಮಾರ ದೇವನು ಚಿತೆಯನ್ನು ಪ್ರಜ್ವಲಿತಗೊಳಿಸಿದನು. ತರುವಾಯ ಮೇಘ ಕುಮಾರ ದೇವನು

ಕ್ಷೀರೋದಕದಿಂದ ಅಗ್ನಿಯನ್ನು ಉಪಶಾಂತಗೊಳಿಸಿದನು. ಶಕ್ರ ದೇವೇಂದ್ರನು ಭಗವಾನ್‌ನ ಮೇಲ್ಭಾಗದ ಬಲಗಡೆಯ ಹಾಗೂ ಈಶಾನ ದೇವನು ಎಡಗಡೆಯ ಅಸ್ಥಿಯನ್ನು ಗ್ರಹಣ ಮಾಡಿದರು. ಹಾಗೆಯೇ ಕೆಳಭಾಗದ ಬಲಗಡೆಯವುಗಳನ್ನು ಚಮರ ಅಸುರೇಂದ್ರನು ಎಡಗಡೆಯವುಗಳನ್ನು ಬಲಿಯು ಸ್ವೀಕರಿಸಿದನು. ಉಳಿದ ದೇವಗಣವು ಯಥಾಯೋಗ್ಯ ಅವಶಿಷ್ಟ ಅಂಗ ಪ್ರತ್ಯಂಗಗಳನ್ನು ಗ್ರಹಣ ಮಾಡಿದರು. ಆಮೇಲೆ ಶಕ್ರದೇವೇಂದ್ರನು ಭಗವಾನ್ ತೀರ್ಥಂಕರರ ಚಿತೆಯ ಸ್ಥಾನದಲ್ಲಿ ಅತಿ ಮಹಾನ್ ಚೈತ್ಯ-ಸ್ತೂಪವನ್ನು ನಿರ್ಮಾಣ ಮಾಡಲಾಗುವದೆಂದು ಆಜ್ಞೆಯನ್ನು ಮಾಡಿದನು. ಹಾಗೆಯೇ ಒಂದು ಗಣಧರರ ಚಿತೆಯ ಮೇಲೆಯೂ ಇನ್ನೊಂದನ್ನು ಉಳಿದ ಅನಗಾರರ ಚಿತೆಯ ಮೇಲೆಯೂ ನಿರ್ಮಿಸಲು ಆಜ್ಞಾಪಿಸಿದನು. ದೇವ ಸಮೂಹವು ಅದಕ್ಕನುಸರಿಸಿಯೇ ಪರಿನಿರ್ವಾಣ ಮಹಿಮೆಯನ್ನು ಮಾಡಿತು. ಆ ಮೇಲೆ ಅವರೆಲ್ಲರೂ ತಮ್ಮ ತಮ್ಮ ವಿಮಾನಗಳಿಗೂ ಭವನಗಳಿಗೂ ಮರಳಿ ಬಂದರು. ಹಾಗೂ ತಮ್ಮ ತಮ್ಮ ಚೈತ್ಯ ಸ್ತಂಭಗಳ ಸಮೀಪದಲ್ಲಿ ಬಂದು ಅವರು ಆ ಜಿನನ ಅಸ್ಥಿಗಳನ್ನು ವಜ್ರಮಯ ಗೋಲ ವೃತ್ತಾಕಾರ ಪೆಟ್ಟಿಗೆಗಳಲ್ಲಿ ಸ್ಥಾಪಿಸಿ, ಉತ್ತಮ ಮಾಲೆಗಳಿಂದಲೂ ಗಂಧದಿಂದಲೂ ಅವುಗಳ ಪೂಜೆಯನ್ನೂ ಅರ್ಚನೆಯನ್ನೂ ಮಾಡಿದರು."

ಈ ವಿವರಣದಿಂದ ಜೈನ ಪರಂಪರೆಗನುಸರಿಸಿ ಮಹಾಪುರುಷರ ಚಿತೆಗಳ ಮೇಲೆ ಸ್ತೂಪಗಳನ್ನು ನಿರ್ಮಿಸುತ್ತಿದ್ದರೆಂದು ಸುಸ್ಪಷ್ಟವಾಗಿ ತಿಳಿಯುತ್ತದೆ. ಈ ಪರಂಪರೆಗೆ ಪುಷ್ಟಿಯು ಪಾಲಿಗ್ರಂಥಗಳಲ್ಲಿ ಬರುವ ಬುದ್ಧ ನಿರ್ವಾಣ ಮತ್ತು ಅವನ ಶರೀರ ಸಂಸ್ಕಾರಕ್ಕೆ ಸಂಬಂಧಿಸಿದ ವೃತ್ತಾಂತಗಳಿಂದಲೂ ದೊರೆಯುತ್ತದೆ.

ಮಹಾಪರಿನಿಬ್ಬಾಣಸುತ್ತದಲ್ಲಿ ಹೀಗೆ ಹೇಳಿದೆ—ಒಮ್ಮೆ ಭಗವಾನ್ ಬುದ್ಧನ ಶಿಷ್ಯರು ಅವನನ್ನು ಹೀಗೆ ಕೇಳಿದರು. ನಿರ್ವಾಣವಾದ ತರುವಾಯ ನಿಮ್ಮ ಶರೀರವನ್ನು ಯಾವ ಪ್ರಕಾರ ಸತ್ಕರಿಸಬೇಕು ? ಇದಕ್ಕೆ ಉತ್ತರವೆಂದು ಬುದ್ಧನು ಹೇಳಿದ್ದು ಹೀಗೆ—ಎಲೈ ಆನಂದ, ಯಾವ ಪ್ರಕಾರ ಚಕ್ರವರ್ತಿಯಾದ ರಾಜನ ಶರೀರವನ್ನು ವಸ್ತ್ರದಿಂದ ತುಂಬ ವೇಷ್ಟನಗೊಳಿಸಿ, ಎಣ್ಣೆಯ ದ್ರೋಣದಲ್ಲಿಟ್ಟು, ಚಿತೆಯನ್ನು ನಿರ್ಮಿಸಿ ಶರೀರವನ್ನು ಸುಟ್ಟು ಬಿಡುತ್ತಾರೆ, ಮತ್ತು ನಾಲ್ಕು ಮಹಾಪಥಗಳ ಮೇಲೆ ಸ್ತೂಪವನ್ನು ನಿರ್ಮಿಸುತ್ತಾರೆ. ಇದೇ ಪ್ರಕಾರ ನನ್ನ ಶರೀರಕ್ಕೂ ಕೂಡ ಸತ್ಕ್ರಿಯೆಯು ನಡೆಯಲಿ. ಇದರಿಂದ ಆ ಪ್ರಾಚೀನ ಕಾಲದಲ್ಲಿ ರಾಜರು ಹಾಗೂ ಧಾರ್ಮಿಕ ಮಹಾಪುರುಷರ ಚಿತೆಯ ಮೇಲೆ ಅಥವಾ ಅನ್ಯ ಸ್ಥಳಗಳಲ್ಲಿ ಅವರ ಸ್ಮೃತಿಯ ಸ್ತೂಪಗಳನ್ನು ನಿರ್ಮಿಸುವ ಪರಿಪಾಠವಿತ್ತೆಂಬ ಸ್ಪಷ್ಟವಾಗುತ್ತದೆ. ಸ್ತೂಪದ ಗೋಲಾಕಾರವೂ ಕೂಡ ಇದೇ ಸಂಗತಿಯನ್ನು ಪುಷ್ಟಿಗೊಳಿಸುತ್ತದೆ. ಬಹುಶಃ ಇದರ ಈ ಆಕಾರವು ಸ್ಮಶಾನದ ಆಕಾರಕ್ಕೆ ಹೊಂದುವಂತೆ ಇದೆ. ಈ ವಿಷಯದಲ್ಲಿ ಶತಪಥ ಬ್ರಾಹ್ಮಣದಲ್ಲಿ ಬರುವ ಒಂದು ಉಲ್ಲೇಖವನ್ನೂ ಸಹ ಇಲ್ಲಿ ಗಮನಿಸಬೇಕು. ಆರ್ಯರ ದೈವ ಸ್ಮಶಾನವು ಚೌರಸ ಆಕಾರದ್ದೂ, ಅನಾರ್ಯರ ಅಸುರ್ಯ

ಶ್ಮಶಾನವು ಗೋಲಾಕಾರವೂ ಇರುತ್ತಿದ್ದವೆಂದು ಹೇಳಿದೆ. ಧಾರ್ಮಿಕ ಮಹಾಪುರುಷರ ಸ್ಮಾರಕವಾಗಿರುವುದರಿಂದ ಸ್ತೂಪವು ಶ್ರದ್ಧೆ ಹಾಗೂ ಪೂಜೆಗಳ ವಿಷಯವಾಯಿತು. ಹಾಗೆಯೇ ನೂರಾರು ವರ್ಷಗಳ ವರೆಗೆ ಸ್ತೂಪಗಳನ್ನು ನಿರ್ಮಿಸುವುದು, ಅವುಗಳ ಪೂಜೆ ಅರ್ಚನೆಗಳನ್ನು ಮಾಡುವ ಪರಂಪರೆಯು ನಡೆದು ಬಂದಿತು. ಬರಬರುತ್ತ ಅವುಗಳ ಆಕಾರವೂ ಪ್ರಮಾಣವೂ ಬಹಳ ಬೆಳೆದು ನಿಂತಿತು. ಅದರ ಸಮೀಪದಲ್ಲಿ ಪ್ರದಕ್ಷಿಣೆಗೆಂದು ಒಂದು ಇಲ್ಲವೆ ಅನೇಕ ವೇದಿಕೆಗಳನ್ನೂ ಸಹ ನಿರ್ಮಿಸತೊಡಗಿದರು. ಅದರ ಸುತ್ತಲೂ ಕಲಾಪೂರ್ಣವಾದ ಕಟಾಂಜನವನ್ನೂ ಸಹ ಮಾಡುತ್ತ ನಾಗಿದರು. ಇಂಥ ಸ್ತೂಪಗಳ ಉತ್ಕೃಷ್ಟ ಉದಾಹರಣೆಗಳನ್ನು ಸಾಂಚೀ, ಭರಹೂತ, ಸಾರನಾಥವೇ ಮೊದಲಾದ ಸ್ಥಳಗಳಲ್ಲಿ ನಾವು ಕಾಣುತ್ತೇವೆ. ದುರ್ಭಾಗ್ಯದಿಂದ ಉಪಲಬ್ಧ ಸ್ತೂಪಗಳಲ್ಲಿ ಜೈನಸ್ತೂಪಗಳ ಅಭಾವವಿದೆ. ಆದರೆ ಪ್ರಾಚೀನ ಕಾಲದಲ್ಲಿ ಜೈನಸ್ತೂಪಗಳ ನಿರ್ಮಾಣವೂ ಸಹ ಬಹಳಷ್ಟು ಆಗಿತ್ತೆಂಬುದಕ್ಕೆ ಪ್ರಚುರ ಪ್ರಮಾಣಗಳು ಉಪಲಬ್ಧವಿವೆ. ಜಿನದಾಸಕೃತ ಆವಶ್ಯಕಚೂರ್ಣಿಯಲ್ಲಿ ಅತಿ ಪ್ರಾಚೀನ ಕಾಲದಲ್ಲಿ ಇಪ್ಪತ್ತನೆಯ ತೀರ್ಥಂಕರನಾದ ಮುನಿಸುವ್ರತನ ಸ್ಮೃತಿಗೆಂದು ವೈಶಾಲಿಯಲ್ಲಿ ಸ್ತೂಪವನ್ನು ನಿರ್ಮಿಸಲಾಗಿತ್ತೆಂದು ಉಲ್ಲೇಖವಿದೆ. ಆದರೆ ಇಲ್ಲಿಯವರೆಗೂ ಈ ಸ್ತೂಪದ ಯಾವ ಚಿಹ್ನವಾಗಲಿ, ಭಗ್ನಾವಶೇಷಗಳಾಗಲಿ ಲಭಿಸಿದುದಿಲ್ಲ. ಆದರೆ ಮಥುರೆಯ ಸಮೀಪದಲ್ಲಿ ಒಂದು ಅತ್ಯಂತ ಪ್ರಾಚೀನ ಜೈನಸ್ತೂಪದ ಪ್ರಚುರ ಭಗ್ನಾವಶೇಷಗಳು ದೊರೆತಿವೆ. ಹರಿಷೇಣಕೃತ ಬೃಹತ್‌ಕಥಾಕೋಷಕ್ಕೆ (೧೨, ೧೩೨) ಅನುಸರಿಸಿ ಇಲ್ಲಿ ಅತಿ ಪ್ರಾಚೀನ ಕಾಲದಲ್ಲಿ ವಿದ್ಯಾಧರರಿಂದ ಐದು ಸ್ತೂಪಗಳು ನಿರ್ಮಾಣಗೊಂಡಿದ್ದವು. ಈ ಐದು ಸ್ತೂಪಗಳ ವಿಖ್ಯಾತಿಯೂ ಸ್ಮೃತಿಯೂ ಒಬ್ಬ ಮುನಿಯ ವಂಶಾವಳಿಗೆ ಸಂಬಂಧವಿದ್ದುದು ಕಂಡುಬರುತ್ತದೆ. ಪಹಾಡಪುರದಲ್ಲಿ (ಬಂಗಾಲ) ಐದನೆಯ ಶತಮಾನದ ಗುಹನಂದಿ ಆಚಾರ್ಯರ ತಾಮ್ರಪತ್ರವೊಂದು ಲಭಿಸಿದೆ. ಇದರಲ್ಲಿ ಈ ಪಂಚಸ್ತೂಪಾನ್ವಯದ ಉಲ್ಲೇಖವಿದೆ. ಧವಲಾ ಟೀಕೆಯಲ್ಲಿ ಅದರ ಕರ್ತೃವಾದ ವೀರಸೇನಾಚಾರ್ಯ ಮತ್ತು ಅವನ ಶಿಷ್ಯನಾದ ಮಹಾಪುರಾಣದ ಕರ್ತೃವಾದ ಜಿನಸೇನನು ಸಹ ತಾವು ಪಂಚಸ್ತೂಪಾನ್ವಯದವರೆಂದು ಹೇಳಿಕೊಂಡಿದ್ದಾರೆ. ಇದೇ ಅನ್ವಯಕ್ಕೆ ತರುವಾಯದ ಕಾಲದಲ್ಲಿ ಸೇನ ಅನ್ವಯವೆಂದು ಹೆಸರು ಪ್ರಸಿದ್ಧವಾಗಿರುವುದು ಕಂಡುಬರುತ್ತದೆ. ಜಿನಪ್ರಭಸೂರಿಕೃತ ವಿವಿಧ ತೀರ್ಥಕಲ್ಪದಲ್ಲಿ ಮಥುರೆಯಲ್ಲಿ ಒಂದು ಸ್ತೂಪವು ಸುಪಾರ್ಶ್ವನಾಥ ತೀರ್ಥಂಕರರ ಸ್ಮೃತಿಗಾಗಿ ಒಬ್ಬ ದೇವನಿಂದ ಅತಿ ಪ್ರಾಚೀನ ಕಾಲದಲ್ಲಿ ನಿರ್ಮಿಸಲಾಗಿತ್ತೆಂದೂ, ಮತ್ತು ಪಾರ್ಶ್ವನಾಥ ತೀರ್ಥಂಕರರ ಕಾಲದಲ್ಲಿ ಅದರ ಜೀರ್ಣೋದ್ಧಾರ ಮಾಡಲಾಗಿತ್ತೆಂದೂ, ಆ ಮೇಲೆ ಒಂದು ಸಾವಿರ ವರ್ಷಗಳ ತರುವಾಯ ಪುನಃ ಅದರ ಉದ್ಧಾರವನ್ನು ಬಪ್ಪಭಟ್ಟಿಸೂರಿಯು ಮಾಡಿದನೆಂದೂ ಉಲ್ಲೇಖಿಸಲಾಗಿದೆ. ರಾಜಮಲ್ಲಕೃತ ಜಂಬೂಸ್ವಾಮಿ ಚರಿತಕ್ಕೆ ಅನುಸರಿಸಿ ಅವನ ಕಾಲದಲ್ಲಿ (ಮೊಗಲ

ಸಾಮ್ರಾಟ್ ಅಕಬರನ ಕಾಲದಲ್ಲಿ) ಮಥುರೆಯಲ್ಲಿ ೫೧೫ ಸ್ತೂಪಗಳು ಜೀರ್ಣ-ಕ್ಷೀಣ ಅವಸ್ಥೆಯಲ್ಲಿ ಇದ್ದುವು. ಇವುಗಳ ಉದ್ಧಾರವನ್ನೂ .ತೋಡರ ಎಂಬ ಹೆಸರಿನ ಒಬ್ಬ ಶ್ರೀಮಂತನಾದ ಸಾವುಕಾರನು ಅಗಣಿತ ದ್ರವ್ಯವನ್ನು ವ್ಯಯಮಾಡಿ ಮಾಡಿದ್ದನು. ಮಥುರೆಯ ಕಂಕಾಲೀ ದಿನ್ನೆಯನ್ನು ಅಗಿಯುವುದರಿಂದ ದೊರೆತ ಭಗ್ನಾವಶೇಷಗಳಲ್ಲಿ ಒಂದು ಜಿನ ಸಿಂಹಾಸನದ ಮೇಲೆ (ಎರಡನೆಯ ಶತಮಾನದ) ಇರುವ ಲೇಖದಲ್ಲಿ ಅಲ್ಲಿಯ ದೇವ ನಿರ್ಮಿತ ಸ್ತೂಪದ ಉಲ್ಲೇಖವಿದೆ. ಇದರ ಸಮರ್ಥನೆಯು ಹರಿಷೇಣ ಮತ್ತು ಜಿನಪ್ರಭಸೂರಿ ಮೊದಲಾದವರ ಉಲ್ಲೇಖಗಳಿಂದಲೂ ಆಗುತ್ತದೆ. ಹರಿಭದ್ರಸೂರೀಕೃತ ಆವಶ್ಯಕ-ನಿರ್ಯುಕ್ತಿ-ವೃತ್ತಿ ಹಾಗೂ ಸೋಮದೇವ ರಚಿಸಿದ ಯಶಸ್ತಿಲಕಚಂಪೂಗಳಲ್ಲಿಯೂ ಮಥುರೆಯ ದೇವನಿರ್ಮಿತ ಸ್ತೂಪದ ವರ್ಣನೆಯು ಬಂದಿದೆ. ಈ ಎಲ್ಲ ಉಲ್ಲೇಖಗಳಿಂದ ಈ ಸ್ತೂಪದ ಅತಿ ಪ್ರಾಚೀನತೆಯು ಸಿದ್ಧವಾಗುತ್ತದೆ.

**ಮಥುರೆಯ ಸ್ತೂಪ :—**

ಮಥುರೆಯ ಸ್ತೂಪದ ಯಾವ ಭಗ್ನಾವಶೇಷವು ಲಭಿಸಿದೆಯೋ, ಅದರಿಂದ ಅದರ ಮೂಲ ವಿನ್ಯಾಸದ ಸ್ವರೂಪವು ಪ್ರಕಟವಾಗುತ್ತದೆ. ಸ್ತೂಪದ ತಳಭಾಗವು ಗೋಲಾಕಾರವಾಗಿತ್ತು. ಅದರ ವ್ಯಾಸವು ೪೭ ಫೂಟ ಇದ್ದುದು ಕಂಡುಬರುತ್ತದೆ. ಅದರಲ್ಲಿ ಕೇಂದ್ರದಿಂದ ಪರೀಘದ ಕಡೆಗೆ ಬೆಳೆಯುತ್ತಿರುವ ವ್ಯಾಸದ ಅರ್ಧದಷ್ಟಿರುವ ೮ ಗೋಡೆಗಳು ಕಂಡುಬರುತ್ತವೆ. ಅವುಗಳ ನಡುವಿನ ಭಾಗವನ್ನು ಮಣ್ಣಿನಿಂದ ತುಂಬಿ, ಸ್ತೂಪವನ್ನು ಗಟ್ಟಿಗೊಳಿಸಲಾಗಿತ್ತು. ಗೋಡೆಗಳನ್ನು ಇಟ್ಟಿಗೆಗಳಿಂದ ಕಟ್ಟಲಾಗಿತ್ತು. ಇಟ್ಟಿಗೆಗಳೂ ಕೂಡ ಚಿಕ್ಕವು ಹಾಗೂ ದೊಡ್ಡವು ಇವೆ. ಸ್ತೂಪದ ಹೊರ ಭಾಗದ ಮೇಲೆ ಜಿನ ಪ್ರತಿಮೆಗಳನ್ನು ನಿರ್ಮಿಸಲಾಗಿತ್ತು. ಪೂರ್ಣ ಸ್ತೂಪವು ಹೇಗಿತ್ತೆಂಬುದರ ಅನುಮಾನವನ್ನು ಇಲ್ಲಿ ದೊರೆತ ವಿವಿಧ ಸಾಮಗ್ರಿಗಳ ಆಧಾರದಿಂದ ಮಾಡಬಹುದಾಗಿದೆ. ಅನೇಕ ಪ್ರಕಾರದ ಚಿತ್ರಕಲೆಯಿಂದ್ಕ ಕೂಡಿದ ಪಾಷಾಣ-ಸ್ತಂಭವು ದೊರೆತಿದೆ. ಅದರಿಂದ ಸ್ತೂಪದ ಸುತ್ತಲೂ ಸುತ್ತುವರಿದ ತೋರಣ ದ್ವಾರವು ಇರಬೇಕೆಂದು ಗೊತ್ತಾಗುತ್ತದೆ. ಎರಡು ಆಯೋಗವಟ್ಟಗಳೂ ಸಹ ದೊರೆತಿವೆ. ಅವುಗಳ ಮೇಲೆ ಸ್ತೂಪದ ಪೂರ್ಣ ಆಕೃತಿಯನ್ನು ಕೆತ್ತಲಾಗಿದೆ. ಆವು ಬಹುತರ ಇದೇ ಸ್ತೂಪದ್ದು ಇಲ್ಲವೆ ಸ್ತೂಪಗಳಿಗೆ ಸಂಬಂಧಿಸಿದವುಗಳಾಗಿರಲು ಸಾಕು. ಸ್ತೂಪವು ಪಟ್ಟಿಕೆಗಳಿಂದ ಸುತ್ತುವರಿದದ್ದು ಇರಬೇಕು. ಆವು ತೋರಣ ದ್ವಾರಕ್ಕೆ ತಲುಪುವವರೆಗೆಂದರೆ ಏಳೆಂಟು ಮೆಟ್ಟಲುಗಳನ್ನು ಹೊಂದಿದವುಗಳಾಗಿದ್ದುವು. ತೋರಣವು ಎರಡು ನಿಲ್ಲಿಸಿದ ಕಂಭಗಳು ಮತ್ತು ಮೇಲೆ ಸ್ವಲ್ಪ ಸ್ವಲ್ಪ ಅಂತರದ ಮೇಲೆ ಒಂದರ ಮೇಲೊಂದರಂತೆ ಮೂರು ಅಡ್ಡ ಕಂಭಗಳಿಂದ ರೂಪಿಸಿದ್ದಿತ್ತು. ಇವುಗಳಲ್ಲಿ ಎಲ್ಲಕ್ಕೂ ಕೆಳಗಿನ ಕಂಭದ ಎರಡೂ ಮಗ್ಗಲಿನ ಭಾಗಗಳಲ್ಲಿ ಮಕರಾಕೃತಿ

ಸಿಂಹಗಳಿಂದ ಆಧಾರವನ್ನೀಯಲಾಗಿತ್ತು. ಸ್ತೂಪದ ಎಡ ಹಾಗೂ ಬಲಗಡೆಗಳಲ್ಲಿ ಎರಡು ಸುಂದರ ಕಂಭಗಳಿದ್ದುವು. ಅವುಗಳ ಮೇಲೆ ಕ್ರಮದಿಂದ ಧರ್ಮಚಕ್ರ ಹಾಗೂ ಕುಳಿತ ಸಿಂಹಗಳ ಆಕೃತಿಗಳನ್ನು ನಿರ್ಮಿಸಲಾಗಿತ್ತು. ಸ್ತೂಪದ ಮಗ್ಗಲುಗಳಲ್ಲಿ ಮೂವರು ಆರಾಧಕರ ಮೂರ್ತಿಗಳನ್ನು ರೂಪಿಸಲಾಗಿತ್ತು. ಮೇಲ್ಭಾಗದಲ್ಲಿ ಹಾಕುತ್ತಿರುವಂಥ ಎರಡು ಆಕೃತಿಗಳು ಬಹುತರ ಚಾರಣ ಮುನಿಗಳನ್ನು ತೋರಿಸುತ್ತಿರಬೇಕು. ಇವು ನಗ್ನವಾಗಿವೆ. ಆದರೆ ಅವುಗಳ ಬಲಗೈಯಲ್ಲಿ ವಸ್ತ್ರದ ತುಂಡಿನಂಥ ವಸ್ತುವೂ ಕಮಂಡಲವೂ ಕಂಡುಬರುತ್ತದೆ. ಎಡಗೈಯು ತಲೆಯ ಮೇಲೆ ನಮಸ್ಕಾರ ಮುದ್ರೆಯಲ್ಲಿದೆ. ಒಂದು ದೃಷ್ಟಿಯಿಂದ ಈ ಯುಗಲಾಕೃತಿಯು ಗರುಡ ಪಕ್ಷಿಗಳ ರೀತಿಯಲ್ಲಿದೆ. ಅವುಗಳ ಪುಚ್ಛ ಹಾಗೂ ನಖಗಳು ಸ್ಪಷ್ಟವಾಗಿ ಕಂಡುಬರುತ್ತವೆ. ಬಲಗಡೆಗೆ ಇರುವ ಸುಪರ್ಣವು ಒಂದು ಪುಷ್ಪಗುಚ್ಛವನ್ನು ಮತ್ತು ಎಡಗಡೆಯದು ಪುಷ್ಪಮಾಲೆಯನ್ನು ಹಿಡಿದಿರುತ್ತವೆ. ಸ್ತೂಪದ ಗುಮ್ಮಟದ ಎರಡು ಮಗ್ಗಲಿಗೆ ವಿಲಾಸ ಪೂರ್ಣ ರೀತಿಯಿಂದ ಜೋಲಿಯನ್ನು ಹೊಡೆಯುವ ಸ್ತ್ರೀಯರ ಆಕೃತಿಗಳು ಇವೆ. ಇವು ಬಹುತರ ಯಕ್ಷಿಣಿಯ ಮೂರ್ತಿಗಳಾಗಿರಬೇಕು. ಸುತ್ತುವರಿದ ಕೆಳಗಿನ ಮೆಟ್ಟಲಿನ ಎರಡೂ ಮಗ್ಗಲಿಗೆ ಒಂದೊಂದು ಗೂಡುಗಳು ಇವೆ. ದಕ್ಷಿಣ ಭಾಗಕ್ಕಿರುವ ಗೂಡಿನಲ್ಲಿ ಒಬ್ಬ ಬಾಲಕ ಸಹಿತ ಪುರುಷಾಕೃತಿಯಿದೆ. ಎರಡನೆಯ ಮಗ್ಗಲಿಗೆ ಸ್ತ್ರೀ ಪ್ರಕೃತಿಯು ಕಂಡುಬರುತ್ತದೆ. ಸ್ತೂಪದ ಗುಮ್ಮಟದ ಮೇಲೆ ಆರು ಸಾಲುಗಳಲ್ಲಿ ಒಂದು ಪ್ರಾಕೃತ ಲೇಖವಿದೆ. ಅದರಲ್ಲಿ ಅರ್ಹಂತವರ್ಧಮಾನನನ್ನು ನಮಸ್ಕರಿಸಿ ತರುವಾಯ ಹೀಗೆ ಹೇಳಿದೆ—"ಶ್ರಮಣ ಶ್ರಾವಿಕಾ ಆಯಾ-ಲವಣಶೋಭಿಕಾ ಎಂಬ ಹೆಸರಿನ ಗಣಿಕೆಯ ಪುತ್ರಿಯಾದ ಶ್ರಮಣ-ಶ್ರಾವಿಕಾ ವಾಸು-ಗಣಿಕಾ ಇವಳು ಜಿನ ಮಂದಿರದಲ್ಲಿ ಅರ್ಹಂತನ ಪೂಜೆಗಾಗಿ ತಮ್ಮ ಮಾತಾ, ಭಗಿನಿ ಹಾಗೂ ದುಹಿತಾ—ಪುತ್ರ ಸಹಿತ ನಿರ್ಗ್ರಂಥರ ಅರಹಂತ ಗೃಹದಲ್ಲಿ ಅರಹಂತನ ದೇವಕುಲ (ದೇವಾಲಯ), ಆಯಾಗ ಸಭಾ, ಪ್ರಪಾ (ನೀರಿಡುವ ಮೆಟ್ಟು) ಹಾಗೂ ಶಿಲಾಪಟ (ಪ್ರಸ್ತುತ ಆಯಾಗಪಟ್ಟ) ಪ್ರತಿಷ್ಠೆಯನ್ನು ಮಾಡಿಸಿದರು." ಈ ಶಿಲಾಪಟವು ೨ ಫೂಟ × ೧ ಇಂಚ × ೧೩ ಫೂಟ ಇದೆ. ಹಾಗೂ ಅಕ್ಷರಗಳ ಆಕಾರವೂ ಮತ್ತು ಚಿತ್ರಿಸಿದ ಬಗೆಯೂ ಕುಶಾಣ ಕಾಲೀನ (ಪ್ರ. ದ್ವಿ. ಶತಮಾನ ಕ್ರಿಸ್ತ.) ಎಂದು ಸಿದ್ಧವಾಗುತ್ತದೆ.

ಈ ಶಿಲಾಪಟಕ್ಕಿಂತಲೂ ಪ್ರಾಚೀನವಾದಂಥ ಇನ್ನೊಂದು ಆಯಾಗಪಟವೂ ಕೂಡ ದೊರೆತಿದೆ. ಇದರ ಮೇಲಿನ ಭಾಗವು ಒಡೆದು ಹೋಗಿದೆ. ಆದರೂ ತೋರಣ, ಪರೀಘ ಸೋಪಾನಪಥ ಹಾಗೂ ಸ್ತೂಪದ ಎರಡೂ ಮಗ್ಗಲಿಗಿರುವ ಯಕ್ಷಣಿಯರ ಮೂರ್ತಿಗಳು ಇದರಲ್ಲಿ ಆ ಶಿಲಾಪಟಪದಕ್ಕಿಂತ ಹೆಚ್ಚು ಸುಸ್ಪಷ್ಟವಾಗಿವೆ. ಇದರ ಮೇಲೆಯೂ ಲೇಖವಿದೆ. ಅದರಲ್ಲಿ ಅರಹಂತನಿಗೆ ನಮಸ್ಕಾರ ಮಾಡಿದ ತರುವಾಯ ಹೀಗೆ ಹೇಳಿದೆ—"ಫಗುಯಶ ನರ್ತಕನ ಭಾರ್ಯೆಯಾದ ಶಿವಯಶಾ ಇವಳು ಅರಹಂತನ ಪೂಜೆಗಾಗಿ ಈ ಯಾಗಪಟವನ್ನು ಮಾಡಿಸಿದಳು." ವಿ. ಸ್ಮಿಥನ ಮತ

ಕ್ಯನುಸರಿಸಿ ಈ ಲೇಖದ ಅಕ್ಷರಗಳ ಆಕೃತಿಯು ಕ್ರಿ. ಪೂ. ೧೫೦ ವರ್ಷಗಳ ಸುಮಾ ರಿನವಾಗಿದೆ. ಶುಂಗ ಕಾಲದ ಭರಹೂತ ಸ್ತೂಪದ ತೋರಣದ ಮೇಲೆ ಅಂಕಿತವಾದ ಧನಭೂತಿಯ ಲೇಖಕ್ಕಿಂತ ಇದು ಹೆಚ್ಚು ಪ್ರಾಚೀನವೆಂದು ಗೊತ್ತಾಗುತ್ತದೆ. ಬುಲ್ಹ ರನು ಕೂಡ ಇದನ್ನು ಕನಿಷ್ಕನ ಕಾಲಕ್ಕಿಂತ ಪ್ರಾಚೀನವೆಂದು ಸ್ವೀಕರಿಸಿದ್ದಾನೆ. ಈ ಪ್ರಕಾರ ಸುಮಾರು ಕ್ರಿ. ಪೂ. ೨೦೦ ವರ್ಷಗಳಲ್ಲಿಯದೆಂಬ ಆಯಾಗಪಟವು ಸಿದ್ಧವಾಗುತ್ತದೆ. ಜೈನ ಪರಂಪರೆಯಲ್ಲಿ ಸ್ತೂಪದ ಪ್ರಚಾರವು ಅದಕ್ಕಿಂತ ಬಹು ಪ್ರಾಚೀನದ್ದೆಂದು ಗೊತ್ತಾಗುತ್ತದೆ. ಆದರೊಡನೆಯೇ, ಜೈನ ಸ್ತೂಪಗಳು ಸುರಕ್ಷಿತ ಅವಸ್ಥೆಯಲ್ಲಿ ಇಲ್ಲದಿರುವುದಕ್ಕೂ ಅನೇಕ ಕಾರಣಗಳು ಇವೆ. ಅವುಗಳಲ್ಲೊಂದು ಗುಹಾ-ಚೈತ್ಯ ಮತ್ತು ಮಂದಿರಗಳು ಹೆಚ್ಚೆಚ್ಚು ಪ್ರಚಾರಗೊಂಡಂತೆ ಹೊಸ ಸ್ತೂಪ ಗಳ ನಿರ್ಮಾಣವು ನಿಲ್ಲುತ್ತ ಹೋಯಿತು. ಅದರಂತೆಯೇ ಪ್ರಾಚೀನ ಸ್ತೂಪಗಳನ್ನು ರಕ್ಷಿಸುವ ಕಡೆಗೂ ಗಮನವು ಕಡಿಮೆಯಾಯಿತು. ಎರಡನೆಯದು ಉಪರ್ಯುಕ್ತ ಸ್ತೂಪದ ಆಕಾರ ಮತ್ತು ನಿರ್ಮಾಣ ಕಲೆಯ ವರ್ಣನೆಯಿಂದ, ಬೌದ್ಧ ಹಾಗೂ ಜೈನ ಸ್ತೂಪಗಳ ಕಲೆಯು ಬಹುತರ ಒಂದೇ ರೀತಿಯಾಗಿತ್ತೆಂದು ಸಿದ್ಧವಾಗುತ್ತದೆ. ನಿಜವಾಗಿಯೂ ಈ ಕಲೆಯು ಶ್ರಮಣ ಸಂಸ್ಕೃತಿಯಲ್ಲಿ ಸಮಾನವಾಗಿ ಬೆಳೆದು ಬಂದಿತ್ತು. ಈ ಕಾರಣದಿಂದ ಅನೇಕ ಜೈನ ಸ್ತೂಪಗಳು ಭ್ರಾಂತಿಯಿಂದ ಬೌದ್ಧ ಸ್ತೂಪಗಳೆಂದೇ ಮನ್ನಿಸಲಾಗುತ್ತ ನಾಗಿದರು. ಈ ಮಾತಿಗೆ ಸ್ಪಷ್ಟವಾದ ಉದಾ ಹರಣೆಗಳನ್ನೂ ಸಹ ಉಪಸ್ಥಿತಗೊಳಿಸಲಾಗುತ್ತದೆ. ಮಥುರೆಯ ಸಮೀಪದಲ್ಲಿ ಯಾವ ಸ್ಥಾನದಲ್ಲಿ ಆ ಪ್ರಾಚೀನ ಜೈನ ಸ್ತೂಪವಿತ್ತೋ ಅದನ್ನು ಈಗ 'ಕಂಕಾಲೀ' ದಿನ್ನೆಯೆಂದು ಕರೆಯುತ್ತಾರೆ. ಇದಕ್ಕೆ ಕಾರಣವಿಷ್ಟೆ : ಜೈನರ ಉಪೇಕ್ಷೆಯಿಂದಾಗಲಿ, ಅಥವಾ ಯಾವುದೋ ಬಾಹ್ಯ ವಿಧ್ವಂಸಕ ಆಘಾತದಿಂದಾಗಲಿ, ಯಾವಾಗ ಆ ಸ್ತೂಪ ಹಾಗೂ ಮಂದಿರಗಳು ವಿಧ್ವಂಸವಾದುವೋ ಆಗ ಅದೊಂದು ದಿನ್ನೆಯ ರೂಪವನ್ನು ತಾಳಿತು. ಆಮೇಲೆ ಮಂದಿರದ ಒಂದು ಕಂಭವನ್ನು ಆ ದಿನ್ನೆಯ ಮೇಲೆ ಸ್ಥಾಪಿಸಿ, ಅದನ್ನು ಕಂಕಾಲೀದೇವಿ ಎಂಬ ಹೆಸರಿನಿಂದ ಪೂಜಿಸತೊಡಗಿದರು. ಇಲ್ಲಿಯ ಸ್ತೂಪದ ಯಾವ ಆಕಾರ-ಪ್ರಕಾರಗಳು ಮೇಲೆ ಹೇಳಿದ 'ವಾಸು'ವಿನ ಆ ಯಾಗಪಟ್ಟ ದಿಂದ ಪ್ರಕಟವಾಗುತ್ತದೆಯೋ, ಅದೇ ಪ್ರಕಾರದ ಸ್ತೂಪದ ಕೆಳಭಾಗವು ತಕ್ಷಶಿಲೆಯ ಸಮೀಪದಲ್ಲಿ 'ಸರಕಾಪ' ಎಂಬ ಹೆಸರಿನ ಸ್ಥಾನದಲ್ಲಿ ಕಂಡುಬರುತ್ತದೆ. ಈ ಸ್ತೂಪದ ಸೋಪಾನ ಪಥದ ಎರಡೂ ಮಗ್ಗಲುಗಳಲ್ಲಿ ಅದೇ ಪ್ರಕಾರದ ಎರಡು ಗುಡುಗಳು ಉಳಿದಿವೆ. ಮೇಲ್ಕಾಣಿಸಿದ ಆಯಾಗಪಟದಲ್ಲಿ ಕಾಣಿಸಿದಂತೆಯೇ ಇವೂ ಇವೆ. ಇದೇ ಕಾರಣದಿಂದ ಪುರಾತತ್ತ್ವವಿಭಾಗದ ಡಾಯರೆಕ್ಟರ ಸರ್ ಜಾನ-ಮಾರ್ಶಲ್‌ನು ಇದನ್ನು ಜೈನ ಸ್ತೂಪವೆಂದು ಹೇಳಿದ್ದಾನೆ. ಇದನ್ನು ಬೌದ್ಧ ಧರ್ಮದಿಂದ ತೀರ ಅಸಂಬದ್ಧವೆಂದು ಹೇಳಿದ್ದಾನೆ. ಆದರೂ ಹಿಂದಿನ ಕೆಲವು ಲೇಖಕರು ಇದನ್ನು ಬೌದ್ಧ ಸ್ತೂಪವೆಂದೇ ಹೇಳಿದ್ದಾರೆ. ಇದಕ್ಕೆ ಕಾರಣವೆಂದು ಅವರು ಈ ಸ್ಥಾನ

ದೊಡನೆ ಜೈನ ಧರ್ಮದ ಐತಿಹಾಸಿಕ ಸಂಬಂಧವು ಯಾವುದೂ ಯಾವಾಗಲೂ ಇರಲಿಲ್ಲ ವೆಂದು ಹೇಳುತ್ತಾರೆ. ಆದರೆ ಅವರು ಒಂದು ಮಾತನ್ನು ಮರೆಯುತ್ತಾರೆ: ತಕ್ಷಶಿಲೆ ಯೊಡನೆ ಜೈನ ಧರ್ಮದ ಸಂಬಂಧವು ತೀರ ಪ್ರಾಚೀನ ಕಾಲದಿಂದಲೂ ಇತ್ತು. ಜೈನ ಪುರಾಣಗಳಿಗೆ ಅನುಸರಿಸಿ ಪ್ರಥಮ ತೀರ್ಥಂಕರ ಋಷಭದೇವನು ಇಲ್ಲಿ ತನ್ನ ಮಗನಾದ ಬಾಹುಬಲಿಗೆ ರಾಜಧಾನಿಯನ್ನು ಸ್ಥಾಪಿಸಿ ಕೊಟ್ಟಿದ್ದನು. ಅಲ್ಲಿ ಅವನು ವಿಹಾರವನ್ನು ಕೂಡ ಮಾಡಿದ್ದನು. ಅವನ ಸ್ಮಾರಕವೆಂದು ಇಲ್ಲಿ ಧರ್ಮಚಕ್ರವನ್ನೂ ಸ್ಥಾಪಿಸಲಾಗಿತ್ತು. ಇಷ್ಟೇ ಅಲ್ಲ, ಅತಿ ಪ್ರಾಚೀನ ಕಾಲದಿಂದಲೂ ಏಳನೆಯ ಶತಮಾನದ ವರೆಗೆ ಪಶ್ಚಿಮೋತ್ತರ ಭಾರತದಲ್ಲಿ ಅಫಗಾನಿಸ್ತಾನದ ತನಕ ಜೈನ ಧರ್ಮವು ಪ್ರಚಾರದಲ್ಲಿದ್ದುದಕ್ಕೆ ಪ್ರಮಾಣಗಳು ಲಭಿಸುತ್ತವೆ. ಹುಯೇನ್‌ತ್ಸಾಂಗನು ತನ್ನ ಯಾತ್ರಾ ವರ್ಣನೆಯಲ್ಲಿ ಹೀಗೂ ವಿವರಿಸಿದ್ದಾನೆ: "ಅವನ ಕಾಲದಲ್ಲಿ ಹುಸೀನಾ (ಗಜನಿ) ಮತ್ತು ಹಜಾರಾ (ಅಥವಾ ಹೋಸಲಾ)ದಲ್ಲಿ ಬಹಳಷ್ಟು ತೀರ್ಥ ಕರಿದ್ದರು. ಕ್ಷಣದೇವ (ಶಿಶ್ನ ಅಥವಾ ನಗ್ನ ದೇವ) ನ ಪೂಜೆಯನ್ನು ಮಾಡುತ್ತಿದ್ದರು. ತಮ್ಮ ಮನಸ್ಸನ್ನು ವಶದಲ್ಲಿಟ್ಟುಕೊಳ್ಳುತ್ತಿದ್ದರು. ಅವರು ಶರೀರವನ್ನು ಲೆಕ್ಕಿಸುತ್ತಿರ ಲಿಲ್ಲ" ಈ ವರ್ಣನೆಯಿಂದ ಆ ದೇವರೂ ಜೈನ ತೀರ್ಥಂಕರರು ಮತ್ತು ಅವರ ಅನು ಯಾಯಿಗಳು ಜೈನಮುನಿ ಹಾಗೂ ಶ್ರಾವಕರಾಗಿರುವುದರಲ್ಲಿ ಯಾವ ಸಂದೇಹವೂ ಇಲ್ಲ. ಪಾಲಿ ಗ್ರಂಥಗಳಲ್ಲಿ ನಿಗಂಠ ನಾತಪುತ್ತ (ಮಹಾವೀರ ತೀರ್ಥಂಕರ) ನಮ್ಮ ಒಬ್ಬ ತೀರ್ಥಕನೆಂದೇ ಹೇಳಲಾಗಿದೆ. ಅಂತೂ ತಕ್ಷಶಿಲೆಯ ಸಮೀಪದಲ್ಲಿ 'ಸರಕಾಪ' ಸ್ತೂಪವನ್ನು ಜೈನ ಸ್ತೂಪವೆಂದು ಸ್ವೀಕರಿಸುವುದರಲ್ಲಿ ಯಾವ ಆಪತ್ತಿಯೂ ಇರಲು ಕಾರಣವಿಲ್ಲ.

ಮಥುರೆಯಲ್ಲಿ ಲಭಿಸಿದ ಇನ್ನೊಂದು ಆಯಾಗ ಪಟದ ಮಧ್ಯದಲ್ಲಿ ಛತ್ರ-ಚಮರ ಸಹಿತ ಜಿನಮೂರ್ತಿಯು ವಿರಾಜಮಾನವಾಗಿದೆ. ಅದರ ಸಮೀಪದಲ್ಲಿ ತ್ರಿರತ್ನ, ಕಲಶ, ಮತ್ಸ್ಯಯುಗಲ, ಹಸ್ತಿ ಮೊದಲಾದ ಮಂಗಲ ದ್ರವ್ಯ ಮತ್ತು ಆಲಂಕಾರಿಕಗಳ ಚಿತ್ರಣವಿದೆ. ಆಯಾಗ ಪಟವು ಚಿತ್ರಿತ ಶಿಲೆಯ ಪಟವಾಗಿರುತ್ತಿತ್ತು. ಅದರ ಪೂಜೆ ಯನ್ನೂ ಕೂಡ ಮಾಡಲಾಗುತ್ತಿತ್ತು.

### ಜೈನ ಗುಹೆಗಳು :—

ಪ್ರಾಚೀನತಮ ಕಾಲದಿಂದಲೂ ಜೈನ ಮುನಿಗಳಿಗೆ ನಗರ ಗ್ರಾಮಾದಿ ಬಹುಜನ ಸಂಕೀರ್ಣ ಸ್ಥಾನದಿಂದ ಬೇರೆಯಾಗಿಯೇ ಪರ್ವತ ಮತ್ತು ವನಗಳ ಶೂನ್ಯ ಗುಹೆಗಳಲ್ಲಿ ಅಥವಾ ಪೊದರುಗಳಲ್ಲಿ ವಾಸಮಾಡುವ ವಿಧಿಯನ್ನು ವಿಧಿಸಲಾಗಿದೆ. ಇಂಥ ಏಕಾಂತ ವಾಸವು ಜೈನ ಮುನಿಗಳ ಸಾಧನೆಗೆ ಆವಶ್ಯಕ ಅಂಗವೆಂದು ಹೇಳಲಾಗಿದೆ (ತ.ಸೂ. ೩, ೭ ಸ. ಸಿದ್ಧಿ). ಎಲ್ಲಿ ಜೈನ ಮುನಿಗಳು ವಾಸಿಸುತ್ತಾರೆಯೋ ಅಲ್ಲಿ ಧ್ಯಾನ ಮತ್ತು ವಂದನಾದಿಗಳಿಗೆಂದು ಜೈನಮೂರ್ತಿಗಳ ಸ್ಥಾಪನೆಯೂ ಆಗುತ್ತ ಬಂದಿದೆ. ಆರಂಭ

ದಲ್ಲಿ ಕಲ್ಲುಗಳಿಂದ ರೂಪುಗೊಂಡ ಪ್ರಾಕೃತಿಕ ಗುಹೆಗಳನ್ನು ಉಪಯೋಗಿಸುತ್ತಿರ ಬೇಕು ಇಂಥ ಗುಹೆಗಳು ಬಹುತರ ಎಲ್ಲ ಕಡೆಗೂ ಪರ್ವತಗಳ ತಳದಲ್ಲಿ ಕಂಡುಬರುತ್ತವೆ. ಇವೇ ಜೈನ ಪರಂಪರೆಯಲ್ಲಿ ಮನ್ನಿಸಲಾದ ಅಕೃತ್ರಿಮ ಚೈತ್ಯಾಲಯಗಳೆಂದು ಹೇಳಲಾಗುತ್ತದೆ. ಕ್ರಮದಿಂದ ಈ ಗುಹೆಗಳಿಗೆ ವಿಶೇಷ ಸಂಸ್ಕಾರ ಮತ್ತು ವಿಸ್ತಾರ ಗೊಳಿಸಲೆಂದು ಕೃತ್ರಿಮ ಸಾಧನೆಗಳನ್ನು ಉಪಯೋಗಿಸ ತೊಡಗಿದರು. ಒಂದೊಂದೆಡೆಯಲ್ಲಿ ಯೋಗ್ಯ ಶಿಲೆಗಳು ಲಭಿಸಿದಲ್ಲಿ ಅವುಗಳನ್ನು ಕೊರೆದು, ಕೆತ್ತಿ ಗುಹೆಗಳನ್ನೂ ವಿಹಾರಗಳನ್ನೂ ನಿರ್ಮಿಸಲು ಪ್ರಾರಂಭಿಸಿದರು. ಇಂಥ ಗುಹೆಗಳಲ್ಲಿ ಎಲ್ಲಕ್ಕೂ ಪ್ರಾಚೀನ ಮತ್ತು ಪ್ರಸಿದ್ಧ ಜೈನ ಗುಹೆಗಳು ಬರಾಬರ ಮತ್ತು ನಾಗಾರ್ಜುನೀ ಗುಡ್ಡಗಳಲ್ಲಿ ದೊರೆಯುತ್ತವೆ. ಈ ಗುಡ್ಡಗಳು ಗಯೆಯಿಂದ ೧೫–೨೦ ಮೈಲುಗಳಷ್ಟು ದೂರದಲ್ಲಿ ಪಾಟಣಾ-ಗಯಾ ರೈಲಿನ ಬೇಲಾ ನಿಲ್ದಾಣದಿಂದ ಎಂಟು ಮೈಲು ಪೂರ್ವಕ್ಕಿವೆ. ಬರಾಬರ ಗುಡ್ಡದಲ್ಲಿ ನಾಲ್ಕು; ಅಲ್ಲಿಂದ ನಾಲ್ಕು ಮೈಲು ದೂರದಲ್ಲಿರುವ ನಾಗಾರ್ಜುನೀ ಗುಡ್ಡದಲ್ಲಿ ಮೂರು ಗುಹೆಗಳು ಇವೆ. ಬರಾಬರದ ಗುಹೆಗಳು ಅಶೋಕ ಮತ್ತು ನಾಗಾರ್ಜುನೀಯ ಗುಹೆಗಳು ಅವನ ಮೊಮ್ಮಗನಾದ ದಶರಥನಿಂದ ಆಜೀವಕ ಮುನಿಗಳಿಗಾಗಿ ನಿರ್ಮಾಣಗೊಂಡುವು. ಆಜೀವಕ ಸಂಪ್ರದಾಯವು ಆ ಕಾಲದಲ್ಲಿ (ಕ್ರಿ. ಪೂ. ಮೂರನೆಯ ಶತಮಾನ) ಒಂದು ಸ್ವತಂತ್ರವಾದ ಸಂಪ್ರದಾಯವಾಗಿತ್ತು. ಆದರೂ ಐತಿಹಾಸಿಕ ಪ್ರಮಾಣಗಳಿಂದ ಅದರ ಉತ್ಪತ್ತಿ ಹಾಗೂ ವಿಲಯಗಳು ಜೈನ ಸಂಪ್ರದಾಯದಲ್ಲಿಯೇ ಆದುದು ಸಿದ್ಧವಾಗುತ್ತದೆ. ಜೈನ ಆಗಮಗಳಿಗೆ ಅನುಸರಿಸಿ ಈ ಸಂಪ್ರದಾಯದ ಸ್ಥಾಪಕನಾದ ಮಂಖಲೀ ಗೋಶಾಲನು ಬಹಳಷ್ಟು ಕಾಲದ ವರೆಗೆ ಮಹಾವೀರ ತೀರ್ಥಂಕರರ ಶಿಷ್ಯನಾಗಿದ್ದನು. ಆದರೆ ಕೆಲವೊಂದು ಸೈದ್ಧಾಂತಿಕ ಮತಭೇದವೇ ಕಾರಣವಾಗಿ ಅವನು ತನ್ನದಾದ ಒಂದು ಸಂಪ್ರದಾಯವನ್ನು ಪ್ರಾರಂಭಿಸಿದನು. ಆದರೆ ಈ ಸಂಪ್ರದಾಯವು ಸ್ವತಂತ್ರ ರೂಪದಿಂದ ಎರಡು–ಮೂರು ಶತಮಾನಗಳ ವರೆಗೆ ಮಾತ್ರ ನಡೆಯಿತು. ಆ ಕಾಲದಲ್ಲಿಯೂ ಕೂಡ ಆಜೀವಿಕ ಸಾಧುಗಳು ಜೈನ ಮುನಿಗಳಂತೆಯೇ ನಗ್ನವಾಗಿಯೇ ಇರುತ್ತಿದ್ದರು. ಅಲ್ಲದೆ ಅವರ ಭಿಕ್ಷಾದಿಗಳಿಗೆ ಸಂಬಂಧಿಸಿದ ನಡಾವಳಿಯೂ ಕೂಡ ಜೈನ ನಿರ್ಗ್ರಂಥ ಸಂಪ್ರದಾಯಕ್ಕಿಂತ ಭಿನ್ನವಾಗಿರಲಿಲ್ಲ. ಅಶೋಕನ ತರುವಾಯ ಈ ಸಂಪ್ರದಾಯವು ಜೈನ ಸಂಘದಲ್ಲಿಯೇ ವಿಲೀನವಾಗಿ ಹೋಯಿತು. ಅಂದಿನಿಂದ ಇದರ ಸ್ವತಂತ್ರ ಸತ್ತೆಯ ಉಲ್ಲೇಖವು ಯಾವುದೂ ಕಂಡುಬರುವುದಿಲ್ಲ. ಈ ಪ್ರಕಾರ ಆಜೀವಿಕ ಮುನಿಗಳಿಗೆ ದಾನವಿತ್ತ ಗುಹೆಗಳನ್ನು ಜೈನ ಐತಿಹಾಸಿಕ ಪರಂಪರೆಯಲ್ಲಿಯೇ ಉಲ್ಲೇಖ ಮಾಡಲಾಗುತ್ತದೆ.

ಬರಾಬರ ಗುಡ್ಡದ ಎರಡು ಗುಹೆಗಳನ್ನು ಅಶೋಕನು ತನ್ನ ರಾಜ್ಯಕಾಲದ ೧೨ನೆಯ ವರ್ಷದಲ್ಲಿಯೂ, ಮೂರನೆಯದನ್ನು ೧೯ ನೆಯ ವರ್ಷದಲ್ಲಿಯೂ ನಿರ್ಮಾಣ ಗೊಳಿಸಿದನು. ಸುದಾಮಾ ಮತ್ತು ವಿಶ್ವ ಜೋಪಡಿ ಎಂಬ ಹೆಸರಿನ ಗುಹೆಗಳಲ್ಲಿರುವ

ಲೇಖಗಳಲ್ಲಿ ಆಜೀವಕರಿಗೆ ದಾನವಿತ್ತ ಸ್ಪಷ್ಟ ಉಲ್ಲೇಖಗಳು ಇವೆ. ಸುದಾಮಾ ಗುಹೆಯ ಲೇಖದಲ್ಲಿ ಅದನ್ನು ನ್ಯಗ್ರೋಧ ಗುಹೆ ಎಂದು ಕರೆದಿದೆ. ಇದರಲ್ಲಿ ಎರಡು ಮಂಟಪಗಳಿವೆ. ಹೊರಗಿನದು ೩೩'×೨೦' ಮತ್ತು ಒಳಗಿನದು ೧೯'×೧೯' ಉದ್ದಗಲಳತೆಗಳುಳ್ಳವು ಇವೆ. ಎತ್ತರ ಸುಮಾರು ೧೨' ಇವೆ. ವಿಶ್ವಜೋಪಡಿ ಎಂಬ ಗುಹೆಯ ಲೇಖದಲ್ಲಿ ಈ ಗುಡ್ಡವನ್ನು 'ಖಲಟಿಕ ಪರ್ವತ' ಎಂಬ ಹೆಸರಿನಿಂದ ಉಲ್ಲೇಖಿಸಲಾಗಿದೆ. ಉಳಿದ ಎರಡು ಗುಹೆಗಳ ಹೆಸರುಗಳು 'ಕರಣಚೌಪಾರ' ಮತ್ತು 'ಲೋಮಸ ಋಷಿ' ಗುಹೆಗಳೆಂದಿವೆ. ಆದರೆ ಕರಣಚೌಪಾರದ ಲೇಖದಲ್ಲಿ 'ಸುಪಿಯೆ ಗುಘಾ' ಎಂದು ಹೇಳಲಾಗಿದೆ. ಲೋಮಸ ಋಷಿಯ ಗುಹೆಯನ್ನು 'ಪ್ರವರ ಗಿರಿ ಗುಘಾ' ಎಂದು ಉಲ್ಲೇಖಿಸಿದೆ. ಈ ಎಲ್ಲ ಗುಹೆಗಳನ್ನು ಬಿರುಸಾದ ತೈಲವರ್ಣದ ಕಲ್ಲನ್ನು ಕೊರೆದು ಮಾಡಲಾಗಿದೆ. ಅವುಗಳ ಮೇಲೆ ಹೊಳವುಳ್ಳ ನುಣುಪು ಪಾಲಿಶನ್ನು ಮಾಡಿದೆ. ಇದನ್ನು ಮೌರ್ಯಕಾಲದ ವಿಶೇಷತೆಯೆಂದು ಸ್ವೀಕರಿಸಲಾಗುತ್ತದೆ.

ನಾಗಾರ್ಜುನೀ ಗುಡ್ಡದಲ್ಲಿ ಗೋಪೀ ಗುಹೆ, ಬಹಿಯೊದ ಗುಹೆ, ವೇದಥಿಕ ಗುಹೆ ಎಂಬ ಹೆಸರಿನ ಮೂರು ಗುಹೆಗಳಿವೆ. ಮೊದಲನೆಯ ಗುಹೆಯು ೪೫'×೧೯' ಉದ್ದಗಲುಳ್ಳದ್ದಿದೆ. ತರುವಾಯ ಕಾಲದ ಅನಂದವರ್ಮನ ಒಂದು ಲೇಖದಲ್ಲಿ ಇದಕ್ಕೆ 'ವಿಂಧ್ಯಭೂಧರ ಗುಹೆ' ಯೆಂಬು ಹೇಳಲಾಗಿದೆ. ಆದರೆ ದಶರಥನ ಲೇಖದಲ್ಲಿ ಇದರ ಹೆಸರು ಗೋಪಿಕ ಗುಹೆ ಎಂಡು ಸ್ಪಷ್ಟವಾಗಿ ಅಂಕಿತಗೊಳಿಸಿದೆ. ಅಲ್ಲದೆ ಇದನ್ನು ಆಜೀವಿಕ ಭದಂತನಿಗೆ ದಾನವಿತ್ತ ಉಲ್ಲೇಖವೂ ಕೂಡ ಇದೆ. ಇಂಥ ಲೇಖಗಳು ಉಳಿದ ಎರಡು ಗುಹೆಗಳಲ್ಲಿಯೂ ಇವೆ ಕ್ರಿ.ಪೂ. ಮೂರನೆಯ ಶತಮಾನದ ಮೌರ್ಯ ಕಾಲದ ಗುಹೆಗಳು ಈ ಗುಹೆಗಳ ತರುವಾಯ ಉಲ್ಲೇಖನೀಯವಾಗಿವೆ. ಓಡಿಸಾದಲ್ಲಿ ಕಟಕದ ಸಮೀಪದಲ್ಲಿರುವ ಉದಯಗಿರಿ ಮತ್ತು ಖಂಡಗಿರಿ ಎಂಬ ಹೆಸರಿನ ಪರ್ವತಗಳಲ್ಲಿ ಇರುವ ಗುಹೆಗಳು ಅವುಗಳಲ್ಲಿ ದೊರೆತ ಲೇಖದ ಆಧಾರದಿಂದ ಕ್ರಿ. ಪೂ. ಎರಡನೆಯ ಶತಮಾನದವೆಂದು ಸಿದ್ಧವಾಗುತ್ತದೆ. ಉದಯಗಿರಿಯ 'ಹಾಥೀಗುಘಾ' ಎಂಬ ಹೆಸರಿನ ಗುಹೆಯಲ್ಲಿ ಪ್ರಾಕೃತ ಭಾಷೆಯ ಸುವಿಸ್ತೃತ ಲೇಖವೊಂದು ಕಂಡುಬರುತ್ತದೆ. ಆದರಲ್ಲಿ ಕಲಿಂಗ ಸಮ್ರಾಟ್‌ನಾದ ಖಾರವೇಲನ ಬಾಲ್ಯಕಾಲ ಮತ್ತು ರಾಜ್ಯದ ೧೩ ವರ್ಷಗಳ ಚರಿತ್ರವನ್ನು ವಿಧಿವತ್ತಾಗಿ ವರ್ಣಿಸಲಾಗಿದೆ. ಈ ಲೇಖವು ಅರಹಂತ ಮತ್ತು ಸರ್ವ ಸಿದ್ಧರಿಗೆ ನಮಸ್ಕರಿಸುವುದರಿಂದ ಪ್ರಾರಂಭವಾಗುತ್ತದೆ. ಇದರ ೧೨ನೆಯ ಪಂಕ್ತಿಯಲ್ಲಿ ಸ್ಪಷ್ಟವಾಗಿ ಹೀಗೆ ಉಲ್ಲೇಖಿಸಿದೆ : 'ಖಾರವೇಲನು ತನ್ನ ರಾಜ್ಯಕಾಲದ ಹನ್ನೆರಡನೆಯ ವರ್ಷದಲ್ಲಿ ಮಗಧದ ಮೇಲೆ ಆಕ್ರಮಣ ಮಾಡಿದನು. ಅಲ್ಲಿಯ ರಾಜನಾದ ಬೃಹಸ್ಪತಿ ಮಿತ್ರನನ್ನು ಸೋಲಿಸಿದನು. ಅಲ್ಲಿಂದ ಕಲಿಂಗದ ಜಿನಮೂರ್ತಿಯನ್ನು ತನ್ನ ದೇಶಕ್ಕೆ ಮರಳಿ ತಂದನು. ಈ ಮೂರ್ತಿಯನ್ನು ಮೊದಲು ನಂದರಾಜನು ಅಪಹರಿಸಿ ಒಯ್ದಿದ್ದನು.

ಈ ಉಲ್ಲೇಖದಿಂದ ಜೈನ ಇತಿಹಾಸ ಹಾಗೂ ಸಂಸ್ಥಾನಗಳ ವಿಷಯದಲ್ಲಿ ಅನೇಕ ಮಹತ್ವಪೂರ್ಣವಾದ ಸಂಗತಿಗಳು ಸಿದ್ಧವಾಗುತ್ತವೆ. ನಂದಕಾಲದಲ್ಲಿ ಅರ್ಥಾತ್ ಕ್ರಿ. ಪೂ. ಐದನೆಯ–ನಾಲ್ಕನೆಯ ಶತಮಾನದಲ್ಲಿಯೂ ಜೈನಮೂರ್ತಿಗಳನ್ನು ನಿರ್ಮಾಣ ಮಾಡಿ, ಅವುಗಳ ಪೂಜೆ ಪ್ರತಿಷ್ಠೆಗಳನ್ನು ಮಾಡಲಾಗುತ್ತಿತ್ತು. ಎಂಬ ಮಾತು ನಿಶ್ಚಿತಗೊಳ್ಳುತ್ತದೆ. ಆ ಕಾಲದಲ್ಲಿ ಕಲಿಂಗ ದೇಶದಲ್ಲಿ ಒಂದು ಪ್ರಸಿದ್ಧ ಜೈನ ಮಂದಿರ ಹಾಗೂ ಮೂರ್ತಿಗಳು ಇದ್ದುವು ಎಂಬುದೂ ಗೊತ್ತಾಗುತ್ತದೆ. ಅವುಗಳನ್ನು ಆ ಪ್ರದೇಶದ ಜನರೆಲ್ಲ ಪೂಜಿಸುತ್ತಿದ್ದರು. ಆ ನಂದ ಸಮ್ರಾಟನು ಆ ಜೈನಮೂರ್ತಿಯನ್ನು ಅಪಹರಿಸಿದನು; ಅದನ್ನು ತನ್ನಲ್ಲಿ ಸುರಕ್ಷಿತವಾಗಿ ಇಟ್ಟುಕೊಂಡಿದ್ದನು; ಅಂದಮೇಲೆ-ಅವನು ಜೈನ ಧರ್ಮಕ್ಕೆ ಸಂಬಂಧವುಳ್ಳವನಾಗಿರಬೇಕು: ಅವನು ಆ ಮೂರ್ತಿಗಾಗಿ ತಮ್ಮಲ್ಲಿಯೂ ಜೈನ ಮಂದಿರವನ್ನು ನಿರ್ಮಾಣ ಮಾಡಿಸಿರಬೇಕು. ಇನ್ನೂ ಕಲಿಂಗ ದೇಶದ ಜನತೆ ಹಾಗೂ ರಾಜವಂಶಗಳಲ್ಲಿ ಆ ಜೈನಮೂರ್ತಿಗಾಗಿ ಇನ್ನೂರು–ಮುನ್ನೂರು ವರ್ಷಗಳ ವರೆಗೆ ಇಂಥದೊಂದು ಅಪೂರ್ವ ಶ್ರದ್ಧೆಯಿತ್ತು. ಅವಕಾಶವು ಒದಗಿದೊಡನೆಯೇ ಕಲಿಂಗ ಸಮ್ರಾಟನು ಅದನ್ನು ತಿರುಗಿ ತಂದು, ಪ್ರತಿಷ್ಠೆ ಮಾಡುವುದು ಅವಶ್ಯಕವೆಂದು ತಿಳಿದಿದ್ದನು. ಇವೆಲ್ಲ ಸಂಗತಿಗಳು ಈ ಲೇಖನದಿಂದ ಸ್ಪಷ್ಟವಾಗುತ್ತವೆ. ಹೀಗೆ ಈ ಗುಹೆ, ಹಾಗೂ ಅಲ್ಲಿ ದೊರೆತ ಆ ಲೇಖಗಳು ಭಾರತೀಯ ಇತಿಹಾಸ. ವಿಶೇಷತಃ ಜೈನ ಇತಿಹಾಸ ಇವುಗಳಿಗಾಗಿ ಬಹು ಮಹತ್ವಪೂರ್ಣ ವಸ್ತುಗಳಾಗಿವೆ.

ಉದಯಗಿರಿಯ ಈ ರಾಣೀಗುಹೆಯು (ಹಾಥೀ ಗುಹೆ) ನಿಜವಾಗಿಯೂ ಒಂದು ಸುವಿಸ್ತೃತ ವಿಹಾರವಾಗಿದೆ. ಇದರಲ್ಲಿ ಮೂರ್ತಿ ಪ್ರತಿಷ್ಠೆಯೂ ಇರುವುದು; ಮುನಿಗಳ ವಿಹಾರವೂ ಇರುವುದು. ಇದರ ಒಳ ಭಾಗವು ೫೮ ಫೂಟು ಉದ್ದ ಮತ್ತು ೨೮ ಫೂಟು ಅಗಲವಿದೆ. ಬಾಗಿಲದ ಎತ್ತರವು ೧೧½ ಫೂಟು ಇದೆ. ಇದನ್ನು ಎರಡು ಅಂತಸ್ತುಗಳಲ್ಲಿ ನಿರ್ಮಿಸಲಾಗಿದೆ. ಕೆಳಗಿನ ಅಂತಸ್ತಿನಲ್ಲಿ ನಾಲು-ಸಾಲಾಗಿ ಎಂಟು, ಮತ್ತು ಮೇಲಿನ ಸಾಲಿನಲ್ಲಿ ಆರು ಪ್ರಕೋಷ್ಠಗಳಿವೆ. ೨೦ ಫೂಟು ಉದ್ದವಾದ ಪಡಸಾಲೆಯು ಮೇಲಿನ ಅಂತಸ್ತಿನ ಒಂದು ವಿಶೇಷತೆಯಾಗಿದೆ. ಪಡಸಾಲೆಯಲ್ಲಿ ದ್ವಾರಪಾಲಕ ಮೂರ್ತಿಗಳನ್ನು ಕೆತ್ತಲಾಗಿದೆ. ಕೆಳಗಿನ ಅಂತಸ್ತಿನಲ್ಲಿರುವ ದ್ವಾರಪಾಲರು ಸುಸಜ್ಜಿತ ಸೈನಿಕರಂತೆ ಕಂಡುಬರುತ್ತಾರೆ. ಪಡಸಾಲೆಯಲ್ಲಿ ಚಿಕ್ಕ ಚಿಕ್ಕ ಉಚ್ಚ ಆಸನಗಳನ್ನೂ ಸಹ ನಿರ್ಮಿಸಲಾಗಿದೆ. ಮೇಲ್ ಛಾವಣಿಯನ್ನು ಸಂಭಾಳಿಸಲಿಕ್ಕೆಂದು ಅನೇಕ ಸ್ತಂಭಗಳನ್ನು ನಿಲ್ಲಿಸಲಾಗಿದೆ. ಒಂದು ತೋರಣದ ದ್ವಾರದ ಮೇಲೆ ತ್ರಿರತ್ನಗಳ ಚಿಹ್ನ ಮತ್ತು ಅಶೋಕ ವೃಕ್ಷದ ಪೂಜೆಯ ಚಿತ್ರಣವು ಮಹತ್ವಪೂರ್ಣವಾಗಿದೆ. ತ್ರಿರತ್ನ ಚಿಹ್ನವು ಸಿಂಧೂನದೀ ತೀರದ ಮುದ್ರೆಯ ಮೇಲೆ ಆಸೀನವಾದ ದೇವನ ಮಸ್ತಕದ ಮೇಲಿರುವ ತ್ರಿಶೃಂಗ ಮುಕುಟ ಸದೃಶವಾಗಿದೆ. ದ್ವಾರದ ಮೇಲೆ ಬಹಳಷ್ಟು ಚಿತ್ರಗಳನ್ನು ಕೆತ್ತಲಾಗಿದೆ. ಇವು ಜೈನ ಪೌರಾಣಿಕ ಕಥೆಗಳಿಗೆ ಸಂಬಂಧಿ

ದವುಗಳಾಗಿವೆ. ಒಂದು ಪ್ರಕೋಷ್ಠದ ದ್ವಾರದ ಮೇಲೆ ಒಂದು ಪಕ್ಕಗಳಿದ್ದ ಚಿಗರೆ ಮತ್ತು ಧನುಷ ಬಾಣ ಸಹಿತ ಇರುವ ಪುರುಷ, ಯುದ್ಧ, ಸ್ತ್ರೀ-ಅಪಹರಣ ಮೊದಲಾದ ಘಟನೆಗಳ ಚಿತ್ರಣವು ಬಹು ಸುಂದರವಾಗಿದೆ. ಒಂದು ಮತಕ್ಕನುಸರಿಸಿ, ಇದು ಜೈನ ತೀರ್ಥಂಕರ ಪಾರ್ಶ್ವನಾಥನ ಜೀವನದ ಒಂದು ಘಟನೆಯ ಚಿತ್ರವಾಗಿದೆ. ಅದಕ್ಕನು ಸರಿಸಿ ಅವನು ಕಲಿಂಗದ ಯವನ ರಾಜನಿಂದ ಅಪಹರಣಗೊಂಡ ಪ್ರಭಾವತೀ ಎಂಬ ಹೆಸರಿನ ಕನ್ಯೆಯನ್ನು ಉಳಿಸಿದ್ದನು. ತರುವಾಯ ಅವಳ ಕೂಡ ವಿವಾಹವನ್ನು ಮಾಡಿಕೊಂಡನು. ಇನ್ನೊಂದು ಮತವು ಹೀಗೂ ಇದೆ: ಈ ಚಿತ್ರವು ವಾಸವದತ್ತಾ ಮತ್ತು ಶಕುಂತಲಾ ಇವರ ಆಖ್ಯಾನಕ್ಕೆ ಸಂಬಂಧಿಸಿದುದಾಗಿದೆ. ಆದರೆ ಈ ಜೈನ ಗುಹೆಯಲ್ಲಿ ಈ ಚಿತ್ರಗಳು ಇರುವ ಸಂಭವವಿಲ್ಲ. ಚಿತ್ರಕಲೆಯ ಶೈಲಿಯು ನಂದರ ಮತ್ತು ಸುಸ್ಪಷ್ಟವಾಗಿದೆ. ಚಿತ್ರಗಳ ಯೋಜನೆಯು ಪ್ರಮಾಣಕ್ಕನುಸರಿಸಿದೆ. ವಿದ್ವಾಂಸರ ಮತಕ್ಕನುಸರಿಸಿ, ಇಲ್ಲಿಯ ಚಿತ್ರಣ ಕಲೆಯು ಭರಹೂತ ಮತ್ತು ಸಾಂಚಿ ಸ್ತೂಪಗಳಿಗಿಂತ ಹೆಚ್ಚು ಸುಂದರವಾಗಿದೆ. ಉದಯಗಿರಿ ಹಾಗೂ ಖಂಡಗಿರಿಗಳಲ್ಲಿ ಒಟ್ಟು ೧೯ ಗುಹೆಗಳಿವೆ. ಅವುಗಳ ಸಮೀಪದಲ್ಲಿಯೇ ನೀಲಗಿರಿ ಎಂಬ ಹೆಸರಿನ ಗುಡ್ಡದಲ್ಲಿ ಮತ್ತೂ ಮೂರು ಗುಹೆಗಳು ಕಂಡುಬರುತ್ತವೆ. ಇವುಗಳಲ್ಲಿ ಮೇಲೆ ಹೇಳಿದ ರಾಣೀಗುಹೆಯ ಹೊರತಾಗಿ ಮಂಚಪುರೀ ಮತ್ತು ವೈಕುಂಠಪುರೀ ಎಂಬ ಹೆಸರಿನ ಗುಹೆಗಳೂ ದರ್ಶನೀಯವಾಗಿವೆ. ಮತ್ತು ಅಲ್ಲಿಯ ಶಿಲಾ ಲೇಖಗಳು ಹಾಗೂ ಕಲಾ ಕೃತಿಗಳ ಆಧಾರದಿಂದ ಖಾರವೇಲ ಮತ್ತು ಅವನ ಸಮೀಪದ ಕಾಲದವುವೆಂದು ಇವು ಕಂಡುಬರುತ್ತವೆ. ಖಂಡಗಿರಿಯ ನವಮುನಿ ಎಂಬ ಹೆಸರಿನ ಗುಹೆಯಲ್ಲಿ ಹತ್ತನೆಯ ಶತಮಾನದ ಒಂದು ಶಿಲಾಲೇಖವಿದೆ. ಅದರಲ್ಲಿ ಜೈನ ಮುನಿಯಾದ ಶುಭಚಂದ್ರನ ಹೆಸರು ಬಂದಿದೆ. ಇದರಿಂದ, ಈ ಸ್ಥಾನವು ಕ್ರಿ. ಪೂ. ಎರಡನೆಯ ಶತಮಾನದಿಂದ ತೀರ ಕಡಿಮೆಯೆಂದರೆ ಹತ್ತನೆಯ ಶತಮಾನದ ವರೆಗೆ ಜೈನ ಧರ್ಮದ ಒಂದು ಸುದೃಢ ಕೇಂದ್ರವಾಗಿತ್ತೆಂದು ತಿಳಿಯುತ್ತದೆ.

ರಾಜಗಿರಿಯ ಒಂದು ಗುಡ್ಡದಲ್ಲಿ ಮನಿಯೋರ ಮಠದ ಸಮೀಪದಲ್ಲಿ ಸೋನ ಭಂಡಾರ ಎಂಬ ಹೆಸರಿನ ಜೈನ ಗುಹೆಯು ಉಲ್ಲೇಖನೀಯವಾಗಿದೆ. ನಿರ್ಮಾಣದ ದೃಷ್ಟಿಯಿಂದ ಇದು ಅತಿ ಪ್ರಾಚೀನವೆಂದು ತಿಳಿಯುತ್ತದೆ. ಪ್ರ. ದ್ವಿ. ಶತಮಾನದ ಬ್ರಾಹ್ಮೀಲಿಪಿಯ ಒಂದು ಲೇಖವೂ ಇದೆ. ಅದಕ್ಕೆ ಅನುಸರಿಸಿ ಆಚಾರ್ಯ ರತ್ನ ವೈರದೇವಮುನಿಯು ಇಲ್ಲಿ ಜೈನ ಮುನಿಗಳು ವಾಸಿಸಲಿಕ್ಕೆಂದು ಎರಡು ಗುಹೆಗಳನ್ನು ನಿರ್ಮಾಣ ಮಾಡಿಸಿದನು. ಅವುಗಳಲ್ಲಿ ಅರ್ಹಂತರ ಮೂರ್ತಿಗಳನ್ನು ಪ್ರತಿಷ್ಠಿಸಿದನು. ಒಂದು ಜೈನ ಮೂರ್ತಿಯೂ ಚತುರ್ಮುಖ ಜೈನ ಪ್ರತಿಮಾಯುಕ್ತ ಒಂದು ಸ್ತಂಭವೂ ಇಗಲೂ ಇಲ್ಲಿ ಇವೆ. ಈ ಎರಡನೆಯ ಗುಹೆಯ ನಿರ್ಮಾಣದ ಲೇಖದಲ್ಲಿ ಉಲ್ಲೇಖವಿದೆ, ಅದು ಅದರ ಪಾರ್ಶ್ವದಲ್ಲಿಯೇ ಇದ್ದ ಗುಹೆಯಾಗಿದೆ. ಈಗ ಅದು ವಿಷ್ಣು ಗುಹೆಯಾಗಿ ರೂಪುಗೊಂಡಿದೆ. ದಿಗಂಬರ ಪರಂಪರೆಯಲ್ಲಿ ವೈರ

ಜಸನ ಹೆಸರು ಬರುತ್ತದೆ. ಅವನನ್ನು ತ್ರಿಲೋಕ ಪ್ರಜ್ಞಪ್ತಿಯಲ್ಲಿ ಪ್ರಜ್ಞಾಶ್ರಮಣ ರಲ್ಲಿ ಕೊನೆಯವನೆಂದು ಹೇಳಿದೆ. ಶ್ವೇತಾಂಬರ ಪರಂಪರೆಯಲ್ಲಿ ಅಜ್ಜವೈರನ ಹೆಸರು ಬರುತ್ತದೆ; ಅದು ಪದಾನುಸಾರಿಯಾಗಿದೆ. ಪ್ರಜ್ಞಾಶ್ರಮಣತ್ವ ಮತ್ತು ಪದಾನು ಸಾರಿತ್ವ ಇವೆರಡೂ ಬುದ್ಧಿ ಋದ್ಧಿಯ ಉಪಭೇದಗಳಾಗಿವೆ. ಷಟ್‌ಖಂಡಾಗಮದ ವೇದನಾಖಂಡದಲ್ಲಿ ಪದಾನುಸಾರೀ ಹಾಗೂ ಪ್ರಜ್ಞಾಶ್ರಮಣ ಇವರಿಬ್ಬರಿಗೂ ನಮ ಸ್ಕರಿಸಲಾಗಿದೆ. ಈ ಪ್ರಕಾರ ಈ ಎರಡೂ ಉಲ್ಲೇಖಗಳು ಒಬ್ಬನೇ ಆಚಾರ್ಯ ನನ್ನು ಕುರಿತು ಆಗಿದ್ದರೆ ಆಶ್ಚರ್ಯವೇನಲ್ಲ. ಕಲ್ಪಸೂತ್ರ ಸ್ಥವಿರಾವಲಿಗೆ ಅನುಸ ರಿಸಿ ಆರ್ಯ ವೈರನ ಕಾಲವು ವೀರ ನಿರ್ವಾಣದ ತರುವಾಯ ೪೯೬ ರಿಂದ ೫೮೪ ವರ್ಷಗಳ ವರೆಗಿನದೆಂದು ಕಂಡುಬರುತ್ತದೆ. ಇದಕ್ಕನುಸರಿಸಿ ಅವನು ಕ್ರಿ. ಪೂ. ಮೊದಲನೆಯ ಶತಮಾನದ ತರುವಾಯದವನೆಂದು ಸಿದ್ಧವಾಗುತ್ತದೆ. ನೋನಭಂ ಡಾರೆ ಗುಹೆಯು ಅವನ ಕಾಲದಲ್ಲಿಯೇ ನಿರ್ಮಿತವಾಗಿರಬೇಕೆಂದರೆ ಆಶ್ಚರ್ಯವಾಗುವ ಕಾರಣವಿಲ್ಲ.

ಪ್ರಯಾಗ ಹಾಗೂ ಕೌಸಮದ (ಪ್ರಾಚೀನ ಕೌಶಾಂಬಿ) ಸಮೀಪದಲ್ಲಿರುವ ಪಭೋಸಾ ಎಂಬ ಹೆಸರಿನ ಸ್ಥಾನದಲ್ಲಿ ಎರಡು ಗುಹೆಗಳಿವೆ. ಅವುಗಳಲ್ಲಿ ಶುಂಗ ಕಾಲೀನ (ಕ್ರಿ. ಪೂ. ಎರಡನೆಯ ಶತಮಾನ) ಲಿಪಿಯಲ್ಲಿ ಲೇಖವಿದೆ. ಆ ಲೇಖಗ ಳಲ್ಲಿ ಈ ಗುಹೆಗಳನ್ನು ಅಹಿಚ್ಛತ್ರದ ಆಷಾಢಸೇನನು ಕಾಶ್ಯಪೀಯ ಅರ್ಹಂತನಿಗಾಗಿ ದಾನಮಾಡಿದನೆಂದು ಹೇಳಿದೆ. ತೀರ್ಥಂಕರ ಮಹಾವೀರನು ಕಾಶ್ಯಪಗೋತ್ರದವ ನೆಂಬುದನ್ನು ಇಲ್ಲಿ ಗಮನಿಸಬೇಕು. ಅವನ ಅನುಯಾಯಿಗಳಾದ ಮುನಿಗಳೇ ಕಾಶ್ಯಪೀಯ ಅರ್ಹಂತರೆಂದು ಎನಿಸಿಕೊಳ್ಳುವ ಸಂಭವವಿದೆ. ಇದರಿಂದ ಆ ಕಾಲದಲ್ಲಿ ಮಹಾವೀರನ ಅನುಯಾಯಿಗಳ ಹೊರತಾಗಿಯೂ ಬೇರೆ ಅನ್ಯ ಜೈನಮುನಿ ಸಂಘವು —ಬಹುತರ ಪಾರ್ಶ್ವನಾಥನ ಅನುಯಾಯಿಗಳ ಸಂಘವು—ಇರುವ ಸಂಭವವಿದೆ ಯೆಂದು ಅನುಮಾನಿಸಲಿಕ್ಕೆ ಅವಕಾಶವಿದೆ. ಅದು ಕ್ರಮದಿಂದ ಮಹಾವೀರನ ಮುನಿ-ಪರಂಪರೆಯಲ್ಲಿಯೇ ವಿಲೀನವಾಗಿಹೋಯಿತು.

ಜೂನಾಗಢದ (ಕಾಠೇವಾಡ) ಬಾಬಾ ಪ್ಯಾರ ಮಠದ ಸಮೀಪ ಕೆಲವೊಂದು ಗುಹೆಗಳು ಇವೆ. ಅವು ಮೂರು ಪಂಕ್ತಿಗಳಲ್ಲಿವೆ. ಒಂದು ಉತ್ತರದ ಮಗ್ಗಲು, ಎರಡನೆಯದು ಪೂರ್ವಭಾಗದ್ದು ಮತ್ತು ಮೂರನೆಯದು ಅವುಗಳ ಹಿಂದೆಯೇ ಆರಂಭವಾಗಿ ಪಶ್ಚಿಮೋತ್ತರ ಕಡೆಗೆ ಪಸರಿಸಿದುದು. ಈ ಎಲ್ಲ ಗುಹೆಗಳನ್ನು ಎರಡು ಭಾಗಗಳಲ್ಲಿ ವಿಭಜಿಸಲಾಗುತ್ತದೆ. ಒಂದು ವಿಭಾಗವು ಚೈತ್ಯ ಗುಹೆಗಳ ರೂಪದಲ್ಲಿ ಇದ್ದಂಥದು. ಅವುಗಳಿಗೆ ಸಂಬಂಧಿಸಿದ ಸಾಮಾನ್ಯ ಕೋಣೆಗಳಿರುವಂಥವುಗಳು. ಬರ್ಜೆಸ ಸಾಹೇಬನ ಮತಕ್ಕನುಸರಿಸಿ ಬಹುತರ ಕ್ರಿ. ಪೂ. ಎರಡನೆಯ ಶತಮಾನ ದವು ಇವು ಆಗಿವೆ. ಮೊದಲ ಸಲ ಬೌದ್ಧ ಭಿಕ್ಷುಗಳು ಗುಜರಾಥದಲ್ಲಿ ಬಂದ ಸಮಯ ದಲ್ಲಿ ಇವು ನಿರ್ಮಾಣವಾದುವು. ಇನ್ನು ಎರಡನೆಯ ಭಾಗದಲ್ಲಿಯ ಗುಹೆಗಳು

ಶಾಲಾಗೃಹಗಳಾಗಿವೆ. ಇವು ಮೊದಲನೆಯ ವಿಭಾಗದ ಗುಹೆಗಳಿಗಿಂತ ಕೆಲವೊಂದು ಉನ್ನತ ಶೈಲಿಯಲ್ಲಿ ನಿರ್ಮಾಣಗೊಂಡವುಗಳಾಗಿವೆ. ಇವುಗಳಲ್ಲಿ ಜೈನ ಲಕ್ಷಣವು ಕಂಡುಬರುತ್ತದೆ. ಇವು ಕ್ರಿ. ಶ. ಎರಡನೆಯ ಶತಮಾನ ಅರ್ಥಾತ್ ಕ್ಷತ್ರಪ ರಾಜರ ಕಾಲದಲ್ಲಿ ನಿರ್ಮಾಣವಾದವುಗಳೆಂದು ಸಿದ್ಧವಾಗುತ್ತದೆ. ಜೈನ ಗುಹೆಗಳಲ್ಲಿ ಒಂದು ಗುಹೆಯು ವಿಶೇಷ ಲಕ್ಷಕೊಡುವಂಥದಿದೆ. ಈ ಗುಹೆಯಲ್ಲಿ ಒಂದು ಖಂಡಿತ ಲೇಖವು ದೊರೆತಿದೆ. ಅದರಲ್ಲಿ ಕ್ಷತ್ರಪ ರಾಜವಂಶದ ಹಾಗೂ ಚಷ್ಟನನ ಮರಿಮಗನೂ ಮತ್ತು ಜಯದಾಮನ್‌ನ ಮೊಮ್ಮಗನೂ ಆದ ಮೊದಲನೆಯ ರುದ್ರಸಿಂಹನ ಉಲ್ಲೇಖವಿದೆ. ಈ ಲೇಖನವನ್ನು ಪೂರ್ಣ ಓದಲಾಗಿಲ್ಲ. ಆದರೂ ಅದರಲ್ಲಿ ಕೇವಲ ಜ್ಞಾನ, ಜರಾ ಮರಣದಿಂದ ಮುಕ್ತಿ ಮೊದಲಾದ ಶಬ್ದಗಳನ್ನು ಓದಲಾಗಿದೆ. ಇವುಗಳಿಂದಲೂ ಹಾಗೂ ಗುಹೆಯಲ್ಲಿ ಇರುವ ಸ್ವಸ್ತಿಕ, ಭದ್ರಾಸನ, ಮೀನಯುಗಲ ಮೊದಲಾದ ಪ್ರಖ್ಯಾತ ಜೈನ ಮಂಗಲದಾಯಕ ಚಿಹ್ನಗಳನ್ನು ಚಿತ್ರಿಸಿರುವುದರಿಂದ ಅವು ಜೈನ ಸಾಧುಗಳ ಹಾಗೂ ಬಹುತರ ದಿಗಂಬರ ಪರಂಪರೆಗನುಸರಿಸಿ, ಅಂತಿಮ ಅಂಗವನ್ನರಿತ ಧರಸೇನಾಚಾರ್ಯನಿಗೆ ಸಂಬಂಧಿಸಿದ್ದಿರಬೇಕೆಂದು ಅನುಮಾನಿಸಲಾಗುತ್ತದೆ. ಧವಲ ಟೀಕೆಯ ಕರ್ತೃವಾದ ವೀರಸೇನಾಚಾರ್ಯನು ಗಿರನಾರದ ಚಂದ್ರಗುಹೆಯಲ್ಲಿ ಧರಸೇನಾಚಾರ್ಯನು ವಾಸಿಸಿದ್ದನೆಂದು ಹೇಳಿದ್ದಾನೆ (ಮಹಾಬಂಧ ಭಾಗ ೩, ಪ್ರಸ್ತಾವನೆಯನ್ನು ನೋಡಿರಿ). ಈ ಗುಹಾ ಸಮೂಹದಲ್ಲಿ ಒಂದು ಗುಹೆಯು ಪಾರ್ಶ್ವಭಾಗದಲ್ಲಿ ಅರ್ಧಚಂದ್ರಾಕಾರ ವಿವಿಕ್ತ ಸ್ಥಾನದಿಂದ ಕೂಡಿದ್ದಿದೆ. ಕಾರ್ಲೆ ಹಾಗೂ ನಾಸಿಕಗಳ ಬೌದ್ಧ ಗುಹೆಗಳೊಡನೆ ಈ ಸಂಗತಿಯಲ್ಲಿ ಸಮಾನತೆಯು ಇರುವ ಕಾರಣದಿಂದ ಇದೊಂದು ಬೌದ್ಧ ಗುಹೆಯೆಂದು ಅನುಮಾನ ಮಾಡಲಾಗುತ್ತದೆ. ಆದರೆ ಇದೇ ಧವಲಕಾರನಿಂದ ಉಲ್ಲೇಖಗೊಂಡ ಧರಸೇನಾಚಾರ್ಯರ ಚಂದ್ರ ಗುಹೆಯಾಗಿದ್ದರೆ ಆಶ್ಚರ್ಯಪಡುವ ಕಾರಣವಿಲ್ಲ. (ಬರ್ಜೆಸ್ : ಎಂಟಿಕ್ವಿಟೀಜ್ ಆಫ್ ಕಚ್ಛಯಾಂಡ ಕಾಠಿಯಾವಾಡ ೧೮೭೪-೭೫ ಪುಟ ೧೩೯ ಮೊದಲಾದವುಗಳು, ಹಾಗೆಯೇ ಸಾಂಕಲಿಯಾ : ಅರ್ಕಿಓಲಾಜಿ ಆಫ್ ಗುಜರಾತ್ ೧೯೪೧ ಇವುಗಳನ್ನು ನೋಡಿರಿ.) ಇದೇ ಸ್ಥಾನದ ಸಮೀಪದಲ್ಲಿ ಢಂಕ ಎಂಬ ಹೆಸರಿನ ಸ್ಥಾನದಲ್ಲಿಯೂ ಗುಹೆಗಳಿವೆ. ಅವುಗಳಲ್ಲಿ ಋಷಭ, ಪಾರ್ಶ್ವ, ಮಹಾವೀರ ಮೊದಲಾದ ತೀರ್ಥಂಕರರ ಪ್ರತಿಮೆಗಳಿವೆ. ಈ ಎಲ್ಲ ಗುಹೆಗಳು ಅದೇ ಕ್ಷತ್ರಪ ಕಾಲದ ಅರ್ಥಾತ್ ಪ್ರ. ದ್ವಿ. ಶತಮಾನದವೆಂದು ಸಿದ್ಧವಾಗುತ್ತವೆ. ಜೈನ ಸಾಹಿತ್ಯದಲ್ಲಿ ಢಂಕ ಪರ್ವತದ ಉಲ್ಲೇಖವು ಅನೇಕ ಕಡೆಗಳಲ್ಲಿ ಬರುತ್ತದೆ. ಪಾದಲಿಪ್ತ ಸೂರಿಯ ಶಿಷ್ಯನಾದ ನಾಗಾರ್ಜುನನು ಇಲ್ಲಿಯ ನಿವಾಸಿಯೆಂದು ಹೇಳಲಾಗಿದೆ. (ರಾ. ಶೇ. ಕೃತ ಪ್ರಬಂಧ ಕೋಶ ಮತ್ತು ವಿವಿಧ ತೀರ್ಥಕಲ್ಪ ನೋಡಿರಿ.)

ಪೂರ್ವ ಭಾಗದಲ್ಲಿ ಉದಯಗಿರಿ ಖಂಡಗಿರಿ ಮತ್ತು ಪಶ್ಚಿಮ ಭಾಗದಲ್ಲಿ ಜುನಾಗಢಗಳ ತರುವಾಯ ಮಧ್ಯಭಾಗದಲ್ಲಿರುವ ಉದಯಗಿರಿಯ ಜೈನ ಗುಹೆಗಳು

ಉಲ್ಲೇಖನೀಯವಾಗಿವೆ. ಈ ಉದಯಗಿರಿಯು ಮಧ್ಯ ಪ್ರದೇಶಕ್ಕೆ ಸೇರಿದ ಇತಿಹಾಸ-ಪ್ರಸಿದ್ಧವಾದ ವಿದಿಶಾನಗರದ ಉತ್ತರ-ಪಶ್ಚಿಮದ ಕಡೆಗೆ ಬೇತವಾ ನದಿಯು ಆ ಮಗ್ಗುಲು ಎರಡು-ಮೂರು ಮೈಲುಗಳ ಅಂತರದ ಮೇಲೆ ಇದೆ. ಈ ಪರ್ವತದ ಮೇಲೆ ಪುರಾತತ್ತ್ವವಿಭಾಗವು ಅಂಕಿತಗೊಳಿಸಿದ ಇಪ್ಪತ್ತು ಗುಹೆಗಳು ಮತ್ತು ಮಂದಿರಗಳು ಇವೆ. ಇವುಗಳಲ್ಲಿ ಪಶ್ಚಿಮ ಭಾಗಕ್ಕಿರುವ ಮೊದಲನೆಯ ಹಾಗೂ ಪೂರ್ವ ದಿಸೆಯಲ್ಲಿರುವ ಇಪ್ಪತ್ತನೆಯದು ಸ್ಪಷ್ಟರೂಪದಿಂದ ಜೈನ ಗುಹೆಗಳಾಗಿವೆ. ಮೊದಲನೆಯ ಗುಹೆಯನ್ನು ಕನಿಂಗಹ್ಯಾಂಮನು ಸುಳ್ಳು ಗುಹೆಯೆಂದು ಕರೆದಿದ್ದಾನೆ. ಯಾಕಂದರೆ ಅದನ್ನು ಯಾವ ಮೇಲ್ಛಾವಣಿಯನ್ನು ಕೆತ್ತಿ ನಿರ್ಮಿಸಲಾಗಿಲ್ಲ. ಆದರೆ ಅದು ಪ್ರಾಕೃತಿಕ ಕಂದರವೇ ಆಗಿದೆ. ಆದರೂ ಮೇಲಿನ ಸ್ವಾಭಾವಿಕ ಶಿಲೆಯನ್ನು ಛಾವಣಿಯನ್ನಾಗಿ ಮಾಡಿಕೊಂಡು. ಕೆಳಗೆ ದ್ವಾರದ ಹತ್ತಿರ ನಾಲ್ಕು ಕಂಭಗಳನ್ನೂ ನಿಲ್ಲಿಸಲಾಗಿದೆ. ಇದರಿಂದ ಅದಕ್ಕೆ ಗುಹಾ ಮಂದಿರದ ಆಕೃತಿಯು ಪ್ರಾಪ್ತವಾಗಿದೆ. ಕಂಭಗಳನ್ನು ಘಟ ಮತ್ತು ಪತ್ರಾವಲಿ-ಪ್ರಣಾಲಿಯಿಂದ ಕೆತ್ತಲಾಗಿದೆ. ಪ್ರಾರಂಭದಲ್ಲಿ ಜೈನ ಮುನಿಗಳು ಈ ಪ್ರಕಾರದ ಪ್ರಾಕೃತಿಕ ಗುಹೆಗಳನ್ನೇ ತಮ್ಮ ನಿವಾಸಸ್ಥಾನವನ್ನಾಗಿ ಮಾಡಿಕೊಳ್ಳುತ್ತಿದ್ದರೆಂದು ಈ ಮೊದಲೇ ಹೇಳಿದೆಯಷ್ಟೆ. ಈ ಅಪೇಕ್ಷೆಯಿಂದ ಈ ಗುಹೆಯೂ ಕ್ರಿ. ಪೂ ಕಾಲದಿಂದಲೂ ಜೈನ ಮುನಿಗಳ ಗುಹೆಯಾಗಿರಬೇಕು. ಆದರೆ ಇದರ ಸಂಸ್ಕಾರವು ಗುಪ್ತಕಾಲದಲ್ಲಾಯಿತು. ಅದು ಅಲ್ಲಿಯ ಸ್ತಂಭ ಮೊದಲಾದವುಗಳ ಕಲೆ ಹಾಗೂ ಗುಹೆಯಲ್ಲಿ ಕೆತ್ತಿದ ಒಂದು ಲೇಖ ಇವುಗಳಿಂದ ಸಿದ್ಧವಾಗುತ್ತದೆ. ಈ ಲೇಖದಲ್ಲಿ ಚಂದ್ರಗುಪ್ತನನ್ನು ಉಲ್ಲೇಖಿಸಿದೆ. ಇದು ಗುಪ್ತ ಸಮ್ರಾಟ್ ಎರಡನೆಯ ಚಂದ್ರಗುಪ್ತನದೆಂದು ತಿಳಿಯಲಾಗುತ್ತದೆ. ಆದರಿಂದ ಇದರ ಕಾಲವು ನಾಲ್ಕನೆಯ ಶತಮಾನದ ಅಂತಿಮ ಭಾಗವೆಂದು ಸಿದ್ಧವಾಗುತ್ತದೆ. ಪೂರ್ವ ದಿಸೆಯಲ್ಲಿರುವ ಇಪ್ಪತ್ತನೆಯ ಗುಹೆಯಲ್ಲಿ ಪಾರ್ಶ್ವನಾಥ ತೀರ್ಥಂಕರನ ಅತಿ ಭವ್ಯ ಮೂರ್ತಿಯು ವಿರಾಜಮಾನವಾಗಿದೆ. ಆದರೆ ಈಗ ಅದು ಬಹಳಷ್ಟು ಖಂಡಿತವಾಗಿದೆ. ಆದರೂ ಅದರ ನಾಗ-ಹೆಡೆಯು ಈಗಲೂ ಆ ಕಲಾಕೃತಿಯನ್ನು ಪ್ರಕಟಗೊಳಿಸುತ್ತಲಿದೆ. ಇಲ್ಲಿಯೂ ಒಂದು ಸಂಸ್ಕೃತ ಪದ್ಯಾತ್ಮಕ ಲೇಖವನ್ನು ಕೆತ್ತಲಾಗಿದೆ. ಅದಕ್ಕನುಸರಿಸಿ ಈ ಮೂರ್ತಿಯ ಪ್ರತಿಷ್ಠೆಯನ್ನು ಸಂವತ್ ೧೦೬ (ಕ್ರಿ. ಶ. ೪೨೬, ಕುಮಾರಗುಪ್ತ ಕಾಲ) ದಲ್ಲಿ ಕಾರ್ತಿಕ ಕೃಷ್ಣ ಪಂಚಮಿಯಂದು ಆಚಾರ್ಯ ಭದ್ರಾನ್ವಯೀ ಆಚಾರ್ಯ ಗೋಶರ್ಮ ಮುನಿಯ ಶಿಷ್ಯನಾದ ಶಂಕರನಿಂದ ಮಾಡಲಾಗಿತ್ತು. ಈ ಶಂಕರನು ತನ್ನ ಜನ್ಮಸ್ಥಳವು ಉತ್ತರ ಭಾರತದಲ್ಲಿರುವ ಕುರುದೇಶವೆಂದು ಹೇಳಿದ್ದಾನೆ.

ಜೈನ ಐತಿಹಾಸಿಕ ಪರಂಪರೆಗನುಸರಿಸಿ ಅಂತಿಮ ಶ್ರುತಕೇವಲಿಯಾದ ಭದ್ರಬಾಹುವು ಮೌರ್ಯ ಸಮ್ರಾಟ್ ಚಂದ್ರಗುಪ್ತನ ಕಾಲದಲ್ಲಿ (ಕ್ರಿ. ಪೂ. ೪ನೆಯ ಶತಮಾನ) ಆಗಿಹೋದನು. ಉತ್ತರ ಭಾರತದಲ್ಲಿ ಹನ್ನೆರಡು ವರ್ಷ ಘೋರ ದುರ್ಭಿಕ್ಷೆಯು ಉಂಟಾದುದರಿಂದ ಜೈನ ಸಂಘವನ್ನು ತಕ್ಕೊಂಡು ದಕ್ಷಿಣ ಭಾರತಕ್ಕೆ

ತೆರಳಿದನು. ಅಲ್ಲಿ ಮೈಸೂರು ಪ್ರದೇಶದಲ್ಲಿರುವ ಶ್ರವಣಬೆಳಗೊಳ ಎಂಬ ಹೆಸರಿನ ಸ್ಥಾನದಲ್ಲಿ ಅವನು ಜೈನ ಕೇಂದ್ರವನ್ನು ಸ್ಥಾಪಿಸಿದನು. ಈ ಕಾಲದಲ್ಲಿ ಭಾರತದ ಸಮ್ರಾಟ್ ಚಂದ್ರಗುಪ್ತನೂ ರಾಜ್ಯವನ್ನು ತ್ಯಜಿಸಿ ಅವನ ಶಿಷ್ಯನಾಗಿ ಹೋಗಿದ್ದನು. ಅವನೂ ಕೂಡ ಶ್ರವಣಬೆಳಗೊಳದ ಒಂದು ಗುಡ್ಡದ ಮೇಲೆ ತಪಸ್ಸನ್ನು ಮಾಡಿದನು. ಆ ಗುಡ್ಡಕ್ಕೇನೇ ಚಂದ್ರಗಿರಿ ಎಂದು ಹೆಸರಾಗಿದೆ. ಈ ಪರ್ವತದ ಮೇಲೆ ಪ್ರಾಚೀನ ಮಂದಿರಗಳೂ ಸಹ ಇವೆ. ಚಂದ್ರಗುಪ್ತ ಬಸ್ತಿ ಎಂಬುದೂ ಅವುಗಳಲ್ಲಿ ಒಂದಿದೆ. ಇದೇ ಗುಡ್ಡದ ಮೇಲೆ ಒಂದು ಅತ್ಯಂತ ಸಾಧಾರಣ ಹಾಗೂ ಚಿಕ್ಕದಾದ ಗುಹೆಯೂ ಇದೆ. ಅದು ಭದ್ರಬಾಹು ಗುಹೆ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಶ್ರುತಕೇವಲೀ ಭದ್ರಬಾಹುಸ್ವಾಮಿಯು ಇದೇ ಗುಹೆಯಲ್ಲಿ ದೇಹ ಬಿಟ್ಟನೆಂದು ಹೇಳಲಾಗುತ್ತದೆ. ಅಲ್ಲಿ ಅವನ ಚರಣ ಚಿಹ್ನಗಳು ಅಂಕಿತವಾಗಿವೆ, ಈಗಲೂ ಅವುಗಳ ಪೂಜೆಯು ನಡೆಯುತ್ತದೆ. ದಕ್ಷಿಣ ಭಾರತದಲ್ಲಿ ಇದೇ ಎಲ್ಲಕ್ಕೂ ಪ್ರಾಚೀನ ಜೈನ ಗುಹೆಯೆಂದು ಸಿದ್ಧವಾಗುತ್ತದೆ.

ಮಹಾರಾಷ್ಟ್ರ ಪ್ರದೇಶದಲ್ಲಿ ಉಸ್ಮಾನಾಬಾದದ ಪೂರ್ವೋತ್ತರ ದಿಸೆಯಲ್ಲಿ ಸುಮಾರು ಹನ್ನೆರಡು ಮೈಲುಗಳ ಅಂತರದ ಮೇಲೆ ಪರ್ವತದಲ್ಲಿ ಒಂದು ಪ್ರಾಚೀನ ಗುಹೆಗಳ ಸಮೂಹವಿದೆ. ಇವು ಒಂದು ಗುಡ್ಡದ ದರಿಯ ಎರಡೂ ಪಾರ್ಶ್ವಗಳಲ್ಲಿ ಇವೆ. ನಾಲ್ಕು ಉತ್ತರದ ಮಗ್ಗಲಿಗೆ ಮತ್ತು ಮೂರು ಎರಡನೆಯ ಮಗ್ಗಲಿಗೆ ಪೂರ್ವೋತ್ತರ ಮುಖವಾಗಿ ಇರುತ್ತವೆ. ಈ ಗುಹೆಗಳಲ್ಲಿ ಮುಖ್ಯ ಮತ್ತು ವಿಶಾಲ ಗುಹೆಯು ಉತ್ತರದ ಗುಹೆಗಳಲ್ಲಿ ಎರಡನೆಯದಾಗಿದೆ. ದುರ್ಭಾಗ್ಯದಿಂದ ಇದರ ಮೇಲ್ಭಾಗವು ಭಗ್ನವಾಗಿ ಮುರಿದುಬಿದ್ದಿದೆ. ಕೇವಲ ಕೆಲವೊಂದು ಹೊರಗಿನ ಭಾಗವು ನಷ್ಟವಾಗದೆ ಉಳಿದುಕೊಂಡಿದೆ. ಇದರ ವಿಷಯದಲ್ಲಿ ಪುನರ್‌ರಚನೆಯೂ ಕೂಡ ಆಗಿದೆ. ಇದರ ಹೊರಗಿನ ಅಳತೆಯು ೭೮ × ೧೦.೪ ಫೂಟಿನಷ್ಟು ಇದೆ. ಇದರಲ್ಲಿ ಆರು ಇಲ್ಲವೆ ಎಂಟು ಕಂಭಗಳಿವೆ. ಒಳಗೆ ಹೋಗಲಿಕ್ಕೆ ಐದು ದ್ವಾರಗಳಿವೆ. ಒಳಗಿನ ಶಾಲೆಯು ೮೦ ಫೂಟು ಆಳವಾಗಿದೆ. ಹಾಗೂ ದ್ವಾರದೆಡೆಗೆ ಅಗಲ ೭೯ ಫೂಟುಗಳು, ಒಳಮಗ್ಗಲು ೮೫ ಫೂಟುಗಳಷ್ಟಿದೆ. ಇದರ ಮೇಲ್ಭಾಗವು ೩೨ ಕಂಭಗಳ ಮೇಲೆ ಆಧಾರಿತವಾಗಿದೆ. ಈ ಕಂಭಗಳನ್ನು ಚೌರಸಾಕಾರದ ಎರಡು ಪಂಕ್ತಿಗಳಲ್ಲಿ ನಿರ್ಮಿಸಲಾಗಿದೆ. ಗುಹೆಯ ಒಳಗಿನ ಎತ್ತರವು ಸುಮಾರು ೧೨ ಫೂಟುಗಳಷ್ಟು ಇದೆ. ಇದರ ಎರಡೂ ಮಗ್ಗಲಿನ ಗೋಡೆಗಳ ಮೇಲೆ ಎಂಟೆಂಟು ಮತ್ತು ಹಿಂದಿನ ಗೋಡೆಯಲ್ಲಿ ಆರು ಕೋಣೆಗಳಿವೆ. ಇವು ಪ್ರತಿಯೊಂದೂ ೯ ಫೂಟು ಚೌರಸಾಕಾರವಾಗಿವೆ ಈ ಕೋಣೆಗಳನ್ನು ಸಾಧಾರಣ ರೀತಿಯಿಂದ ಮಾಡಲಾಗಿದೆ. ಬಹುತರ ಬೌದ್ಧಗುಹೆಗಳಲ್ಲಿಯೂ ಇಂಥವುಗಳನ್ನು ನಾವು ಕಾಣುತ್ತೇವೆ. ಪಶ್ಚಿಮೋತ್ತರ ಮೂಲೆಯ ಕೋಣೆಯ ಹತ್ತರ ಒಂದು ತಗ್ಗು ಇದೆ. ಅದು ಯಾವಾಗಲೂ ನೀರಿನಿಂದ ತುಂಬಿರುತ್ತದೆ. ಶಿಲೆಯ ಮಧ್ಯದಲ್ಲಿ ಹಿಂಭಾಗ

ದೊಳಗೆ ದೇವಾಲಯವಿದೆ. ಅದು ೧೯.೩ × ೧೫ ಫೂಟುಗಳಷ್ಟು ಉದ್ದಗಲವಿದೆ. ೧೩ ಫೂಟು ಎತ್ತರವಾಗಿದೆ. ಇದರಲ್ಲಿ ಪಾರ್ಶ್ವನಾಥ ತೀರ್ಥಂಕರನ ಭವ್ಯಮೂರ್ತಿಯು ವಿರಾಜಮಾನವಾಗಿದೆ. ಉಳಿದ ಗುಹೆಗಳು ಬೇಕೆಂತಲೇ ಇದಕ್ಕಿಂತ ಬಹಳ ಚಿಕ್ಕವಾಗಿವೆ. ಮೂರನೆಯ ಮತ್ತು ನಾಲ್ಕನೆಯ ಗುಹೆಗಳಲ್ಲಿಯೂ ಜಿನ ಪ್ರತಿಮೆಗಳು ಇವೆ. ಮೂರನೆಯ ಗುಹೆಯ ಕಂಭಗಳ ರಚನೆಯು ಕಲಾಪೂರ್ಣವಾಗಿದೆ. ಬರ್ಜೆಸ ಸಾಹೇಬನ ಮತದಿಂದ ಈ ಗುಹೆಗಳು ಸುಮಾರು ಕ್ರಿ. ಪೂ. ೫೦೦–೬೫೦ ರ ಮಧ್ಯಕಾಲದವುಗಳಾಗಿರಬೇಕು. (ಆರ್ಕೆ. ಸರ್ವೆ, ಆಫ್ ವೆಸ್ಟರ್ನ ಇಂಡಿಯಾ, ವೊ. ೩)

ಈ ಗುಹೆಗಳ ಸಮೂಹದ ಸಂಬಂಧದಲ್ಲಿ ಜೈನ ಸಾಹಿತ್ಯಿಕ ಪರಂಪರೆಯು ಹೀಗಿದೆ— ಇಲ್ಲಿ ತೇರಾಪುರದ ಸಮೀಪ ಪರ್ವತದ ಮೇಲೆ ಮಹಾರಾಜ ಕರಕಂಡುವು ಒಂದು ಪ್ರಾಚೀನ ಗುಹೆಯನ್ನು ಕಂಡಿದ್ದನು. ಆವನು ಸ್ವತಃ ಇಲ್ಲಿ ಬೇರೆ ಗುಹೆಗಳನ್ನೂ ನಿರ್ಮಿಸಿದ್ದನು. ಪಾರ್ಶ್ವನಾಥನ ಮೂರ್ತಿಯನ್ನು ಸ್ಥಾಪಿಸಿದ್ದನು ಅವನು ಯಾವ ಪ್ರಾಚೀನ ಗುಹೆಯನ್ನು ಕಂಡಿದ್ದನೋ, ಅದರ ತಳ ಭಾಗದ ಒಂದು ಛಿದ್ರದಿಂದ ಜಲಪ್ರವಾಹವು ಹೊರಟಿತ್ತು. ಅದರಿಂದ ಸಮಸ್ತ ಗುಹೆಯು ತುಂಬಿಕೊಂಡಿತ್ತು. ಇದರ ಹಾಗೂ, ಪ್ರಾಚೀನ ಪಾರ್ಶ್ವನಾಥ ಮೂರ್ತಿಯ ಸುಂದರ ವರ್ಣನೆಯನ್ನು ಕನಕಾಮರ ಮುನಿಯು ತನ್ನ ಅಪಭ್ರಂಶ ಕಾವ್ಯವಾದ ಕರಕಂಡುಚರಿಉ ವಿನಲ್ಲಿ ಮಾಡಿದ್ದಾನೆ. ಇದು ಹನ್ನೊಂದನೆಯ ಶತಮಾನದ ಕೃತಿಯಾಗಿದೆ. ಕರಕಂಡುವಿನ ಹೆಸರು ಜೈನ ಮತ್ತು ಬೌದ್ಧ ಈ ಎರಡೂ ಪರಂಪರೆಗಳಲ್ಲಿ ಪ್ರತ್ಯೇಕಬುದ್ಧನ ರೂಪದಲ್ಲಿ ಕಂಡುಬರುತ್ತದೆ. ಅವನ ಕಾಲವು ಜೈನ ಮಾನ್ಯತೆಗನುಸರಿಸಿ ಮಹಾವೀರನ ಪೂರ್ವದಲ್ಲಿ ಪಾರ್ಶ್ವನಾಥನ ತೀರ್ಥದಲ್ಲಿ ಸಮಾವೇಶವಾಗುತ್ತದೆ. ಈ ಪ್ರಕಾರ ಇಲ್ಲಿಯ ಗುಹೆಗಳನ್ನು ಜೈನರು ಅತಿ ಪ್ರಾಚೀನವೆಂದು (ಸುಮಾರು ಕ್ರಿ. ಪೂ. ೯ ನೆಯ ಶತಮಾನ) ಮನ್ನಿಸುತ್ತಾರೆ.

ಹನ್ನೊಂದನೆಯ ಶತಮಾನದ ಮಧ್ಯಭಾಗದಲ್ಲಿ ಯಾವಾಗ ಮುನಿ ಕನಕಾಮರನು ಕರಕಂಡುಚರಿಉವನ್ನು ಬರೆದನೋ ಆಗ ತೇರಾಪುರದ (ಧಾರಾಶಿವ) ಗುಹೆಯು ಬಹು ವಿಶಾಲವಾಗಿತ್ತು; ಮತ್ತು ಬಹುಪ್ರಾಚೀನವೆಂದು ತಿಳಿಯಲಾಗುತ್ತಿತ್ತು. ಇದು ಸುನಿಶ್ಚಯವಾಗಿದೆ. ತೇರಾಪುರದ ರಾಜನಾದ ಶಿವನು ಕರಕಂಡುವಿನ ಪರಿಚಯವನ್ನು ಈ ಪ್ರಕಾರ ಮಾಡಿಸಿದ್ದನು :—

ಎತ್ಥತ್ಥಿದೇವ ಪಚ್ಚಿಮದಿಸಾಹಿಂ।
ಅಇಣಿಯಡಉ ಪವ್ವಉ ರಮ್ಮತಾಹಿಂ॥

ತಹಿಂ ಅತ್ಥಿ ಲಯಣು ಣಯಣಾವಹಾರಿ।
ಥಂಭಾಣ ಸಹಾಸಹಿಂ ಜಂ ಪಿಧಾರಿ॥

(೮. ೫. ೪. ೪)

ಕರಕಂಡುವು ಆ ಪರ್ವತದ ಮೇಲೆ ಏರಿದನು. ಸಿಂಹ, ಆನೆ, ಹಂದಿ, ಮೃಗ ಮತ್ತು ಮಂಗ, ಮೊದಲಾದವುಗಳಿಂದ ತುಂಬಿದ ದಟ್ಟಾದ ಅಡವಿಯೊಳಗಿಂದ ನಡೆದನು.

ಥೋವಂತರಿ ತಹಿಂ ಸೋ ಚಡಇ ಜಾವ ।
ಕರಕಂಡಇಂ ದಿಟ್ಠಉ ಲಯಣು ತಾವಂ ॥

ಣಂ ಹರಿಣಾ ಅಮರ_ವಿಮಾಣು ದಿಟ್ಠೊ ।
ಕರಕಂಡ ಣರಾಹಿಉ ತಹಿಂ ಪವಿಟ್ಠೊ ॥

ಸೋ ಧಣ್ಣು ಸಲಕ್ಖಣು ಹರಿಯ-ದಂಭು ।
ಜೆ ಲಯಣು ಕರಾವಿಉ ಸಹಸುಕಖಂಭು ॥

(ಕ. ಚ. ೪, ೫)

ಅರ್ಥಾತ್ ಪರ್ವತದ ಮೇಲೆ ಕೆಲವೊಂದು ಎತ್ತರಕ್ಕೆ ಏರಿದಮೇಲೆ ಅವನು ಈ ಗುಹೆಯನ್ನು ಇಂದ್ರನು ದೇವವಿಮಾನವನ್ನು ಕಂಡಂತೆ ಕಂಡನು. ಅದರಲ್ಲಿ ಪ್ರವೇಶ ಮಾಡಿದ ಮೇಲೆ ಕರಕಂಡುವಿನ ಮುಖದಿಂದ ತಟ್ಟನೆ ಹೀಗೆ ಉದ್ಗಾರವು ಹೊರಟಿತು. ಧನ್ಯನಾತನು, ಅವನು ಸುಲಕ್ಷಣನು, ಪುಣ್ಯವಾನ್ ಪುರುಷನು, ಈ ಸಹಸ್ರ ಸ್ತಂಭ ಗುಹೆಯನ್ನು ಮಾಡಿಸಿದವನು.

ದಕ್ಷಿಣದ ತಮಿಳ ಪ್ರದೇಶದಲ್ಲಿಯೂ ಜೈನಧರ್ಮದ ಪ್ರಚಾರ ಮತ್ತು ಪ್ರಭಾವಗಳು ಬಹುಪ್ರಾಚೀನ ಕಾಲದಿಂದಲೂ ಕಂಡುಬರುತ್ತವೆ. ತಮಿಳ ಸಾಹಿತ್ಯದ ಎಲ್ಲಕ್ಕೂ ಪ್ರಾಚೀನ ಯುಗವು 'ಸಂಗಮಯುಗ' ವೆಂದು ಮನ್ನಿಸಲಾಗುತ್ತದೆ. ಈ ಯುಗದ ಬಹುತರ ಎಲ್ಲ ಮುಖ್ಯ ಕೃತಿಗಳು ತಿರುಕುರುಲ ಮೊದಲಾದ ಜೈನ ಇಲ್ಲವೆ ಜೈನಧರ್ಮದಿಂದ ಸುಪ್ರಭಾವಿತವೆಂದು ಸಿದ್ಧವಾಗಿದೆ. ಜೈನ ದ್ರಾವಿಡ ಸಂಘದ ಸಂಘಟನವೂ ಕೂಡ ಸುಪ್ರಾಚೀನವೆಂದು ಕಂಡುಬರುತ್ತದೆ. ಹೀಗಾಗಿ ಈ ಪ್ರದೇಶದಲ್ಲಿಯೂ ಪ್ರಾಚೀನ ಜೈನ ಸಂಸ್ಕೃತಿಯ ಅವಶೇಷಗಳು ಲಭಿಸುವುದು ಸ್ವಾಭಾವಿಕವಾಗಿದೆ. ಜೈನಮುನಿಗಳ ಒಂದು ಪ್ರಾಚೀನ ಕೇಂದ್ರವು ಪುದುಕೊಟ್ಟಾಇಯಿಂದ ವಾಯುವ್ಯ ದಿಕ್ಕಿನಲ್ಲಿ ಒಂಭತ್ತು ಮೈಲಿನ ಮೇಲಿರುವ ಸಿತ್ತನ್ನವಾಸಲ ಎಂಬ ಹೆಸರಿನ ಸ್ಥಾನವಾಗಿದೆ. ಈ ಹೆಸರು ಸಿದ್ಧಾನಾಂ ವಾಸಃ ಎಂಬ ಪದದಿಂದ ಅಪಭ್ರಷ್ಟವಾಗಿ ರೂಪುಗೊಂಡಂತಿದೆ. ಇಲ್ಲಿಯ ವಿಶಾಲ ಶಿಲಾ-ಬೆಟ್ಟದಲ್ಲಿ ನಿರ್ಮಿನಲಾದ ಒಂದು ಜೈನ ಗುಹೆಯು ಬಹು ಮಹತ್ವಪೂರ್ಣವಾಗಿದೆ. ಇಲ್ಲಿ ಬ್ರಾಹ್ಮಿಲಿಪಿಯ ಒಂದು ಲೇಖವೂ ಲಭಿಸಿದೆ. ಅದು ಕ್ರಿ. ಪೂ. ಮೂರನೆಯ ಶತಮಾನದ್ದೆಂದು (ಅಶೋಕ ಕಾಲೀನ) ಕಂಡುಬರುತ್ತದೆ. ಲೇಖದಲ್ಲಿ ಈ ಗುಹೆಯ ನಿರ್ಮಾಣವು ಜೈನಮುನಿಯ ನಿಮಿತ್ತದಿಂದ ಆಗಿದೆಯೆಂದು ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ. ಈ ಗುಹೆಯು ಬಹುವಿಶಾಲ ೧೦೦ × ೫೦ ಫೂಟಿನಷ್ಟು ಇದೆ. ಇದರಲ್ಲಿ ಅನೇಕ ವಿಭಾಗಗಳಿವೆ. ಸಮಾಧಿ-ಶಿಲೆಗಳನ್ನೂ ಸಹ ನಿರ್ಮಿಸಲಾಗಿದೆ. ಈ ಶಿಲೆಗಳು ೬ × ೪ ಫೂಟ

ನವು ಇರುತ್ತವೆ. ವಾಸ್ತುಕಲೆಯ ದೃಷ್ಟಿಯಿಂದಂತೂ ಈ ಗುಹೆಯು ಮಹತ್ವಪೂರ್ಣವೇ ಆಗಿದೆ. ಅದಕ್ಕಿಂತಲೂ ಮಿಗಿಲಾಗಿ ಇಲ್ಲಿಯ ಚಿತ್ರಕಲೆಗೆ ಮಹತ್ವವಿದೆ. ಅದರ ವಿವರಣೆಯನ್ನು ಮುಂದೆ ಮಾಡುವೆವು. ಗುಹೆಯ ಈ ಸಂಸ್ಕಾರವು ಪಲ್ಲವ ರಾಜನಾದ ಮಹೇಂದ್ರವರ್ಮನ (ಎಂಟನೆಯ ಶತಮಾನ) ಕಾಲದಲ್ಲಿ ಆಗಿದೆ.

ದಕ್ಷಿಣ ಭಾರತದಲ್ಲಿ ಬಾದಾಮಿಯ ಜೈನಗುಹೆಯು ಉಲ್ಲೇಖನೀಯವಾಗಿದೆ. ಇದರ ನಿರ್ಮಾಣ ಕಾಲವು ಸುಮಾರು ಏಳನೆಯ ಶತಮಾನದ ಮಧ್ಯಭಾಗವೆಂದು ಗೊತ್ತಾಗುತ್ತದೆ. ಈ ಗುಹೆಯು ೧೬ ಫೂಟು ಆಳವಾಗಿದೆ. ಹಾಗೂ ೩೧×೧೯ ಫೂಟು ಉದ್ದಗಲಗಳುಳ್ಳದ್ದಿದೆ. ಹಿಂಬದಿಯ ಮಧ್ಯಭಾಗದಲ್ಲಿ ದೇವಾಲಯವಿದೆ. ಉಳಿದ ಮೂರು ಮಗ್ಗಲಿನ ಗೋಡೆಗಳಲ್ಲಿ ಮುನಿಗಳ ನಿವಾಸಕ್ಕೆಂದು ಕೋಣೆಗಳು ಇವೆ. ಕಂಭಗಳ ಆಕೃತಿಯು ಎಲಿಫೆಂಟಾದ ಮಾದರಿಯಾಗಿದೆ. ಇಲ್ಲಿ ಚರಮಧಾರಿಗಳ ಸಹಿತ ಮಹಾವೀರ ತೀರ್ಥಂಕರರ ಮೂಲ ಪದ್ಮಾಸನ ಮೂರ್ತಿಯ ಹೊರತಾಗಿ ಗೋಡೆ ಮತ್ತು ಕಂಭಗಳ ಮೇಲೆಯೂ ಜಿನಮೂರ್ತಿಗಳನ್ನು ಕೆತ್ತಲಾಗಿದೆ. ರಾಷ್ಟ್ರಕೂಟ ರಾಜನಾದ ಅಮೋಘವರ್ಷನು (೮ ನೆಯ ಶತಮಾನ) ರಾಜ್ಯವನ್ನು ತ್ಯಜಿಸಿ, ಜೈನದೀಕ್ಷೆಯನ್ನು ಸ್ವೀಕರಿಸಿ ಇದೇ ಗುಹೆಯಲ್ಲಿ ವಾಸಿಸುತ್ತಿದ್ದನೆಂದು ಮನ್ನಿಸಲಾಗುತ್ತಿದೆ. ಗುಹೆಯ ಪಡಸಾಲೆಯಲ್ಲಿ ಒಂದು ಮಗ್ಗಲಿಗೆ ಪಾರ್ಶ್ವನಾಥ ಮತ್ತೊಂದು ಮಗ್ಗಲಿಗೆ ಬಾಹುಬಲಿಯ ಮೂರ್ತಿಗಳನ್ನು ಕೆತ್ತಲಾಗಿದೆ. ಇವು ಸುಮಾರು ೭½ ಫೂಟು ಎತ್ತರದ ಪ್ರತಿಮೆಗಳಾಗಿವೆ.

ಬಾದಾಮಿ ತಾಲ್ಲೂಕಿನಲ್ಲಿರುವ ಐಹೊಳೆ ಎಂಬ ಹೆಸರಿನ ಗ್ರಾಮದ ಸಮೀಪದಲ್ಲಿ ಪೂರ್ವ ಮತ್ತು ಉತ್ತರಗಳ ಮಗ್ಗಲು ಗುಹೆಗಳಿವೆ. ಇವುಗಳಲ್ಲಿಯೂ ಜೈನ ಮೂರ್ತಿಗಳು ಇವೆ. ಪ್ರಮುಖ ಗುಹೆಯ ರಚನೆಯು ಬಾದಾಮಿಯ ಗುಹೆಯ ಮಾದರಿಯಲ್ಲಿಯೇ ಇದೆ. ಗುಹೆಯು ಪಡಸಾಲೆ, ಮಂಟಪ ಮತ್ತು ಗರ್ಭಗೃಹಗಳಲ್ಲಿ ವಿಭಕ್ತವಾಗಿದೆ. ಪಡಸಾಲೆಯಲ್ಲಿ ನಾಲ್ಕು ಕಂಭಗಳಿವೆ. ಆದರೆ ಛತ್ತಿನ ಮೇಲೆ ಮೀನ, ಪುಷ್ಪಗಳ ಆಕೃತಿಗಳಿವೆ. ಎಡಗಡೆಯ ಗೋಡೆಯ ಮೇಲೆ ಪಾರ್ಶ್ವನಾಥನ ಮೂರ್ತಿಯಿದೆ. ಅದರ ಒಂದು ಮಗ್ಗಲಿಗೆ ನಾಗ, ಇನ್ನೊಂದು ಮಗ್ಗಲಿಗೆ ನಾಗಿಣಿಯರಿದ್ದಾರೆ. ಬಲಗಡೆಯಲ್ಲಿ ಚೈತ್ಯ-ವೃಕ್ಷದ ಕೆಳಗಿರುವ ಜಿನಮೂರ್ತಿಯನ್ನು ರೂಪಿಸಲಾಗಿದೆ. ಈ ಗುಹೆಯಲ್ಲಿರುವ ಸಹಸ್ರಫಣಾಯುಕ್ತ ಪಾರ್ಶ್ವನಾಥನ ಪ್ರತಿಮೆಯು ಕಲೆಯ ದೃಷ್ಟಿಯಿಂದ ಬಹುಮಹತ್ವಪೂರ್ಣವಾಗಿದೆ. ಅನ್ಯ ಜೈನ ಆಕೃತಿಗಳೂ ಚಿಹ್ನಗಳೂ ಕೂಡ ಪ್ರಚಲಿತ ಸ್ಥಿತಿಯಲ್ಲಿವೆ. ಸಿಂಹ, ಮಕರ ಮತ್ತು ದ್ವಾರಪಾಲಕ ಆಕೃತಿಗಳೂ ಕಲಾಪೂರ್ಣವಾಗಿವೆ. ಅಲ್ಲದೆ ಎಲೀಫಂಟಾದಲ್ಲಿಯ ಆಕೃತಿಗಳನ್ನು ನೆನಪಿಗೆ ತರುತ್ತವೆ. ಗುಹೆಗಳ ಪೂರ್ವಕ್ಕೆ ಮೇಘುಟೀ ಎಂಬ ಹೆಸರಿನ ಜೈನ ಮಂದಿರವಿದೆ. ಇದರಲ್ಲಿ ಚಾಲುಕ್ಯ ರಾಜನಾದ ಪುಲಕೇಶಿಯ ಹಾಗೂ ಶಕ ಸಂ. ೫೫೬ ರ (ಕ್ರಿ. ಶ. ೬೩೪) ಉಲ್ಲೇಖವಿದೆ. ಈ ಶಿಲಾಲೇಖವು ತನ್ನ ಸಂಸ್ಕೃತ

ಕಾವ್ಯಶೈಲಿಯ ವಿಕಾಸದಲ್ಲಿಯೂ ತನ್ನ ಸ್ಥಾನವನ್ನು ಕಾಯ್ದುಕೊಳ್ಳುತ್ತದೆ. ಈ ಲೇಖದ ಲೇಖಕನು ರವಿಕೀರ್ತಿಯು. ಇವನು ತಾನು ಕಾವ್ಯಕ್ಷೇತ್ರದಲ್ಲಿ ಕಾಲಿದಾಸ ಮತ್ತು ಭಾರವಿಯರಂತೆ ಕೀರ್ತಿಯನ್ನು ಪಡೆದವನೆಂದು ಹೇಳಿಕೊಂಡಿದ್ದಾನೆ. ನಿಜ ವಾಗಿಯೂ ಕಾಲಿದಾಸ ಮತ್ತು ಭಾರವಿಯರ ಕಾಲನಿರ್ಣಯದಲ್ಲಿ ಈ ಲೇಖವು ಬಹಳ ಸಹಾಯಕವಾಗಿದೆ. ಯಾಕಂದರೆ ಇದರಿಂದಲೇ ಅವರ ಕಾಲದ ಅಂತಿಮ ಸೀಮೆಯು ಪ್ರಾಮಾಣಿಕರೂಪದಿಂದ ನಿಶ್ಚಿತವಾಗಿದೆ. ಐಹೊಳೆಯು ಬಹುತರ ಆರ್ಯಪುರ ಎಂಬುದರ ಅಪಭ್ರಷ್ಟರೂಪವಾಗಿದೆ.

ಗುಹೆಗಳ ನಿರ್ಮಾಣ ಕಲೆಯು ಎಲ್ಲೋರಾದಲ್ಲಿ ತನ್ನ ಚರಮ ಉತ್ಕರ್ಷ ವನ್ನು ಹೊಂದಿದೆ. ಈ ಸ್ಥಾನವು ಯಾದವ ಅರಸರ ರಾಜಧಾನಿಯಾದ ದೇವಗಿರಿ ಯಿಂದ (ದೌಲತಾಬಾದ) ಸುಮಾರು ಹದಿನಾರು ಮೈಲುಗಳಷ್ಟು ದೂರದಲ್ಲಿದೆ. ಅಲ್ಲಿಯ ಶಿಲಾಪರ್ವತವು ಅನೇಕ ಗುಹೆಗಳಿಂದ ಅಲಂಕೃತಗೊಂಡಿದೆ. ಇಲ್ಲಿಯೇ ಕೈಲಾಸವೆಂಬ ಹೆಸರಿನ ಶಿವಮಂದಿರವಿದೆ. ಇದರ ಯೋಜನೆ ಹಾಗೂ ಶಿಲ್ಪಕಲೆ ಗಳು ಇತಿಹಾಸ ಪ್ರಸಿದ್ಧವಾಗಿವೆ. ಇಲ್ಲಿ ಬೌದ್ಧ, ಹಿಂದೂ ಮತ್ತು ಜೈನ ಈ ಮೂರು ಸಂಪ್ರದಾಯಗಳ ಶೈಲ ಮಂದಿರಗಳು ಬಹಳ ಸುಂದರ ಪ್ರಣಾಲಿಯಿಂದ ನಿರ್ಮಿಸಿದವು ಗಳಾಗಿವೆ. ಇಲ್ಲಿ ಐದು ಜೈನ ಗುಹೆಗಳು ಇವೆ. ಅವುಗಳಲ್ಲಿ ಮೂರು ಚಿಕ್ಕ ಕೈಲಾಸ, ಇಂದ್ರಸಭಾ ಮತ್ತು ಜಗನ್ನಾಥಸಭಾ ಇವು ಕಲೆಯ ದೃಷ್ಟಿಯಿಂದ ವಿಶೇಷ ಮಹತ್ವಪೂರ್ಣವಾಗಿವೆ. ಚಿಕ್ಕ ಕೈಲಾಸವು ಒಂದೇ ಪಾಷಾಣ-ಶಿಲೆಯನ್ನು ಕೊರೆದು ಮಾಡಲಾಗಿದೆ. ಇದರ ರಚನೆಯು ಕೆಲವೊಂದು ಚಿಕ್ಕ ಆಕಾರದಲ್ಲಿ ಮೇಲೆ ಹೇಳಿದ ಕೈಲಾಸಮಂದಿರದ ಮಾದರಿಯಲ್ಲಿದೆ. ಒಟ್ಟು ಮಂದಿರವು ೮೦ ಫೂಟು ಅಗಲ ಮತ್ತು ೧೩೦ ಫೂಟು ಎತ್ತರವಿದೆ. ಮಂಟಪವು ಸುಮಾರು ೩೬ ಫೂಟು ಉದ್ದಗಲವಿದೆ. ಇದರಲ್ಲಿ ಹದಿನಾರು ಕಂಭಗಳಿವೆ. ಇಂದ್ರಸಭಾ ಎಂಬ ಹೆಸರಿನ ಗುಹಾಮಂದಿರದ ರಚನೆಯು ಈ ಪ್ರಕಾರವಿದೆ :— ಪಾಷಾಣದಲ್ಲಿ ಮಾಡಿದ ದ್ವಾರ ದಿಂದ ಒಳಗೆ ಹೋದಮೇಲೆ ೫೦×೫೦ ಫೂಟು ಚೌರಸಾಕಾರದ ಪ್ರಾಂಗಣವು ದೊರೆ ಯುತ್ತದೆ. ಅದರ ಮಧ್ಯದಲ್ಲಿ ಕಲ್ಲಿನಿಂದ ನಿರ್ಮಿಸಿದ ದ್ರಾವಿಡೀಶೈಲಿಯ ಚೈತ್ಯಾ ಲಯವಿದೆ. ಇದರ ಎದುರು ಬಲಗಡೆಗೆ ಒಂದು ಆನೆಯ ಮೂರ್ತಿಯಿದೆ. ಇದರ ಎದುರಿಗೆ ಎಡಮಗ್ಗಲಲ್ಲಿ ೩೨ ಫೂಟು ಎತ್ತರ ಧ್ವಜಸ್ತಂಭವಿದೆ. ಇಲ್ಲಿಂದ ಸುತ್ತು ವರಿದು ಹಿಮ್ಮಗ್ಗಲು ಹೋದಮೇಲೆ ಅಲ್ಲಿ ಎರಡು ಅಂತಸ್ತಿನ ಸಭಾಗೃಹವು ದೊರೆ ಯುತ್ತದೆ. ಇದು ಇಂದ್ರಸಭೆ ಎಂಬ ಹೆಸರಿನಿಂದ ಪ್ರಸಿದ್ಧವಿದೆ. ಎರಡೂ ಅಂತಸ್ತು ಗಳಲ್ಲಿ ಪ್ರಚಲಿತ ಚಿತ್ರಗಳನ್ನು ಕೆತ್ತಲಾಗಿದೆ. ಕೆಳಭಾಗವು ಸ್ವಲ್ಪ ಅಪೂರ್ಣ ಉಳಿ ದಂತೆ ಕಂಡುಬರುತ್ತದೆ. ಇದರಿಂದ ಈ ಗುಹೆಗಳನ್ನು ಕೆತ್ತುವ ಕಾರ್ಯವು ಮೇಲಿ ನಿಂದ ಕೆಳಗೆ ಸಾಗುತ್ತ ನಡೆಯುತ್ತಿತ್ತೆಂದು ಗೊತ್ತಾಗುವಂತಿದ. ಮೇಲಿನ ಶಾಲೆಯು ೧೨ ಕಂಭಗಳಿಂದ ಅಲಂಕೃತವಾಗಿದೆ. ಶಾಲೆಯ ಎರಡೂ ಮಗ್ಗಲಿಗೆ ಭಗವಾನ್

ಮಹಾವೀರನ ವಿಶಾಲ ಮೂರ್ತಿಗಳಿವೆ. ಪಾರ್ಶ್ವದಲ್ಲಿ ಇಂದ್ರ ಹಾಗೂ ಆನೆಯ ಪ್ರತಿಮೆಗಳನ್ನು ಕೆತ್ತಲಾಗಿದೆ. ಇಂದ್ರಸಭೆಯ ಒಂದು ಹೊರಗಿನ ಗೋಡೆಯ ಮೇಲೆ ಪಾರ್ಶ್ವನಾಥನ ತಪಸ್ಸು ಮತ್ತು ಕಮಠನು ಅವನ ಮೇಲೆ ಮಾಡಿದ ಉಪಸರ್ಗ ಇವುಗಳನ್ನು ಚಿತ್ರಿಸಲಾಗಿದೆ. ಇವು ಬಹು ಸುಂದರ ಹಾಗೂ ಸಜೀವ ಕೆತ್ತನೆಗಳಾಗಿವೆ. ಪಾರ್ಶ್ವನಾಥನು ಕಾಯೋತ್ಸರ್ಗ ಮುದ್ರೆಯಲ್ಲಿ ಧ್ಯಾನಸ್ಥನಾಗಿದ್ದಾನೆ. ಮೇಲೆ ಏಳು ಹೆಡೆಗಳ ಸರ್ಪದ ನೆರಳಿದೆ. ಒಬ್ಬ ನಾಗಿಣಿಯು ಛತ್ರವನ್ನು ಹಿಡಿದಿರುವಳು. ಬೇರಿಬ್ಬರು ನಾಗಿಣಿಯರು ಭಕ್ತಿ. ಆಶ್ಚರ್ಯ ಮತ್ತು ದುಃಖದ ಮುದ್ರೆಯಲ್ಲಿ ನೋಡುತ್ತ ನಿಂತಿದ್ದಾರೆ. ಒಂದು ಮಗ್ಗಲಿಗೆ ಎಮ್ಮೆಯ ಮೇಲೆ ಕುಳಿತ ಅಸುರನು ರೌದ್ರಮುದ್ರೆಯಲ್ಲಿ ಶಸ್ತ್ರಾಸ್ತ್ರಸಹಿತ ಆಕ್ರಮಣ ಮಾಡುತ್ತಲಿದ್ದಾನೆ. ಇನ್ನೊಂದು ಮಗ್ಗಲಿಗೆ ಸಿಂಹವನ್ನು ಹತ್ತಿದ ಕಮಠನ ರೌದ್ರಮೂರ್ತಿಯು ಆಘಾತಗೈಯಲಿಕ್ಕೆ ಸಿದ್ಧವಾಗಿ ನಿಂತಿದೆ. ಕೆಳಮಗ್ಗಲು ಒಬ್ಬ ಸ್ತ್ರೀ ಮತ್ತು ಪುರುಷ ಇವರು ಭಕ್ತಿಯಿಂದ ಕೈಜೋಡಿಸಿ ನಿಂತಿದ್ದಾರೆ. ದಕ್ಷಿಣದ ಗೋಡೆಯ ಮೇಲೆ ಲತೆಯಿಂದ ಸುತ್ತುವರಿದ ಬಾಹುಬಲಿಯ ಪ್ರತಿಮೆಯನ್ನು ಕೆತ್ತಲಾಗಿದೆ. ಇವೆಲ್ಲವೂ ಅನ್ಯ ಶೋಭಾಪೂರ್ಣ ಆಕೃತಿಗಳೂ ಅತ್ಯಂತ ಕಲಾಪೂರ್ಣವಾಗಿವೆ. ಬಹುತರ ಇಂದ್ರಸಭೆಯ ರಚನೆಯು ತೀರ್ಥಂಕರನ ಜನ್ಮಕಲ್ಯಾಣೋತ್ಸವದ ಸ್ಮೃತಿಗೆಂದು ಆದುದು ಇರಬೇಕು. ಇಂದ್ರನು ತನ್ನ ಐರಾವತ ಆನೆಯನ್ನು ತಕ್ಕೊಂಡು ಭಗವಂತನಿಗೆ ಅಭಿಷೇಕಮಾಡಲು ಹೋಗುವ ಸಂದರ್ಭವದು. ಇಂದ್ರಸಭೆಯ ರಚನೆಯ ಸಂಬಂಧದಲ್ಲಿ ಪರ್ಸೀ ಬ್ರೌನ್ ಸಾಹೇಬನು ಹೀಗೆ ಹೇಳಿದ್ದಾನೆ :—" ಇದರ ರಚನೆಯು ಹೀಗೆ ಸರ್ವಾಂಗ ಪೂರ್ಣವೂ, ಶಿಲ್ಪಕಲಾಚಾತುರ್ಯದಿಂದಲೂ ಕೂಡಿ ಇಷ್ಟು ಉತ್ಕೃಷ್ಟವಾಗಿದೆ. ಇಂಥ ಶ್ರೇಷ್ಠ ಕಲೆಯು ಎಲ್ಲೋರಾದಲ್ಲಿಯೂ ಬೇರೆ ಯಾವ ಮಂದಿರಗಳಲ್ಲಿಯೂ ಕಂಡು ಬರುವುದಿಲ್ಲ. ಗೋಡೆಗಳ ಮೇಲಿನ ಆಕೃತಿಗಳ ಕೆತ್ತುವಿಕೆಯು ಬಹುಸುಂದರವಾಗಿದೆ. ಸ್ತಂಭಗಳ ವಿನ್ಯಾಸದ ಕೌಶಲವೂ ಶ್ರೇಷ್ಠತರಗತಿಯದಾಗಿದೆ. ಇಂಥ ಉದಾಹರಣೆಯು ಬೇರೆಲ್ಲಿಯೂ ದೊರೆಯುವುದಿಲ್ಲ."

ಇಂದ್ರಸಭೆಯ ಸಮೀಪದಲ್ಲಿಯೇ ಜಗನ್ನಾಥಸಭೆ ಎಂಬ ಹೆಸರಿನ ಚೈತ್ಯಾಲಯವಿದೆ. ಇದರ ವಿನ್ಯಾಸವೂ ಇಂದ್ರಸಭೆಯಂತೆಯೇ ಇದೆ. ಆದರೆ ಪ್ರಮಾಣದಲ್ಲಿ ಅದಕ್ಕಿಂತ ಚಿಕ್ಕದಾಗಿದೆ. ದ್ವಾರದ ತೋರಣವು ಕಲಾಪೂರ್ಣವಾಗಿದೆ. ಚೈತ್ಯಾಲಯದಲ್ಲಿ ಮಹಾವೀರ ತೀರ್ಥಂಕರರ ಪದ್ಮಾಸನ ಮೂರ್ತಿಯು ಇದೆ. ಗೋಡೆ ಹಾಗೂ ಕಂಭಗಳ ಮೇಲೆ ಪ್ರಚಲಿತ ನಾನಾ ಸುಂದರ ಮೂರ್ತಿಗಳು ಇವೆ. ಆದರೆ ಇವು ತಮ್ಮ ರೂಪದಲ್ಲಿ ಸೌಂದರ್ಯಪೂರ್ಣವಾಗಿದ್ದರೂ ಸಹ ಸಂತುಲನ ಮತ್ತು ಸೌಷ್ಠವದ ದೃಷ್ಟಿಯಿಂದ ಯಾವ ಉತ್ಕರ್ಷವು ಇಂದ್ರಸಭೆಯ ರಚನೆಯಲ್ಲಿ ಕಂಡುಬರುತ್ತದೆಯೋ ಅದು ಇಲ್ಲಿಯಾಗಲಿ, ಬೇರೆಕಡೆಗಳಲ್ಲಿಯಾಗಲಿ ಎಲ್ಲಿಯೂ ಕಂಡುಬರುವುದಿಲ್ಲ. ಈ ಗುಹೆಗಳ ನಿರ್ಮಾಣ ಕಾಲವು ಕ್ರಿ. ಶ. ೮೦೦ ಸುಮಾರಿನದೆಂದು ಮನ್ನಿಸ

ಲಾಗುತ್ತದೆ. ಸಾಕು, ಇಷ್ಟು ಉತ್ಕರ್ಷಕ್ಕೆ ತಲುಪಿ ಕೇವಲ ಜೈನ–ಪರಂಪರೆ ಯಲ್ಲಷ್ಟೇ ಅಲ್ಲ, ಆದರೆ ಭಾರತೀಯ ಪರಂಪರೆಯಲ್ಲಿ ಗುಹೆಗಳ ನಿರ್ಮಾಣ ಕಲೆಯ ವಿಕಾಸವು ಸಮಾಪ್ತಿಯನ್ನು ಹೊಂದುತ್ತದೆ. ಸ್ವತಂತ್ರ ಮಂದಿರ ನಿರ್ಮಾಣ ಕಲೆಯು ಅದರ ಸ್ಥಾನವನ್ನು ಗ್ರಹಣಮಾಡುತ್ತದೆ.

ಒಂಭತ್ತನೆಯ ಶತಮಾನದ ಒಂದು ಶಿಲಾಮಂದಿರವು ದಕ್ಷಿಣ ತ್ರಾವಣ ಕೋರದಲ್ಲಿ ತ್ರಿವೇಂದ್ರಮನಗರದ ಮಾರ್ಗದಲ್ಲಿ ಕುಂಜಿಯುರ ಎಂಬ ಹೆಸರಿನ ಗ್ರಾಮದಿಂದ ಐದು ಮೈಲು ಉತ್ತರದ ಕಡೆಗೆ ಗುಡ್ಡದ ಮೇಲಿದೆ. ಈಗ ಅದು ಭಗವತೀ ಮಂದಿರ ಎಂಬ ಹೆಸರಿನಿಂದ ಪ್ರಸಿದ್ಧವಿದೆ. ಈ ಮಂದಿರವನ್ನು ಗುಡ್ಡದ ಮೇಲಿರುವ ವಿಶಾಲ ಶಿಲೆಯನ್ನು ಕೊರೆದು ನಿರ್ಮಿಸಲಾಗಿದೆ. ಮುಂದಿನ ಮಗ್ಗಲು ಕಲ್ಲಿನಿಂದ ನಿರ್ಮಿಸಿದ ಗೋಡೆಗಳಿಂದ ಅದನ್ನು ವಿಸ್ತರಿಸಲಾಗಿದೆ. ಶಿಲೆಯ ಗುಹಾ ಭಾಗದ ಎರಡೂ ಪ್ರಕೋಷ್ಠಗಳಲ್ಲಿ ವಿಶಾಲ ಪದ್ಮಾಸನ ಜಿನಮೂರ್ತಿಗಳು ಸಿಂಹಾ ಸನದ ಮೇಲೆ ಪ್ರತಿಷ್ಠಿತಗೊಂಡಿವೆ. ಶಿಲೆಯ ಸಮಸ್ತ ಒಳಗಿನ ಮತ್ತು ಹೊರಗಿನ ಭಾಗಗಳನ್ನು ಜೈನ ತೀರ್ಥಂಕರರ ಯಾವ–ಯಾವುದೋ ಮೂವತ್ತು ಪ್ರತಿಮೆ ಗಳನ್ನು ಕೆತ್ತಿ ಪೂರ್ಣಗೊಳಿಸಲಾಗಿದೆ, ಅಲಂಕರಿಸಲಾಗಿದೆ. ಕೆಲವೊಂದರ ಕೆಳ ಭಾಗದಲ್ಲಿ ಕೇರಳದ ಪ್ರಾಚೀನ ಲಿಪಿಯಾದ 'ವತ್ತಲೆತ್ತು'ವಿನಲ್ಲಿ ಲೇಖಗಳೂ ಇವೆ. ಅವುಗಳಿಂದ ಈ ಸ್ಥಾನವು ಜೈನತ್ವವುಳ್ಳುದೆಂದು ಸಿದ್ಧವಾಗುತ್ತದೆ. ಅದರ ನಿರ್ಮಾಣ ಕಾಲವು ಒಂಭತ್ತನೆಯ ಶತಮಾನವೆಂದೂ ನಿಶ್ಚಿತವಾಗುತ್ತದೆ. ಅಲ್ಲಲ್ಲಿ ಭಗವತೀ ದೇವಿಯ ಮೂರ್ತಿಗಳನ್ನೂ ಕೆತ್ತಲಾಗಿದೆಯಾದರೂ ಅವು ಸ್ಪಷ್ಟವಾಗಿ ಇತ್ತೀಚಿನ ವೆಂದು ಗೊತ್ತಾಗುತ್ತದೆ. (ಜೈ. ಎಂಟೀ. ೮/೧, ಪೃ. ೨೯).

ಅಂಕಾಈ–ತೆಂಕಾಈ ಎಂಬ ಹೆಸರಿನ ಗುಹಾ ಸಮೂಹವು ಯೇವಲಾ ತಾಲೂಕಿನಲ್ಲಿ ಮನಮಾಡ ರೇಲ್ವೆ ಜಂಕಸನ್‌ದಿಂದ ಒಂಭತ್ತು ಮೈಲು ದೂರದಲ್ಲಿ ಅಂಕಾ ಈ ಎಂಬ ಸ್ಟೇಶನದ ಸಮೀಪದಲ್ಲಿದೆ. ಸುಮಾರು ಮೂರುಸಾವಿರ ಫೂಟು ಎತ್ತರದ ಪರ್ವತದಲ್ಲಿ ಏಳು ಗುಹೆಗಳು ಇವೆ. ಅವು ಚಿಕ್ಕ ಚಿಕ್ಕವಾಗಿದ್ದರೂ ಕಲೆಯ ದೃಷ್ಟಿಯಿಂದ ಮಹತ್ವಪೂರ್ಣವಾಗಿವೆ. ಮೊದಲನೆಯ ಗುಹೆಯಲ್ಲಿ ಪಡಸಾಲೆ, ಮಂಟಪ ಮತ್ತು ಗರ್ಭಗೃಹಗಳು ಇವೆ. ಎದುರಿಗಿನ ಎರಡೂ ಭಾಗಗಳ ಎರಡು ಕಂಭಗಳ ಮೇಲೆ ದ್ವಾರಪಾಲಕರನ್ನು ಕೆತ್ತಲಾಗಿದೆ. ಮಂಟಪದ ದ್ವಾರವು ಪ್ರಚಲಿತ ಆಕೃತಿಗಳಿಂದ ಪೂರ್ಣಗೊಂಡಿದೆ. ಅಂಕಣಗಳನ್ನು ಬಹು ಸೂಕ್ಷ್ಮತೆಯಿಂದ ನಿರ್ಮಿಸ ಲಾಗಿದೆ. ವರ್ಗಾಕಾರ ಮಂಟಪವು ನಾಲ್ಕು ಕಂಭಗಳ ಮೇಲೆ ಆಧಾರಿತವಾಗಿದೆ. ಗರ್ಭಗೃಹದ ದ್ವಾರವೂ ಶಿಲ್ಪಕಲಾ ಪೂರ್ಣವಾಗಿದೆ. ಗುಹೆಯು ಎರಡು ಅಂತಸ್ತು ಗಳಲ್ಲಿದೆ. ಮೇಲಿನ ಅಂತಸ್ತಿನಲ್ಲಿಯೂ ಶಿಲ್ಪಕಲೆಯು ಕಂಡುಬರುತ್ತದೆ. ಎರಡನೆಯ ಗುಹೆಯೂ ಎರಡಂತಸ್ತಿನದಿದೆ. ಕೆಳಗಿನ ಪಡಸಾಲೆಯು ೨೩ × ೧೨ ಫೂಟು ಇದೆ. ಅದರ ಎರಡೂ ಪಾರ್ಶ್ವಗಳಲ್ಲಿ ಸ್ವತಂತ್ರ ಶಿಲೆಯ ಮೂರ್ತಿಗಳಿವೆ. ಇವುಗಳಲ್ಲಿ

ಇಂದ್ರ–ಇಂದ್ರಾಣಿಯರೂ ಸಹ ಇದ್ದಾರೆ. ಮೆಟ್ಟಲುಗಳನ್ನು ಹತ್ತಿ ಎರಡನೆಯ ಅಂತಸ್ತಿನ ಮೇಲೆ ತಲುಪಿದೊಡನೆಯೇ ಎರಡೂ ಮಗ್ಗುಲಿಗೆ ವಿಶಾಲ ಸಿಂಹದ ಆಕೃತಿಗಳು ನೋಡಲು ಸಿಕ್ಕುತ್ತವೆ. ಗರ್ಭಗೃಹವು ೯×೬ ಫೂಟು ಇದೆ. ಮೂರನೆಯ ಗುಹೆಯಲ್ಲಿ ಮಂಟಪದ ಮೇಲ್ ಛಾವಣಿಯ ಮೇಲೆ ಕಮಲದ ಆಕೃತಿಯು ಬಹು ಸುಂದರವಾಗಿದೆ. ಅದರ ಪಕಳಿಗಳನ್ನು ನಾಲ್ಕು ಪಂಕ್ತಿಗಳಲ್ಲಿ ತೋರಿಸಲಾಗಿದೆ. ಆ ಪಕಳಿಗಳ ಮೇಲೆ ದೇವಿಯರು ವಾದ್ಯ ಸಹಿತ ನೃತ್ಯ ಮಾಡುತ್ತಲಿದ್ದಾರೆ. ದೇವ-ದೇವಿಯರ ಅನೇಕಯುಗಲಗಳು ನಾನಾ ವಾಹನಗಳ ಮೇಲೆ ಆರೂಢರಾಗಿದ್ದಾರೆ. ಸ್ಪಷ್ಟವಾಗಿಯೂ ಈ ದೃಶ್ಯವು ತೀರ್ಥಂಕರರ ಜನ್ಮ ಕಲ್ಯಾಣಕ್ಕೆ ಸಂಬಧಿಸಿದುದಾಗಿದೆ. ಗರ್ಭಗೃಹದಲ್ಲಿ ಮನುಷ್ಯಾಕೃತಿ, ಶಾಂತಿನಾಥ ಮತ್ತು ಅವನ ಎರಡೂ ಮಗ್ಗಲಿಗೆ ಪಾರ್ಶ್ವನಾಥನ ಮೂರ್ತಿಗಳಿವೆ. ಶಾಂತಿನಾಥನ ಸಿಂಹಾಸನದ ಮೇಲೆ ಅವನ ಮೃಗಲಾಂಛನ, ಧರ್ಮಚಕ್ರ, ಭಕ್ತ ಮತ್ತು ಸಿಂಹ ಇವುಗಳ ಆಕೃತಿಯನ್ನು ನಿರ್ಮಿಸಲಾಗಿದೆ. ಕುತ್ತಿಗೆಯ ಮೇಲ್ಭಾಗದಲ್ಲಿ ವಿದ್ಯಾಧರ ಮತ್ತು ಅವರಿಗಿಂತ ಮೇಲೆ ಗಜಲಕ್ಷ್ಮಿಯ ಆಕೃತಿಗಳು ಇವೆ. ಮೇಲೆ ಗಂಧರ್ವ ಯುಗಲಗಳು ಪುಷ್ಪ ವೃಷ್ಟಿಯನ್ನು ಮಾಡುತ್ತಲಿವೆ. ಎಲ್ಲಕ್ಕೂ ಮೇಲ್ಭಾಗದಲ್ಲಿ ತೋರಣವನ್ನು ಕೆತ್ತಿದೆ. ನಾಲ್ಕನೆಯ ಗುಹೆಯ ಪಡಸಾಲೆಯು ೩೦×೮ ಫೂಟವಿದೆ. ಮಂಟಪವು ೧೮ ಫೂಟು ಎತ್ತರ ಮತ್ತು ೨೪×೨೪ ಫೂಟ ಉದ್ದಗಲವಿದೆ. ಪಡಸಾಲೆಯ ಒಂದು ಕಂಭದ ಮೇಲೆ ಲೇಖವೂ ಇದೆ. ಅದು ಓದಲಿಕ್ಕೆ ಬರುವಂತಿಲ್ಲ. ಆದರೂ ಲಿಪಿಯ ಮೇಲಿಂದ ೧೧ ನೆಯ ಶತಮಾನದ್ದೆಂದು ಅನುಮಾನ ಮಾಡಬಹುದಾಗಿದೆ. ಶೈಲಿಯೇ ಮೊದಲಾದ ಅನ್ಯ ಸಂಗತಿಗಳಿಂದಲೂ ಈ ಗುಹೆಗಳ ನಿರ್ಮಾಣ ಕಾಲವು ಇದೇ ಎಂದು ಗೊತ್ತಾಗುತ್ತದೆ. ಉಳಿದ ಗುಹೆಗಳು ಧ್ವಸ್ತ ಅವಸ್ಥೆಯಲ್ಲಿವೆ.

ಹೇಗಿದ್ದರೂ ಗುಹಾ-ನಿರ್ಮಾಣ ಕಲೆಯ ಯುಗವು ಬಹು ಪೂರ್ವ ಕಾಲದಲ್ಲಿಯೇ ಮುಗಿದು ಹೋಗಿತ್ತು. ಆದರೂ ಜೈನರು ೧೫ನೆಯ ಶತಮಾನದವರೆಗೂ ಗುಹೆಗಳನ್ನು ನಿರ್ಮಾಣ ಮಾಡುತ್ತ ಇದ್ದರು. ಇದಕ್ಕೆ ಉದಾಹರಣೆಯೆಂದು ತೋಮರ ರಾಜವಂಶದ ಕಾಲದ ಗ್ವಾಲ್ಹೇರದ ಜೈನಗುಹೆಗಳನ್ನು ನೋಡಬಹುದು. ಯಾವ ಗುಡ್ಡದ ಮೇಲೆ ಗ್ವಾಲ್ಹೇರದ ಕೋಟೆಯನ್ನು ಕಟ್ಟಲಾಗಿದೆಯೋ ಅದು ಎರಡು ಮೈಲು ಉದ್ದ, ಅರ್ಧ ಮೈಲು ಅಗಲ ಹಾಗೂ ೩೦೦ ಫೂಟು ಎತ್ತರವಿದೆ. ಕೋಟೆಯಲ್ಲಿರುವ ಅತ್ತೆ-ಸೊಸೆಯರ ಮಂದಿರವನ್ನು ಕ್ರಿ. ಶ. ೧೦೯೩ರಲ್ಲಿ ಕಟ್ಟಲಾಗಿದೆ. ಇದು ಪ್ರಾರಂಭದಲ್ಲಿ ಜೈನ ಮಂದಿರವಾಗಿತ್ತು. ಆದರೆ ಈ ಗುಡ್ಡದ ಮೇಲೆ ಜೈನ ಗುಹೆಗಳ ನಿರ್ಮಾಣವು ೧೫ನೆಯ ಶತಮಾನದಲ್ಲಿ ಆದದ್ದು ಕಂಡುಬರುತ್ತದೆ. ಇಲ್ಲಿ ಬಹುತರ ಗುಹಾ–ನಿರ್ಮಾಣದ ಪ್ರಾಚೀನ ಪರಂಪರೆಯೂ ಇರಬೇಕು. ಸದ್ಯದಲ್ಲಿ ಕಂಡು ಬರುವಂಥ ಕಲವು ಗುಹೆಗಳು ೧೫ ನೆಯ ಶತಮಾನದ ಪೂರ್ವದವುಗಳಾಗಿದ್ದರೆ ಆಶ್ಚರ್ಯಪಡುವ ಕಾರಣವಿಲ್ಲ. ೧೫ ನೆಯ ಶತಮಾನದಲ್ಲಿಯಂತೂ ಜೈನರೂ ಸಮಸ್ತ ಗುಡ್ಡವನ್ನು

ಗುಹಾಮಯುವನ್ನಾಗಿ ಮಾಡಿದರು. ಪರ್ವತದ ಮೇಲೆ, ಕೆಳಗೆ ಮತ್ತು ನಾಲ್ಕೂ ಮಗ್ಗಲು ಜೈನ ಗುಹೆಗಳು ಅಸ್ತಿತ್ವದಲ್ಲಿವೆ. ಈ ಗುಹೆಗಳಲ್ಲಿ ಯೋಜನಾ ಚಾತುರ್ಯ ಮತ್ತು ಶಿಲ್ಪ-ಸೌಷ್ಠವಗಳೂ ಇಲ್ಲ. ಪೂರ್ವಕಾಲದ ಗುಹೆಗಳಲ್ಲಿ ಅವು ನಮಗೆ ಕಂಡು ಬರುತ್ತಿದ್ದುವು. ಆದರೆ ಈ ಗುಹೆಗಳ ವಿಶೇಷತೆಯು ಅವುಗಳ ಸಂಖ್ಯೆ, ವಿಸ್ತಾರ ಮತ್ತು ಮೂರ್ತಿಗಳ ವಿಶಾಲತೆಗಳಲ್ಲಿ ಇದೆ. ಗುಹೆಗಳು ಬಹು ದೊಡ್ಡ ದೊಡ್ಡವಾಗಿವೆ. ಅವುಗಳಲ್ಲಿ ತೀರ್ಥಂಕರರ ಸುಮಾರು ೬೦ ಫೂಟಿನವರೆಗೆ ಎತ್ತರ ಮೂರ್ತಿಗಳು ಕಂಡು ಬರುತ್ತವೆ. ಮೊದಲನೆಯ ಗುಹಾಸಮೂಹದಲ್ಲಿ ಸುಮಾರು ೨೫ ತೀರ್ಥಂಕರರ ವಿಶಾಲ ಮೂರ್ತಿಗಳಿವೆ. ಅವುಗಳಲ್ಲಿ ಒಂದು ಮೂರ್ತಿಯು ೫೭ ಫೂಟು ಎತ್ತರವಿದೆ. ಆದಿನಾಥ ಮತ್ತು ನೇಮಿನಾಥರ ೩೦ ಫೂಟು ಎತ್ತರದ ಮೂರ್ತಿಗಳೂ ಇವೆ. ಉಳಿದ ಚಿಕ್ಕ ದೊಡ್ಡ ಮೂರ್ತಿಗಳೂ ಸಹ ಇವೆ. ಆದರೆ ಅವುಗಳ ರಚನೆ ಹಾಗೂ ಅಲಂಕರಣಾದಿಗಳಲ್ಲಿ ಯಾವ ಸೌಂದರ್ಯವಾಗಲಿ, ಲಾಲಿತ್ಯವಾಗಲಿ ಕಂಡು ಬರುವುದಿಲ್ಲ. ಇಲ್ಲಿಂದ ಅರ್ಧ ಮೈಲು ಎತ್ತರದ ಮೇಲೆ ಎರಡನೆಯ ಗುಹೆಗಳ ಸಮೂಹವಿದೆ. ಅಲ್ಲಿ ೨೦ ರಿಂದ ೩೦ ಫೂಟು ಎತ್ತರದ ಅನೇಕ ಮೂರ್ತಿಗಳನ್ನು ಕೆತ್ತಲಾಗಿದೆ. ಬಾವಿಯ ಸಮೀಪದ ಒಂದು ಗುಹೆಯಲ್ಲಿ ಪಾರ್ಶ್ವನಾಥನ ೨೦ ಫೂಟು ಎತ್ತರದ ಪದ್ಮಾಸನ ಮೂರ್ತಿ ಹಾಗೂ ಅನ್ಯ ತೀರ್ಥಂಕರರ ಕಾಯೋತ್ಸರ್ಗ ಮುದ್ರಾಯುಕ್ತ ಅನೇಕ ವಿಶಾಲ ಮೂರ್ತಿಗಳು ಇವೆ. ಇದರ ಸಮೀಪದಲ್ಲಿಯೇ ಇಲ್ಲಿಯ ಎಲ್ಲಕ್ಕೂ ದೊಡ್ಡ ಗುಹೆಯು ಇದೆ. ಅದನ್ನು ಯಥಾರ್ಥವಾಗಿ ಮಂದಿರವೆಂದೇ ಹೇಳಲಾಗುತ್ತಿದೆ. ಇಲ್ಲಿಯ ಪ್ರಧಾನ ಮೂರ್ತಿಯು ಸುಮಾರು ೬೦ ಫೂಟು ಎತ್ತರವಿದೆ. ಈ ಗುಹಾ ಮಂದಿರಗಳಲ್ಲಿ ಅನೇಕ ಶಿಲಾಲೇಖಗಳೂ ದೊರೆತಿವೆ. ಇದರಿಂದ ಈ ಗುಹೆಗಳ ರಚನೆಯು ಕ್ರಿ. ಶ. ೧೪೪೧ ರಿಂದ ೧೪೭೪ ರವರೆಗೆ ೩೩ ವರ್ಷಗಳಲ್ಲಿ ಪೂರ್ಣಗೊಂಡಿದೆ-ಯೆಂದು ತಿಳಿಯುತ್ತದೆ. ಆದರೂ ಕಲೆಯ ದೃಷ್ಟಿಯಿಂದ ಈ ಗುಹೆಗಳು ಅವನತಿಯ ಸೂಚಕವಾಗಿವೆ. ಆದರೂ ಇತಿಹಾಸದ ದೃಷ್ಟಿಯಿಂದ ಅವುಗಳ ಮಹತ್ವವಿದೆ. ಇವಲ್ಲದೆ ಇನ್ನೂ ಬೇರೆಯಾದ ನೂರಾರು ಗುಹೆಗಳು ದೇಶದ ಬೇರೆ ಬೇರೆ ಭಾಗಗಳಲ್ಲಿ ಪರ್ವತಗಳಲ್ಲಿ ಅಲ್ಲಲ್ಲಿ ಇದ್ದುದು ಕಂಡು ಬರುತ್ತದೆ. ಇವುಗಳಲ್ಲಿ ಅನೇಕ ಕಲಾದೃಷ್ಟಿಯಿಂದಲೂ ಐತಿಹಾಸಿಕ ದೃಷ್ಟಿಯಿಂದಲೂ ಮಹತ್ವ ಪೂರ್ಣವೂ ಆಗಿವೆ. ಆದರ ಅವುಗಳನ್ನು ಆ ದೃಷ್ಟಿಯಿಂದ ಅಭ್ಯಸಿಸುವುದು ಇನ್ನೂ ಉಳಿದಿದೆ. ಸ್ಟೆಲಾ ಕ್ರೈಮರಿಶನ ಮತಕ್ಕನುಸರಿಸಿ ದೇಶದಲ್ಲಿ ೧೨೦೦ ಕಲ್ಲಿನಲ್ಲಿ ಕೊರೆದ ಮಂದಿರಗಳು ಕಂಡು ಬರುತ್ತವೆ. ಇವುಗಳಲ್ಲಿ ೯೦೦ ಬೌದ್ಧ, ೧೦೦ ಹಿಂದೂ ಮತ್ತು ೨೦೦ ಜೈನ ಗುಹಾ ಮಂದಿರಗಳಿವೆ, (ಹಿಂದೂ ಟೆಂಪಲ್ಸ, ಪು. ೧೬೮).

---

# ಜೈನ ಮಂದಿರ

ಭಾರತೀಯ ವಾಸ್ತುಕಲೆಯ ವಿಕಾಸವು ಪ್ರಾರಂಭದಲ್ಲಿ ಸ್ತೂಪನಿರ್ಮಾಣಗಳಲ್ಲಿಯೂ ಆ ಮೇಲೆ ಗುಹೆ, ಚೈತ್ಯ, ವಿಹಾರಗಳಲ್ಲಿಯೂ ತರುವಾಯ ಮಂದಿರ ನಿರ್ಮಾಣದಲ್ಲಿಯೂ ಆದುದು ಕಂಡುಬರುತ್ತದೆ. ಸ್ತೂಪ ಮತ್ತು ಗುಹೆಗಳ ವಿಕಾಸವು ಜೈನ ಪರಂಪರೆಯಲ್ಲಿ ಯಾವ ಪ್ರಕಾರ ಆಯಿತೋ ಅದನ್ನು ಮೇಲೆ ಕಂಡುಕೊಂಡಿದ್ದೇವೆ. ಆದರೆ ವಾಸ್ತುಕಲೆಯು ಮಂದಿರಗಳ ನಿರ್ಮಾಣದಲ್ಲಿಯೂ ತನ್ನ ಚರಮ ಉತ್ಕರ್ಷವನ್ನು ಸಂಪಾದಿಸಿದೆ. ಇಂಥ ಮಂದಿರಗಳ ಸರ್ವೋತ್ಕೃಷ್ಟ ಉದಾಹರಣೆಗಳು ೧೧ ನೆಯ ಶತಮಾನ ಹಾಗೂ ಅದರ ತರುವಾಯದ ಕಾಲದಲ್ಲಿಯವು ಉಪಲಬ್ಧವಾಗಿವೆ. ಈ ಮಂದಿರಗಳ ನಿರ್ಮಾಣದಲ್ಲಿ ಅಭಿವ್ಯಕ್ತವಾದ ಯೋಜನೆ, ಶಿಲ್ಪದ ಚಾತುರ್ಯಗಳನ್ನು ಲಕ್ಷ್ಯಗೊಟ್ಟು ನಿರೀಕ್ಷಿಸಬೇಕು. ಆಗ ಇಂಥ ಮಂದಿರಗಳ ನಿರ್ಮಾಣವು ಅದಕ್ಕೆ ಪೂರ್ವಪರಂಪರೆ ಇಲ್ಲದೆ ಆಗುವುದು ಸಾಧ್ಯವಿಲ್ಲೆಂದು ಗೊತ್ತಾಗುತ್ತದೆ. ಕಲ್ಲುಗಳನ್ನು ಕೊರೆದು ಗುಹೆ ಹಾಗೂ ಚೈತ್ಯಗಳನ್ನು ನಿರ್ಮಾಣಮಾಡುವ ಕಲೆಯು ಚರಮೋತ್ಕರ್ಷವನ್ನು ತಲುಪಿದುದನ್ನು ನಾವು ಎಲ್ಲೋರದ ಗುಹೆಗಳಲ್ಲಿ ಕಂಡುಕೊಂಡಿದ್ದೇವೆ. ಅವುಗಳ ಆಧಾರದ ಮೇಲೆಯೇ ಮುಂದೆ ಸ್ವತಂತ್ರ ರೂಪದಲ್ಲಿ ಮಂದಿರಗಳನ್ನು ನಿರ್ಮಿಸುವ ಪರಂಪರೆಯು ಪ್ರಾರಂಭವಾಯಿತೆಂದು ಹೇಳಲಾಗುತ್ತಿದೆ. ಆದರೆ ಆ ಕಲೆಗೂ ಸ್ವತಂತ್ರ ಸಂರಚನಾತ್ಮಕ (ಸ್ಟ್ರಕ್ಚರಲ್) ಮಂದಿರಗಳ ಶಿಲ್ಪದಲ್ಲಿಯೂ ದೊಡ್ಡ ಅಂತರವಿದೆ. ಅದರ ವಿಕಾಸದಲ್ಲಿಯೂ ಕೆಲವೊಂದು ಶತಮಾನಗಳು ಉರುಳಿರಬೇಕು. ಈ ಸಂಬಂಧದಲ್ಲಿ ಆ ಕಾಲದ ಪ್ರಾಚೀನತರ ಮಂದಿರಗಳ ಅಭಾವವು ಬಹಳಷ್ಟು ಮನಸ್ಸನ್ನು ಕೆಣಕುತ್ತದೆ.

ಪ್ರಾಚೀನತಮ ಬೌದ್ಧ ಮತ್ತು ಹಿಂದೂ ಮಂದಿರಗಳ ನಿರ್ಮಾಣದ ಐದು ಶೈಲಿಗಳನ್ನು ನಿಯತಗೊಳಿಸಿದ್ದಾರೆ. ಅವು ಈ ಪ್ರಕಾರ ಇವೆ:— (೧) ಸಮತಲ ಮೇಲ್ಭಾಗವುಳ್ಳ ಚೌಕೋಣ ಆಕೃತಿಯ ಮಂದಿರಗಳು, ಇವುಗಳ ಎದುರಿಗೆ ಒಂದು ದ್ವಾರಮಂಟಪವು ಇರುತ್ತದೆ. (೨) ದ್ವಾರಮಂಟಪ ಮತ್ತು ಸಮತಲ ಮೇಲ್ಭಾಗವುಳ್ಳ ಚೌಕೋಣ ಆಕೃತಿಯ ಮಂದಿರದ ಗರ್ಭಗೃಹದ ನಾಲ್ಕೂ ಮಗ್ಗಲಿಗೆ ಪ್ರದಕ್ಷಿಣೆಯ ಸ್ಥಾನವನ್ನು ಸಹ ನಿರ್ಮಿಸಲಾಗಿರುತ್ತದೆ. ಇಂಥ ಮಂದಿರಗಳು ಒಮ್ಮೊಮ್ಮೆ ಎರಡಂತಸ್ತಿನವೂ ಇರುತ್ತವೆ. (೩) ಚೌಕೋಣ ಮಂದಿರವಿದ್ದು, ಅದರ ಮೇಲೆ ಚಿಕ್ಕದಾದ ಹಾಗೂ ಚಪ್ಪಟೆಯಾದ ಶಿಖರವನ್ನೂ ನಿರ್ಮಿಸಿದ್ದಿರುತ್ತದೆ. (೪) ಉದ್ದ ಚತುಷ್ಕೋಣಾಕೃತಿಯ ಮಂದಿರವಿದ್ದು, ಅದರ ಹಿಂದಿನ ಭಾಗವು ಅರ್ಧವೃತ್ತಾಕಾರವಿರುತ್ತದೆ. ಅದರ ಮೇಲ್ಭಾಗವು ಕೋರಿಯ ಆಕಾರದ್ದಿರುತ್ತದೆ. (೫) ವೃತ್ತಾಕಾರ ಮಂದಿರವಿದ್ದು ಅದರ ಪೀಠಿಕೆಯು ಚೌರಸರೂಪದಲ್ಲಿರುತ್ತದೆ.

ಈ ಶೈಲಿಗಳಲ್ಲಿ ನಾಲ್ಕನೆಯ ಶೈಲಿಯ ವಿಕಾಸವು ಬೌದ್ಧರ ಚೈತ್ಯಶಾಲೆಗಳಿಂದಲೂ ಮತ್ತು ಐದನೆಯದರ ವಿಕಾಸವು ಸ್ತೂಪರಚನೆಯಿಂದಲೂ ಆದುದು ಕಂಡು ಬರುತ್ತದೆ. ಚತುರ್ಥ ಶೈಲಿಗೆ ಉದಾಹರಣವನ್ನು ಉಸಮಾನಾಬಾದ ಜಿಲ್ಲೆಯ ತೇರ ಎಂಬ ಹೆಸರಿನ ಸ್ಥಾನದ ಮಂದಿರ ಮತ್ತು ಚೇಜರಲಾ (ಕೃಷ್ಣಾ ಜಿಲ್ಲೆ) ದಲ್ಲಿಯ ಕಪೋತೇಶ್ವರದಲ್ಲಿ ಕಾಣುತ್ತೇವೆ. ಇವು ನಾಲ್ಕು-ಐದನೆಯ ಶತಮಾನಗಳಲ್ಲಿ ನಿರ್ಮಾಣಗೊಂಡಿವೆ. ಆಕಾರದಲ್ಲಿ ಚಿಕ್ಕವೂ ಆಗಿವೆ. ಈ ಶೈಲಿಯಲ್ಲಿ ಎರಡು ಅವಾಂತರ ಭೇದಗಳನ್ನು ಮಾಡಲಾಗುತ್ತದೆ. ಒಂದು ನಾಗರ ವ.ತ್ತು ಎರಡನೆಯದು ದ್ರಾವಿಡ ಎಂದು. ಮುಂದಿನ ಕಾಲದಲ್ಲಿ ಇವು ವಿಶೇಷ ವಿಕಾಸವನ್ನು ಹೊಂದಿದವು. ಆದರೆ ಇವುಗಳ ಮೂಲವು ಮೇಲೆ ಹೇಳಿದ ಉದಾಹರಣೆಗಳಲ್ಲಿಯೇ ಕಂಡುಬರುತ್ತದೆ. ಐದನೆಯ ಶೈಲಿಗೆ ಉದಾಹರಣವು ರಾಜಗೃಹದ ಮಣಿಯಾರ ಮಠ (ಮಣಿನಾಗ ಮಂದಿರ) ದಲ್ಲಿ ನೋಡಲು ದೊರೆಯುತ್ತದೆ. ಮೊದಲನೆಯ ಶೈಲಿಯಿಂದ ನಿರ್ಮಾಣವಾದ ಮಂದಿರಗಳು ಸಾಂಚೀ, ತಿಗವಾ ಮತ್ತು ಐರಣಗಳಲ್ಲಿ ವಿದ್ಯಮಾನವಾಗಿವೆ. ನಾಚನಾ-ಕುಠಾರಾದಲ್ಲಿಯ ಪಾರ್ವತೀಮಂದಿರ ಹಾಗೂ ಭೂಮರಾ (ಮ. ಪ್ರ.) ದ ಶಿವಮಂದಿರ (೫-೬ ನೆಯ ಶತಮಾನ) ಮೊದಲಾದುವುಗಳು ಎರಡನೆಯ ಶೈಲಿಗೆ ಉದಾಹರಣೆಗಳಾಗಿವೆ. ಐಹೊಳೆಯ ಮೇಘುಟೀ ಮಂದಿರವೂ ಇದೇ ಶೈಲಿಯದಾಗಿದೆ. ದೇವಗಢದ (ಝಾಂಸಿ ಜಿಲ್ಲೆ) ದಶಾವತಾರ ಮಂದಿರ ಹಾಗೂ ಭೀತರಗಾಂವದ (ಕಾನಪುರ ಜಿಲ್ಲೆ) ಮಂದಿರಗಳು, ಬೌದ್ಧಗಯೆಯ ಮಹಾಬೋಧಿ ಮಂದಿರ ಇವು ಮೂರನೆಯ ಶೈಲಿಯ ಉದಾಹರಣೆಗಳಾಗಿವೆ. ಇಂಥವುಗಳನ್ನು ಚೀನದ ಯಾತ್ರಿಕನಾದ ಹ್ಯೋತ್ಸಾಂಗನು ಸಂದರ್ಶಿಸಿದ್ದನು. ಈ ಮಂದಿರಗಳು ಆರನೆಯ ಶತಮಾನದುವೆಂದು ಅನುಮಾನಿಸಲಾಗುತ್ತಿದೆ.

ಜೈನ ಆಯತನ, ಚೈತ್ಯಗೃಹ, ಬಿಂಬ ಮತ್ತು ಪ್ರತಿಮೆ ಮತ್ತು ತೀರ್ಥ ಮೊದಲಾದವುಗಳ ಪ್ರಚಲಿತ ಉಲ್ಲೇಖವು ಪ್ರಾಚೀನತಮ ಜೈನ ಶಾಸ್ತ್ರಗಳಲ್ಲಿ ಕಂಡು ಬರುತ್ತದೆ. (ಕುಂದ ಕುಂದ: ಬೋಧಪಾಹುಡ, ೬೨ ಆದಿ) ದಿಗಂಬರ ಪರಂಪರೆಯ ನಿತ್ಯ ಪೂಜೆ ವಂದನೆಗಳಲ್ಲಿ ಈ ಸಿದ್ಧಕ್ಷೇತ್ರಗಳ ವಂದನೆಯನ್ನು ಮಾಡುವ ನಿಯಮವಿದೆ. ಇಂಥ ಸ್ಥಾನಗಳಿಂದ ತೀರ್ಥಂಕರರೂ ಅನ್ಯ ಪ್ರಖ್ಯಾತ ಮುನಿಗಳೂ ನಿರ್ವಾಣವನ್ನು ಹೊಂದಿದ್ದಾರೆ. ನಿರ್ವಾಣಕಾಂಡ ಎಂಬ ಹೆಸರಿನ ಪ್ರಾಕೃತ ನಮನ-ಸ್ತೋತ್ರದಲ್ಲಿ, ಕೆಳಗೆ ಕಾಣಿಸಿದ ಸಿದ್ಧಕ್ಷೇತ್ರಗಳಿಗೆ ನಮಸ್ಕರಿಸಲಾಗಿದೆ:—

| | ಸಿದ್ಧಕ್ಷೇತ್ರ | ಜ್ಞಾತನಾಮ ಮತ್ತು ಸ್ಥಿತಿ | ನಿರ್ವಾಣ ಹೊಂದಿದವನು |
|---|---|---|---|
| ೧ | ಅಷ್ಟಾಪದ | ಕೈಲಾಸ (ಹಿಮಾಲಯದಲ್ಲಿ) | ಪ್ರ. ತೀರ್ಥಂಕರ ಋಷಭ, ನಾಗಕುಮಾರ, ವ್ಯಾಲ ಮಹಾವ್ಯಾಲ. |
| ೨ | ಚಂಪಾ | ಭಾಗಲಪುರ (ಬಿಹಾರ) | ೧೨ನೆಯ ತೀರ್ಥಂಕರ, ವಾಸುಪೂಜ್ಯ. |

| | | | |
|---|---|---|---|
| ೩ | ಊರ್ಜಯಂತ | ಗಿರನಾರ (ಕಾಠೀವಾಡ) | ೨೨ನೆಯ ತೀರ್ಥಂಕರರ ನೇಮಿನಾಥ, ಪ್ರದ್ಯುಮ್ನ, ಶಂಬು, ಅನಿರುದ್ಧ |
| ೪ | ಪಾವಾ | ಪಾವಾಪುರಿ (ಪಟನಾ, ಬಿಹಾರ) | ೨೪ನೆಯ ತೀರ್ಥಂಕರರ ಮಹಾವೀರ |
| ೫ | ಸಮ್ಮೇದಶಿಖರ | ಪಾರಸನಾಥ (ಹಜಾರೀಬಾಗ, ಬಿಹಾರ) | ಉಳಿದ ೨೦ ತೀರ್ಥಂಕರರು |
| ೬ | ತಾರನಗರ | ತಾರಂಗಾ | ವರದತ್ತ, ವರಾಂಗ, ಸಾಗರದತ್ತ |
| ೭ | ಪಾವಾಗಿರಿ | ಊನ (ಖರಗೋನ ಮ. ಪ್ರದೇಶ) | ಲಾಟನರೇಂದ್ರ, ಸುವರ್ಣ ಭದ್ರಾದಿ |
| ೮ | ಶತ್ರುಂಜಯ | ಕಾಠೀವಾಡ | ಪಾಂಡವ ಮತ್ತು ದ್ರವಿಡ ಅರಸರು |
| ೯ | ಗಜಪಂಥ | ನಾಸಿಕ (ಮಹಾರಾಷ್ಟ್ರ) | ಬಲಭದ್ರ, ಅನ್ಯ ಯಾದವ ಅರಸರು |
| ೧೦ | ತುಂಗೀಗಿರಿ | ಮಾಂಗೀ ತುಂಗೀ (ಮಹಾರಾಷ್ಟ್ರ) | ರಾಮ, ಹನುಮ, ಸುಗ್ರೀವ, ಗವಯ, ಗವಾಕ್ಷ, ನೀಲ, ಮಹಾನೀಲ |
| ೧೧ | ಸುವರ್ಣಗಿರಿ | ಸೋನಾಗಿರಿ (ಝಾಂಸಿ, ಉ. ಪ್ರ.) | ನಂಗ–ಅನಂಗ ಕುಮಾರ |
| ೧೨ | ರೇವಾತಟ | ಓಂಕಾರ ಮಾಂಧಾತಾ (ಮ.ಪ್ರ.) | ರಾವಣನ ಪುತ್ರರು |
| ೧೩ | ಸಿದ್ಧವರ ಕೂಟ | ,, ,, | ಇಬ್ಬರು ಚಕ್ರವರ್ತಿಗಳು |
| ೧೪ | ಚೂಲಗಿರಿ | ಬಾವನಗಜಾ (ಬಡವಾನೀ, ಮ. ಪ್ರ.) | ಇಂದ್ರಜಿತ, ಕುಂಭಕರ್ಣ |
| ೧೫ | ದ್ರೋಣಗಿರಿ | ಫಲಹೋಡಿ (ಫಲೌದಿ, ರಾಜಸ್ಥಾನ) | ಗುರುದತ್ತಾದಿ |
| ೧೬ | ಮೇಢಗಿರಿ | ಮುಕ್ತಾಗಿರಿ (ಬೈತೂಲ, ಮ. ಪ್ರ.) | ಮೂರುವರೆ ಕೋಟಿ ಮುನಿಗಳು |
| ೧೭ | ಕುಂಥಲಗಿರಿ | ವಂಶಸ್ಥಲ (ಮಹಾರಾಷ್ಟ್ರ) | ಕುಲಭೂಷಣ, ದೇಶಭೂಷಣ |
| ೧೮ | ಕೋಟಿಶಿಲಾ | ಕಲಿಂಗದೇಶ (?) | ಯಶೋಧರ ರಾಜನ ಪುತ್ರ |
| ೧೯ | ರೇಸಿಂದಾಗಿರಿ | ? | ಪಾರ್ಶ್ವನಾಥನ ಕಾಲದ ವರದತ್ತಾದಿ ಐವರು ಮುನಿಗಳು |

ಇದರ ಹೊರತಾಗಿ ಪ್ರಾಕೃತ ಅತಿಶಯ ಕ್ಷೇತ್ರಕಾಂಡದಲ್ಲಿ ಮಂಗಲಾಪುರ, ಆಸ್ಸಾರಮ್ಯ, ಪೋದನಪುರ, ವಾರಣಾಸೀ, ಮಥುರಾ, ಅಹಿಚ್ಛತ್ರ, ಜಂಬೂವನ, ನಿವಡಕುಂಡಲೀ, ಹೋಲಾಗಿರಿ ಮತ್ತು ಗೊಮ್ಮಟೇಶ್ವರನ ವಂದನೆಯನ್ನೂ ಮಾಡಲಾಗಿದೆ. ಈ ಎಲ್ಲ ಸ್ಥಾನಗಳಲ್ಲಿ ಒಂದು ಇಲ್ಲವೆ ಹಲವು ಜಿನಮಂದಿರಗಳು, ತೀರ್ಥಂಕರರ ಚರಣ ಚಿಹ್ನಗಳು, ಪ್ರತಿಮೆಗಳು ಇವೆ. ಅವು ವಿವಿಧಕಾಲಗಳಲ್ಲಿ ನಿರ್ಮಾಣಗೊಂಡಂಥವಿವೆ. ಪ್ರತಿವರ್ಷ ಸಹಸ್ರಾರು ಜನ ಯಾತ್ರಿಕರು ಇವುಗಳ ವಂದನೆಯನ್ನು ಮಾಡಿ ತಮ್ಮನ್ನು ಧನ್ಯವೆಂದು ತಿಳಿದುಕೊಳ್ಳುತ್ತಾರೆ.

ಎಲ್ಲಕ್ಕೂ ಪ್ರಾಚೀನವಾದ ಜೈನಮಂದಿರದ ಚಿಹ್ನವು ಬಿಹಾರದಲ್ಲಿ ಪಾಟಣಾದ ಸಮೀಪ ಲೋಹಾನೀಪುರದಲ್ಲಿ ಕಂಡುಬರುತ್ತದೆ. ಅಲ್ಲಿ ಕುಮುರಾಹರ ಮತ್ತು ಬುಲಂದೀಬಾಗದ ಮೌರ್ಯಕಾಲದ ಕಲಾಕೃತಿಗಳ ಪರಂಪರೆಗೆ ಪ್ರಮಾಣವು ದೊರೆತಿದೆ. ಇಲ್ಲಿ ಒಂದು ಜೈನಮಂದಿರದ ತಳಹದಿಯು ಲಭಿಸಿದೆ. ಈ ಮಂದಿರವು ೮–೧೦ ಫೂಟು ವರ್ಗಾಕಾರವಾಗಿತ್ತು. ಇಲ್ಲಿಯ ಇಟ್ಟಂಗಿಗಳು ಮೌರ್ಯಕಾಲದವುಗಳೆಂದು ಸಿದ್ಧವಾಗಿವೆ. ಇಲ್ಲಿಯೇ ಮೌರ್ಯಕಾಲದ ರಜತಮುದ್ರೆಯೂ ಹಾಗೂ ಎರಡು ಮಸ್ತಕಹೀನ ಜಿನಮೂರ್ತಿಗಳು ದೊರೆಕಿವೆ. ಇವು ಈಗ ಪಾಟಣಾ ಸಂಗ್ರಹಾಲಯದಲ್ಲಿ ಸುರಕ್ಷಿತವಾಗಿವೆ.

ಈಗ ಎಲ್ಲಕ್ಕೂ ಪ್ರಾಚೀನ ಜೈನಮಂದಿರವು ಬಾದಾಮಿಯ ಸಮೀಪದಲ್ಲಿ ಇರುವ ಐಹೊಳೆಯ ಮೇಘುಟೀ ಎಂಬ ಹೆಸರಿನ ಮಂದಿರವಾಗಿದೆ. ಇದು ದಕ್ಷಿಣ ಭಾರತದಲ್ಲಿದೆ. ಇದರ ರೂಪರೇಖೆಯೂ ಸುರಕ್ಷಿತವಾಗಿದೆ. ಅಲ್ಲಿ ದೊರೆತ ಶಿಲಾಲೇಖಕ್ಕನುಸರಿಸಿ ಸಂವತ್ ೫೫೬ (ಕ್ರಿ. ಶ. ೬೩೪) ಪಶ್ಚಿಮ ಚಾಲುಕ್ಯ ರಾಜನಾದ ಎರಡನೆಯ ಪುಲಿಕೇಶಿಯ ರಾಜ್ಯಕಾಲದಲ್ಲಿ ರವಿಕೀರ್ತಿಯ ಮೂಲಕ ನಿರ್ಮಾಣವಾದುದಾಗಿದೆ. ಈ ರವಿಕೀರ್ತಿಯು ಮಂದಿರ ಯೋಜನೆಯಲ್ಲಿ ಇಷ್ಟೇ ಅಲ್ಲ. ಕಾವ್ಯ ಯೋಜನೆಯಲ್ಲಿಯೂ ಸಹ ಅತಿ ಪ್ರವೀಣ ಮತ್ತು ಪ್ರತಿಭಾಶಾಲಿಯಾಗಿದ್ದನು. ಈ ಮಾತಿಗೆ ಆ ಶಿಲಾಲೇಖದ ಕಾವ್ಯರಚನೆಯಯಲ್ಲಿಯೂ ಅವನ ಸ್ವಂತ ವಾಕ್ಯಗಳಿಂದಲೂ ಪುಷ್ಟಿಯು ದೊರೆಯುತ್ತದೆ. ಅವನು ಕಾವ್ಯಕ್ಷೇತ್ರದಲ್ಲಿ ಕಾಲಿದಾಸ, ಭಾರವಿಗಳಷ್ಟು ಕೀರ್ತಿಯನ್ನು ಸಂಪಾದಿಸಿದ್ದನು. ಈ ಉಲ್ಲೇಖದಿಂದ ನಮಗೆ ರವಿಕೀರ್ತಿಯ ಕಾವ್ಯಪ್ರತಿಭೆಯ ಕಲ್ಪನೆಯಿಷ್ಟೇ ಲಭಿಸುವುದಿಲ್ಲ. ಅದರಲ್ಲಿ ಉಲ್ಲೇಖಗೊಂಡ ಇಬ್ಬರು ಮಹಾಕವಿಗಳ ಕಾಲನಿರ್ಣಯ.ದಲ್ಲಿ ಬಹಳ ಮಹತ್ವದ ಸಹಾಯವು ದೊರಕಿದೆ. ಇದರಿಂದ ಅವರ ಕಾಲದ ಅಂತಿಮ ಸೀಮೆಯು ಸುನಿಶ್ಚಿತವಾಗುತ್ತದೆ. ಈ ಮಂದಿರವು ತನ್ನ ಪೂರ್ಣರೂಪದಲ್ಲಿ ಸುರಕ್ಷಿತವಾಗಿ ಉಳಿದಿಲ್ಲ. ಅದರ ಬಹಳಷ್ಟು ಭಾಗವು ಧ್ವಸ್ತವಾಗಿಹೋಗಿದೆ. ಆದರೆ ಅದರ ಸುರಕ್ಷಿತವಿದ್ದ ಭಾಗದಿಂದ ಅದರ ಯೋಜನೆ ಮತ್ತು ಶಿಲ್ಪಕಲೆಯ ಪೂರ್ಣಜ್ಞಾನವನ್ನು ಸಂಪಾದಿಸುವುದು ಸಾಧ್ಯವಿದೆ.

ಈ ಮಂದಿರವು ಗುಪ್ತ ಮತ್ತು ಚಾಲುಕ್ಯಕಾಲದ ಶೈಲಿಗೆ ಸಂಬಂಧಿಸಿದ ಅನೇಕ ಉದಾಹರಣೆಗಳಲ್ಲಿ ಎಲ್ಲಕ್ಕೂ ತರವಾಯದ ಕಾಲದ್ದಾಗಿದೆ. ಅದರಿಂದ ಸ್ವಾಭಾವಿಕವಾಗಿ ಇದರ ರಚನೆಯಲ್ಲಿ ಆ ಶೈಲಿಯು ತನ್ನ ಚರಮೋತ್ಕರ್ಷವನ್ನು ಪಡೆದದ್ದು ಕಂಡುಬರುತ್ತದೆ- ಇದರ ತಂತ್ರ ಹಾಗೂ ಸ್ಥಾಪತ್ಯದಲ್ಲಿ ಒಂದು ತರದ ವಿಶೇಷ ಉನ್ನತಿಯು ಕಂಡುಬರುತ್ತದೆ. ಪೂರ್ಣಮಂದಿರದ ಕಲಾತ್ಮಕ ಸಂಯೋಜನೆಯಲ್ಲಿ ಒಂದು ಮಾದರಿಯ ಸಂಸ್ಕಾರ ಹಾಗೂ ಲಾಲಿತ್ಯಗಳು ಕಂಡುಬರುತ್ತವೆ. ಅವು ಇನ್ನೆಲ್ಲಿಯೂ ನೋಡಲು ಸಿಕ್ಕಲಾರದು. ಇದರ ಗೋಡೆಗಳ ಹೊರಭಾಗವು ಸಂಕೀರ್ಣ ಕಂಭಗಳ ಪ್ರಕ್ಷೇಪಗಳಿಂದ ಅಲಂಕೃತವಾಗಿದೆ. ಈ ಕಂಭಗಳೂ ಕೂಡ

ಕೋಷ್ಠಕಾಕಾರದ ಶಿಖರಗಳಿಂದ ಸುಶೋಭಿತವಾಗಿವೆ. ಕಂಭಗಳ ಮಧ್ಯದಲ್ಲಿ ಇರುವ ಗೋಡೆಗಳ ಭಾಗವೂ ಕೂಡ ನಾನಾ ಪ್ರಕಾರದ ಆಕೃತಿಗಳಿಂದ ಅಲಂಕಾರಗೊಳಿಸುವ ಪ್ರಯತ್ನ ಮಾಡಲಾಗಿದೆ. ಮಂದಿರದ ಸಮಸ್ತ ಯೋಜನೆಯು ಇಂಥ ಒಂದು ಸಂಕುಚಿತ ಮತ್ತು ಸುಸಂಘಟಿತ ರೀತಿಯಿಂದ ಆಗಿದೆ. ಆದರಿಂದ ಪೂರ್ವಕಾಲದ ಅನ್ಯ ಉದಾಹರಣೆಗಳಿಗಿಂತ ಇದರಲ್ಲೊಂದು ವಿಶೇಷ ಪ್ರಗತಿಯಾದುದು ಸ್ಪಷ್ಟವಾಗಿ ಕಂಡುಬರುತ್ತದೆ. ಮಂದಿರವು ಉದ್ದ ಚತುಷ್ಕೋಣಾಕೃತಿಯದಾಗಿದೆ. ಅದರ ಎರಡು ಭಾಗಗಳಲ್ಲಿ: ಒಂದು ಪ್ರದಕ್ಷಿಣಾಸಹಿತ ಗರ್ಭಗೃಹ. ಇನ್ನೊಂದು ದ್ವಾರ ಮಂಟಪಗಳು ಇವೆ. ಮಂಟಪವು ಸ್ತಂಭಗಳ ಮೇಲೆ ಆಧಾರಿತವಾಗಿದೆ. ಮೂಲ ದಲ್ಲಿ, ಎಲ್ಲ ಕಡೆಗೂ ತೆರೆದದ್ದು ಇತ್ತು. ತರುವಾಯ ಗೋಡೆಗಳಿಂದ ಮುಚ್ಚ ಲಾಯಿತು. ಮಂಟಪ ಹಾಗೂ ಗರ್ಭಗೃಹಗಳನ್ನು ಒಂದು ಬಾಗಿಲದಿಂದ ಜೋಡಿ ಸಲಾಗಿದೆ. ಈ ಪ್ರಕಾರ ಅಲಂಕೃತಿಯಲ್ಲಿ ಈ ಮಂದಿರವು ತನ್ನ ಪೂರ್ವಕಾಲೀನ ಉದಾಹರಣೆಗಳಿಂದ ಸ್ಪಷ್ಟವಾಗಿ ಬಹಳ ದೊಡ್ಡದೂ ಉನ್ನತವೂ ಆಗಿದೆ. ತನ್ನ ನಿರ್ಮಿತಿಯ ಅಪೇಕ್ಷೆಯಿಂದ ತನ್ನ ಮುಂದಿನ ವಾಸ್ತುಕಲೆಯ ಇತಿಹಾಸದ ಮೇಲೆ ಮಹತ್ವಪೂರ್ಣವಾದ ಪ್ರಭಾವವನ್ನು ಬೀರಿದ್ದು ಸಿದ್ಧವಾಗುತ್ತದೆ.

ಗುಪ್ತ ಮತ್ತು ಚಾಲುಕ್ಯಯುಗದ ಪಶ್ಚಾತ್‌ಕಾಲೀನ ವಾಸ್ತುಕಲೆಯಲ್ಲಿ ಶಿಲ್ಪಶಾಸ್ತ್ರದ ದೃಷ್ಟಿಯಿಂದ ಮೂರು ಶೈಲಿಗಳನ್ನು ನಿರ್ದಿಷ್ಟಗೊಳಿಸಲಾಗಿದೆ. ಅವು ನಾಗರ, ದ್ರಾವಿಡ, ವೇಸರ ಎಂದಿವೆ. ಸಾಮಾನ್ಯವಾಗಿ ನಾಗರ ಶೈಲಿಯು ಉತ್ತರ ಭಾರತದಲ್ಲಿ ಹಿಮಾಲಯದಿಂದ ವಿಂಧ್ಯಪರ್ವತದ ವರೆಗೆ ಪ್ರಚುರಗೊಂಡಿತ್ತು. ದ್ರಾವಿಡವು ದಕ್ಷಿಣದಲ್ಲಿ ಕೃಷ್ಣಾನದಿಯಿಂದ ಕನ್ಯಾಕುಮಾರಿಯ ವರೆಗೆ ಪಸರಿಸಿತ್ತು. ವೇಸರವು ಮಧ್ಯಭಾರತದಲ್ಲಿ ವಿಂಧ್ಯಪರ್ವತ ಹಾಗೂ ಕೃಷ್ಣಾನದಿಯ ಮಧ್ಯದಲ್ಲಿ ಪ್ರಚಾರದಲ್ಲಿತ್ತು. ಆದರೆ ಈ ಪ್ರಾದೇಶಿಕ ವಿಭಾಗವನ್ನು ಕಟ್ಟುನಿಟ್ಟಾಗಿ ಪಾಲಿಸಲು ಆಗಿಲ್ಲವೆಂಬುದು ಕಂಡುಬರುತ್ತದೆ. ಬಹುತರ ಎಲ್ಲ ಶೈಲಿಗಳ ಮಂದಿರಗಳು ಎಲ್ಲ ಪ್ರದೇಶಗಳಲ್ಲಿಯೂ ಕಂಡುಬರುತ್ತವೆ. ಆದರೆ ಆಕೃತಿ ವೈಶಿಷ್ಟ್ಯಗಳನ್ನು ತಿಳಿದು ಕೊಳ್ಳುವುದಕ್ಕಾಗಿ ಈ ಶೈಲಿಯ ವಿಭಜನೆಯನ್ನು ಉಪಯೋಗಿಸುತ್ತಿದ್ದರೆಂದು ಸಿದ್ಧವಾಗುತ್ತದೆ. ಆದರೆ ಶಾಸ್ತ್ರಗಳಲ್ಲಿ ಈ ಶೈಲಿಗಳ ಭೇದವಿನ್ಯಾಸ, ನಿರ್ಮಿತಿ ಹಾಗೆಯೇ ಅಲಂಕೃತಿಗಳ ಚಿಕ್ಕ ಚಿಕ್ಕ ಸಂಗತಿಗಳನ್ನೂ ಸಹ ನಿರ್ದಿಷ್ಟಗೊಳಿಸಲಾ ಗಿದೆ. ಆದರೆ ಇವುಗಳ ಸ್ಪಷ್ಟ ಭೇದವು ಶಿಖರಗಳ ರಚನೆಯಲ್ಲಿಯೇ ಕಂಡುಬರುತ್ತದೆ. ನಾಗರಶೈಲಿಯ ಶಿಖರವು ಗೋಲಾಕಾರವಾಗಿರುತ್ತದೆ. ಅದರ ತುದಿಯ ಮೇಲೆ ಕಲಶಾಕೃತಿಯನ್ನು ನಿರ್ಮಿಸಲಾಗಿರುತ್ತದೆ. ಪ್ರಾರಂಭದಲ್ಲಿ ಈ ಪ್ರಕಾರದ ಶಿಖರ ಗಳು ಕೇವಲ ವೇದಿಯ ಮೇಲೆ ಇರುತ್ತಿರಬೇಕು. ಆದರೆ ಕ್ರಮದಿಂದ ಇದರ ವಿಕಾಸವು ಸಮಗ್ರಮಂದಿರದ ಮೇಲ್ಭಾವಣಿಯನ್ನೇ ಇದೇ ಆಕಾರದಲ್ಲಿ ರೂಪಿಸ ತೊಡಗಿದರು. ಈ ಶಿಖರಾಕೃತಿಗಳು ಅಧಿಕ ಪ್ರಾಚೀನ ಹಾಗೂ ಮಹತ್ವಪೂರ್ಣ

ವೆಂದು ಮನ್ನಿಸಲಾಗುತ್ತದೆ. ಇದರಿಂದ ಬೇರೆಯಾದ ದ್ರಾವಿಡ ಶೈಲಿಯ ಮಂದಿರಗಳು ಒಂದು ಸ್ತಂಭಾಕೃತಿಯನ್ನು ಧಾರಣಮಾಡುತ್ತವೆ. ಇವುಗಳ ಮೇಲ್ಭಾಗವು ನಾಲ್ಕು ಭಾಗಗಳಿಂದ ಕ್ರಮದಿಂದ ಸಂಕುಚಿತಗೊಳ್ಳುತ್ತ ಹೋಗಿರುತ್ತದೆ. ಮೇಲೆ ಹೋಗಿ ಒಂದು ಸ್ತೂಪದ ಆಕಾರವನ್ನು ಹೊಂದಿರುತ್ತವೆ. ಆ ಚಿಕ್ಕ ಚಿಕ್ಕ ಸ್ತೂಪಿಕೆಗಳೂ ಶಿಖರಾಕೃತಿಗಳೂ ಅದರ ಕೆಳಗಿರುವ ತಳದ ಕೋಣಗಳ ಮೇಲೆಯೇ ಸ್ಥಾಪಿತವಾಗಿರುತ್ತವೆ. ಇದರಿಂದ ಮಂದಿರದ ಬಾಹ್ಯಾಕೃತಿಯು ಶಿಖರಮಯವಾಗಿ ಕಾಣತೊಡಗುತ್ತದೆ. ವೇಸರ ಶೈಲಿಯ ಶಿಖರದ ಆಕೃತಿಯು ವರ್ತುಲಾಕಾರವಾಗಿ ಮೇಲಕ್ಕೆದ್ದು ಅಗ್ರಭಾಗದ ಮೇಲೆ ಚಪ್ಪಟೆಯಾಗಿರುತ್ತದೆ. ಅದರಿಂದ ಅದು ಕೋರಿಯ ಆಕಾರವುಳ್ಳದ್ದಾಗಿ ಕಂಡುಬರುತ್ತದೆ. ಈ ಶೈಲಿಯು ಸ್ಪಷ್ಟವಾಗಿಯೂ ಪ್ರಾಚೀನ ಚೈತ್ಯಗಳ ಆಕೃತಿಯನ್ನು ಅನುಸರಣ ಮಾಡುತ್ತದೆ. ಮುಂದಿನ ಕಾಲದ ಹಿಂದೂ ಹಾಗೂ ಜೈನ ಮಂದಿರಗಳು ಇದೇ ಶೈಲಿಗಳನ್ನು ಮತ್ತು ವಿಶೇಷವಾಗಿ ನಾಗರ ಹಾಗೂ ದ್ರಾವಿಡ ಶೈಲಿಗಳನ್ನು ಅನುಸರಿಸಿವೆಯೆಂದು ಕಂಡುಬರುತ್ತದೆ.

ಐಹೊಳೆಯ ಮೇಘುಟಿ ಜೈನ ಮಂದಿರವು ದ್ರಾವಿಡ ಶೈಲಿಯಲ್ಲಿ ಸರ್ವಪ್ರಾಚೀನವೆಂದು ಹೇಳಲಾಗುತ್ತದೆ. ಇದೇ ರೀತಿಯ ಇನ್ನೊಂದು ಜೈನಮಂದಿರವು ಪಟ್ಟದಕಲ್ಲಿನ ಪಶ್ಚಿಮಕ್ಕೆ ಒಂದು ಮೈಲಿನ ಮೇಲಿದೆ. ಇದರಲ್ಲಿ ಯಾವ ಪ್ರಕಾರದ ಕೆತ್ತನೆಯ ಕೆಲಸವೂ ಇಲ್ಲ. ಪ್ರಾಂಗಣದ ಸುತ್ತಲಿನ ಕಟ್ಟಡವೂ ಪೂರ್ಣವೂ ಆಗಿಲ್ಲ. ಆದರೆ ಶಿಖರದ ನಿರ್ಮಾಣವು ಸ್ಪಷ್ಟವಾಗಿ ದ್ರಾವಿಡ ಶೈಲಿಯದಾಗಿದೆ. ಅದು ಕ್ರಮದಿಂದ ಸಂಕುಚಿತವಾಗುತ್ತ ಹೋಗುವಂಥದೂ ಭೂಮಿಕೆಗಳ ಮೇಲಿಂದ ಮೇಲೆದ್ದುದೂ ಆಗಿದೆ. ಕ್ರಮೋನ್ನತ ಭೂಮಿಕೆಗಳ ಕಪೋತ-ಪಾಲಿಗಳಲ್ಲಿ ಅದರ ರೂಪರೇಖೆಯು ಅದೇ ಆಕಾರ-ಪ್ರಕಾರಗಳಲ್ಲಿ ಅಭಿವ್ಯಕ್ತವಾಗುತ್ತ ಹೋಗುತ್ತದೆ. ಎಲ್ಲಕ್ಕೂ ಮೇಲೆ ಸುಂದರವಾದ ಸ್ತೂಪಿಕೆಯಿದೆ. ಈ ಮಂದಿರದ ನಿರ್ಮಾಣಕಾಲವೂ ಅದೇ ಏಳನೆಯ ಎಂಟನೆಯ ಶತಮಾನವಾಗಿದೆ. ಇದೇ ಶೈಲಿಯು ಮದ್ರಾಸದಿಂದ ೩೨ ಮೈಲು ದಕ್ಷಿಣದಲ್ಲಿ ಸಮುದ್ರ ತೀರದಲ್ಲಿರುವ ಮಾಮಲ್ಲಪುರದ ಸುಪ್ರಸಿದ್ಧ ರಥಗಳ ನಿರ್ಮಾಣದಲ್ಲಿ ಕಂಡುಬರುತ್ತದೆ. ಇವೂ ಕೂಡ ಬಹುತರ ಇದೇ ಕಾಲದ ಕೃತಿಗಳಾಗಿವೆ.

ದ್ರಾವಿಡ ಶೈಲಿಯ ಮುಂದಿನ ವಿಕಾಸವನ್ನು ನಾವು ದಕ್ಷಿಣದ ನಾನಾ ಸ್ಥಾನಗಳಲ್ಲಿ ಪೂರ್ಣ ಹಾಗೂ ಧ್ವಸ್ತಅವಸ್ಥೆಗಳಲ್ಲಿ ಇರುವ ಜೈನ ಮಂದಿರಗಳಲ್ಲಿ ಕಾಣುತ್ತೇವೆ. ಅವುಗಳಲ್ಲಿ ಕೆಲವೊಂದನ್ನು ಮಾತ್ರ ಇಲ್ಲಿ ಉಲ್ಲೇಖಿಸುವುದು ಸಾಧ್ಯವಿದೆ. ತೀರ್ಥಹಳ್ಳಿಯ ಸಮೀಪದಲ್ಲಿರುವ ಹೊಂಬುಜವೂ ಒಂದು ಅತಿ ಪ್ರಾಚೀನ ಜೈನ ಕೇಂದ್ರವಾಗಿದೆ. ಕ್ರಿ. ಶ. ೮೯೭ ರಲ್ಲಿಯ ಒಂದು ಲೇಖದಲ್ಲಿ ಅಲ್ಲಿಯ ಮಂದಿರದ ಉಲ್ಲೇಖವಿದೆ. ಅಲ್ಲಿಯ ಅನೇಕ ಮಂದಿರಗಳು ೧೧ ನೆಯ ಶತಮಾನದಲ್ಲಿ ವೀರ ಸಾಂತರ ಮೊದಲಾದ ಸಾಂತರ ವಂಶೀಯರಾಜರಿಂದ ನಿರ್ಮಾಣವಾದದ್ದು ಕಂಡು

ಬರುತ್ತದೆ. ಇದರಲ್ಲಿ ಅದೇ ದ್ರಾವಿಡಶೈಲಿ, ಅದೇ ಅನುಕರಣ ರೀತಿ, ಸುಂದರವಾಗಿ ಕೆತ್ತಿದ ಕಂಭಗಳು ಪ್ರಭಾವಿತವಾಗಿ ಕಂಡುಬರುತ್ತವೆ. ಇವು ಆ ಕಾಲದ ವಿಶೇಷತೆಗಳಾಗಿವೆ. ಜೈನ ಮಠದ ಸಮೀಪದಲ್ಲಿ ಇರುವ ಆದಿನಾಥನ ಮಂದಿರವನ್ನು ವಿಶೇಷವಾಗಿ ಉಲ್ಲೇಖಿಸಬೇಕು. ಇದು ಎರಡು ಅಂತಸ್ತಿನದು. ಇದರ ಮೇಲಿನ ಭಾಗವು ಮೊನ್ನೆ ಮೊನ್ನೆವರೆಗೆ ತಗಡುಗಳಿಂದ ಮುಚ್ಚಿದುದಾಗಿತ್ತು. ಹೊರಗಿನ ಗೋಡೆಗಳ ಮೇಲೆ ಅತ್ಯುತ್ಕೃಷ್ಟವಾದ ಆಕೃತಿಗಳನ್ನು ಕೆತ್ತಲಾಗಿದೆ. ಆದರೆ ಅವು ಬಹಳಷ್ಟು ಖಂಡ–ತುಂಡುಗಳಾಗಿವೆ. ಮೇಲಿನ ಅಂತಸ್ತಿನ ಮೇಲೆ ಶಿಖರವು ಈಗಲೂ ಕಂಡುಬರುತ್ತದೆ. ಈ ಮಂದಿರದಲ್ಲಿ ದಕ್ಷಿಣ ಭಾರತೀಯ ಶೈಲಿಯ ಕಂಚಿನಮೂರ್ತಿಗಳ ಸಂಗ್ರಹವು ಬಹಳ ಒಳ್ಳೆಯದಿದೆ. ಇದೇ ಮಂದಿರದ ಸಮೀಪದ ಪರ್ವತದಲ್ಲಿ ಬಾಹುಬಲಿ ಮಂದಿರವು ಧ್ವಸ್ತಅವಸ್ಥೆಯಲ್ಲಿ ಉಳಿದುಕೊಂಡಿದೆ. ಆದರೆ ಅದರ ಗರ್ಭಗೃಹ, ಸುಖನಾಸೀ, ಮಂಟಪ ಮತ್ತು ಸುಂದರ ಸೋಪಾನ ಪಥ ಹಾಗೂ ಗರ್ಭಗೃಹದ ಸುತ್ತಲೂ ಇರುವ ಸುಂದರ ಮೂರ್ತಿಗಳು ಈಗಲೂ ದರ್ಶನೀಯವಾಗಿವೆ. ಈ ಕಲೆಯ ಪೂರ್ಣ ಪರಿಚಯವನ್ನು ಮಾಡಿಕೊಡುವಂಥದು ಷಂಚೆಕೊಟೆ ಬಸ್ತಿ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇದು ಗ್ರಾಮದ ಉತ್ತರದ ಹೊರವಲಯದಲ್ಲಿದೆ. ಒಂದು ಚಿಕ್ಕದ್ವಾರದ ಒಳಭಾಗದ ಪ್ರಾಂಗಣದಲ್ಲಿ ಹೋದ ಮೇಲೆ ನಮಗೆ ಒಂದು ವಿಶಾಲ ಸ್ತಂಭವು ಕಂಡುಬರುತ್ತದೆ. ಅದರ ಮೇಲೆ ಪ್ರಚಲಿತ ಸುಂದರ ಚಿತ್ರಕಲೆಯು ನಿರ್ಮಿತಿಯಿದೆ. ಮುಂದೆ ಮುಖ್ಯ ಮಂದಿರದ ಗರ್ಭಾಲಯದಲ್ಲಿ ಒಂದು ಸ್ತಂಭಮಯ ಮಂಟಪವು ಇದೆ. ಮಂಟಪದಲ್ಲಿಯೂ ಜೈನ ದೇವಿಯರು ಹಾಗೂ ಯಕ್ಷಿಣಿಯರು ಇವರ ಮೂರ್ತಿಗಳಿವೆ. ಗರ್ಭಗೃಹದ ಎರಡು ಪಾರ್ಶ್ವಗಳಲ್ಲಿಯೂ ಅಪೇಕ್ಷಾಕೃತ ಭಿತ್ತಿಗಳಿವೆ. ಈ ಮಂದಿರದ ಉತ್ತರದ ಮಗ್ಗುಲು ಒಂದು ಚಿಕ್ಕದಾದ ಪಾರ್ಶ್ವನಾಥ ಮಂದಿರವಿದೆ. ಅದರ ಮೇಲ್‌ಛಾವಣಿಯು ಚಿತ್ರಕಲೆಯಲ್ಲಿ ನಮಗೆ ಆ ಕಾಲದ ದಕ್ಷಿಣ ಭಾರತೀಯ ಶೈಲಿಯ ಸರ್ವೋತ್ಕೃಷ್ಟವೂ ಅದ್ಭುತವೂ ಆದ ಸ್ವರೂಪವು ಕಂಡುಬರುತ್ತದೆ. ಇದರ ಎದುರಿಗೆ ಚಂದ್ರನಾಥ ಮಂದಿರವಿದೆ. ಇದನ್ನು ಹಿಂದಿನಿಂದ ನಿರ್ಮಿಸಲಾಗಿದೆ.

ತೀರ್ಥಹಳ್ಳಿಯಿಂದ ಆಗುಂಬೆಯ ಮಾರ್ಗವಾಗಿ ಸಾಗುವ ದಾರಿಯಲ್ಲಿ ಗುಡ್ಡ ಎಂಬ ಹೆಸರಿನ ಮೂರು ಸಾವಿರ ಫೂಟುಗಳಿಗಿಂತಲೂ ಎತ್ತರವಾದ ಪರ್ವತವೊಂದಿದೆ. ಇದರ ಮೇಲೆ ಅನೇಕ ಭಗ್ನಾವಶೇಷಗಳು ನೋಡಲಿಕ್ಕೆ ಸಿಕ್ಕುತ್ತವೆ: ಅವು ಆ ಸ್ಥಾನವನ್ನು ಪ್ರಾಚೀನ ಜೈನ ಕ್ಷೇತ್ರವೆಂದು ಸಿದ್ಧಗೊಳಿಸುತ್ತವೆ. ಒಂದು ಪಾರ್ಶ್ವನಾಥ ಮಂದಿರವು ಈಗಲೂ ಈ ಪರ್ವತದಲ್ಲಿ ಶೋಭಿಸುತ್ತಿದೆ. ಅದು ಸುತ್ತುಮುತ್ತಲಿನ ಸುವಿಸ್ತೃತ ಶ್ರೇಣಿಗಳನ್ನೂ ಉರ್ವರಾ ಘಟ್ಟಗಳಿಗೂ ಭವ್ಯತೆಯನ್ನು ನೀಡಿದೆ. ಪರ್ವತದ ಶಿಖರದ ಮೇಲೆ ಒಂದು ಪ್ರಾಕೃತಿಕ ಜಲಕುಂಡವಿದೆ. ಇದರ ತೀರದಲ್ಲಿ ಮಂದಿರದ ಉಚ್ಚ ಅಧಿಷ್ಠಾನವಿದೆ. ದ್ವಾರವನ್ನು ಸುಂದರವಾಗಿ ಕೆತ್ತಲಾಗಿದೆ

ಎದುರಿಗೆ ಮಾನಸ್ತಂಭವಿದೆ. ಮಂಟಪದ ಸ್ತಂಭಗಳೂ ಚಿತ್ರಮಯವಾಗಿವೆ. ಗರ್ಭ ಗೃಹದಲ್ಲಿ ಪಾರ್ಶ್ವನಾಥನ ವಿಶಾಲ ಕಾಯೋತ್ಸರ್ಗ ಮೂರ್ತಿಯು ಇರುತ್ತದೆ. ಇದಕ್ಕೆ ಉದ್ದವಾದ ಒಂದು ನಾಗವು ಸುತ್ತಿದೆ; ಅಲ್ಲದೆ ಮೇಲೆ ಸಪ್ತಮುಖಿಯಾದ ತನ್ನ ಹೆಡೆಯಿಂದ ನೆಳಲನ್ನು ಹಿಡಿದಿದೆ. ಮೂರ್ತಿಯ ಶರೀರದ ಮೇಲೆ ನಾಗರ ಎರಡು ಚಿಹ್ನಗಳು ಇವೆ. ಹೀಗೆ ಇದ್ದುದು ಇನ್ನೆಲ್ಲಿಯೂ ಕಂಡುಬರುವುದಿಲ್ಲ. ಪರ್ವತದಿಂದ ಕೆಳಗೆ ನಾವು ಇಳಿಯುತ್ತ ಬರುವಾಗ ಜೈನ ಮಂದಿರಗಳ ಭಗ್ನಾವ ಶೇಷಗಳನ್ನು ಕಾಣುತ್ತೇವೆ. ತೀರ್ಥಂಕರರ ಸುಂದರ ಮೂರ್ತಿಗಳು ಚಿತ್ರಕಲೆಯಿಂದ ಕೂಡಿದ ಕಲ್ಲಿನ ತುಂಡುಗಳು ಅಲ್ಲಲ್ಲಿ ಬಿದ್ದುದನ್ನು ಕಾಣುತ್ತೇವೆ. ಇವೆಲ್ಲವುಗಳಿಂದ ಈ ಸ್ಥಾನದ ಪ್ರಾಚೀನ ಸಮೃದ್ಧ ಇತಿಹಾಸವು ನಮ್ಮ ಬಗೆಗಣ್ಣಿನೆದುರಿಗೆ ಸುಳಿದು ಹೋಗುತ್ತದೆ.

ಧಾರವಾಡ ಜಿಲ್ಲೆಯಲ್ಲಿ ಗದಗ ರೈಲ್ವೆ ಸ್ಟೇಶನದಿಂದ ಏಳು ಮೈಲು ದಕ್ಷಿಣ–ಪೂರ್ವ ದಿಸೆಯಲ್ಲಿ ಲಕ್ಕುಂಡಿ (ಲೊಕ್ಕಿ ಗುಂಡಿ) ಎಂಬ ಹೆಸರಿನ ಗ್ರಾಮವಿದೆ. ಇಲ್ಲಿ ಎರಡು ಸುಂದರ ಜೈನಮಂದಿರಗಳಿವೆ. ಇವುಗಳಲ್ಲಿ ದೊಡ್ಡ ಮಂದಿರದಲ್ಲಿ ಕ್ರಿ. ಶ. ೧೧೭೨ ರ ಶಿಲಾಲೇಖವಿದೆ. ಇದೂ ಕೂಡ ಐಹೊಳೆ ಮತ್ತು ಪಟ್ಟದಕಲ್ಲಿನ ಮಂದಿರ ಗಳಂತೆ ವಿಶಾಲವಾದ ಶಿಲೆಯ ತುಂಡುಗಳಿಂದಲೇ, ಯಾವ ಸುಣ್ಣಗಂಚುಗಳನ್ನೂ ಉಪಯೋಗಿಸದೆ ನಿರ್ಮಿಸಲಾಗಿದೆ. ನಾನಾ ಭೂಮಿಕೆಗಳ ಮೂಲಕ ಮೇಲೇಳುತ್ತ ನಡೆದಂತಿರುವ ದ್ರಾವಿಡ ಪದ್ಧತಿಯ ಶಿಖರವು ಸುಸ್ಪಷ್ಟವಾಗಿ ಕಂಡುಬರುತ್ತದೆ. ಇದಕ್ಕೆ ಕಪ್ಪುಶಿಲೆಯನ್ನು ಉಪಯೋಗಿಸಲಾಗಿದೆ. ಈ ಶಿಲೆಯಿಂದ ಸ್ಥಾಪತ್ಯದ ಲ್ಲಿಯೂ ಕೆಲವೊಂದು ಸೂಕ್ಷ್ಮತೆ ಮತ್ತು ಲಾಲಿತ್ಯಗಳ ವೈಶಿಷ್ಟ್ಯವು ಬಂದುಬಿಟ್ಟದೆ. ಮೇಲೆ ಮೇಲೆ ಏರುತ್ತಾ ಹೋದ ಭೂಮಿಕೆಗಳಲ್ಲಿ ಹೆಚ್ಚೆಚ್ಚು ಸೂಕ್ಷ್ಮತೆ ಮತ್ತು ಲಾಲಿತ್ಯಗಳು ಕಂಡುಬರುತ್ತವೆ. ಮೂಲೆ ಮೂಲೆಗಳಲ್ಲಿ, ಮಧ್ಯದಲ್ಲಿಯೂ ಕಿರೀಟ ಗಳನ್ನು ನಿರ್ಮಿಸುವುದರಿಂದ ಒಂದು ನವೀನ ಕಲಾತ್ಮಕತೆಯನ್ನು ಉತ್ಪನ್ನ ಮಾಡ ಲಾಗಿದೆ. ಇದು ಮುಂದಿನ ಕಾಲದ ಕಲೆಯಲ್ಲಿ ದಿನ–ದಿನಕ್ಕೆ ಹೆಚ್ಚುತ್ತ ಹೋಗಿದೆ. ಮೇಲಿನ ಅಂತಸ್ತಿನಲ್ಲಿಯೂ ಸಹ ಗರ್ಭಗೃಹ ಮತ್ತು ತೀರ್ಥಂಕರರ ಮೂರ್ತಿಗ ಳಿವೆ. ಶಿಖರವು ವಿಶೇಷ ಎತ್ತರವಾಗಿದ್ದು, ಅದರಿಂದ ಒಂದು ಹೆಚ್ಚಿನ ಭವ್ಯತೆಯು ನಿರ್ಮಾಣವಾಗಿದೆ. ಶಿಖರದ ಸ್ತೂಪಿಕೆಗಳ ನಿರ್ಮಾಣದಲ್ಲಿ ಒಂದು ವಿಶೇಷ ನಂತು ಲನವು ಕಂಡುಬರುತ್ತದೆ. ಗೋಡೆಗಳ ಮೇಲೆಯೂ ಚಿತ್ರಕಲೆಯು ವಿಶೇಷವಾಗಿದೆ: ವೈಶಿಷ್ಟ್ಯದಿಂದಲೂ ಕೂಡಿದೆ. ಚಿಕ್ಕ ಚಿಕ್ಕ ಕಮಾನುಗಳ ಆಕಾರದ ಮೇಲೆ ಕೀರ್ತಿ ಮುಖಗಳ ನಿರ್ಮಾಣವು ಒಂದು ನವೀನ ಕಲೆಯಾಗಿದೆ. ಇದು ಹಿಂದಿನ ಕಲೆಗಳಲ್ಲಿ ಕಂಡುಬರುವುದಿಲ್ಲ. ಇಂಥ ಪ್ರತಿಯೊಂದು ಕಮಾನಿನಲ್ಲಿಯೂ ಪದ್ಮಾಸನಯುಕ್ತ ಜಿನಬಿಂಬವನ್ನು ಕೆತ್ತಲಾಗಿದೆ. ಗೋಡೆಗಳು ಸ್ತಂಭಾಕೃತಿಗಳಿಂದ ವಿಭಾಜಿತ ಗೊಂಡಿವೆ. ಅವುಗಳ ಮಧ್ಯದಲ್ಲಿ ಚಿಕ್ಕ ಚಿಕ್ಕ ಮಂಟಪಾಕೃತಿಗಳನ್ನು ನಿರ್ಮಿಸಿದೆ,

ಇಲ್ಲಿ ಭಗವಾನ್ ಮಹಾವೀರನ ದೊಡ್ಡದಾದ ಸುಂದರ ಮೂರ್ತಿಯು ವಿರಾಜಮಾನ ವಾಗಿತ್ತು. ಆದರೆ ಈಗ ಕೆಲವರ್ಷಗಳಿಂದ ನಿಲುಪ್ತವಾಗಿ ಹೋಗಿದೆ. ಅದು ನಮ್ಮ ದುರ್ಭಾಗ್ಯವು. ನಡುವಿನ ಮಂಟಪದ ದ್ವಾರದ ಮೇಲೆ, ಮೇಲೆ ಹೇಳಿದ ಲೇಖನವನ್ನು ಕೆತ್ತಲಾಗಿದೆ. ಮೇಲೆ ಪದ್ಮಾಸನದಲ್ಲಿರುವ. ಜಿನಮೂರ್ತಿಯಿದೆ- ಅದರ ಎರಡೂ ಮಗ್ಗಲಿಗೆ ಚಂದ್ರ–ಸೂರ್ಯರನ್ನು ತೋರಿಸಲಾಗಿದೆ. ಲಕ್ಕುಂಡಿಯ ಈ ಜೈನ ಮಂದಿರವು ದ್ರಾವಿಡ ವಾಸ್ತು–ಶಿಲ್ಪವನ್ನು ಬಹಳಷ್ಟು ಪ್ರಭಾವಿತಗೊಳಿಸಿದೆ.

ದ್ರಾವಿಡ ವಾಸ್ತುಕಲೆಯು ಚಾಲುಕ್ಯ ಕಾಲದಲ್ಲಿ ಯಾವ ಪ್ರಕಾರ ಪುಷ್ಟವಾಯಿ ತೆಂಬುದನ್ನು ನಾವು ಈ ಮೊದಲೇ ನೋಡಿದ್ದೇವೆ. ಆದರ ತರುವಾಯ ಹೊಯ್ಸಳ ರಾಜವಂಶದ ಕಾಲದಲ್ಲಿ (೧೩ ನೆಯ ಶತಮಾನದಲ್ಲಿ) ಅದರೊಡನೆ ಮತ್ತಷ್ಟು ವೈಶಿಷ್ಟ್ಯ ಹಾಗೂ ಸೌಷ್ಠವಗಳು ಉತ್ಪನ್ನವಾಗುವವು. ಅವುಗಳ ವಿಶೇಷತೆಯು ಅಲಂಕರಣಗಳ ರೀತಿಯಲ್ಲಿ ಕಂಡುಬರುವ ಸಮುನ್ನತಿಯಾಗಿದೆ. ಈ ಕಾಲದ ವಾಸ್ತು-ಕಲೆಯು ಕೇವಲ ಪೂರ್ವಕಾಲೀನ ಪಾಷಾಣೋತ್ಕೀರ್ಣ ಕಲೆಯನ್ನು ಮಾತ್ರ ಮುಂದುವರಿಸುವದೆಂತಲ್ಲ· ಆದರೆ ಅವರ ಮೇಲೆ ಆ ಕಾಲದ ದಕ್ಷಿಣ ಭಾರತದ ಚಂದನ, ಹಸ್ತಿದಂತ ಮತ್ತು ಧಾತುಗಳ ನಿರ್ಮಿತಿಯ ಪ್ರಭಾವವು ಕೂಡ ಆಗಿದೆ. ಇದರ ಫಲಸ್ವರೂಪವಾಗಿ ಕಲ್ಲಿ ನಲ್ಲಿಯೂ ಕಲೆಗಾರರ ಕೈಯು ಹೆಚ್ಚು ಕೌಶಲ್ಯಪೂರ್ಣವಾಗಿ ನಡೆದಿದೆ. ಈ ಕುಶ ಲತೆಯ ದರ್ಶನವು ನಮಗೆ ಜಿನನಾಥಪುರ ಮತ್ತು ಹಳೇಬೀಡಿನ ಜೈನಮಂದಿರ ಗಳಲ್ಲಿ ಆಗುತ್ತದೆ. ಜಿನನಾಥಪುರವು ಶ್ರವಣಬೆಳಗೊಳದ ಉತ್ತರಕ್ಕೆ ಒಂದು ಮೈಲಿನ ಮೇಲೆ ಇದೆ. ಊರ ಹೆಸರೇ ಹೇಳುವಂತೆ ಅದು ಜೈನಮಂದಿರಕ್ಕಾಗಿ ಹೆಸ ರಾಗಿತ್ತು. ಇಲ್ಲಿಯ ಶಾಂತಿನಾಥ ಮಂದಿರವು ವಿಶೇಷ ಉಲ್ಲೇಖನೀಯವಾಗಿದೆ. ಇದನ್ನು ರೇಚಿಮಯ್ಯ ಎಂಬ ಹೆಸರಿನ ಸಜ್ಜನನು ಕ್ರಿ. ಶ. ೧೨೦೦ ಸುಮಾರಿನಲ್ಲಿ ನಿರ್ಮಿಸಿ ಸಾಗರನಂದಿ ಸಿದ್ಧಾಂತದೇವನಿಗೆ ಒಪ್ಪಿಸಿದ್ದಾನೆ. ಗರ್ಭಗೃಹದ ಲ್ಲಿರುವ ದ್ವಾರಪಾಲರ ಮೂರ್ತಿಗಳು ಪ್ರೇಕ್ಷಣೀಯವಾಗಿವೆ. ನವರಂಗದ ಸ್ತಂಭಗಳ ಮೇಲೆ ಬಹು ಸುಂದರ ಹಾಗೂ ಸೂಕ್ಷ್ಮ ಚಿತ್ರಕಲೆಯಿದೆ ಮೇಲ್ಛಾವಣಿಯ ಕೆತ್ತನೆಯೂ ನಹ ನೋಡಲು ತಕ್ಕುದಾಗಿದೆ ಹೊರಗಿನ ಗೋಡೆಗಳ ಮೇಲೆ ರೇಖಾ ಚಿತ್ರಗಳನ್ನು ಮತ್ತು ಬಳ್ಳಿ-ಮೊಗ್ಗುಗಳನ್ನು ಕೆತ್ತಲಾಗಿದೆ. ತೀರ್ಥಂಕರರು ಹಾಗೂ ಯಕ್ಷ-ಯಕ್ಷಿಣಿಯರ ಮೂರ್ತಿಗಳೂ ಸಹ ಸೌಂದರ್ಯಪೂರ್ಣವಾಗಿವೆ. ಗರ್ಭಗೃಹ ದಲ್ಲಿ ಭಗವಾನ್ ಶಾಂತಿನಾಥನ ಸಿಂಹಾಸನಸ್ಥ ಮೂರ್ತಿಯೂ ಕೌಶಲ್ಯಪೂರ್ಣರೀತಿ ಯಲ್ಲಿ ನಿರ್ಮಿಸಿದುದಾಗಿದೆ.

ಹಳೇಬೀಡಿನಲ್ಲಿ ಹೊಯ್ಸಳೇಶ್ವರನ ಮಂದಿರದ ಸಮೀಪದಲ್ಲಿ ಹಳ್ಳಿ ಎಂಬ ಹೆಸರಿನ ಊರಲ್ಲಿ ಒಂದೇ ಆವಾರದ ಒಳಗೆ ಮೂರು ಜಿನಮಂದಿರಗಳಿವೆ. ಇವುಗಳಲ್ಲಿ ಪಾರ್ಶ್ವನಾಥ ಮಂದಿರವು ವಿಶೇಷ ಉಲ್ಲೇಖನೀಯವಾಗಿದೆ. ಮಂದಿರದ ಅಧಿಷ್ಠಾನ ಹಾಗೂ ಬಾಹ್ಯ ಭಿತ್ತಿಗಳ ಮೇಲೆ ಬಹಳ ಸುಂದರ ಆಕೃತಿಗಳಿವೆ. ನವರಂಗ ಮಂಟಪ

ದಲ್ಲಿ ಶಿಖರದಿಂದ ಕೂಡಿದ ಅನೇಕ ವೇದಿಕೆಗಳಿವೆ. ಅವುಗಳಲ್ಲಿ ಮೊದಲು ೨೪ ತೀರ್ಥಂಕರರ ಮೂರ್ತಿಗಳನ್ನು ಪ್ರತಿಷ್ಠಿಸಿರಬೇಕು. ಮೇಲ್ ಛಾವಣಿಯ ಚಿತ್ರಕಲೆಯು ಬಹಳ ಉತ್ಕೃಷ್ಟವಾಗಿದೆ. ಇಷ್ಟು ಒಳ್ಳೆಯ ಕಲೆಯನ್ನು ಹಳೇಬೀಡಿನ ಯಾವ ಮಂದಿರದಲ್ಲಿಯೂ ಕಾಣುವುದಿಲ್ಲ. ಈ ಮೇಲ್‌ಛಾವಣಿ ಹನ್ನೆರಡು ಅತಿಸುಂದರ ಆಕೃತಿಗಳುಳ್ಳ ಕಪ್ಪುಶಿಲೆಯ ಕಂಭಗಳ ಮೇಲೆ ಆಧಾರಿತವಾಗಿದೆ. ಈ ಕಂಭಗಳ ರಚನೆಯು, ಕೆತ್ತನೆ ಹಾಗೂ ನುಣುಪುಗೊಳಿಸುವುದರಲ್ಲಿ ನೋಡತಕ್ಕಂತಹದಾಗಿದೆ. ಇದರಲ್ಲಿ ಪ್ರೇಕ್ಷಕರು ಈಗಲೂ ತಮ್ಮ ಮುಖದ ಪ್ರತಿಬಿಂಬವನ್ನು ಕನ್ನಡಿಯಲ್ಲಿ ಕಾಣು ವಂತೆ ಕಾಣುತ್ತಾರೆ. ಪಾರ್ಶ್ವಸಾಧನ ಹದಿನಾಲ್ಕು ಫೂಟು ಎತ್ತರ ವಿಶಾಲ ಮೂರ್ತಿಯು ಸಪ್ತಫಣಿ ನಾಗಯುಕ್ತವಾಗಿದೆ. ಮೂರ್ತಿಯ ಮುಖಮುದ್ರೆಯು ನಿಜವಾದ ಯೋಗಿಯ ಧ್ಯಾನ ಮತ್ತು ಶಾಂತಿಯ ಛಾಯೆಯನ್ನು ಹೊಂದಿದೆ. ಉಳಿದ ಆದಿನಾಥ ಮತ್ತು ಶಾಂತಿನಾಥ ಮಂದಿರಗಳು ಕೂಡ ತಮ್ಮ ತಮ್ಮ ಸೌಂದರ್ಯಗಳನ್ನು ಕಾಯ್ದುಕೊಂಡಿವೆ. ಈ ಎಲ್ಲ ಮಂದಿರಗಳು ಹನ್ನೆರಡನೆಯ ಶತಮಾನದ ಕೃತಿ ಗಳಾಗಿವೆ.

ಹೊಯ್ಸಳ ಕಾಲದ ತರುವಾಯ ವಿಜಯನಗರ ರಾಜ್ಯದ ಯುಗವು ಪ್ರಾರಂಭ ವಾಗುತ್ತದೆ. ಇದರಲ್ಲಿ ದ್ರಾವಿಡ ವಾಸ್ತು-ಕಲೆಯು ಇನ್ನಷ್ಟು ವಿಕಾಸವನ್ನು ಹೊಂದಿತು. ಈ ಕಾಲದ ಜೈನ ಕೃತಿಗಳಿಗೆ ಉದಾಹರಣೆಗಳು ಗಾಣಿಗಿತ್ತಿ, ತಿರುಮಲ್ಲಾಇ ತಿರುಪೆರುತ್ತಿಕುಂಡರಸಮ, ತಿರುಪ್ಪನಮೂರ, ಮೂಡಬಿದ್ರಿ ಮೊದಲಾದ ಸ್ಥಾನ ಗಳಲ್ಲಿ ಪ್ರಚುರತೆಯಿಂದ ಕಂಡುಬರುತ್ತವೆ ಇವುಗಳಲ್ಲಿ ಸಧ್ಯಕ್ಕೆ ಮೂಡಬಿದ್ರಿಯ ಚಂದ್ರನಾಥ ಮಂದಿರವು ಎಲ್ಲಕ್ಕೂ ಪ್ರಸಿದ್ಧವಾಗಿದೆ. ಇದರ ನಿರ್ಮಾಣವು ಹದಿನಾ ಲ್ಕನೆಯ ಶತಮಾನದಲ್ಲಿ ಆಗಿದೆ. ಈ ಮಂದಿರವು ಒಂದು ಆವಾರದ ಒಳಗೆ ಇದೆ. ದ್ವಾರದಿಂದ ಪ್ರವೇಶ ಮಾಡಿದಮೇಲೆ ಪ್ರಾಂಗಣದಲ್ಲಿ ಅತಿಸುಂದರ ಮಾನಸ್ತಂಭದ ದರ್ಶನವಾಗುತ್ತದೆ. ಮಂದಿರದಲ್ಲಿ ಮೂರು ಮಂಟಪಶಾಲೆಗಳು ಇವೆ. ಇವುಗಳಲ್ಲಿ ಹಾಯ್ದು ನಾವು ವಿಮಾನದಲ್ಲಿ—ಶಿಖರಯುಕ್ತ ಗರ್ಭಗೃಹ—ಪ್ರವೇಶಿಸುತ್ತೇವೆ. ಮಂಟಪಗಳಿಗೆ ತೀರ್ಥಂಕರಮಂಟಪ, ಗದ್ದಿಮಂಟಪ ಮತ್ತು ಚಿತ್ರಮಂಟಪ ಎಂದು ಬೇರೆ ಬೇರೆಯಾಗಿ ಹೆಸರುಗಳಿವೆ. ಮಂದಿರದ ಬಾಹ್ಯರಚನೆಯು ಕಟ್ಟಿಗೆಯ ಕೆಲಸದ ಸ್ಮರಣೆಯನ್ನುಂಟುಮಾಡುತ್ತದೆ. ಆದರೆ ಒಳಗಿನ ಎಲ್ಲ ರಚನೆಯೂ ಪಾಷಾಣೋ ಚಿತವಾಗಿದೆ. ಕಂಭಗಳು ಬಹಳ ದಪ್ಪ ಹಾಗೂ ಕೆಲವೊಂದು ಹನ್ನೆರಡು ಫೂಟುಗ ಗಳಷ್ಟು ಎತ್ತರವಾಗಿವೆ. ಅವುಗಳ ಕೆಳಭಾಗವು ಚೌಕೋನ ಆಕೃತಿಯಲ್ಲಿದ್ದು, ಉಳಿದ ಮೇಲ್ಭಾಗವು ಗೋಲಾಕಾರದಲ್ಲಿ ಮತ್ತು ಕಮಲದ ಪಕಳಿಗಳಿಂದ ಅಲಂಕೃತ ವಾಗಿ ಇವೆ. ಚಿತ್ರಮಂಟಪದ ಕಂಭಗಳನ್ನು ವಿಶೇಷ ರೂಪದಿಂದ ಕೆತ್ತಲಾಗಿದೆ. ಇವುಗಳ ಮೇಲೆ ಕಮಲದಳಗಳ ಕೆತ್ತನೆಯು ಅಸಾಧಾರಣ ನೌಷ್ಠವದಿಂದ ಕೂಡಿದೆ. ಬಹು ಸಾವಧಾನತೆಯಿಂದ ಮಾಡಿದ್ದಾಗಿದೆ.

ಜೈನ ವಿಹಾರದ ಸರ್ವ ಪ್ರಥಮ ಉಲ್ಲೇಖವು ಪಹಾಡಪುರದ (ರಾಜಶಾಹೀ ಜಿಲ್ಲೆ, ಬಂಗಾಲ) ಆ ತಾಮ್ರ ಶಾಸನದಲ್ಲಿ ದೊರೆಯುತ್ತದೆ. ಅದರಲ್ಲಿ ಪಂಚಸ್ತೂಪ ನಿಕಾಯ ಅಥವಾ ಕುಲದ ನಿರ್ಗ್ರಂಥ ಶ್ರಮಣಾಚಾರ್ಯನಾದ ಗುಹನಂದೀ ಹಾಗೂ ಅವನ ಶಿಷ್ಯ-ಪ್ರಶಿಷ್ಯರಿಂದ ಅಧಿಷ್ಠಿತಗೊಂಡ ವಿಹಾರ ಮಂದಿರದಲ್ಲಿ ನಡೆಯುವ ಅರ್ಹಂತನ ಪೂಜೆ ಅರ್ಚನೆಗಳಿಗಾಗಿ ಅಕ್ಷಯದಾನದನ್ನಿತ್ತ ಉಲ್ಲೇಖವಿದೆ. ಇದು ಗುಪ್ತ ಸಂ. ೧೫೯ (ಕ್ರಿ. ಶ. ೪೭೯) ರಲ್ಲಿ ರಚಿಸಿದ್ದಾಗಿದೆ. ಲೇಖದಲ್ಲಿ ಈ ವಿಹಾರದ ಸ್ಥಿತಿಯನ್ನು ಮಂಡಾಕೃತಿಯೆಂದು ಹೇಳಿದೆ. ಪಹಾಡಪುರದ ಶೋಧನೆಯಲ್ಲಿ ದೊರೆತ ಅವಶೇಷವು ಇದೇ ವಿಹಾರದ್ದು ಬಹುತರ ಇರಬೇಕು. ಏಳನೆಯ ಶತಮಾನದ ತರುವಾಯ ಯಾವಾಗಲೋ ಈ ವಿಹಾರದ ಮೇಲೆ ಬೌದ್ಧರ ಅಧಿಕಾರವು ಪ್ರಸ್ಥಾಪಿತವಾಯಿತು. ಮುಂದೆ ಅದು ಸೋಮಪುರ 'ಮಹಾವಿಹಾರ' ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. ಆದರೆ ಏಳನೆಯ ಶತಮಾನದಲ್ಲಿ ಹುವೇನ್‌ತ್ಸಾಂಗನು ತನ್ನ ಯಾತ್ರಾವರ್ಣನೆಯಲ್ಲಿ ಈ ವಿಹಾರದ ಉಲ್ಲೇಖವನ್ನೇನೂ ಮಾಡಿಲ್ಲ. ಇದರಿಂದ ಅಲ್ಲಿಯವರೆಗೆ ಇದು ಬೌದ್ಧ ಕೇಂದ್ರವಾಗಿರಲಿಲ್ಲವೆಂದು ಸ್ಪಷ್ಟವಾಗುತ್ತದೆ. ಬೆಂಜಾಮಿನ ರೋಲೆಂಡನ (ಆರ್ಟ ಎಂಡ ಆರ್ಕಿಟೆಕ್ಚರ ಆಫ್ ಇಂಡಿಯಾ) ಮತಕ್ಕನುಸರಿಸಿ ಬಹುತರ ಇದು ಮೊದಲು ಬ್ರಾಹ್ಮಣರ ಕೇಂದ್ರವಾಗಿರಬೇಕು. ತರುವಾಯ ಇದರ ಮೇಲೆ ಬೌದ್ಧರ ಅಧಿಕಾರವು ಉಂಟಾಯಿತು. ಆದರೆ ಈ ಮಾತು ಸಂಪೂರ್ಣವಾಗಿ ಇತಿಹಾಸಕ್ಕೆ ವಿರುದ್ಧವಾಗಿದೆ. ಮೊದಲನೆಯದಾಗಿ ಪ್ರಾಚೀನ ಕಾಲದಲ್ಲಿ ಈ ಪ್ರದೇಶದಲ್ಲಿ ಬ್ರಾಹ್ಮಣರ ಇಂಥ ಕೇಂದ್ರವಾಗಲಿ, ದೇವಾಲಯವಾಗಲಿ ಸ್ಥಾಪನೆಯಾದುದು ಕಂಡುಬರುವುದಿಲ್ಲ. ಅದಕ್ಕೆ ಯಾವ ಪ್ರಮಾಣಗಳೂ ದೊರೆಯುವುದಿಲ್ಲ. ಇನ್ನು ಎರಡನೆಯದಾಗಿ ಬೌದ್ಧರು ಯಾವಾಗಲೂ ಬ್ರಾಹ್ಮಣ ಆಯತನಗಳ ಅಧಿಕಾರವನ್ನು ನಡೆಯಿಸಿದ ಉದಾಹರಣೆಗಳು ಲಭಿಸುವದಿಲ್ಲ. ಈ ತಾಮ್ರ ಪಟ ಲೇಖನದ ಪ್ರಕಟಣೆಯಿಂದ ಇಲ್ಲಿ ಐದನೆಯ ಶತಮಾನದಲ್ಲಿ ಜೈನ ವಿಹಾರವು ಇತ್ತೆಂದು ಸಿದ್ಧವಾಗುತ್ತದೆ. ಈ ಸ್ಥಾನದ ಪ್ರಾಚೀನ ಹೆಸರು ವಟಗೋಹಾಲೀ ಎಂದಿತ್ತು. ಆ ಕಾಲದಲ್ಲಿ ಇಲ್ಲಿ ಒಂದು ಬಹು ದೊಡ್ಡ ವಟ ವೃಕ್ಷವು ಇದ್ದಿರುವ ಸಂಭವವಿದೆ. ಅದರ ನೆರೆಹೊರೆಯಲ್ಲಿ ಜೈನ ಮುನಿಗಳು ವಾಸ ಮಾಡಲು ಯೋಗ್ಯವಾದ ಗುಹೆಗಳ ಸಾಲು ಇರಬೇಕು. ಅದರಿಂದ ಇದರ ಹೆಸರು ವಟ-ಗೋಹಾಲೀ (ವಟ-ಗುಹೆ-ಆವಲೀ) ಎಂದು ಬಿದ್ದಿರಬೇಕು. ಷಟ್‌ಖಂಡಾಗಮದ ಪ್ರಕಾಂಡ ವಿದ್ವಾಂಸನಾದ ಟೀಕಾಕಾರ ವೀರಸೇನ ಮತ್ತು ಜಿನಸೇನ ಇವರು ಪಂಚಸ್ತೂಪಾನ್ವಯದವರಾಗಿದ್ದರು. ಇದನ್ನು ಈಗಾಗಲೇ ಬೇರೆಡೆಗೆ ಹೇಳಿದೆಯಷ್ಟೆ. ಹೀಗಾಗಿ ಈ ಜೈನ ವಿಹಾರವು ವಿದ್ಯೆಯ ಮಹಾನ್ ಕೇಂದ್ರವಾಗಿದ್ದರೆ ಆಶ್ಚರ್ಯಪಡುವ ಕಾರಣವಿಲ್ಲ. ಕ್ರಿ. ಶ. ದ ಪ್ರಾರಂಭದ ಶತಮಾನಗಳಲ್ಲಿ ಪೂರ್ವಭಾಗದಲ್ಲಿ ಈ ವಟ-ಗೋಹಾಲೀ ವಿಹಾರವು, ಉತ್ತರದಲ್ಲಿ ಮಥುರೆಯ ವಿಹಾರವು, ಪಶ್ಚಿಮದ

ಸೌರಾಷ್ಟ್ರದಲ್ಲಿ ಗಿರನಾರದ ಚಂದ್ರಗುಹೆಯು ಮತ್ತು ದಕ್ಷಿಣದಲ್ಲಿ ಶ್ರವಣಬೆಳ್ಗೊಳವು ಜೈನ ಕೇಂದ್ರಗಳಾಗಿದ್ದುವು. ಇವು ದೇಶದ ನಾಲ್ಕು ದಿಕ್ಕುಗಳಲ್ಲಿ ಧರ್ಮ, ಶಿಕ್ಷಣ ಪ್ರಚಾರದ ಸುದೃಢ ಸ್ಥಾನಗಳಾಗಿದ್ದುವು.

ಸಂಶೋಧನೆಯಿಂದ ಅಭಿವ್ಯಕ್ತವಾದ ಪಹಾಡಪುರ ವಿಹಾರವು ವಿಶಾಲ ಆಕಾರವುಳ್ಳದೂ, ತನ್ನ ರಚನೆ ಹಾಗೂ ನಿರ್ಮಿತಿಗಳಲ್ಲಿ ಅಪೂರ್ವವಾದುದೂ ಎಂದು ಪರಿಗಣಿಸಲಾಗಿದೆ. ಇದರಲ್ಲಿ ಒಂದು ವಿಶಾಲವಾದ ಚೌಕವಿದೆ. ಅದರಲ್ಲಿ ನಾಲ್ಕೂ ದಿಕ್ಕುಗಳಲ್ಲಿಯೂ ೧೭೫ ಕ್ಕಿಂತಲೂ ಹೆಚ್ಚು ಗುಹೆಗಳಾಕಾರದ ಕೋಣೆಗಳಿವೆ. ಈ ಚೌಕಕ್ಕೆ ನಾಲ್ಕೂ ದಿಕ್ಕುಗಳಲ್ಲಿ ಒಂದೊಂದು ವಿಶಾಲ ದ್ವಾರವಿದೆ. ಚೌಕದ ಮಧ್ಯದಲ್ಲಿ ಸ್ವಸ್ತಿಕ ಆಕಾರದ ಸರ್ವತೋಭದ್ರ ಮಂದಿರವಿದೆ. ಇದು ಸುಮಾರು ೩೫೦ ಫೂಟು ಉದ್ದಗಲಗಳಿಂದ ಕೂಡಿದೆ. ಇದರ ನಾಲ್ಕೂ ಮಗ್ಗಲು ಪ್ರದಕ್ಷಿಣೆಗೆ ಸ್ಥಾನವನ್ನು ನಿರ್ಮಿಸಲಾಗಿದೆ. ಮಂದಿರವು ಮೂರು ಅಂತಸ್ತುಗಳಲ್ಲಿ ಇತ್ತು. ಅದರ ಎರಡು ಅಂತಸ್ತುಗಳಂತೂ ಪ್ರತ್ಯಕ್ಷ ಕಂಡುಬರುತ್ತವೆ. ವಿದ್ವಾಂಸರು ಈ ವಿಹಾರದ ರಚನೆಯನ್ನು ಬಹು ವಿಲಕ್ಷಣವೆಂದೂ ಅಪೂರ್ವವೆಂದೂ ಮನ್ನಿಸಿದ್ದಾರೆ. ಇದರ ತುಲನೆಯನ್ನು ಬ್ರಹ್ಮದೇಶದ ಪೈಗಾಮ ಹಾಗೂ ಜಾವಾದೊಳಗಿನ ಲೋರೋ ಜೊಂಗ್ರಾಗಂ ಮೊದಲಾದ ಮಂದಿರಗಳ ಕೂಡ ಮಾಡಿದ್ದಾರೆ. ಆದರೆ ಸ್ಪಷ್ಟವಾಗಿಯೂ ಜೈನಪರಂಪರೆಯಲ್ಲಿ ಚತುರ್ಮುಖ ಮಂದಿರಗಳ ಪ್ರಚಾರವು ಸರಿಯಾಗಿ ನಡೆಯುತ್ತ ಬಂದಿದೆ. ಆ ಬುಗಿರಿಯಲ್ಲಿರುವ ಚತುರ್ಮುಖ ಮಂದಿರದಲ್ಲಿಯೂ ಇದು ಕಂಡುಬರುತ್ತದೆ. ದೀಕ್ಷಿತಮಹೋದಯನು ಇದು ಸಾಧ್ಯಹೆಂದೂ ಸೂಚಿಸಿದ್ದಾನೆ. (ಭಾ. ವಿ. ಭ. ಇತಿ. ಭಾಗ ೫-೬೩೭.)

ಮಧ್ಯಭಾರತದಲ್ಲಿ ಪ್ರವೇಶಿಸಿದ ಮೇಲೆ ನಾವು ಎರಡು ಪ್ರಾಚೀನ ಜೈನ ತೀರ್ಥಗಳ ದರ್ಶನವನ್ನು ಮಾಡುತ್ತೇವೆ. ಇವುಗಳ ಪ್ರಸಿದ್ಧಿಯೂ ಕೆಲವು ಶತಮಾನಗಳವರೆಗೂ ಇತ್ತು. ಇಲ್ಲಿ ಕ್ರಮದಿಂದ ಹೆಚ್ಚು ಹೆಚ್ಚು ಮಂದಿರಗಳ ನಿರ್ಮಾಣವೂ ಆಗುತ್ತ ಹೋಯಿತು. ಇವುಗಳಲ್ಲಿ ಮೂರ್ತಿಗಳನ್ನು ಪ್ರತಿಷ್ಠಿಸಲಾಯಿತು. ಅದರಿಂದ ಅವು ದೇವನಗರವೆನಿಸಿದುವು. ಇವುಗಳಲ್ಲಿ ಮೊದಲನೆಯ ಸ್ಥಾನವು ದೇವಗಢವು. ಇದು ಝಾಂಸಿ ಜಿಲ್ಲೆಯಲ್ಲಿ ಲಲಿತಪುರ ರೈಲ್ವೆ ನಿಲ್ದಾಣದಿಂದ ೧೯ ಮೈಲು ದೂರದಲ್ಲಿಯೂ ಜಾರವಲೌನ ನಿಲ್ದಾಣದಿಂದ ೯ ಮೈಲು ಅಂತರದ ಮೇಲೆಯೂ ಬೇತವಾ ನದಿಯ ತೀರದಲ್ಲಿದೆ. ದೇವಗಢದ ಗುಡ್ಡವು ಒಂದು ಮೈಲು ಉದ್ದ ಮತ್ತು ಆರು ಫರ್ಲಾಂಗ ಅಗಲವಿದೆ. ಗುಡ್ಡದ ಮೇಲೆ ಏರುವಾಗ ಮೊದಲನೆಯ ಬೆಟ್ಟದ ಮೇಲೆ ಭಗ್ನಾವಶೇಷಗಳು ದೊರೆಯುತ್ತವೆ. ಇವುಗಳಲ್ಲಿ ಕಲ್ಲಿನ ಕೆತ್ತನೆಯ ಕೆಲಸವು ದರ್ಶನೀಯವಾಗಿದೆ. ಈ ಬೆಟ್ಟದ ಮೇಲೆ ಕ್ರಮದಿಂದ ಮತ್ತೆ ಎರಡು ಕೋಟೆಗಳು ಇವೆ. ಅವುಗಳ ಒಳಗೂ ಕೂಡ ಜೀರ್ಣಾವಸ್ಥೆಯಲ್ಲಿ ಇರುವ ಕೆಲವು ಮಂದಿರಗಳು ಇವೆ. ಇವುಗಳಲ್ಲಿ ಕೆಲ ಮಂದಿರಗಳು ಹಿಂದೂಧರ್ಮದವುಗಳಾಗಿವೆ.

ಆದರೆ ಅವುಗಳಲ್ಲಿ ಹೆಚ್ಚು ಜೈನಮಂದಿರಗಳು. ಇವುಗಳಲ್ಲಿ ೩೧ ಜಿನಮಂದಿರಗಳನ್ನು ಲೆಕ್ಕಕ್ಕೆ ತೆಗೆದುಕೊಂಡಿದೆ. ಇವುಗಳಲ್ಲಿ ಮೂರ್ತಿಗಳು, ಕಂಭಗಳು, ಗೋಡೆಗಳು, ಕಲ್ಲುಗಳು ಇವೇ ಮೊದಲಾದುವುಗಳ ಮೇಲೆ ಶಿಲಾಲಿಪಿಗಳೂ ಸಹ ಕಂಡುಬರುತ್ತವೆ. ಇವುಗಳ ಆಧಾರದಿಂದ ಈ ಮಂದಿರಗಳ ನಿರ್ಮಾಣವು ಎಂಟನೆಯ ಶತಮಾನದಿಂದ ಹನ್ನೆರಡನೆಯ ಶತಮಾನದವರೆಗಿನವೆಂದು ಸಿದ್ಧವಾಗುತ್ತದೆ. ಹನ್ನೆರಡನೆಯ ನಂಬರಿನ ಶಾಂತಿನಾಥ ಮಂದಿರವು ಎಲ್ಲಕ್ಕೂ ದೊಡ್ಡದಿದೆ. ಇದರ ಗರ್ಭಗೃಹದಲ್ಲಿ ೧೨ ಫೂಟು ಎತ್ತರವುಳ್ಳ ಖಡ್ಗಾಸನದ ಪ್ರತಿಮೆಯಿದೆ. ಗರ್ಭಗೃಹದ ಎದುರು ೪೨ ಫೂಟು ಚೌರಸಾಕಾರದ ಮಂಟಪವಿದೆ. ಇದರಲ್ಲಿ ಆರು ಆರು ಕಂಭಗಳಿಂದ ಕೂಡಿದ ಆರು ಅಂಕಣಗಳಿವೆ. ಈ ಮಂಟಪದ ಮಧ್ಯದಲ್ಲಿಯೂ ವೇದಿಕೆಯ ಮೇಲೆ ಒಂದು ಮೂರ್ತಿಯು ವಿರಾಜಮಾನವಾಗಿದೆ. ಮಂಟಪದ ಎದುರು ಕೆಲವೊಂದು ಅಂತರದ ಮೇಲೆ ಮತ್ತೊಂದು ಚಿಕ್ಕದಾದ ನಾಲ್ಕು ಕಂಭಗಳ ಮಂಟಪವಿದೆ. ಇವುಗಳಲ್ಲಿಯೇ ಒಂದು ಕಂಭದ ಮೇಲೆ ಭೋಜದೇವನ ಕಾಲದ (ವಿ. ಸಂ. ೯೧೯; ಕ್ರಿ. ಶ. ೮೬೨) ಒಂದು ಲೇಖವೂ ಕೆತ್ತಿದ್ದಿದೆ. ಲೇಖದಲ್ಲಿ ವಿ. ಸಂವತ್ಸರದ ಜೊತೆ ಜೊತೆಗೇನೇ ಶಕ ಸಂ. ೭೮೪ರ ಉಲ್ಲೇಖವೂ ಇದೆ. ದೊಡ್ಡ ಮಂಟಪದಲ್ಲಿ ಬಾಹುಬಲಿಯ ಒಂದು ಮೂರ್ತಿಯಿದೆ. ಇದರ ವಿಶೇಷ ವರ್ಣನೆಯನ್ನು ಮುಂದೆ ಮಾಡಲಾಗುವುದು. ನಿಜವಾಗಿಯೂ ಇದೇ ಮಂದಿರವು ಇಲ್ಲಿಯ ಮುಖ್ಯ ದೇವಾಲಯವಾಗಿದೆ. ಇದರ ನೆರೆಹೊರೆಯಲ್ಲಿಯೇ ಬೇರೆ ಚಿಕ್ಕ ಚಿಕ್ಕ ಮಂದಿರಗಳೂ ಇವೆ. ಗರ್ಭಗೃಹ ಮತ್ತು ಮುಖಮಂಟಪಗಳು ಎಲ್ಲ ಮಂದಿರಗಳಿಗೂ ಇದ್ದುದು ಕಂಡುಬರುತ್ತದೆ. ಅವು ಉಳಿದುಕೊಂಡೂ ಇವೆ. ಕಂಭಗಳ ರಚನೆಯು ವಿಶೇಷ ದರ್ಶನೀಯವಾಗಿದೆ. ಇವುಗಳ ಮೇಲೆ ಬಹುತರ ಮೇಲೆ-ಕೆಳಗೆ ನಾಲ್ಕು ದಿಕ್ಕುಗಳಲ್ಲಿ ನಾಲ್ಕು-ನಾಲ್ಕು ಮೂರ್ತಿಗಳನ್ನು ಕೆತ್ತಿದ್ದು ಕಂಡುಬರುತ್ತದೆ. ಅಲ್ಲಲ್ಲಿ ಗೋಡೆಗಳ ಮೇಲೆಯೂ ಪ್ರತಿಮೆಗಳನ್ನು ಕೆತ್ತಲಾಗಿದೆ. ಕೆಲವೊಂದು ಮಂದಿರಗಳ ತೋರಣ ದ್ವಾರಗಳನ್ನೂ ಸಹ ಕಲಾಪೂರ್ಣವಾಗಿ ಕೆತ್ತಿದ್ದುಂಟು. ಕೆಲಕೆಲವೆಡೆಗಳಲ್ಲಿ ಮಂದಿರಗಳ ಎದುರು ಮಾನಸ್ತಂಭಗಳಿದ್ದುದೂ ಕಂಡುಬರುತ್ತದೆ. ಪ್ರಥಮ ಮಂದಿರವು ಬಹಳಷ್ಟು ಹನ್ನೆರಡನೆಯ ಮಂದಿರದಂತೆಯೇ ಇದೆ. ಆದರೆ ಅದಕ್ಕಿಂತ ಚಿಕ್ಕದಾಗಿದೆ. ಐದನೆಯ ಮಂದಿರವು ಸಹಸ್ರಕೂಟ ಚೈತ್ಯಾಲಯವಾಗಿದೆ. ಇದು ಸುಸ್ಥಿತಿಯಲ್ಲಿಯೂ ಇದೆ. ಇದರ ಕೂಟದ ಮೇಲೆ ೧೦೦೮ ಜಿನ ಪ್ರತಿಮೆಗಳನ್ನು ಕೆತ್ತಲಾಗಿದೆ. ಜಿನಮಂದಿರಗಳ ಶಿಖರಗಳ ಆಕಾರಗಳನ್ನು ಕಾಣುವುದೂ ತಿಳಿಯುವುದೂ ಸಾಧ್ಯವಿದೆ. ಅವುಗಳಿಂದ ಅವುಗಳ ನಿರ್ಮಾಣ ಶೈಲಿಯು ನಾಗರವೆಂದು ಸುಸ್ಪಷ್ಟವಿದೆ. ಪುರಾತತ್ವವಿಭಾಗದ ಕ್ರಿ. ಶ. ೧೯೧೮ ನೆಯ ವರ್ಷದ ವರದಿಗನುಸರಿಸಿ ದೇವಗಡದಲ್ಲಿ ಎರಡುನೂರು ಶಿಲಾಲೇಖಗಳು ದೊರೆತಿವೆಯೆಂದು ತಿಳಿಯುತ್ತದೆ. ಅವುಗಳಲ್ಲಿ ಅರವತ್ತು ಶಿಲಾಲೇಖಗಳ ಕಾಲವೂ ಕೂಡ ಅಂಕಿತವಿದೆ. ಆದರಿಂದ ವಿ. ಸಂ. ೯೧೯ ರಿಂದ ವಿ. ಸಂ. ೧೮೭೬ ರ

ವರೆಗಿನವೆಂದು ಅವು ಸಿದ್ಧವಾಗುತ್ತವೆ. ಒಟ್ಟಿನಲ್ಲಿ ಈ ಕ್ಷೇತ್ರದ ಮಹತ್ವವು ೧೯ ನೆಯ ಶತಮಾನದವರೆಗೂ ರೂಪುಗೊಳ್ಳುತ್ತ ಬಂದಿದೆ. ಲಿಪಿವಿಕಾಸ ಮತ್ತು ಭಾಷೆಯ ದೃಷ್ಟಿಯಿಂದಲೂ ಈ ಲೇಖಗಳಿಗೆ ಬಹಳ ಮಹತ್ವವಿದೆ.

ಮಧ್ಯಭಾರತದ ಇನ್ನೊಂದು ದೇವಾಲಯ ನಗರವು ಖಜರಾಹೊ ಎಂಬುದಾಗಿದೆ. ಇದು ಛತ್ತರಪುರ ಜಿಲ್ಲೆಯಲ್ಲಿ ಪನ್ನಾ ಎಂಬ ಸ್ಥಾನದಿಂದ ೨೭ ಮೈಲು ಉತ್ತರಕ್ಕೂ ಮತ್ತು ಮಹೋವಾದಿಂದ ೩೪ ಮೈಲು ದಕ್ಷಿಣಕ್ಕೂ ಇದೆ. ಇಲ್ಲಿ ಶಿವ, ವಿಷ್ಣು ಹಾಗೂ ಜೈನ ಮಂದಿರಗಳು ಸೇರಿ ೩೦ಕ್ಕಿಂತಲೂ ಹೆಚ್ಚಿಗೆ ಇವೆ. ಜೈನ ಮಂದಿರಗಳಲ್ಲಿ ಪಾರ್ಶ್ವನಾಥ, ಆದಿನಾಥ ಮತ್ತು ಶಾಂತಿನಾಥ ಇವು ಮೂರು ವಿಶೇಷ ಉಲ್ಲೇಖನೀಯವಾಗಿವೆ. ಇವುಗಳಲ್ಲಿ ಪಾರ್ಶ್ವನಾಥ ಮಂದಿರವು ಎಲ್ಲಕ್ಕೂ ದೊಡ್ಡದಿದೆ. ಇದರ ಉದ್ದಗಲಗಳು ೬೮ × ೩೪ ಫೂಟು ಇವೆ. ಇದರ ಮುಖ ಮಂಟಪವು ಬಿದ್ದು ಹೋಗಿದೆ. ಮಹಾಮಂಟಪ, ಅಂತರಾಳ ಮತ್ತು ಗರ್ಭಗೃಹಗಳು ಸುರಕ್ಷಿತವಾಗಿವೆ. ಇವೆಲ್ಲವುಗಳಿಗೂ ಸುತ್ತುವರಿದ ಒಂದೇ ಪ್ರದಕ್ಷಿಣಾಮಾರ್ಗವಿದೆ. ಗರ್ಭಗೃಹದ ಹಿಂದಿನ ಮಗ್ಗಲು ಒಂದು ಬೇರೆಯಾದ ದೇವಾಲಯವನ್ನು ನಿರ್ಮಿಸಲಾಗಿದೆ. ಇದು ಈ ಮಂದಿರದ ವಿಶೇಷತೆಯಾಗಿದೆ. ಪ್ರದಕ್ಷಿಣಾ ಮಾರ್ಗದ ಗೋಡೆಯಲ್ಲಿ ನಡುವೆ ಕಂಭವಿದೆ. ಇದು ಛಾವಣಿಗೆ ಆಧಾರವನ್ನು ನೀಡುತ್ತದೆ. ಗೋಡೆಯಲ್ಲಿ ಬೆಳಕಿಗಾಗಿ ಜಾಳಿಗೆಯಿಂದ ಕೂಡಿದ ವಾತಾಯನಗಳು ಇವೆ. ಮಂಟಪದ ಛತ್ತದ ಮೇಲಿನ ಕೆತ್ತನೆಯು ಉತ್ಕೃಷ್ಟವಾಗಿದೆ. ಛತ್ತದ ಮಧ್ಯಭಾಗವು ಲೋಲಕ ಮತ್ತು ಹೂಬಳ್ಳಿಗಳು, ಹಾರುವ ಮಾನವಾಕೃತಿಗಳಿಂದ ಅಲಂಕೃತಗೊಂಡಿದೆ. ಪ್ರವೇಶ ದ್ವಾರದ ಮೇಲೆ ಗರುಡವಾಹಿನಿ (ಸರಸ್ವತಿ) ಮೂರ್ತಿಯೂ ಬಹು ಸುಂದರವಾಗಿದೆ. ಗರ್ಭಗೃಹದ ಹೊರಗಿನ ಗೋಡೆಗಳ ಮೇಲೆ ಅಪ್ಸರೆಯರ ಮೂರ್ತಿಗಳು ಅವುಗಳ ರೀತಿಯಲ್ಲಿ ಅವು ಸರ್ವೋತ್ಕೃಷ್ಟವೆನಿಸುವಂತಿವೆ. ಉತ್ತರದ ಮಗ್ಗಲು ಕೂಸಿಗೆ ಮೊಲೆಯುಣಿಸುವ, ಪತ್ರಬರೆಯುವ, ಕಾಲೊಳಗಿನ ಮುಳ್ಳನ್ನು ತೆಗೆಯುವ ಹಾಗೂ ಶೃಂಗಾರ ನಗ್ನ ಸ್ತ್ರೀಯರ ಮೂರ್ತಿಗಳು ಬಹು ಸಜೀವವಾಗಿವೆ, ಕಲಾಪೂರ್ಣವಾಗಿವೆ. ಇಂಥವುಗಳು ಬೇರೆಡೆಗೆ ಲಭಿಸುವುದು ದುರ್ಲಭವಾಗಿದೆ. ಈ ಎಲ್ಲ ಭಾವಗಳು ಲೌಕಿಕ ಜೀವನದ ಸಾಮಾನ್ಯ ವ್ಯವಹಾರಕ್ಕೆ ಸಂಬಂಧಪಟ್ಟವುಗಳಾಗಿವೆ; ಧಾರ್ಮಿಕವಲ್ಲ. ಇದು ಈ ಮಂದಿರದ ಕಲಾಕೃತಿಗಳ ವಿಶೇಷತೆಯಾಗಿದೆ. ಎಲ್ಲಕ್ಕೂ ಹೊರಗಿನ ಗೋಡೆಗಳ ಮೇಲೆ ಕೆಳಭಾಗದಲ್ಲಿ ಕಲಾಪೂರ್ಣವಾದ ಕೆತ್ತನೆಯು ಇದೆ. ಮೇಲ್ಭಾಗದಲ್ಲಿ ಅನೇಕ ಪಟ್ಟಿಗಳ ಮೇಲೆ ತೀರ್ಥಂಕರರು, ಹಿಂದೂ ದೇವ-ದೇವತೆಗಳು ಇವರ ಬಹು ಸುಂದರ ಆಕೃತಿಗಳು ಇವೆ. ಈ ಪ್ರಕಾರ ಈ ಮಂದಿರದಲ್ಲಿ ನಾವು ವಿವಿಧ ಧರ್ಮ ಹಾಗೂ ಧಾರ್ಮಿಕ ಮತ್ತು ಲೌಕಿಕ ಜೀವನಗಳ ಅದ್ಭುತ ಸಾಮರಸ್ಯವನ್ನು ಕಾಣುತ್ತೇವೆ. ಮಂದಿರದ ಗರ್ಭಗೃಹದಲ್ಲಿ ವೇದಿಕೆಯನ್ನೂ ಕೂಡ ಬಹು ಸುಂದರಾಕೃತಿಯಲ್ಲಿ ನಿರ್ಮಿಸಿದ್ದಾರೆ. ಅದರ ಮೇಲೆ ಎತ್ತಿನ ಚಿತ್ರವನ್ನು ಕೆತ್ತ

ಲಾಗಿದೆ. ಆದರಿಂದ ಇದು ಪ್ರಾರಂಭದಲ್ಲಿ ವೃಷಭನಾಥ ತೀರ್ಥಂಕರರು ಮೂಲ ನಾಯಕ ಉಳ್ಳ ಮಂದಿರವಾಗಿತ್ತೆಂದು ಗೊತ್ತಾಗುತ್ತದೆ. ವೃಷಭವು ಅವನದೇ ಲಾಂಛನವಾಗಿದೆ. ಬಹುಶರ ಆ ಮೂರ್ತಿಯು ಯಾವುದೋ ಒಂದು ಸಂದರ್ಭದಲ್ಲಿ ನಷ್ಟವಾಗಿ ಭ್ರಷ್ಟವಾಗಿ ಹೋಗಿರಬೇಕು. ತರುವಾಯ ಅದರ ಮೇಲೆ ಈಗಿರುವ ಪಾರ್ಶ್ವನಾಥನ ಮೂರ್ತಿಯನ್ನು ಪ್ರತಿಷ್ಠಿಸಿರಬೇಕು. ಮಂದಿರ ಮತ್ತು ಸಿಂಹಾಸನಗಳ ಕಲಾಪೂರ್ಣ ನಿರ್ಮಿತಿಯ ದೃಷ್ಟಿಯಿಂದ ಈ ಮೂರ್ತಿಯು ಹೀನ–ಕಲಾತ್ಮಕವೆನಿಸು ತ್ತದೆ. ಇದರಿಂದಲೂ ಅದೇ ಮಾತು ಸಿದ್ಧವಾಗುತ್ತದೆ. ಇಂಥದೇ ಒಂದು ಸ್ಥಿತಿಯು ಆದಿನಾಥ ಮಂದಿರದ್ದೂ ಆಗಿದೆ. ಯಾಕಂದರೆ ಇದರಲ್ಲಿ ವಿರಾಜಮಾನವಾಗಿರುವ ಆದಿನಾಥ ಮೂರ್ತಿಯು ಸಿಂಹಾಸನದ ಪ್ರಮಾಣದಿಂದ ಚಿಕ್ಕದಾಗಿದ್ದು, ಕಲೆಯ ದೃಷ್ಟಿಯಿಂದ ಸಾಮಾನ್ಯವಾಗಿದೆ. ಈ ಮಂದಿರವು ಪಾರ್ಶ್ವನಾಥ ಮಂದಿರದ ಸಮೀಪ ದಲ್ಲಿಯೇ ಉತ್ತರಕ್ಕೆ ಇದೆ. ಈ ಮಂದಿರದಲ್ಲಿಯೂ ಕೂಡ ಮೇಲೆ ಹೇಳಿದ ಪ್ರಕಾರ ಮೂರು ಕೋಷ್ಠಗಳಿವೆ. ಅವುಗಳಲ್ಲಿ ಅರ್ಧ ಮಂಟಪವು ಬಹುಶರ ಹಿಂದಿನಿಂದ ನಿರ್ಮಿಸಿದ್ದು ಆಗಿದೆ. ಇದರ ಪ್ರವೇಶದ್ವಾರದ ಮೇಲೆ ಚತುರ್ಭುಜ ದೇವಿಯ ಮೂರ್ತಿಯಿದೆ. ಅದರ ಮೇಲೆ ಹದಿನಾರು ಸ್ವಪ್ನಗಳ ದೃಶ್ಯವನ್ನು ಕೆತ್ತಲಾಗಿದೆ. ಶಾಂತಿನಾಥ ಮಂದಿರದ ವಿಶೇಷತೆಯು ಅದರಲ್ಲಿರುವ ಹದಿನಾರು ಫೂಟು ಎತ್ತರವುಳ್ಳ ಖಡ್ಗಾಸನ ಶಾಂತಿನಾಥ ಭಗವಂತನ ಸುಂದರ ಪ್ರತಿಮೆಯಲ್ಲಿದೆ. ಇದರ ಪ್ರತಿಷ್ಠೆಯ ಕಾಲವನ್ನು ವಿ. ಸಂ. ೧೦೮೫ (ಕ್ರಿ. ಶ. ೧೦೨೮) ಎಂದು ಅಂಕಿತಗೊಳಿಸಲಾಗಿದೆ. ಇದಕ್ಕಿಂತ ಸ್ವಲ್ಪ ಮುಂಚೆ ಈ ಮಂದಿರದ ನಿರ್ಮಾಣವಾಗಿರಬೇಕು. ಉಳಿದ ಮಂದಿರ ಗಳ ನಿರ್ಮಾಣ ಕಾಲವೂ ಇದೇ ಕಾಲದ ಸ್ವಲ್ಪ ಹಿಂದು–ಮುಂದಿನದಾಗಿರಬೇಕು. ಈ ಮೂರ್ತಿಯನ್ನುಳಿದು, ಇಲ್ಲಿ ಕಂಡುಬರುವ ಅನ್ಯ ತೀರ್ಥಂಕರರ ಹಾಗೂ ಯಕ್ಷ–ಯಕ್ಷಿಣಿಯರ ಮೂರ್ತಿಗಳು ಕಲಾಪೂರ್ಣವಾಗಿವೆ. ತೀರ್ಥಂಕರರ ಮೂರ್ತಿಗಳ ಎರಡೂ ಮಗ್ಗಲಿಗೆ ಬಹುಶರ ಇಬ್ಬರು ಚಮರ–ವಾಹಕರು, ಮುಂದೆ ಕುಳಿತಂಥ ಇಬ್ಬರು ಉಪಾಸಿಕೆಯರು, ಮೂರ್ತಿಯ ಆಚೆ–ಈಚೆಗೆ ಕೆಲವೊಂದು ಎತ್ತರದ ಮೇಲೆ ಹಸ್ತಿಯ ಮೇಲೆ ಕುಳಿತ ಇಂದ್ರ ಮತ್ತು ಇಂದ್ರಾಣಿಯರ ಆಕೃತಿಗಳು ಕಂಡುಬರು ತ್ತವೆ. ಹಾಗೆಯೇ ಪೀಠದ ಮೇಲೆ ಎರಡೂ ಮಗ್ಗಲು ಸಿಂಹದ ಆಕೃತಿಗಳೂ ಕಂಡು ಬರುತ್ತವೆ. ಖಜರಾಹೊದಲ್ಲಿಯ ಈ ಎಲ್ಲ ಮಂದಿರಗಳು ಅಧಿಷ್ಠಾನದಿಂದ ಶಿಖರದ ವರೆಗೆ ನಾನಾ ಪ್ರಕಾರದ ಕಲಾಪೂರ್ಣ ಕೆತ್ತನೆಯ ಆಕೃತಿಗಳಿಂದ ಸಂಶೋಭಿಸು ತ್ತವೆ.

ಖಜರಾಹೋದ ಜೈನ ಮಂದಿರಗಳ ವಿಶೇಷತೆಯು ಅವುಗಳಲ್ಲಿ ಮಂಟಪ ಕ್ಕಿಂತ ಶಿಖರದ ರಚನೆಯಲ್ಲಿ ಹೆಚ್ಚು ಮಹತ್ವವಿದ್ದುದೇ ಆಗಿದೆ. ಎರಡನೆಯ ಕಡೆಗೆ ಇರುವಂತೆ ಭೂಮಿತಿ ಮತ್ತು ದೇವ–ಕುಲಿಕೆಗಳೂ ಇಲ್ಲ. ರಚನೆ ಹಾಗೂ ಅಲಂಕೃತಿ ಗಳಲ್ಲಿ ಜಿನಮೂರ್ತಿಗಳ ಹೊರತಾಗಿ ಬೇರೆ ಅಂಥ ಹಿಂದೂ ಹಾಗೂ ಬೌದ್ಧರಿಂದ

ಭಿನ್ನಗೊಳಿಸುವಂಥ ಯಾವ ವಿಶೇಷತೆಯೂ ಇಲ್ಲ. ಒಂದೇ ಕಾಲದಲ್ಲಿ ಮತ್ತು ಬಹುತರ ಉದಾರನೂ ಸಹಿಷ್ಣುವೂ ಆದ ಒಬ್ಬನೇ ಅರಸನ ಸಂರಕ್ಷಣೆಯಲ್ಲಿ ನಿರ್ಮಾಣ ವಾದುದರಿಂದ ಅವುಗಳಲ್ಲಿ ವಿಚಾರಪೂರ್ವಕವಾಗಿಯೇ ಸಮತ್ವವನ್ನು ಕಾಯ್ದು ಕೊಂಡುದು ಕಂಡುಬರುತ್ತದೆ. ಆದರೆ ಇಲ್ಲಿ ಕಂಡುಬರುವ ಎರಡು ಅನ್ಯ ಮಂದಿರಗಳ ಸಂಬಂಧದಲ್ಲಿ ಜೇಮ್ಸ ಫರಗ್ಯುಸನ ಸಾಹೇಬನ ಅಭಿಮತವು ಉಲ್ಲೇಖನೀಯವಾಗಿದೆ. ಅರವತ್ತುನಾಲ್ಕು ಯೋಗಿನೀ ಮಂದಿರದ ಭೂಮಿತಿ ಮತ್ತು ದೇವಕುಲಿಕೆಯ ಬಗ್ಗೆ ಅವನ ಹೇಳಿಕೆಯು ಹೀಗಿದೆ :— "ಮಂದಿರ ನಿರ್ಮಾಣದ ಈ ರೀತಿಯು ಎಲ್ಲಿಯ ವರೆಗೆ ಜೈನ ವಿಶೇಷತೆಯನ್ನು ಸ್ವೀಕರಿಸಿದೆಯೋ ಅಲ್ಲಿಯವರೆಗೆ ಅದು ಮೂಲದಲ್ಲಿ ಜೈನರದಾಗಿರುವುದರಲ್ಲಿ ನನಗೇನೂ ಸಂಶಯವಿಲ್ಲ." ಮಧ್ಯವರ್ತಿ ಮಂದಿರವು ಈಗ ಇಲ್ಲ. ಫಗ್ರ್ಯುಸನ ಸಾಹೇಬನ ಮತಕ್ಕನುಸರಿಸಿ, ಅದು ಪ್ರಾಚೀನ ಬೌದ್ಧ ಚೈತ್ಯಗಳಂತೆ ಕಟ್ಟಿಗೆಯದಾಗಿದ್ದರೆ ಆಶ್ಚರ್ಯಪಡುವ ಕಾರಣವಿಲ್ಲ. ಈ ಮಾತು ಸಮರ್ಥಕವೆಂದು ತೋರಿದರೆ ಇದೇ ಸಮಸ್ತ ಪ್ರಾಚೀನ ಜೈನಮಂದಿರವೆಂದು ಸಿದ್ಧ ವಾಗುತ್ತದೆ. ಇದೇ ಪ್ರಕಾರ ಘಂಟಾಈ ಮಂದಿರದ ಅವಶಿಷ್ಟ ಮಂಟಪವನ್ನೂ ಸಹ ಅದರ ರಚನಾ ಶೈಲಿಯ ಮೇಲಿಂದ ಜೈನವೆಂದು ಸ್ವೀಕರಿಸಲಾಗುತ್ತದೆ. ಇದರಲ್ಲಿ ಲಭಿಸಿದ ಖಂಡಿತ ಲೇಖದ ಲಿಪಿಯಿಂದ ಕನಿಂಗಹ್ಯಾಮ ಸಾಹೇಬನು ಅದನ್ನು ಆರು–ಏಳನೆಯ ಶತಮಾನದ್ದೆಂದು ಅನುಮಾನಿಸುತ್ತಾನೆ. ಫಗ್ರ್ಯುಸನ್ ಸಾಹೇಬನೂ ಕೂಡ ಅದರ ಶೈಲಿಯ ಆಧಾರದಿಂದ ಅದೇ ಕಾಲವೆಂದು ನಿರ್ಣಯಿಸಿದ್ದಾನೆ.

ಗ್ವಾಲ್ಹೇರ ರಾಜ್ಯದಲ್ಲಿ ವಿದಿಶಾದಿಂದ ೧೪೦ ಮೈಲು ದಕ್ಷಿಣ–ಪಶ್ಚಿಮದ ದಿಕ್ಕಿನಲ್ಲಿ ಗ್ಯಾರಸಪುರದಲ್ಲಿಯೂ ಒಂದು ಭಗ್ನ ಜೈನಮಂದಿರದ ಮಂಟಪವಿದೆ. ಅದರ ವಿನ್ಯಾಸ, ಕಂಭಗಳ ರಚನೆ ಮೊದಲಾದವುಗಳಿಂದ ಅದು ಖಜರಾಹೊದಲ್ಲಿಯ ಘಂಟಾಈ ಮಂದಿರವನ್ನು ಹೋಲುತ್ತದೆ. ಅದರ ನಿರ್ಮಾಣ ಕಾಲವನ್ನು ಸಹ ಫಗ್ರ್ಯುಸನ ಸಾಹೇಬನು ಏಳನೆಯ ಶತಮಾನ ಅಥವಾ ನಿಶ್ಚಯವಾಗಿಯೂ ೧೦ ನೆಯ ಶತಮಾನದ ಪೂರ್ವದ್ದೆಂದು ಅನುಮಾನ ಮಾಡಿದ್ದಾನೆ. ಇದೇ ಗ್ಯಾರಸಪುರದಲ್ಲಿ ಬಹುತರ ಇದೇ ಕಾಲದ ಇನ್ನೊಂದು ಮಂದಿರವಿದೆ. ಅದು ಬಹಳ ಜೀರ್ಣ–ಶೀರ್ಣ ವಾಗಿದೆ. ಅದರ ಮೇಲಿನ ರೂಪವೆಲ್ಲ ಮುಚ್ಚಿಹೋಗುವಂತೆ ಜೀರ್ಣೋದ್ಧಾರವನ್ನು ಮಾಡಿದ್ದಾರೆ. ಇಲ್ಲಿ ಊರಲ್ಲಿ ಬಹುತರ ೧೧ ನೆಯ ಶತಮಾನದ ಅತಿಸುಂದರ ಪಾಷಾಣ–ತೋರಣವೂ ಇದೆ. ಯಥಾರ್ಥವಾಗಿಯೂ ಫಗ್ರ್ಯುಸನ ಸಾಹೇಬನ ಮತಕ್ಕನುಸರಿಸಿ, ಅಲ್ಲಿಯ ಸುತ್ತುಮುತ್ತಲಿನ ಪ್ರದೇಶದಲ್ಲಿ ಬಹಳಷ್ಟು ಭಗ್ನಾವಶೇಷ ಗಳು ಲಭಿಸುತ್ತವೆ. ಅವುಗಳನ್ನೆಲ್ಲ ಕ್ರಮಬದ್ಧವಾಗಿ ಸಂಗ್ರಹಿಸಿದಲ್ಲಿ, ಅಧ್ಯಯನ ಮಾಡಿದಲ್ಲಿ ಭಾರತೀಯ ವಾಸ್ತು–ಕಲೆ ಮತ್ತು ವಿಶೇಷವಾಗಿ ಜೈನ ವಾಸ್ತುಕಲೆ ಇವುಗಳ ಇತಿಹಾಸದಲ್ಲಿ ಇರುವ ದೀರ್ಘಕಾಲದ ರಿಕ್ತಸ್ಥಳವನ್ನು ಪೂರ್ತಿಗೊಳಿಸಲು ಆಗುತ್ತದೆ.

ಮಧ್ಯಪ್ರದೇಶದಲ್ಲಿ ಇನ್ನೂ ಮೂರು ಜೈನ ತೀರ್ಥ ಸ್ಥಾನಗಳಿವೆ. ಅಲ್ಲಿ ಗುಡ್ಡ ಗಳ ಮೇಲೆ ಅನೇಕ ಪ್ರಾಚೀನಮಂದಿರಗಳು ಇವೆ. ಇಂದಿನವರೆಗೂ ಕೂಡ ಅವಿಚ್ಛಿನ್ನವಾಗಿ ಜಿನಮಂದಿರಗಳನ್ನು ನಿರ್ಮಿಸುತ್ತ ಬಂದಿದ್ದಾರೆ. ಇಂಥ ಒಂದು ತೀರ್ಥವು ಬುಂದೇಲಖಂಡದಲ್ಲಿ ದತಿಯಾ ಎಂಬುದರ ಸಮೀಪದಲ್ಲಿ ಸುವರ್ಣಗಿರಿ (ಸೋನಗಿರಿ) ಎಂದಿದೆ. ಇಲ್ಲಿ ಒಂದು ಕೆಳಗಿನ ಗುಡ್ಡದ ಮೇಲೆ ಸುಮಾರು ಒಂದು ನೂರು ಚಿಕ್ಕ-ದೊಡ್ಡ ಆಕಾರದ ಜಿನಮಂದಿರಗಳಿವೆ. ಯಾವ ರೂಪದಲ್ಲಿ ಈ ಮಂದಿರ ಗಳು ಈಗಿವೆಯೋ ಅವು ಬಹು ಪ್ರಾಚೀನವೆಂದು ತೋರುವುದಿಲ್ಲ. ಇವುಗಳಲ್ಲಿ ಇಸ್ಲಾಂ ಶೈಲಿಯ ಪ್ರಭಾವವು ಸ್ಪಷ್ಟವಾಗಿ ಕಂಡುಬರುತ್ತದೆ. ಅವುಗಳ ಶಿಖರಗಳು ಬಹುತರ ಮೊಗಲಕಾಲದ ಗುಮ್ಮಟದ ಆಕಾರದಲ್ಲಿವೆ. ಶಿಖರದ ಪ್ರಾಚೀನ ಸ್ವದೇಶೀಯ ರೂಪವು ಕ್ವಚಿತ್ತಾಗಿಯೇ ದೃಷ್ಟಿಗೆ ಬೀಳುತ್ತದೆ. ತೆರೆವಿದ್ದ ಭಾಗಗಳ ರೂಪವು ಮುಸಲ್ಮಾನ ಪದ್ಧತಿಯ ಕೋಣಾಕಾರ ತೋರಣದಂತೆ ಕಂಡುಬರುತ್ತದೆ. ಆದರೂ ಇದರ ಇತಿಹಾಸವು ಸ್ಪಷ್ಟವಾಗಿಲ್ಲ. ಈ ಕ್ಷೇತ್ರದ ಪ್ರಾಚೀನತಮ ಮಂದಿರ ಗಳನ್ನು ಯಾವಾಗ, ಯಾರು, ಹೇಗೆ ನಿರ್ಮಿಸಿದರೆಂಬುದರ ಇತಿಹಾಸವು ಸ್ಪಷ್ಟವಿಲ್ಲ. ಆದರೂ ಅದಕ್ಕೆ ಸಂಬಂಧಿಸಿದ ಕೆಲ ಸಾಮಗ್ರಿಯನ್ನು ಇಲ್ಲಿಯ ಮಂದಿರ, ಮೂರ್ತಿ ಮತ್ತು ಲೇಖಗಳ ಅಧ್ಯಯನದಿಂದ ಸಂಗ್ರಹಿಸಬಹುದಾಗಿದೆ.

ಎರಡನೆಯ ತೀರ್ಥ ಕ್ಷೇತ್ರವು ಬೈತೂಲ ಜನಪದಾಂತರ್ಗತ ಮುಕ್ತಾಗಿರಿಯೊಗಿದೆ. ಇಲ್ಲಿ ಒಂದು ಅತಿಸುಂದರ ಪರ್ವತದ ಘಟ್ಟದ ಮೇಲಿನ ಸಮತಳ ಸ್ಥಾನ ದಲ್ಲಿ ೨೦–೨೫ ಜೈನ ಮಂದಿರಗಳು ಇವೆ. ಇವುಗಳ ಮಧ್ಯದಲ್ಲಿ ಸುಮಾರು ೬೦ ಎತ್ತರದ ಜಲಪ್ರಪಾತವಿದೆ. ಇದರ ದೃಶ್ಯವು ವಿಶೇಷವಾಗಿ ಮಳೆಗಾಲದಲ್ಲಿ ಅತ್ಯಂತ ರಮಣೀಯವಾಗಿರುತ್ತದೆ. ಈ ಮಂದಿರಗಳೂ ಕೂಡ ಸೋನಾಗಿರಿಯ ಮಂದಿರ ಗಳಂತೆ ಬಹಳ ಪ್ರಾಚೀನವಾಗಿಲ್ಲ. ಅವುಗಳ ಶಿಖರ ಮೊದಲಾದುವುಗಳ ಸಂಬಂಧ ದಲ್ಲಿ ಇಸ್ಲಾಂ ಶೈಲಿಯನ್ನು ಅನುಕರಿಸುತ್ತವೆ. ಆದರೆ ಇಲ್ಲಿಯ ಮೂರ್ತಿಗಳ ಮೇಲಿ ರುವ ಲೇಖಗಳಿಂದ ೧೪ ನೆಯ ಶತಮಾನದ ಕೆಲವು ಮಂದಿರಗಳು ಅವಶ್ಯವಾಗಿ ಇವು ಗಳಲ್ಲಿರಬೇಕೆಂದು ಗೊತ್ತಾಗುತ್ತದೆ. ಈ ತೀರ್ಥದ ವಿಷಯದಲ್ಲಿ ಶ್ರೀ ಜೇಮ್ಸ್ ಫರ್ಗ್ಯುಸನ್ ಸಾಹೇಬನು ತನ್ನ "ಹಿಸ್ಟ್ರಿ ಆಫ್ ಇಂಡಿಯಾ ಯಾಂಡ್ ಈಸ್ಟರ್ನ ಆರ್ಕಿಟೆಕ್ಚರ" (ಲಂಡನ, ೧೮೭೬) ಎಂಬ ಗ್ರಂಥದಲ್ಲಿ ಹೀಗೆ ಹೇಳಿದ್ದಾನೆ :— "ಸಮಸ್ತ ಭಾರತದಲ್ಲಿ ಇದಕ್ಕೆ ಸಮಾನವಾದ ಇನ್ನೊಂದು ಸ್ಥಾನವನ್ನು ಕಾಣುವುದು ದುರ್ಲಭವಾಗಿದೆ. ಇಲ್ಲಿ ಪ್ರಕೃತಿಯ ಶೋಭೆಯೊಡನೆ ವಾಸ್ತುಕಲೆಯ ಸುಂದರ ಸಾಮಂಜಸ್ಯವು ಇದೆ."

ಮಧ್ಯಪ್ರದೇಶದ ಮೂರನೆಯ ಜೈನ ಕ್ಷೇತ್ರವು ದಮೋಹದ ಸಮೀಪ ಕುಂಡಲ ಪುರವೆಂಬ ಸ್ಥಾನವಾಗಿದೆ. ಇಲ್ಲಿ ಒಂದು ಕುಂಡಲಾಕಾರದ ಬೆಟ್ಟದ ಮೇಲೆ ೨೫–೩೦ ಜೈನಮಂದಿರಗಳು ಇವೆ. ಗುಡ್ಡದ ಮಧ್ಯದಲ್ಲಿ ಒಂದು ಘಟ್ಟದಲ್ಲಿ ನಿರ್ಮಿ

ಸಿದ ಮಹಾವೀರ ಮಂದಿರವು ತನ್ನ ವಿಶಾಲತೆ, ಪ್ರಾಚೀನತೆ ಮತ್ತು ಮಾನ್ಯತೆಗಾಗಿ ವಿಶೇಷ ಪ್ರಸಿದ್ಧವಾಗಿದೆ. ಇಲ್ಲಿ 'ಬಡೆ ಬಾಬಾ' (ಹಿರಿಯ ತಂದೆ) ಮಹಾವೀರನ ವಿಶಾಲ ಮೂರ್ತಿಯು ಇರುವುದರಿಂದ ಇದಕ್ಕೆ 'ಬಡೆ ಬಾಬಾ ಮಂದಿರ'ವೆಂದು ಹೆಸರಾಗಿದೆ. ಪರ್ವತದ ಮೇಲಿನ ಮೊದಲಿನ ಮಂದಿರವೂ ತನ್ನ ಸೌಂದರ್ಯ ಮತ್ತು ರಚನೆಯ ದೃಷ್ಟಿಯಿಂದ ಮಹತ್ವಪೂರ್ಣವಾಗಿದೆ. ಇದರ ಶಿಖರದಲ್ಲಿರುವ ಆರು ಮೆಟ್ಟಿಲುಗಳಿಂದ ಇದು ಆರು ಮನೆಗಳ ಮಂದಿರವೆಂದು ಹೆಸರಾಗಿದೆ. ಹೆಚ್ಚಿನ ಮಂದಿರಗಳಲ್ಲಿ ಈ ಮೊದಲು ಹೇಳಿದಂತೆ ಮೊಗಲ ಶೈಲಿಯ ಪ್ರಭಾವವು ಕಂಡುಬರುತ್ತದೆ. ಪರ್ವತದ ಕೆಳಗಿರುವ ಕೆರೆ, ಅದರ ತೀರದಲ್ಲಿರುವ ನವೀನ ಮಂದಿರಗಳ ಶೋಭೆಯೂ ಕೂಡ ನೋಡತಕ್ಕಂಥದ್ದಾಗಿದೆ.

ಮಧ್ಯಪ್ರದೇಶದ ಜಿಲ್ಲಾ ನಗರ ಖರಗೋನದಿಂದ ಪಶ್ಚಿಮಕ್ಕೆ ಹತ್ತು ಮೈಲಿನ ಮೇಲೆ ಊನ ಎಂಬ ಹೆಸರಿನ ಗ್ರಾಮದಲ್ಲಿ ಮೂರು ನಾಲ್ಕು ಪ್ರಾಚೀನ ಜೈನ ಮಂದಿರಗಳಿವೆ. ಇವುಗಳಲ್ಲಿ ಒಂದು ಪರ್ವತದ ಮೇಲೆ ಇದೆ. ಇದರ ಪುನರುಜ್ಜೀವನ ವಾಗಿ ಒಳ್ಳೆಯ ತೀರ್ಥಸ್ಥಾನವಾಗಿದೆ. ಉಳಿದ ಮಂದಿರಗಳು ಭಗ್ನಾವಸ್ಥೆಯಲ್ಲಿ ಪುರಾತತ್ತ್ವ ವಿಭಾಗದ ಸಂರಕ್ಷಣೆಯಲ್ಲಿವೆ. ಮಂದಿರವು ಪೂರ್ಣವಾಗಿ ಪಾಷಾಣ ಖಂಡಗಳಿಂದ ನಿರ್ಮಿತವಾಗಿದೆ. ಚಪ್ಪಟೆಯಾದ ಮೇಲ್ಛಾವಣಿಯಿದೆ. ಗರ್ಭ ಗೃಹ ಮತ್ತು ನಭಾಮಂಟಪದಿಂದ ಕೂಡಿದೆ. ಪ್ರದಕ್ಷಿಣಾರಹಿತವಾಗಿದೆ. ಇದರಿಂದ ಇದರ ಪ್ರಾಚೀನತೆಯು ಸಿದ್ಧವಾಗುತ್ತದೆ. ಗೋಡೆಗಳು ಹಾಗೂ ಕಂಭ ಗಳ ಮೇಲೆ ಎಲ್ಲೆಡೆಗೂ ಕೆತ್ತನೆಯು ಇದೆ. ಇದು ಖಜುರಾಹೊದಲ್ಲಿಯ 'ಕಲೆಯ ಕೂಡ ಹೊಂದುತ್ತದೆ. ನಾಲ್ಕು ಬಾಗಿಲುಗಳು ಇರುವುದರಿಂದ ಎರಡು ಮಂದಿರಗಳು ಚೌಬಾರಾಡೇರಾ ಎಂಬ ಹೆಸರನ್ನು ಹೊಂದಿವೆ. ಕಂಭಗಳ ಮೇಲೆ ಇರುವ ಕೆಲ ಸ್ತ್ರೀ-ಪುರುಷರ ರೂಪ ಆಕೃತಿಗಳು ಶೃಂಗಾರಾತ್ಮಕವಾಗಿದ್ದು, ಅತಿ ಸುಂದರವೂ ಪೂರ್ಣ ಸುರಕ್ಷಿತವೂ ಆಗಿವೆ. ಕೆಲವೊಂದು ಪ್ರತಿಮೆಗಳ ಮೇಲೆ ಲೇಖಗಳಿವೆ. ಅದರಲ್ಲಿ ಸಂವತ್ ೧೨೫೮ ಮತ್ತು ಅದರ ಸಮೀಪದ ಉಲ್ಲೇಖಗಳಿವೆ. ಅದರಿಂದ ಈ ತೀರ್ಥವು ತೀರ ಕಡಿಮೆಯೆಂದರೆ ೧೨-೧೩ ನೆಯ ಶತಮಾನಗಳಿಂದ ಅಸ್ತಿತ್ವದಲ್ಲಿ ಅವಶ್ಯವಾಗಿದೆ. ಈ ತೀರ್ಥಸ್ಥಾನವನ್ನು ಪ್ರಾಚೀನ ಸಿದ್ಧಕ್ಷೇತ್ರ ಪಾವಾಗಿರಿ ಎಂದು ಗೊತ್ತುಮಾಡಲಾಗಿದೆ. ಇದರ ಉಲ್ಲೇಖವು ಪ್ರಾಕೃತ ನಿರ್ವಾಣಕಾಂಡ ದಲ್ಲಿ ಈ ಪ್ರಕಾರ ಎರಡು ಸಲ ಬಂದಿದೆ:—

ರಾಯಸುಅ ವೆಣ್ಣಿ ಜಣಾ ಲಾಡ-ಣರಿಂದಾಣ ಪಂಚ-ಕ್ಕೋಡೀಓ |
ಪಾವಾಗಿರಿ–ವರ–ಸಿಹರೇ ಣಿವ್ವಾಣ ಗಯಾ ಣಮೋ ತೇಸಿಂ || ೫ ||

ಪಾವಾಗಿರಿವರ ಸಿಹರೆ ಸುವಣ್ಣಭದ್ದಾಇ–ಮುಣಿವರಾ ಚಉರೋ |
ಚಲಣಾ-ಣಈ-ತಡಗ್ಗೆ ಣಿವ್ವಾಣ ಗಯಾ ಣಮೋ ತೇಸಿಂ || ೧೩ ||

ಇಲ್ಲಿ ಪಾವಾಗಿರಿಯಿಂದ ಲಾಟದ(ಗುಜರಾತ) ಅರಸರು ಹಾಗೂ ಸುವರ್ಣಭದ್ರ ಮೊದಲಾದ ನಾಲ್ವರು ಮುನಿಗಳು ನಿರ್ವಾಣವನ್ನು ಹೊಂದಿದ ಉಲ್ಲೇಖವಿದೆ. ಈ ಪ್ರದೇಶವು ಗುಜರಾತಕ್ಕೆ ಹೊಂದಿ ಇದೆ. ಇಲ್ಲಿ ಉಲ್ಲೇಖಗೊಂಡ ಚಲನಾ ಅಥವಾ ಚೇಲನಾ ನದಿಯು ಈಗ ಬಹುತರ ಊನದ ನೆರೆಯಲ್ಲಿ ಹರಿಯುವ ಪ್ರವಾಹವಾಗಿದೆ. ಇದನ್ನು ಈಗ ಚದೇರೀ ಅಥವಾ ಚಿರೂಢ ಎಂದು ಹೇಳಲಾಗುತ್ತಿದೆ. ನಿರ್ವಾಣ ಕಾಂಡದ ಮೇಲಿನ ೧೩ ನೆಯ ಗಾಥಾದ ಪೂರ್ವದಲ್ಲಿಯೇ, ರೇವಾನದಿಯ (ನರ್ಮದಾ) ಉಭಯ ತೀರ ಹಾಗೂ ಅದರ ಪಶ್ಚಿಮ ತೀರದ ಮೇಲೆ ಸಿದ್ಧವರಕೂಟ ಹಾಗೂ ವಡವಾನೀ ನಗರದ ದಕ್ಷಿಣದಲ್ಲಿ ಚೂಲಗಿರಿ ಶಿಖರಕ್ಕೆ ಸಿದ್ಧ ಕ್ಷೇತ್ರದ ರೂಪದಲ್ಲಿ ಉಲ್ಲೇಖವಿದೆ. ಇದೇ ಸ್ಥಳಕ್ಕೆ ಸಮೀಪವರ್ತಿಯಾಗುವುದರಿಂದ ಈ ಸ್ಥಾನವು ಪಾವಾಗಿರಿ ಎಂದು ಪ್ರಮಾಣಿತವಾಗುತ್ತದೆ. ಊರ ನೆರೆಹೊರೆಯಲ್ಲಿಯೂ ಅನೇಕ ಭಗ್ನಾವಶೇಷಗಳು ಕಂಡುಬರುತ್ತವೆ. ಇಲ್ಲಿ ಬಲ್ಲಾಳ ಎಂಬ ಹೆಸರಿನ ರಾಜನು ವ್ಯಾಧಿಯಿಂದ ಮುಕ್ತನಾಗಿ, ನೂರು ಮಂದಿರಗಳನ್ನು ನಿರ್ಮಿಸುವ ಸಂಕಲ್ಪವನ್ನು ಮಾಡಿದ್ದನು; ಆದರೆ ತನ್ನ ಜೀವನ ಕಾಲದಲ್ಲಿ ಅವನು ೯೯ ಮಂದಿರಗಳನ್ನು ಮಾತ್ರ ನಿರ್ಮಿಸಿದನು-ಎಂಬ ಜನ ನುಡಿಯೊಂದಿದೆ. ಈ ಪ್ರಕಾರ ಒಂದು ಮಂದಿರವು ಕೊರತೆಯಾದುದರಿಂದ ಈ ಸ್ಥಾನವು ಊನ ಎಂಬ ಹೆಸರಿನಿಂದ ಪ್ರಸಿದ್ಧವಾಯಿತು. (ಇಂದೂರ ಸ್ಟೇಟ್ ಗ್ಯಾಜೆಟಿಯರ, ಭಾಗ ೧-ಪುಟ ೬೭೯) ಊನ ಎಂಬ ಹೆಸರಿನ ಸಾರ್ಥಕತೆಯನ್ನು ಸಿದ್ಧಗೊಳಿಸುವುದಕ್ಕಾಗಿ ಈ ಆಖ್ಯಾನಕವನ್ನು ಕಟ್ಟಿರುವ ಸಂಭವವೂ ಇದೆ. ಆದರೆ ಇದರಲ್ಲಿ ಸ್ವಲ್ಪ ಐತಿಹಾಸಿಕತೆಯು ಇದ್ದದ್ದೇ ಆದರೆ ಬಲ್ಲಾಳ ರಾಜನು ಹೊಯ್‌ಸಳ ವಂಶದ ಎರಡನೆಯ ವೀರ-ಬಲ್ಲಾಳನೇ ಆಗಿರಲು ಸಾಕು. ಈತನ ಗುರುವು ಒಬ್ಬ ಜೈನಮುನಿಯಾಗಿದ್ದನು. (ಪು. ೪೦.)

ಮಧ್ಯಪ್ರದೇಶದ ತರುವಾಯ ನಮ್ಮ ಧ್ಯಾನವು ರಾಜಪೂತಸ್ಥಾನದ ಮಂದಿರಗಳ ಕಡೆಗೆ ಹರಿಯುತ್ತದೆ. ಅಜಮೀರದ ಸಮೀಪದಲ್ಲಿ ಬಡಲೀ ಎಂಬ ಗ್ರಾಮದಲ್ಲಿ ಒಂದು ಕಂಭದ ತುಂಡು ಲಭಿಸಿದೆ. ಅದನ್ನು ಅಲ್ಲಿಯ ಭೈರೋಜೀ ಮಂದಿರದ ಪೂಜಾರಿಯು ತಂಬಾಕನ್ನು ಕುಟ್ಟುವ ಕೆಲಸಕ್ಕೆ ಉಪಯೋಗಿಸುತ್ತಿದ್ದನು. ಇದು ಷಟ್‌ಕೋಣ ಕಂಭದ ತುಂಡಾಗಿದೆ. ಅದರ ಮೂರು ಮಗ್ಗಲುಗಳು ಈ ಪಾಷಾಣ ಖಂಡದಲ್ಲಿ ಸುರಕ್ಷಿತವಾಗಿವೆ. ಆದರ ಮೇಲೆ ೧೩×೧೦⅔ ಇಂಚಿನ ಸ್ಥಾನದಲ್ಲಿ ಒಂದು ಲೇಖವನ್ನು ಕೆತ್ತಲಾಗಿದೆ. ಇದರ ಲಿಪಿಯು ವಿದ್ವಾಂಸರ ಮತಕ್ಕನುಸರಿಸಿ ಅಶೋಕನ ಲಿಪಿಗಿಂತ ಪೂರ್ವಕಾಲದ್ದೆಂದು ತಿಳಿಯುತ್ತದೆ. ಭಾಷೆಯು ಪ್ರಾಕೃತವಾಗಿದೆ. ಉಪಲಬ್ಧ ಲೇಖ-ಖಂಡದಿಂದ ವೀರ ಭಗವಾನ್‌ನಿಗಾಗಿ ಅಥವಾ ಭಗವಂತನ ೮೪ ನೆಯ ವರ್ಷದಲ್ಲಿ ಮಧ್ಯಮಿಕಾದಲ್ಲಿ ನಿರ್ಮಾಣ ಮಾಡಲಾಗಿದೆ— ಎಂದು ಸ್ಪಷ್ಟವಾಗಿ ಓದಲಾಗಿದೆ. ಇದರಿಂದ ಮಹಾವೀರ ನಿರ್ವಾಣದಿಂದ ೮೪ ವರ್ಷಗಳು ಉರುಳಿದ ಮೇಲೆ (ಕ್ರಿ. ಪೂ. ೪೪೩) ದಕ್ಷಿಣಪೂರ್ವ ರಜಪುತಸ್ಥಾನದ

ಈ ಅತಿಪ್ರಾಚೀನ ಮತ್ತು ಇತಿಹಾಸ ಪ್ರಸಿದ್ಧ ಮಧ್ಯಮಿಕಾ ಎಂಬ ಹೆಸರಿನ ನಗರ ದಲ್ಲಿ ಯಾವುದೋ ಒಂದು ಮಂಟಪವನ್ನೋ, ಚೈತ್ಯಾಲಯವನ್ನೋ ನಿರ್ಮಿಸ ಲಾಯಿತೆಂದು ಸಿದ್ಧವಾಗುತ್ತದೆ.

ದುರ್ಭಾಗ್ಯದಿಂದ ಇದರ ತರುವಾಯ ದೀರ್ಘಕಾಲದವರೆಗೆ ನಿರ್ಮಾಣಗೊಂಡ ಯಾವ ಕೃತಿಗಳೂ ನಮಗೆ ಉಪಲಬ್ಧವಾಗಿಲ್ಲ. ಆದರೆ ಸಾಹಿತ್ಯದಲ್ಲಿ ಪ್ರಾಚೀನ ಜೈನಮಂದಿರ ಮೊದಲಾದವುಗಳ ಬಹಳಷ್ಟು ಉಲ್ಲೇಖವು ದೊರೆಯುತ್ತದೆ. ಉದಾ ಹರಣೆಗೆಂದು ಜೈನ ಹರಿವಂಶ ಪುರಾಣದ ಪ್ರಶಸ್ತಿಯಲ್ಲಿ ಅದರ ಕರ್ತೃವಾದ ಜಿನ ಸೇನಾಚಾರ್ಯನು ಸ್ಪಷ್ಟವಾಗಿ ಉಲ್ಲೇಖಿಸಿದುದನ್ನು ಕಾಣುತ್ತೇವೆ. ಶಕ ಸಂವತ್ ೭೦೫ ರಲ್ಲಿ (ಕ್ರಿ. ಶ. ೭೮೩) ಅವನು ವರ್ಧಮಾನಪುರದ ಪಾರ್ಶ್ವಾಲಯದ (ಪಾರ್ಶ್ವ ನಾಥಮಂದಿರ) ನನ್ನರಾಜಬಸ್ತಿಯಲ್ಲಿ ಕುಳಿತು ಹರಿವಂಶ ಪುರಾಣದ ರಚನೆಯನ್ನು ಮಾಡಿದನು. ಆದರೆ ಆ ರಚನೆಯ ಉಳಿದ ಭಾಗವನ್ನು ಅವನು ಅಲ್ಲಿಯೇ ಇರುವ ಶಾಂತಿನಾಥ ಮಂದಿರದಲ್ಲಿ ಕುಳಿತು ಪೂರ್ಣಗೊಳಿಸಿದನು. ಆ ಸಮಯದಲ್ಲಿ ಉತ್ತರ ದಲ್ಲಿ ಇಂದ್ರಾಯುಧ, ದಕ್ಷಿಣದಲ್ಲಿ ಕೃಷ್ಣನ ಪುತ್ರನಾದ ಶ್ರೀವಲ್ಲಭ, ಮತ್ತು ಪಶ್ಚಿಮ ದಲ್ಲಿ ವತ್ಸರಾಜ ಹಾಗೂ ಸೌರಮಂಡಲದಲ್ಲಿ ವೀರವರಾಹ ಎಂಬ ಹೆಸರಿನ ರಾಜರು ರಾಜ್ಯವಾಳುತ್ತಿದ್ದರು. ಈ ವರ್ಧಮಾನ ಪುರವು ಸೌರಾಷ್ಟ್ರದಲ್ಲಿರುವ ಈಗಿನ ವಢ ವಾನ ಎಂದು ತಿಳಿಯಲಾಗುತ್ತದೆ. ಆದರೆ ನಾನು ನನ್ನ ಒಂದು ಲೆಖದಲ್ಲಿ, ಹರಿ ವಂಶಪುರಾಣದಲ್ಲಿ ಉಲ್ಲೇಖಗೊಂಡ ವರ್ಧಮಾನಪುರವು ಮಧ್ಯಪ್ರದೇಶದ ಧಾರಾ ಜಿಲ್ಲೆಯಲ್ಲಿರುವ ಈಗಿನ ಬದನಾವರವಿರುತ್ತದೆ, ಇದರಿಂದ ಹತ್ತು ಮೈಲು ದೂರ ದಲ್ಲಿರುವ ಈ ಕಾಲದ ದುತರಿಯಾ ಎಂಬ ಹೆಸರಿನ ಊರು ಪ್ರಾಚೀನ ದೋಸ್ತರಿಕಾ ಇರಬೇಕು, ಇಲ್ಲಿಯ ಪ್ರಜೆಗಳು ಜಿನಸೇನನ ಉಲ್ಲೇಖಕ್ಕೆ ಅನುಸರಿಸಿ ಆ ಶಾಂತಿ ನಾಥ ಮಂದಿರದಲ್ಲಿ ವಿಶೇಷ ಪೂಜಾ-ಅರ್ಚಾ ಹಾಗೂ ಉತ್ಸವಗಳನ್ನು ಮಾಡಿದ್ದರು– ಎಂದು ಸಿದ್ಧಮಾಡಿದ್ದೇನೆ. ಈ ಪ್ರಕಾರ ವರ್ಧಮಾನಪುರದಲ್ಲಿ ಎಂಟನೆಯ ಶತ ಮಾನದಲ್ಲಿ ಪಾರ್ಶ್ವನಾಥ ಮತ್ತು ಶಾಂತಿನಾಥ ಎಂಬ ಎರಡು ಮಂದಿರಗಳಿದ್ದುದು ಸಿದ್ಧವಾಗುತ್ತದೆ. ಶಾಂತಿನಾಥಮಂದಿರವು ೪೦೦ ವರ್ಷಗಳ ವರೆಗೆ ವಿದ್ಯಮಾನ ವಾಗಿತ್ತು. ಇದಕ್ಕೆ ಪ್ರಮಾಣವು ನಮಗೆ ಬದನಾವರದಲ್ಲಿ ದೊರೆತ ಅಚ್ಛುಪ್ತಾ ದೇವಿಯ ಮೂರ್ತಿಯ ಮೇಲಿರುವ ಲೇಖದಲ್ಲಿ ಲಭಿಸುತ್ತದೆ. ಯಾಕಂದರೆ ಅದರಲ್ಲಿ ಸಂವತ್ ೧೨೩೯ ರ (ಕ್ರಿ. ಶ. ೧೧೮೨) ವೈಶಾಖ ಕೃಷ್ಣ ಸಪ್ತಮಿಯಂದು ಆ ಮೂರ್ತಿ ಯನ್ನು ವರ್ಧಮಾನಪುರದ ಶಾಂತಿನಾಥ ಚೈತ್ಯಾಲಯದಲ್ಲಿ ಸ್ಥಾಪಿಸಲಾಯಿತೆಂದು ಹೇಳಿದೆ. (ಜೈ. ಸಿ ಭಾ ೧೨, ೨, ಪೃ. ೯ ಮೊದಲಾದವುಗಳು; ಹಾಗೂ ಜೈನ ಎಂಟೀಕ್ವೇರಿ ೧೭, ೨, ಪೃ. ೫೯) ಇದರ ತರುವಾಯ ಇಲ್ಲಿಯ ಈ ಮಂದಿರವು ಯಾವಾಗ ನಾಶವಾಯಿತೆಂಬುದುನ್ನು ಹೇಳಲಿಕ್ಕೆ ಬರುವುದಿಲ್ಲ.

ಜೋಧಪುರದ ಪಶ್ಚಿಮೋತ್ತರ ದಿಕ್ಕಿನಲ್ಲಿ ೩೨ ಮೈಲಿನ ಮೇಲೆ ಓಸಿಯಾ

ರೈಲು ನಿಲ್ದಾಣದ ಸಮೀಪದಲ್ಲಿಯೇ ಓಸಿಯಾ ಎಂಬ ಹೆಸರಿನ ಗ್ರಾಮದ ಹೊರ ಭಾಗದಲ್ಲಿ ಪ್ರಾಚೀನ ಹಿಂದೂ ಹಾಗೂ ಜೈನ ಮಂದಿರಗಳಿವೆ. ಇವುಗಳಲ್ಲಿ ಮಹಾವೀರ ಮಂದಿರವನ್ನು ಈಗಲೂ ಒಂದು ತೀರ್ಥಕ್ಷೇತ್ರವೆಂದು ಮನ್ನಿಸಲಾಗುತ್ತಿದೆ. ಈ ಮಂದಿರವು ಒಂದು ಆವಾರದ ಗೋಡೆಯ ಒಳಗೆ ಇದೆ. ಆವಾರದ ಗೋಡೆಗೆ ಹೊಂದಿ ಅನೇಕ ಕೊಠಡಿಗಳಿವೆ. ಮಂದಿರವು ಬಹಳ ಸುಂದರವಾಗಿದೆ. ವಿಶೇಷವಾಗಿ ಅದರ ಮಂಟಪದ ಕಂಭಗಳ ಕಲಾಕೃತಿಯು ದರ್ಶನೀಯವಾಗಿದೆ. ಇದರ ಶಿಖರಾದಿ ರಚನೆಗಳು ನಾಗರ ಶೈಲಿಯವಾಗಿವೆ. ಇಲ್ಲಿ ಒಂದು ಶಿಲಾಲೇಖವೂ ಇದೆ. ಅದರಲ್ಲಿ ಓಸಿಯಾದ ಮಹಾವೀರ ಮಂದಿರವನ್ನು ಗುಜರಾಥದ ಪ್ರತೀಹಾರ ರಾಜನಾದ ವತ್ಸರಾಜನ (ಎರಡನೆಯ ನಾಗಭಟನ ತಂದೆ, ಕ್ರಿ. ಶ. ೭೭೦ ರಿಂದ ೮೦೦) ಕಾಲದಲ್ಲಿ ಇತ್ತೆಂದೂ ಅದರ ಮಹಾಮಂಟಪವನ್ನು ಕ್ರಿ. ಶ. ೯೫೬ ರಲ್ಲಿ ನಿರ್ಮಾಣ ಮಾಡಲಾಯಿತೆಂದೂ ಉಲ್ಲೇಖವಿದೆ. ಆ ಮೇಲೆಯೂ ಮಂದಿರದ ನಿರ್ಮಾಣ ಕಾರ್ಯವು ಸಾಗುತ್ತಲೇ ಬಂತು. ಆದರೆ ಅದರ ಮೇಲಿನ ರೂಪವು ನಷ್ಟವಾದಂತೆ ಕಂಡುಬರುವುದಿಲ್ಲ. ಇದರಲ್ಲಿ ಕಲಾತ್ಮಕ ಸಂತುಲನವು ರೂಪುಗೊಂಡಿದೆ; ಐತಿಹಾಸಿಕ ಮಹತ್ವವೂ ಕೂಡ ಉಳಿದು ಬಂದಿದೆ.

ಮಾರವಾಡದಲ್ಲಿಯೇ ಮತ್ತೆ ಎರಡು ಸ್ಥಳಗಳಲ್ಲಿಯ ಜೈನ ಮಂದಿರಗಳು ಉಲ್ಲೇಖನೀಯವಾಗಿವೆ. ಫಾಲನಾ ರೈಲ್ವೆ ನಿಲ್ದಾಣದ ಸಮೀಪದಲ್ಲಿ ಸಾವಡೀ ಎಂಬ ಹೆಸರಿನ ಊರೊಳಗೆ ೧೧ ನೆಯ ಶತಮಾನದಿಂದ ೧೬ ನೆಯ ಶತಮಾನದ ವರೆಗಿನ ಅನೇಕ ಹಿಂದೂ ಮತ್ತು ಜೈನ ಮಂದಿರಗಳು ಇವೆ. ವಿಶೇಷ ಮಹತ್ವಪೂರ್ಣ ಜೈನಮಂದಿರಗಳು ಈಗಿನ ಜೈನ ಧರ್ಮಶಾಲೆಯ ಆವಾರದಲ್ಲಿ ಇವೆ. ಶೈಲಿಯಲ್ಲಿ ಈ ಮಂದಿರಗಳು ಈ ಮೊದಲು ಹೇಳಿದಂತೆಯೇ ಇವೆ. ಶಿಖರಗಳನ್ನು ನಾಗರ ಶೈಲಿಯಲ್ಲಿಯೇ ನಿರ್ಮಿಸಲಾಗಿದೆ. ಮಾರವಾಡ-ಜೋಧಪುರ ರೈಲು ಮಾರ್ಗದಲ್ಲಿ ಮಾರವಾಡ-ಪಲ್ಲೀ ನಿಲ್ದಾಣದ ಸಮೀಪದಲ್ಲಿ ನೌಲಖಾ ಎಂಬ ಹೆಸರಿನ ಜೈನ ಮಂದಿರವಿದೆ. ಇದನ್ನು ಅಲ್ಹಣದೇವನು ಸಂವತ್ ೧೨೧೮ ರಲ್ಲಿ (ಕ್ರಿ. ಶ ೧೧೬೧) ನಿರ್ಮಾಣ ಮಾಡಿಸಿದ್ದನು. ಆದರೆ ಇದರಲ್ಲಿರುವ ತೀರ್ಥಂಕರ ಮೂರ್ತಿಯ ಮೇಲೆ ಕೆತ್ತಿದ ಬರಹವು ವಿ. ಸಂ. ೧೧೪೪ ರಿಂದ ೧೨೦೧ ರ ವರೆಗಿನದೆಂದು ಕಂಡುಬರುತ್ತದೆ. ಅದರಿಂದ ಈ ಮಂದಿರದ ಪೂರ್ವದಲ್ಲಿಯೂ ಇಲ್ಲೊಂದು ಮಂದಿರವಿರಬೇಕೆಂದು ಗೊತ್ತಾಗುತ್ತದೆ.

ಈಗ ನಾವು ಆಬೂಗಿರಿಯ ಜೈನಮಂದಿರಗಳ ಕಡೆಗೆ ಹೊರಳುತ್ತೇವೆ. ಅಲ್ಲಿ ಕೇವಲ ಜೈನ ಕಲೆಯಷ್ಟೇ ಅಲ್ಲ, ಭಾರತೀಯ ವಾಸ್ತು-ಕಲೆಯು ತನ್ನ ಸರ್ವೋತ್ಕೃಷ್ಟ ವಿಕಸಿತ ರೂಪವನ್ನು ಹೊಂದಿದುದನ್ನು ಕಾಣುತ್ತೇವೆ. ಆಬೂ ರೋಡ ರೈಲು ನಿಲ್ದಾಣದಿಂದ ೧೮ ಮೈಲು ಹಾಗೂ ಆಬೂ ಕ್ಯಾಂಪಿನಿಂದ ೧½ ಮೈಲಿನ ಮೇಲೆ ದೇಲವಾಡಾ ಎಂಬ ಹೆಸರಿನ ಸ್ಥಾನವಿದೆ. ಅಲ್ಲಿ ಈ ಜೈನ ಮಂದಿರಗಳು

ಇವೆ. ಊರ ನೆರೆಯಲ್ಲಿ ಸಮುದ್ರತಲದಿಂದ ನಾಲ್ಕು-ಐದು ಸಾವಿರ ಫೂಟು ಎತ್ತರದ ಮೇಲೆ ಪರ್ವತದಲ್ಲಿ ವಿಶಾಲ ಆವಾರದ ಒಳಗೆ, ವಿಮಲ-ವಸಹೀ, ಲೂಣವಸಹೀ ಪಿತಲಹರ, ಚೌಮುಖಾ ಮತ್ತು ಮಹಾವೀರ ಸ್ವಾಮೀ ಎಂಬ ಹೆಸರಿನ ಐದು ಮಂದಿರಗಳಿವೆ. ಈ ಮಂದಿರಗಳ ಕಡೆಗೆ ಹೋಗುವಂಥ ಮಾರ್ಗದ ಎರಡನೆಯ ಮಗ್ಗಲಿಗೆ ಒಂದು ದಿಗಂಬರ ಜೈನ ಮಂದಿರವಿದೆ. ಈ ಎಲ್ಲ ಮಂದಿರಗಳಲ್ಲಿ ಕಲೆಯ ದೃಷ್ಟಿಯಿಂದ ಮೊದಲಿನ ಎರಡು ಕಟ್ಟಡಗಳು ಸರ್ವಶ್ರೇಷ್ಠವಾಗಿವೆ. ವಿಮಲ-ವಸಹಿಯ ನಿರ್ಮಾಣ ಕರ್ತೃವು ವಿಮಲಶಾಹನು. ಈತನು ಪೋರಪಾಡ ವಂಶದವನು. ಚಾಲುಕ್ಯವಂಶದ ರಾಜನಾದ ಮೊದಲನೆಯ ಭೀಮದೇವನ ಮಂತ್ರಿಯೂ ಸೇನಾಪತಿಯೂ ಆಗಿದ್ದನು. ಇವನಿಗೆ ಮಕ್ಕಳಿರಲಿಲ್ಲ. ಅವನು ತನ್ನ ಅಪಾರ ಧನವನ್ನು ವೆಚ್ಚಮಾಡಿ, ಪ್ರಾಚೀನ ವೃತ್ತಾಂತಕ್ಕನುಸರಿಸಿ, ಸ್ವರ್ಣಮುದ್ರೆಗಳನ್ನು ಪಡೆದು, ಈ ಭೂಮಿಯನ್ನು ಸಂಪಾದಿಸಿ, ಅದರ ಮೇಲೆ ಆದಿನಾಥ ತೀರ್ಥಂಕರರ ಮಂದಿರವನ್ನು ನಿರ್ಮಿಸಿದನು. ಈ ಮಂದಿರವು ಪೂರ್ಣವಾಗಿ ಬಿಳಿಯ ಸಂಗಮರವರೀ ಕಲ್ಲಿನಿಂದ ರೂಪುಗೊಂಡಿದೆ. ಜನಶ್ರುತಿಗೆ ಅನುಸರಿಸಿ, ಈ ಮಂದಿರ ನಿರ್ಮಾಣಕ್ಕೆ ೧೮ ಕೋಟಿ, ೫೩ ಲಕ್ಷ ಸುವರ್ಣ ಮುದ್ರೆಗಳು ವೆಚ್ಚವಾದುವೆಂದು ತಿಳಿಯುತ್ತದೆ. ಸಂಗಮರವರಿಯ ದೊಡ್ಡ ದೊಡ್ಡ ಶಿಲೆಗಳನ್ನು ಆನೆಗಳ ಮೇಲೆ ಹೇರಿ, ಪರ್ವತದ ತಳದಿಂದ ಮೇಲಕ್ಕೆ ಸಾಗಿಸಲಾಯಿತು. ಹಾಗೂ ಆದಿನಾಥ ತೀರ್ಥಂಕರನ ಸುವರ್ಣಮಿಶ್ರಿತ ಹಿತ್ತಾಳೆಯ ೪ ಫೂಟು ೩ ಇಂಚು ಎತ್ತರದ ವಿಶಾಲ ಪದ್ಮಾಸನ ಮೂರ್ತಿಯನ್ನು ನಿರ್ಮಿಸಿ, ಪ್ರತಿಷ್ಠಿಸಲಾಯಿತು. ಈ ಪ್ರತಿಷ್ಠೆಯು ವಿ. ಸಂ. ೧೦೮೮ (ಕ್ರಿ. ಶ. ೧೦೩೧) ರಲ್ಲಿ ಘೋರಿ ಮೊಹಮ್ಮದನು ಸೋಮನಾಥ ಮಂದಿರವನ್ನು ವಿನಾಶಗೊಳಿಸಿದ ಏಳನೆಯ ವರ್ಷದ ತರುವಾಯ ಆಯಿತು. ಈ ಮೂರ್ತಿಯು 'ಹಿರಿಯಣ್ಣ' ಎಂಬ ಹೆಸರಿನಿಂದ ವಿಖ್ಯಾತವಾದಂತೆ ಕಂಡುಬರುತ್ತದೆ. ಈ ಮಂದಿರಕ್ಕೆ ಮಧ್ಯ ಮಧ್ಯದಲ್ಲಿ ಕೆಲವೊಂದು ಮುಕ್ಕುಮುರುಕುಗಳುಂಟಾದುವು. ಅವುಗಳ ಪುನರ್-ನಿರ್ಮಾಣವನ್ನು ವಿಮಲಶಾಹನ ವಂಶಜರು ಮಾಡಿದರು. ಇಂಥ ನಿರ್ಮಿತಿಯು ವಿ. ಸಂ ೧೨೦೬ ಮತ್ತು ೧೨೪೫ ಹಾಗೂ ೧೩೬೮ ರಲ್ಲಿ ನಡೆಯಿತು. ಈ ಮಂದಿರದ ರಚನೆಯು ಹೀಗಿದೆ :—

ಒಂದು ವಿಶಾಲ ಚತುಷ್ಕೋಣ ಆಕಾರದ ೧೨೮ × ೭೫ ಫೂಟು ಉದ್ದಗಲವುಳ್ಳ ಪ್ರಾಂಗಣವಿದೆ. ಇದರಲ್ಲಿ ನಾಲ್ಕು ಮಗ್ಗಲು ದೇವಕುಲಗಳಿವೆ. ಈ ದೇವಕುಲಗಳ ಸಂಖ್ಯೆಯು ೫೪ ಇದೆ. ಪ್ರತಿಯೊಂದರಲ್ಲಿಯೂ ಒಂದು ಪ್ರಧಾನ ಮೂರ್ತಿಯೂ ಅದಕ್ಕೆ ಆಶ್ರಯಿಸಿದ ಅನ್ಯ ಪ್ರತಿಮೆಗಳೂ ವಿರಾಜಮಾನವಾಗಿವೆ. ಈ ದೇವಕುಲದ ಎದುರಿಗೆ ನಾಲ್ಕೂ ಕಡೆಗೆ ಎರಡೆರಡು ಕಂಭಗಳಿಂದ ಕೂಡಿದ ಮಂಟಪಾಕಾರದ ಪ್ರದಕ್ಷಿಣಾಪಥವಿದೆ. ಪ್ರತಿಯೊಂದು ದೇವಕುಲದ ಎದುರಿಗೆ ನಾಲ್ಕು ಕಂಭಗಳ ಮಂಟಪವು ಬರುತ್ತದೆ. ಈ ಪ್ರಕಾರ ಒಟ್ಟು ಕಂಭಗಳ ಸಂಖ್ಯೆಯು ೨೩೨ ಇದೆ. ಪ್ರಾಂಗಣದ ನಟ್ಟನಡುವೆ ಮುಖ್ಯಮಂದಿರವಿದೆ. ಪೂರ್ವದಿಕ್ಕಿನಿಂದ ಪ್ರವೇಶ

ಮಾಡಿದ ಮೇಲೆ ಪ್ರೇಕ್ಷಕರಿಗೆ ಮಂದಿರದ ನಾನಾ ಭಾಗವು ಈ ಪ್ರಕಾರ ಕಾಣಲು ಲಭಿಸುತ್ತದೆ :—

(೧) ಹಸ್ತಿಶಾಲಾ ;— (೨೫×೩೦ ಫೂಟು) ಇದರಲ್ಲಿ ಆರು ಕಂಭಗಳಿವೆ. ಹಾಗೆಯೇ ಆನೆಗಳ ಮೇಲೆ ಹತ್ತಿದ ವಿಮಲ ಶಾಹ ಮತ್ತು ಅವನ ವಂಶಜರ ಮೂರ್ತಿ ಗಳು ಇವೆ. ಇವುಗಳನ್ನು ಅವನ ಒಬ್ಬ ವಂಶಜನಾದ ಪೃಥ್ವೀಪಾಲನು ಕ್ರಿ. ಶ. ೧೧೫೦ ರ ಸುಮಾರಿನಲ್ಲಿ ನಿರ್ಮಾಣ ಮಾಡಿಸಿದ್ದನು (೨) ಅದರ ಮುಂದೆ ೨೫ ಫೂಟು ಉದ್ದಗಲವುಳ್ಳ ಮುಖಮಂಟಪವಿದೆ (೩) ಮತ್ತು ಅದಕ್ಕಿಂತ ಮುಂದೆ ದೇವಕುಲಗಳ ಪಂಕ್ತಿ ಮತ್ತು ಭಮಿತಿ ಹಾಗೂ ಪ್ರದಕ್ಷಿಣಾಮಂಟಪಗಳು ಇವೆ. ಇವುಗಳನ್ನು ಮೇಲೆ ವರ್ಣಿಸಲಾಗಿದೆ. ಆಮೇಲೆ ಮುಖ್ಯಮಂದಿರದ ರಂಗ ಮಂಟಪ ಅಥವಾ ಸಭಾಮಂಟಪವು ದೊರೆಯುತ್ತದೆ. ಇದರ ಗೋಲ ಶಿಖರವು ೨೪ ಕಂಭಗಳ ಮೇಲೆ ಆಧಾರಿತವಾಗಿದೆ, ಪ್ರತಿಯೊಂದು ಕಂಭದ ಮೇಲ್ತುದಿಗೆ ವಕ್ರವಾಗಿರುವ ಶಿಲಾಪಟವನ್ನು ಕೂಡ್ರಿಸಲಾಗಿದೆ. ಇವು ಆ ಭವ್ಯಮೇಲ್ಛಾವಣಿಗೆ ಆಧಾರಿತವಾಗಿವೆ. ಮೇಲ್ಛಾವಣಿಯ ಪದ್ಮಶಿಲೆಯ ಮಧ್ಯದಲ್ಲಿ ನಿರ್ಮಿಸಿದ ಲೋಲಕಗಳ ಕಲೆಯು ಅದ್ವಿತೀಯವಾಗಿದೆ. ಕಲೆಯ ಇತಿಹಾಸದಲ್ಲಿ ವಿಖ್ಯಾತ ವಾಗಿದೆ. ಉತ್ತರೋತ್ತರ ಚಿಕ್ಕದಾಗುತ್ತಹೋಗಿರುವ ಚಂದ್ರಮಂಡಲಯುಕ್ತ ಕಂಚುಕಿಯರ-೧೬ ವಿದ್ಯಾಧರಿಯರ-ಆಕೃತಿಗಳು ಅತ್ಯಂತ ಮನೋಜ್ಞವಾಗಿವೆ. ಈ ರಂಗ-ಮಂಟಪದ ಸಮಸ್ತ ರಚನೆಯನ್ನೂ ಅಲ್ಲಿಯ ಕೆತ್ತನೆಯ ಕಲಾಕುಸುರಿ ಯನ್ನೂ ನೋಡಿ ಪ್ರೇಕ್ಷಕರಿಗೆ ತಾವೆಲ್ಲಿಯೋ ದಿವ್ಯಲೋಕದಲ್ಲಿ ಬಂದುಬಿಟ್ಟದ್ದೇ ವೆಂದು ಭಾಸವಾಗುತ್ತದೆ. ರಂಗಶಾಲೆಯಿಂದ ಮುಂದೆ ಸಾಗಿದ ಮೇಲೆ ನವಚೌಕಿಯು ಲಭಿಸುತ್ತದೆ. ಇದಕ್ಕೆ ಈ ಹೆಸರು ಅದರ ಮೇಲ್ಛಾವಣಿಗಿರುವ ಒಂಭತ್ತು ಅಂಕಣ ಗಳಿಂದ ಉಂಟಾಗಿದೆ. ಇದರ ಮುಂದೆ ಗೂಢಮಂಟಪವಿದೆ. ಇಲ್ಲಿಂದಲೇ ಮುಖ್ಯ ಪ್ರತಿಮೆಯ ದರ್ಶನ-ವಂದನೆಗಳನ್ನು ಮಾಡಲಾಗುತ್ತದೆ. ಇದರ ಎದುರಿಗೆ ಆ ಮೂಲ ಗರ್ಭಗೃಹವಿದೆ. ಇದರಲ್ಲಿ ಋಷಭನಾಥನ ಧಾತುವಿನ ಪ್ರತಿಮೆಯೂ ವಿರಾಜಮಾನವಾಗಿದೆ.

ಇದೇ ಮಂದಿರದ ಎದುರಿಗೆ ಲೂಣ-ವಸಹೀ ಇದೆ. ಇದರ ಮೂಲ ನಾಯಕನು ನೇಮಿನಾಥನಾದುದರಿಂದ ನೇಮಿನಾಥ ಮಂದಿರವೆಂದೂ ಹೇಳುತ್ತಾರೆ. ಇದರ ನಿರ್ಮಾಣವನ್ನು ಢೋಲಕಾದ ಬಘೇಲವಂಶೀರಾಜನಾದ ವೀರಧವಲನ ಇಬ್ಬರು ಮಂತ್ರಿಗಳಾದ ತೇಜಪಾಲ ಮತ್ತು ವಸ್ತುಪಾಲರು ಕ್ರಿ. ಶ. ೧೨೩೨ ರಲ್ಲಿ ಮಾಡಿಸಿ ದರು. ತೇಜಪಾಲ ಮಂತ್ರಿಯ ಪುತ್ರನಾದ ಲೂಣಸಿಂಹನ ಸ್ಮೃತಿಗಾಗಿ ಇದು ನಿರ್ಮಾಣವಾದುದರಿಂದ ಅದು ಆ ಹೆಸರಿನಿಂದ ಪ್ರಸಿದ್ಧವಾಗಿದೆ. ಈ ಮಂದಿರದ ವಿನ್ಯಾಸ ಮತ್ತು ರಚನೆಗಳೂ ಕೂಡ ಬಹಳಷ್ಟು ಆದಿನಾಥ ಮಂದಿರದಂತೆಯೇ ಇವೆ. ಇದರಲ್ಲಿಯೂ ಆದೇ ಪ್ರಕಾರ ಪ್ರಾಂಗಣ, ದೇವಕುಲ ಹಾಗೂ ಸ್ತಂಭ ಮಂಟಪಗಳ

ಪಂಕ್ತಿಗಳು ವಿದ್ಯಮಾನವಾಗಿವೆ. ಇದರ ಹಸ್ತಿಶಾಲೆಯು ಇದರ ಪ್ರಾಂಗಣದ ಹೊರಗೆ ಇಲ್ಲ, ಒಳಗೆಯೇ ಇದೆ. ಇದು ಇದರ ವಿಶೇಷತೆಯಾಗಿದೆ. ರಂಗಮಂಟಪ, ನವಚೌಕೀ, ಗೂಢಮಂಟಪ ಮತ್ತು ಗರ್ಭಗೃಹಗಳ ರಚನೆಯು ಅದರಂತೆಯೇ ಇವೆ. ಆದರೆ ಇದರಲ್ಲಿ ರಂಗಮಂಟಪದ ಕಂಭಗಳು ಹೆಚ್ಚು ಎತ್ತರವಾಗಿವೆ. ಪ್ರತಿಯೊಂದು ಕಂಭದ ರಚನೆ ಹಾಗೂ ಕೆತ್ತನೆಯ ರೀತಿಗಳು ಭಿನ್ನವಾಗಿವೆ. ಮಂಟಪದ ಮೇಲ್ ಛಾವಣಿಯು ಸ್ವಲ್ಪ ಚಿಕ್ಕದಾಗಿದೆ. ಆದರೆ ಅದರ ರಚನೆ ಮತ್ತು ಕೆತ್ತನೆಯ ಶಿಲ್ಪಗಳೂ ಸೌಂದರ್ಯವೂ ವಸಹಿಯಕ್ಕಿಂತ ಯಾವ ಪ್ರಕಾರದಲ್ಲಿಯೂ ಕಡಿಮೆ ಆಗಿಲ್ಲ. ಇದರ ರಚನಾ ಸೌಂದರ್ಯವನ್ನು ಪ್ರಶಂಸಿಸುತ್ತ ಫರ್ಗ್ಯುಸನ್ ಸಾಹೇಬನು ಹೀಗೆ ಹೇಳಿದ್ದಾನೆ:—"ಇಲ್ಲಿ ಸಂಗಮರವರೀಶಿಲೆಯಲ್ಲಿ ಯಾವ ಪರಿಪೂರ್ಣತೆಯಿಂದ, ಯಾವ ಲಾಲಿತ್ಯದಿಂದ ಮತ್ತು ಯಾವ ಸಂತುಲಿತ ಅಲಂಕರಣದ ಶೈಲಿಯಿಂದ ಕೆಲಸವನ್ನು ಮಾಡಲಾಗಿದೆಯೋ ಇದಕ್ಕೆ ಸಮನಾಗಿ ಇನ್ನೆಲ್ಲಿಯೂ ನೋಡಲು ದೊರೆಯುವುದಿಲ್ಲ."

ಈ ಎರಡೂ ಮಂದಿರಗಳ ಸಂಗಮರವರಿಯ ಶಿಲ್ಪಕಲೆಯನ್ನು ಕಂಡು, ದೊಡ್ಡ ದೊಡ್ಡ ಕಲಾಕಾರರು ಆಶ್ಚರ್ಯಚಕಿತರಾಗಿದ್ದಾರೆ. ಈ ಕುಶಲತೆಗೆ ಬೆರಳು ಕಚ್ಚದೆ ಇಲ್ಲ. ಇಲ್ಲಿ ಭಾರತೀಯ ಶಿಲ್ಪಿಗಳು ಯಾವ ಕಲಾಕೌಶಲ್ಯವನ್ನು ವ್ಯಕ್ತಮಾಡಿದ್ದಾರೆಯೋ ಅದರಿಂದ ಕಲೆಯ ಕ್ಷೇತ್ರದಲ್ಲಿ ಭಾರತದ ಶಿರವು ಯಾವಾಗಲೂ ಉನ್ನತವಾಗಿ ಗರ್ವದಿಂದ ಮೆರೆಯುವಂತಿದೆ. ಕಲೆಗಾರರ ಉಳಿಯು ಇಲ್ಲಿ ಕಾರ್ಯವೆಸಗಿಲ್ಲ. ಸಂಗಮರವರಿ ಶಿಲೆಯನ್ನು ತಿಕ್ಕಿ ತಿಕ್ಕಿ ಅದರಲ್ಲಿ ಸೂಕ್ಷ್ಮತೆಯನ್ನು ಕನ್ನಡಿಯಂಥ ಹೊಳಪನ್ನೂ ಪಾರದರ್ಶಕತೆಯನ್ನೂ ಉಂಟುಮಾಡಿದ್ದಾರೆ. ಇದು ಉಳಿಯಿಂದ ಸಾಧ್ಯವಿಲ್ಲ. ಕಲೆಗಾರರು ಕಲ್ಲನ್ನು ತಿಕ್ಕಿ ತಿಕ್ಕಿ ಹೊರಡಿಸಿದ ಹುಡಿಯ ಪ್ರಮಾಣದ ಮೇಲಿಂದ ಅವರಿಗೆ ಸಂಬಳವನ್ನು ಕೊಡಲಾಗುತ್ತಿತ್ತೆಂದು ಹೇಳುತ್ತಾರೆ. ಒಟ್ಟಿನಲ್ಲಿ ಈ ಮಂದಿರ ನಿರ್ಮಾಣದ ಬಗ್ಗೆ ಎಚ್. ಜಿಮ್ಮರನ ಶಬ್ದಗಳಲ್ಲಿ ಹೀಗೆ ಹೇಳಬಹುದಾಗಿದೆ:—"ಇಲ್ಲಿ ಭವನವು ಅಲಂಕಾರ ರೂಪವನ್ನು ಧಾರಣಮಾಡಿದೆ. ಇದನ್ನು ಶಬ್ದಗಳಲ್ಲಿ ತಿಳಿಸಿ ಹೇಳುವುದು ಅಸಂಭವವಿದೆ." ಮಂದಿರಗಳನ್ನು ಪ್ರತ್ಯಕ್ಷ ನೋಡಿಯೇ ಯಾರಾದರೂ ಅದರ ಅದ್ಭುತ ಕಲೆಯ ಸೌಂದರ್ಯವನ್ನು ಅನುಭವಿಸುವುದು ಸಾಧ್ಯವಿದೆ. ನೋಡದೆ ಅದರ ಕಲ್ಪನೆಯನ್ನು ಮಾಡುವುದು ಸಾಧ್ಯವಿಲ್ಲ, ಶಕ್ಯವೂ ಇಲ್ಲ.

ಲೂಣವಸಹಿಯ ಹಿಂದಿನ ಮಗ್ಗಲು ಪಿತ್ತಲ್ಲಹರ ಎಂಬ ಹೆಸರಿನ ಜೈನ ಮಂದಿರವಿದೆ. ಇದನ್ನು ಗುರ್ಜರ ವಂಶದ ಭೀಮಾಶಾಹನು ೧೫ ನೆಯ ಶತಮಾನದ ಮಧ್ಯದಲ್ಲಿ ನಿರ್ಮಿಸಿದನು. ಇಲ್ಲಿಯ ವಿ. ಸಂ. ೧೪೮೩ ರ ಲೇಖನದಲ್ಲಿ ಕೆಲವೊಂದು ಭೂಮಿ ಮತ್ತು ಗ್ರಾಮಗಳನ್ನು ದಾನಕೊಟ್ಟ ಉಲ್ಲೇಖವಿದೆ. ವಿ. ಸಂ. ೧೪೮೯ ರ ಇನ್ನೊಂದು ಲೇಖದಲ್ಲಿ ಹೀಗೆ ಹೇಳಿದೆ:— ಆಬೂವಿನ ಚೌಹಾನವಂಶೀರಾಜನಾದ

ರಾಜಧರ ದೇವಡಾ ಚುಂಡಾ ಎಂಬವನು ಇಲ್ಲಿಯ ಮೂರು ಮಂದಿರಗಳು-ಅರ್ಥಾತ್ ವಿಮಲವಸಹೀ, ಲೂಣವಸಹೀ ಮತ್ತು ಪಿತ್ತಲಹರಗಳಿಗಾಗಿ ತೀರ್ಥಯಾತ್ರೆಗೆ ಬರುವ ಯಾತ್ರಿಕರಿಗೆ ಯಾವಾಗಲೂ ಕರವನ್ನು ಮುಕ್ತಗೊಳಿಸಲಾಗಿದೆ. ಪಿತ್ತಲಹರ ಮಂದಿರ ದಲ್ಲಿ ೧೦೮ ಮಣ ಹಿತ್ತಾಳೆಯಿಂದ ನಿರ್ಮಿಸಿದ ಭವ್ಯ ಆದಿನಾಥ ತೀರ್ಥಂಕರನ ಮೂರ್ತಿಯು ಮೂಲನಾಯಕನಾಗಿರುವುದರಿಂದ ಇದಕ್ಕೆ ಈ ಹೆಸರು ಬಂದಿದೆ. ಈ ಮೂರ್ತಿಯ ಪ್ರತಿಷ್ಠೆಯು ಸಂ. ೧೫೨೫ ರಲ್ಲಿ ಸುಂದರ ಮತ್ತು ಗಡಾ ಎಂಬ ಹೆಸರುಗಳುಳ್ಳ ವ್ಯಕ್ತಿಗಳಿಂದ ಆಯಿತು. ಗುರು-ಗುಣ-ರತ್ನಾಕರ ಕಾವ್ಯಕ್ಕೆ ಅನುಸ ರಿಸಿ ಇವರಿಬ್ಬರೂ ಅಮದಾಬಾದಿನವರು. ಆ ಕಾಲದ ಸುಲ್ತಾನ ಮಹಮ್ಮದ ಬೇಗಡಾನ ಮಂತ್ರಿಗಳು ಇದಕ್ಕೂ ಪೂರ್ವದಲ್ಲಿ ಇಲ್ಲಿ ಪ್ರತಿಷ್ಠಿತವಾಗಿದ್ದ ಮೂರ್ತಿ ಯನ್ನು ಯಾವುದೋ ಕಾರಣದಿಂದ ಇಲ್ಲಿಂದ ಮೇವಾಡದ ಕುಂಭಲಮೇರು ಎಂಬ ಸ್ಥಾನಕ್ಕೆ ಕಲುಪಿಸಲಾಗಿತ್ತು. ಈ ಮಂದಿರದ ರಚನೆಯೂ ಕೂಡ ಮೊದಲು ಹೇಳಿದ ಮಂದಿರಗಳಂತೆಯೇ ಇದೆ. ಮೂಲ ಗರ್ಭಗೃಹ, ಗೂಢಮಂಟಪದ ಮತ್ತು ನವಚೌಕಿಗಳಂತೂ ಪರಿಪೂರ್ಣವಾಗಿವೆ. ಆದರೆ ರಂಗಮಂಟಪ ಹಾಗೂ ಭಮ ತಿಯ ಕೆಲವೊಂದು ಭಾಗಗಳು ಅಪೂರ್ಣವಾಗಿಯೇ ಉಳಿದಿವೆ. ಗೂಢಮಂಟಪದಲ್ಲಿ ಆದಿನಾಥನ ಪಂಚತೀರ್ಥಕ ಪಾಷಾಣ ಮೂರ್ತಿಯಿದೆ. ಹಾಗೆಯೇ ಅನ್ಯತೀರ್ಥಂಕ ರರ ಪ್ರತಿಮೆಗಳೂ ಸಹ ಇವೆ. ಇಲ್ಲಿ ಮಹಾವೀರನ ಪ್ರಮುಖ ಗಣಧರನಾದ ಗೌತಮಸ್ವಾಮಿಯ ಹಳದಿವರ್ಣದ ಶಿಲೆಯ ಮೂರ್ತಿಯೂ ಒಂದು. ಇದು ವಿಶೇಷ ಗಮನಿಸತಕ್ಕ ಸಂಗತಿಯಾಗಿದೆ. ಭಮತಿಯ ದೇವಕುಲಿಕೆಗಳಲ್ಲಿ ನಾನಾ ತೀರ್ಥಂಕರರ ಮೂರ್ತಿಗಳು ವಿರಾಜಮಾನವಾಗಿವೆ. ಒಂದು ಸ್ಥಾನದಲ್ಲಿ ಭಗವಾನ್ ಆದಿನಾಥನ ಗಣಧರನಾದ ಪುಂಡರೀಕ ಸ್ವಾಮಿಯ ಪ್ರತಿಮೆಯೂ ಸಹ ಇದೆ.

ಚೌಮುಖಾಮಂದಿರದಲ್ಲಿ ಭಗವಾನ್ ಪಾರ್ಶ್ವನಾಥನ ಚತುರ್ಮುಖ ಪ್ರತಿಮೆಯು ಪ್ರತಿಷ್ಠಿತವಾಗಿದೆ. ಈ ಮೂರ್ತಿಯ ಪ್ರತಿಷ್ಠೆಯನ್ನು ಖರತರ ಗಚ್ಛದ ಮುನಿಗಳು ಮಾಡಿಸಿದರು. ಆದರಿಂದ ಇದಕ್ಕೆ ಖರತರ ವಸಹೀ ಎಂದೂ ಸಹ ಹೆಸರಾಗಿದೆ. ಕೆಲವೊಂದು ಮೂರ್ತಿಗಳ ಮೇಲಿರುವ ಲೇಖಗಳಿಂದ ಈ ಮಂದಿರದ ನಿರ್ಮಾಣಕಾಲವು ವಿ. ಸಂ. ೧೫೧೫ ರ ಸುಮಾರಿನದೆಂದು ಗೊತ್ತಾಗುತ್ತದೆ. ಮಂದಿರವು ಮೂರು ಅಂತಸ್ತುಗಳಲ್ಲಿದೆ. ಪ್ರತಿಯೊಂದು ಅಂತಸ್ತಿನಲ್ಲಿಯೂ ಪಾರ್ಶ್ವ ನಾಥನ ಚತುರ್ಮುಖ ಪ್ರತಿಮೆಗಳು ಇವೆ.

ಐದನೆಯದಾದ ಮಹಾವೀರಮಂದಿರವು ದೇಲವಾಡಾದಿಂದ ಪೂರ್ವೋತ್ತರ ದಿಕ್ಕಿನಲ್ಲಿ ಮೂರುವರೆ ಮೈಲಿನ ಮೇಲಿದೆ. ಇದರ ನಿರ್ಮಾಣವೂ ಕೂಡ ಹದಿನೈದ ನೆಯ ಶತಮಾನದಲ್ಲಾಗಿದೆ. ಸದ್ಯಕ್ಕೆ ಇದರ ಮೂಲನಾಯಕನು ಭ. ಆಧಿನಾಥ ನಾಗಿದ್ದಾನೆ. ಅವನ ಪಾರ್ಶ್ವದಲ್ಲಿ ಪಾರ್ಶ್ವನಾಥ ಮತ್ತು ಶಾಂತಿನಾಥ ತೀರ್ಥಂಕರರ ಮೂರ್ತಿಗಳಿವೆ. ಆದರೆ ಮಂದಿರದ ಖ್ಯಾತಿಯು ಮಹಾವೀರನ ಹೆಸರಿನಲ್ಲಿಯೇ

ಇದೆ. ಬಹುತರ ನಡುಗಾಲದಲ್ಲಿ ಯಾವಾಗಲೋ ಮೂಲ ನಾಯಕನ ಸ್ಥಾನಾಂತರ ವಾಗಿರಬೇಕು. ಈ ಮಂದಿರವು ಒಂದು ಆವಾರಗೋಡೆಯ ಮಧ್ಯದಲ್ಲಿ ಇದೆ. ಗರ್ಭಗೃಹದ ಸಮ್ಮುಖದಲ್ಲಿ ಶಿಖರಯುಕ್ತ ಗೂಢಮಂಟಪವೂ ಸಹ ಇದೆ. ಇದರ ಎದುರಿಗೆ ತೆರವಾದ ಮಂಟಪದ ಆಕೃತಿಯಿದೆ. ಆದರೆ ಮೇಲೆ ಸಭಾಮಂಟಪವನ್ನು ನಿರ್ಮಿಸಿಯೇ ಇಲ್ಲ; ಅಥವಾ ನಿರ್ಮಿಸಿದ್ದು ಯಾವಾಗಲೋ ವಿಧ್ವಸ್ತವಾಗಿದೆಯೋ ಏನೋ.

ದೇಲವಾಡಾದ ದಿಗಂಬರ ಜೈನಮಂದಿರವು ಅಲ್ಲಿಂದ ಅಚಲಗಡದ ಕಡೆಗೆ ಹೋಗುವ ಮಾರ್ಗದ ಮುಖದಲ್ಲಿಯೇ ಇದೆ. ಈ ಮಂದಿರದಲ್ಲಿ ಒಂದು ಶಿಲಾಲೇಖ ವಿದೆ. ಅದಕ್ಕನುಸರಿಸಿ ವಿ. ಸಂ. ೧೪೯೪ ರಲ್ಲಿ ಗೋವಿಂದ ಸಂಘಾಧಿಪತಿಯು ಇಲ್ಲಿ ಮೂಲಸಂಘ, ಬಲಾತ್ಕಾರಗಣ, ಸರಸ್ವತೀ ಗಚ್ಛದ ಭಟ್ಟಾರಕ ಪದ್ಮನಂದಿಯ ಶಿಷ್ಯ ನಾದ ಭಟ್ಟಾರಕ ಶುಭಚಂದ್ರ ಸಹಿತ ಯಾತ್ರೆಗೆ ಬಂದಿದ್ದನು. ಅವನೇ ಈ ಮಂದಿ ರದ ನಿರ್ಮಾಣವನ್ನು ಮಾಡಿಸಿದನು. ಆ ಕಾಲದಲ್ಲಿ ಆಬೂವಿನ ರಾಜನಾದ ರಾಜ ಧರದೇವಡಾ ಚೂಡಾ ಈತನ ರಾಜ್ಯವಿತ್ತು.

ರಜಪುತಸ್ಥಾನದಲ್ಲಿಯ ಇನ್ನೊಂದು ಉಲ್ಲೇಖನೀಯ ಜೈನ ಮಂದಿರವು ಜೋಧಪುರ ರಾಜ್ಯದಲ್ಲಿರುವ ಗೋಡವಾಡ ಜಿಲ್ಲೆಯಲ್ಲಿ ರಾಣಕಪುರದಲ್ಲಿದೆ. ಇದನ್ನು ಕ್ರಿ. ಶ. ೧೪೩೯ ರಲ್ಲಿ ನಿರ್ಮಿಸಲಾಗಿದೆ. ಈ ವಿಶಾಲ ಚತುರ್ಮುಖ ಮಂದಿರವನ್ನು ೪೦,೦೦೦ ಚೌರಸ ಫೂಟು ಭೂಮಿಯಮೇಲೆ ನಿರ್ಮಿಸಲಾಗಿದೆ. ಇದರಲ್ಲಿ ೩೯ ಮಂಟಪಗಳಿವೆ. ಇದರ ಕಂಭಗಳ ಸಂಖ್ಯೆಯು ೪೨೦ ಇದೆ. ಈ ಎಲ್ಲ ಕಂಭಗಳ ರಚನೆಯೂ ಶಿಲ್ಪವೂ ಭಿನ್ನಭಿನ್ನವಾಗಿಯೇ ಇವೆ. ಇಷ್ಟೇ ಅಲ್ಲ, ತಮ್ಮ ತಮ್ಮ ವೈಶಿಷ್ಟ್ಯವನ್ನೂ ಹೊಂದಿವೆ. ಮಂದಿರದ ಆಕಾರವು ಚತುರ್ಮುಖ ವಾಗಿದೆ. ಮಧ್ಯದಲ್ಲಿ ಮುಖ್ಯ ಮಂದಿರವಿದೆ. ಇದರ ನಾಲ್ಕೂ ದಿಕ್ಕಿನಲ್ಲಿ ಪುನಃ ನಾಲ್ಕು ಮಂದಿರಗಳಿವೆ. ಇವುಗಳಲ್ಲಿ ಶಿಖರಗಳನ್ನುಳಿದು ಮಂಟಪಗಳಿಗೂ ಮತ್ತು ಅವುಗಳ ನೆರೆಹೊರೆಯಲ್ಲಿರುವ ೮೬ ದೇವಕುಲಿಕೆಗಳಿಗೂ ಆವವುಗಳ ಶಿಖರಗಳಿವೆ. ಇವುಗಳ ಆಕೃತಿಗಳು ದೂರದಿಂದಲೂ ಅತ್ಯಂತ ಪ್ರಭಾವಶಾಲಿಯಾಗಿ ಕಾಣುತ್ತವೆ. ಶಿಖರಗಳ ಸೌಂದರ್ಯವೂ ಸಂತುಲನವೂ ಬಹು ಚಿತ್ತಾಕರ್ಷಕವಾಗಿವೆ. ಇದೇ ಸಂಗತಿಯು ಅವುಗಳ ಅಂತರಂಗ ಕಲಾಕೃತಿಗಳ ವಿಷಯದಲ್ಲಿಯೂ ಕೂಡ ಕಂಡು ಬರುತ್ತದೆ. ಎಲ್ಲೆಡೆಗೂ ವೈಚಿತ್ರ್ಯ ಮತ್ತು ಸಾಮಂಜಸ್ಯಗಳ ಅದ್ಭುತ ಸಂಯೋಗವೂ ಕಂಡುಬರುತ್ತದೆ. ಪ್ರೇಕ್ಷಕರು ಮಂದಿರದ ನಡುವೆ ಹೋಗಿ, ಮಂಟಪಗಳನ್ನೂ ಅವುಗಳ ಕಂಭಗಳನ್ನೂ ಬಯಲು ಪ್ರಾಂಗಣದಲ್ಲಿ ನಿಂತು ನೋಡುವಾಗ ಅವುಗಳ ಪ್ರಕಾಶ ಹಾಗೂ ನೆರಳುಗಳಿಂದ ದಂಗಾಗಿ ಹೋಗುತ್ತಾರೆ; ಚಮತ್ಕಾರ ವಶವಾಗು ತ್ತಾರೆ. ಮುಖ್ಯ ಗರ್ಭಗೃಹವು ಸ್ವಸ್ತಿಕ ಆಕಾರದಲ್ಲಿದೆ. ಇದಕ್ಕೆ ನಾಲ್ಕೂ ಕಡೆಗೆ ನಾಲ್ಕು ದ್ವಾರಗಳಿವೆ. ಇಲ್ಲಿ ಆದಿನಾಥನ ಶ್ವೇತಸಂಗಮರವರೀ ಶಿಲೆಯ ಚತುರ್ಮುಖ

ಮೂರ್ತಿಯಿದೆ. ಇದರ ಎರಡನೆಯ ಅಂತಸ್ತಿನ ರಚನೆಯೂ ಕೂಡ ಹೀಗೆಯೇ ಇದೆ. ಈ ಚತುರ್ಮುಖ ಮಂದಿರದ ವಿನ್ಯಾಸವು ಬಹುತರ ಪಹಾಡಪುರದ ಮಹಾವಿಹಾರ ದಲ್ಲಿ ಕಂಡುಬರುವಂತೆಯೇ ಇದೆ.

ರಜಪುತಸ್ಥಾನದಲ್ಲಿ ಒಂದೆಡೆಗೆ ಸುಂದರ ಕಲಾಪೂರ್ಣ ನಿರ್ಮಿತಿಯೆನಿಸಿದ್ದು, ಚಿತ್ತೊರಿನ ಕೀರ್ತಿಸ್ತಂಭವು. ಇದರ ನಿರ್ಮಾತೃವಿನ ವಿಷಯದಲ್ಲಿಯೂ ನಿರ್ಮಾಣ ಕಾಲದ ವಿಷಯದಲ್ಲಿಯೂ ಬಹಳ ಮತಭೇದವಿದೆ. ಆದರೆ ಇತ್ತೀಚೆಗೆ ನಾಂದ ಗಾಂವದ ದಿಗಂಬರ ಜೈನ ಮಂದಿರದ ಧಾತುಮಯೀ ಪ್ರತಿಮೆಯ ಮೇಲೆ ಸಂ. ೧೫೪೧ (ಕ್ರಿ. ಶ. ೧೪೮೪) ರ ಲೇಖವೊಂದು ದೊರೆತಿದೆ. ಅದಕ್ಕನುಸರಿಸಿ ಮೇಲ ಪಾಟ ದೇಶದ ಚಿತ್ರಕೂಟ ನಗರದಲ್ಲಿ ಈ ಕೀರ್ತಿಸ್ತಂಭದ ನಿರ್ಮಾಣವನ್ನು ಚಂದ್ರ ಪ್ರಭಜಿನೇಂದ್ರನ ಚೈತ್ಯಾಲಯದ ಎದುರಿಗೆ ಜೀಜಾಶಾಹನ ಪುತ್ರನಾದ ಪೂರ್ಣ ಸಿಂಹನು ಮಾಡಿಸಿದ್ದನು. ಇದರಿಂದ ಈ ಸ್ತಂಭದ ರಚನೆಯು ೧೫ ನೆಯ ಶತಮಾನ ದಲ್ಲಿ ಕ್ರಿ. ಶ. ೧೪೮೪ ರ ಪೂರ್ವದಲ್ಲಿಯೇ ಆಗಿಹೋಗಿತ್ತೆಂಬುದು ಸ್ಪಷ್ಟವಾಗುತ್ತದೆ. ಜೀಜಾಶಾಹನ ಮಗನಾದ ಪೂರ್ಣಸಿಂಹನು ಬಘೇರವಾಲಾ ಜಾತಿಯವನಾಗಿದ್ದನು. ಅವನು ಕಾರಂಜಾದ (ಜಿಲ್ಲಾ ಅಕೋಲಾ–ಬರಾರ) ಮೂಲಸಂಘ, ಸೇನ ಗಣ, ಪುಷ್ಕರ ಗಚ್ಛದ ಭಟ್ಟಾರಕ ಸೋಮಸೇನನ ಉಪದೇಶದಿಂದ ಈ ಸ್ತಂಭದ ಹೊರ ತಾಗಿ ೧೦೮ ಶಿಖರ ಬದ್ಧ ಮಂದಿರಗಳ ಉದ್ಧಾರವನ್ನು ಮಾಡಿಸಿದನು ; ಜಿನಬಿಂಬ ಗಳನ್ನು ಮಾಡಿಸಿದನು ; ಪ್ರತಿಷ್ಠೆಯನ್ನೂ ಮಾಡಿಸಿದನು. ಅನೇಕ ಶ್ರುತ ಭಂಡಾರ ಗಳನ್ನು ಸ್ಥಾಪಿಸಿದನು. ಒಂದು ಲಕ್ಷ ಇಪ್ಪತ್ತೈದು ಸಾವಿರ ಸೆರೆಯಾಳುಗಳನ್ನು ಬಿಡಿಸಿದನು. ಹೀಗೂ ಕೂಡ ಆ ಲೇಖದಲ್ಲಿ ಉಲ್ಲೇಖವಿದೆ.

ಈ ಸ್ತಂಭವು ಒಂದು ಜೈನ ಮಂದಿರದ ಎದುರಿಗೆ ಕಟ್ಟಿದುದಾಗಿತ್ತೆಂಬುದು ಲೇಖದಿಂದ ಸ್ಪಷ್ಟವಾಗುತ್ತದೆ. ಆದರಿಂದ ಇದು ಮಾನಸ್ತಂಭವಾಗಿದೆ. ಈ ಕಂಭವು ಸುಮಾರು ೭೬ ಫೂಟು ಎತ್ತರವಿದೆ. ಇದರ ಕೆಳಭಾಗದ ವ್ಯಾಸವು ೩೧ ಫೂಟು ಇದ್ದು, ಮೇಲ್ಭಾಗದಲ್ಲಿ ೧೫ ಫೂಟು ಇದೆ. ಇದರಲ್ಲಿ ಏಳು ಅಂತಸ್ತುಗಳು ಇವೆ. ಇದರ ಮೇಲೆ ಗಂಧಕುಟಿಯ ರೂಪದಲ್ಲಿ ಕೊಡೆಯಿದೆ. ಈ ಕೊಡೆಯು ಒಂದು ಸಲ ಸಿಡಿಲಿನಿಂದ ಪೆಟ್ಟು ತಿಂದು ಧ್ವಸ್ತವಾಗಿ ಹೋಗಿತ್ತು. ಆದರೆ ಅದನ್ನು ಮಹಾರಾಣಾ ಫತಹಸಿಂಹನು ಸುಮಾರು ಎಂಭತ್ತು ಸಾವಿರ ವೆಚ್ಚಮಾಡಿ ಪುನಃ ಮೊದಲಿನಂತೆ ರೂಪಿಸಿದನು. ಈ ಶಿಖರದ ಕುಟಿಯಲ್ಲಿ ಅವಶ್ಯವಾಗಿ ಚತುರ್ಮುಖ ತೀರ್ಥಂಕರರ ಮೂರ್ತಿಯು ಇದ್ದಿರಬೇಕು. ಕಂಭದ ಎಲ್ಲ ಅಂತಸ್ತುಗಳಲ್ಲಿ ನಾಲ್ಕೂ ಭಾಗಗಳ ಮೇಲೆ ಆದಿನಾಥ ಹಾಗೂ ಅನ್ಯತೀರ್ಥಂಕರರ ನಗ್ನ ಮೂರ್ತಿಗಳು ವಿರಾಜ ಮಾನವಾಗಿವೆ. ಆದರಿಂದ ಇದು ಪ್ರಥಮದಲ್ಲಿ ಆದಿತೀರ್ಥಂಕರರ ಸ್ಮಾರಕವಾಗಿರ ಬೇಕೆಂದು ಗೊತ್ತಾಗುತ್ತದೆ. ಈ ಕೀರ್ತಿಸ್ತಂಭದ ಬಾಹ್ಯನಿರ್ಮಾಣವು ಅಲಂಕಾರ ಗಳಿಂದ ತುಂಬಿಹೋಗಿದೆ.

ಚಿತ್ತೂರಿನ ಕೋಟೆಯ ಮೇಲೆ ಇದೇ ಪ್ರಕಾರದ ಇನ್ನೊಂದು ಕೀರ್ತಿಯ ಸ್ತಂಭವೂ ಇದೆ. ಇದರಲ್ಲಿ ಒಂಭತ್ತು ಅಂತಸ್ತುಗಳು ಇವೆ. ಇದು ಹಿಂದೂ ದೇವೀ-ದೇವತೆಗಳ ಮೂರ್ತಿಯಿಂದ ಅಲಂಕೃತವಾಗಿದೆ. ಇದನ್ನು ಮೊದಲಿನ ಕಂಭಕ್ಕಿಂತ ಬಹಳ ಹಿಂದಿನಿಂದ ಅದನ್ನನುಸರಿಸಿ ಮಹಾರಾಣಾ ಕುಂಭನು ನಿರ್ಮಾಣಮಾಡಿಸಿದನು.

ಜೈನ ತೀರ್ಥಗಳಲ್ಲಿ ಸೌರಾಷ್ಟ್ರ ಪ್ರದೇಶದ ಶತ್ರುಂಜಯೆ (ಪಾಲೀರಾಣಾ) ಪರ್ವತದ ಮೇಲೆ ಇರುವಷ್ಟು ಜೈನಮಂದಿರಗಳು ಬೇರೆಲ್ಲಿಯೂ ಇಲ್ಲ. ಶತ್ರುಂಜಯ ಮಹಾತ್ಮ್ಯಕ್ಕೆ ಅನುಸರಿಸಿ ಇಲ್ಲಿ ಪ್ರಥಮ ತೀರ್ಥಂಕರರ ಕಾಲದಿಂದಲೂ ಜೈನ ಮಂದಿರಗಳು ನಿರ್ಮಾಣವಾಗುತ್ತ ಬಂದಿವೆ. ಈಗ ಅಲ್ಲಿ ಕಂಡುಬರುವ ಮಂದಿರಗಳಲ್ಲಿ ಎಲ್ಲಕ್ಕೂ ಪ್ರಾಚೀನವಾದುದು ಅದೇ ವಿಮಲಶಾಹನು (೧೧ ನೆಯ ಶತಮಾನ) ನಿರ್ಮಿಸಿದುದಾಗಿದೆ. ಅವನು ಆಬುವಿನ ಮೇಲೆ ವಿಮಲವಸಹೀಯನ್ನು ಕಟ್ಟಿಸಿದ್ದಾನೆ. ಎರಡನೆಯದು ರಾಜಾ ಕುಮಾರಪಾಲನು (೧೨ನೆಯ ಶತಮಾನ) ನಿರ್ಮಿಸಿದುದಾಗಿದೆ. ವಿಶಾಲತೆ ಮತ್ತು ಕಲಾತ್ಮ ಸೌಂದರ್ಯದ ದೃಷ್ಟಿಯಿಂದ ವಿಮಲವಸಹೀಯ ಆದಿನಾಥ ಮಂದಿರವು ಎಲ್ಲಕ್ಕೂ ಮಹತ್ವಪೂರ್ಣವಾಗಿದೆ. ಈ ಮಂದಿರವು ಕ್ರಿ. ಶ. ೧೫೩೦ ರಲ್ಲಿ ರೂಪುಗೊಂಡಿದೆ. ಆದರೆ ಇದೇ ಸ್ಥಳದಲ್ಲಿ ಇದಕ್ಕೂ ಪೂರ್ವದಲ್ಲಿ ಕ್ರಿ. ಶ. ೯೬೬ ರಲ್ಲಿ ಕಟ್ಟಿಸಿದ ಮಂದಿರವೊಂದು ಇದ್ದಿತೆಂಬುದಕ್ಕೆ ಪ್ರಮಾಣವು ಲಭಿಸುತ್ತದೆ. ಇಲ್ಲಿ ಹತ್ತನೆಯ ಶತಮಾನದ ಕೃತಿಯಾದ ಪುಂಡರೀಕನ ಪ್ರತಿಮೆಯು ಸೌಂದರ್ಯದಲ್ಲಿ ಅತಿ ಶ್ರೇಷ್ಠವೆಂದು ಮನ್ನಿಸಲಾಗಿದೆ. ಉಲ್ಲೇಖನೀಯವಾದ ನಾಲ್ಕನೆಯ ಮಂದಿರವು ಚತುರ್ಮುಖಮಂದಿರ ಎಂಬುದಾಗಿದೆ. ಇದು ಕ್ರಿ. ಶ. ೧೬೧೮ ರಲ್ಲಿ ನಿರ್ಮಾಣವಾದುದು. ಇದಕ್ಕೆ ನಾಲ್ಕೂ ದಿಕ್ಕುಗಳಲ್ಲಿ ನಾಲ್ಕು ಪ್ರವೇಶ ದ್ವಾರಗಳಿವೆ. ಪೂರ್ವದ್ವಾರವು ರಂಗಮಂಟಪದ ಎದುರಿಗಿದೆ. ಉಳಿದ ಮೂರು ದ್ವಾರಗಳ ಎದುರಿಗೂ ಕೂಡ ಮುಖಮಂಟಪಗಳನ್ನು ರಚಿಸಲಾಗಿದೆ. ಈ ಎಲ್ಲ ಮಂಟಪಗಳು ಎರಡು ಅಂತಸ್ತುಗಳಲ್ಲಿ ಇವೆ. ಮೇಲಿನ ಅಂತಸ್ತಿನಲ್ಲಿ ಮುಖಮಂಟಪದಿಂದ ಕೂಡಿದ ವಾತಾಯನವೂ ಇದೆ. ಮೇಲೆ ಹೇಳಿದ ಮತ್ತು ಉಳಿದ ಮಂದಿರಗಳೂ ಗರ್ಭಗೃಹ, ಮಂಟಪ ಮತ್ತು ದೇವಕುಲಿಕೆಗಳೂ ಸಹ ಶಿಲ್ಪ ಹಾಗೂ ಸೌಂದರ್ಯಗಳಲ್ಲಿ ದೇಲವಾಡಾದ ವಿಮಲವಸಹೀ ಮತ್ತು ಲೂಣವಸಹೀಯನ್ನು ಹೆಚ್ಚು-ಕಡಿಮೆ ಪ್ರಮಾಣದಲ್ಲಿ ಅನುಕರಿಸುತ್ತವೆ.

ಸೌರಾಷ್ಟ್ರದ ಇನ್ನೊಂದು ಮಹಾನ್ ತೀರ್ಥಕ್ಷೇತ್ರವು ಗಿರನಾರವಾಗಿದೆ. ಈ ಪರ್ವತದ ಪ್ರಾಚೀನ ಹೆಸರುಗಳು ಊರ್ಜಯಂತ ಮತ್ತು ರೈವತಕಗಿರಿ ಎಂದಿದ್ದುದು ಕಂಡುಬರುತ್ತದೆ. ಇದರ ಕೆಳಗೆ ಇರುವ ನಗರದ ಹೆಸರು ಗಿರಿನಗರವೆಂದು ಇದ್ದಿರಬೇಕು. ಇದರ ಹೆಸರಿನಿಂದ ಸ್ವತಃ ಪರ್ವತವೇ ಈಗ ಗಿರಿನಾರ (ಗಿರಿನಗರ) ಎಂಬ ಹೆಸರನ್ನು ಹೊಂದಿದೆ. ಜುನಾಗಢ ದಿಂದ ಈ ಪರ್ವತದ ಕಡೆಗೆ ಹೋಗುವ

ಮಾರ್ಗದಲ್ಲಿಯೇ ಆ ಇತಿಹಾಸ ಪ್ರಸಿದ್ಧವಾದ ವಿಶಾಲಶಿಲೆಯು ದೊರೆಯುತ್ತದೆ. ಅದರ ಮೇಲೆ ಅಶೋಕ, ರುದ್ರದಾಮನ್ ಮತ್ತು ಸ್ಕಂದಗುಪ್ತ ಸಮ್ರಾಟರು ಶಿಲಾ ಲೇಖಗಳನ್ನು ಕೆತ್ತಿಸಿದ್ದಾರೆ. ಈ ಪ್ರಕಾರ ಇದರ ಮೇಲೆ ಸುಮಾರು ೧೦೦೦ ವರ್ಷಗಳ ಇತಿಹಾಸವನ್ನು ಬರೆಯಲಾಗಿದೆ. ಜೂನಾಗಢದ ಸಮೀಪದಲ್ಲಿಯೇ 'ಬಾಬಾ ಪ್ಯಾರಾ' ಮಠದ ಸಮೀಪದಲ್ಲಿ ಆ ಜೈನಗುಹೆಯಿದೆ. ಅದು ಹಿಂದೆ ಹೇಳಿದ ಪ್ರಕಾರ ಮೊದಲನೆಯ ಎರಡನೆಯ ಶತಮಾನದ 'ಧರಸೇನಾಚಾರ್ಯರ ಚಂದ್ರ ಗುಹೆ' ಯಾಗಿದೆ. ಈ ಪ್ರಕಾರ ಈ ಸ್ಥಾನವು ಐತಿಹಾಸಿಕ ಮತ್ತು ಧಾರ್ಮಿಕ ಎರಡೂ ದೃಷ್ಟಿಗಳಿಂದಲೂ ಅತಿ ಪ್ರಾಚೀನ ಹಾಗೂ ಮಹತ್ವಪೂರ್ಣವೆಂದು ಸಿದ್ಧವಾಗುತ್ತದೆ. ಗಿರಿನಗರ ಪರ್ವತಕ್ಕೂ ಜೈನಧರ್ಮಕ್ಕೂ ಇತಿಹಾಸ ಪೂರ್ವಕಾಲ ದಿಂದಲೂ ಸಂಬಂಧವಿದೆ. ಇಲ್ಲಿಯೇ ೨೨ ನೆಯ ತೀರ್ಥಂಕರ ನೇಮಿನಾಥನು ತಪಸ್ಸನ್ನು ಮಾಡಿದ್ದನು, ನಿರ್ವಾಣವನ್ನು ಹೊಂದಿದ್ದನು. ಈ ತೀರ್ಥದ ಸರ್ವ ಪ್ರಾಚೀನ ಉಲ್ಲೇಖವು ಸಮಂತಭದ್ರಕೃತ ಸ್ವಯಂಭೂಸ್ತೋತ್ರದಲ್ಲಿ (೫ನೆಯ ಶತಮಾನ) ದೊರೆಯುತ್ತದೆ. ಅಲ್ಲಿ ನೇಮಿನಾಥನ ಸ್ತುತಿಯಲ್ಲಿ ಹೀಗೆ ಹೇಳಿದೆ :—

ಕಕುದಂ ಭುವಃ ಖಚರ-ಯೋಷಿದುಷಿತ-ಶಿಖರೈರಲಂ ಕೃತಃ
ಮೇಘ-ಪಟಲ-ಪರಿವೀತ-ತಟಸ್ತವ ಲಕ್ಷಣಾನಿ ಲಿಖಿತಾನಿ ವಜ್ರಿಣಾ।
ವಹತೀತಿ ತೀರ್ಥಮೃಷಿಭಿಶ್ಚ ಸತತಮಭಿಗಮ್ಯತೇದ್ಯ ಚ
ಪ್ರೀತಿ-ವಿತತ-ಹೃದಯೈಃ ಪರಿತೋ ಭೃಶಮೂರ್ಜಯಂತ ಇತಿ
ವಿಶ್ರುತೋಽಚಲಃ ॥ ೧೨೮ ॥

ಈ ಸ್ತುತಿಗೆ ಅನುಸರಿಸಿ ಸಮಂತಭದ್ರನ ಸಮಯದಲ್ಲಿ ಊರ್ಜಯಂತ(ಗಿರನಾರ) ಪರ್ವತದ ಮೇಲೆ ನೇಮಿನಾಥ ತೀರ್ಥಂಕರನ ಮೂರ್ತಿ ಅಥವಾ ಚರಣ ಚಿಹ್ನಗಳು ಪ್ರತಿಷ್ಠಿತವಾಗಿದ್ದವು. ಶಿಖರದ ಮೇಲೆ ವಿದ್ಯಾಧರೀ ಅಂಬಿಕೆಯ ಮೂರ್ತಿಯೂ ವಿರಾಜಮಾನವಾಗಿತ್ತು. ಋಷಿ–ಮುನಿಗಳು ನಿರಂತರ ಅಲ್ಲಿ ತೀರ್ಥ ಯಾತ್ರೆಯನ್ನು ಮಾಡುತ್ತಿದ್ದರು.

ಈಗಿನ ಕಾಲದಲ್ಲಿ ಇಲ್ಲಿ ಎಲ್ಲಕ್ಕೂ ಪ್ರಸಿದ್ಧ, ವಿಶಾಲ ಮತ್ತು ಸುಂದರ ಮಂದಿರವು ನೇಮಿನಾಥನದಾಗಿದೆ. ರೈವತಕ ಗಿರಿ–ಕಲ್ಪಕ್ಕನುಸರಿಸಿ ಇದರ ನಿರ್ಮಾಣವು ಚಾಲುಕ್ಯ ರಾಜನಾದ ಜಯಸಿಂಹನ ಸೇನಾಪತಿ ಸಜ್ಜನನು ಬಂಗಾಲ ರಾಜ್ಯದ ಮೇಲೆ ವಿಜಯವನ್ನು ಪಡೆದ ಮೇಲೆ ಸಂವತ್ ೧೧೮೫ರಲ್ಲಿ ಆಯಿತು. ಇದರ ಶಿಖರದ ಮೇಲೆ ಇರುವ ಸುವರ್ಣದ ಆಮಲಕವನ್ನು ಮಾಲವ ದೇಶದ ಮುಖಮಂಡನ ಭಾವಡನು ಮಾಡಿಸಿದನು. ಅದೇಕಾಲದಲ್ಲಿ ಅಂದರೆ ಸಂವತ್ ೧೨೨೦ ರಲ್ಲಿ ಇಲ್ಲಿಯ ಸೋಪಾನ–ಪಥದ ನಿರ್ಮಾಣವನ್ನು ಕುಮಾರಪಾಲ ನರೇಂದ್ರನಿಂದ ನಿಯಮಿಸಲ್ಪಟ ಸೌರಾಷ್ಟ್ರದ ಸೇನಾಪತಿಯು ಯಾವುದೋ ಶ್ರೀಮಾಲ ಕುಲದ ವ್ಯಕ್ತಿಯು ಮಾಡಿಸಿದ್ದನು. ಮಂದಿರದ ಮೂಲನಾಯಕ ಪ್ರತಿಮೆಯು ಪ್ರಾರಂಭದಲ್ಲಿ ಲೇಪಮಯವಾಗಿತ್ತು.

ಅದರ ಲೇಪವು ಕಾಲಾನುಸಾರ ನಷ್ಟವಾಗುತ್ತ ಹೋಯಿತು. ಆಗ ಕಾಶ್ಮೀರದಿಂದ ತೀರ್ಥ ಯಾತ್ರೆಗೆಂದು ಬಂದ ಅಜಿತ ಮತ್ತು ರತನ ಎಂಬ ಹೆಸರಿನ ಇಬ್ಬರು ಬಂಧು ಗಳು ಅದರ ಸ್ಥಾನದಲ್ಲಿ ಎರಡನೆಯ ಪ್ರತಿಮೆಯನ್ನು ಪ್ರತಿಷ್ಠಿಸಿದರು. ಮಂದಿರದ ಪ್ರಾಂಗಣದಲ್ಲಿ ಎಪ್ಪತ್ತು ದೇವಕುಲಿಕೆಗಳು ಇವೆ. ಇವುಗಳ ಮಧ್ಯದಲ್ಲಿ ಮಂದಿರವನ್ನು ನಿರ್ಮಿಸಲಾಗಿದೆ. ಅದರ ಮಂಟಪವು ಬಹು ಸುಂದರವಾಗಿ ಅಲಂಕೃತವಾಗಿದೆ. ಮುಖ ಮಂದಿರದ ವಿಮಾನದ ಮೇಲಿರುವ ಶಿಖರದ ನೆರೆಹೊರೆಯಲ್ಲಿ ಅನೇಕ ಚಿಕ್ಕ–ಪುಟ್ಟ ಶಿಖರಗಳ ಪುಂಜಗಳಿವೆ. ಅದರಿಂದ ಇದರ ದೃಶ್ಯವು ಬಹು ಭವ್ಯವಾಗಿ ಕಾಣುವುದು. ಈ ಕಾಲದ ಜೈನ ವಾಸ್ತುಕಲೆಯ ವೈಶಿಷ್ಟ್ಯವಿದಾಗಿದೆ. ಇಲ್ಲಿ ಇನ್ನೊಂದು ಮಲ್ಲಿನಾಥ ತೀರ್ಥಂಕರರ ಮಂದಿರವು ಉಲ್ಲೇಖನೀಯವಾಗಿದೆ. ಇದು ವಸ್ತುಪಾಲನು ನಿರ್ಮಿಸಿ ದುದು. ಈ ಮಂದಿರದ ವಿನ್ಯಾಸವು ಒಂದು ವಿಶಿಷ್ಟ ಪ್ರಕಾರದ್ದಾಗಿದೆ. ರಂಗ ಮಂಟಪದ ಪ್ರವೇಶದ್ವಾರದ ದಿಕ್ಕನ್ನು ಬಿಟ್ಟು ಉಳಿದ ಮೂರು ದಿಕ್ಕುಗಳಲ್ಲಿ ಅದಕ್ಕೆ ಹೊಂದಿಕೊಂಡಿರುವ ಮೂರು ಮಂದಿರಗಳಿವೆ. ನಡುವಿನ ಮಂದಿರವು ಮೂಲ ನಾಯಕನಾದ ಮಲ್ಲಿನಾಥನದು. ಆಚೆ–ಈಚೆಯ ಎರಡೂ ಮಗ್ಗಲಿನ ಮಂದಿರಗಳ ರಚನೆಯು ಸ್ತಂಭಯುಕ್ತ ಮಂಟಪಗಳ ಸಮಾನವಾಗಿದೆ. ಇದರಲ್ಲಿ ಕಲ್ಲಿನ ಮೇಲೆ ಕಲೆಯ ನಿರ್ಮಿತಿಯು ಕಂಡುಬರುತ್ತದೆ. ಉತ್ತರ ದಿಸೆಯ ಮಂದಿರವು ಚೌಕೋನ ಕಟ್ಟೆಯ ಮೇಲೆ ಮೇರುವಿನ ರಚನೆಯಿಂದ ಕೂಡಿದ್ದಾಗಿದೆ. ದಕ್ಷಿಣ ದಿಕ್ಕಿನ ಮಂದಿರವು ಸಮ್ಮೇದ ಶಿಖರದ ಪ್ರತಿಕೃತಿಯಾಗಿದೆ.

ಇದು ಪ್ರಾಚೀನ, ಶೈಲಿ ಹಾಗೂ ಕಲೆಗಳ ದೃಷ್ಟಿಯಿಂದ ಮಹತ್ವಪೂರ್ಣವಾದ ಉಪಲಬ್ಧ ಜೈನ ಮಂದಿರಗಳ ಅತಿಸಂಕ್ಷಿಪ್ತ ಮತ್ತು ಸ್ಫುಟವಾದ ಪರಿಚಯವು ಮಾತ್ರವಿದೆ. ನಿಜವಾಗಿಯೂ ಸಮಸ್ತ ದೇಶವೆಲ್ಲ ಹಿಮಾಲಯದಿಂದ ದಕ್ಷಿಣ ಸಮುದ್ರದವರೆಗೆ ಮತ್ತು ಸೌರಾಷ್ಟ್ರದಿಂದ ಬಂಗಾಲದವರೆಗೆ ಜೈನಮಂದಿರಗಳಿಂದಲೂ ಅವುಗಳ ಭಗ್ನಾವಶೇಷಗಳಿಂದಲೂ ತುಂಬಿಹೋಗಿದೆ. ಎಲ್ಲಿ ಈಗ ಜೈನ ಮಂದಿರ ಗಳಿಲ್ಲವೋ ಅಲ್ಲಿ ಅದರ ಭಗ್ನಾವಶೇಷಗಳು ಇವೆ. ಅವುಗಳ ವಿಷಯದಲ್ಲಿ ಜೇಮ್ಸ್ ಫರ್ಗ್ಯೂಸನ ಸಾಹೇಬನ ಅಭಿಮತವನ್ನು ಗಮನಿಸಬಹುದಾಗಿದೆ. ಅವನ ಹೇಳಿ ಕೆಯು ಹೀಗಿದೆ :— " ಗಂಗಾ ಪ್ರದೇಶ ಅಥವಾ ಎಲ್ಲಿಯೂ ಮುಸಲ್ಮಾನರ ಸಂಖೆಯು ಹೆಚ್ಚಾಗಿ ವಾಸಿಸುವುದೋ ಅಲ್ಲಿ ಪ್ರಾಚೀನ ಜೈನಮಂದಿರಗಳನ್ನು ಕಾಣುವ ಆಶೆಯು ವ್ಯರ್ಥವಾದುದಾಗಿದೆ. ಆ ಜನರು ತಮ್ಮ ಧರ್ಮದ ಆವೇಶದಲ್ಲಿ ಮಂದಿರಗಳನ್ನು ನಷ್ಟ ಭ್ರಷ್ಟಮಾಡಿಬಿಟ್ಟಿದ್ದಾರೆ. ಯಾವ ಸುಂದರ ಕಂಭಗಳನ್ನೂ ತೋರಣ ಗಳನ್ನೂ ನಷ್ಟಗೊಳಿಸಿಲ್ಲವೋ ಅಂಥವುಗಳನ್ನು ಬಹುಪ್ರೀತಿಯಿಂದ ತಮ್ಮ ಮಸೀದೆ ಗಳ ನಿರ್ಮಾಣದಲ್ಲಿ ಉಪಯೋಗಿಸಿಕೊಂಡಿದ್ದಾರೆ. ಅಜಮೇರ, ದಿಲ್ಲಿ, ಕನ್ನೋಜ, ಧಾರ ಮತ್ತು ಅಹಮದಾಬಾದಗಳ ವಿಶಾಲ ಮಸೀದಿಗಳು ಯಥಾರ್ಥವಾಗಿಯೂ ಜೈನ ಮಂದಿರಗಳ ಪರಿವರ್ತಿತ ರೂಪಗಳೇ ಆಗಿವೆ."

ಯನ್ನು ಅನುಸರಿಸುತ್ತಿವೆ. ಇಷ್ಟೇ ಅಲ್ಲ, ಇವುಗಳಲ್ಲಿ ಪ್ರತಿಷ್ಠಿತ ಧ್ಯಾನಸ್ಥ ಪದ್ಮಾಸನ ಮೂರ್ತಿಗಳು ಇವೆ. ಅವುಗಳನ್ನು ಬೌದ್ಧ ಮೂರ್ತಿಗಳೆಂದು ಸಾಮಾನ್ಯವಾಗಿ ಹೇಳಲಾಗುತ್ತಿದ್ದರೂ ಅವೆಲ್ಲ ಜೈನಮೂರ್ತಿಗಳಾಗಿವೆ. ಇತಿಹಾಸದಲ್ಲಿ ಜೈನ ಧರ್ಮವು ಜಾವಾದಲ್ಲಿ ಯಾವಾಗ ಪ್ರವೇಶಿಸಿತ್ತೆಂಬುದರ ಬಗ್ಗೆ ಪ್ರಬಲವಾದ ಪ್ರಮಾಣಗಳು ಲಭಿಸುವುದಿಲ್ಲ. ಆದರೆ ಈ ಉದಾಹರಣೆಯಿಂದ ಜೈನ ಮಂದಿರಗಳ ವಾಸ್ತುಕಲೆಯು ಹತ್ತನೆಯ ಶತಮಾನಕ್ಕಿಂತ ಪೂರ್ವದಲ್ಲಿಯೇ ಜಾವಾದಲ್ಲಿ ಪ್ರವೇಶ ಮಾಡಿತ್ತೆಂಬುದಕ್ಕೆ ಪ್ರಮಾಣವು ಒದಗುತ್ತದೆ.

> " ಅವನಿತಲಗತಾನಾಂ ಕೃತ್ರಿಮಾಕೃತ್ರಿಮಾಣಾಂ
> ವನಭವನಗತಾನಾಂ ದಿವ್ಯವೈಮಾನಿಕಾನಾಮ್ |
> ಇಹ ಮನುಜಕೃತಾನಾಂ ದೇವರಾಜಾರ್ಚಿತಾನಾಂ
> ಜಿನವರ-ನಿಲಯಾನಾಂ ಭಾವತೋಽಹಂ ಸ್ಮರಾಮಿ ॥ "

## ಜೈನ ಮೂರ್ತಿ ಕಲೆ

**ಅತಿ ಪ್ರಾಚೀನ ಜೈನ ಮೂರ್ತಿಗಳು :—**

ಜೈನ ಧರ್ಮದಲ್ಲಿ ಮೂರ್ತಿ ಪೂಜೆಗೆ ಸಂಬಂಧಿಸಿದ ಉಲ್ಲೇಖವು ಪ್ರಾಚೀನತಮ ಕಾಲದಿಂದಲೂ ಕಂಡು ಬರುತ್ತದೆ. ಜೈನಾಗಮಗಳಲ್ಲಿ ಜೈನ ತೀರ್ಥಂಕರರೂ ಮತ್ತು ಯಕ್ಷರು ಇವರ ಮೂರ್ತಿಗಳ ಹೊರತಾಗಿ ಕಲಿಂಗ ರಾಜನಾದ ಖಾರವೇಲನ ಕ್ರಿ. ಪೂ. ಎರಡನೆಯ ಶತಮಾನದ ' ಹಾಥಿಗುಂಫಾ ' ದಲ್ಲಿಯ ಶಿಲಾಶೇಖದಿಂದ ಮೂರ್ತಿಗಳ ವಿಷಯವು ಪ್ರಮಾಣಿತವಾಗುತ್ತದೆ. ಆ ಉಲ್ಲೇಖದ ಪ್ರಕಾರ ನಂದವಂಶದ ರಾಜ್ಯ ಕಾಲ ಅರ್ಥಾತ್ ಕ್ರಿ. ಪೂ. ನಾಲ್ಕನೆಯ ಐದನೆಯ ಶತಮಾನದಲ್ಲಿ ಜೈನ ಮೂರ್ತಿಗಳನ್ನು ಪ್ರತಿಷ್ಠಿಸಲಾಗುತ್ತಿತ್ತು. ಇಂಥ ಒಂದು ಜೈನ ಮೂರ್ತಿಯನ್ನು ನಂದರಾಜನು ಕಲಿಂಗದಿಂದ ಅಪಹರಿಸಿಕೊಂಡು ಹೋಗಿದ್ದನು. ಅದನ್ನು ಖಾರವೇಲನು ಎರಡು—ಮೂರು ಶತಮಾನಗಳ ತರುವಾಯ ತಿರುಗಿ ತಂದನು. ಕುಷಾಣಕಾಲದ ಅನೇಕ ಜಿನಮೂರ್ತಿಗಳಂತೂ ಮಥುರೆಯ ಕಾಂಕಾಲೀ ದಿಬ್ಬವನ್ನು ಅಗಿಯುವುದರಲ್ಲಿ ಲಭಿಸಿವೆ. ಇವು ಮಥುರೆಯ ಸಂಗ್ರಹಾಲಯದಲ್ಲಿ ಸುರಕ್ಷಿತವಾಗಿವೆ. ಒಂದು ಪ್ರಾಚೀನ ಮಸ್ತಕಹೀನ ಜಿನ ಪ್ರತಿಮೆಯು ಪಟಣಾ ಸಂಗ್ರಹಾಲಯದಲ್ಲಿ ಸುರಕ್ಷಿತವಾಗಿದೆ. ಇದು ಲೋಹಾನೀಪುರದಲ್ಲಿ ಲಭಿಸಿತ್ತು. ಈ ಮೂರ್ತಿಯ ಮೇಲೆ ಹೊಳಪುಳ್ಳ ಪಾಲಿಶವಿದೆ. ಇದು ಮೌರ್ಯ ಕಾಲೀನವಾಗಿರಬೇಕೆಂದು ಅನುಮಾನಿಸಲಾಗುತ್ತದೆ. ಇದಕ್ಕಿಂತಲೂ ಪ್ರಾಚೀನ ಮೂರ್ತಿಗಳು ಭಾರತ ವರ್ಷದಲ್ಲಿ ಎಲ್ಲಿಯೂ ಪ್ರಾಪ್ತವಾಗುತ್ತಿರಲಿಲ್ಲ. ಆದರೆ ಸಿಂಧೂ ತೀರದ ಅಗಿಯುವಿಕೆಯಲ್ಲಿ ಮೋಹಂಜೋದಾರೊ ಮತ್ತು ಹರಪ್ಪಾ ಗಳಿಂದಲೂ ಕೆಲವು ಮೂರ್ತಿಗಳು

ಲಭಿಸಿವೆ. ಇವುಗಳಿಂದ ಭಾರತೀಯ ಮೂರ್ತಿಕಲೆಯ ಇತಿಹಾಸವೇ ಬದಲಾಗಿದೆ. ಅದರ ಪರಂಪರೆಯು ಮೇಲೆ ಹೇಳಿದ ಕಾಲಕ್ಕಿಂತ ಸಾವಿರಾರು ವರ್ಷ ಪೂರ್ವದ್ದೆಂದು ಪ್ರಾಮಾಣಿತವಾಗುತ್ತದೆ. ಸಿಂಧೂ, ತೀರದ ಮುದ್ರೆಗಳ ಮೇಲೆ ದೊರೆತ ಲಿಪಿಯು ಇನ್ನೂವರೆಗೆ ಅಜ್ಞಾತವಾಗಿರುವ ಕಾರಣದಿಂದ ಅಲ್ಲಿಯ ಸಂಸ್ಕೃತಿಯ ಸಂಬಂಧದಲ್ಲಿ ಇಲ್ಲಿಯ ವರೆಗೆ ನಿಶ್ಚಿತವಾಗಿ ಏನೂ ಹೇಳಲಿಕ್ಕೆ ಬರುವಂತಿಲ್ಲ. ಆದರೆ ಎಲ್ಲಿಯವರೆಗೆ ಮೂರ್ತಿ ನಿರ್ಮಾಣ, ಆಕೃತಿ ಮತ್ತು ಭಾವಾಭಿವ್ಯಂಜನದ ಆಧಾರದ ಮೇಲೆ ತುಲನಾತ್ಮಕ ಅಭ್ಯಾಸವನ್ನು ಮಾಡಲಾಗುತ್ತಿದೆಯೋ, ಅದರ ಆಧಾರದಿಂದ ಮೇಲೆ ಹೇಳಿದ ಲೋಹಾನೀಪುರದ ಮಸ್ತಕಹೀನ ನಗ್ನ ಮೂರ್ತಿ ಮತ್ತು ಹರಪ್ಪಾದಲ್ಲಿ ಲಭಿಸಿದ ಮಸ್ತಕ ಹೀನ ನಗ್ನ ಮೂರ್ತಿಗಳಲ್ಲಿ ಬಹಳಷ್ಟು ಸಾಮ್ಯವು ಕಂಡುಬರುತ್ತದೆ. ಪೂರ್ವೋತ್ತರ ಪರಂಪರೆಗಳ ಪ್ರಮಾಣಗಳ ಆಧಾರದಿಂದ ಹರಪ್ಪಾದೊಳಗಿನ ಮೂರ್ತಿಗಳು ವೈದಿಕ ಮತ್ತು ಬೌದ್ಧ ಮೂರ್ತಿ ಪ್ರಣಾಲಿಯಿಂದ ಸರ್ವಥಾ ವಿಸದೃಶವಾಗಿದೆ. ಅದರಂತೆ ಜೈನ ಪ್ರಣಾಲಿಗೆ ಪೂರ್ಣವಾಗಿ ಅನುಕೂಲವೆಂದು ಸಿದ್ಧವಾಗುತ್ತದೆ. ಋಗ್ವೇದದಲ್ಲಿ ಶಿಶ್ನದೇವ ಅರ್ಥಾತ್ ನಗ್ನದೇವರ ಉಲ್ಲೇಖವಿದೆ. ಆದರಲ್ಲಿ ಈ ದೇವ ಅಥವಾ ಅವರ ಅನುಯಾಯಿಗಳನ್ನು ಯಜ್ಞದಿಂದ ದೂರವಿಡಲು ಮತ್ತು ಅವರನ್ನು ಘಾತಮಾಡಲು ಇಂದ್ರನಲ್ಲಿ ಪ್ರಾರ್ಥಿಸಲಾಗಿದೆ. (ಋಗ್ವೇದ ೭, ೨೧, ೫ ಮತ್ತು ೧೦ ೯೯, ೩) ಯಾವ ಪ್ರಕಾರ ಈ ಮೂರ್ತಿಯು ಖಡ್ಗಾಸನದ ದೃಷ್ಟಿಯಿಂದ ಸಮಾನವಾಗಿದೆಯೋ, ಅದೇ ಪ್ರಕಾರ ಅನೇಕ ಮುದ್ರೆಗಳ ಮೇಲಿನ ಧ್ಯಾನಸ್ಥ ಮತ್ತು ತಲೆಯ ಮೇಲೆ ಮೂರು ಕೋಡುಗಳಿಂದ ಕೂಡಿದ ಮೂರ್ತಿಗಳು ಜೈನ ಪದ್ಮಾಸನ ಮೂರ್ತಿಗಳಿಗೆ ತುಲನಾತ್ಮಕವಾಗಿವೆ. ಒಂದು ಮುದ್ರೆಯಲ್ಲಿ ಈ ಮೂರ್ತಿಯ ಸಮೀಪದಲ್ಲಿ ಆನೆ, ಎತ್ತು, ಸಿಂಹ ಮತ್ತು ಮೃಗ ಮೊದಲಾದ ವನಚರ ಜೀವಗಳನ್ನು ತೋರಿಸಲಾಗಿದೆ. ಅದರ ಮೇಲಿಂದ ಅದು ಪಶುಪತಿನಾಥನ ಪೂರ್ವಗಾಮಿ ಮೂರ್ತಿ ಯಾಗಿರಬೇಕೆಂದು ಕಲ್ಪನೆಯನ್ನು ಮಾಡಲಾಗುತ್ತದೆ. ಏನೇ ಇರಲಿ, ಈ ಮೂರ್ತಿಯಲ್ಲಿ ನಾವು ಜೈನ, ಬೌದ್ಧ ಮತ್ತು ಶೈವ ಧ್ಯಾನಸ್ಥ ಮೂರ್ತಿಗಳ ಪೂರ್ವ ರೂಪವನ್ನು ಸ್ಪಷ್ಟವಾಗಿ ಕಾಣುತ್ತೇವೆ. ನಿಜವಾಗಿಯೂ ಈ ಪ್ರಕಾರ ಆಸನದಲ್ಲಿದ್ದು, ಧ್ಯಾನ ಮಾಡುವುದರ ಸಂಬಂಧವು ಶ್ರವಣ-ಪರಂಪರೆಯೊಡನೆ ಎಷ್ಟು ಇದೆಯೋ ಅಷ್ಟು ವೈದಿಕ ಪರಂಪರೆಯೊಡನೆ ಇಲ್ಲ. ಶ್ರಮಣ-ಪರಂಪರೆಯ ಪ್ರಾಚೀನತೆಯೂ ಜೈನ ಧರ್ಮದಲ್ಲಿ ಕಂಡುಬರುವಷ್ಟು ಬೌದ್ಧ ಧರ್ಮದಲ್ಲಿ ಇಲ್ಲ. ಮೂರ್ತಿಯ ತಲೆಯ ಮೇಲೆ ಸ್ಥಾಪಿತವಾದ ತ್ರಿಶೂಲವು ಅತಿಪ್ರಾಚೀನ ಜೈನ-ತೀರ್ಥಂಕರ ಮೂರ್ತಿಯ ಹಸ್ತ ಹಾಗೂ ಪಾದ ತಳದಲ್ಲಿ ಕಂಡು ಬರುವ ತ್ರಿಶೂಲದೊಡನೆ ತುಲನೀಯವಿದೆ. ಇದರ ಮೇಲೆ ಧರ್ಮಚಕ್ರವು ಸ್ಥಾಪಿತವಾದದ್ದು ಕಂಡು ಬರುತ್ತದೆ. ಇದು ವಿಶೇಷವಾಗಿ ರಾಣೀ—ಗುಹೆಯ ಒಂದು ತೋರಣದ ಮೇಲೆ ಚಿತ್ರಿತವಾಗಿದೆ. ಈ ವಿಷಯದಲ್ಲಿ ಪಶ್ಚಿಮ ಭಾರತಕ್ಕೂ ಜೈನ ಧರ್ಮಕ್ಕೂ ಸಂಬಂಧವು ತೀರ ಪ್ರಾಚೀನ ಕಾಲದಿಂದಲೂ

ಇದ್ದುದರ ಕಡೆಗೆ ನಾವು ಗಮನ ಪೂರೈಸುವುದು ಯೋಗ್ಯವಾಗಿದೆ. ಅಂತೂ ಯಾವ ಅಸುರ ಜಾತಿಯೊಡನೆ ಸಿಂಧೂ ತೀರದ ಸಭ್ಯತೆಯನ್ನು ಸಂಬಂಧಿಸಿ ಹೇಳಲಾಗುತ್ತದೆಯೋ, ಆ ಅಸುರರು, ನಾಗರು ಮತ್ತು ಯಕ್ಷರು ಜೈನ ಧರ್ಮ ಮತ್ತು ಮುನಿಗಳನ್ನು ವಿವಿಧ ಸಂಕಟಗಳ ಅವಸ್ಥೆಯಲ್ಲಿ ರಕ್ಷಣೆ ಮಾಡಿದ ಉಲ್ಲೇಖವು ಕಂಡುಬರುತ್ತದೆ.

## ಕುಷಾಣಕಾಲದ ಜೈನ ಮೂರ್ತಿಗಳು :—

ಐತಿಹಾಸಿಕ ಕಾಲದ ಜೈನ ಮೂರ್ತಿಗಳ ಅಧ್ಯಯನಕ್ಕೆ ಬಹಳಷ್ಟು ಸಾಮಗ್ರಿಯು ನಮಗೆ ಮಧುರೆಯ ಸಂಗ್ರಹಾಲಯದಲ್ಲಿ ಏಕತ್ರಿತಗೊಳಿಸಿದ ೪೭ ಮೂರ್ತಿಗಳಿಂದ ಲಭಿಸುತ್ತದೆ. ಇವುಗಳ ವ್ಯವಸ್ಥಿತ ಪರಿಚಯವನ್ನು ಡಾ. ವಾಸುದೇವಶರಣ ಅಗ್ರವಾಲನು ಅಲ್ಲಿಯ ಸೂಚಿಯ ಮೂರನೆಯ ಭಾಗದಲ್ಲಿ ಮಾಡಿಕೊಟ್ಟಿದ್ದಾನೆ. ಇವುಗಳಲ್ಲಿ ಅನೇಕ ಮೂರ್ತಿಗಳ ಆಸನಗಳಮೇಲೆ ಲೇಖಗಳನ್ನು ಕೆತ್ತಿದ್ದೂ ಸಹ ದೊರೆತಿದೆ. ಅದರಿಂದ ಅವುಗಳ ಕಾಲವಿಭಜನೆಯೂ ಕೂಡ ಸುಲಭವಾಗುತ್ತದೆ. ಕುಷಾಣ–ಕಾಲದ ಮೂರ್ತಿಗಳ ಮೇಲೆ ಐದರಿಂದ ತೊಂಬತ್ತನೆಯ ವರ್ಷದ ವರೆಗಿನ ಉಲ್ಲೇಖಗಳು ಇವೆ. ಅನೇಕ ಲೇಖಗಳಲ್ಲಿ ಈ ವರ್ಷವು ಶಕಸಂವತ್ಸರವೆಂದು ಅನುಮಾನ ಮಾಡಲಾಗುತ್ತದೆ. ಕೆಲವೊಂದು ಲೇಖಗಳಲ್ಲಿ ಕುಷಾಣ ವಂಶದ ಕನಿಷ್ಕ, ಹುವಿಷ್ಕ ಮತ್ತು ವಾಸುದೇವ ರಾಜರ ಉಲ್ಲೇಖವೂ ಇದೆ. ತೀರ್ಥಂಕರರ ಸಮಸ್ತ ಮೂರ್ತಿಗಳು ಎರಡು ಪ್ರಕಾರ ಇದ್ದುದು ಕಂಡುಬರುತ್ತದೆ. ಒಂದುವಿಧದ ಮೂರ್ತಿಗಳು ನಿಂತಂಥವುಗಳು. ಇವುಗಳಿಗೆ ಕಾಯೋತ್ಸರ್ಗ ಅಥವಾ ಖಡ್‌ಗಾಸನ ಎಂದು ಹೇಳಲಾಗುತ್ತದೆ. ಇನ್ನೊಂದು ಪ್ರಕಾರದವು ಕುಳಿತ ಮೂರ್ತಿಗಳು. ಪದ್ಮಾಸನದಲ್ಲಿರುವಂಥವು. ಸಮಸ್ತ ಮೂರ್ತಿಗಳು ನಗ್ನ ಮತ್ತು ನಾಸಾಗ್ರದೃಷ್ಟಿ, ಧ್ಯಾನ ಮುದ್ರೆಯಲ್ಲಿಯೇ ಇವೆ. ಇತ್ತೀಚಿನ ಕಾಲದ ಮೂರ್ತಿಗಳ ಮೇಲೆ ಕಂಡುಬರುವಂಥ ನಾನಾ ತೀರ್ಥಂಕರರಲ್ಲಿ ಭೇದವನ್ನು ಸೂಚಿಸುವಂಥ ಎತ್ತು ಮೊದಲಾದ ಚಿಹ್ನಗಳು ಇವುಗಳ ಮೇಲೆ ಕಂಡುಬರುವುದಿಲ್ಲ. ಹೆಚ್ಚು ಮೂರ್ತಿಗಳ ವಕ್ಷಸ್ಥಳದ ಮೇಲೆ ಶ್ರೀವತ್ಸ ಚಿಹ್ನವು ಕಂಡುಬರುತ್ತದೆ. ಇನ್ನು ಹಸ್ತತಲ ಮತ್ತು ಚರಣತಲ ಹಾಗೂ ಸಿಂಹಾಸನದ ಮೇಲೆ ಧರ್ಮಚಕ್ರ, ಉಷ್ಣೀಷ, ಹಾಗೆಯೇ ಊರ್ಣಾ (ಹುಬ್ಬುಗಳ ಮಧ್ಯದಲ್ಲಿ ರೋಮಗುಚ್ಛ) ಇವುಗಳ ಚಿಹ್ನವೂ ಕೂಡ ಬಹಳಷ್ಟು ಮೂರ್ತಿಗಳ ಮೇಲೆ ಕಂಡುಬರುತ್ತದೆ. ಉಳಿದ ಪರಿಕರಗಳಲ್ಲಿ ಪ್ರಭಾವಲಯ(ಭಾಮಂಡಲ) ಎರಡೂ ಪಾರ್ಶ್ವಗಳಲ್ಲಿ ಚಮರವಾಹಕರು ಹಾಗೂ ಸಿಂಹಾಸನದ ಎರಡೂ ಮಗ್ಗಲು ಸಿಂಹ ಇವುಗಳನ್ನು ಕೆತ್ತಲಾಗಿದೆ. ಒಮ್ಮೊಮ್ಮೆ ಈ ಸಿಂಹವು ಆಸನವನ್ನು ಧಾರಣ ಮಾಡಿರುವಂತೆಯೂ ಕಂಡುಬರುತ್ತದೆ. ಕೆಲವೊಂದು ಮೂರ್ತಿಗಳ ಸಿಂಹಾಸನವು ಮೇಲಿದ್ದ ಪದ್ಮಾಸನದ ರೂಪದಲ್ಲಿ ಇದೆ. ಕೆಲವೊಂದರಲ್ಲಿ ತೀರ್ಥಂಕರರ

ಮೂರ್ತಿಯ ಮೇಲೆ ಛತ್ರವೂ ಅಂಕಿತಗೊಂಡಿದೆ. ಇನ್ನೊಂದರ ಸಿಂಹಾಸನದ ಮೇಲೆ ಬಾಲಕನನ್ನು ತೊಡೆಯ ಮೇಲೆ ಕೂಡಿಸಿಕೊಂಡ ಭದ್ರಾಸನದಲ್ಲಿರುವ ಅಂಬಿಕೆಯ ಪ್ರತಿಮೆಯೂ ಇದೆ. ಇವು ಆ ಕಾಲದ ಜಿನಮೂರ್ತಿಗಳ ಸಾಮಾನ್ಯ ಲಕ್ಷಣವೆಂದು ಕಂಡುಬರುತ್ತವೆ. ಕೇವಲ ಎರಡು ತೀರ್ಥಂಕರರ ಮೂರ್ತಿಗಳು ತಮ್ಮ ವಿಶೇಷ ಲಕ್ಷಣಗಳನ್ನು ವ್ಯಕ್ತಪಡಿಸುತ್ತವೆ. ಅವುಗಳಲ್ಲೊಂದು ಆದಿನಾಥನ ಮೂರ್ತಿಯು. ಇದರ ಕೇಶಕಲಾಪವು ಹಿಂದೆಬೆನ್ನು, ಕುತ್ತಿಗೆಯಿಂದ ಕೆಳಗೂ ಕೂಡ ಹರಡಿದಂತೆ ಇದೆ. ಇನ್ನೊಂದು ಪಾರ್ಶ್ವನಾಥನ ಮೂರ್ತಿಯು. ಇದರ ತಲೆಯ ಮೇಲೆ ಸಪ್ತಫಣೀ ನಾಗನು ನೆರಳು ಹಿಡಿದಂತೆ ಇದೆ. ಆದಿನಾಥನ ತಪಸ್ಯಾಕಾಲದಲ್ಲಿ ಆತನ ಉದ್ದವಾದ ಜಡೆಗಳು ಇದ್ದವೆಂಬುದರ ಉಲ್ಲೇಖವು ಪ್ರಾಚೀನ ಜೈನ ಸಾಹಿತ್ಯದಲ್ಲಿ ಅನೇಕ ಕಡೆಗೆ ಬರುತ್ತವೆ. ಉದಾಹರಣಾರ್ಥ ರವಿಷೇಣಾಚಾರ್ಯರ ಪದ್ಮಪುರಾಣದಲ್ಲಿ (ಕ್ರಿ. ಶ. ೬೭೬) ಹೀಗೆ ಹೇಳಿದೆ:—

ವಾತೋದ್ಧೂತಾ ಜಟಾಸ್ತಸ್ಯ ರೇಜುರಾಕುಲಮೂರ್ತಯಃ ।
ಧೂಮಾಲಯ ಇವ ಧ್ಯಾನ-ವಹ್ನಿಸಕ್ತಸ್ಯ ಕರ್ಮಣಃ ॥
(–ಪ. ಪು. ೩, ೨೮೮)

ಹಾಗೆಯೇ—

ಸ ರೇಜೇ ಭಗವಾನ್ ದೀರ್ಘ ಜಟಾಜಾಲ ಹುತಾಂಶುಮಾನ್ .
(ಅದೇ ೪, ೫)

ಇದೇ ಪ್ರಕಾರ ಪಾರ್ಶ್ವನಾಥ ತೀರ್ಥಂಕರನ ನಾಗಫಣಾಟೋಪ ಛತ್ರದ ಬಗ್ಗೆಯೂ ಕೂಡ ಒಂದು ಇತಿಹಾಸವಿದೆ. ಇದರ ಸುಂದರವೂ ಸಂಕ್ಷಿಪ್ತವೂ ಆದ ವರ್ಣನೆಯನ್ನು ಸಮಂತಭದ್ರಕೃತ ಸ್ವಯಂಭೂ ಸ್ತೋತ್ರದಲ್ಲಿ ನಾವು ಕಾಣುತ್ತೇವೆ:-

ತಮಾಲನೀಲೈಃ ಸಧನುಸ್ತಡಿದ್ಗುಣೈಃ ಪ್ರಕೀರ್ಣಭೀಮಾ-
ಶನಿ ವಾಯುವೃಷ್ಟಿಭಿಃ ।
ಬಲಾಹಕೈರ್ವೈರಿವಶೈರುಪದ್ರುತೋ ಮಹಾಮನಾ ಯೋ ನ ಚಚಾಲ
ಯೋಗತಃ । ೧೩೧ ।

ಬೃಹತ್ ಫಣಾಮಂಡಲ-ಮಂಡಪೇನ ಯಂ ಸ್ಫುರತ್ತಡಿತ್ಪಿಂಗರು
ಚೋಪಸರ್ಗಿಣಾಮ್ ।
ಜುಗೂಹ ನಾಗೋ ಧರಣೋ ಧರಾಧರಂ ವಿರಾಗಸಂಧ್ಯಾ
ತಡಿದಂಬುದೋ ಯಥಾ ॥ ೧೩೨ ॥

ಯಾವ ಕಾಲದಲ್ಲಿ ಪಾರ್ಶ್ವನಾಥನು ತನ್ನ ತಪಸ್ಸಿನಲ್ಲಿ ನಿಶ್ಚಲಭಾವದಿಂದ ಧ್ಯಾನಾರೂಢನಾಗಿದ್ದನೋ ಆಗ ಅವನ ಪೂರ್ವಜನ್ಮದ ವೈರಿಯಾದ ಕಮಠಾಸುರನು

ನಾನಾ ಪ್ರಕಾರದ ಉಪದ್ರವಗಳಿಂದ ಅವನನ್ನು ಧ್ಯಾನದಿಂದ ವಿಚಲಿತಗೊಳಿಸಲು ತೊಡಗಿದನು. ಅವನು ಪ್ರಚಂಡ ಗಾಳಿಯನ್ನು ಉತ್ಪನ್ನಮಾಡಿದನು. ಘನಘೋರ ವೃಷ್ಟಿಯನ್ನು ಸುರಿಸಿದನು, ಮೇಘಗಳಿಂದ ವಜ್ರಗಳನ್ನು ತೂರಿದನು. ಆದರೂ ಭಗವಂತನು ಧ್ಯಾನದಿಂದ ವಿಚಲಿತನಾಗಲಿಲ್ಲ. ಅವನ ಇಂಥ ತಪಸ್ಸಿನಿಂದ ಪ್ರಭಾವಿತನಾಗಿ ಧರಣೇಂದ್ರ ನಾಗನು ಬಂದು ತನ್ನ ವಿಶಾಲವಾದ ಫಣಾಮಂಟಪವನ್ನು ಅವನ ಮೇಲೆ ಎತ್ತಿಹಿಡಿದನು, ಅವನನ್ನು ಉಪದ್ರವದಿಂದ ರಕ್ಷಿಸಿದನು. ಈ ಘಟನೆಯ ಪ್ರತೀಕವೆಂದು ನಾವು ಪಾರ್ಶ್ವನಾಥನ ನಾಗ-ಫಣಾ ಚಿಹ್ನವನ್ನು ಕಾಣುತ್ತೇವೆ.

**ಕೆಲವೊಂದು ಮೂರ್ತಿಗಳ ಪರಿಚಯ :—**

(೧) **ಮಹಾರಾಜ ವಾಸುದೇವ ಕಾಲದ ಸಂವತ್ಸರ ೮೪ ರ ಆದಿನಾಥನ ಮೂರ್ತಿಯು (ಬಿ೪)** — ಮೂರ್ತಿಯು ಧ್ಯಾನಸ್ಥ ಪದ್ಮಾಸೀನವಾಗಿದೆ. ಇದರ ತಲೆ ಮತ್ತು ಬಾಹುಗಳು ಖಂಡಿತವಾಗಿವೆ. ದಂಡೆಯುಳ್ಳ ಪ್ರಭಾವಲಯವು ಬಹಳಷ್ಟು ಸುರಕ್ಷಿತವಾಗಿದೆ. ಎದೆಯಮೇಲೆ ಶ್ರೀವತ್ಸ ಚಿಹ್ನವಿದೆ. ಅದರಂತೆ ಕೈಗಳ ಮೇಲೆಯೂ ಚರಣತಳದಲ್ಲಿಯೂ ಚಕ್ರಚಿಹ್ನವು ಇದೆ ಆಸನದ ಮೇಲೆ ಒಂದು ಕಂಭದ ಮೇಲೆ ಧರ್ಮಚಕ್ರವಿದೆ. ಇದನ್ನು ಹತ್ತು ಜನ ಸ್ತ್ರೀಪುರುಷರು ಪೂಜೆಯನ್ನು ಮಾಡುತ್ತಿದ್ದಾರೆ ಇವರಲ್ಲಿ ಇಬ್ಬರು ಧರ್ಮಚಕ್ರ ಸ್ತಂಭದ ಸಮೀಪದಲ್ಲಿ ಮೊಳ ಕಾಲುಗಳನ್ನು ಊರಿದವರಾಗಿದ್ದಾರೆ. ಉಳಿದವರು ನಿಂತಿದ್ದಾರೆ. ಕೆಲವರ ಕೈಗಳಲ್ಲಿ ಹೂವುಗಳಿವೆ. ಕೆಲವರು ಕೈಜೋಡಿಸಿದ್ದಾರೆ. ಎಲ್ಲರ ಮುಖಮುದ್ರೆಯು ವಂದನಾಭಾವದಲ್ಲಿದೆ. ಈ ಮೂರ್ತಿಯ ಲೇಖದಲ್ಲಿ ಸ್ಪಷ್ಟವಾಗಿ ಭಗವಾನ್ ಅರ್ಹಂತ ಋಷಭನ ಪ್ರತಿಮೆಯೆಂದು ಹೇಳಲಾಗಿದೆ.

(೨) **ಪಾರ್ಶ್ವನಾಥನ ಒಂದು ಸುಂದರ ಮೂರ್ತಿ (ಬಿ ೬೨) :—** ಈ ಮೂರ್ತಿಯ ತಲೆ ಹಾಗೂ ಅದರ ಮೇಲಿನ ನಾಗನ ಹೆಡೆಯು ಮಾತ್ರ ಸುರಕ್ಷಿತವಾಗಿದೆ. ಹೆಡೆಯ ಮೇಲೆ ಸ್ವಸ್ತಿಕ, ರತ್ನಪಾತ್ರ ತ್ರಿರತ್ನ, ಪೂರ್ಣಘಟ ಮತ್ತು ಮೀನಯುಗಲ ಈ ಮಂಗಲ ದ್ರವ್ಯಗಳ ಚಿಹ್ನಗಳನ್ನು ಮಾಡಲಾಗಿದೆ. ತಲೆಯ ಮೇಲೆ ಗುಂಗುರು ಕೂದಲುಗಳಿವೆ ಕಿವಿಗಳು ಸ್ವಲ್ಪ ಉದ್ದವಾಗಿವೆ. ಕಣ್ಣುಗಳ ಹುಬ್ಬುಗಳ ಕೂದಲುಗಳು ಪರಸ್ಪರ ಕೂಡಿವೆ. ಕಪೋಲಗಳು ತುಂಬಿಕೊಂಡಿವೆ.

(೩) **ಪಾಷಾಣ-ಸ್ತಂಭ (ಬಿ ೬೮)** ಇದು ಮೂರು ಫೂಟು ಮೂರು ಇಂಚು ಉದ್ದವಾಗಿದೆ. ಇದರ ನಾಲ್ಕೂ ಕಡೆಗೆ ನಾಲ್ಕು ನಗ್ನ ಜಿನಮೂರ್ತಿಗಳು ಇವೆ. ಎಲ್ಲ ಮೂರ್ತಿಗಳ ವಕ್ಷಸ್ಥಲದ ಮೇಲೆ ಶ್ರೀ ವತ್ಸವಿದೆ. ಮೂರು ಮೂರ್ತಿಗಳಿಗೆ 'ಭಾಮಂಡಲಗಳೂ ಇವೆ. ಇವುಗಳಲ್ಲಿ ಒಂದರ ತಲೆಗೂದಲುಗಳು ಕುತ್ತಿಗೆಯ ಮೇಲೆ ಪಸರಿಸಿವೆ. ನಾಲ್ಕನೆಯ ಮೂರ್ತಿಯ ತಲೆಯಮೇಲೆ ಸಪ್ತಫಣಿನಾಗನ ಛಾಯೆಯಿದೆ. ಇವು

ಗಳಲ್ಲಿ ಕೊನೆಯವೆರಡು ಸ್ಪಷ್ಟವಾಗಿಯೂ ಆದಿನಾಥನ ಮತ್ತು ಪಾರ್ಶ್ವನಾಥನ ಮೂರ್ತಿಗಳಿವೆ.

(೪) ಸ್ತಂಭದ ಪೀಠವನ್ನು ಐತಿಹಾಸಿಕ ದೃಷ್ಟಿಯಿಂದ ಉಲ್ಲೇಖಿಸಲೇಬೇಕು. ಇದರ ಮೇಲ್ಭಾಗವು ಮುರಿದುಹೋಗಿದೆ. ಇದೇ ಭಾಗದ ಮೇಲೆ ನಾಲ್ಕೂ ಕಡೆಗೆ ಜಿನ ಪ್ರತಿಮೆಗಳಿದ್ದುವು. ಆದರೆ ಮೂರ್ತಿಗಳ ಚರಣ ಚಿಹ್ನಗಳು ಮಾತ್ರ ಉಳಿದು ಕೊಂಡಿವೆ. ಈ ಪೀಠದ ಒಂದು ಮಗ್ಗುಲಿನ ಮೇಲೆ ಧರ್ಮಚಕ್ರವನ್ನು ಕೆತ್ತಲಾಗಿದೆ. ಇದನ್ನು ಇಬ್ಬರು ಪುರುಷರು, ಇಬ್ಬರು ಸ್ತ್ರೀಯರು ಪೂಜಿಸುತ್ತಿದ್ದಾರೆ. ಇಬ್ಬರು ಬಾಲಕರು ಕೈಗಳಲ್ಲಿ ಪುಷ್ಪಮಾಲೆಗಳನ್ನು ಹಿಡಿದುಕೊಂಡು ನಿಂತಿದ್ದಾರೆ. ಈ ಕಲ್ಲಿನ ಮೇಲೆ ಲೇಖವನ್ನೂ ಸಹ ಕೆತ್ತಲಾಗಿದೆ. ಅದಕ್ಕನುಸರಿಸಿ ಇದು ಅಭಿಸಾರ-ನಿವಾಸಿಯಾದ ಭಟ್ಟದಾಮನ ಆರ್ಯ ಋಷಿದಾಸನ ಉಪದೇಶದಿಂದ ಮಾಡಿದ ದಾನ ವಾಗಿದೆ. ಡಾ. ಅಗ್ರವಾಲನ ಮತದಿಂದ ಈ ಧಾರ್ಮಿಕ ಪುರುಷನು ಅದೇ ಅಭಿಸಾರ ಪ್ರದೇಶದ ನಿವಾಸಿಯಾಗಿರಬೇಕು. ಇದನ್ನು ಯುನಾನಿ ಲೇಖಕನೂ ಸಹ ಉಲ್ಲೇಖಿಸಿ ದ್ದಾನೆ. ಈ ಪ್ರದೇಶವು ಈಗಿನ ಪೇಶಾವರ ವಿಭಾಗದ ಪಶ್ಚಿಮೋತ್ತರದ ಹಜಾರಾ ಜಿಲ್ಲೆಯೆಂದು ಸಿದ್ಧವಾಗುತ್ತದೆ. ಅವನು ಮಥುರೆಯಲ್ಲಿ ಬಂದು ಜೈನಧರ್ಮವನ್ನು ಸ್ವೀಕರಿಸಿರಬೇಕು. ಆದರೆ ಹಜಾರಾ ನಿವಾಸಿಯಾದ ಆತನು ಮೊದಲಿನಿಂದಲೂ ಜೈನ ಧರ್ಮಾವಲಂಬಿಯೇ ಆಗಿರಬೇಕೆಂಬುದು ಉಚಿತವಾಗಿದೆ. ಮಥುರೆಯ ಸ್ತೂಪ ಮತ್ತು ಮಂದಿರಗಳ ತೀರ್ಥಯಾತ್ರೆಗಾಗಿ ಬಂದಿರಬೇಕು. ಆಗ ಇವನು ಈ ಸರ್ವತೋಭದ್ರ ಪ್ರತಿಮೆಯನ್ನು ಪ್ರತಿಷ್ಠಿಸಿರಬೇಕು. ಮೊದಲನೆಯ ಶತಮಾನ ದಲ್ಲಿ ಪಶ್ಚಿಮೋತ್ತರ ಪ್ರದೇಶದಲ್ಲಿ ಜೈನಧರ್ಮದ ಅಸ್ತಿತ್ವವು ಅಸಂಭವವೆನಿ ಸುವುದಿಲ್ಲ.

(೫) ನೇಮಿನಾಥನ (೨೫೦೨) ಪ್ರತಿಮೆಯೊಂದು ಧ್ಯಾನವನ್ನು ಸೆಳೆಯು ವಂಥದಿದೆ. ಇದರ ಬಲಭಾಗದಲ್ಲಿ ನಾಲ್ಕು ಭುಜಗಳು ಮತ್ತು ಏಳು ಹೆಡೆಗಳಿಂದ ಕೂಡಿದ ನಾಗರಾಜನ ಮೂರ್ತಿಯಿದೆ. ಅದರ ಮೇಲಿನ ಎಡಗೈಯಲ್ಲಿ ನೇಗಿಲಿನ ಚಿಹ್ನವಿದೆ. ಆದರಿಂದ ಇದು ಬಲರಾಮನ ಮೂರ್ತಿಯೆಂದು ಮನ್ನಿಸಲಾಗಿದೆ. ಎಡಭಾಗದಲ್ಲಿ ಚತುರ್ಮುಖ ವಿಷ್ಣುವಿನ ಮೂರ್ತಿಯಿದೆ. ಅದರ ಮೇಲಿನ ಬಲಗೈ ಯಲ್ಲಿ ಗದೆಯೂ ಎಡಗೈಯಲ್ಲಿ ಚಕ್ರವೂ ಇದೆ. ತೀರ್ಥಂಕರ ಮೂರ್ತಿಯ ಮೇಲ್ಭಾಗದಲ್ಲಿ ಚಿತ್ತದ-ಪಾತ್ರ (ವೇತಸ-ಪಾತ್ರ)ದ ಕೆತ್ತನೆಯಿದೆ. ಸಮವಾಯಾಂಗ ಸೂತ್ರಕ್ಕನುಸರಿಸಿ ವೇತಸವು (ಚಿತ್ತವು) ನೇಮಿನಾಥನ ಬೋಧಿವೃಕ್ಷವಾಗಿದೆ. ಹಿಂದೂ ಪುರಾಣಕ್ಕನುಸರಿಸಿ ಬಲರಾಮನು ಶೇಷನಾಗನ ಅವತಾರವೆಂದು ಮನ್ನಿಸಲಾಗಿದೆ. ಇದೇ ಪ್ರಕಾರ ಹೀಗೆಯೇ ಬಲರಾಮ ಮತ್ತು ವಾಸುದೇವನ ಪ್ರತಿಮೆಗಳಿಂದ ಅಂಕಿ ತವಾದ ಮತ್ತೂ ಅನೇಕ ಮೂರ್ತಿಗಳು ಕಂಡು ಬರುತ್ತವೆ, (ಜೈನ ಎ.ಬೀ. ಭಾಗ ೨,

ಫುಟ ೯೧) ಇಂಥದೇ ಇನ್ನೊಂದು ಪ್ರತಿಮೆಯು (೨೪೮೮) ಇದೆ. ಇದರಲ್ಲಿ ತೀರ್ಥಂಕರನ ಬಲ ಭಾಗದಲ್ಲಿ ಹೆಡೆಗೂಡಿದ ನಾಗನು ಕೈ ಜೋಡಿಸಿ ನಿಂತಿದ್ದಾನೆ. ಇದೂ ಕೂಡ ಬಲರಾಮನು ಉಪಾಸಿಸುವ ನೇಮಿನಾಥನ ಮೂರ್ತಿಯಾಗಿದೆ. ನೇಮಿನಾಥನ ಮೂರ್ತಿಯ ಜೊತೆಯಲ್ಲಿ ವಾಸುದೇವ ಮತ್ತು ಬಲಭದ್ರನು ಸಂಬಂಧಿಸಿರುವ ಉಲ್ಲೇಖವು ಸಮಂತಭದ್ರನ ಬೃಹತ್ ಸ್ವಯಂಭೂಸ್ತೋತ್ರದಲ್ಲಿ ಇದೆ. ನೇಮಿನಾಥನ ಸ್ತುತಿಯನ್ನು ಮಾಡುತ್ತ ಅವನು ಹೀಗೆ ಹೇಳಿದ್ದಾನೆ:—

> ದ್ಯುತಿ-ಮದ್-ರಥಾಂಗ-ರವಿಬಿಂಬ-ಕಿರಣ-ಜಟಿಲಾಂಶು ಮಂಡಲಃ |
> ನೀಲ-ಜಲಜದಲರಾಶಿ-ವಪುಃ ಸಹ ಬಂಧು ಭಿರ್ಗರುಡಕೇತುರೀಶ್ವರಃ ||
> ಹಲಭೃಚ್ಚತೆ ಸ್ವಜನಭಕ್ತಿ ಮುದಿತ ಹೃದವೌ ಜನೇಶ್ವರಾ |
> ಧರ್ಮವಿನಯರ ಸಿಕೌ ಸೀತಾರಾಂ ಚರಣಾರವಿಂದ-ಯುಗಲಂ ಪ್ರಣೇಮತುಃ ||೧೨೩||

ಅರ್ಥಾತ್ ಚಕ್ರಧಾರೀ ಗರುಡಕೇತು (ವಾಸುದೇವ) ಮತ್ತು ಹಲಧರ ಇವರಿಬ್ಬರು ಅಣ್ಣ-ತಮ್ಮಂದಿರು ಪ್ರಸನ್ನ ಚಿತ್ತರಾಗಿದ್ದು, ವಿನಯದಿಂದ ತಮ್ಮನ್ನು ವಂದಿಸುತ್ತಿದ್ದಾರೆ.

## ಗುಪ್ತಕಾಲದ ಜೈನ ಮೂರ್ತಿಗಳು :—

ಕುಷಾಣ ಕಾಲದ ತರುವಾಯ ಈಗ ನಾವು ಗುಪ್ತಕಾಲದ ತೀರ್ಥಂಕರ ಪ್ರತಿಮೆಗಳ ಕಡೆಗೆ ದೃಷ್ಟಿಯನ್ನು ಬೀರಬೇಕು. ಈ ಯುಗವು ಕ್ರಿ.ಶ. ನಾಲ್ಕನೆಯ ಶತಮಾನದಿಂದ ಆರಂಭವಾಗುತ್ತದೆ. ಈ ಯುಗದ ೩೨ ಪ್ರತಿಮೆಗಳ ಪರಿಚಯವನ್ನು ಮಥುರಾ ಸಂಗ್ರಹಾಲಯದ ಸೂಚಿಯಲ್ಲಿ ಮಾಡಿಕೊಡಲಾಗಿದೆ. ಆದರಿಂದ ಈ ಯುಗದ ಕೆಳಗೆ ಕಾಣಿಸಿದ ಕೆಲವು ವಿಶೇಷತೆಗಳು ಕಂಡುಬರುತ್ತವೆ. ಕುಷಾಣಕಾಲದಲ್ಲಿ ವಿಕಸಿತವಾದ ತೀರ್ಥಂಕರ ಮೂರ್ತಿಗಳ ಸಾಮಾನ್ಯ ಲಕ್ಷಣಗಳೇ ಈ ಕಾಲದಲ್ಲಿಯೂ ವ್ಯಕ್ತವಾಗಿವೆ. ಆದರೆ ಅವುಗಳ ಪರಿಕರದಲ್ಲಿ ಕೆಲವೊಂದು ವೈಶಿಷ್ಟ್ಯಗಳು ಕಂಡುಬರುತ್ತವೆ. ಪ್ರತಿಮೆಗಳ ಉಷ್ಣೀಷವು ಹೆಚ್ಚು ಸೌಂದರ್ಯದಿಂದ ಕೂಡಿದೆ. ಘುಂಘರಾಲೇಪನವನ್ನು ಹೊಂದಿವಂತೆ ಕಾಣುತ್ತವೆ. ಪ್ರಭಾವಲಯದಲ್ಲಿ ವಿಶೇಷರಚನೆಯು ಬೆಳೆದಿದೆ. (ಬಿ. ೧, ಬಿ. ೬ ಮೊಲಾದುವು). ಧರ್ಮಚಕ್ರ ಮತ್ತು ಅದರ ಉಪಾಸಕರ ಚಿತ್ರಣವು ಮೊದಲಿನಂತೆ ಇದ್ದು ಕೆಲಕೆಲವೆಡೆಗಳಲ್ಲಿ ಪಾರ್ಶ್ವಗಳಲ್ಲಿ ಮೃಗವನ್ನು ಕೆತ್ತಿದ್ದು ಕಂಡುಬರುತ್ತದೆ. ಬೌದ್ಧ ಮೂರ್ತಿಗಳಲ್ಲಿ ಈ ಪ್ರಕಾರ ಮೃಗಗಳ ಚಿತ್ರಣವು ಬುದ್ಧ ಭಗವಾನ್‌ನ ಸಾರನಾಥದ ಮೃಗದಾವದಲ್ಲಿ ಮೊಟ್ಟಮೊದಲಿನ ಧರ್ಮೋಪದೇಶದ ಪ್ರತೀಕವೆಂದು ಮನ್ನಿಸಲಾಗಿದೆ. ಇಲ್ಲಿಯೂ ಕೂಡ ಅದೇ ಅಲಂಕರಣ ಶೈಲಿಯು ಸ್ಥಾನವನ್ನು ಪಡೆದಿದೆ. ಮುಂದೆ ಹೋಗಿ ನಾವು ಮೃಗವನ್ನು ಶಾಂತಿನಾಥ ಭಗವಾನ್‌ನ ವಿಶೇಷ ಚಿಹ್ನವೆಂದು ಸ್ವೀಕರಿಸುತ್ತೇವೆ. ಈ ಪ್ರಕಾರದ ಒಂದು ಪ್ರತಿಮೆಯು( ಬಿ ೭೫) ಸಿಂಹಾಸನದ ಮೇಲೆ ಒಂದು ಪಾರ್ಶ್ವದಲ್ಲಿ ತನ್ನ ಹಣದ ಚೀಲ ಸಹಿತ ಧನಪತಿ

ಕುಬೇರ ಮತ್ತು ಇನ್ನೊಂದು ಪಾರ್ಶ್ವದಲ್ಲಿ ತನ್ನ ಎಡನಡುವಿನ ಮೇಲೆ ಬಾಲಕನನ್ನು ಕೂರಿಸಿಕೊಂಡ ಮಾತೃದೇವಿಯ (ಅಂಬಿಕಾ) ಪ್ರತಿಮೆಗಳನ್ನು ತೋರಿಸಲಾಗಿದೆ. ಇದರ ಮೇಲೆ ಎರಡೂ ಮಗ್ಗಲಿಗೆ ನಾಲ್ಕು ನಾಲ್ಕು ಕಮಲಾಸೀನ ಪ್ರತಿಮೆಗಳನ್ನು ನಿರ್ಮಿಸಲಾಗಿದೆ. ಇವುಗಳನ್ನು ಸೂರ್ಯ, ಚಂದ್ರ, ಮಂಗಳ, ಬುಧ, ಬೃಹಸ್ಪತಿ, ಶುಕ್ರ, ಶನಿ, ಮತ್ತು ರಾಹು ಈ ಎಂಟು ಗ್ರಹಗಳ ಪ್ರತೀಕವೆಂದು ಮನ್ನಿಸಲಾಗಿದೆ. ಈ ಅಲಂಕರಣದ ಆಧಾರದ ಮೇಲೆ ಈಪ್ರತಿಮೆಯು ಗುಪ್ತಯುಗ ಮತ್ತು ಮಧ್ಯಯುಗ ಗಳ ಸಂಧಿಕಾಲದ್ದೆಂದು ತಿಳಿಯಲಾಗುತ್ತದೆ. ಯಾಕಂದರೆ ಈ ಪ್ರತಿಮಾ ಶೈಲಿಯು ಆ ಕಾಲದಲ್ಲಿ ಹೆಚ್ಚು ವಿಕಸಿತಗೊಂಡಿತ್ತು. (ಬಿ. ೬೫, ೬೬) ನವಗ್ರಹ ಮತ್ತು ಅಷ್ಟ ಪ್ರಾತಿಹಾರ್ಯ ಯುಕ್ತ ಒಂದು ಜಿನ ಪ್ರತಿಮೆಯು ಮಧ್ಯಪ್ರದೇಶದಲ್ಲಿ ಜಬಲಪುರದ ಸಮೀಪ ಸಲೀಮಾನಾಬಾದದಿಂದಲೂ ಒಂದು ವೃಕ್ಷದ ಕೆಳಗೆ ಲಭಿಸಿದೆ. ಅಲ್ಲಿಯ ಜನರು ಅದನ್ನು 'ಖೈರಾಮಾಯಿ' ಎಂಬ ಹೆಸರಿನಿಂದ ಪೂಜಿಸುತ್ತಿದ್ದರು. ('ಖಂಡಹರೋಕಾ ವೈಭವ, ಪು. ೧೮೦ ನೋಡಿರಿ) ಇದೇ ಪ್ರಕಾರ ಸಂಧಿಕಾಲದ ಇನ್ನೊಂದು ಪ್ರತಿಮೆಯು (೧೫೮೮) ಇದೆ. ಅದರ ಸಿಂಹಾಸನದ ಮೇಲೆ ಪಾರ್ಶ್ವದಲ್ಲಿ ಸಿಂಹಗಳ ಮಧ್ಯದಲ್ಲಿ ಮೀನಯುಗಲವನ್ನು ತೋರಿಸಲಾಗಿದೆ. ಅವುಗಳ ಮುಖ ತೆರೆದಿವೆ. ಅವುಗಳಿಂದ ಸೂತ್ರವು ಜೋತಾಡುತ್ತಿದೆ. ಮುಂದೆ ಮೀನವು ಅರನಾಥ ತೀರ್ಥಂಕರರ ಚಿಹ್ನವಾದದ್ದು ಕಂಡುಬರುತ್ತದೆ. ಆದಿನಾಥನ ಪ್ರತಿಮೆಯನ್ನು ಅಂದಿನ ವರೆಗೂ ಕೂಡ ಅದೇ ರೀತಿ ಕುತ್ತಿಗೆಯ ಮೇಲೆ ಪಸರಿಸಿದ ಕೂದಲುಗಳ ಸಹಿತ ರೂಪಿಸಲಾಗುತ್ತಿದೆ. ಅವನ ಎತ್ತು, ಹಾಗೂ ಅನ್ಯ ತೀರ್ಥಂಕರರ ಭಿನ್ನ ಭಿನ್ನ ಚಿಹ್ನೆಗಳು ಅಲ್ಲಿಯ ವರೆಗೆ ಹೆಚ್ಚು ಪ್ರಚಾರದಲ್ಲಿ ಬಂದಿರಲಿಲ್ಲ. ಆದರೂ ಅವುಗಳಉಪಯೋಗವು ಪ್ರಾರಂಭವಾದದ್ದು ಪ್ರಾಮಾಣಿತವಾಗುತ್ತದೆ. ಈ ವಿಷಯ ದಲ್ಲಿ ರಾಜಗಿರಿಯ ವೈಭಾರ ಪರ್ವತದ ನೇಮಿನಾಥನ ಮೂರ್ತಿಯನ್ನು ನಿರೀಕ್ಷಿಸ ಬಹುದು. ಇದರ ಸಿಂಹಾಸನದ ಮಧ್ಯದಲ್ಲಿ ಧರ್ಮಚಕ್ರವನ್ನು ಪೀಠದ ಮೇಲೆ ಧರಿಸಿರುವ ಒಬ್ಬ ಪುರುಷ ಮತ್ತು ಅವನ ಎರಡೂ ಮಗ್ಗಲುಗಳಲ್ಲಿ ಶಂಖಗಳ ಆಕೃತಿಗಳನ್ನು ಕಾಣುತ್ತೇವೆ. ಈ ಮೂರ್ತಿಯ ಮೇಲಿನ ಖಂಡಿತ ಲೇಖದಲ್ಲಿ ಚಂದ್ರಗುಪ್ತನ ಹೆಸರು ಕಂಡುಬರುತ್ತದೆ. ಅದು ಲಿಪಿಯ ಆಧಾರದಿಂದ ಗುಪ್ತ ವಂಶದ ರಾಜನಾದ ಎರಡನೆಯ ಚಂದ್ರಗುಪ್ತನನ್ನು ಸೂಚಿಸುತ್ತದೆಂದು ಅನುಮಾ ನಿಸಲಾಗಿದೆ. ಗುಪ್ತಸಮ್ರಾಟ್ ಮೊದಲನೆಯ ಕುಮಾರಗುಪ್ತನ ಕಾಲದಲ್ಲಿ ಗುಪ್ತ ಸ. ೧೦೬ ರಲ್ಲಿ ನಿರ್ಮಿಸಿದ ವಿದಿಶಾದ ಸಮೀಪದ ಉದಯಗಿರಿಯ ಗುಹೆಯಲ್ಲಿ ಕೆತ್ತಿದ ಆ ಪಾರ್ಶ್ವನಾಥನ ಮೂರ್ತಿಯೂ ಈ ಕಾಲದ ಮೂರ್ತಿ ಕಲೆಯ ದೃಷ್ಟಿಯಿಂದ ಅವಲೋಕನಕ್ಕೆ ತಕ್ಕುದಾಗಿದೆ. ದುರ್ಭಾಗ್ಯದಿಂದ ಮೂರ್ತಿಯು ಒಡೆದು ಹೋಗಿದೆ. ಆದರೆ ಅದರ ಮೇಲಿನ ನಾಗನ ಹೆಡೆಯು ತನ್ನ ಭಯಂಕರ ಹಲ್ಲುಗಳಿಂದ ಬಹು ಪ್ರಭಾವಶಾಲಿಯಾಗಿದೆ. ತನ್ನ ದೇವನ

ರಕ್ಷಣೆಗಾಗಿ ತತ್ಪರತೆಯನ್ನು ವ್ಯಕ್ತಪಡಿಸುತ್ತಿದೆ. ಉತ್ತರ ಪ್ರದೇಶದ ಕಹಾಉಂ ಎಂಬ ಹೆಸರಿನ ಸ್ಥಾನದಲ್ಲಿ ಲಭಿಸಿದ ಗುಪ್ತ ಸಂ. ೧೪೧ ನೆಯ ವರ್ಷದ ಲೇಖ ಸಹ ಇರುವ ಆ ಕಂಭವೂ ಕೂಡ ಇಲ್ಲಿ ಉಲ್ಲೇಖನೀಯವಾಗಿದೆ. ಇದರಲ್ಲಿ ಪಾರ್ಶ್ವನಾಥ ಮತ್ತು ಉಳಿದ ನಾಲ್ಕು ತೀರ್ಥಂಕರರ ಪ್ರತಿಮೆಗಳನ್ನು ಕೆತ್ತಲಾಗಿದೆ. ಇದೇ ಕಾಲದ ಅನೇಕ ಜೈನ ಪ್ರತಿಮೆಗಳು ಗ್ವಾಲಿಯರದ ಸಮೀಪದಲ್ಲಿರುವ ಕೋಟಿ, ಬೇಸನಗರ, ಬೂಢೀ ಚಂದೇರಿ, ಮತ್ತು ದೇವಗಡ ಮೊದಲಾದ ಸ್ಥಾನಗಳಲ್ಲಿ ದೊರೆತಿವೆ. ದೇವಗಡದ ಕೆಲವೊಂದು ಮೂರ್ತಿಗಳನ್ನು ಅಲ್ಲಿಯ ಮಂದಿರಗಳ ಜೊತೆಯಲ್ಲಿಯೇ ಉಲ್ಲೇಖಿಸಲಾಗಿದೆ. ಇಲ್ಲಿಯ ಮೂರ್ತಿಗಳಲ್ಲಿ ಗುಪ್ತ ಮತ್ತು ಗುಪ್ತೋತ್ತರ ಕಾಲದ ಜೈನ ಮೂರ್ತಿ ಕಲೆಯ ಅಧ್ಯಯನಕ್ಕೆ ಸಾಕಷ್ಟು ಸಾಮಗ್ರಿಯು ಒದಗುತ್ತದೆ ಎರಡನೆಯ ನಾಲ್ಕನೆಯ ಮೂರ್ತಿಗಳ ನಿರ್ಮಾಣದ ಕಡೆಗೆ ಲಕ್ಷಗೊಟ್ಟು ನೋಡಿದ್ದೇ ಆದಲ್ಲಿ ಅಲ್ಲಿಯ ಶೈಲಿಯ ವಿವಿಧತೆಯು ಸ್ಪಷ್ಟವಾಗಿಬಿಡುತ್ತದೆ. ಅಲ್ಲಿಯ ಹನ್ನೆರಡನೆಯ ಮಂದಿರದ ಮಂಟಪದಲ್ಲಿ ಆಸನದ ಮೇಲಿರುವ ಜಿನ ಪ್ರತಿಮೆಯನ್ನು ನೋಡಿರಿ. ಅದರ ಮಸ್ತಕವು ವಿಶಾಲ. ಅಧರವೂ ಸ್ಥೂಲ ಮತ್ತು ಬಹಳ ತುಂಬಿದ್ದುವು, ಹುಬ್ಬುಗಳು ಸ್ವಲ್ಪ ಹೆಚ್ಚು ಮೇಲೇರಿದಂಥವು ಕಂಡುಬರುತ್ತವೆ. ಇಲ್ಲಿ ಧ್ಯಾನ ಮತ್ತು ಏಕಾಗ್ರತೆಯ ಭಾವವು ಬಹಳಷ್ಟು ಪುಷ್ಟವಾಗಿದೆ. ಆದರೆ ಲಾವಣ್ಯ ಹಾಗೂ ಪರಿಕರಾತ್ಮಕ ಸೃಜನೆಯ ಅಭಾವವಿದೆ. ಅದೇ ಮಂದಿರದ ಗರ್ಭಗೃಹದಲ್ಲಿ ಶಾಂತಿನಾಥನ ವಿಶಾಲ ಖಡ್ಗಾಸನ ಪ್ರತಿಮೆಯ ಕಡೆಗೂ ಧ್ಯಾನ ಕೊಟ್ಟರೆ. ಇದು ತನ್ನ ಕಲಾತ್ಮಕ ಗುಣಗಳಿಂದ ವಿಶೇಷ ಗೌರವಶಾಲಿಯಾಗಿದೆ. ಭಾಮಂಡಲದ ರಚನೆಯೂ ಪಾರ್ಶ್ವಗಳಲ್ಲಿ ಇರುವ ದ್ವಾರಪಾಲಕರ ಲಾವಣ್ಯ ಹಾಗೂ ಭಾವಭಂಗಿಗಳು ಗುಪ್ತಕಾಲದ ಕಲೆಗೆ ಅನುಕೂಲವಾಗಿವೆ. ಆದರೂ ಪರಿಪಾಕಗಳ ಜೊತೆಯಲ್ಲಿ ಮೂರ್ತಿಯ ತಾದಾತ್ಮ್ಯವು ಕಂಡುಬರುವುದಿಲ್ಲ ನೋಡುವವರ ಧ್ಯಾನದ ಕೇಂದ್ರವು ಮೂರ್ತಿಯೇ ಇದೆ. ಅದು ತನ್ನ ಗಾಂಭೀರ್ಯ ಮತ್ತು ವಿರಕ್ತಿಭಾವಯುಕ್ತ ಕಠೋರ ಮುದ್ರೆಯಿಂದ ಪ್ರೇಕ್ಷಕರ ಮನಸ್ಸಿನಲ್ಲಿ ಭಯಮಿಶ್ರಿತ ಪೂಜ್ಯಭಾವವನ್ನು ಉತ್ಪನ್ನಮಾಡುತ್ತದೆ. ಈ ಮೇಲ್ಕಾಣಿಸಿದ ಎರಡೂ ಮೂರ್ತಿಗಳಿಂದ ಸಂಪೂರ್ಣ ಭಿನ್ನಶೈಲಿಯ ಆ ಪದ್ಮಾಸನ ಪ್ರತಿಮೆಯು ೧೫ನೆಯ ಮಂದಿರದ ಗರ್ಭಗೃಹದಲ್ಲಿ ವಿರಾಜಮಾನವಾಗಿದೆ. ಈಮೂರ್ತಿಯಲ್ಲಿ ಲಾವಣ್ಯ, ಪ್ರಸಾದ, ಅನುಕಂಪಾ ಮೊದಲಾದ ಸದ್ಗುಣಗಳು ಬಹಳ ಸ್ಪಷ್ಟವಾಗಿವೆ. ಧ್ಯಾನ ಮತ್ತು ವಿರಕ್ತಿಯ ಭಾವಗಳು ಕೂಡ ಅಷ್ಟೇ ಸ್ಪಷ್ಟವಾಗಿವೆ. ಜ್ಞಾನ, ಧ್ಯಾನ ಲೋಕಕಲ್ಯಾಣದ ಭಾವನೆಗಳು ಈ ಮೂರ್ತಿಯ ಅಂಗ ಅಂಗಗಳಿಂದ ಹೊರಹೊಮ್ಮುತ್ತಲಿವೆ. ಪರಿಕರಗಳ ನಿರ್ಮಾಣವೂ ಅನುಕೂಲವಾಗಿಯೇ ಇದೆ. ಪ್ರಭಾವಳಿಯು ಬಹಳಷ್ಟು ಅಲಂಕೃತವಾಗಿದೆ. ಎರಡೂ ಮಗ್ಗಲಿನ ದ್ವಾರಪಾಲರ ಮೇಲಿನ ಛತ್ರತ್ರಯಗಳು ಮತ್ತು ಗಜಲಕ್ಷ್ಮಿ ಮೊದಲಾದ ಆಕೃತಿಗಳೂ ಸುಂದರ ಮತ್ತು ಆಕರ್ಷಕವಾಗಿವೆ. ಈ ಗುಣಗಳು ೨೧ನೆಯ ಮಂದಿರದ ದಕ್ಷಿಣ ಕಕ್ಷೆಯ ದೇವಕುಲ

ದಲ್ಲಿ, ಇರುವ ಪ್ರತಿಮೆಯಲ್ಲಿ ಮತ್ತೂ ವಿಕಸಿತಗೊಂಡುದು ಕಂಡುಬರುತ್ತದೆ. ಇಲ್ಲಿ, ನಾಲ್ಕು ಕಡೆಗೆ ಆಕೃತಿ ಹಾಗೂ ಅಲಂಕರಣಗಳು ಬಹಳ ಸಮೃದ್ಧವಾಗಿವೆ. ಪ್ರೇಕ್ಷಕರಿಗೆ ಮುಖ್ಯ ಮೂರ್ತಿಗಿಂತ ಇದರಲ್ಲಿಯ ಆಕರ್ಷಣೆಯಲ್ಲಿಯೂ ಸಹ ಯಾವ ಕೊರತೆಯು ಎನಿಸುವುದಿಲ್ಲ. ಈ ಕಾರಣದಿಂದ ಮುಖ್ಯ ಮೂರ್ತಿಯು ಸಮಸ್ತ ದೃಶ್ಯದ ಒಂದು ಅಂಗ ಮಾತ್ರ ಎನಿಸುತ್ತದೆ. ಈ ಅಲಂಕರಣದ ಸಮೃದ್ಧಿಯು ಮಧ್ಯಕಾಲದ ವಿಶೇಷತೆಯಾಗಿದೆ.

## ತೀರ್ಥಂಕರರ ಮೂರ್ತಿಗಳ ಚಿಹ್ನೆಗಳು:–

ಪ್ರತಿಮೆಗಳ ಮೇಲೆ ಭಿನ್ನ ಭಿನ್ನ ಲಕ್ಷಣಗಳನ್ನು ವ್ಯಕ್ತಪಡಿಸುವ ಕ್ರಮವು ಮಧ್ಯ ಯುಗದಲ್ಲಿ (ಕ್ರಿ.ಶ. ೮ ನೆಯ ಶತಮಾನ) ಸಾವಕಾಶವಾಗಿ ಪ್ರಚಾರದಲ್ಲಿ ಬಂದಂತೆ ಕಂಡುಬರುತ್ತದೆ. ಈ ಯುಗದ ಮಥುರಾ ಸಂಗ್ರಹಾಲಯದ ಸೂಚಿಯಲ್ಲಿ 22 ತೀರ್ಥಂಕರರ ಪ್ರತಿಮೆಗಳ ಉಲ್ಲೇಖ ಮಾಡಲಾಗಿದೆ. ಅವುಗಳಲ್ಲಿ ಆದಿನಾಥನ ಮೂರ್ತಿಯ ಮೇಲೆ (ಬಿ. ೨೧ ಮತ್ತು ಬಿ. ೭೬) ವೃಷಭದ ಚಿಹ್ನೆವಿದೆ. ನೇಮಿನಾಥನ ಪ್ರತಿಮೆಯ ಮೇಲೆ (ಬಿ. ೨೨ : ನಂ. ೧೧೦೪; ಬಿ. ೭೭) ಶಂಖದ ಚಿಹ್ನೆವಿದೆ. ಹಾಗೆಯೇ ಶಾಂತಿನಾಥನ ಮೂರ್ತಿಯ ಮೇಲೆ (೧೫೨೪) ಮೃಗದ ಚಿಹ್ನೆವು ಕಂಡುಬರುತ್ತದೆ. ಉಳಿದ ಮೂರ್ತಿಗಳ ಮೇಲೆ ಇಂಥ ವಿಶೇಷ ಚಿಹ್ನೆಗಳ ಆಕೃತಿಗಳು ಇಲ್ಲ. ಒಂದು ಮೂರ್ತಿಯ ಮೇಲೆ (೬೦ ಎ) ಲಂಗೋಟಿಯ ಚಿಹ್ನವನ್ನು ತೋರಿಸಲಾಗಿದೆ. ಕೆಲವು ಮೂರ್ತಿಗಳ ಆಕೃತಿಯ ಮೇಲೆ ಚಕ್ರಾಕಾರವನ್ನು ನಿರ್ಮಿಸಲಾಗಿದೆ. ಕೆಲ ಮೂರ್ತಿಗಳ ಅಂಗೈಗಳಲ್ಲಿ ನಾಲ್ಕು ದಳಗಳ ಪುಷ್ಪಗಳ ಆಕೃತಿಯು ಕಂಡುಬರುತ್ತದೆ. ಮೂರ್ತಿಗಳ ಮೇಲೆ ಮೂರು ಛತ್ರಗಳ ಕೆತ್ತನೆಯೂ ಕಂಡುಬರುವುದು. ಕೆಲವೊಂದು ಮೂರ್ತಿಗಳ ಮೇಲೆ ಕುಬೇರ ಮತ್ತು ತೊಡೆಯಲ್ಲಿ ಬಾಲಕ ಸಹಿತ ಮಾತೆ (ಬಿ ೬೫) ಹಾಗೂ ನವಗ್ರಹ (ಬಿ ೬೬) ಗಳನ್ನೂ ನಿರ್ಮಿಸಲಾಗಿದೆ. ತೀರ್ಥಂಕರ ನೇಮಿನಾಥ ಮೂರ್ತಿಯ ಪಾರ್ಶ್ವಗಳಲ್ಲಿ ಬಲದೇವನು ಒಂದು ಕೈಯಲ್ಲಿ 'ಹೇಲಿ' ಯನ್ನು ತೆಗೆದುಕೊಂಡದ್ದು, ಹಾಗೂ ತನ್ನ ಶಂಖ ಚಕ್ರಾದಿ ಲಕ್ಷಣ ಸಹಿತ ಇರುವ ವಾಸುದೇವನ ಚತುರ್ಭುಜ ಮೂರ್ತಿಗಳೂ ಇವೆ (೨೭೬೮). ಯಕ್ಷ-ಯಕ್ಷಿಣೀ ಮೊದಲಾದ ಶಾಸನ ದೇವತೆಗಳ ಆಸನಗಳ ಮೇಲೆ ಅಂಕಿತಗಳೂ ಸಹ ಕಂಡುಬರುತ್ತವೆ. ಆದಿನಾಥನ ಒಂದು ಪದ್ಮಾಸನ ಮೂರ್ತಿಯ ಜೊತೆಯಲ್ಲಿ ಉಳಿದ ಇಪ್ಪತ್ತು ಮೂರು ತೀರ್ಥಂಕರ ಪದ್ಮಾಸನಸ್ಥ ಮೂರ್ತಿಗಳನ್ನೂ ಸಹ ಕೆತ್ತಲಾಗಿದೆ. ಇದರಿಂದ ಪೂರ್ವ ಕುಷಾಣ ಮತ್ತು ಗುಪ್ತ ಕಾಲಗಳಲ್ಲಿ ಬಹುತರ ನಾಲ್ಕು ತೀರ್ಥಂಕರರುಳ್ಳ ಸರ್ವತೋಭದ್ರ ಮೂರ್ತಿಗಳು ಕಂಡುಬರುತ್ತವೆ. ಪ್ರಭಾವಲಯ ಮತ್ತು ಸಿಂಹಾಸನಗಳ ಅಲಂಕರಣವು ವಿಶೇಷ ಹೆಚ್ಚಾಗಿರುವುದು ಕಂಡುಬರುತ್ತದೆ. ಒಂದು ಆದಿನಾಥ ಮೂರ್ತಿಯ (ಬಿ ೨೧) ಸಿಂಹಾಸನದ ಡಂಡೆಯ ಮೇಲೆ ನೇತಾಡುವ

ಪುಷ್ಪ ಮಾಲೆಗಳು ಧರ್ಮಚಕ್ರವನ್ನು ಸ್ಪರ್ಶ ಮಾಡುತ್ತಿರುವಂತೆ ಕೆತ್ತಲಾಗಿದೆ. ಕೆಲವೊಂದು ಮೂರ್ತಿಗಳನ್ನು ಕಪ್ಪು ಮತ್ತು ಬಿಳಿಯ ಸಂಗಮರವರೀ ಶಿಲೆಗಳಿಂದ ನಿರ್ಮಿಸಲಾಗಿದೆ. ಕೆಲವೊಂದು ಮೂರ್ತಿಗಳ ಮೇಲ್ಭಾಗದಲ್ಲಿ ದೇವತೆಗಳು ದುಂದು ಭಿಯನ್ನು ಬಾರಿಸುವ ಆಕೃತಿಗಳನ್ನು ಕೆತ್ತಲಾಗಿದೆ ಇದು ಈ ಕಾಲದ ಮೂರ್ತಿಗಳ ವಿಶೇಷತೆಯಾಗಿದೆ. ಈ ಕಾಲದಲ್ಲಿ ತೀರ್ಥಂಕರರ ವಿಶೇಷ ಚಿಹ್ನಗಳು ನಿರ್ಧಾರ ಗೊಂಡವು, ಪ್ರತಿಯೊಬ್ಬ ತೀರ್ಥಂಕರರಿಗೂ ಪ್ರತ್ಯೇಕವಾದ ಯಕ್ಷ-ಯಕ್ಷಿಣಿ ರೂಪದ ಅನುಚರರು ನಿಶ್ಚಿತಗೊಂಡರು, ಜಿನ ಚೈತ್ಯವೃಕ್ಷಗಳಿಗೂ ಅವರ ಕೇವಲ ಜ್ಞಾನಕ್ಕೂ ಸಂಬಂಧ ಸ್ಥಾಪಿಸಲಾಯಿತು. ಇವೆಲ್ಲವುಗಳ ಸೂಚಿಯನ್ನು (ತ್ರಿ. ಪ್ರ. ೪,೬೦೪-೦೫ ೯೧೬-೧೮, ೯೩೪-೪೦ ಕ್ಕೆ ಅನುಸರಿಸಿ) ಮುಂದಿನ ಪುಟಗಳಲ್ಲಿ ಕೊಡಲಾಗಿದೆ.

ಸಮವಾಯಾಂಗ ಸೂತ್ರದಲ್ಲಿಯೂ ಸಹ ಇದೇ ಚೈತ್ಯವೃಕ್ಷಗಳ ನಾಮಾ ವಲಿಯು ದೊರೆಯುತ್ತದೆ. ಆದರೆ ಕೆಲವೊಂದು ಅಂತರವಿಲ್ಲದಿಲ್ಲ. ನಾಲ್ಕನೆಯ ಸ್ಥಾನ ದಲ್ಲಿ 'ಪ್ರಿಯಕ" ಆರನೆಯ ಸ್ಥಾನದಲ್ಲಿ ಛತ್ತ್ರಾಹವೃಕ್ಷ ಕೊಶ. ಒಂಭತ್ತನೆಯದರ ಮೇಲೆ ಹೂಗಾರ (ಮಾಲೀ), ೧೦ನೆ ಯದರ ಮೇಲೆ 'ಪಿಲಂಖು', ೧೧, ೧೨, ೧೩ರ ಮೇಲೆ ತಿಂದುಗ, ಪಾಟಲ ಮತ್ತು ಜಂಬೂ, ಮತ್ತು ೧೯ನೆಯದರ ಮೇಲೆ ಅಶೋಕ, ೨೨ನೆಯದರ ಮೇಲೆ 'ವೇಡಸ' ವೇಡಸವೆಂಬುದು ಅಂಕಿತಗೊಳಿಸಲಾಗಿದೆ.

ವಿಶಾಲತೆಯ ದೃಷ್ಟಿಯಿಂದ ಮಧ್ಯ ಪ್ರದೇಶದಲ್ಲಿ ವಡವಾನೀ ನಗರದ ಸಮೀಪ ದಲ್ಲಿರುವ ಚೂಲಗಿರಿ ಎಂಬ ಪರ್ವತಶ್ರೇಣಿಯಲ್ಲಿ ತಳಭಾಗದಲ್ಲಿ ೮೪ ಫೂಟ ಎತ್ತರದ ಖಡ್ಗಾಸನ ಪ್ರತಿಮೆಯು ಇದೆ. ಇದು ಬಾವನಗಜಾ ಎಂಬ ಹೆಸರಿನಿಂದ ಪ್ರಸಿದ್ಧವಿದೆ. ಇದರ ಒಂದು ಮಗ್ಗಲಿಗೆ ಯಕ್ಷ ಮತ್ತು ಇನ್ನೊಂದು ಮಗ್ಗಲಿಗೆ ಯಕ್ಷಿಣೀಯನ್ನು ಸಹ ಕೆತ್ತಲಾಗಿದೆ. ಚೂಲಗಿರಿಯ ಶಿಖರದ ಮೇಲೆ ಎರಡು ಮಂದಿರಗಳಲ್ಲಿ ಮೂರು-ನಾಲ್ಕು ಮೂರ್ತಿಗಳ ಮೇಲೆ ಸಂವತ್ ೧೩೮೦ ಉಲ್ಲೇಖವಿದೆ. ಆದರಿಂದ ಈ ತೀರ್ಥಕ್ಷೇತ್ರದ ಪ್ರತಿಷ್ಠೆಯು ಸುಮಾರು ೧೪ನೆಯ ಶತಮಾದಿಂದಲೂ ಸಿದ್ಧವಾಗುತ್ತದೆ. ದೇಶದೊಳಗಿನ ಬಹುತರ ಎಲ್ಲ ಭಾಗಗಳ ದಿಗಂಬರ ಜೈನ ಮಂದಿರಗಳಲ್ಲಿ ಇಂಥ ಜಿನ-ಪ್ರತಿಮೆಗಳು ವಿರಾಜಮಾನವಾಗಿರುವುದು ಕಂಡು ಬರುತ್ತದೆ. ಅವುಗಳಲ್ಲಿ ಇವನ್ನು ಶಾಹ ಜೀವ ರಾಜ ಪಾಪಡಿವಾಲೆ ಇವರಿಂದ ಸಂ. ೧೫೪೮ (೧೪೯೧ ಕ್ರಿ. ಶ) ರಲ್ಲಿ ಪ್ರತಿಷ್ಠೆ ಮಾಡಿದ ಉಲ್ಲೇಖವು ದೊರೆಯುತ್ತದೆ. ಹಾಗೆಯೇ ಭಟ್ಟಾರಕ ಜಿನಚಂದ್ರ ಅಥವಾ ಭಾನುಚಂದ್ರ ಇವನ ಸ್ಥಳವಾದ ಮುಡಾಸಾ ಎಂಬುದರ ಉಲ್ಲೇಖವೂ ಇದೆ. ಇದರಂತೆಯೇ ರಾಜಾ ಇಲ್ಲವೆ ರಾವಲ ಶಿವಸಿಂಹನ ಉಲ್ಲೇಖವೂ ಸಹ ಲಭಿಸುತ್ತದೆ. ಮುಡಾಸಾ ಎಂಬುದು ರಾಜಸ್ಥಾನದಲ್ಲಿ ಈಡರದಿಂದ ಐದಾರು ಮೈಲು ದೂರದ ಮೇಲೆ ಇರುವ ಗ್ರಾಮವಾಗಿದೆ. ಸೇರ ಜೀವರಾಜ ಪಾಪಡೀವಾಲೆ ಈತನು ಒಂದು ಲಕ್ಷ ಮೂರ್ತಿಗಳನ್ನು ಪ್ರತಿಷ್ಠೆಗೊಳಿಸಿ, ಅವುಗಳನ್ನು ಎಲ್ಲ ಕಡೆಗೂ ಪೂಜೆ ಗೆಂದು ವಿತರಣಗೈದನೆಂಬ ವಾರ್ತೆಯೂ ಕೂಡ ಆ ಭಾಗದಲ್ಲಿ ಪ್ರಚಾರದಲ್ಲಿದೆ.

| ಕ್ರಮಾಂಕ | ತೀರ್ಥಂಕರರ ಹೆಸರು | ಚಿಹ್ನ | ಚೈತ್ಯವೃಕ್ಷ | ಯಕ್ಷ | ಯಕ್ಷಿಣಿ |
|---|---|---|---|---|---|
| ೧ | ಋಷಭನಾಥ | ಎತ್ತು | ಆಲ | ಗೋವದನ | ಚಕ್ರೇಶ್ವರಿ |
| ೨ | ಅಜಿತನಾಥ | ಆನೆ | ಸಪ್ತಪರ್ಣಾ | ಮಹಾಯಕ್ಷ | ರೋಹಿಣಿ |
| ೩ | ಸಂಭವನಾಥ | ಕುದುರೆ | ಶಾಲ | ತ್ರಿಮುಖ | ಪ್ರಜ್ಞಪ್ತಿ |
| ೪ | ಅಭಿನಂದನನಾಥ | ಮಂಗ | ಸರಲ | ಯಕ್ಷೇಶ್ವರ | ವಜ್ರಶ್ರಂಖಲಾ |
| ೫ | ಸುಮತಿನಾಥ | ಚಕೋರ | ಪ್ರಿಯಂಗು | ತುಂಬುರವ | ವಜ್ರಾಂಕುಶಾ |
| ೬ | ಪದ್ಮಪ್ರಭು | ಕಮಲ | ಪ್ರಿಯಂಗು | ಮಾತಂಗ | ಅಪ್ರತಿಚಕ್ರೇಶ್ವರಿ |
| ೭ | ಸುಪಾರ್ಶ್ವನಾಥ | ನಂದ್ಯಾವರ್ತ | ಶಿರೀಷ | ವಿಜಯ | ಪುರುಷದತ್ತಾ |
| ೮ | ಚಂದ್ರಪ್ರಭು | ಅರ್ಧಚಂದ್ರ | ನಾಗವೃಕ್ಷ | ಅಜಿತ | ಮನೋವೇಗಾ |
| ೯ | ಪುಷ್ಪದಂತ | ಮಕರ | ಅಕ್ಷ | ಬ್ರಹ್ಮ | ಕಾಲೀ |
| ೧೦ | ಶೀತಲನಾಥ | ಸ್ವಸ್ತಿಕ | ಮಾಲಿವೃಕ್ಷ | ಬ್ರಹ್ಮೇಶ್ವರ | ಜ್ವಾಲಾಮಾಲಿನಿ |
| ೧೧ | ಶ್ರೇಯಾಂಸನಾಥ | ಗೆಂಡಕ | ಪಲಾಶ | ಕುಮಾರ | ಮಹಾಕಾಲೀ |

| | | | | | |
|---|---|---|---|---|---|
| ೧೨ | ವಾಸುಪೂಜ್ಯ | ಎಮ್ಮೆ | ತೇಂದು | ಷಣ್ಮುಖ | ಗೌರಿ |
| ೧೩ | ವಿಮಲನಾಥ | ಹಂದಿ | ಪಾಟಲ | ವಾತಾಲ | ಗಾಂಧಾರಿ |
| ೧೪ | ಅನಂತನಾಥ | ಮುಳ್ಳು ಹಂದಿ | ಅರಳಿಮರ | ಕಿನ್ನರ | ವೈರೋಚಿ |
| ೧೫ | ಧರ್ಮನಾಥ | ವಜ್ರ | ದಧೀಪರ್ಣಾ | ಕಿಂಪುರುಷ | ಸೋಲಸಾ |
| ೧೬ | ಶಾಂತಿನಾಥ | ಜಿಗರೆ | ನಂದಿ | ಗರುಡ | ಅನಂತಮತಿ |
| ೧೭ | ಕುಂಥುನಾಥ | ಹೋತು | ತಿಲಕ | ಗಂಧರ್ವ | ಮಾನಸೀ |
| ೧೮ | ಅರಹನಾಥ | ತಗರಕುಸುಮ (ಮತ್ಸ್ಯ) | ಮಾವಿನ ಗಿಡ | ಕುಬೇರ | ಮಹಾಮಾನಸೀ |
| ೧೯ | ಮಲ್ಲಿನಾಥ | ಕಲಶ | ಅಶೋಕ | ವರುಣ | ಜಯಾ |
| ೨೦ | ಮುನಿಸುವ್ರತನಾಥ | ಆವೆ | ಚಂಪಕ | ಭೃಕುಟಿ | ವಿಜಯಾ |
| ೨೧ | ನಮಿನಾಥ | ಉತ್ಪಲ | ಬಕುಲ | ಗೋಮೇಧ | ಅಪರಾಜಿತ |
| ೨೨ | ನೇಮಿನಾಥ | ಶಂಖ | ಮೇಷಶೃಂಗ | ಪಾರ್ಶ್ವ | ಬಹುರೂಪಿಣಿ |
| ೨೩ | ಪಾರ್ಶ್ವನಾಥ | ಸರ್ಪ | ಧವ | ಮಾತಂಗ | ಕುಷ್ಮಾಂಡಿ |
| ೨೪ | ಮಹಾವೀರ | ಸಿಂಹ | ಶಾಲ | ಗುಹ್ಯಕ | ಪದ್ಮಾಸಿದ್ಧಾಯಿನೀ |

**ಧಾತುವಿನ ಮೂರ್ತಿಗಳು:—**

ಇಲ್ಲಿಯ ವರೆಗೆ ಪರಿಚಯ ಮಾಡಿಕೊಟ್ಟ ಮೂರ್ತಿಗಳು ಶಿಲೆಯಿಂದ ನಿರ್ಮಿಸಿ-ದವುಗಳಾಗಿವೆ. ಅದರಂತೆ ಧಾತುವಿನಿಂದ ನಿರ್ಮಿಸಿದ ಮೂರ್ತಿಗಳೂ ಸಹ ಅತಿ ಪ್ರಾಚೀನ ಕಾಲದಿಂದಲೂ ಪ್ರಚಾರದಲ್ಲಿವೆ. ತಾಮ್ರ ಮತ್ತು ಸೀಸ ಮಿಶ್ರಿತ ಧಾತುವಿನಿಂದ (ಬ್ರಾಂಜ್) ನಿರ್ಮಿಸಿದ ಒಂದು ಪಾರ್ಶ್ವನಾಥಮೂರ್ತಿಯು ಮುಂಬಯಿಯ ಪ್ರಿನ್ಸ್ ಆಫ್ ವೇಲ್ಸ್ ಸಂಗ್ರಹಾಲಯದಲ್ಲಿ ಇದೆ. ದುರ್ಭಾಗ್ಯದಿಂದ ಅದರ ಪಾದಪೀಠವು ನಷ್ಟವಾಗಿ ಹೋಗಿದೆ. ಇದು ಎಲ್ಲಿಂದ ಲಭಿಸಿದೆ ಎಂಬುದೂ ಸಹ ಈಗ ಗೊತ್ತಾಗುವಿಲ್ಲ. ಪ್ರತಿಮೆಯು ಕಾಯೋತ್ಸರ್ಗ ಮುದ್ರೆಯಲ್ಲಿದೆ. ಇದರ ಬಲಗೈಯು ಹಾಗೂ ನಾಗಫಣಾ ಇವು ಖಂಡಿತವಾಗಿವೆ. ಆದರೆ ನಾಗದ ಶರೀರದ ಚಿಹ್ನವು ಮೈಮೇಲೆ ಕಾಲಿನಿಂದ ತಲೆಯ ವರೆಗೆ ಸ್ಪಷ್ಟವಾಗಿ ಕಂಡುಬರುತ್ತದೆ. ಇದರ ಆಕೃತಿಯು ಈ ಮೊದಲು ಹೇಳಿದ ಲೋಹಾನೀಪುರದ ಮಸ್ತಕಹೀನ ಮೂರ್ತಿಯೊಡನೆಯೂ ಹರಪ್ಪಾದಲ್ಲಿ ದೊರೆತ ಕೆಂಪು ಶಿಲೆಯ ಶಿರವಿಲ್ಲದ ಮೂರ್ತಿಯೊಡನೆಯೂ ಬಹಳ ಹೋಲಿಕೆಯುಳ್ಳ-ದಾಗಿದೆ. ವಿದ್ವಾಂಸರ ಅಭಿಪ್ರಾಯವು ಈ ಮೂರ್ತಿಯು ಮೌರ್ಯ ಕಾಲದ್ದಾಗಿರಬೇ-ಕೆಂದಿದೆ. ಅದು ಕ್ರಿ. ಪೂ. ೧೦೦ ವರ್ಷಗಳ ಇತ್ತೀಚಿನದಾಗಿರುವುದಂತೂ ಸಾಧ್ಯವಿಲ್ಲ.

ಇದೇ ಪ್ರಕಾರದ ಇನ್ನೊಂದು ಧಾತುವಿನ ಪ್ರತಿಮೆಯು ಆದಿನಾಥ ತೀರ್ಥಂಕರರದಾಗಿದೆ. ಅದು ಬಿಹಾರದ ಆರಾ ಎಂಬಲ್ಲಿಯ ಚೌಸಾ ಎಂಬ ಹೆಸರಿನ ಸ್ಥಾನದಲ್ಲಿ ಲಭಿಸಿದುದಾಗಿದೆ. ಇದು ಪಾಟಣಾ ಸಂಗ್ರಹಾಲಯದಲ್ಲಿ ಸುರಕ್ಷಿತವಾಗಿದೆ. ಇದೂ ಖಡ್ಗಾಸನ ಮುದ್ರೆಯಲ್ಲಿದೆ. ರೂಪರೇಖೆಯಲ್ಲಿ ಮೇಲೆ ಹೇಳಿದ ಪಾರ್ಶ್ವನಾಥನ ಮೂರ್ತಿಯನ್ನು ಹೋಲುತ್ತದೆ. ಆದರೂ ಶರೀರದ ಆಕೃತಿ, ಕೇಶವಿನ್ಯಾಸ ಹಾಗೂ ಪ್ರಭಾವಳಿಯ ಶೋಭೆಗಳ ಆಧಾರದಿಂದ ಇದು ಗುಪ್ತ ಕಾಲದ್ದೆಂದು ಅನುಮಾನ ಮಾಡಲಾಗುತ್ತಿದೆ. ಇದರ ಜೊತೆಯಲ್ಲಿಯೇ ದೊರಕಿದ ಅನ್ಯ ಪ್ರತಿಮೆಗಳೂ ಸಹ ಪಾಟಣಾ ಸಂಗ್ರಹಾಲಯದಲ್ಲಿ ಇವೆ. ಇವು ತಮ್ಮ ರಚನೆಯ ಶೈಲಿಯಿಂದ ಮೌರ್ಯ ಮತ್ತು ಗುಪ್ತ ಕಾಲದ ನಡುವಿನ ಶೃಂಖಲೆಯನ್ನು ಪ್ರಕಟಗೊಳಿಸುತ್ತವೆ.

ಧಾತುವಿನ ಸವಸ್ತ್ರ ಜಿನ ಪ್ರತಿಮೆಯು ರಜಪುತಸ್ಥಾನದಲ್ಲಿ ಸಿರೋಹೀ ಜನಪದದ ವಸಂತಗಢ ಎಂಬ ಹೆಸರಿನ ಸ್ಥಾನದಲ್ಲಿ ಲಭಿಸಿದೆ. ಇದು ಋಷಭನಾಥನ ಖಡ್ಗಾಸನ ಮೂರ್ತಿಯು. ಇದರ ಮೇಲೆ ಸಂ. ೭೪೪ (ಕ್ರಿ. ಶ. ೬೮೭)ರ ಲೇಖವಿದೆ. ಇದರಲ್ಲಿ ಒಲ್ಲಿಯನ್ನು ಹೊದ್ದುಕೊಂಡುದನ್ನು ತೋರಿಸಲಾಗಿದೆ. ವಲಭಿಯಲ್ಲಿ ಲಭಿಸಿದ ಪಂಚಧಾತುವಿನ ಪ್ರತಿಮೆಗಳು ಕೆಲವು ಪ್ರಿನ್ಸ್–ಆಫ್–ವೇಲ್ಸ್–ಸಂಗ್ರಹಾಲಯದಲ್ಲಿ ಸುರಕ್ಷಿತವಾಗಿರುವವಷ್ಟೆ. ಅವು ಈ ವಸ್ತ್ರಧಾರೀ ಮೂರ್ತಿಗಿಂತ ಸ್ವಲ್ಪ ಕಾಲ ಮುಂಚಿನವಾಗಿರುವ ಸಂಭವವಿದೆ. ವಸಂತಗಢದ ಪ್ರತಿಮೆಗಳಲ್ಲಿ ಒಲ್ಲಿಯ ಪ್ರದರ್ಶನವು ಉಗ್ರರೂಪದಲ್ಲಿದೆ. ಆದರೆ ಇವು ಸವಸ್ತ್ರವಾಗಿದ್ದೂ ಸಹಜವಾಗಿವೆ. ಇಂಥ ಒಲ್ಲಿಯ ಪ್ರದರ್ಶನವು ಕೆಲವೊಂದು ಶಿಲೆಯ ಮೂರ್ತಿಗಳಲ್ಲಿಯೂ ಇದ್ದುದು ಕಂಡು ಬರುತ್ತದೆ.

ಇದಕ್ಕೊಂದು ಉದಾಹರಣೆಯೆಂದು ರೋಹತಕ(ಪಂಜಾಬ)ದಲ್ಲಿರುವ ಪಾರ್ಶ್ವನಾಥನ ಖಡ್ಗಾಸನ ಮೂರ್ತಿಯನ್ನು ನೆನೆಯಬಹುದು. ಪ್ರಿನ್ಸ್-ಆಫ್-ವೇಲ್ಸ್ ಸಂಗ್ರಹಾಲಯದ ಚಾಹರಡೀ ಯಲ್ಲಿ (ಖಾನದೇಶ) ಲಭಿಸಿದ ಆದಿನಾಥನ ಪ್ರತಿಮೆಯು ೧೦ ನೆಯ ಶತಮಾನದ ಧಾತುಮಯ ಮೂರ್ತಿಗೊಂದು ಸುಂದರ ಉದಾಹರಣೆಯಾಗಿದೆ.

ಇದೇ ಪ್ರಕಾರ ಧಾತುವಿನ ಪ್ರತಿಮೆಗಳಲ್ಲಿ ಯಾವ ಮೂರ್ತಿಗಳು ಉಲ್ಲೇಖನೀಯವಾಗಿವೆಯೋ ಅವು ಜೀವಂತಸ್ವಾಮಿ ಯವೆಂದು ಹೇಳಲಾಗುತ್ತಿದೆ. ಆವಶ್ಯಕ ಚೂರ್ಣಿ, ನಿಶೀಥಚೂರ್ಣಿ ಮತ್ತು ವಸುದೇವಹಿಂಡಿಗಳಲ್ಲಿ ಒಂದು ಉಲ್ಲೇಖವು ದೊರೆಯುತ್ತದೆ:—ಮಹಾವೀರ ತೀರ್ಥಂಕರನು ಕುಮಾರ ಕಾಲದಲ್ಲಿ ಅರಮನೆಯಲ್ಲಿ ಇರುವಾಗಲೇ ಧರ್ಮ ಧ್ಯಾನ ಮಾಡುತ್ತಿದ್ದನು. ಆಗಲೇ ಅವನದೊಂದು ಚಂದನದ ಪ್ರತಿಮೆಯನ್ನು ಮಾಡಲಾಗಿತ್ತು. ಅದು ವೀತಿಭಯ ಪಟ್ಟಣದ (ಸಿಂಧು-ಸೌವೀರ) ರಾಜನಾದ ಉದಯನನ ಕೈಯಲ್ಲಿ ಸಿಕ್ಕಿತು. ಅಲ್ಲಿಂದ ಉಜ್ಜಯಿನಿಯ ರಾಜನಾದ ಪ್ರದ್ಯೋತನು ಬೇರೆ ಕಟ್ಟಿಗೆಯಲ್ಲಿ ಆ ಮೂರ್ತಿಯ ಪ್ರತಿಕೃತಿಯನ್ನು ನಿರ್ಮಾಣ ಮಾಡಿಸಿ, ಅದರ ಸ್ಥಾನದಲ್ಲಿ ಇಟ್ಟು,ಮೂಲ ಪ್ರತಿಮೆಯನ್ನು ತನ್ನ ರಾಜ್ಯಕ್ಕೆ ತರಿ. ಸಿದನು. ಅದನ್ನು ವಿದಿಶೆಯಲ್ಲಿ ಪ್ರತಿಷ್ಠೆಗೊಳಿಸಿದನು. ಅಲ್ಲಿ ಅದು ದೀರ್ಘ ಕಾಲದ ವರೆಗೆ ಪೂಜೆಗೊಳ್ಳುತ್ತಲಿತ್ತು. ಈ ಸಾಹಿತ್ಯಿಕ ಕಥಾನಕದ ವಿಷಯದಲ್ಲಿಯೇ ಅಕೋಟಾದಲ್ಲಿ (ಬಡೋದಾ ಜನಪದ) ದೊರೆತ ಜೀವಂತ ಸ್ವಾಮಿಯ ಪೂಜೆ ಧಾತುವಿನಿಂದ ನಿರ್ಮಿಸಿದ ಎರಡು ಪ್ರತಿಮೆಗಳಿಂದಲೂ ಐತಿಹಾಸಿಕ ಸಮರ್ಥನವವು ದೊರೆಯುತ್ತದೆ- ಇವುಗಳಲ್ಲಿ ಒಂದರ ಮೇಲೆ ಲೇಖವಿದೆ. ಅದರಲ್ಲಿ ಆದನ್ನು ಜೀವಂತ–ಸ್ವಾಮಿ–ಪ್ರತಿಮೆಯೆಂದು ಹೇಳಿದೆ. ಅಲ್ಲದೆ ಅದನ್ನು ಚಂದ್ರಕುಲದ ನಾಗೇಶ್ವರೀ ಎಂಬ ಶ್ರಾವಿಕೆಯು ದಾನವಿತ್ತಿದ್ದಾಳೆಂದೂ ಉಲ್ಲೇಖಿಸಿದೆ. ಲಿಪಿಯ ಆಧಾರದಿಂದ ಇದು ಆರನೆಯ ಶತಮಾನದ ಮಧ್ಯ ಕಾಲದ್ದೆಂದು ಸಿದ್ಧವಾಗುತ್ತದೆ. ಈ ಮೂರ್ತಿಯು ಕಾಯೋತ್ಸರ್ಗಧ್ಯಾನದ ಮುದ್ರೆಯಲ್ಲಿದೆ. ಶರೀರದ ಮೇಲಿನ ಅಲಂಕಾರಗಳು ರಾಜ ಕುಮಾರನಿಗೆ ಉಚಿತವಾಗುವಂತೆ ಬಹಳಷ್ಟು ಇವೆ. ತಲೆಯ ಮೇಲೆ ಎತ್ತರವಾದ ಮುಕುಟವಿದೆ. ಅದರ ಕೆಳಭಾಗದಲ್ಲಿ ಕೇಶಕಲಾಪಗಳು ಎರಡೂ ಬದಿಗೆ ಹೆಗಲುಗಳ ಮೇಲೆ ನೇತಾಡುತ್ತಲಿವೆ. ಕೊರಳಿನಲ್ಲಿ ಹಾರ ಮೊದಲಾದ ಆಭರಣಗಳೂ, ಕಿವಿಗಳಲ್ಲಿ ಕುಂಡಲಗಳೂ, ಎರಡು ಭುಜಗಳ ಮೇಲೆ ಅಗಲವಾದ ಭುಜಬಂಧಗಳೂ, ಕೈಗಳಲ್ಲಿ ಕಡಗ ಮತ್ತು ಕಟೀಬಂಧವೇ ಮೊದಲಾದ ಆಭರಣಗಳೂ ಇರುತ್ತವೆ. ಮುಖದ ಮೇಲೆ ಸ್ಮಿತ ಹಾಗೂ ಪ್ರಸಾದ ಭಾವಗಳು ಮೂಡಿನಿಂತಿವೆ. ಇದರ ಭಾವಾಭಿವ್ಯಕ್ತಿ ಮತ್ತು ಅಲಂಕರಣದಲ್ಲಿ ಗುಪ್ತಕಾಲದ ಮತ್ತು ಅದರ ತರುವಾಯದ ಶೈಲಿಯ ಪ್ರಭಾವವು ಸ್ಪಷ್ಟವಾಗಿದೆ.

ಸುಮಾರು ಹದಿನಾಲ್ಕನೆಯ ಶತಮಾನದಿಂದ ಹಿತ್ತಾಳೆಯ ಜಿನ ಮೂರ್ತಿಗಳು ಪ್ರಚಾರದಲ್ಲಿ ಬಂದುದು ಕಂಡು ಬರುತ್ತದೆ. ಒಂದೊಂದೆಡೆಯಲ್ಲಿ ಹಿತ್ತಾಳೆಯ

ಈ ವರ್ಣನೆಯಲ್ಲಿ ಹುತ್ತ, ಹಾಗೂ ಬಳ್ಳಿಗಳು ಶರೀರಕ್ಕೆ ಸುತ್ತಿದುದರ ವಿಶೇಷ ರೂಪದ ಉಲ್ಲೇಖವು ಬಂದಿದೆ. ಇದರಿಂದ ಲೇಖಕರ ಸಮ್ಮುಖದಲ್ಲಿ ಬಾಹುಬಲಿಯ ಈ ಲಕ್ಷಣಗಳಿಂದ ಕೂಡಿದ ಯಾವುದಾದರೂ ಪ್ರತಿಮೆಯಿರಬೇಕೆಂದು ಗೊತ್ತಾಗುತ್ತದೆ. ಕಾಲದ ದೃಷ್ಟಿಯಿಂದ ಆ ಸಮಯದಲ್ಲಿ ಬಾದಾಮಿಯ ಗುಹೆಯ ಬಾಹುಬಲಿ ಮೂರ್ತಿಯು ನಿರ್ಮಾಣವಾಗಿದ್ದಿತೆಂದು ಸಿದ್ಧವಾಗುತ್ತದೆ. ರವಿಷೇಣನಿಗೆ ಇದರ ಪರಿಚಯವಿದ್ದರೆ ಆಶ್ಚರ್ಯಪಡುವ ಕಾರಣವಿಲ್ಲ. ಬಾದಾಮಿಯ ಈ ಮೂರ್ತಿಯು ಸುಮಾರು ಏಳನೆಯ ಶತಮಾನದಲ್ಲಿ ನಿರ್ಮಾಣವಾದ ಏಳುವರೆ ಫೂಟು ಎತ್ತರವುಳ್ಳ ಮೂರ್ತಿಯಾಗಿದೆ. ಇನ್ನೊಂದು ಪ್ರತಿಮೆಯು ವೇರೂಳದ ಕಿರಿಯ ಕೈಲಾಸ ಎಂಬ ಹೆಸರಿನ ಜೈನ ಶಿಲಾಮಂದಿರದ ಇಂದ್ರಸಭೆಯ ದಕ್ಷಿಣ ಗೋಡೆಯ ಮೇಲೆ ಕೆತ್ತಲಾಗಿದೆ. ಈ ಗುಹೆಯ ನಿರ್ಮಾಣಕಾಲವು ಸುಮಾರು ಎಂಟನೆಯ ಶತಮಾನವೆಂದು ತಿಳಿಯಲಾಗುತ್ತಿದೆ. ಮೂರನೆಯ ಮೂರ್ತಿಯು ದೇವಗಢದ ಶಾಂತಿನಾಥ ಮಂದಿರದಲ್ಲಿ (ಕ್ರಿ. ಶ. ೮೬೨) ಇದೆ. ಇದು ಮೇಲೆ ಹೇಳಿದ ಮೂರ್ತಿಗಳಿಗಿಂತ ಒಂದಿಷ್ಟು ವಿಶೇಷತೆಗಳಿಂದ ಕೂಡಿದೆ. ಇದರಲ್ಲಿ ಹುತ್ತ, ಕುಕ್ಕುಟ ಸರ್ಪ, ಬಳ್ಳಿಗಳ ಹೊರತಾಗಿ ಮೂರ್ತಿಯ ಮೇಲೆ ಏರುತ್ತಿರುವ ಚೇಳು, ಹಲ್ಲಿ ಮೊದಲಾದ ಜೀವ-ಜಂತುಗಳೂ ಸಹ ಇವೆ. ಈ ಉಪಸರ್ಗಕಾರೀ ಜೀವಗಳನ್ನು ನಿವಾರಣ ಮಾಡುವಂಥ ದೇವ-ಯುಗಲವನ್ನೂ ಸಹ ತೋರಿಸಲಾಗಿದೆ. ಆದರೆ ಇವೆಲ್ಲವುಗಳಿಗಿಂತಲೂ ವಿಶಾಲವೂ ಸುಪ್ರಸಿದ್ಧವೂ ಆದ ಮೂರ್ತಿಯು ಮೈಸೂರು ರಾಜ್ಯದ ಶ್ರವಣಬೆಳಗೊಳದ ವಿಂಧ್ಯ ಗಿರಿಯ ಮೇಲಿದೆ. ಈ ಮೂರ್ತಿಯ ಪ್ರತಿಷ್ಠೆಯನ್ನು ಗಂಗ ರಾಜನಾದ ರಾಜಮಲ್ಲನ ಮಹಾ ಮಂತ್ರಿ ಚಾಮುಂಡರಾಯನು ಹತ್ತು-ಹನ್ನೊಂದನೆಯ ಶತಮಾನಗಳಲ್ಲಿ ಮಾಡಿಸಿದ್ದನು. ಇದು ೫೬ಫೂಟು ೯ ಇಂಚು ಎತ್ತರವಿದೆ. ಇದು ಪರ್ವತದ ಮೇಲೆ ದೂರದಿಂದಲೇ ಕಾಣುವಂತಿದೆ. ಇದರ ಅಂಗಗಳ ಸಂತುಲನ, ಮುಖದ ಶಾಂತ ಹಾಗು ಪ್ರಸನ್ನಭಾವ, ವಲ್ಮೀಕ ಮತ್ತು ಮಾಧವೀ ಲತೆಗಳ ಏರುವಿಕೆ ಇವುಗಳನ್ನು ಬಹು ಸುಂದರತೆಯಿಂದ ಚಿತ್ರಿಸಲಾಗಿದೆ. ಇದಕ್ಕೆ ಸಮಾನವಾದುದನ್ನು ಇನ್ನೆಲ್ಲಿಯೂ ಕಾಣಲಾಗುವುದಿಲ್ಲ. ಇದೇ ಮೂರ್ತಿಯನ್ನು ಅನುಕರಿಸಿ ಕಾರಕಳದಲ್ಲಿ ಕ್ರಿ. ಶ. ೧೪೩೨ ರಲ್ಲಿ ೪೧ ಫೂಟು ೬ ಇಂಚು ಎತ್ತರವುಳ್ಳದ್ದು, ವೇಣೂರದಲ್ಲಿ ಕ್ರಿ. ಶ. ೧೬೦೪ರಲ್ಲಿ ೩೫ ಫೂಟು ಎತ್ತರವುಳ್ಳಂಥದೂ ಆದ ಮತ್ತೆರಡು ವಿಶಾಲ ಶಿಲಾ ಮೂರ್ತಿಗಳು ಪ್ರತಿಷ್ಠಿತವಾಗಿವೆ. ಕ್ರಮ-ಕ್ರಮದಿಂದ ಈ ಪ್ರಕಾರದ ಬಾಹುಬಲಿಯ ಮೂರ್ತಿಗಳು ಉತ್ತರ ಭಾರತದತಲ್ಲಿಯೂ ಪ್ರಚಾರದಲ್ಲಿ ಬಂದವು. ಇತ್ತೀಚಿನ ಕೆಲ ದಿನಗಳಲ್ಲಿ ಬಾಹುಬಲಿಯ ಮೂರ್ತಿಗಳು ಅನೇಕ ಜೈನ ಮಂದಿರಗಳಲ್ಲಿ ಪ್ರತಿಷ್ಠಿತವಾಗಿವೆ.

ಆದರೆ ಬ್ರಾಂಜ-ಧಾತು ನಿರ್ಮಿತ ಮೂರ್ತಿಯು ಈಗ ಲಭಿಸಿದೆ. ಇದು ಮೇಲೆ ಹೇಳಿದ ಸಮಸ್ತ ಪ್ರತಿಮೆಗಳಿಗಿಂತಲೂ ಪ್ರಾಚೀನವೆಂದು ಅನುಮಾನ ಮಾಡ

ಲಾಗಿದೆ. ಇದರ ನಿರ್ಮಾಣಕಾಲವು ಬಹುತರ ಏಳನೆಯ ಶತಮಾನ ಅಥವಾ ಅದಕ್ಕೂ ಸ್ವಲ್ಪ ಮುಂಚಿನ ಕಾಲದ್ದೆಂದು ಗೊತ್ತಾಗುತ್ತದೆ. ಈ ಪ್ರತಿಮೆಯು ಒಂದು ಗೋಲಾಕಾರ ಪೀಠದ ಮೇಲೆ ನಿಂತಿದ್ದಿದೆ. ಇದರ ಎತ್ತರವು ಇಪ್ಪತ್ತು ಇಂಚಿನಷ್ಟು ಇದೆ. ಮಾಧವೀ-ಲತೆಯು ಎಲೆಗಳಸಹಿತ ಅದರ ಕಾಲುಗಳು ಹಾಗೂ ಬಾಹುಗಳಿಗೆ ಸುತ್ತಿದ್ದು ಇದೆ. ತಲೆಯ ಕೂದಲುಗಳು ಕುತ್ತಿಗೆಯ ಮೇಲೆ ಹಿಂದಕ್ಕೆ ಜೋರಳಾಡುವಂತೆ ಇವೆ. ಅವನ ಜಡೆಗಳು ಬೆನ್ನು ಹಾಗೂ ಹೆಗಲುಗಳ ಮೇಲೆಯೂ ಪಸರಿಸಿವೆ. ಹುಬ್ಬುಗಳು ಮೇಲೆ ಏರಿದಂಥವುಗಳೂ ಮೇಲೆ ಕೆಳಗೆ ಆದಂಥವೂ ಆಗಿವೆ. ಕಿವಿಗಳು ಕೆಳಗೆ ಇಳಿದು, ಛಿದ್ರವುಳ್ಳವುಗಳಾಗಿವೆ. ಮೂಗು ಬಾಗಿದ್ದು ಚೂಪಾಗಿದೆ. ಕಪೋಲ ಮತ್ತು ಗದ್ದಗಳು ತುಂಬ ಮಾಂಸಗಳಿಂದ ತುಂಬಿಕೊಂಡಿವೆ. ಮುಖಾಕೃತಿಯು ಉದ್ದ ಹಾಗೂ ಗೋಲವಾಗಿದೆ. ಎದೆಯು ಅಗಲವಾಗಿದ್ದು, ಅದರಮೇಲೆ ಮೊಲೆಗಳ ಚಿಹ್ನಗಳನ್ನು ಮಾತ್ರ ತೋರಿಸಲಾಗಿದೆ. ನಿತಂಬಭಾಗವು ಗೋಲಾಕಾರದಂತೆ ಇದೆ. ಕಾಲುಗಳು ನೆಟ್ಟಗೆ ಇದ್ದು, ಮೊಳಕಾಲುಗಳನ್ನು ಚೆನ್ನಾಗಿ ತೋರಿಸಲಾಗಿದೆ. ಬಾಹುಗಳು ವಿಶಾಲವಾದ ಹೆಗಲಿನಿಂದ ಇಳಿಬಿದ್ದು, ಶರೀರದ ಹೋಲಿಕೆ ಹಾಗೂ ಆಕೃತಿಗೆ ಅನುಸರಿಸಿವೆ. ಹಸ್ತತಲಗಳನ್ನು ನಡಕ್ಕೆ ಗೋಲಗಳಿಂದ ಜೋಡಿಸಲಾಗಿದೆ. ಇದರಿಂದ ಬಾಹುಗಳಿಗೆ ಆಧಾರವು ಲಭಿಸಿದೆ. ಈ ಮೂರ್ತಿಯ ಆಕೃತಿಯ ನಿರ್ಮಾಣವು ಅತಿ ಸುಂದರವಾಗಿದೆ. ಮುಖದ ಮೇಲೆ ಧ್ಯಾನ ಮತ್ತು ಆಧ್ಯಾತ್ಮಿಕತೆಯ ತೇಜವು ಚೆನ್ನಾಗಿ ವ್ಯಕ್ತವಾಗಿದೆ. ಈ ಆಕೃತಿಯ ನಿರ್ಮಾಣದಲ್ಲಿ ಶ್ರೀ ಉಮಾಕಾಂತ ಶಾಹ ಅವರು ಇದರ ತುಲನೆಯನ್ನು ಬಾದಾಮಿ ಗುಹೆಯಲ್ಲಿ ಲಭಿಸಿದ ಬಾಹುಬಲಿಯ ಪ್ರತಿಮೆಯೊಡನೆಯೂ ಐಹೊಳೆಯ ಮೂರ್ತಿಯೊಡನೆಯೂ ಮಾಡಿದ್ದಾರೆ. ಅವುಗಳ ನಿರ್ಮಾಣಕಾಲವು ಆರು-ಏಳನೆಯ ಶತಮಾನವಾಗಿದೆ.

### ಚಕ್ರೇಶ್ವರೀ ಪದ್ಮಾವತೀ ಮೊದಲಾದ ಯಕ್ಷಿಯರ ಮೂರ್ತಿಗಳು :—

ಜೈನ ಮೂರ್ತಿ ಕಲೆಯಲ್ಲಿ ತೀರ್ಥಂಕರರ ಹೊರತಾಗಿ ಉಳಿದ ದೇವಿ-ದೇವತೆಗಳ ರೂಪದಲ್ಲಿದ್ದ ಪ್ರತಿಮೆಗಳೂ ಕೂಡ ಗಣನೀಯವಾಗಿವೆ. ಇಂಥವುಗಳಲ್ಲಿ ಯಕ್ಷ ಮತ್ತು ಯಕ್ಷಿಣಿಯರ ಮೂರ್ತಿಗಳೂ ಕೂಡ ಲಕ್ಷ್ಯ ಪೂರೈಸಲು ತಕ್ಕವುಗಳಾಗಿವೆ. ಪ್ರತಿಯೊಬ್ಬ ತೀರ್ಥಂಕರನಿಗೂ ಅನುಷಂಗಿಕವಾಗಿ ಒಬ್ಬ ಯಕ್ಷ ಮತ್ತು ಯಕ್ಷಿಣಿಯರಿರುವರೆಂದು ಮನ್ನಿಸಲಾಗಿದೆ. ಆದಿ ತೀರ್ಥಂಕರ ಋಷಭನಾಥನ ಯಕ್ಷಿಣಿಯ ಹೆಸರು ಚಕ್ರೇಶ್ವರೀ ಎಂದಿದೆ. ಈ ದೇವಿಯ ಎರಡುವರೆ ಫೂಟು ಎತ್ತರವುಳ್ಳ ಒಂದು ಪಾಷಾಣ ಮೂರ್ತಿಯು ಮಥುರಾ ಸಂಗ್ರಹಾಲಯದಲ್ಲಿ ವಿರಾಜಮಾನವಾಗಿದೆ. ಈ ಮೂರ್ತಿಯು ಒಂದು ಗರುಡನ ಮೇಲೆ ಆಧಾರಿತ ಆಸನದ ಮೇಲೆ ನಿಂತಿದೆ. ಇದರ ತಲೆ ಹಾಗೂ ಭುಜಗಳು ಒಡೆದುಹೋಗಿವೆ. ಆದರೂ ಇದರ ಪ್ರಭಾವಲಯವು ಪ್ರಫುಲ್ಲ ಕಮಲಾಕಾರದ ಸುಅಲಂಕಾರ ರೂಪದಲ್ಲಿ ವಿದ್ಯಮಾನವಾಗಿದೆ. ಹತ್ತು

ಭುಜಗಳು ಇವೆ. ಕೈಯಲ್ಲಿ ಒಂದು ಚಕ್ರವಿದೆ. ಮೂರ್ತಿಯ ಎರಡೂ ಮಗ್ಗಲುಗಳಲ್ಲಿ ಒಂದೊಂದು ದ್ವಾರಪಾಲಕರ ಪ್ರತಿಮೆಗಳೂ ಇವೆ ಇವುಗಳಲ್ಲಿ ಬಲಭಾಗದ್ದು ಚಾಮರಧಾರಿಯೂ ಎಡಭಾಗದ್ದು ಪುಷ್ಪಮಾಲೆಯನ್ನು ಹಿಡಿದುಕೊಂಡದ್ದೂ ಇರುವಂತೆ ರೂಪಿಸಲಾಗಿದೆ. ಈ ಎರಡೂ ಪ್ರತಿಮೆಗಳ ಕೆಲವೊಂದು ಭಾಗವು ಒಡೆದು ಹೋಗಿದೆ. ಪ್ರಧಾನಮೂರ್ತಿಯ ಮೇಲ್ಭಾಗದಲ್ಲಿ ಪದ್ಮಾಸನದಲ್ಲಿ ಇರುವ ಧ್ಯಾನಸ್ಥ ಜಿನ-ಪ್ರತಿಮೆಯಿದೆ. ಇದರ ಎರಡೂ ಮಗ್ಗಲು ಮಾಲೆಗಳನ್ನು ಹಿಡಿದು ವಂದನೆಗೈತರುವ ಹಾರುವ ದೇವತೆಗಳ ಆಕೃತಿಗಳನ್ನು ಕೆತ್ತಲಾಗಿದೆ. ಈ ಮೂರ್ತಿಯೂ ಕಂಕಾಲೀ ದಿಬ್ಬದಲ್ಲಿಯೇ ಲಭಿಸಿದೆ. ಇದನ್ನು ಕನಿಂಗಹ್ಯಾಮ್ ಸಾಹೇಬನ ಬ್ರಾಹ್ಮಣ-ಪರಂಪರೆಯ ಹತ್ತು ಭುಜಗಳುಳ್ಳ ದೇವಿಯೆಂದು ತಿಳಿದಿದ್ದನು. ಇದೇನೂ ಆಶ್ಚರ್ಯದ ಸಂಗತಿಯಲ್ಲ. ಮಧ್ಯಪ್ರದೇಶದ ಜಬಲಪುರ ಜಿಲ್ಹೆಯಲ್ಲಿಯೂ ಕಟ್ನಿಯ ಸಮೀಪದಲ್ಲಿ ವಿಲಹರೀ ಗ್ರಾಮದ ಲಕ್ಷ್ಮಣಸಾಗರದ ತೀರದಲ್ಲಿ ಒಂದು ಮಂದಿರದಲ್ಲಿ ಚಕ್ರೇಶ್ವರಿಯ ಮೂರ್ತಿಯಿದೆ. ಇದನ್ನು 'ಖೈರಾಮಾಯಿ' ಎಂಬ ಹೆಸರಿನಿಂದ ಈಗ ಪೂಜಿಸುತ್ತಿದ್ದಾರೆ. ಆದರೆ ಮೂರ್ತಿಯ ಮಸ್ತಕದ ಮೇಲೆ ಆದಿನಾಥನ ಪ್ರತಿಮೆಯಿದೆ. ಅದು ಸ್ಪಷ್ಟವಾಗಿಯೂ ಜೈನಪರಂಪರೆಯ ಪ್ರತಿಮೆಯಿದೆಯೆಂದು ಘೋಷಿಸುತ್ತದೆ. ಚಕ್ರೇಶ್ವರಿಯ ಮೂರ್ತಿಗಳು ದೇವಗಢದ ಮಂದಿರಗಳಲ್ಲಿಯೂ ಕಂಡುಬರುತ್ತವೆ. ಶ್ರವಣಬೆಳ್ಗೊಳದ (ಮೈಸೂರು) ಚಂದ್ರಗಿರಿ ಪರ್ವತದ ಮೇಲೆ ಶಾಸನ–ಬಸ್ತಿ ಎಂಬ ಹೆಸರಿನ ಆದಿನಾಥಮಂದಿರದ ದ್ವಾರದಮೇಲೆ ಎರಡೂ ಮಗ್ಗಲು ಗೋಮುಖ ಯಕ್ಷ, ಚಕ್ರೇಶ್ವರಿ ಯಕ್ಷಿಯ ಸುಂದರ ಪ್ರತಿಮೆಗಳು ಇವೆ. ಈ ಮಂದಿರವು ಶಿಲಾಲೇಖಕ್ಕನುಸರಿಸಿ ಶಕ ಸಂ. ೧೦೪೯ರ (ಕ್ರಿ.ಶ. ೧೧೧೭) ಪೂರ್ವದಲ್ಲಿ ನಿರ್ಮಾಣವಾಗಿದೆ. ಇಲ್ಲಿಯ ಬೇರೆ ಮಂದಿರಗಳಲ್ಲಿಯೂ ವಿವಿಧ ತೀರ್ಥಂಕರರ ಯಕ್ಷ-ಯಕ್ಷಿಣಿಯರ ಪ್ರತಿಮೆಗಳು ವಿರಾಜಮಾನವಾಗಿವೆ. (ಜೈ. ಶಿ. ಸಂ. ಭಾಗ ೧, ಇದರ ಪ್ರಸ್ತಾವನೆಯನ್ನು ನೋಡಿರಿ.) ಇವುಗಳಲ್ಲಿ ಅಕ್ಕನ ಬಸ್ತಿ ಎಂಬ ಹೆಸರಿನ ಪಾರ್ಶ್ವನಾಥ ಮಂದಿರದಲ್ಲಿ ಮೂರುವರೆ ಫೂಟು ಎತ್ತರವುಳ್ಳ ಧರಣೇಂದ್ರ ಯಕ್ಷ ಹಾಗು ಪದ್ಮಾವತಿ ಯಕ್ಷಿಯ ಮೂರ್ತಿಗಳು ವಿಶೇಷ ಉಲ್ಲೇಖನೀಯವಾಗಿವೆ. ಈ ಮಂದಿರದ ನಿರ್ಮಾಣ ಕಾಲವು ಅಲ್ಲಿಯ ಲೇಖಕ್ಕನುಸರಿಸಿ ಶಕ ಸಂ. ೧೧೧೦೩ (ಕ್ರಿ. ಶ. ೧೧೮೧) ಇದೆ. ಕತ್ತಲೆ ಬಸ್ತಿಯಲ್ಲಿಯು ಈ ಮೂರ್ತಿಯಿದೆ. ಪದ್ಮಾವತಿಯ ಇದಕ್ಕೂ ಪೂರ್ವದ ಹಾಗು ತರುವಾಯದ ಮೂರ್ತಿಗಳು ಜೈನ ಮಂದಿರದಲ್ಲಿ ಬಹಳಷ್ಟು ಕಂಡು ಬರುತ್ತವೆ. ಅವುಗಳಲ್ಲಿ ಖಂಡಗಿರಿಯ (ಓಡಿಸಾ) ಒಂದು ಗುಹಾ ಮೂರ್ತಿಯು ಎಲ್ಲಕ್ಕೂ ಪ್ರಾಚೀನ ಪ್ರತಿಮೆಯಾಗಿದೆ. ನಾಲಂದಾ ಮತ್ತು ದೇವಗಢದ ಮೂರ್ತಿಗಳು ೭, ೮ ನೆಯ ಶತಮಾನದವುಗಳಾಗಿವೆ. ಮಧ್ಯ ಕಾಲದಿಂದ ಈ ದೇವಿಯ ಪೂಜೆಯು ವಿಶೇಷ ರೂಪದಿಂದ ಜನರಲ್ಲಿ ಪ್ರಚುರಗೊಂಡುದು ಕಂಡುಬರುತ್ತದೆ.

**ಅಂಬಿಕಾದೇವಿಯ ಮೂರ್ತಿಗಳು:–**

ತೀರ್ಥಂಕರರ ಯಕ್ಷ-ಯಕ್ಷಿಣಿಯರಲ್ಲಿ ನೇಮಿನಾಥ ತೀರ್ಥಂಕರನ ಯಕ್ಷಿಣಿಯಾದ ಅಂಬಿಕಾದೇವಿಯು ಎಲ್ಲಕ್ಕೂ ಹೆಚ್ಚು ಪ್ರಸಿದ್ಧಿಯನ್ನೂ ಪ್ರಚಾರವನ್ನೂ ಹೊಂದಿದ್ದಾಳೆ. ಈ ದೇವಿಯ ಎಲ್ಲಕ್ಕೂ ಪ್ರಾಚೀನ ಮತ್ತು ವಿಖ್ಯಾತ ಮೂರ್ತಿಯು ಗಿರನಾರ ಪರ್ವತದ (ಊರ್ಜಯಂತ್ ಗಿರಿ) ಅಂಬಾದೇವಿ ಶಿಖರದ ಮೇಲೆ ಇದೆ. ಇದರ ಉಲ್ಲೇಖವನ್ನು ಸಮಂತಭದ್ರನು ತನ್ನ ಸ್ವಯಂಭೂಸ್ತೋತ್ರದಲ್ಲಿ (ಪದ್ಯ ೧೨೭) ಖಚರ ಯೋಷಿತ (ವಿದ್ಯಾಧರಿ) ಎಂಬ ಹೆಸರಿನಿಂದ ಉಲ್ಲೇಖ ಮಾಡಿದ್ದಾನೆ. (ಪುಟ 335). ಜಿನಸೇನನೂ ಕೂಡ ತನ್ನ ಹರಿವಂಶ–ಪುರಾಣದಲ್ಲಿ (ಶಕ ಸಂ. ೭೦೫) ಈ ದೇವಿಯ ಸ್ಮರಣೆಯನ್ನು ಈ ಪ್ರಕಾರ ಮಾಡಿದ್ದಾನೆ:–

> ಗೃಹೀತಚಕ್ರಾಪ್ರತಿಚಕ್ರದೇವತಾ ತಥೋರ್ಜಯಂತಾಲಯಸಿಂಹವಾಹಿನೀ।
> ಶಿವಾಯ ಯಸ್ಮಿನ್ನಿಹ ಸನ್ನಿಧೀಯತೇ ಕ್ವ ತತ್ರ ವಿಘ್ನಾಃ ಪ್ರಭವಂತಿ ಶಾಸನೇ॥
>
> (ಹ. ಪು. ಪ್ರಶಸ್ತಿ)

ಈ ದೇವಿಯ ಒಂದು ಉಲ್ಲೇಖನೀಯ ಪಾಷಾಣ ಪ್ರತಿಮೆಯು ಒಂದು ಫೂಟು ಒಂಭತ್ತು ಇಂಚು ಎತ್ತರ ಉಳ್ಳದ್ದು ಮಥುರಾ ಸಂಗ್ರಹಾಲಯದಲ್ಲಿದೆ. ಅಂಬಿಕೆಯು ಒಂದು ವೃಕ್ಷದ ಕೆಳಗೆ ಸಿಂಹದಮೇಲಿರುವ ಕಮಲಾಸನದಲ್ಲಿ ವಿರಾಜಮಾನಳಾಗಿದ್ದಾಳೆ. ಎಡಗಾಲನ್ನು ಮೇಲೆತ್ತಿ ಬಲಗಾಲನ್ನು ಭೂಮಿಯ ಮೇಲೆ ಊರಿದ್ದಿದೆ. ಬಲಗೈಯಲ್ಲಿ ಹಣ್ಣುಗಳ ಗುಚ್ಛವಿದೆ. ಎಡಗೈಯು ಎಡ ನಡುವಿನ ಮೇಲೆ ಕುಳಿತ ಬಾಲಕನನ್ನು ಸಂಭಾಳಿಸುತ್ತಿದೆ. ಬಾಲಕನು ತನ್ನ ಎದೆಯ ಮೇಲೆ ತೂಗಾಡುವ ಹಾರದೊಡನೆ ಆಡುತ್ತಿದ್ದಾನೆ. ಅಧೋಭಾಗವು ವಸ್ತ್ರಾಲಂಕಾರವುಳ್ಳದ್ದಿದೆ. ಮೇಲ್ಭಾಗದಲ್ಲಿ ವಕ್ಷಸ್ಥಳದ ಮೇಲೆ ಎರಡು ಹೆಗಲುಗಳ ಮೇಲೆ ಹಿಂದಕ್ಕೆ ಒಗೆದ ಸೆರಗು ಇದೆ. ತಲೆಯ ಮೇಲೆ ಸುಂದರ ಮುಕುಟವಿದೆ. ಅದಕ್ಕೆ ಹಿಮ್ಮಗ್ಗಲು ಶೋಭಿಸುವ ಪ್ರಭಾವಲಯವೂ ಇದೆ. ಕೊರಳಲ್ಲಿ ಎರಡು ಎಳೆಯ ಹಾರ, ಕೈಯಲ್ಲಿ ಬಳೆಗಳು, ಕಟಿಯಲ್ಲಿ ಮೈಖಲೆ, ಕಾಲುಗಳಲ್ಲಿ ಗೆಜ್ಜೆಗಳು ಇವೆಲ್ಲ ಆಭೂಷಣಗಳು ಇವೆ. ಬಾಲಕನು ನಗುನಾಗಿದ್ದಾನೆ. ಕೊರಳಲ್ಲಿ ಹಾರ, ಬಾಹುಗಳಲ್ಲಿ ಭುಜಬಂಧ, ಮುಂಗೈಗಳಲ್ಲಿ ಕಡೆ, ನಡುವಿನಲ್ಲಿ ಉಡುದಾರಗಳನ್ನು ತೊಡಿಸಲಾಗಿದೆ. ಅಂಬಿಕೆಯ ಮಗ್ಗುಲಲ್ಲಿ ಇನ್ನೊಬ್ಬ ಬಾಲಕ ನಿಂತದ್ದಿದೆ. ಅವನ ಬಲಗೈಯು ಅಂಬಿಕೆಯ ಬಲ ಮೊಳಕಾಲ ಮೇಲೆ ಇಟ್ಟದ್ದಿದೆ. ಹೀಗೆ ನಿಂತ ಬಾಲಕನ ಇನ್ನೊಂದು ಮಗ್ಗುಲಿಗೆ ಗಣೇಶನ ಒಂದು ಚಿಕ್ಕ ಮೂರ್ತಿಯಿದೆ. ಆದರೆ ಎಡಗೈಯಲ್ಲಿ ಉಂಡಿಗಳ ಪಾತ್ರವಿದೆ. ಅದು ಅವನ ತುಟಿಗಳನ್ನು ಸ್ಪರ್ಶಿಸುವಂತೆ ಇದೆ. ಅದರ ಸರಿಯಾಗಿ ಇನ್ನೊಂದು ಮಗ್ಗುಲಿನಲ್ಲಿ ಇನ್ನೊಂದು ಕುಳಿತ ಮೂರ್ತಿಯಿದೆ. ಆದರೆ ಬಲಗೈಯಲ್ಲಿ ಒಂದು ಪಾತ್ರವೂ ಎಡಗೈಯಲ್ಲಿ ಮೊಹರಿನ ಚೀಲವೂ ಇವೆ. ಇದರಿಂದ ಅದು ಕುಬೇರನ ಮೂರ್ತಿಯಿರಬೇಕೆಂದು

ತೋರುತ್ತದೆ. ಕುಬೇರ ಮತ್ತು ಗಣೇಶನ ಮೂರ್ತಿಗಳಿಗೂ ಅವವುಗಳಿಗೆ ತಕ್ಕಂತೆ ಲಂಬಾಕಾರದ ಪ್ರಭಾವಳಿಗಳೂ ಸಹ ಇವೆ ಇವೆರೆಲ್ಲರ ಎರಡೂ ಪಗ್ಗಲುಗಳಲ್ಲಿ ಚವುರಧಾರೀ ಮೂರ್ತಿಗಳಿವೆ.ಆಸನದ ಕೆಳಗಿನ ಪಟ್ಟಿಯ ಮೇಲೆ ಎಂಟು ಜನ ನರ್ತಕಿಯರಿದ್ದಾರೆ. ಮೇಲ್ಭಾಗದಲ್ಲಿ ಪುಷ್ಪಮಂಟಪವನ್ನು ನಿರ್ಮಿಸಲಾಗಿದೆ. ಇದರ ಮಧ್ಯಭಾಗದಲ್ಲಿ ಪದ್ಮಾಸನದಲ್ಲಿರುವ ಧ್ಯಾನಸ್ಥ ಜಿನಮೂರ್ತಿಯಿದೆ. ಇದರ ಎರಡೂ ಮಗ್ಗಲು ಎರಡು ಚತುರ್ಭುಜ ಮೂರ್ತಿಗಳು ಕಮಲಗಳ ಮೇಲೆ ತ್ರಿಭಂಗಿ ಮುದ್ರೆಯಲ್ಲಿ ನಿಂತಿವೆ. ಬಲಭಾಗದ ಮೂರ್ತಿಯ ಕೈಯಲ್ಲಿ ನೇಗಿಲು ಮತ್ತು ಮುಸಲಗಳೂ ಇವೆ. ಅದರಿಂದ ಅದು ಬಲರಾಮನ ಮೂರ್ತಿಯಾಗಿದೆ ಎಂಬುದು ಸ್ಪಷ್ಟ. ಎಡಗಡೆಯ ಚತುರ್ಭುಜ ಮೂರ್ತಿಯ ಎಡಗೈಯಲ್ಲಿ ಚಕ್ರ ಮತ್ತು ಶಂಖ ಹಾಗೂ ಬಲಗೈಗಳಲ್ಲಿ ಪದ್ಮ ಮತ್ತು ಗದೆಗಳು ಇವೆ. ಅದರಿಂದ ಇದು ವಾಸುದೇವನ ಮೂರ್ತಿಯಾಗಿದೆ. ಎರಡರ ಕೊರಳಲ್ಲಿಯೂ ಸಹ ವೈಜಯಂತಿಮಾಲೆಗಳು ಇವೆ. ಬಲಭದ್ರ ಮತ್ತು ವಾಸುದೇವನಹಿತ ನೇಮಿನಾಥ ತೀರ್ಥಂಕರರ ಸ್ವತಂತ್ರ ಮೂರ್ತಿಗಳು ಮಧುರಾ ಹಾಗೂ ಲಖನೊ ಸಂಗ್ರಹಾಲಯಗಳಲ್ಲಿ ವಿರಾಜಮಾನವಾಗಿವೆ. ಈ ಅಂಬಿಕೆಯ ಮೂರ್ತಿಯಲ್ಲಿ ನಾವು ಜೈನ ಮತ್ತು ವೈದಿಕ ಪರಂಪರೆಯ ಅನೇಕ ದೇವೀ ಹಾಗೂ ದೇವತೆಗಳ ಸುಂದರ ಸಮೀಕರಣವನ್ನು ಕಾಣುತ್ತೇವೆ. ಇವುಗಳ ವರ್ಣನಾತ್ಮಕ ವಿಭಾಗವನ್ನು ನಾವು ಜೈನ ಪುರಾಣಗಳಲ್ಲಿ ಕಾಣುತ್ತೇವೆ.

ಪುಣ್ಯಾಶ್ರವ–ಕಥಾಕೋಷದ ಯಕ್ಷಿಯ ಕಥೆಗೆ ಅನುಸರಿಸಿ, ಗಿರಿನಾರದ ಅಗ್ನಿಲಾ ಎಂಬ ಹೆಸರಿನ ಧರ್ಮವತಿಯಾದ ಬ್ರಾಹ್ಮಣ ಮಹಿಳೆಯು ತನ್ನ ಪತಿಯ ಕೋಪಕ್ಕೆ ಪಾತ್ರಳಾಗಿ, ತನ್ನ ಪ್ರಿಯಂಕರ ಮತ್ತು ಶುಭಂಕರ ಎಂಬ ಹೆಸರಿನ ಇಬ್ಬರು ಅಲ್ಪ ವಯಸ್ಸಿನ ಬಾಲಕರನ್ನು ತಕ್ಕೊಂಡು ಹೋಗಿ ಗಿರನಾರ ಪರ್ವತದ ಮೇಲೆ ಇರುವ ಒಬ್ಬ ಮುನಿರಾಜನಿಗೆ ಶರಣು ಹೋದಳು ಅಲ್ಲಿ ಬಾಲಕರು ಹಸಿವೆಗೆ ಒಳಗಾಗಲು, ಧರ್ಮಪ್ರಭಾವದಿಂದ ಅಲ್ಲೊಂದು ಮಾವಿನ ಗಿಡವು ಹುಟ್ಟಿ ಅಕಾಲದಲ್ಲಿ ಹೂ-ಹಣ್ಣುಗಳನ್ನು ನೀಡಿತು. ಅದರ ಗೊಂಚಲುಗಳಿಂದ ಆ ಮಕ್ಕಳ ಹಸಿವು ಹಿಂಗಿತು. ಇತ್ತ ಅವಳ ಪತಿಯಾದ ಸೋಮಶರ್ಮನಿಗೆ ತನ್ನ ತಪ್ಪಿನ ಅರಿವು ಉಂಟಾಯಿತು. ಆಗವನು ತನ್ನತಪ್ಪನ್ನು ಒಪ್ಪಿಕೊಳ್ಳಲು ಬಂದನು.ಆದರೆ ಅಗ್ನಿಲೆಯು ಅವನು ತನ್ನನ್ನು ಹೊಡೆಯಲು ಬಂದನೆಂದು ತಿಳಿಸಿದಳು. ಹೀಗಾಗಿ ಅವಳು ಆ ಕಾಲದ ತೀರ್ಥಂಕರರಾದ ನೇಮಿನಾಥನ ಧ್ಯಾನವನ್ನು ಮಾಡುತ್ತ ಪರ್ವತ ಶಿಖರದಿಂದ ಉರುಳಿದಳು. ಶುಭಧ್ಯಾನದಿಂದ ಸತ್ತ ಅವಳು ನೇಮಿನಾಥನ ಯಕ್ಷಿಣಿಯಾದ ಅಂಬಿಕೆಯಾದಳು. ಅವಳ ಪತಿಯು ಕಾಲಾಂತರದಲ್ಲಿ ಮರಣವನ್ನು ಹೊಂದಿ ಸಿಂಹದ ರೂಪದಲ್ಲಿ ಅವಳ ವಾಹನವಾದನು. ಈ ಪ್ರಕಾರ ಅಂಬಿಕೆಯ ಎರಡು ಮಕ್ಕಳು ಮಾವಿನ ಗಿಡ ಮತ್ತು ಮಾವಿನ ಹಣ್ಣಿನ ಗೊಂಚಲು, ಸಿಂಹವಾಹನ ಇವು ಈ ದೇವಿಯ ಮೂರ್ತಿಯ ಲಕ್ಷಣಗಳಾದುವು. ಇದೇ ಕಥಾನಕದ ಸಾರವನ್ನು ಆಶಾಧರ ಕೃತ ಪ್ರತಿಷ್ಠಾಸಾರದಲ್ಲಿ

(೧೩ನೆಯ ಶತಮಾನ) ಅಂಬಿಕೆಯ ವಂದನಾತ್ಮಕ ಈ ಶ್ಲೋಕದಲ್ಲಿಯೂ ನಾವು ಕಾಣುತ್ತೇವೆ:—

ಸವ್ಯೈತವ್ಯುಪಗ-ಪ್ರಿಯಂಕರಸುತಪ್ರೀತ್ಯೈ ಕರೇ ಬಿಭ್ರತೀ।
ದಿವ್ಯಾಮ್ರಸ್ತಬಕಂ ಶುಭಂಕರ-ಕರಶ್ಲಿಷ್ಟಾನ್ಯ ಹಸ್ತಾಂಗುಲಿಮ್॥
ಸಿಂಹಭರ್ತೃಚರೇ ಸ್ಥಿತಾಂ ಹರಿತಭಾಮಾಮ್ರದ್ರುಮಚ್ಛಾಯಗಾಮ್।
ವಂದಾರುಂ ದಶಕಾರ್ಮುಕೋಚ್ಛ್ರಯಜಿನಂ ದೇವೀಮಿಹಾಂ ಬಾಂ ಯಜೇ॥

ಅಂಬಿಕೆಯ ಇಂಥ ಮೂರ್ತಿಗಳು ಉದಯಗಿರಿ-ಖಂಡಗಿರಿಯ ನವಮುನಿ ಗುಹೆ ಹಾಗೂ ಢಂಕದ ಗುಹೆಗಳಲ್ಲಿಯೂ ಕಂಡುಬರುತ್ತವೆ. ಅಲ್ಲಿ ಈ ಮೂರ್ತಿಗೆ ಎರಡೇ ಕೈಗಳು ಕಂಡುಬರುತ್ತವೆ. ಇವು ಮೇಲೆ ವರ್ಣಿಸಿದ ಮಥುರೆಯ ಗುಪ್ತ ಕಾಲದ ಪ್ರತಿಮೆಗಳಲ್ಲಿಯೂ ಇವೆ. ಆದರೆ ದಕ್ಷಿಣದಲ್ಲಿ ಜಿನ ಕಾಂಚಿಯ ಒಂದು ಜೈನ ಮಠದ ಗೋಡೆಯ ಮೇಲೆ ಚಿತ್ರಿಸಿದ ಅಂಬಿಕೆಯು ಚತುರ್ಭುಜವಾಗಿದೆ. ಇದರ ಎರಡು ಕರಗಳಲ್ಲಿ ಪಾಶ ಮತ್ತು ಅಂಕುಶಗಳು ಇವೆ. ಉಳಿದ ಎರಡು ಕರಗಳು ಅಭಯ ಹಾಗೂ ವರದ ಮುದ್ರೆಗಳಲ್ಲಿವೆ. ಇವಳು ಆಮ್ರವೃಕ್ಷದ ಕೆಳಗೆ ಪದ್ಮಾಸನದಲ್ಲಿ ವಿರಾಜಮಾನವಾಗಿದ್ದಾಳೆ. ಹತ್ತಿರ ಬಾಲಕರೂ ಇದ್ದಾರೆ. ಮೈಸೂರು ರಾಜ್ಯದ ಅಂಗಡಿ ಎಂಬ ಸ್ಥಾನದ ಜೈನ ಮಂದಿರದಲ್ಲಿ ಅಂಬಿಕೆಯ ದ್ವಿ-ಭುಜ ಮೂರ್ತಿಯು ನಿಂತದ್ದು ಬಹು ಸುಂದರವಾಗಿದೆ. ಇದರ ತ್ರಿಭಂಗ ಶರೀರಾಕೃತಿಯು ಕಲಾತ್ಮಕ ಮತ್ತು ಲಾಲಿತ್ಯ ಪೂರ್ಣವಾಗಿದೆ. ದೇವಗಢದ ಮಂದಿರಗಳಲ್ಲಿ ಹಾಗೂ ಆಬೂವಿನ ವಿಮಲ ವಸಹಿಯಲ್ಲಿಯೂ ಅಂಬಿಕೆಯ ಮೂರ್ತಿಗಳು ಪ್ರೇಕ್ಷಣೀಯವಾಗಿವೆ. ಮಥುರಾ ಸಂಗ್ರಹಾಲಯದಲ್ಲಿ ಸದ್ಯಕ್ಕೆ ಬಂದ (೩೩೮೨) ಪೂರ್ವ-ಮಧ್ಯಕಾಲೀನ ಮೂರ್ತಿಗಳಲ್ಲಿ ದೇವಿಯು ಎರಡು ಕಂಭಗಳ ಮಧ್ಯದಲ್ಲಿ ಲಲಿತಾಸನದಲ್ಲಿ ಕುಳಿತವಳಾಗಿದ್ದಾಳೆ. ಬಲಗಾಲು ಕಮಲದ ಮೇಲಿದೆ. ದೇವಿಯು ತನ್ನ ತೊಡೆಯ ಮೇಲಿನ ಶಿಶುಗಳನ್ನು ಅತ್ಯಂತ ವಾತ್ಸಲ್ಯದಿಂದ ಎರಡೂ ಕೈಗಳಿಂದ ಹಿಡಿದು ಕೊಂಡಿದ್ದಾಳೆ. ಕೇಶ ಪಾಶ ಮತ್ತು ಕಂಠಹಾರ ಹಾಗೆಯೇ ಕುಂಡಲದ ಆಕೃತಿಗಳು ಬಹು ಸುಂದರವಾಗಿವೆ. ಎಡ ಮಗ್ಗಲಿಗೆ ಸಿಂಹವು ಕುಳಿತಿದೆ.

**ಸರಸ್ವತಿಯ ಮೂರ್ತಿ:—**

ಮಥುರೆಯ ಕಂಕಾಲಿ ದಿನ್ನೆಯಲ್ಲಿ ಲಭಿಸಿದ ಸರಸ್ವತಿಯ ಮೂರ್ತಿಯು (ಜೆ ೨೪) ಲಖನೌ ಸಂಗ್ರಹಾಲಯದಲ್ಲಿ ಇದೆ. ಇದು ಒಂದು ಫೂಟು ಒಂಭತ್ತುವರಿ ಇಂಚ ಎತ್ತರವಾಗಿದೆ. ದೇವಿಯು ಚೌಕೋನ ಆಕಾರದ ಆಸನದ ಮೇಲಿದೆ. ತಲೆಯು ಒಡೆದುಹೋಗಿದೆ. ಎಡಗೈಯಲ್ಲಿ ಸೂತ್ರದಿಂದ ಕಟ್ಟಿದ ಪುಸ್ತಕವಿದೆ. ಬಲಗೈಯು ಖಂಡಿತವಾಗಿದೆ. ಆದರೆ ಅದು ಅಭಯ ಮುದ್ರೆಯಲ್ಲಿ ಇರಬೇಕೆನಿಸುತ್ತದೆ. ವಸ್ತ್ರವು ಸೀರೆಯಂತಿದೆ. ಇದರ ಸೆರಗು ಹೆಗಲನ್ನೂ ಕೂಡ ಮುಚ್ಚಿದೆ. ಎರಡೂ ಕೈಗಳ

ಮುಂಗೈಗಳಲ್ಲಿ ಒಂದೊಂದು ಬಳೆಗಳು ಇವೆ. ಹಾಗೂ ಬಲಗೈಯಲ್ಲಿ ಬಳೆಯ ಮೇಲ್ಭಾಗದಲ್ಲಿ ಜಪಮಾಲೆಯು ಸಹ ನೇತಾಡುತ್ತಲಿದೆ. ದೇವಿಯ ಎರಡೂ ಮಗ್ಗಲು ಇಬ್ಬರು ಉಪಾಸಕರು ನಿಂತಿದ್ದಾರೆ. ಅವರ ಕೂದಲುಗಳನ್ನು ಸುಂದರವಾಗಿ ಕಟ್ಟಲಾಗಿದೆ. ಬಲಗಡೆಯ ಉಪಾಸಕನ ಕೈಯಲ್ಲಿ ಕಲಶವಿದೆ. ಎಡಗಡೆಯ ಉಪಾಸಕನು ಕೈ ಜೋಡಿಸಿ ನಿಂತಿದ್ದಾನೆ. ಬಲಗಡೆಯ ಉಪಾಸಕನು ಕೋಟನ್ನು ತೊಟ್ಟಿದ್ದಾನೆ ಅವನು ಶಕ ಜಾತಿಯ ಟ್ಯೂನಿಕನಂತೆ ಕಾಣುತ್ತಾನೆ. ಪಾದ ಪೀಠದ ಮೇಲೆ ಒಂದು ಲೇಖವೂ ಕೂಡ ಇದೆ. ಅದಕ್ಕನುಸರಿಸಿ "ಎಲ್ಲ ಜೀವಿಗಳಿಗೂ ಸುಖವನ್ನೂ ಹಿತವನ್ನೂ ಮಾಡುವ ಈ ಸರಸ್ವತಿಯ ಪ್ರತಿಮೆಯನ್ನು ಸಿಂಹಪುತ್ರ-ಶೋಭ ಎಂಬ ಹೆಸರಿನ ಕಬ್ಬಿಣದ ಶಿಲ್ಪಿಯು ದಾನವಿತ್ತನು ಮತ್ತು ಅವನು ಒಂದು ಜೈನ ಮಂದಿರದ ರಂಗಶಾಲೆಯಲ್ಲಿ ಸ್ಥಾಪಿಸಿದನು" ಈ ಮೂರ್ತಿ ದಾನವನ್ನು ಕೋಟಿಕ-ಗಣ ವಾಚಕಾಚಾರ್ಯ ಆರ್ಯದೇವನಿಗೆ ಸಂವತ್ ೫೪ ರಲ್ಲಿ ಮಾಡಲಾಯಿತು. ಲಿಪಿಯೇ ಮೊದಲಾದವುಗಳ ಮೇಲಿಂದ ಈ ವರ್ಷವು ಶಕ ಸಂವತ್ಸರವೆಂದು ಗೊತ್ತಾಗುತ್ತದೆ. ಹೀಗಾಗಿ ಇದರ ಕಾಲವು ೭೮ + ೫೪ = ೧೩೨ ಕ್ರಿ. ಶ. ಎಂದರೆ ಕುಷಾಣ ರಾಜನಾದ ಹುವಿಷ್ಕನ ಸಮಯದಲ್ಲಿ ಹೊಂದಿಕೊಳ್ಳುತ್ತದೆ. ಲೇಖದಲ್ಲಿ ಬರುವ ಉಳಿದ ಹೆಸರುಗಳೆಲ್ಲ ಅದೇ ಕಂಕಾಲಿ ದಿನ್ನೆಯಲ್ಲಿ ಲಭಿಸಿದ ಸಂವತ್ ೫೨ ಜೈನ ಪ್ರತಿಮೆಗಳ ಲೇಖದಲ್ಲಿಯೂ ಉಲ್ಲೇಖ ಗೊಂಡಿವೆ. ಜೈನ ಪರಂಪರೆಯಲ್ಲಿ ಸರಸ್ವತಿಯ ಪೂಜೆಯು ಎಷ್ಟು ಪ್ರಾಚೀನವಿದೆಯೆಂಬುದಕ್ಕೆ ಈ ಮೂರ್ತಿಯೂ ಇದರ ಮೇಲಿನ ಲೇಖವೂ ಪ್ರಮಾಣವನ್ನು ಒದಗಿಸುತ್ತವೆ. ಸರಸ್ವತಿಯ ಇಷ್ಟು ಪ್ರಾಚೀನ ಪ್ರತಿಮೆಯು ಇನ್ನೆಲ್ಲಿಯೂ ಲಭಿಸಿದುದಿಲ್ಲ. ಈ ದೇವಿಯ ಹಿಂದೂ ಮೂರ್ತಿಗಳು ಗುಪ್ತಕಾಲಕ್ಕಿಂತ ಮುಂಚಿನವು ಕಂಡು ಬರುವುದಿಲ್ಲ. ಅರ್ಥಾತ್ ಅವೆಲ್ಲವೂ ಈ ಮೂರ್ತಿಗಿಂತ ಎರಡು-ಮೂರು ಶತಮಾನ ಈಚಿನವುಗಳಾಗಿವೆ. ಸರಸ್ವತಿಯ ಮೂರ್ತಿಗಳನ್ನು ಅನೇಕ ಜಿನಮಂದಿರಗಳಲ್ಲಿ ಸ್ಥಾಪಿಸಿದ್ದುಂಟು. ಆದರೆ ಉಪಲಬ್ಧವಿರುವ ಹೆಚ್ಚು ಪ್ರತಿಮೆಗಳು ಮಧ್ಯಕಾಲದಲ್ಲಿ ನಿರ್ಮಿಸಿದವುಗಳಾಗಿವೆ. ಉದಾಹರಣೆಗೆಂದು ದೇವಗಢದ ೧೯ ನೆಯ ಮಂದಿರದ ಹೊರಗಿನ ಭಾಗದಲ್ಲಿ ಸರಸ್ವತಿಯ ನಾಲ್ಕು ಕೈಗಳುಳ್ಳ ಎದ್ದು ನಿಂತ ಮೂರ್ತಿಯು ಇದೆ. ಇದರ ಕಾಲವು ವಿ. ಸಂ. ೧೧೨೬ ರ ಸುಮಾರಿನದೆಂದು ಸಿದ್ಧವಾಗುತ್ತದೆ. ರಾಜಪುತಸ್ಥಾನದಲ್ಲಿ ಸಿರೋಹೀ ರಾಜ್ಯದಲ್ಲಿ ಅಜಾರೀ ಎಂಬ ಸ್ಥಳದ ಮಹಾವೀರ ಜೈನ ಮಂದಿರದಲ್ಲಿ ಪ್ರತಿಷ್ಠಿತವಾದ ಮೂರ್ತಿಯ ಆಸನದ ಮೇಲೆ ವಿ. ಸಂ. ೧೨೬೫ ಎಂದು ಕೆತ್ತಲಾಗಿದೆ. ಈ ಮೂರ್ತಿಯು ಕೆಲವು ಕಡೆಗೆ ದ್ವಿಭುಜ, ಕೆಲವು ಕಡೆಗೆ ಚತುರ್ಭುಜ ಕೆಲವಡೆಯಲ್ಲಿ ಮಯೂರವಾಹಿನಿ ಮತ್ತು ಇನ್ನು ಕೆಲವೆಡೆಗಳಲ್ಲಿ ಸಿಂಹವಾಹಿನಿಯಾಗಿರುವುದು ಕಂಡುಬರುತ್ತದೆ. ಒಂದು ಕೈಯಲ್ಲಿ ಪುಸ್ತಕವಂತೂ ಅವಶ್ಯವಾಗಿರುತ್ತದೆ. ಉಳಿದ ಕರಗಳಲ್ಲಿ ಕಮಲ, ಅಕ್ಷರಮಾಲಾ, ವೀಣಾ ಅಥವಾ ಇವುಗಳಲ್ಲಿಯೇ ಆದ ಒಂದೆರಡು ವಸ್ತುಗಳು ಇದ್ದುದು ಕಂಡು ಬರುತ್ತದೆ. ಎರಡನೆಯ ಕೈಯು

ಅಭಯ ಮುದ್ರೆಯಲ್ಲಿ ಇದ್ದುದು ಕಂಡುಬರುತ್ತದೆ. ಜೈನ ಪ್ರತಿಷ್ಠಾಗ್ರಂಥದಲ್ಲಿ ಈ ದೇವಿಯ ಎಲ್ಲ ಈ ಲಕ್ಷಣಗಳು ಭಿನ್ನ ಭಿನ್ನ ರೂಪದಲ್ಲಿ ವರ್ಣಿತವಾದುದು ಕಂಡು ಬರುತ್ತದೆ. ಅದರ ಜಡೆಗಳು ಹಾಗು ಚಂದ್ರಕಲೆಯ ಉಲ್ಲೇಖವು ಸಹಿತ ಲಭಿಸುತ್ತದೆ. ಧವಲಾ ಟೀಕೆಯ ಕರ್ತೃವಾದ ವೀರಸೇನಾಚಾರ್ಯನು ಈ ದೇವಿಯನ್ನು ಶ್ರುತ ದೇವಿಯ ರೂಪದಲ್ಲಿ ವಂದಿಸಿದ್ದಾನೆ. ಇವಳಿಗೆ ದ್ವಾದಶಾಂಗ ರೂಪದ ಹನ್ನೆರಡು ಅಂಗಗಳು ಇವೆ. ಸಮ್ಯಗ್ದರ್ಶನ ರೂಪದ ತಿಲಕವಿದೆ. ಉತ್ತಮ ಚಾರಿತ್ರ ರೂಪದ ಆಭೂಷಣವಿದೆ. ಅಕೋಟದಲ್ಲಿ ಲಭಿಸಿದ ಧಾತುವಿನ ಸರಸ್ವತಿಯ ಪ್ರತಿಮೆಯು(೧೧ ನೆಯ ಶತಮಾನಕ್ಕಿಂತ ಮುಂಚಿನದು. ಬಡೋದಾ ಸಂಗ್ರಹಾಲಯದಲ್ಲಿದೆ.) ದ್ವಿಭುಜ ದಲ್ಲಿ ನಿಂತುದಾಗಿದೆ. ಮುಖ ಮುದ್ರೆಯು ಬಹು ಪ್ರಸನ್ನವಾಗಿದೆ. ಮುಕುಟದ ಪ್ರಭಾ ವಲಯವೂ ಕೂಡ ಸುಂದರವಾಗಿದೆ. ಇಂಥ ಇನ್ನೊಂದು ಪ್ರತಿಮೆಯು ವಸಂತಗಢ ದಲ್ಲಿಯೂ ಸಹ ದೊರಕಿದೆ. ದೇವಿಯ ಪೂಜೆಯ ಪರಂಪರೆಯು ಬಹು ಪ್ರಾಚೀನವಾಗಿದೆ. ಆದರೆ ಅವುಗಳ ಹೆಸರು, ಸ್ವರೂಪ, ಸ್ಥಾಪನೆ, ಪ್ರಜೆಗಳ ಪ್ರಕಾರಗಳು ಕಾಲ ಕಾಲಕ್ಕೆ ಬದಲಾಗುತ್ತ ಬಂದಿವೆ. ಭಗವತೀ ಸೂತ್ರದಲ್ಲಿ (೧೧,೧೧,೪೨೯) ರಾಜಕುಮಾರ ಮಹಾಬಲನ ವಿವಾಹ ಸಮಯದಲ್ಲಿ ಅವನ ವಸ್ತ್ರಾದಿ ಭೂಷಣಗಳಲ್ಲದೆ ಶ್ರೀ, ಹ್ರೀ, ಧೃತಿ, ಕೀರ್ತಿ, ಬುದ್ಧಿ, ಲಕ್ಷ್ಮಿ, ನಂದಾ ಮತ್ತು ಭದ್ರಾ ಇವರ ಎಂಟೆಂಟು ಪ್ರತಿಮೆ ಗಳನ್ನೂ ಸಹ ಕಾಣಿಕೆಯಾಗಿ ಕೊಡಲಾಗಿತ್ತೆಂಬ ಉಲ್ಲೇಖವಿದೆ. ಆಗ ವಿವಾಹದ ತರು ವಾಯ ಪ್ರತಿಯೊಂದು ಸಂಪನ್ನ ಕುಟುಂಬದಲ್ಲಿ ಈ ಪ್ರತಿಮೆಗಳನ್ನು ಕುಲದೇವತೆಗಳ ರೂಪದಲ್ಲಿ ಪ್ರತಿಷ್ಠಿಸಲಾಗುತ್ತಿತ್ತೆಂದು ಗೊತ್ತಾಗುತ್ತದೆ.

### ಅಚ್ಯುತಾ ಅಥವಾ ಅಚ್ಛುಪ್ತಾದೇವಿಯ ಮೂರ್ತಿ :—

ಅಚ್ಯುತಾ ದೇವಿಯ ಒಂದು ಮೂರ್ತಿಯು ಬದನಾವರದಲ್ಲಿ (ಮಾಳವಾ) ಲಭಿಸಿದೆ. ದೇವಿಯು ಕುದುರೆಯ ಮೇಲೆ ಆರೂಢಳಾಗಿದ್ದಾಳೆ. ಇದಕ್ಕೆ ನಾಲ್ಕು ಕೈಗಳಿವೆ. ಎರಡೂ ಬಲಗೈಗಳು ಮುರಿದುಹೋಗಿವೆ. ಮೇಲಿನ ಎಡಗೈಯಲ್ಲಿ 'ಢಾಲ'ನ್ನು ತೋರಿಸಲಾಗಿದೆ. ಕೆಳಗಿನ ಕೈಯು ಕುದುರೆಯ ಕಡಿವಾಣದ ಹಗ್ಗವನ್ನು ಹಿಡಿದಿದೆ. ಬಲಗಾಲು 'ರಿಕೀಸ'ದಲ್ಲಿದೆ. ಎಡಗಾಲು ಆ ಕಾಲಿನ ತೊಡೆಯಮೇಲಿದೆ. ಈ ಪ್ರಕಾರ ಮೂರ್ತಿಯ ಮುಖವು ಎದುರಿಗಿದೆ. ಕುದುರೆಯದು ಎಡಮಗ್ಗಲಿಗಿದೆ. ದೇವಿಯ ಕೊರಳು ಹಾಗೂ ಕಿವಿಗಳಲ್ಲಿ ಅಲಂಕಾರಗಳು ಇವೆ. ಮೂರ್ತಿಯ ಮೇಲ್ಭಾಗದಲ್ಲಿ ಮಂಟಪದ ಆಕಾರವಿದೆ. ಅದರ ಮೇಲ ಮೂರು ಜಿನ ಪ್ರತಿಮೆಗಳು ಇವೆ. ನಾಲ್ಕೂ ಮೂಲೆಗಳಲ್ಲೂ ನಹ ಚಿಕ್ಕ ಚಿಕ್ಕ ಜೈನ ಆಕೃತಿಗಳು ಇವೆ. ಇದರ ಪಾಷಾಣ-ಖಂಡವು ೩ ಫೂಟು ೬ ಇಂಚು ಎತ್ತರವಿದೆ. ಇದರ ಮೇಲೆ ಒಂದು ಲೇಖವೂ ಸಹ ಇದೆ. ಅದಕ್ಕನುಸರಿಸಿ ಅಚ್ಯುತಾದೇವಿಯ ಪ್ರತಿಮೆಯನ್ನು ಸಂವತ್ ೧೨೨೯ ರಲ್ಲಿ (ಕ್ರಿ. ಶ. ೧೧೭೨) ಕೆಲವೊಂದು ಕುಟುಂಬದ ವ್ಯಕ್ತಿಗಳು ವರ್ಧಮಾನಪುರದ ?

ಶಾಂತಿನಾಥ ಚೈತ್ಯಾಲಯದಲ್ಲಿ ಪ್ರತಿಷ್ಠಿಸಿದ್ದರು. ಇದರಿಂದ ಈಗಿನ ಬದನಾವರವು ಪ್ರಾಚೀನ ವರ್ಧಮಾನಪುರದ ಅಪಭ್ರಂಶ ರೂಪವಾಗಿದೆ. ಇದೇ ವರ್ಧಮಾನಪುರದ ಶಾಂತಿನಾಥ ಮಂದಿರದಲ್ಲಿ ಶಕ ನಂ. ೭೦೫ (ಕ್ರಿ.ಶ. ೭೮೩) ರಲ್ಲಿ ಆಚಾರ್ಯ ಜಿನ ಸೇನನು ಹರಿವಂಶ-ಪುರಾಣದ ರಚನೆಯನ್ನು ಪೂರ್ಣಗೊಳಿಸಿದ್ದನು. ಇದನ್ನು ಬೇರೊಂದು ಲೇಖದಲ್ಲಿ ನಾನು ವಿವರಿಸಿ, ಈ ಶಾಂತಿನಾಥ ಮಂದಿರದ ವಿಷಯವನ್ನೂ ಸಹ ಪ್ರಸ್ತಾಪಿಸಿದ್ದೇನೆ.

## ನೈಗಮೇಶನ (ನೈಮೇಶ)ಮೂರ್ತಿ :—

ಮಥುರೆಯ ಕಂಕಾಲಿ ದಿನ್ನೆಯಲ್ಲಿ ಲಭಿಸಿದ ಭಗ್ನಾವಶೇಷಗಳಲ್ಲಿ ಒಂದು ತೋರಣದ ತುಂಡಿನ ಮೇಲೆ ನೇಮೇಶ ದೇವನ ಪ್ರತಿಮೆಯನ್ನು ನಿರ್ಮಿಸಲಾಗಿದೆ ಅದರ ಕೆಳಭಾಗದಲ್ಲಿ ಭಗವನೇಮೇಸೊ ಎಂದು ಬರೆಯಲಾಗಿದೆ. ಈ ನೇಮೇಶ ದೇವನಅನೇಕ ಮೂರ್ತಿಗಳು ಮಥುರಾ ಸಂಗ್ರಹಾಲಯದಲ್ಲಿ ಇವೆ. ಕುಷಾಣ ಕಾಲದ ಒಂದು ಮೂರ್ತಿಯು (ಈಗ) ಒಂದು ಫೂಟು ಮೂರುವರೆ ಇಂಚು ಎತ್ತರವಾಗಿದೆ. ಮುಖಾಕೃತಿಯು ಕುರಿಯ ಆಕಾರದಲ್ಲಿದೆ. ಅದು ಎಡಗೈಯ್ಯಲ್ಲಿ ಎರಡು ಶಿಶುಗಳನ್ನು ಧಾರಣಮಾಡಿದೆ. ಅವು ಅದರ ನಡುವಿನ ಕೆಳಗೆ ನೇತಾಡುತ್ತಲಿವೆ. ಬಹಳ ಮಾಡಿ ಅದರ ಹೆಗಲ ಮೇಲೆಯೂ ಸಹ ಬಾಲಕನಿದ್ದಿರಬೇಕು ಆದರೆ ಅದು ಒಡೆದುಹೋಗಿದೆ. ಕೇವಲ ಅದರ ಕಾಲು ಮಾತ್ರ ನೇತಾಡುತ್ತಲಿದೆ. ಇನ್ನೊಂದು ಚಿಕ್ಕ ಮೂರ್ತಿಯು (ನಂ.೯೦೯) ನಾಲ್ಕುವರೆ ಇಂಚದ್ದಿದೆ. ಇದರಲ್ಲಿ ಹೆಗಲ ಮೇಲೆ ಮೂರ್ತಿಯು ಕುಳಿತಿ ರುವಂತೆ ತೋರಿಸಲಾಗಿದೆ. ಇದೂ ಕುಷಾಣ ಕಾಲದ ಮೂರ್ತಿಯಾಗಿದೆ. ಮೂರನೆಯ ಮೂರ್ತಿಯು ಎಂಟೂವರೆ ಇಂಚು ಎತ್ತರವಿದೆ. ಇದರ ಎರಡೂ ಹೆಗಲ ಮೇಲೆ ಒಬ್ಬೊಬ್ಬ ಬಾಲಕನು ಕುಳಿತಿದ್ದಾನೆ, ಬಲಗೈಯು ಅಭಯ ಮುದ್ರೆಯಲ್ಲಿದೆ. ಎಡಗೈಯಲ್ಲಿ ಬಂಗಾರದ ನಾಣ್ಯಗಳ ಚೀಲದಂಥದೇನೋ ಇದೆ. ಹೆಗಲ ಮೇಲೆ ಬಾಲಕರನ್ನೂ ಕೂಡಿಸಿಕೊಂಡ ನೇಗಮೇಶನ ಇನ್ನೆರಡು ಮೂರ್ತಿಗಳು (ಸಂ ೧೧೫೧, ೨೪೮೨) ಇವೆ. ಒಂದು ಮೂರ್ತಿಯ ಶಿರವು ಮಾತ್ರ ಸುರಕ್ಷಿತವಿದೆ (ನಂ. ೧೦೦೧). ಇನ್ನೊಂದು ಬೇರೆ ಮೂರ್ತಿಯು (ನಂ. ೨೫೪೭) ಒಂದು ಫೂಟು ಐದು ಇಂಚು ಎತ್ತರವಿದೆ. ಇದರಲ್ಲಿ ಪ್ರತಿಯೊಂದು ಹೆಗಲ ಮೇಲೆ ಎರಡೆರಡು ಬಾಲಕರೂ ಕುಳಿ ತಂತೆ ತೋರಿಸಲಾಗಿದೆ. ಬಲಗೈಯು ಅಭಯ ಮುದ್ರೆಯಲ್ಲಿದೆ.

ಕೆಲವೊಂದು ಮೂರ್ತಿಗಳು ಅಜಾಮುಖ (ಆಡಿನ ಮುಖದ) ದೇವಿಯವರಾ ಗಿವೆ. ಒಂದು ಮೂರ್ತಿಯು (ಈ ೨) ಒಂದು ಫೂಟು ನಾಲ್ಕು ಇಂಚು ಎತ್ತರವುಳ್ಳ ದಿದೆ. ಇದರಲ್ಲಿ ದೇವಿಯ ಸ್ತನಗಳು ಸ್ಪಷ್ಟವಾಗಿವೆ. ಅದರ ಎಡಗೈಯ್ಯಲ್ಲಿ ಒಂದು ದಿಂಬು ಇರುತ್ತದೆ. ಅದರ ಮೇಲೆ ಒಬ್ಬ ಬಾಲಕನು ತನ್ನ ಎರಡೂ ಕೈಗಳನ್ನು ಎದೆಯ ಮೇಲೆ ಇಟ್ಟುಕೊಂಡಿದ್ದು ನೇತಾಡುತ್ತಲಿದ್ದಾನೆ. ದೇವಿಯ ಬಲಗೈಯು

ಖಂಡಿತವಾಗಿದೆ. ಆದರೆ ಅದು ಹೆಗಲ ಮೇಲೆ ಎತ್ತಿದ್ದಿರಬೇಕು. ಇದೇ ಪ್ರಕಾರದ ಇನ್ನೊಂದು ಮೂರ್ತಿಯಲ್ಲಿ (ಈ ೩) ಸ್ತನಗಳ ಮೇಲೆ ಹಾರವು ನೇತಾಡುತ್ತಲಿದೆ. ಮೂರನೆಯ ಮೂರ್ತಿಯು (ನಂ. ೭೯) ಎಂಟುವರೆ ಇಂಚು ಎತ್ತರವುಳ್ಳದ್ದಾಗಿದೆ. ದೇವಿಯು ಆಡಿನ ಮುಖದ್ದಿದೆ. ಆದರೆ ಅದು ಮಾವ ಬಾಲಕನನ್ನು ಸಹ ಧರಿಸಿಲ್ಲ. ಅದರ ಬಲಗೈಯಲ್ಲಿ ಕಮಾಲ ಮತ್ತು ಎಡಗೈಯಲ್ಲಿ 'ಪೇಲೆ' (ಪಾತ್ರೆ) ಇದೆ. ಇನ್ನೊಂದು ಮೂರ್ತಿಯು (ಸಂ.೧೨೧೦) ಹತ್ತು ಇಂಚು ಎತ್ತರವಿದೆ. ಇದರಲ್ಲಿ ದೇವಿಯು ತನ್ನ ಎಡ ನಡುವಿನ ಮೇಲೆ ಬಾಲಕನನ್ನು ಕೂಡಿಸಿ ಕೊಂಡಿದ್ದಾಳೆ. ಎಡಗೈಯಿಂದ ಅವ ನನ್ನು ಹಿಡಿದಿದ್ದಾಳೆ. ಬಲಗೈಯು ಅಭಯ ಮುದ್ರೆಯಲ್ಲಿದೆ. ತಲೆಯ ಮೇಲೆ ಐದುವರೆ ಇಂಚು ವ್ಯಾಸದ ಪ್ರಭಾವಲಯವೂ ಕೂಡ ಇದೆ. ಸ್ತನಗಳ ಮೇಲೆ ಸುಸ್ಪಷ್ಟವಾದ ಹಾರವೂ ಸಹ ಇದೆ. ಇನ್ನೊಂದು ಚಿಕ್ಕ ಮೂರ್ತಿಯು ವಿಶೇಷ ಉಲ್ಲೇಖನೀಯ ವಾಗಿದೆ. ಇದು ಕೇವಲ ಐದು ಇಂಚು ಎತ್ತರವಿದೆ. ಆದರೆ ಇದರಲ್ಲಿ ಅಜಾಮುಖ ದೇವಿಯ ನಾಲ್ಕು ಭುಜಗಳು ಇವೆ. ಮತ್ತು ಅದು ಒಂದು ಪರ್ವತದ ಮೇಲೆ ಲಲಿ ತಾಸನದಲ್ಲಿ ವಿರಾಜಮಾನವಾಗಿದೆ. ಇದರ ಎಡ ನಡುವಿನ ಮೇಲೆ ಬಾಲಕನು ಕುಳಿತಿ ದ್ದಾನೆ. ಅವನು ಪೇಲೆಯಲ್ಲಿ ಹಾಲನ್ನು ಕುಡಿಯುತ್ತಿದ್ದಾನೆ. ಆ ಹಾಲಿನ ಪಾತ್ರೆಯು ಅವನ ಕೈಯಲ್ಲಿದೆ. ದೇವಿಯ ಕೈಯಲ್ಲಿ ತ್ರಿಶೂಲ, ಪೇಲೆ ಮತ್ತು ಪಾಶಗಳು ಇವೆ. ಅದರ ಬಲಗಾಲಿನ ಕೆಳಗೆ ಅದರ ವಾಹನದ ಆಕೃತಿಯು ಸ್ವಲ್ಪ ಅಸ್ಪಷ್ಟವಾಗಿದೆ. ಅದು ಬಹುಶಃ ಎತ್ತು ಅಥವಾ ಎಮ್ಮೆಯಾಗಿರಬೇಕು.

ಕೆಲವೊಂದು ಮೂರ್ತಿಗಳು ಹೀಗೂ ಇವೆ. ಅವುಗಳಲ್ಲಿ ಮಾತೃದೇವಿ ಅಜಾ ಮುಖವಾಗಿಲ್ಲ. ಆದರೆ ಸ್ತ್ರೀ ಮುಖದಲ್ಲಿವೆ. ಇಂಥ ಒಂದು ಮೂರ್ತಿಯು (ಈ ೪) ಒಂದು ಫೂಟು ಒಂದು ಇಂಚು ಎತ್ತರವಾಗಿದೆ. ಇದರಲ್ಲಿ ದೇವಿಯು ಒಂದು ಶಿಶುವಿನ ಮೂರ್ತಿಯನ್ನು ತೊಡೆಯ ಮೇಲೆ ಕೂಡಿಸಿಕೊಂಡಿದ್ದಾಳೆ. ದೇವಿಯ ಬಲಗೈಯು ಅಭಯ ಮುದ್ರೆಯಲ್ಲಿದೆ ಮೂರ್ತಿಯು ಕುಶಾನ ಕಾಲದ್ದಿದೆ. ಇದೇ ಪ್ರಕಾರ ಬಾಲಕ ನನ್ನು ಆಡಿಸುವ ಇನ್ನೊಂದು ಮೂರ್ತಿಯೂ ಸಹ ಇದೆ. ಬಾಲಕನ ಸಹಿತ ಇರುವ ಇನ್ನೊಂದು ಉಲ್ಲೇಖನೀಯ ಮೂರ್ತಿಯು (ನಂ. ೨೭೮) ಒಂದು ಫೂಟು ಏಳುವರೆ ಇಂಚು ಎತ್ತರ ಮತ್ತು ಒಂಭತ್ತು ಇಂಚು ಅಗಲವಿದೆ. ಇದರಲ್ಲಿ ಒಬ್ಬ ಪುರುಷ ಹಾಗೂ ಒಬ್ಬ ಸ್ತ್ರೀ ಜೊತೆ ಜೊತೆಯ ಒಂದು ವೃಕ್ಷದ ಕೆಳಗೆ ಲಲಿತಾಸನದಲ್ಲಿ ಕುಳಿತದ್ದಿದೆ.ಗಿಡದ ಮೇಲ್ ಭಾಗದಲ್ಲಿ ಚಿಕ್ಕದಾದ ಧ್ಯಾನಸ್ಥ ಜಿನ ಮೂರ್ತಿಯನ್ನು ನಿರ್ಮಿಸಲಾಗಿದೆ. ವೃಕ್ಷದ ಟೊಂಗೆಯ ಮೇಲೆ ಓತೀಕಾಟವು ಏರುತ್ತಿದ್ದುದನ್ನು ತೋರಿಸಿದೆ. ಪಾದ ಪೀಠದ ಮೇಲೆ ಇನ್ನೊಂದು ಆಕೃತಿಯು ಇದೆ. ಅದರ ಎಡಗಾಲು ಮೇಲೆ ಎತ್ತಿದ್ದು ಇದೆ. ಮತ್ತು ಅದರ ಎರಡೂ ಮಗ್ಗಲಿಗೆ ಆರು ಜನ ಬಾಲಕರು ಆಡುತ್ತಲಿದ್ದಾರೆ. ಇದೇ ಪ್ರಕಾರದ ಮೂರ್ತಿಯೊಂದು ಚಂದೇರೀ ಯಲ್ಲಿಯೂ (ಮ. ಪ್ರ.) ಕಂಡು ಬರುತ್ತದೆ. ಹಾಗೆಯೇ ಇನ್ನೊಂದು ಮೂರ್ತಿಯು ಪ್ರಯಾಗ ನಗರ ಸಭೆಯ ಸಂಗ್ರ

ಹಾಲಯದಲ್ಲಿಯೂ ಇದೆ.

ಮೇಲೆ ಹೇಳಿದ ಸಮಸ್ತ ಮೂರ್ತಿಗಳು ಮೂಲದಲ್ಲಿ ಒಂದು ಜೈನ ಅಭ್ಯಾನಕ್ಕೆ ಸಂಬಧಿಸಿದವುಗಳಾಗಿವೆ. ಅಲ್ಲದೆ ತಮ್ಮ ವಿಕಾಸ ಕ್ರಮವನ್ನೂ ಸಹ ಪ್ರದರ್ಶಿಸುತ್ತವೆ. ಕಲ್ಪಸೂತ್ರಕ್ಕೆ ಅನುಸರಿಸಿ ಇಂದ್ರನ ಆಜ್ಞೆಯಿಂದ ಅವನ ಹರಿ ನೈಗಮೇಶ ಎಂಬ ಹೆಸರಿನ ಅನುಚರನು ಮಹಾವೀರನನ್ನು ಗರ್ಭ ರೂಪದಲ್ಲಿ ದೇವಾನಂದೆಯ ಹೊಟ್ಟೆಯಿಂದ ತೆಗೆದು ತ್ರಿಶಲಾ ರಾಣಿಯ ಹೊಟ್ಟೆಯಲ್ಲಿ ಸ್ಥಾಪಿಸಿದ್ದನು. ಈ ಪ್ರಕಾರ ಹರಿನೈಗಮೇಶಿಯು ಸಂಬಂಧವು ಬಾಲ-ರಕ್ಷೆಯೊಡನೆ ಬಂದುದು ತಿಳಿಯುತ್ತದೆ. ಈ ಹರಿನೈಗಮೇಶನ ಮುಖಾಕೃತಿಯು ಪ್ರಾಚೀನ ಚಿತ್ರ ಮತ್ತು ಪ್ರತಿಮೆಗಳಲ್ಲಿ ಕುರಿ ಯಂತೆ ಕಂಡುಬರುತ್ತದೆ. ನೇಮಿನಾಥ ಚರಿತ್ರದಲ್ಲಿ ಕಥೆಯೊಂದಿದೆ: ಸತ್ಯಭಾಮೆಗೆ ಪ್ರದ್ಯುಮ್ನನಂಥ ಪುತ್ರನನ್ನು ಪಡೆಯುವ ಅಪೇಕ್ಷೆಯಿತ್ತು. ಅದನ್ನು ಪೂರ್ಣಗೊಳಿಸುವ ದಕ್ಕಾಗಿ ಕೃಷ್ಣನು ನೈಗಮೇಶ ದೇವನನ್ನು ಆರಾಧಿಸಿದನು. ಆಗ ಅವನು ಪ್ರಕಟ ನಾಗಿ ಒಂದು ಹಾರವನ್ನು ಕೊಟ್ಟನು. ಅದನ್ನು ಧರಿಸುವುದರಿಂದ ಸತ್ಯಭಾಮೆಯ ಮನಸ್ಸಿನ ಇಚ್ಛೆಯು ಪೂರ್ಣವಾಯಿತು. ಈ ಆಖ್ಯಾನದಿಂದ ನೈಗಮೇಶ ದೇವ ನಿಗೂ ಸಂತಾನೋತ್ಪತ್ತಿಗೂ ವಿಶೇಷ ಸಂಬಂಧವಿರುವಂತೆ ಕಂಡುಬರುತ್ತದೆ. ಈ ದೇವ ದೇವಿಯರು ಬಹುತರ ಹಾರವನ್ನು ಧರಿಸುವ ಪರಿಪಾಠವು ಎಲ್ಲ ಕಡೆಗೂ ಇದ್ದಂತೆ ತೋರುತ್ತದೆ. ಈ ಮೂರ್ತಿಗಳಲ್ಲಿ ಕಂಡುಬರುವ ಹಾರಗಳ–ಕೆತ್ತನೆಯು ಈ ಕಥಾ ನಕದೊಳಗಿನ ಹಾರದ ಪ್ರತೀಕವಾಗಿದೆ. ಡಾ. ವಾಸುದೇವ ಶರಣನು ಉಪಲಬ್ಧ ಮೂರ್ತಿಗಳ ಮೇಲಿಂದ ಸಂತಾನ ಪಾಲನದಲ್ಲಿ ದೇವನಿಗಿಂತ ದೇವಿಯ ಉಪಾಸನೆಯು ಹೆಚ್ಚು ಔಚಿತ್ಯಪೂರ್ಣವಾಗಿದೆಯೆಂದು ಅನುಮಾನ ಮಾಡುತ್ತಾನೆ. ಹೀಗಾಗಿ ದೇವನ ಸ್ಥಾನದಲ್ಲಿ ದೇವಿಯ ಉಪಾಸನೆಯ ಕಲ್ಪನೆಯು ಪ್ರಾರಂಭವಾಯಿತು. ಆ ಮೇಲೆ ಆಡಿನ ಮುಖವನ್ನು ಪರಿತ್ಯಜಿಸಿ ಸುಂದರ ಸ್ತ್ರೀ–ಮುಖದ ರೂಪವನ್ನು ಈ ದೇವದೇವಿಯರಿಗೆ ಕೊಡಲಾಯಿತು. ತಿರುಗಿ ದೇವ–ದೇವಿಯರಿಬ್ಬರನ್ನೂ ಬಾಲಕರ ಸಹಿತ ತೋರಿಸುವ ಪರಿಪಾಠವು ಉಂಟಾಯಿತು. (ಜೈನ ಎಂಟೀ. ೧೯೩೭ ಪ್ರ. ೩೭ ಅಡಿ) ಶಿಶುವಿನ ಪಾಲನ–ಪೋಷಣಗಳಲ್ಲಿ ಕುರಿಯ ಹಾಲಿಗೆ ಮಹತ್ವವಿರುವುದ ರಿಂದ ಈ ಅಜಾಮುಖದೇವಿಯ ಪ್ರತಿಷ್ಠೆಯಾಗಿರುವ ಸಂಭವವಿರಬೇಕೆ ?

ದೇವಗಢದ ಮಂದಿರಗಳಲ್ಲಿಯೂ ಚಂದ್ರಪುರಿಯಲ್ಲಿ (ಝಾಂಸಿ) ಲಭಿಸಿದ ಮೂರ್ತಿಗಳಲ್ಲಿಯೂ ಒಂದು ವೃಕ್ಷದ ಕೆಳಗೆ ಹತ್ತಿರ–ಹತ್ತಿರ ಕುಳಿತ ಪುರುಷ ಹಾಗೂ ಸ್ತ್ರೀಯರನ್ನು ತೋರಿಸಲಾಗಿದೆ. ಇವರಿಬ್ಬರೂ ಒಬ್ಬ ಬಾಲಕನನ್ನು ಆಡಿಸುತ್ತಿದ್ದಾರೆ. ಪುರಾತತ್ವ ವಿಭಾಗದ ಹಿಂದಿನ ಸಂಚಾಲಕನಾದ ದಯಾರಾಮ ಸಾಹನೀಯ ಮತವು ಇದು ಭೋಗಭೂಮಿಯ ಯುಗಲಗಳ ದೃಶ್ಯವಾಗಿದೆ ಎಂದಿದೆ.

# ಜೈನ ಚಿತ್ರಕಲೆ

## ಚಿತ್ರಕಲೆಯ ಪ್ರಾಚೀನ ಉಲ್ಲೇಖ :—

ಭಾರತವರ್ಷದಲ್ಲಿ ಚಿತ್ರಕಲೆಗೂ ಕೂಡ ಬಹು ಪ್ರಾಚೀನ ಇತಿಹಾಸವಿದೆ. ಸಾಹಿತ್ಯದಲ್ಲಿ ಈ ಕಲೆಯ ಉಲ್ಲೇಖವು ಬಹಳ ಪ್ರಾಚೀನ ಕಾಲದಿಂದಲೂ ಇದ್ದುದು ಕಂಡುಬರುತ್ತದೆ. ಆದರೆ ಈ ಕಲೆಯ ಸುಂದರತಮ ಉದಾಹರಣೆಗಳು ನಮಗೆ ಅಜಂತಾ ಗುಹೆಯಲ್ಲಿ ದೊರೆಯುತ್ತವೆ. ಇವು ಗುಪ್ತ ಕಾಲದ ಬೌದ್ಧ ಗುಹೆಗಳಾಗಿವೆ. ಇಲ್ಲಿ ಕಂಡುಬರುವ ಕಲೆಯ ವಿಕಸಿತ ರೂಪದಿಂದ, ಆ ಕಲೆಯು ಅದಕ್ಕೂ ಪೂರ್ವಕಾಲದಿಂದಲೂ ಭಾರತೀಯ ಚಿತ್ರಕಾರರಿಂದ ಇಂಥ ಅನೇಕ ಭಿತ್ತಿ ಚಿತ್ರಗಳನ್ನು ಬರೆಯಲ್ಪಡುವುದರಿಂದ ಪರಿಣತಾವಸ್ಥೆಯನ್ನು ಹೊಂದಿರಬೇಕೆಂದು ಕಂಡು ಬರುತ್ತದೆ. ಆದರಿಂದಲೇ ಈ ಕಲೆಯಲ್ಲಿ ಇಂಥ ಕೌಶಲ್ಯ ಮತ್ತು ಅಭ್ಯಾಸಗಳು ಉಂಟಾಗಿ, ಅವುಗಳ ಪ್ರದರ್ಶನವು ಈ ಗುಹೆಯಲ್ಲಿ ಆಗಿದೆ. ಆದರೆ ಚಿತ್ರಕಲೆಯ ಆಧಾರಭೂತ ಸಾಮಗ್ರಿಯೂ ಸಹ ಅವುಗಳ ಪ್ರಕೃತಿಗನುಸರಿಸಿ ಬಹಳ ಲಲಿತವೂ ಕೋಮಲವೂ ಆಗಿವೆ. ಭಿತ್ತಿಯ ಲೇಪ ಮತ್ತು ಅದರ ಮೇಲೆ ಇರುವ ಕಲಾಕಾರರ ಕುಂಚದ ರೇಖೆ, ರಂಗವಿನ್ಯಾಸಗಳು ಅಪೂರ್ವವಾಗಿವೆ. ಕಾಲ, ಬಿಸಿಲು, ಮಳೆ, ಗಾಳಿ ಮೊದಲಾದ ಪ್ರಾಕೃತಿಕ ಶಕ್ತಿಗಳು ಕಲಾತ್ಮಕತೆಯನ್ನು ಪಾಷಾಣಮಯಕೃತಿಗಳಾದ ವಾಸ್ತುಕಲೆಯಲ್ಲಾಗಲಿ, ಮೂರ್ತಿಕಲೆಯಲ್ಲಾಗಲಿ ಇಷ್ಟು ಸ್ಪಷ್ಟವಾಗಿ ವ್ಯಕ್ತಪಡಿಸಲು ಸಾಧ್ಯವಿಲ್ಲ. ಈ ಕಾರಣದಿಂದ ಗುಪ್ತಕಾಲಕ್ಕಿಂತ ಮುಂಚಿನ ಚಿತ್ರಕಲಾತ್ಮಕ ಉದಾಹರಣೆಗಳು ನಷ್ಟವಾಗಿರಬೇಕು. ಅಥವಾ ಎಲ್ಲಿಯಾದರೂ ಉಳಿದುಕೊಂಡಿದ್ದರೆ ಜೀರ್ಣ-ಶೀರ್ಣವಾಗಿರಬೇಕು. ಆ ಅವಸ್ಥೆಯಲ್ಲಿ ಅವುಗಳ ಮೌಲಿಕ ಸ್ವರೂಪದ ಸ್ಪಷ್ಟಜ್ಞಾನವನ್ನು ಪಡೆಯುವುದು ಅಸಂಭವವಾಗಿದೆ.

ಪ್ರಾಚೀನತಮ ಜೈನ ಸಾಹಿತ್ಯದಲ್ಲಿ ಚಿತ್ರಕಲೆಯ ಉಲ್ಲೇಖವು ಅನೇಕ ಕಡೆಗೆ ಬಂದುದು ಕಂಡುಬರುತ್ತದೆ. ಆರನೆಯದಾದ ಜೈನ ಶ್ರುತಾಂಗನಾಯಾಧಮ್ಮ-ಕಹಾಜದಲ್ಲಿ ಧಾರಣೀದೇವಿಯ ಶಯನಾಗಾರದ ಸುಂದರ ವರ್ಣನೆಯು ಇದೆ. ಅದರ ಮೆಲ್ಛಾವಣಿ ಬಳ್ಳಿಗಳು, ಪುಷ್ಪಲತೆಗಳು ಇವೇ ಮೊದಲಾದ ಉತ್ತಮ ಚಿತ್ರಗಳಿಂದ ಅಲಂಕೃತವಾಗಿತ್ತು (ನಾ.ಕ. ೧೯). ಇದೇ ಶ್ರುತಾಂಗದಲ್ಲಿ ಮಲ್ಲದಿನ್ನ ರಾಜಕುಮಾರನಿಂದ ತನ್ನ ಪ್ರಮದ ವನದಲ್ಲಿ ಚಿತ್ರಶಾಲೆಯನ್ನು ನಿರ್ಮಿಸಿಕೊಂಡುದರ ವರ್ಣನೆಯಿದೆ. ಅವನು ವಿವಿಧ ಚಿತ್ರಕಾರರನ್ನು ಕರೆಯಿಸಿದನು. ಅವರಿಗೆ ಹೇಳಿದನು :— ನೀವು ನನಗಾಗಿ ಒಂದು ಚಿತ್ರಸಭೆಯನ್ನು ನಿರ್ಮಿಸಿರಿ. ಅದನ್ನು ಹಾವ, ಭಾವ, ವಿಲಾಸ, ವಿಭ್ರಮಗಳಿಂದ ಸುಸಜ್ಜಿತಗೊಳಿಸಿರಿ. ಚಿತ್ರಕಾರ ಶ್ರೇಣಿಯು ಈ ಮಾತನ್ನು ಸ್ವೀಕರಿಸಿತು. ಅವರು ತಮ್ಮ ತಮ್ಮ ಮನೆಗೆ ಹೋಗಿ, ಕುಂಚಗಳನ್ನೂ ಬಣ್ಣಗಳನ್ನೂ ತಕ್ಕೊಂಡು ಬಂದು, ಚಿತ್ರರಚನೆಯಲ್ಲಿ ಪ್ರವೃತ್ತರಾ

ದರು. ಅವರು ಗೋಡೆಗಳ ವಿಭಾಗ ಮಾಡಿಕೊಂಡರು. ಭೂಮಿಯನ್ನು ಲೇಪಾದಿ ಗಳಿಂದ ಸಿದ್ಧಗೊಳಿಸಿದರು. ಆ ಮೇಲೆ ಅಂಥ ಚಿತ್ರಗಳನ್ನು ಬರೆದರು. ಅವರಲ್ಲಿ ಒಬ್ಬ ಚಿತ್ರಕಾರನಿಗೆ ಯಾವುದೇ ದ್ವಿಪದ ಮತ್ತು ಚತುಷ್ಪದ ಪ್ರಾಣಿಯ ಒಂದಂಗ ವನ್ನು ಮಾತ್ರ ನೋಡಿದರೆ ಸಾಕು ಅದರ ಪೂರ್ಣ ಆಕಾರವನ್ನು ಚಿತ್ರಿಸುವ ಸಿದ್ಧಿಯು ದೊರಕಿಕೊಂಡಿತ್ತು. ಅವನು ರಾಜಕುಮಾರಿ ಮಲ್ಲಿಯ ಚರಣಾಂಗುಷ್ಠವನ್ನು ಪರದೆಯ ಕೆಳಭಾಗದಿಂದ ಕಂಡು, ಅವಳ ಯಥಾವತ್ ಸರ್ವಾಂಗಾಕೃತಿಯನ್ನು ಚಿತ್ರ ದಲ್ಲಿ ಬರೆದುಬಿಟ್ಟನು, (ನಾ. ಕ. ೮, ೭೮). ಇದೇ ಶ್ರುತಾಂಗದಲ್ಲಿ ಬೇರೆಡೆಗೆ (೧೩, ೯೯) ಮಣಿಕಾರಶ್ರೇಷ್ಠಿ ನಂದನಿಂದ ರಾಜಗೃಹದ ಉದ್ಯಾನದಲ್ಲಿ ಒಂದು ಚಿತ್ರಶಾಲೆಯನ್ನು ನಿರ್ಮಿಸಿದುದರ ಉಲ್ಲೇಖವಿದೆ. ಇದರಲ್ಲಿ ನೂರಾರು ಕಂಭಗಳಿ ದ್ದುವು. ವಿವಿಧ ಪ್ರಕಾರದ ಕಟ್ಟಿಗೆಯ ಕೆಲಸ (ಕಾಷ್ಠಕರ್ಮ) ಸುಣ್ಣ–ಗಚ್ಚುಗಳ ಕೈಕೆಲಸ, ಚಿತ್ರಕರ್ಮ (ಬಣ್ಣದ ಕೆಲಸ), ಲೇಪ್ಯಕರ್ಮ (ಮಣ್ಣಿನ ಆಕೃತಿಗಳು), ನಾನಾ ದ್ರವ್ಯಗಳನ್ನು ಕೂಡಿಸಿ, ವೇಷ್ಟಿತಗೊಳಿಸಿ, ತುಂಬಿ, ಜೋಡಿಸಿ ಮಾಡಿದ ವಿವಿಧ ಆಕೃತಿಗಳನ್ನು ನಿರ್ಮಾಣ ಮಾಡಿತ್ತು. ಬೃಹತ್‌ಕಲ್ಪಸೂತ್ರ ಭಾಷ್ಯ ದಲ್ಲಿ (೨, ೫, ೨೬೨) ಒಬ್ಬ ಗಣಿಕೆಯ ಕಥಾನಕವಿದೆ. ಅವಳು ೭೨ ಕಲೆಗಳಲ್ಲಿ ಪ್ರವೀಣಳಿದ್ದಳು. ಅವಳು ತನ್ನ ಚಿತ್ರ ಸಭೆಯಲ್ಲಿ ವಿವಿಧ ಪ್ರಕಾರದ ಹಾಗೂ ನಾನಾ ಜಾತಿಯ ಮತ್ತು ವ್ಯವಸಾಯಗಳ ಪುರುಷರ ಚಿತ್ರಗಳನ್ನು ಬರೆಯಿ ಸಿದ್ದಳು. ಅವಳ ಹತ್ತಿರ ಬರುವವರಿಗೆ ಆ ಚಿತ್ರಶಾಲೆಯನ್ನು ತೋರಿಸುತ್ತಿದ್ದಳು. ಅಲ್ಲಿಯ ಚಿತ್ರಗಳನ್ನು ಕಂಡು, ಅವರು ವ್ಯಕ್ತಪಡಿಸುವ ಪ್ರತಿಕ್ರಿಯೆಗಳಿಂದ ಅವರ ರುಚಿ ಹಾಗೂ ಸ್ವಭಾವಗಳನ್ನು ತಿಳಿಯುತ್ತಿದ್ದಳು. ಅದಕ್ಕನುಸರಿಸಿ ಅವರೊಡನೆ ವ್ಯವಹರಿಸುತ್ತಿದ್ದಳು. ಆವಶ್ಯಕ ಟೀಕೆಯ ಒಂದು ಪದ್ಯದಲ್ಲಿ ಚಿತ್ರಕಾರನ ಉದಾ ಹರಣೆಯನ್ನು ಕೊಟ್ಟು,ಯಾವುದಾದರೊಂದು ವಿಷಯದಲ್ಲಿ ಪೂರ್ಣ ಪ್ರವೀಣತೆಯನ್ನು ಪಡೆಯಬೇಕಾದರೆ ತುಂಬ ಅಭ್ಯಾಸಬೇಕೆಂದು ಹೇಳಿದೆ. ಚೂರ್ಣಿಕಾರನು ಈ ವಿಷಯ ವನ್ನು ವಿವರಿಸುತ್ತ, ನಿರಂತರ ಅಭ್ಯಾಸದಿಂದ ಚಿತ್ರಕಾರನು ರೂಪದ ಸಮುಚಿತ ಪ್ರಮಾ ಣವನ್ನಲ್ಲದೆ ಅಳತೆ–ಹೋಲಿಕೆಗಳನ್ನೂ ಕೂಡ ಸಾಧಿಸಿಕೊಳ್ಳುತ್ತಾನೆ. ಒಬ್ಬ ಚಿತ್ರ ಕಾರನ ಹಸ್ತ–ಕೌಶಲ್ಯದ ಉದಾಹರಣೆಯನ್ನು ಕೊಡುತ್ತ ಆವಶ್ಯಕ ಟೀಕೆಯಲ್ಲಿ ಒಬ್ಬ ಶಿಲ್ಪಿಯು ನವಿಲುಗರಿಯನ್ನು ಬಹು ಕೌಶಲ್ಯದಿಂದ ಚಿತ್ರಿಸಿದ್ದನೆಂದೂ,ಅದನ್ನು ರಾಜನು ನಿಜವಾದ ಗರಿಯೆಂದು ಭಾವಿಸಿ ಕೈಯಲ್ಲಿ ತಕ್ಕೊಳ್ಳಲು ಯತ್ನಿಸಿದನೆಂದೂ ವಿವರಿಸಲಾ ಗಿದೆ. ಆವಶ್ಯಕ ಚೂರ್ಣಿಕಾರನು ಸೂತ್ರದ ಅರ್ಥವನ್ನು ಸ್ಪಷ್ಟಗೊಳಿಸುವುದರಲ್ಲಿ ಭಾಷಾ ಹಾಗೂ ವಿಭಾಷಾಗಳಿಗೆ ಇರುವ ಸ್ಥಾನವೇ ಚಿತ್ರಕಲೆಯಲ್ಲಿಯೂ ಇದೆಯೆಂದು ಹೇಳಿ ದ್ದಾನೆ. ಚಿತ್ರಕಾರನು ಯಾವಾಗ ಯಾವುದೇ ರೂಪದ ಸಂತುಲಿತ ಅಳತೆಯನ್ನು ನಿಶ್ಚಯ ಮಾಡಿಕೊಳ್ಳುತ್ತಾನೆಯೋ ಆಗ ಅದು ಭಾಷಾ ಎನಿಸುತ್ತದೆ.ಪ್ರತ್ಯೇಕ ಅಂಗೋಪಾಂಗ ಗಳ ಪ್ರಮಾಣವನ್ನು ನಿಶ್ಚಿತ ಮಾಡಿಕೊಳ್ಳುವಿಕೆಯು ವಿಭಾಷಾ ಎನಿಸುತ್ತದೆ.

ಯಾವಾಗ ನೇತ್ರಾದಿ ಅಂಗಗಳನ್ನು ಚಿತ್ರಿಸಿಕೊಳ್ಳುವನೋ ಆಗ ಅದು ವಾರ್ತಾ ಎನಿಸುತ್ತದೆ. ಈ ಪ್ರಕಾರ ಜೈನ ಸಾಹಿತ್ಯಿಕ ಉಲ್ಲೇಖಗಳಿಂದ ಜೈನ ಪರಂಪರೆಯಲ್ಲಿ ಚಿತ್ರಕಲೆಯ ಪ್ರಚಾರವು ಅತಿ ಪ್ರಾಚೀನ ಕಾಲದಲ್ಲಿಯೇ ಆಗಿತ್ತೆಂದು ತಿಳಿಯುತ್ತದೆ. ಅಲ್ಲದೆ ಆ ಕಲೆಯು ಸುವಿಕಸಿತ ಹಾಗೂ ಸುವ್ಯವಸ್ಥಿತವೂ ಆಗಿತ್ತು.

ಭಿತ್ತಿ–ಚಿತ್ರ:—

ಜೈನ ಚಿತ್ರಕಲೆಯ ಎಲ್ಲಕ್ಕೂ ಪ್ರಾಚೀನ ಉದಾಹರಣೆಯು ನಮಗೆ ತಮಿಳ ಪ್ರದೇಶದ ತಂಜಾವೂರ ಸಮೀಪದಲ್ಲಿರುವ ಸಿತ್ತನ್ನವಾಸಲದ ಗುಹೆಗಳಲ್ಲಿ ದೊರೆಯುತ್ತದೆ. ಇದರ ಉಲ್ಲೇಖವನ್ನು ಹಿಂದೆ ಮಾಡಿದೆ. ಒಂದು ಕಾಲದಲ್ಲಿ ಈ ಗುಹೆಯ ಗೋಡೆಗಳು ಹಾಗೂ ಮೇಲ್ಛಾವಣಿಗಳೆಲ್ಲ ಚಿತ್ರಗಳಿಂದ ಅಲಂಕೃತಗೊಂಡಿದ್ದುವು. ಗುಹೆಯ ಈ ಅಲಂಕರಣವನ್ನು ಮೊದಲನೆಯ ಮಹೇಂದ್ರವರ್ಮನ ರಾಜ್ಯಕಾಲದಲ್ಲಿ (ಕ್ರಿ. ಶ.೬೨೫) ಮಾಡಿಸಲಾಗಿತ್ತು. ಶೈವಧರ್ಮವನ್ನು ಸ್ವೀಕರಿಸುವ ಪೂರ್ವದಲ್ಲಿ ಈ ರಾಜನು ಜೈನ ಧರ್ಮಾವಲಂಬಿಯಾಗಿದ್ದನು. ಅವನು ಚಿತ್ರಕಲೆಯ ಪ್ರೇಮಿಯಾಗಿದ್ದನು. ಅವನು ದಕ್ಷಿಣ–ಚಿತ್ರ ಎಂಬ ಹೆಸರಿನ ಶಾಸ್ತ್ರವನ್ನು ಸಂಕಲನ ಮಾಡಿದ್ದನು. ಈ ಗುಹೆಯೊಳಗಿನ ಹೆಚ್ಚು ಚಿತ್ರಗಳು ನಷ್ಟವಾಗಿ ಹೋಗಿವೆ.ಆದರೆ ಇನ್ನೂ ಕೆಲವು ಸುವ್ಯವಸ್ಥಿತವಾಗಿಯೂ ಇವೆ. ಆದರಿಂದ ಅವುಗಳ ಸ್ವರೂಪವು ಪ್ರಕಟವಾಗುತ್ತದೆ. ಇವುಗಳಲ್ಲಿ ಆಕಾಶದಲ್ಲಿ ಮೇಘಗಳ ಮಧ್ಯದಲ್ಲಿ ನೃತ್ಯ ಮಾಡುತ್ತಿರುವಂಥ ಅಪ್ಸರೆ ಹಾಗೂ ರಾಜ–ರಾಣಿಯರ ಆಕೃತಿಗಳು ಸ್ಪಷ್ಟ ಹಾಗೂ ಸುಂದರವಾಗಿವೆ. ಮೇಲ್ಛಾವಣಿಯ ಮೇಲಿನ ಎರಡು ಚಿತ್ರಗಳು ಕಮಲ–ಸರೋವರದವೂ ಆಗಿವೆ. ಸರೋವರದ ಮಧ್ಯದಲ್ಲಿ ಒಂದು ಯುಗಲದ ಆಕೃತಿಯು ಇದೆ. ಅದರಲ್ಲಿರುವ ಸ್ತ್ರೀಯು ತನ್ನ ಬಲಗೈಯಿಂದ ಕಮಲ ಪುಷ್ಪವನ್ನು ಕಡಿಯುತ್ತಿದ್ದಾಳೆ. ಪುರುಷನು ಕಮಲದ ದೇಟನ್ನು ಎಡಗೈಯಿಂದ ಬಾಗಿಸಿ ಹಿಡಿದಿದ್ದಾನೆ. ಅದು ಅವನ ಹೆಗಲ ಮೇಲೆ ಹಾಯ್ದು ಹೋಗಿದೆ. ಈ ಯುಗಲದ ಚಿತ್ರಣವು ಬಹು ಸುಂದರವಾಗಿದೆ. ಈ ಚಿತ್ರವು ಆ ಕಾಲದ ರಾಜನಾದ ಮಹೇಂದ್ರವರ್ಮ ಹಾಗೂ ಅವನ ರಾಣಿಯದಿರಬೇಕೆಂದು ಅನುಮಾನಿಸಲಾಗುತ್ತಿದೆ. ಇನ್ನೊಂದೆಡೆಗೆ ಆನೆಯು ಅನೇಕ ಕಮಲದ ದೇಟುಗಳನ್ನು ತನ್ನ ಸೊಂಡಿಲಿನಲ್ಲಿ ಹಿಡಿದು, ಹಾರಿಸುತ್ತಿದೆ. ಕೆಲವೊಂದು ಆಕಳುಗಳು ಕಮಲವನವನ್ನು ಮೇಯುತ್ತಿವೆ. ಹಂಸ-ಯುಗಲಗಳು ಕ್ರೀಡಿಸುತ್ತಿವೆ. ಪಕ್ಷಿಗಳು ಕಮಲದಮೊಗ್ಗೆಗಳ ಮೇಲೆ ಕುಳಿತಿವೆ.ಮತ್ಸ್ಯಗಳು ನೀರಿನಲ್ಲಿ ಸಂಚರಿಸುತ್ತಲಿವೆ. ಎರಡನೆಯ ಚಿತ್ರವೂ ಇದೇ ಕ್ರಮವನ್ನು ಅನುಸರಿಸಿದೆ. ಆದರಲ್ಲಿ ಒಬ್ಬ ಮನುಷ್ಯನು ಕಡಿದ ಕಮಲಗಳಿಂದ ತುಂಬಿದ ಹೂಬುಟ್ಟಿಯನ್ನು ತಕ್ಕೊಂಡಿದ್ದಾನೆ. ಆನೆ ಹಾಗೂ ಎತ್ತುಗಳು ಕ್ರೀಡಿಸುತ್ತಿವೆ. ಆನೆಯ ಬಣ್ಣವು ಕೂಡ ಹಾಗೂ ಎತ್ತಿನ ಬಣ್ಣವೂ ಮಣ್ಣಿನ ವರ್ಣದ್ದಿದೆ. ಈ ಚಿತ್ರವು ತೀರ್ಥಂಕರರ ಸಮವಸರಣದ ಖಾತಿಕಾ–ಭೂಮಿಯದಿದೆಯೆಂದು

ವಿದ್ವಾಂಸರ ಅಭಿಪ್ರಾಯವಾಗಿದೆ. ಇದರಲ್ಲಿ ಭವ್ಯಜನರು ಪೂಜೆಗಾಗಿ ಕಮಲಗಳನ್ನು ಹರಿಯುತ್ತಿದ್ದಾರೆ.

ಇದೇ ಚಿತ್ರದ ಅನುಕರಣವು ಎಲ್ಲೋರಿನ ಕೈಲಾಸನಾಥ ಮಂದಿರದ ಒಂದು ಚಿತ್ರದಲ್ಲಿಯೂ ಕಂಡುಬರುತ್ತದೆ. ಇದು ಶೈವಮಂದಿರವಾಗಿದೆ. ಆದರೆ ಇದರಲ್ಲಿ ಈ ಮೇಲ್ಕಾಣಿಸಿದ ಚಿತ್ರವಲ್ಲದೆ ದಿಗಂಬರ ಮುನಿಯನ್ನು ಪಲ್ಲಕ್ಕಿಯಲ್ಲಿ ಕೂಡಿಸಿ ಕೊಂಡು ಯಾತ್ರೆಗೆ ಹೊರಟಿರುವಂಥ ಚಿತ್ರವೂ ಕೂಡ ಬಂದಿದೆ. ಪಲ್ಲಕ್ಕಿಯನ್ನು ಹಿಂದೆ ನಾಲ್ಕು ಜನರು, ಮುಂದೆ ಒಬ್ಬನು ಹೀಗೆ ಹೊತ್ತಿದ್ದಾರೆ. ಪಲ್ಲಕ್ಕಿಯ ಮೇಲೆ ಛತ್ರವೂ ಸಹ ಇದೆ. ಮುಂದೆ ಮುಂದೆ ಐದುಜನ ಯೋಧರು ಬರ್ಚಿ ಹಾಗು ಢಾಲು ಗಳನ್ನು ಹಿಡಿದುಕೊಂಡು ಸುಸಜ್ಜಿತರಾಗಿ ನಡೆದಿದ್ದಾರೆ. ಈ ಯೋಧರ ಮುಖಾಕೃತಿ, ಕೇಶವಿನ್ಯಾಸ, ಹುಬ್ಬುಗಳು, ಕಣ್ಣುಗಳು ಮತ್ತು ನಿರ್ಮಿತಿ ಹಾಗೂ ಕರ್ಣಕುಂಡಲ ಇವು ಬಹು ಸಜೀವತೆಯಿಂದ ಕೂಡಿವೆ. ಎಡಮಗ್ಗಲಿಗೆ ಅವನ ಸ್ವಾಗತಕ್ಕಾಗಿ ಬರು ತ್ತಿರುವ ಏಳುಜನ ಸ್ತ್ರೀಯರು, ಅವರ ಎದುರಿಗೂ ಸಹ ಅದೇ ಪ್ರಕಾರದ ಏಳುಜನ ಸುಸಜ್ಜಿತ ಯೋಧರನ್ನು ತೋರಿಸಲಾಗಿದೆ. ಯೋಧರ ಹಿಂದೆ ಮೇಲಿನ ಮಗ್ಗುಲಿಗೆ ಛತ್ರವೂ ಕೂಡ ಇದೆ. ಸ್ತ್ರೀಯರು ತಲೆಯ ಮೇಲೆ ಕಲಶ ಮೊದಲಾದ ಮಂಗಲ ದ್ರವ್ಯಗಳನ್ನು ಧಾರಣಮಾಡಿದ್ದಾರೆ. ಅವರ ಸೀರೆಯ ಉಡುವಿಕೆಯು ದಕ್ಷಿಣದ ರೀತಿಯದಾಗಿದೆ. ಉತ್ತರೀಯವನ್ನು ಬಲಮಗ್ಗಲಿನಿಂದ ಎಡ ಹೆಗಲಿನ ಮೇಲೆ ಹೊದೆದುಕೊಳ್ಳಲಾಗಿದೆ. ಅವರ ಹಿಂದೆ ನಿರ್ಮಿಸಿದ್ದು ಕಂಡುಬರುತ್ತದೆ. ಈ ಪ್ರಕಾರ ಇರುವ ಇಂಥ ದೃಶ್ಯವು ಭಟ್ಟಾರಕ ಸಂಪ್ರದಾಯದ ಜೈನ ಮುನಿಯನ್ನು ರಾಜದ್ವಾರ ದಲ್ಲಿ ಸ್ವಾಗತಿಸುವ ರೀತಿಯನ್ನು ವ್ಯಕ್ತಪಡಿಸುತ್ತದೆ. ಡಾ. ಮೋತೀಚಂದನು, ಒಂದು ಹಿಂದೂ ಮಂದಿರದಲ್ಲಿ ಈ ಜೈನದೃಶ್ಯದ ಅಸ್ತಿತ್ವವು ಹನ್ನೆರಡನೆಯ ಶತಮಾನದಲ್ಲಿ ಜೈನರು ಬಲತ್ಕಾರದಿಂದ ಮಂದಿರವನ್ನು ಸ್ವಾಧೀನಪಡಿಸಿಕೊಂಡಿರಬೇಕೆಂದು ಸೂಚಿಸು ತ್ತಾನೆ. ಆದರೆ ಸಮಸ್ತ ಜೈನಧರ್ಮದ ಇತಿಹಾಸದಲ್ಲಿಯೇ ಈ ಸಂಗತಿಯು ಅಸಂಭವ ವೆಂದು ಕಂಡುಬರುತ್ತದೆ. ಈ ಚಿತ್ರವು ಬಹುತರ ಚಿತ್ರ ನಿರ್ಮಾತನ ಧಾರ್ಮಿಕ ಉದಾರತೆಯನ್ನು ಅಥವಾ ಅವನ ಮೇಲೆ ಇರುವ ಜೈನಮುನಿಯ ಪ್ರಭಾವವನ್ನು ಪ್ರತಿ ಫಲಿಸುತ್ತಿದೆ. ಎಲ್ಲೋರಿನ ಇಂದ್ರಸಭಾ ಎಂಬ ಹೆಸರಿನ ಶೈಲಮಂದಿರದಲ್ಲಿಯೂ (೮ರಿಂದ ೧೧ನೆಯ ಶತಮಾನ ಕ್ರಿ.ಶ.) ರಂಗೀತ ಭಿತ್ತಿಚಿತ್ರಗಳ ಅವಶೇಷಗಳು ಕಂಡು ಬರುತ್ತವೆ. ಆದರೆ ಅವು ಬಹಳ ಭಿನ್ನ-ಭಿನ್ನವಾಗಿವೆ. ಇವುಗಳ ವಿಶೇಷ ಸಂಗತಿಯನ್ನು ಕಂಡು ಹೇಳುವುದು ಅಸಂಭವವಾಗಿದೆ.

೧೦-೧೧ನೆಯ ಶತಮಾನದಲ್ಲಿ ಜೈನರು ತಮ್ಮ ಮಂದಿರಗಳಲ್ಲಿ ಚಿತ್ರ ನಿರ್ಮಾಣ ಮಾಡುವುದರಿಂದ ದಕ್ಷಿಣದಲ್ಲಿ ಚಿತ್ರಕಲೆಯನ್ನು ಬಹಳಷ್ಟು ವಿಕಸಿತಗೊಳಿಸಿದರು. ಉದಾಹರಣೆಗೆಂದು ತಿರು-ಮಲಾಯಿಯ ಜೈನಮಂದಿರದಲ್ಲಿ ಈಗಲೂ ಸುಂದರ ಚಿತ್ರಗಳು ವಿದ್ಯಮಾನವಾಗಿವೆ. ಇವುಗಳಲ್ಲಿ ದೇವತೆ ಹಾಗೂ ಕಿಂಪುರುಷರು ಆಕಾಶ

ದಲ್ಲಿ ಮೇಘಗಳ ಮಧ್ಯದಲ್ಲಿ ಹಾರಿಹೋಗುವುದನ್ನು ಚಿತ್ರಿಸಲಾಗಿದೆ. ದೇವ ಸಮೂಹವು ಸಾಲಾಗಿ ಸಮವಸರಣದ ಕಡೆಗೆ ಸಾಗಿದೆ. ಗಂಧರ್ವ ಮತ್ತು ಅಪ್ಸರೆಯರನ್ನು ಸಹ ನಿರ್ಮಿಸಲಾಗಿದೆ. ಒಬ್ಬ ದೇವನು ಹೂವುಗಳ ಮಧ್ಯದಲ್ಲಿ ನಿಂತಿದ್ದಾನೆ. ಶ್ವೇತ ವಸ್ತ್ರವನ್ನು ಧರಿಸಿದ ಅಪ್ಸರೆಯರು ಸಾಲಾಗಿ ನಿಂತಿದ್ದಾರೆ. ಒಂದು ಚಿತ್ರದಲ್ಲಿ ಇಬ್ಬರು ಮುನಿಗಳು, ಪರಸ್ಪರ ಎದುರು ಬದರಾಗಿ ಕುಳಿತಂತೆ ಚಿತ್ರಿಸಲಾಗಿದೆ. ಕೆಲ ದಿಗಂಬರ ಮುನಿಗಳು ಆಹಾರ ಕೊಡುತ್ತಿರುವ ಮಹಿಳೆಯರಿಗೆ ಧರ್ಮೋಪದೇಶವನ್ನು ಮಾಡುತ್ತಿದ್ದಾರೆ. ಒಬ್ಬ ದೇವತೆಯನ್ನು ಚತುರ್ಭುಜ ಮತ್ತು ತ್ರಿನೇತ್ರಗಳಲ್ಲಿ ತೋರಿಸಲಾಗಿದೆ. ಬಹುತರ ಇವನು ಇಂದ್ರನಾಗಿರಬೇಕು. ಈ ಎಲ್ಲ ಚಿತ್ರಗಳು ಕಪ್ಪು ಗೋಡೆಯ ಮೇಲೆ ವಿವಿಧ ರಂಗಗಳಿಂದ ಬರೆಯಲಾಗಿದೆ. ಬಣ್ಣದ ಮಾದರಿಯು ಅಜಂತಾ ಚಿತ್ರಗಳಿಗೆ ಸಮಾನವಾಗಿದೆ. ದೇವ, ಆರ್ಯ ಮತ್ತು ಮುನಿಗಳ ಚಿತ್ರಗಳಲ್ಲಿ ಮೂಗು-ಹಾಗೂ ಹೊಕ್ಕಳುಗಳ ಆಕೃತಿಯನ್ನು ಕೋಣಾತ್ಮಕವಾಗಿಯೂ ಎರಡನೆಯ ಕಣ್ಣನ್ನು ಮುಖಾಕೃತಿಯ ಹೊರಗೆ ಇರುವಂತೆ ರೂಪಿಸಲಾಗಿದೆ. ಮುಂದಿನ ಕಾಲದ ಚಿತ್ರಕಲೆಯು ಇದರಿಂದ ಬಹಳಷ್ಟು ಪ್ರಭಾವಿತವಾದದ್ದು ಕಂಡುಬರುತ್ತದೆ.

ಶ್ರವಣ ಬೆಳ್ಗೊಳದ ಜೈನ ಮಠದಲ್ಲಿ ಅನೇಕ ಸುಂದರ ಭಿತ್ತಿ ಚಿತ್ರಗಳಿವೆ. ಒಂದರಲ್ಲಿ ಪಾರ್ಶ್ವನಾಥನು ಸಮವಸರಣದಲ್ಲಿ ವಿರಾಜಮಾನನಾಗಿದ್ದಾನೆ. ನೇಮಿನಾಥನ ದಿವ್ಯಧ್ವನಿಯ ಚಿತ್ರಣವೂ ಸುಂದರತರವಾಗಿದೆ. ಒಂದು ವೃಕ್ಷ ಮತ್ತು ಆರುಜನ ಪುರುಷರು ಇವರಿಂದ ಜೈನ ಧರ್ಮದ ಆರು ಲೇಶ್ಯೆಗಳನ್ನು ತಿಳಿಸಲಾಗಿದೆ. ಅದಕ್ಕನುಸರಿಸ್ಸಿ ವೃಕ್ಷದ ಫಲಗಳನ್ನು ತಿನ್ನುವದಕ್ಕಾಗಿ ಕೃಷ್ಣಲೇಶ್ಯೆಯುಳ್ಳ ವ್ಯಕ್ತಿಯು ಪೂರ್ಣ ಗಿಡವನ್ನೇ ಕಡಿದು ಹಾಕುತ್ತಾನೆ. ನೀಲ ಲೇಶ್ಯೆಯುಳ್ಳ ವ್ಯಕ್ತಿಯು ಅದರ ದೊಡ್ಡ ದೊಡ್ಡ ಟೊಂಗೆಗಳನ್ನು, ಕಪೋತ ಲೇಶ್ಯೆಯುಳ್ಳವನು ಅದರ ಚಿಕ್ಕ ಟಿಸಿಲುಗಳನ್ನೂ, ಶ್ವೇತ ಲೇಶ್ಯೆಯವನು ಕಸಕು—ಹಣ್ಣು ಕಾಯಿ ಫಲಗಳನ್ನು ಮತ್ತು ಪದ್ಮ ಲೇಶ್ಯೆಯುಳ್ಳವನು ಪಕ್ವವಾದ ಫಲಗಳನ್ನೂ ಕಡಿಯುತ್ತಾನೆ. ಆದರೆ ಶುಕ್ಲ ಲೇಶ್ಯೆಯುಳ್ಳ ವ್ಯಕ್ತಿಯು ವೃಕ್ಷದ ಒಂದಂಶವನ್ನೂ ನಷ್ಟಗೊಳಿಸದೆ, ಹಣ್ಣು ಪಕ್ವಗೊಂಡು ತಾನಾಗಿಯೇ ಕಳಚಿ ಬಿದ್ದಾಗ ಆಯ್ದು ತಿನ್ನುವನು. ಮಠದ ಚಿತ್ರಗಳಲ್ಲಿ ಇಂಥ ಬೇರೆ ಧಾರ್ಮಿಕ ಉಪದೇಶಗಳಿಗೆ ದೃಷ್ಟಾಂತಗಳು ಸಹ ನೋಡಲು ಸಿಕ್ಕುತ್ತವೆ. ಇಲ್ಲಿ ಒಂದು ಚಿತ್ರದಲ್ಲಿ ಮೈಸೂರ ಅರಸರಾದ ಮೂರನೆಯ ಕೃಷ್ಣರಾಜ ಒಡೆಯರು ದಸರಾ ದರ್ಬಾರಿನಲ್ಲಿ ವೈಭವದಿಂದ ಇರುವುದನ್ನೂ ಸಹ ಚಿತ್ರಿಸಲಾಗಿದೆ.

**ತಾಡಪತ್ರೀಯ ಚಿತ್ರ:—**

ಜೈನ ಮಂದಿರಗಳಲ್ಲಿ ಭಿತ್ತಿ ಚಿತ್ರಗಳ ಕಲೆಯು ಹನ್ನೊಂದನೆಯ ಶತಮಾನದಿಂದ ವಿಶೇಷ ರೂಪದಿಂದ ವಿಕಾಸ ಹೊಂದಿದ್ದು ಕಂಡು ಬರುತ್ತದೆ. ಆ ಮೇಲೆ ಚಿತ್ರಕಲೆಯ ಆಧಾರವು ತಾಡ ಪತ್ರವಾಗಿದೆ. ಈ ಕಾಲದಿಂದ ಆರಂಭವಾಗಿ ೧೪-೧೫ ನೆಯ ಶತ

ಮಾನಗಳ ವರೆಗೆ ಬರೆದ ಹಸ್ತಲಿಖಿತ ತಾಡಪತ್ರ ಗ್ರಂಥಗಳು ಜೈನ ಶಾಸ್ತ್ರ-ಭಂಡಾರ ಗಳಲ್ಲಿ ಸಹಸ್ರಾರು ಸಂಖ್ಯೆಯಲ್ಲಿ ಇದ್ದುದು ಕಂಡು ಬರುತ್ತದೆ. ಚಿತ್ರಗಳನ್ನು ಬಹುತರ ಲೇಖದ ಮೆಲ್ಭಾಗದಲ್ಲಿ, ಕೆಳಭಾಗದಲ್ಲಿ ಮತ್ತು ಎಡ ಬಲಗಳಲ್ಲಿ ಒಂದೊಂದು ಪತ್ರದ ಮಧ್ಯದಲ್ಲಿಯೂ ಸಹ ಬರೆಯಲಾಗಿದೆ. ಈ ಚಿತ್ರಗಳು ಬಹುತರ ಶೋಭೆಗಾಗಿ ಇರು-ತ್ತವೆ. ಅದರಂತೆ ಧಾರ್ಮಿಕ ಅಭಿರುಚಿಯನ್ನು ಹೆಚ್ಚಿಸುವುದಕ್ಕಾಗಿಯೂ ಸಹ ಇವೆ. ಗ್ರಂಥದ ವಿಷಯಕ್ಕೆ ಸಂಬಂಧಿಸಿದ ಚಿತ್ರಗಳಿರುವುದು ತೀರ ವಿರಳವಾಗಿದೆ.

ಎಲ್ಲಕ್ಕೂ ಪ್ರಾಚೀನ ಚಿತ್ರವಿರುವ ತಾಡಪತ್ರ ಗ್ರಂಥವು ದಕ್ಷಿಣದಲ್ಲಿ ಮೈಸೂರ ರಾಜ್ಯದಲ್ಲಿ ಇರುವ ಮೂಡಬಿದ್ರಿಯಲ್ಲಿಯೂ ಉತ್ತರದಲ್ಲಿ ಪಾಟನದ (ಗುಜರಾಥ) ಜೈನ ಭಂಡಾರದಲ್ಲಿಯೂ ದೊರೆತಿವೆ. ಮೂಡಬಿದ್ರಿಯಲ್ಲಿ ಷಟ್‌ಖಂಡಾಗಮದ ತಾಡ ಪತ್ರೀಯ ಪ್ರತಿಗಳು ಆ ಗ್ರಂಥ ಹಾಗೂ ಚಿತ್ರಗಳು ಈ ಎರಡೂ ವಿಷಯ ಗಳಲ್ಲಿ ಮಹತ್ವಪೂರ್ಣವೆನಿಸುತ್ತವೆ. ದಿಗಂಬರ ಜೈನ ಪರಂಪರೆಗನುಸರಿಸಿ ಸುರಕ್ಷಿತ ಸಾಹಿತ್ಯದಲ್ಲಿ ಇದೇ ರಚನೆಯು ಎಲ್ಲಕ್ಕೂ ಪ್ರಾಚೀನವಾಗಿದೆ. ಇದರ ಮೂಲವು ಎರಡ ನೆಯ ಶತಮಾನದ್ದು, ಟೀಕಾ ಒಂಭತ್ತನೆಯ ಶತಮಾನದಲ್ಲಿ ರಚಿತವಾದದ್ದೆಂದು ಸಿದ್ಧವಾಗುತ್ತದೆ. ಮೂಡಬಿದ್ರಿಯ ಈ ಗ್ರಂಥದ ಮೂರು ಪ್ರತಿಗಳಲ್ಲಿ ಎಲ್ಲಕ್ಕೂ ಕೊನೆಯ ಪ್ರತಿಯ ಲೇಖನ ಕಾಲವು ಸುಮಾರು ೧೧೧೩ ಇಸ್ವಿಯ ಸಮೀಪದ್ದಾಗಿದೆ. ಇದರಲ್ಲಿ ಐದು ತಾಡಪತ್ರಗಳು ಸಚಿತ್ರವಾಗಿವೆ ಇದರಲ್ಲಿ ಎರಡು ತಾಡಪತ್ರಗಳಂತೂ ಪೂರ್ಣ ಚಿತ್ರಗಳಿಂದ ತುಂಬಿಕೊಂಡಿವೆ. ಎರಡರ ಮಧ್ಯಭಾಗದಲ್ಲಿ ಲೇಖವಿದೆ. ಎರಡೂ ಮಗ್ಗಲಿಗೆ ಕೆಲವೊಂದು ಚಿತ್ರಗಳೂ ಇವೆ. ಒಂದು ತಾಡಪತ್ರವನ್ನು ಮೂರು ಭಾಗಗಳಲ್ಲಿ ವಿಭಾಗಿಸಲಾಗಿದೆ. ಮೂರೂ ಭಾಗಗಳಲ್ಲಿ ಲೇಖನವಿದೆ. ಆದರೆ ಎರಡೂ ತೀರಗಳಲ್ಲಿ ಒಂದೊಂದು ಚಕ್ರಾಕೃತಿಯನ್ನು ನಿರ್ಮಿಸಲಾಗಿದೆ. ಚಕ್ರದ ಪರಿಧಿಯಲ್ಲಿ ನಡುವೆ ಅನೇಕ ಕೋನಾಕೃತಿಗಳೂ ಮಧ್ಯಭಾಗದಲ್ಲಿ ಅದೇ ಪ್ರಕಾರದ ಎರಡನೆಯ ಚಿಕ್ಕ ಚಕ್ರವೂ ಇರುತ್ತವೆ. ಈ ಎರಡರ ವಲಯದಲ್ಲಿ ಕೆಲವೊಂದು ಅಂತರದಿಂದ ಆರು ಚೌಕೋಣ ಆಕೃತಿಗಳನ್ನು ರೂಪಿಸಲಾಗಿದೆ. ಉಳಿದ ಎರಡು ಪತ್ರಗಳಲ್ಲಿ ಮಧ್ಯದಲ್ಲಿ ಲೇಖನ, ಎರಡೂ ಮಗ್ಗಲಿಗೆ ಚಿತ್ರಗಳು ಇರುತ್ತವೆ. ಇವುಗಳಲ್ಲಿ ಒಂದು ಪತ್ರದಲ್ಲಿ ಮೊದಲು ಹೂವು ಮೊಗ್ಗೆಗಳ ಬಳ್ಳಿಯುಳ್ಳ ದಂಡೆಕಟ್ಟು ಇದೆ. ಆಮೇಲೆ ಎರಡೆರಡು ವಿಧದ ಪ್ರಕಾರದ ಸುಂದರ ಗೋಲಾಕೃತಿಗಳು ಇವೆ. ಎರಡನೆಯ ಪತ್ರ ದಲ್ಲಿ ಬಲಗಡೆಗೆ ಖಡ್ಗಾಸನದಲ್ಲಿ ನಗ್ನ ಮೂರ್ತಿಯಿದೆ. ಅದರ ಎದುರಿಗೆ ಇಬ್ಬರು ಸ್ತ್ರೀ ವ್ಯಕ್ತಿಗಳು ನೃತ್ಯಭಂಗಿಯಲ್ಲಿ ನಿಂತುದುಂಟು. ಇವರ ಕೇಶರಚನೆಗಳು ಚಕ್ರಾ ಕಾರವಾಗಿಯೂ ಪುಷ್ಪಮಾಲೆಯಿಂದ ಕೂಡಿದುದೂ ಆಗಿವೆ. ಉತ್ತರೀಯವು ಬಲ ಹೆಗಲಿನ ಕೆಳಭಾಗದಿಂದ ಎಡ ಹೆಗಲಿನ ಮೇಲೆ ಪಸರಿಸಿದುದಾಗಿದೆ. ಪತ್ರದ ಎಡ ಭಾಗದಲ್ಲಿ ಪದ್ಮಾಸನ ಜಿನಮೂರ್ತಿಯು ಪ್ರಭಾವಲಯದಿಂದ ಕೂಡಿದುದಾಗಿದೆ. ಸಿಂಹಾಸನದ ಮೇಲೆ ಕೆಲವೊಂದು ಪಶುಗಳ ಆಕೃತಿಗಳು ಇವೆ. ಮೂರ್ತಿಯ ಎರಡೂ

ಮಗ್ಗಲು ಎರಡು ಮನುಷ್ಯರ ಆಕೃತಿಗಳು ಇವೆ. ಅವರ ಪಾರ್ಶ್ವದಲ್ಲಿ ಸ್ವತಂತ್ರ ರೂಪದಿಂದ ನಿಂತಂಥ ಮತ್ತು ಎರಡನೆಯದು ಕಮಲಾಸೀನ ಹಂಸಯುಕ್ತ ದೇವಿಯ ಮೂರ್ತಿಗಳಿವೆ. ಎರಡು ಪತ್ರಗಳು ಪೂರ್ಣವಾಗಿ ಚಿತ್ರಗಳಿಂದ ಅಲಂಕೃತವಾಗಿವೆ ಯಷ್ಟೆ. ಇವುಗಳಲ್ಲಿ ಒಂದರ ಮಧ್ಯದಲ್ಲಿ ಪದ್ಮಾಸನ ಜಿನಮೂರ್ತಿಯಿದೆ. ಇದರ ಎರಡೂ ಮಗ್ಗಲಿಗೆ ಒಬ್ಬೊಬ್ಬ ದೇವ ನಿಂತಿದ್ದಾನೆ. ಈ ಚಿತ್ರದ ಎರಡೂ ಮಗ್ಗಲು ಸಮಾನ ರೂಪದಿಂದ ಎರಡೆರಡು ಪದ್ಮಾಸನ ಜಿನಮೂರ್ತಿಗಳಿವೆ. ಇವುಗಳ ತಲೆಯ ಹಿಂದುಗಡೆ ಪ್ರಭಾವಲಯವೂ, ಎರಡೂ ಮಗ್ಗಲು ಚಮರಗಳೂ ಮೇಲೆ ಎರಡು ಚಕ್ರಗಳೂ ಇವೆ. ಆ ಮೇಲೆ ಎರಡೂ ಮಗ್ಗಲಿಗೆ ಒಬ್ಬೊಬ್ಬ ದೇವಿಯರ ಭದ್ರಾಸನ ಮೂರ್ತಿಗಳು ಇವೆ. ಅವುಗಳ ಬಲಗೈಯಲ್ಲಿ ಅಂಕುಶ, ಎಡಗೈಯಲ್ಲಿ ಕಮಲ ಇವೆ. ಉಳಿದ ಎರಡು ಕೈಗಳು ವರದ ಮತ್ತು ಅಭಯ ಮುದ್ರೆಗಳಲ್ಲಿ ಇವೆ. ಎರಡೂ ಎಲೆಗಳ ಚಿತ್ರಗಳಲ್ಲಿಗುರುಗಳು ತಮ್ಮ ಎದುರು ಕೈಜೋಡಿಸಿ ಕುಳಿತ ಶ್ರಾವಕನಿಗೆ ಧರ್ಮೋಪದೇಶ ಮಾಡುತ್ತಿದ್ದಾರೆ. ಇವರ ಮಧ್ಯದಲ್ಲಿ ಸ್ಥಾಪನಾಚಾರ್ಯರನ್ನೂ ಇಡಲಾಗಿದೆ. ಎರಡನೆಯ ಎಲೆಯ ಮಧ್ಯಭಾಗದಲ್ಲಿ ಪದ್ಮಾಸನ ಜಿನಮೂರ್ತಿಯಿದೆ. ಅದರ ಎರಡೂ ಮಗ್ಗಲಿಗೆ ಏಳು–ಏಳು ಜನ ಸಾಧುಗಳು ವಿವಿಧ ಪ್ರಕಾರದ ಆಸನ ಹಾಗೂ ಹಸ್ತ ಮುದ್ರೆಗಳಲ್ಲಿ ಕುಳಿತಿದ್ದಾರೆ. ಈ ತಾಡಪತ್ರಗಳ ಎಲ್ಲ ಆಕೃತಿಗಳೂ ಬಹು ಸಜೀವ ಹಾಗೂ ಕಲಾಪೂರ್ಣವಾಗಿವೆ ಈ ಚಿತ್ರಗಳಲ್ಲಿ ಎಲ್ಲಿಯೂ ಆಚೆಯ ಮುಖ ರೇಖೆಯ ಹೊರಗೆ ತೆಗೆದದ್ದು ಕಂಡುಬರುವುದಿಲ್ಲ. ಮೂಗು ತುಟಿಗಳ ಆಕೃತಿಗಳೂ ಸಹ ಕೋಣಾಕಾರದಲ್ಲಿ ಇಲ್ಲ. ಮುಂದೆ ವಿಕಾಸ ಹೊಂದಿರುವ ಪಶ್ಚಿಮದ ಜೈನ ಶೈಲಿಯಲ್ಲಿ ಇದು ನಮಗೆ ಕಂಡು ಬರುತ್ತದೆ.

ಈ ಚಿತ್ರಗಳಿಗೆ ಸಮಕಾಲೀನವಾದ ಪಶ್ಚಿಮದ ಚಿತ್ರಕಲೆಗೆ ಉದಾಹರಣೆಯು ನಿಶೀಥ–ಚೂರ್ಣಿಯ ಪಾಟದ ಸಂಘವೀ–ವಾಡಾ ಭಂಡಾರದಲ್ಲಿ ಸುರಕ್ಷಿತವಾಗಿರುವ ತಾಡ-ಪತ್ರೀಯ ಪ್ರತಿಗಳಲ್ಲಿ ದೊರೆಯುತ್ತವೆ. ಆ ಪ್ರತಿಮೆಗಳನ್ನು ಅವುಗಳ ಪ್ರಶಸ್ತಿಗನುಸರಿಸಿ ಭೃಗುಕಚ್ಛದಲ್ಲಿ (ಭಡೋಚ) ಚಾಲುಕ್ಯರಾಜನಾದ ಜಯಸಿಂಹನ (ಕ್ರಿ. ಶ. ೧೦೯೪ ರಿಂದ ೧೧೪೩) ರಾಜ್ಯಕಾಲದಲ್ಲಿ ಬರೆಯಲಾಗಿದೆ. ಇದರಲ್ಲಿ ಅಲಂಕರಣಾತ್ಮಕವಾಗಿ ಚಿತ್ರಕಾರ ಆಕೃತಿಗಳು ಬಹಳ ಇವೆ. ಇವು ಮೇಲೆ ವರ್ಣಿಸಿದ ಷಟ್‌ಖಂಡಾಗಮದ ಚಿತ್ರಗಳ ಶೈಲಿಯವೇ ಆಗಿವೆ. ಆದರೆ ಒಂದು ಚಕ್ರದ ಮಧ್ಯದಲ್ಲಿ ಹಸ್ತಿವಾಹಕನ ಹಾಗೂ ಎರಡನೆಯ ಕಡೆಗೆ ಪುಷ್ಪಮಾಲೆಗಳನ್ನು ಸ್ವೀಕರಿಸಿದ ಇಬ್ಬರು ಅಪ್ಸರೆಯರ ಚಿತ್ರ ಇರುವುದು ವಿಶೇಷವಾಗಿದೆ. ಇವುಗಳಲ್ಲಿಯೂ ಕೂಡ ಷಟ್‌ಖಂಡಾಗಮದ ಚಿತ್ರಗಳಿಗೆ ಸಮಾನವಾದ ಮೊದಲಿನ ಕಣ್ಣಿನ ಆಕೃತಿಯನ್ನು ಮುಖ-ರೇಖಾ-ಕೃತಿಯ ಹೊರಗೆ ತೆಗೆದುದಿಲ್ಲ. ಕ್ರಿ. ಶ. ೧೧೨೭ ರಲ್ಲಿ ಬರೆದಿರುವ ಸಂಭಾತದ ಶಾಂತಿನಾಥ ಜೈನಮಂದಿರದಲ್ಲಿ ಇರುವ ನಗೀನದಾಸ ಭಂಡಾರದ ಜ್ಞಾತಾಧರ್ಮಸೂತ್ರದ ತಾಡ ಪತ್ರೀಯ ಪ್ರತಿಯಲ್ಲಿ ಕೆಲ ಚಿತ್ರಗಳಿವೆ. ಇದರಲ್ಲಿ

ಪದ್ಮಾಸನ ಮಹಾವೀರ ತೀರ್ಥಂಕರರ ಚಿತ್ರವಿದೆ. ಇದರ ಎರಡೂ ಮಗ್ಗುಲಿಗೆ ಚೌರಿಯನ್ನು ಬೀಸುವವರಿದ್ದಾರೆ. ಸರಸ್ವತಿಯ ತ್ರಿಭಂಗ ಚಿತ್ರವು ಉಲ್ಲೇಖನೀಯವಾಗಿದೆ. ದೇವಿಯು ಚತುರ್ಭುಜವಾಗಿದೆ. ಮೇಲ್ಭಾಗದ ಎರಡೂ ಕೈಗಳಲ್ಲಿ ಕಮಲ ಪುಷ್ಪ ಹಾಗೂ ಕೆಳಗಿನ ಕೈಗಳಲ್ಲಿ ಅಕ್ಷಮಾಲಾ ಮತ್ತು ಪುಸ್ತಕಗಳಿವೆ. ಸಮೀಪದಲ್ಲಿ ಹಂಸವೂ ಇದೆ. ದೇವಿಯ ಮುಖದ ಪ್ರಸನ್ನತೆಯೂ ಅವಯವಗಳ ಹಾವ-ಭಾವಗಳನ್ನೂ ವಿಲಾಸವನ್ನೂ ಸುಂದರ ರೂಪದಲ್ಲಿ ಅಂಕಿತಗೊಳಿಸಲಾಗಿದೆ.

ಬಡೋದಾ ಜನಪದಲ್ಲಿರುವ ಛಾಣಿಯ ಜೈನ-ಗ್ರಂಥ-ಭಂಡಾರದ ಜಘನಿಯರ್ಯುಕ್ತಿಯ ತಾಡಪತ್ರೀಯ ಪ್ರತಿಯ (ಕ್ರಿ.ಶ. ೧೧೬೧) ಚಿತ್ರವು ವಿಶೇಷ ಮಹತ್ವವುಳ್ಳದಾಗಿದೆ. ಯಾಕಂದರೆ ಇದರಲ್ಲಿ ೧೬ ವಿದ್ಯಾದೇವಿಯರು ಹಾಗೂ ಅನ್ಯ ದೇವಿಯರು, ಯಕ್ಷರು ಇವರ ಸುಂದರ ಚಿತ್ರಗಳು ಉಪಲಬ್ಧವಾಗಿವೆ. ವಿದ್ಯಾದೇವಿಯರ ಹೆಸರುಗಳು ಹೀಗಿವೆ:— ರೋಹಿಣಿ, ಪ್ರಜ್ಞಪ್ತಿ, ವಜ್ರಶೃಂಖಲಾ, ವಜ್ರಾಂಕುಷೀ, ಚಕ್ರೇಶ್ವರೀ, ಪುರುಷದತ್ತಾ, ಕಾಲೀ, ಮಹಾಕಾಲೀ, ಗೌರೀ ಗಾಂಧಾರೀ, ಮಹಾಜ್ವಾಲಾ, ಮಾನವೀ, ವೈರೋಟ್ಯಾ. ಅಚ್ಛುಪ್ತಾ, ಮಾನಸೀ ಮತ್ತು ಮಹಾಮಾನಸೀ. ಉಳಿದ ದೇವ ದೇವಿಯರು ಹೀಗಿದ್ದಾರೆ.—ಕಾಪರ್ದೀ ಯಕ್ಷ, ಸರಸ್ವತೀ, ಅಂಬಿಕಾ, ಮಹಾಲಕ್ಷ್ಮೀ, ಬ್ರಹ್ಮಶಾಂತಿ. ಈ ಎಲ್ಲ ದೇವತೆಗಳು ಚತುರ್ಭುಜ ಹಾಗೂ ಭದ್ರಾಸನದಲ್ಲಿವೆ. ಕೈಗಳಲ್ಲಿ ವರದ ಮತ್ತು ಅಭಯ ಮುದ್ರೆಗಳ ಹೊರತಾಗಿ ಶಕ್ತಿ, ಅಂಕುಶ, ಧನುಷ, ಬಾಣ, ಶೃಂಖಲಾ, ಶಂಖ, ಖಡ್ಗ, ಢಾಲ, ಪುಷ್ಪ, ಫಲ ಮತ್ತು ಪುಸ್ತಕ ಮೊದಲಾದ ಚಿಹ್ನೆಗಳಿವೆ. ಮಸ್ತಕದ ಹಿಂದೆ ಪ್ರಭಾವಳಿ, ತಲೆಯ ಮೇಲೆ ಮುಕುಟ, ಕಿವಿಯಲ್ಲಿ ಕರ್ಣಪುಷ್ಪ ಮತ್ತು ಕೊರಳಲ್ಲಿ ಹಾರಗಳೂ ಸಹ ಉಪಲಬ್ಧ ಇರುತ್ತವೆ. ಅಂಬಿಕೆಗೆ ಎರಡೇ ಕೈಗಳಿವೆ. ಬಲಗೈಯಲ್ಲಿ ಬಾಲಕ, ಎಡಗೈಯಲ್ಲಿ ಮಾವಿನ ಹಣ್ಣಿನ ಗೊಂಚಲುಗಳು ಇವೆ. ಈ ಎಲ್ಲಾ ಆಕೃತಿಗಳಲ್ಲಿಯೂ ಕೊನೆಯ ಕಣ್ಣನ್ನು ಚಿತ್ರಿಸಲಾಗಿದೆ. ಆದರೆ ಮೂಗು, ತುಟಿಗಳ ಕೋಣಾಕೃತಿಗಳನ್ನು ಸ್ಪಷ್ಟವಾಗಿ ತೋರಿಸಲಾಗಿದೆ. ಶೋಭಾಂಕನಗಳು ಸಮಸ್ತ ರೂಢಿ-ಆತ್ಮಕವಾಗಿವೆ. ಈ ಜೈನ ಗ್ರಂಥದಲ್ಲಿ ಇರುವ ಈ ಚಿತ್ರಗಳ ಅಸ್ತಿತ್ವವು, ಆ ಕಾಲದಲ್ಲಿ ಕೆಲವೊಂದು ಜೈನ ಉಪಾಸನಾ ವಿಧಿಗಳಲ್ಲಿ ಅನೇಕ ವೈಷ್ಣವ ಮತ್ತು ಶೈವ ದೇವ-ದೇವತೆಗಳನ್ನು ಸ್ವೀಕರಿಸಿದುದರ ದ್ಯೋತಕವಾಗಿದೆ.

ಕ್ರಿ. ಶ. ೧೨೮೮ ರಲ್ಲಿ ಬರೆದ ಸುಬಾಹು-ಕಥೆಗಳೇ ಮೊದಲಾದ ಕಥಾಸಂಗ್ರಹದ ತಾಡಪತ್ರ ಪ್ರತಿಯಲ್ಲಿ ೨೩ ಚಿತ್ರಗಳಿವೆ. ಇವುಗಳಲ್ಲಿ ಕೆಲವು ತಮ್ಮ ವಿಶೇಷತೆಯನ್ನು ಕಾಯ್ದುಕೊಂಡಿವೆ. ಒಂದರಲ್ಲಿ ಭಗವಾನ್ ನೇಮಿನಾಥನ ವರಯಾತ್ರೆಯ ಸುಂದರ ಚಿತ್ರಣವಿದೆ. ಕನ್ಯೆಯಾದ ರಾಜೀಮತಿಯು ವಿವಾಹ ಮಂಟಪದಲ್ಲಿ ಕುಳಿತಿದ್ದಾಳೆ. ಅದರ ದ್ವಾರದಲ್ಲಿ ನಿಂತ ಮನುಷ್ಯನು ಆನೆಯನ್ನೇರಿದ ನೇಮಿನಾಥನಿಗೆ ಕೈಜೋಡಿಸಿ ಸ್ವಾಗತಿಸುತ್ತಿದ್ದಾನೆ. ಕೆಳಭಾಗದಲ್ಲಿ ಮೃಗಾಕೃತಿಯುನು

ನಿರ್ಮಿಸಲಾಗಿದೆ. ಬಲದೇವ ಮುನಿಯ ಎರಡು ಚಿತ್ರಗಳಿವೆ. ಒಂದರಲ್ಲಿ ಮೃಗಾದಿ ಪಶುಗಳು ಬಲದೇವ ಮುನಿಯ ಉಪದೇಶವನ್ನು ಕೇಳುತ್ತ ಇವೆ. ಎರಡನೆಯದರಲ್ಲಿ ಒಂದು ವೃಕ್ಷದ ಕೆಳಗೆ ಮೃಗ ಸಹಿತ ನಿಂತಂಥ ರಥವಾಹಿಯಿಂದ ಆಹಾರವನ್ನು ಸ್ವೀಕರಿಸುತ್ತಿದ್ದಾನೆ. ಈ ಗ್ರಂಥದ ಚಿತ್ರಗಳಲ್ಲಿ ಡಾ. ಮೋತೀಚಂದನ ಮತಕ್ಕೆ ಅನ್ವ ಸರಿಸಿ ಪಶು ಮತ್ತು ವೃಕ್ಷಗಳ ಚಿತ್ರಣವು ಮೊದಲ ಸಲವೇ ತಾಡ ಪತ್ರದಲ್ಲಿ ಅವತರಿ ಸಿದೆ. ಹಾಗೂ ಈ ಚಿತ್ರಗಳಲ್ಲಿ ಪಶ್ಚಿಮ ಭಾರತದ ಚಿತ್ರಕಲೆಗೆ ಸ್ಥಿರತೆಯು ಉಂಟಾ ಗಿದೆ. ಕೋಣಾಕಾರ ರೇಖಾಂಕನವು ಮೂಗು ಮತ್ತು ತುಟಿಗಳಲ್ಲಿ ಕಂಡುಬರುತ್ತದೆ. ಕೊನೆಯ ಕಣ್ಣಿನ ಚಿತ್ರಣವನ್ನು ಮುಖಾಕೃತಿಯ ಹೊರಭಾಗದಲ್ಲಿ ಮಾಡುವುದು ರೂಢಿಬದ್ಧವಾದುದು ಕಂಡುಬರುತ್ತದೆ.

ಈ ಚಿತ್ರಶೈಲಿಯ ನಾಮಕರಣದ ವಿಷಯದಲ್ಲಿ ಮತಭೇದವಿದೆ. ನಾರ್ಮನ್ ಬ್ರಾವುನ್‌ನು ಇದನ್ನು ಶ್ವೇತಾಂಬರ ಜೈನ ಶೈಲಿಯೆಂದು ಕರೆದಿದ್ದಾನೆ. ಅವನ ಮತ ಕ್ಕನುಸರಿಸಿ ಈ ಚಿತ್ರಗಳ ಪ್ರಯೋಗವು ಶ್ವೇತಾಂಬರ ಗ್ರಂಥಗಳಲ್ಲಿಯೇ ಆಗಿದೆ. ಹಾಗೂ ಕೋನೆಯ ಕಣ್ಣನ್ನು ಅಂಕಿತಗೊಳಿಸುವ ಕಾರಣವು ಬಹುತರ ಆ ಸಂಪ್ರದಾ ಯದಲ್ಲಿ ಪ್ರಚಲಿತ ತೀರ್ಥಂಕರ ಮೂರ್ತಿಗಳಲ್ಲಿ ಕೃತ್ರಿಮ ಕಣ್ಣುಗಳನ್ನು ಹಚ್ಚುವುದೇ ಆಗಿದೆ. ಡಾ. ಕುಮಾರಸ್ವಾಮಿಯು ಇದಕ್ಕೆ ಜೈನಕಲೆಯೆಂದೂ, ಶ್ರೀ ಎನ್.ಸಿ. ಮೆಹತಾ ಅವರು ಗುಜರಾತೀ ಶೈಲಿಯೆಂದೂ ಹೇಳಿದ್ದಾರೆ. ಶ್ರೀ ರಾಮಕೃಷ್ಣ ದಾಸನ ಮತವು ಈ ಶೈಲಿಯಲ್ಲಿ ಭಾರತೀಯ ಚಿತ್ರಕಲೆಯ ಹ್ರಾಸವು ಕಂಡುಬರುತ್ತ ದೆಂದು ಇದೆ. ಅಂತೂ ಇದಕ್ಕೆ ಆ ಕಾಲದಲ್ಲಿ ವಿಕಸಿತವಾದ ಭಾಷೆಗೆ ಅನುಸರಿಸಿ 'ಅಪಭ್ರಂಶಶೈಲಿ' ಎಂದು ಹೇಳುವುದು ಉಚಿತವಾಗಿದೆ. ಆದರೆ ಇವೆಲ್ಲವುಗಳಿಗಿಂತ ನೂರಾರು ವರ್ಷಗಳ ಪೂರ್ವದಲ್ಲಿಯೇ ತಿಬೇಟರ ಇತಿಹಾಸಜ್ಞನಾದ ತಾರಾನಾಥನು (೧೬ ನೆಯ ಶತಮಾನ) ಪಶ್ಚಿಮ ಭಾರತೀಯ ಶೈಲಿಯ ಉಲ್ಲೇಖ ಮಾಡಿದ್ದಾನೆ. ಡಾ. ಮೋತೀಚಂದನು ಇದೇ ಹೆಸರಿನ ಔಚಿತ್ಯವನ್ನು ಸ್ವೀಕರಿಸಿದ್ದಾನೆ. ಯಾಕಂದರೆ ಉಪಲಬ್ಧ ಪ್ರಮಾಣಗಳಿಂದ ಈ ಶೈಲಿಯ ಉದಯ ಮತ್ತು ವಿಕಾಸಗಳು ಪಶ್ಚಿಮ ಭಾರತದಲ್ಲಿಯೇ ವಿಶೇಷವಾಗಿ ಗುಜರಾತ ರಾಜಪುತಾನಾ ಪ್ರದೇಶಗಳಲ್ಲಿಯೇ ಆಗಿದೆ ಯೆಂದು ಸಿದ್ಧವಾಗುತ್ತದೆ. ತಾರಾನಾಥನ ಮತಕ್ಕನುಸರಿಸಿ ಪಶ್ಚಿಮದ ಕಲಾ ಶೈಲಿಯನ್ನು ಮಾರವಾಡದ ಶೃಂಗಧರ ಎಂಬ ಹೆಸರಿನ ಕುಶಲ ಚಿತ್ರಕಾರನು ಪ್ರಾರಂಭ ಮಾಡಿದನು, ಅದು ಹರ್ಷವರ್ಧನನ ಕಾಲದಲ್ಲಿ (ಕ್ರಿ.ಶ.೬೧೦ ರಿಂದ ೬೫೦) ಆಯಿತು. ಈ ಶೈಲಿಯು ಕ್ರಮವಾಗಿ ನೇಪಾಲ ಮತ್ತು ಕಾಶ್ಮೀರವರೆಗೆ ತಲುಪಿತು. ಈ ಶೈಲಿಯ ಉಪಲಬ್ಧ ಪ್ರಮಾಣಗಳಿಂದ ಇದು ಜೈನ ಪರಂಪರೆಯಲ್ಲಿಯೇ ಉದಯ ಆಗಿ, ಪುಷ್ಟಗೊಂಡಂತೆ ಸ್ಪಷ್ಟವಾಗಿ ತಿಳಿಯುತ್ತದೆ. ಅದರಿಂದ ಇದಕ್ಕೆ ಜೈನಶೈಲಿ ಎಂಬ ಹೆಸರು ಅನುಚಿತವೆನಿಸದು. ತರುವಾಯ ಈ ಶೈಲಿಯನ್ನು ಬೇರೆ ಪಶ್ಚಿಮದ ಪ್ರದೇಶ ದವರೂ ಹೊರಗಿನ ಜನರೂ ಜೈನೇತರ ಸಂಪ್ರದಾಯದವರೂ ತಮ್ಮದನ್ನಾಗಿ ಮಾಡಿ

ಕೊಂಡರು. ಆದರಿಂದ ಇದರ ಉತ್ಪತ್ತಿ ಹಾಗೂ ಪುಷ್ಟಿಗಳನ್ನು ಆಧರಿಸಿ 'ಪಶ್ಚಿಮೀ' ಮತ್ತು 'ಜೈನಕಲೆ' ಎಂದು ಕರೆದರೂ ಅನೌಚಿತ್ಯವಾಗುವುದಿಲ್ಲ. ಈ ಆಧಾರದಿಂದ ಶ್ರೀ ಸಾರಾಭಾಯಿ ನವಾವನು ಈ ಶೈಲಿಗಾಗಿ 'ಪಶ್ಚಿಮೀ ಜೈನಕಲೆ' ಎಂಬ ಹೆಸರನ್ನು ಸೂಚಿಸಿದ್ದು ಸಾರ್ಥಕವಾಗಿದೆ.

ಮೇಲೆ ಕೆಲವು ತಾಡಪತ್ರ ಗ್ರಂಥಗಳ ಪರಿಚಯಮಾಡಿಕೊಟ್ಟಿತಷ್ಟೆ. ಅವುಗಳ ಸಾಮಾನ್ಯ ಲಕ್ಷಣವು ಹೀಗಿದೆ:—ವಿಷಯದ ದೃಷ್ಟಿಯಿಂದ ಅವು ತೀರ್ಥಂಕರರು, ದೇವ-ದೇವಿಯರು, ಮುನಿಗಳು ಮತ್ತು ಧರ್ಮರಕ್ಷಕರು ಇವರ ಆಕೃತಿಗಳವರೆಗೆ ಮಾತ್ರ ಸೀಮಿತವಾಗಿವೆ. ಸಂಯೋಜನ ಹಾಗೂ ಪೃಷ್ಠಭೂಮಿಯ ಸಮಸ್ಯೆಗಳು ಚಿತ್ರಕಾರರ ಸಮ್ಮುಖದಲ್ಲಿ ಉಂಟಾಗಲಿಲ್ಲ. ಈ ಆಕೃತಿಗಳ ಮುದ್ರೆಗಳೂ ಕೂಡ ಬಹಳಷ್ಟು ಸೀಮಿತ ಹಾಗೂ ರೂಢಿಗತವಾಗಿವೆ. ಆಕೃತಿ-ಅಂಕನವು ರೇಖಾತ್ಮಕ ವಾಗಿದೆ. ಆದರಿಂದ ಇದರಲ್ಲಿ ತ್ರಿಗುಣಾತ್ಮಕ ಸಂಯೋಗವು ಉಂಟಾಗಲಿಲ್ಲ. ಬಣ್ಣಗಳ ಪ್ರಯೋಗವೂ ಪರಿಮಿತವಾಗಿದೆ. ಬಹುತರ ಭೂಮಿಯು ಕೆಂಪು ಸುಟ್ಟ ಇಟ್ಟಂಗಿಗಳ ಬಣ್ಣದ್ದು, ಆ ಕೃತಿಗಳಲ್ಲಿ ಹಳದಿ, ಚಂದ್ರ (ಸಿಂಧೂರ)ದಂಥ ಕೆಂಪು, ನೀಲಿ ಮತ್ತು ಬಿಳಿಯ ಕೆಲವೆಡೆಯಲ್ಲಿ ಹಸಿರು ಬಣ್ಣದ ಉಪಯೋಗವಾಗಿದೆ. ಆದರೆ ಕ್ರಿ.ಶ. ೧೩೫೦ ಮತ್ತು ೧೪೫೦ ಇಸ್ವಿಯ ಮಧ್ಯದಲ್ಲಿ, ಒಂದು ಶತಮಾನದ ಅವಧಿಯಲ್ಲಿ ರೂಪುಗೊಂಡ ತಾಡಪತ್ರೀಯ ಚಿತ್ರಗಳಲ್ಲಿ ಶಾಸ್ತ್ರೀಯ ಮತ್ತು ಸೌಂದರ್ಯದ ದೃಷ್ಟಿಯಿಂದ ಕೆಲ ವೊಂದು ವೈಶಿಷ್ಟ್ಯಗಳು ಕಂಡುಬರುತ್ತವೆ. ಆಕೃತಿ–ಅಂಕನವು ಬಹು ಸೂಕ್ಷ್ಮತರ ವಾಗಿಯೂ ಹೆಚ್ಚು ಕೌಶಲ್ಯದಿಂದಲೂ ಆಗಿವೆ. ಆಕೃತಿಗಳಲ್ಲಿ ವಿಷಯಗಳ ದೃಷ್ಟಿ ಯಿಂದ ತೀರ್ಥಂಕರರ ಜೀವನದ ಘಟನೆಗಳೂ ಸಹ ಹೆಚ್ಚಾಗಿ ವಿಚಿತ್ರಗೊಂಡಿವೆ ಇವುಗಳಲ್ಲಿ ವಿವರಣಾತ್ಮಕತೆಯನ್ನು ತರುವ ಪ್ರಯತ್ನವೂ ಕಂಡುಬರುತ್ತದೆ. ರಂಗ ಲೇಪನದಲ್ಲಿ ವೈಚಿತ್ರ್ಯ ಮತ್ತು ವಿಶೇಷ ಚತುರತೆಯು ಕಂಡುಬರುತ್ತದೆ. ಇದೇ ಕಾಲ ದಲ್ಲಿ ಸುವರ್ಣರಂಗದ ಪ್ರಯೋಗವು ಮೊದಲಸಲ ಆದದ್ದು ಕಂಡುಬರುತ್ತದೆ. ಇವೆಲ್ಲವೂ ಮುಸಲ್ಮಾನರ ಜೊತೆಯಲ್ಲಿ ಬಂದ ಈರಾಣೀ ಚಿತ್ರಕಲೆಯ ಪ್ರಭಾವ ವೆಂದು ಮನ್ನಿಸಲಾಗುತ್ತಿದೆ. ಇದರ ಬಲದಿಂದ ಮುಂದರಿದು ಅಕಬರನ ಕಾಲದಲ್ಲಿ (೧೬ನೆಯ ಶತಮಾನ) ಈ ಭಾರತೀಯ ಈರಾಣೀ ಚಿತ್ರಶೈಲಿಯು ವಿಕಸಿತ ವಾಯಿತು. ಇದು ಮೊಗಲ-ಶೈಲಿ ಎಂಬ ಹೆಸರಿನಿಂದ ಸುಪ್ರಸಿದ್ಧವಾದುದು ಕಂಡು ಬರುತ್ತದೆ. ಈ ಶೈಲಿಯ ಪ್ರಾತಿನಿಧಿಕ ರಚನೆಗಳು ಹೆಚ್ಚಾಗಿ ಕಲ್ಪಸೂತ್ರದ ಪ್ರತಿ ಗಳಲ್ಲಿ ಕಂಡುಬರುತ್ತವೆ. ಇವುಗಳಲ್ಲಿ ಎಲ್ಲಕ್ಕೂ ಮಹತ್ವಪೂರ್ಣವಾದುವು ಈಡರದ 'ಆನಂದಜೀ ಮಂಗಲಜೀ ಪೇಡಿ'ಯ ಜ್ಞಾನ ಭಂಡಾರದಪ್ರತಿಯಾಗಿದೆ. ಇದರಲ್ಲಿ ೩೪ ಚಿತ್ರಗಳಿವೆ. ಇವು ಮಹಾವೀರ ಮತ್ತು ಕೆಲವೊಂದು ಪಾರ್ಶ್ವನಾಥ ಹಾಗೂ ನೇಮಿ ನಾಥ ತೀರ್ಥಂಕರನ ಜೀವನ ಘಟನೆಗಳಿಗೆ ಸಂಬಂಧಿಸಿದವುಗಳಾಗಿವೆ. ಇವುಗಳಲ್ಲಿ ಸುವರ್ಣ ವರ್ಣದ ಪ್ರಯೋಗವು ಮೊದಲ ಸಲವಾದದ್ದಿದೆ. ಮುಂದಿನ ಕಾಲದಲ್ಲಿ

ಯಂತೂ ಚಿತ್ರಗಳಲ್ಲಿ ಅಷ್ಟೇ ಅಲ್ಲ, ಸಂಪೂರ್ಣ ಗ್ರಂಥದ ಲಿಪಿಯೆಲ್ಲವೂ ಕೂಡ ಸುವರ್ಣ ವರ್ಣದಲ್ಲಿ ಇದ್ದುದು ಕಂಡು ಬರುತ್ತದೆ. ಅಥವಾ ಸಮಸ್ತ ಭೂಮಿಯನ್ನು ಸುವರ್ಣ ಲೇಪನಗೊಳಿಸಿ, ಅದರ ಮೇಲೆ ಬೆಳ್ಳಿಯ ಅಕ್ಷರಗಳನ್ನು ತೆಗೆಯಲಾಗಿದೆ. ಕಲ್ಪಸೂತ್ರದ ಎಂಟು ತಾಡಪತ್ರ ಹಾಗೂ ಇಪ್ಪತ್ತು ಕಾಗದದ ಪ್ರತಿಗಳ ಮೇಲಿಂದ ತೆಗೆದುಕೊಂಡ ೩೭೪ ಚಿತ್ರಗಳ ಸಹಿತ ಕಲ್ಪಸೂತ್ರದ ಪ್ರಾಕಾಶನವೂ ಸಹ ಆಗಿದೆ. (ಪವಿತ್ರ ಕಲ್ಪಸೂತ್ರ, ಅಹಮದಾಬಾದ, ೧೯೫೨) ಪ್ರಾಧ್ಯಾಪಕ ನಾರ್ಮನ್ ಬ್ರಾವೂನನು ತನ್ನ "ದಿ ಸ್ಟೋರಿ ಆಫ್ ಕಾಲಕ" (ವಾಶಿಂಗಟನ್ ೧೯೩೩) ಎಂಬ ಹೆಸರಿನ ಗ್ರಂಥದಲ್ಲಿ ೩೯ ಚಿತ್ರಗಳ ಪರಿಚಯವನ್ನು ಮಾಡಿಕೊಟ್ಟಿದ್ದಾನೆ. ಹಾಗೂ ಸಾರಾಭಾಯಿ ನವಾಬನು ತನ್ನ ಕಾಲಕ ಕಥಾಸಂಗ್ರಹದಲ್ಲಿ (ಅಹಮ್ಮದಾಬಾದ, ೧೯೫೮) ಆರು ತಾಡಪತ್ರ ಒಂಭತ್ತು ಕಾಗದದ ಪ್ರತಿಗಳಿಂದ ೮೮ ಚಿತ್ರಗಳನ್ನು ಪ್ರಸ್ತುತಗೊಳಿಸಿದ್ದಾನೆ. ಡಾ. ಮೋತೀಚಂದನು ತನ್ನ ಜೈನ ಮಿನಿಏಚರ ಪೆಂಟಿಂಗ್ಸ ಫ್ರಾಮ್ ವೆಸ್ಟರ್ನ ಇಂಡಿಯಾ (ಅಹಮ್ಮದಾಬಾದ ೧೯೪೯) ಇದರಲ್ಲಿ ೨೬೨ ಚಿತ್ರಗಳನ್ನು ಪ್ರಕಟಿಸಿದ್ದಾನೆ. ಇವುಗಳ ಆಧಾರದಿಂದ ಜೈನ ಚಿತ್ರಕಲೆಯ ಅತಿ ಮಹತ್ವಪೂರ್ಣ ಆಲೋಚನಾತ್ಮಕ ಅಧ್ಯಯನವನ್ನು ನೀಡಿದ್ದಾನೆ.

### ಕಾಗದದ ಮೇಲೆ ಬರೆದ ಚಿತ್ರ:—

ಕಾಗದದ ಆವಿಷ್ಕಾರವು ಚೀನ ದೇಶದಲ್ಲಿ ಕ್ರಿ. ಶ. ೧೦೫ ರಲ್ಲಿ ಆಯಿತೆಂದು ಮನ್ನಿಸಲಾಗುತ್ತಿದೆ. ೧೦ ನೆಯ ೧೧ ನೆಯ ಶತಮಾನದಿಂದ ಅದರ ನಿರ್ಮಾಣವು ಅರಬ ದೇಶದಲ್ಲಿ ಆಗತೊಡಗಿತು. ಅಲ್ಲಿಂದ ಭಾರತದಲ್ಲಿ ಅದರ ಪ್ರವೇಶವಾಯಿತು. ಮುನಿ ಜಿನವಿಜಯಜಿಯವರ ಜೈಸಲಮೇರದ ಜೈನ ಭಂಡಾರದಲ್ಲಿ ಧ್ವನ್ಯಾಲೋಕ ಲೋಚನದ ಅಂತಿಮ ಪತ್ರವು ಲಭಿಸಿದೆ. ಇದನ್ನು ಜಿನಚಂದ್ರ ಸೂರಿಗಾಗಿ ಬರೆದುದಾಗಿದೆ. ಇದರ ಲೇಖನ ಕಾಲವು, ಜಿನವಿಜಯಜಿಯು ಹೇಳಿದ ಪ್ರಕಾರ ಕ್ರಿ. ಶ. ೧೧೬೦ ರ ಸುಮಾರಿನದಾಗಿದೆ. ಇನ್ನು ಕಾರಂಜಾ ಜೈನ ಭಂಡಾರದಲ್ಲಿ ಇರುವ ಉಪಸಕಾಚಾರದ (ರತ್ನಕರಂಡ ಶ್ರಾವಕಾಚಾರ) ಪ್ರಭಾಚಂದ್ರ ಕೃತ ಟೀಕಾ ಸಹಿತ ಇರುವ ಕಾಗದದ ಪ್ರತಿಯ ಲೇಖನ ಕಾಲವು ವಿ. ಸಂ. ೧೪೧೫ (ಕ್ರಿ. ಶ. ೧೩೫೮) ಇದೆ. ಆದರೆ ಕಾಗದದ ಎಲ್ಲಕ್ಕೂ ಪ್ರಾಚೀನ ಚಿತ್ರಿತ ಪ್ರತಿಯು ಕ್ರಿ. ಶ. ೧೪೨೭ ರಲ್ಲಿ ಬರೆದುದು. ಅದು ಕಲ್ಪಸೂತ್ರದ ಪ್ರತಿಯು. ಅದು ಲಂಡನದ ಇಂಡಿಯಾ ಆಫೀಸ ಲಾಯಬ್ರರಿಯಲ್ಲಿ ಸುರಕ್ಷಿತವಾಗಿದೆ. ಇದರಲ್ಲಿ ೩೧ ಚಿತ್ರಗಳಿವೆ. ಅದರ ಜೊತೆಗೆ ಜೋಡಿಸಿದ ಕಾಲಕಾಚಾರ್ಯಕಥಾದಲ್ಲಿ ಬೇರೆ ೧೩ ಚಿತ್ರಗಳಿವೆ. ಈ ಗ್ರಂಥದ ಎಲ್ಲ ೧೧೩ ಪತ್ರಗಳು ರಜತದ ಮಸಿಯಿಂದ ಕಪ್ಪು ಹಾಗೂ ಕೆಂಪು ಪೃಷ್ಠ ಭೂಮಿಯ ಮೇಲೆ ಬರೆಯಲಾಗಿದೆ. ಕೆಲವೊಂದು ಪೃಷ್ಠಗಳು ಕೆಂಪು ಅಥವಾ ನಾದಾ ಭೂಮಿಯ ಮೇಲೆ ಸುವರ್ಣ ಮಸಿಯಿಂದ ಬರೆದುವೂ ಇವೆ. ಪ್ರತಿಯ

ಪ್ರಾರಂಭದಲ್ಲಿ ಶೋಭೆಗೆಂದು ಆನೆಗಳು ಮತ್ತು ಹಂಸಗಳ ಸಾಲು, ಎಲೆ, ಹೂವುಗಳು, ಕಮಲ ಮೊದಲಾದವುಗಳನ್ನು ಚಿತ್ರಿಸಲಾಗಿದೆ. ಲಕ್ಷ್ಮಣಗಣಿ ಕೃತ ಸುಪಾಸಣಾಹ ಚರಿಯ ಇದರ ಒಂದು ಸಚಿತ್ರ ಪ್ರತಿಯು ಪಾಟನದ ಶ್ರೀಹೇಮಚಂದ್ರಾಚಾರ್ಯ ಜೈನ ಜ್ಞಾನ ಭಂಡಾರದಲ್ಲಿ ಸಂವತ್ ೧೪೭೯ (ಕ್ರಿ. ಶ. ೧೪೨೨)ರಲ್ಲಿ ಪಂ. ಭಾವಚಂದ್ರನ ಶಿಷ್ಯನಾದ ಹೀರಾನಂದ ಮುನಿಯಿಂದ ಬರೆದದ್ದಿದೆ. ಇದರಲ್ಲಿ ಒಟ್ಟು ೩೭ ಚಿತ್ರಗಳಿವೆ. ಇವುಗಳಲ್ಲಿ ಆರು ಪೂರ್ಣ ಪತ್ರಗಳಲ್ಲಿ ಮತ್ತು ಉಳಿದ ಪತ್ರಗಳಲ್ಲಿ ಅರ್ಧ ಹಾಗೂ ತೃತೀಯ ಭಾಗದಲ್ಲಿ ಬರೆಯಲಾಗಿದೆ. ಇವುಗಳಲ್ಲಿ ಸುಪಾರ್ಶ್ವ ತೀರ್ಥಂಕರರ ಹೊರತಾಗಿ ಸರಸ್ವತೀ, ಮಾತೃಸ್ವಪ್ನ, ವಿವಾಹ, ಸಮವಸರಣ, ಉಪದೇಶಕೊಡುವಿಕೆ ಮೊದಲಾದವುಗಳ ಚಿತ್ರಗಳು ಬಹು ಸುಂದರವಾಗಿವೆ. ಇದರ ತರುವಾಯದ ಕಾಲದ ಕಲ್ಪಸೂತ್ರದ ಅನೇಕ ಸಚಿತ್ರ ಪ್ರತಿಗಳು ವಿವಿಧ ಜೈನ ಭಂಡಾರಗಳಲ್ಲಿ ದೊರೆಯುತ್ತವೆ. ಅವುಗಳಲ್ಲಿ ವಿಶೇಷ ಉಲ್ಲೇಖನೀಯವಾದುದು ಬಡೋದೆಯ ನರಸಿಂಹಜಿಯ ಜ್ಞಾನ ಭಂಡಾರದಲ್ಲಿ ಸುರಕ್ಷಿತವಾಗಿದೆ. ಈ ಪ್ರತಿಯನ್ನು ಯವನಪುರದಲ್ಲಿ (ಜಾನಪುರ, ಉ. ಪ್ರ.) ಹುಸೇನ ಶಾಹನ ರಾಜ್ಯದಲ್ಲಿ ವಿ. ಸಂ. ೧೫೨೨ ರಲ್ಲಿ ಹರ್ಷಿಣೀ ಶ್ರಾವಿಕೆಯ ಆದೇಶದಿಂದ ಬರೆಯಲಾಗಿತ್ತು. ಇದರಲ್ಲಿ ೮೬ ಪುಟಗಳಿವೆ. ಸಮಗ್ರ ಲೇಖನವು ಸುವರ್ಣ ಮಸಿಯಿಂದ ಆದುದಾಗಿದೆ. ಇದರಲ್ಲಿ ಎಂಟು ಚಿತ್ರಗಳಿವೆ. ಇವುಗಳಲ್ಲಿ ಋಷಭದೇವನ ರಾಜ್ಯಾಭಿಷೇಕ, ಭರತ-ಬಾಹುಬಲಿ ಯುದ್ಧ, ಮಹಾವೀರ ಮಾತೆಯ ಸ್ವಪ್ನ, ಕೋಶಾ ಇವಳ ನೃತ್ಯ ಮೊದಲಾದವುಗಳು ಚಿತ್ರಿತವಾಗಿವೆ. ಈ ಚಿತ್ರಗಳನ್ನು ಲಾಲ ಭೂಮಿಯ ಮೇಲೆ ಹಳದಿ, ಹಸಿರು, ನೀಲಿ ಮೊದಲಾದ ಬಣ್ಣಗಳ ಹೊರತಾಗಿ ಸುವರ್ಣದ ಬಳಿಕೆಯನ್ನೂ ಸಹ ಹೆಚ್ಚಾಗಿ ಮಾಡಿ ಬರೆಯಲಾಗಿದೆ. ಆಕೃತಿಗಳಲ್ಲಿ ಪಶ್ಚಿಮೀಶೈಲಿಯ ಪೂರ್ವೋಕ್ತ ಲಕ್ಷಣಗಳು ಸುಸ್ಪಷ್ಟವಾಗಿವೆ. ಸ್ತ್ರೀಯರ ಮುಖಾಕೃತಿಗಳು ವಿಶೇಷವಾಗಿ ಪರಿಷ್ಕೃತವಾಗಿವೆ. ಇವರ ತುಟಿಗಳು ಬಣ್ಣದಿಂದ ರಂಜಿತವಾಗಿವೆ. ಇನ್ನು ಬೇರೆ ಉಲ್ಲೇಖನೀಯ ಕಲ್ಪಸೂತ್ರದ ಅಹಮದಾಬಾದದ ದೇವಸೇನ ಪಾಡಾದ ಪ್ರತಿಯಾಗಿದೆ. ಅದು ಭಡೋಚದ ಸಮೀಪದಲ್ಲಿರುವ ಗಂಧಾರ ಬಂದರದ ನಿವಾಸಿಯಾದನಾಣಾ ಮತ್ತು ಜೂರಾ ಶ್ರೇಷ್ಠಿಯ ವಂಶಜರಿಂದ ಬರೆಯಿಸಲಾಗಿದೆ. ಇದೂ ಸುವರ್ಣ ಮಸಿಯಿಂದ ಬರೆದುದಾಗಿದೆ. ಕಲೆಯ ದೃಷ್ಟಿಯಿಂದ ಇದರ ೨೫-೨೬ ಚಿತ್ರಗಳು ಈ ಪ್ರಕಾರದ ಗ್ರಂಥಗಳಲ್ಲಿ ಸರ್ವಶ್ರೇಷ್ಠವಾಗಿವೆ. ಯಾಕಂದರೆ ಇದರಲ್ಲಿ ಭರತ ನಾಟ್ಯಶಾಸ್ತ್ರದಲ್ಲಿ ವರ್ಣಿಸಿದ ನಾನಾ ನೃತ್ಯ-ಮುದ್ರೆಗಳ ಚಿತ್ರಣವು ಕಂಡುಬರುತ್ತದೆ. ಒಂದು ಚಿತ್ರದಲ್ಲಿ ಚಂಡಕೌಶಿಕನ ನಾಗ ವಶೀಕರಣವನ್ನು ಚಿತ್ರಿಸಲಾಗಿದೆ. ಇದರ ದಂಡೆ ಕಟ್ಟಿನ ಚಿತ್ರಣವೂ ಬಹು ಸುಂದರವಾಗಿದೆ. ಇದು ಇರಾಣಿ ಕಲೆಯಿಂದ ಪ್ರಭಾವಿತವಾಗಿದೆಯೆಂದು ತಿಳಿಯಲಾಗುತ್ತಿದೆ. ಇದರಲ್ಲಿ ಅಕಬರ ಕಾಲೀನ ಮೊಗಲ ಶೈಲಿಯ ಆಭಾಸವು ದೊರೆಯುತ್ತದೆ.

ಮೇಲ್ಕಾಣಿಸಿದ ಕಾಗದದ ಪ್ರತಿಗಳು ಸಚಿತ್ರವಾಗಿದ್ದು ಶ್ವೇತಾಂಬರ ಪರಂಪರೆ

ಯವಾಗಿವೆ. ಇವು ಪ್ರಕಟವಾಗಿವೆ. ವಿಶೇಷಜ್ಞರಿಂದ ಇವುಗಳಲ್ಲಿಯ ಚಿತ್ರಗಳ ಅಧ್ಯಯನವೂ ಕೂಡ ಆಗಿ ಹೋಗಿದೆ. ದುರ್ಭಾಗ್ಯದಿಂದ ಇಲ್ಲಿಯ ವರೆಗೆ ದಿಗಂಬರ ಜೈನ ಗ್ರಂಥಭಂಡಾರಗಳ ಸಂಶೋಧನೆಯು ಈ ದೃಷ್ಟಿಯಿಂದ ಆಗಬೇಕಾದದ್ದು ಆಗದೆ ಉಳಿದು ಹೋಗಿದೆ. ಅನೇಕ ಶಾಸ್ತ್ರ ಭಂಡಾರಗಳಲ್ಲಿ ಸಚಿತ್ರ ಪ್ರತಿಗಳು ಇರು ವುದು ಗೊತ್ತಾಗಿದೆ. ಉದಾಹರಣಾರ್ಥ–ದಿಲ್ಲಿಯ ಒಂದು ಶಾಸ್ತ್ರ ಭಂಡಾರದಲ್ಲಿ ಸಚಿತ್ರ ಪ್ರತಿಯಿದ್ದುದು ತಿಳಿಯುತ್ತದೆ. ಅದು ಪುಷ್ಪದಂತ ಕೃತ ಅಪಭ್ರಂಶ ಮಹಾಪುರಾಣದ ಒಂದು ಪ್ರತಿಯಾಗಿದೆ. ಇದರಲ್ಲಿ ನೂರಾರು ಚಿತ್ರಗಳು ತೀರ್ಥಂಕರರ ಜೀವನದ ಘಟನೆಗಳನ್ನು ಪ್ರದರ್ಶಿಸುವಂಥವಾಗಿವೆ. ನಾಗೋರ ಗ್ರಂಥ ಭಂಡಾರದಲ್ಲಿ ಯಶೋಧರ–ಚರಿತ್ರದ ಒಂದು ಪ್ರತಿಯು ಇದೆ. ಅದನು. ಕಂಡವರು ಅದರ ಚಿತ್ರಗಳನ್ನು ಬಹಳಷ್ಟು ಕೊಂಡಾಡುತ್ತಾರೆ. ನಾಗಪುರದ ಶಾಸ್ತ್ರ ಭಂಡಾರದಲ್ಲಿ ಸುಗಂಧದಶಮೀ ಕಥೆಯ ಪ್ರತಿಯು ಲಭಿಸಿದೆ. ಅದರಲ್ಲಿ ಆ ಕಥೆಯನ್ನು ಉದಹರಿಸುವಂಥ ೭೦ ಕ್ಕಿಂತಲೂ ಹೆಚ್ಚು ಸಂಖ್ಯೆಯಲ್ಲಿ ಚಿತ್ರಗಳಿವೆ. ಮುಂಬಯಿಯ ಐಲಕ ಪನ್ನಾಲಾಲ ದಿಗಂಬರ ಜೈನ ಸರಸ್ವತೀ ಭವನದಲ್ಲಿ ಭಕ್ತಾ ಮರ ಸ್ತೋತ್ರದ ಸಚಿತ್ರ ಪ್ರತಿಯಿದೆ. ಇದರಲ್ಲಿ ಸುಮಾರು ೪೦ ಚಿತ್ರಗಳು ಇವೆ. ಇದರಲ್ಲಿ ಆದಿನಾಥನ ಚತುರ್ಮುಖ ಕಮಲಾಸನ ಪ್ರತಿಬಿಂಬವೂ ಸಹ ಇದೆ. ಇದರ ಒಂದು ಮಗ್ಗುಲಿಗೆ ದಿಗಂಬರ ಸಾಧುವೂ ಎರಡನೆಯ ಮಗ್ಗುಲು ಯಾವನೋ ಮುಕು ಟಧಾರಿ ರಾಜನೂ ಉಪಾಸಕ ರೂಪದಿಂದ ನಿಂತಿದ್ದಾರೆ. ನೇಮಿಚಂದ್ರಕೃತ ತ್ರಿಲೋಕಸಾರದ ಸಚಿತ್ರ ಪ್ರತಿಗಳು ದೊರೆಯುತ್ತವೆ. ಅದರಲ್ಲಿ ನೇಮಿಚಂದ್ರ ಮತ್ತು ಅವನ ಶಿಷ್ಯನಾದ ಮಹಾಮಂತ್ರಿ ಚಾಮುಂಡರಾಯನ ಚಿತ್ರಗಳು ಕಂಡು ಬರುತ್ತವೆ. ಈ ಎಲ್ಲ ಚಿತ್ರಗಳ ಕಲಾತ್ಮಕ ಅಭ್ಯಾಸದ ಅವಶ್ಯಕತೆಯು ಬಹಳಷ್ಟಿದೆ. ಇದರಿಂದ ಜೈನ ಚಿತ್ರಕಲೆಯ ಮೇಲೆಯೂ ವಿಶೇಷ ಪ್ರಕಾಶ ಬಿದ್ದೀತೆಂಬ ಆಶೆಯೂ ಇದೆ.

ಕಾಗದದ ಆಧಾರವು ದೊರೆಯುವುದರಿಂದ ಚಿತ್ರಕಲೆಯ ರೀತಿ ಮತ್ತು ವಿಕಾಸ ಗಳಲ್ಲಿ ಕೆಲವೊಂದು ಪರಿವರ್ತನೆಗಳಾದುವು. ತಾಡಪತ್ರದಲ್ಲಿ ವಿಸ್ತಾರದ ದೃಷ್ಟಿಯಿಂದ ಚಿತ್ರಕಾರರ ಕೈಗಳು ಬಂಧಿತವಾಗಿದ್ದುವು. ಅವರಿಗೆ ಎರಡು, ಎರಡೂ ಅರ್ಧಕ್ಕಿಂತ ಹೆಚ್ಚು ಇಂಚು ಅಗಲ ಸ್ಥಳವು ದೊರೆಯುತ್ತಿರಲಿಲ್ಲ. ಕಾಗದದಲ್ಲಿ ಈ ಕಷ್ಟವು ಇರ ಲಿಲ್ಲ. ಚಿತ್ರಗಳ ನಲುವಾಗಿ ಸಾಕಷ್ಟು ಉದ್ದಗಲ ಸ್ಥಳಗಳು ಲಭಿಸಿದುವು. ಅದರಿಂದ ಅಭಿರುಚಿಗನುಸರಿಸಿ ಚಿಕ್ಕ ದೊಡ್ಡ ಆಕಾರದ ಚಿತ್ರಗಳ ನಿರ್ಮಾಣ ಮತ್ತು ಸಂಪೂ ಜನಗಳಲ್ಲಿ ಬಹಳ ಅನುಕೂಲತೆಯು ಉತ್ಪನ್ನವಾಯಿತು. ಬಣ್ಣಗಳ ಆಯ್ಕೆಯಲ್ಲಿಯೂ ವಿಸ್ತಾರವುಂಟಾಯಿತು. ರಂಗಗಳನ್ನು ಕೂಡಿಸುವುದು ಹೊಂದಿಸುವುದು ತಾಡಪತ್ರದ ಮೇಲೆ ಒಂದು ಕಠಿಣ ಕಾರ್ಯವೇ ಆಗಿತ್ತು. ಕಾಗದವು ಬಣ್ಣವನ್ನು ಸುಲಭವಾಗಿ ಹಿಡಿದುಕೊಳ್ಳುತ್ತಲಿತ್ತು. ಇದರ ಹೊರತಾಗಿ ಬೆಳ್ಳಿ-ಬಂಗಾರ ವರ್ಣದ ಬಣ್ಣಗಳ

ಉಪಯೋಗವೂ ಕೂಡ ಪ್ರಾರಂಭವಾಯಿತು. ಇದಕ್ಕೂ ಪೂರ್ವದಲ್ಲಿ ಸುವರ್ಣ ವರ್ಣದ ಉಪಯೋಗವೂ ಸಹ ಬಹಳ ಪ್ರಮಾಣದಲ್ಲಿ ಆಗುತ್ತಿತ್ತು. ಕುಂಚವನ್ನು ಸ್ವಲ್ಪ ಎದ್ದಿ, ಕೇವಲ ಆಭರಣಗಳನ್ನು ರೂಪಿಸುವುದರಲ್ಲಿ ಮಾತ್ರ ಈ ಬಣ್ಣಗಳನ್ನು ಉಪಯೋಗಿಸುತ್ತಿದ್ದರು. ಬಹುಶರ ಆ ಕಾಲದಲ್ಲಿ ಸುವರ್ಣದ ತುಟಾಗ್ರತೆಯೂ ಇದಕ್ಕೊಂದು ಕಾರಣವಾಗಿರಲಿಕ್ಕೆ ಸಾಕು. ಆದರೆ ಈ ಕಾಲದಲ್ಲಿ ಸುವರ್ಣವು ಸ್ವಲ್ಪ ಹೆಚ್ಚು ಸುಲಭವಾಗಿ ದೊರೆಯುತ್ತಿರುವುದು ತಿಳಿಯುತ್ತದೆ. ಇಲ್ಲವೆ ಚಿತ್ರಕಲೆಯ ಕಡೆಗೆ ಧನಿಕರ ಅಭಿರುಚಿ ಹಾಗೂ ಧ್ಯಾನಗಳೂ ಆಕರ್ಷಿತಗೊಂಡುವು. ಇದರ ಪರಿಣಾಮ ಸ್ವರೂಪವೆಂದು ಕೇವಲ ಚಿತ್ರಣದಲ್ಲಿ ಅಷ್ಟೇ ಅಲ್ಲ, ಗ್ರಂಥ ಲೇಖನದಲ್ಲಿಯೂ ಸಹ ಬೆಳ್ಳಿ ಬಂಗಾರಗಳ ಮಸಿಯನ್ನು ಉಪಯೋಗಿಸುವುದು ಪ್ರಚುರಗೊಂಡಿತು. ಸುವರ್ಣದ ಹೊಳಪಿನಿಂದ ಚಿತ್ರಕಾರರು ಬಹಳಷ್ಟು ಪ್ರಭಾವಿತರಾದರು. ಅವರು ಸಮಸ್ತ ಚಿತ್ರ ಭೂಮಿಯನ್ನೇ ಸುವರ್ಣ-ಲಿಪ್ತ ಮಾಡಿ ಬಿಡತೊಡಗಿದರು. ಜೈನ ಮುನಿಗಳ ವಸ್ತ್ರಗಳನ್ನೂ ಸಹ ಸುವರ್ಣ ರಂಜಿತಗೊಳಿಸುವ ಪರಿಪಾಠವುಂಟಾಯಿತು. ಎಷ್ಟು ಹೆಚ್ಚು ಸುವರ್ಣದ ಉಪಯೋಗವೋ ಅಷ್ಟು ಹೆಚ್ಚು ಸೌಂದರ್ಯ; ಈ ಭಾವನೆಯು ಕಲಾಭಿರುಚಿಯ ಒಂದು ವಿಕೃತಿಯೆಂದೇ ಹೇಳಬೇಕು. ಆದರೂ ವಿವಿಧ ಬಣ್ಣಗಳ ಮಧ್ಯದಲ್ಲಿ ಸುವರ್ಣದ ಸಮುಚಿತ ಉಪಯೋಗವೂ ಸಹ ಕಾಗದದ ಮೇಲಿನ ಚಿತ್ರಣದಲ್ಲಿ ಅಪೂರ್ವ ಸೌಂದರ್ಯವನ್ನು ಉತ್ಪನ್ನ ಮಾಡುತ್ತದೆಂಬುದರಲ್ಲಿ ಸಂಶಯವಿಲ್ಲ.

### ಕಾಷ್ಠ ಚಿತ್ರ :—

ಜೈನ ಶಾಸ್ತ್ರ ಭಂಡಾರಗಳಲ್ಲಿ ಕಟ್ಟಿಗೆಯ ಮೇಲೆಯೂ ತೆಗೆದ ಚಿತ್ರಗಳ ಮಾದರಿಗಳು ಲಭಿಸುತ್ತವೆ. ಈ ಕಟ್ಟಿಗೆಗಳನ್ನು ಆರಂಭದಲ್ಲಿ ತಾಡಪತ್ರದ ಪ್ರತಿಗಳನ್ನು ರಕ್ಷಿಸುವುದಕ್ಕೆಂದು ಕೆಳಗೆ-ಮೇಲೆ ಹಾಕಿ ಕಟ್ಟುತ್ತಿದ್ದರು. ಇಂಥ ಒಂದು ಸಚಿತ್ರ ಕಾಷ್ಠ ಚಿತ್ರಪಟವು ಮುನಿ ಜಿನ-ವಿಜಯಜಿಯವರ ಜೈಸಲಮೇರದ ಜ್ಞಾನ ಭಂಡಾರದಲ್ಲಿ ಲಭಿಸಿದೆ. ಇದು ೨೭ ಇಂಚು ಉದ್ದ, ೩ ಇಂಚು ಅಗಲವಿದೆ. ಬಣ್ಣವು ನೀರಿನಿಂದ ತೊಳೆದರೂ ಹೋಗದಂಥ ಒಳ್ಳೆಯ ತರಗತಿಯದಿದೆ. ಪಟದ ಮಧ್ಯದಲ್ಲಿ ಜೈನ ಮಂದಿರದ ಆಕೃತಿಯಿದೆ. ಆದರಲ್ಲೊಂದು ಜಿನಮೂರ್ತಿಯು ವಿರಾಜಮಾನವಾಗಿದೆ. ಮೂರ್ತಿಯ ಎರಡೂ ಮಗ್ಗಲಿಗೆ ಪರಿಚಾರಕರು ನಿಂತಿದ್ದಾರೆ. ಬಲಗಡೆಯ ಕೋಷ್ಠಕದಲ್ಲಿ ಇಬ್ಬರು ಉಪಾಸಕರು ಅಂಜಲಿ-ಮುದ್ರೆಯಲ್ಲಿ ನಿಂತಿದ್ದಾರೆ. ಇಬ್ಬರು ವ್ಯಕ್ತಿಗಳು ಡಿಂಡಿಮವನ್ನು ಬಾರಿಸುವುದರಲ್ಲಿ ಮಗ್ನರಾಗಿದ್ದಾರೆ. ಇಬ್ಬರು ನರ್ತಕಿಯರು ನರ್ತನ ಮಾಡುತ್ತಿದ್ದಾರೆ. ಮೇಲೆ ಆಕಾಶದಲ್ಲಿ ಒಬ್ಬ ಕಿನ್ನರಿಯು ಹಾರುತ್ತಿದ್ದಾಳೆ. ಎಡಗಡೆಯ ಪ್ರಕೋಷ್ಠದಲ್ಲಿ ಮೂವರು ಉಪಾಸಕರು ಕೈಜೋಡಿಸಿ ನಿಂತಿದ್ದಾರೆ. ಒಬ್ಬ ಕಿನ್ನರನು ಆಕಾಶದಲ್ಲಿ ಹಾರುತ್ತಿದ್ದಾನೆ. ಈ ಮಧ್ಯವರ್ತಿ ಚಿತ್ರದ ಎರಡೂ ಮಗ್ಗಲಿಗೆ ವ್ಯಾಖ್ಯಾನಸಭೆಯು ನಡೆಯುತ್ತಿದೆ. ಒಂದರಲ್ಲಿ ಆಚಾರ್ಯ

ಜಿನದತ್ತಸೂರಿಯೂ ವಿರಾಜಮಾನನಾಗಿದ್ದಾನೆ. ಅವನ ಹೆಸರೆನ್ನೂ ಸಹ ಬರೆಯಲಾಗಿದೆ. ಅವನ ಎದುರಿಗೆ ಪಂಡಿತ ಜಿನರಕ್ಷಿತನು ಕುಳಿತಿದ್ದಾನೆ. ಅನ್ಯ ಉಪಾಸಕ-ಉಪಾಸಿಕೆಯರೂ ಸಹ ಇದ್ದಾರೆ. ಮುನಿಯ ಎದುರಿಗೆ ಸ್ಥಾಪನಾಚಾರ್ಯ ಇಡಲಾಗಿದೆ. ಅದರ ಮೇಲೆ ಮಹಾವೀರನ ಹೆಸರೆನ್ನೂ ಕೂಡ ಬರೆಯಲಾಗಿದೆ. ಬಲಗಡೆಗೆ ವ್ಯಾಖ್ಯಾನ ಸಭೆಯಲ್ಲಿ ಆಚಾರ್ಯ ಜಿನದತ್ತನು ಗುಣಚಂದ್ರಾಚಾರ್ಯರೊಡನೆ ವಿಚಾರ ವಿಮರ್ಶೆಯನ್ನು ಮಾಡುತ್ತಿದ್ದಾನೆ. ಇವರಿಬ್ಬರ ಮಧ್ಯದಲ್ಲಿಯೂ ಸ್ಥಾಪನಾಚಾರ್ಯ ನಿರ್ಮಿಸಲಾಗಿದೆ, ಮುನಿ ಜಿನವಿಜಯಜಿಯು ಈ ಚಿತ್ರಪಟವು ಜಿನದತ್ತಸೂರಿಯ ಕಾಲದ್ದೇ ಇದ್ದರೆ ಆಶ್ಚರ್ಯಪಡುವ ಕಾರಣವಿಲ್ಲೆಂದು ಹೇಳುತ್ತಾನೆ. ಅವನ ಜನ್ಮವು ವಿ. ಸಂ. ೧೧೩೨ ಮತ್ತು ಸ್ವರ್ಗವಾಸವು ಸಂ. ೧೨೧೧ ರಲ್ಲಿ ಆದದ್ದು ಸಿದ್ಧವಾಗುತ್ತದೆ. ಉಪರ್ಯುಕ್ತ ಚಿತ್ರವು ಮಾರವಾಡದಲ್ಲಿ ಬರುವ ವಿಕ್ರಮಪುರದ ಮಂದಿರದಲ್ಲಿ ದೀಕ್ಷಾಗ್ರಹಣದ ಕಾಲದ್ದಿರುವ ಸಂಭವವಿದೆ. ಮುನಿ ಜಿನವಿಜಯಜಿಯಿಂದ ಜೈಸಲಮೇರದ ಜ್ಞಾನಭಂಡಾರದಲ್ಲಿ ಇನ್ನೊಂದು ಕಾಷ್ಠಚಿತ್ರಪಟದ ಶೋಧವಾಗಿದೆ. ಇದು ಮೂವತ್ತು ಇಂಚು ಉದ್ದ ಮತ್ತು ಮೂರು ಇಂಚು ಅಗಲವಿದೆ. ಇದರಲ್ಲಿ ವಾದಿದೇವ ಸೂರಿ ಮತ್ತು ಆಚಾರ್ಯ ಕುಮುದ ಚಂದ್ರರ ಮಧ್ಯದಲ್ಲಿ ನಡೆದ ಶಾಸ್ತ್ರಾರ್ಥಕ್ಕೆ ಸಂಬಂಧಿಸಿದ ವಿವಿಧ ಘಟನೆಗಳ ಚಿತ್ರಣವಿದೆ. ಶ್ರೀ ಸಾರಾಭಾಯಿ ನವಾಬರ ಸಂಗ್ರಹದಲ್ಲಿ ೧೨ ನೆಯ ಶತಮಾನದ ಒಂದು ಕಾಷ್ಟಪಟವಿದೆ. ಅದು ಮೂವತ್ತು ಇಂಚು ಉದ್ದ ಎರಡು ಪೂರ್ಣಾಂಕ ಮೂರು ನಾಲ್ಕಂಶ ಇಂಚು ಅಗಲವಿದೆ. ಇದರಲ್ಲಿ ಭರತ-ಬಾಹುಬಲಿಯ ಯುದ್ಧದ ವರ್ಣನೆಯು ಚಿತ್ರಿತಗೊಂಡಿದೆ. ಇದರಲ್ಲಿ ಆನೆ, ಹಂಸ, ಸಿಂಹ, ಕಮಲಪುಷ್ಪ ಮೊದಲಾದವುಗಳ ಚಿತ್ರಗಳು ಬಹಳ ಸುಂದರವಾಗಿವೆ. ವಿ. ಸಂ. ೧೪೫೬ ರಲ್ಲಿ ಬರೆದ ಸೂತ್ರಕೃತಾಂಗವೃತ್ತಿಯ ತಾಡಪತ್ರೀಯ ಪ್ರತಿಯ ಕಾಷ್ಠಪಟವು ೩೪½ ಇಂಚು ಉದ್ದ ಮತ್ತು ೩ ಇಂಚು ಅಗಲವಾಗಿದ್ದು, ಮಹಾವೀರನ ಜೀವನ ಘಟನೆಗಳನ್ನು ಚಿತ್ರಿಸಿದ್ದು ಕಂಡುಬರುತ್ತದೆ. ಇದೇ ಪ್ರಕಾರ ಸಂ. ೧೪೨೫ ರಲ್ಲಿ ಬರೆದ ಧರ್ಮೋಪದೇಶಮಾಲಾ ಎಂಬುದರ ಕಾಷ್ಟಪಟವು ೩೫½ ಇಂಚು ಉದ್ದ ಮತ್ತು ೩¼ ಇಂಚು ಅಗಲವಿದೆ. ಇದರ ಮೇಲೆ ಪಾರ್ಶ್ವನಾಥನ ಜೀವನಘಟನೆಗಳನ್ನು ಚಿತ್ರಿಸಲಾಗಿದೆ. ಈ ಎಲ್ಲ ಕಾಷ್ಟ-ಚಿತ್ರಗಳು ಸಾಮಾನ್ಯವಾಗಿ ಅದೇ ಪಶ್ಚಿಮ ಶೈಲಿಯಲ್ಲಿವೆ. ಅವುಗಳ ಪರಿಚಯವನ್ನು ಮೇಲೆ ಕೊಟ್ಟಿದೆಯಷ್ಟೆ.

ವಸ್ತ್ರದ ಮೇಲಿನ ಚಿತ್ರಕಲೆ :—

ವಸ್ತ್ರದ ಮೇಲೆ ಚಿತ್ರ ತೆಗೆಯುವ ಕಲೆಯು ಭಾರತವರ್ಷದಲ್ಲಿ ಬಹು ಪ್ರಾಚೀನವಾಗಿದೆ. ಪಾಲಿ ಗ್ರಂಥ ಹಾಗೂ ಜೈನ ಆಗಮಗಳಲ್ಲಿ ಇದರ ಅನೇಕ ಉಲ್ಲೇಖಗಳು ಲಭಿಸುತ್ತವೆ. ಮಹಾವೀರನ ಶಿಷ್ಯ, ಮತ್ತು ತರುವಾಯದ ವಿರೋಧಿ ಮಂಖಲಿ

ಗೋಶಾಲನ ತಂದೆ, ದೀಕ್ಷೆ ತಕ್ಕೊಳ್ಳುವ ಪೂರ್ವದಲ್ಲಿ ಸ್ವತಃ ಗೋಶಾಲ ಇವರು ಚಿತ್ರ ಪಟವನ್ನು ತೋರಿಸಿ, ಹೊಟ್ಟೆಯನ್ನು ತುಂಬಿಕೊಳ್ಳುತ್ತಿದ್ದರು. ಆದರೆ ವಸ್ತ್ರವು ಬಹು ನಶ್ವರ ದ್ರವ್ಯವು. ಆದರಿಂದ ಸ್ವಾಭಾವಿಕವಾಗಿ ಇದರ ಬಹಳ ಪ್ರಾಚೀನ ಉದಾಹರಣೆಗಳು ಉಪಲಬ್ಧವಿಲ್ಲ. ಆದರೂ ಕೂಡ ಹದಿನಾಲ್ಕನೆಯ ಶತಮಾನದ ಆಚೆಯ ಅನೇಕ ಜೈನ ವಸ್ತ್ರ ಪಟಗಳು ಕಂಡುಬರುತ್ತವೆ. ಚಿಂತಾಮಣಿ ಎಂಬ ಹೆಸರಿನ ಒಂದು ವಸ್ತ್ರ ಪಟವು ೧೯ ೩/೮ ಇಂಚು ಉದ್ದ ಹಾಗೂ ೧೭ ೩/೮ ಇಂಚು ಅಗಲ ವಿದ್ದು, ವಿ. ಸಂ. ೧೪೧೧ ರಲ್ಲಿ (ಕ್ರಿ. ಶ. ೧೩೫೪) ನಿರ್ಮಾಣವಾದದ್ದು, ಬಿಕಾನೇರ ನಿವಾಸಿಯಾದ ಶ್ರೀ ಅಗರಚಂದ ನಾಹಟಾ ಇವರ ಸಂಗ್ರಹದಲ್ಲಿ ಇದೆ. ಇದರಲ್ಲಿ ಪದ್ಮಾಸನ ಪಾರ್ಶ್ವನಾಥ, ಅವನ ಯಕ್ಷ-ಯಕ್ಷಿಣಿಯರಾದ ಧರಣೇಂದ್ರ-ಪದ್ಮಾವತಿ ಹಾಗೂ ಚೌರಿಯನ್ನು ಬೀಸುವವರ ಚಿತ್ರಗಳಿವೆ. ಮೇಲ್ಭಾಗದಲ್ಲಿ ಪಾರ್ಶ್ವಯಕ್ಷ ಮತ್ತು ವೈರಾಟ್ಯಾ-ದೇವಿ ಹಾಗೂ ಇಬ್ಬರು ಗಂಧರ್ವರನ್ನೂ ಸಹ ಚಿತ್ರಿಸಲಾಗಿದೆ. ಕೆಳಗೆ ತರುಣಪ್ರಭಾಚಾರ್ಯ ಮತ್ತು ಅವನ ಇಬ್ಬರು ಶಿಷ್ಯರ ಚಿತ್ರವಿದೆ. ಇಂಥದೇ ಒಂದು ಮಂತ್ರಪಟವು ಶ್ರೀ ಸಾರಾಭಾಯಿ ನವಾಬರ ಸಂಗ್ರಹದಲ್ಲಿ ಇದೆ. ಇದರಲ್ಲಿ ಮಹಾವೀರನ ಪ್ರಧಾನ ಗಣಧರನಾದ ಗೌತಮಸ್ವಾಮಿಯು ಕಮಲಾಸನದ ಮೇಲೆ ವಿರಾಜಮಾನವಾದುದನ್ನು ಚಿತ್ರಿಸಿದೆ. ಅವನ ಎರಡೂ ಮಗ್ಗಲಿಗೆ ಮುನಿಗಳ ಇದ್ದಾರೆ. ಮಂಡಲದ ಹೊರಗೆ ಅಶ್ವಾರೂಢ ಕಾಲಿ ಹಾಗೂ ಭೈರವ ಹಾಗೂ ಧರ ಣೇಂದ್ರ-ಪದ್ಮಾವತಿಯರ ಚಿತ್ರಗಳೂ ಸಹ ಇವೆ. ಈ ಚಿತ್ರಪಟವು ಭಾವದೇವ ಸೂರಿಗಾಗಿ ವಿ. ಸಂ. ೧೪೧೨ ರಲ್ಲಿ ನಿರ್ಮಾಣ ಮಾಡಲಾಗಿದೆ. ಇನ್ನೊಂದು ಜೈನ ವಸ್ತ್ರಪಟವು ಡಾ ಕುಮಾರ ಸ್ವಾಮಿಯ ಸಂಗ್ರಹದಲ್ಲಿಯೂ ಇದೆ. ಅದು ಅವರ ಅಭಿಪ್ರಾಯಕ್ಕನುಸರಿಸಿ ೧೬ ನೆಯ ಶತಮಾನದ್ದಾಗಿದೆ. ಆದರೆ ಡಾ. ಮೋತೀಚಂದನ ಮತಕ್ಕನುಸರಿಸಿ ಅದು ಹದಿನೈದನೆಯ ಶತಮಾನದ ಪ್ರಾರಂಭದ್ದೆಂದು ತೋರುತ್ತದೆ. ಪಟದ ಎಡ ಮಗ್ಗುಲಿನಲ್ಲಿ ಪಾರ್ಶ್ವನಾಥನ ಸಮವಸರಣದ ರಚನೆಯಿದೆ. ಇದರ ಎರಡೂ ಮಗ್ಗಲಿಗೆ ಯಕ್ಷ-ಯಕ್ಷಿಣಿಯರಲ್ಲದೆ ಓಂಕಾರದ ಐದು ಆಕೃತಿಗಳು ಇವೆ. ಇವಲ್ಲದೆ ಚಂದ್ರಕಲೆಯ ಆಕೃತಿಯ ಮೇಲೆ ಆಸೀನವಾದ ಬಹುತರ ಐವರು ಸಿದ್ಧರು ಹಾಗೂ ಸುಧರ್ಮಸ್ವಾಮಿ ಮತ್ತು ನವಗ್ರಹಗಳ ಚಿತ್ರಗಳಿವೆ. ಪಟದ ಮಧ್ಯದಲ್ಲಿ ಪಾರ್ಶ್ವನಾಥನ ಪ್ರತಿಮೆಯು ಧ್ವಜಾಯುಕ್ತ ಮತ್ತು ಶಿಖರಬದ್ಧ ಮಂದಿರದಲ್ಲಿ ಇದ್ದಂತೆ ಚಿತ್ರಿಸಲಾಗಿದೆ. ಈ ಮಂದಿರವು ಶತ್ರುಂಜಯ ಪರ್ವತದ ಮೇಲಿನದಾಗಿದೆಯೆಂದು ಅನುಮಾನಿಸಲಾಗಿದೆ. ಆ ಐದು ಸಿದ್ಧರ ಮೂರ್ತಿಗಳು ಐವರು ಪಾಂಡವರದಾಗಿವೆ, ಇವರು ಶತ್ರುಂಜಯಗಿರಿಯಿಂದ ಮುಕ್ತಿಯನ್ನು ಹೊಂದಿದ್ದರು. ಹೀಗೆ ಇನ್ನೂ ಅನೇಕ ವಸ್ತ್ರಪಟಗಳು ಲಭಿಸಿವೆ. ಇವುಗಳ ಉಪಯೋಗವನ್ನು ಉಪಾಸನಾ ಮತ್ತು ಋದ್ಧಿ,ಸಿದ್ಧಿಗಳನ್ನು ಪಡೆಯಲಿಕ್ಕೆಂದು ಮಾಡಲಾಗುತ್ತಿತ್ತು. ಆದರೆ ಕಲೆಯ ದೃಷ್ಟಿಯಿಂದಲೂ ಇವುಗಳ ಮಹತ್ವವು ಬಹಳವಿದೆ.

# ಉಪಸಂಹಾರ

ಮೇಲ್ಕಾಣಿಸಿದ ನಾಲ್ಕು ವ್ಯಾಖ್ಯಾನಗಳಲ್ಲಿ ಜೈನಧರ್ಮದ ಇತಿಹಾಸ, ಸಾಹಿತ್ಯ, ತತ್ವಜ್ಞಾನ ಮತ್ತು ಕಲೆಗಳ ಸಂಕ್ಷಿಪ್ತ ಪರಿಚಯವನ್ನು ಕೊಡಲಾಗಿದೆಯಷ್ಟೆ. ಇದ ರಿಂದ ಅವುಗಳ ಮೂಲಕ ಭಾರತೀಯ ಸಂಸ್ಕೃತಿಯ ಪರಿಪುಷ್ಟಿಯ ಸ್ವರೂಪವನ್ನು ತಿಳಿ ಯಲು ಸಾಧ್ಯವಿದೆ. ಈ ಧರ್ಮದ ಆಧಾರ-ಭೂಮಿಯು ವೈದಿಕ ಪರಂಪರೆಯಷ್ಟೇ ಪ್ರಾಚೀನತಮವಾಗಿದೆ. ಯಾಕಂದರೆ ಋಗ್ವೇದದಲ್ಲಿಯೇ ಕೇಶಿಯಂಥ ವಾತ ರಶನಾ ಮುನಿಯ ಹಾಗೂ ಅವನ ಸಾಧನೆಗಳ ಉಲ್ಲೇಖವು ಬರುತ್ತದೆ. ಅವನ್ನ ವೈದಿಕ ಋಷಿಗಳಿಂದ ಭಿನ್ನ ಹಾಗೂ ಶ್ರಮಣ ಮುನಿಗಳಿಂದ ಅಭಿನ್ನನೆಂದು ಪ್ರಾಮಾ ಣಿತವಾಗುತ್ತದೆ. ಕೇಶಿ ಮತ್ತು ಆದಿ ತೀರ್ಥಂಕರ ಋಷಭದೇವರಲ್ಲಿ ಏಕತ್ವವನ್ನೂ ಸಹ ಹಿಂದೂ ಮತ್ತು ಜೈನ ಪುರಾಣಗಳು ಸಿದ್ಧಗೊಳಿಸುತ್ತವೆ.

ಕೋಸಲದಿಂದ ಪ್ರಾರಂಭವಾಗಿ ಈ ಶ್ರಮಣ ಧರ್ಮವು ಪೂರ್ವದ ಕಡೆಗೆ ವಿದೇಹ ಮತ್ತು ಮಗಧ ಅದರಂತೆ ಪಶ್ಚಿಮದ ಕಡೆಗೆ ತಕ್ಷಶಿಲೆ ಹಾಗೂ ಸೌರಾಷ್ಟ್ರದ ವರೆಗೆ ಪಸರಿಸಿತ್ತು. ಅದು ಅಂತಿಮ ತೀರ್ಥಂಕರ ಮಹಾವೀರನಿಂದ ಕ್ರಿ. ಪೂ. ಆರ ನೆಯ ಶತಮಾನದಲ್ಲಿ ತನ್ನ ಸುವ್ಯವಸ್ಥಿತ ಸ್ವರೂಪವನ್ನು ಹೊಂದಿ, ಅವನ ಅನುಯಾ ಯಿಗಳಿಂದ ಅಖಿಲ ದೇಶವ್ಯಾಪಿಯಾಯಿತು. ಅದು ಕಾಲ ಕಾಲಕ್ಕೆ ಉತ್ತರ ಮತ್ತು ದಕ್ಷಿಣ ಭಾರತದ ವಿವಿಧ ರಾಜವಂಶಗಳನ್ನು ಬಹುಜನ ಸಮಾಜವನ್ನೂ ಪ್ರಭಾವಿತಗೊಳಿಸಿತು. ತನ್ನ ಅಂತರಿಕ ಗುಣಗಳ ಫಲ-ಸ್ವರೂಪವಾಗಿ ಅದು ಅವಿ ಚ್ಛಿನ್ನ ಧಾರಾವಾಹಿ ರೂಪದಿಂದ ಇಂದಿನ ವರೆಗೂ ದೇಶದಲ್ಲಿ ತನ್ನ ಅಸ್ತಿತ್ವವನ್ನು ಸುರಕ್ಷಿತವಾಗಿ ಇಟ್ಟುಕೊಂಡಿದೆ.

ಜೈನ ಧರ್ಮವು ಕಳೆದ ಮೂರು-ನಾಲ್ಕು ಸಾವಿರ ವರ್ಷಗಳಿಂದ ತನ್ನ ಆಧ್ಯಾತ್ಮಿಕ ಭೂಮಿಕೆ, ನೈತಿಕ ವಿನ್ಯಾಸ, ವ್ಯವಹಾರಿಕ ಉಪಯುಕ್ತತೆ ಮತ್ತು ಸಮತೋಲ ದೃಷ್ಟಿ ಈ ಅಂತರಿಕ ಗುಣಗಳ ಬಲದಿಂದ ಈ ದೇಶದ ಜನಜೀವನದಲ್ಲಿ ನೆಲಸಿ ನಿಂತಿದೆ. ಇದರಲ್ಲಿ ಪ್ರಕೃತಿಯ ಜಡ ಚೈತನ್ಯ ತತ್ವಗಳ ಸತ್ತೆಯನ್ನು ಸ್ವೀಕರಿಸ ಲಾಗಿದೆ. ಚೈತನ್ಯವನ್ನು ಜಡದಿಂದ ಮೇಲೆತ್ತಿ, ಪರಮಾತ್ಮತ್ವವನ್ನು ಸಂಪಾದಿಸುವ ಕಲೆಯನ್ನು ಪ್ರತಿಪಾದಿಸಲಾಗಿದೆ. ವಿಶ್ವದ ಅನಾದಿ-ಅನಂತ ಪ್ರವಾಹದಲ್ಲಿ ಜಡ-ಚೇತನರೂಪ ದ್ರವ್ಯಗಳ ನಾನಾ ರೂಪ ಮತ್ತು ಗುಣಗಳ ವಿಕಾಸಕ್ಕಾಗಿ ಇಲ್ಲಿ ಯಾವ ಈಶ್ವರನ ಇಚ್ಛೆಯನ್ನೂ ಅಧೀನತೆಯನ್ನೂ ಸ್ವಿಕರಿಸಿಲ್ಲ. ಜೀವ ಮತ್ತು ಅಜೀವ ತತ್ವಗಳ ಪರಿಣಾಮೀ ನಿತ್ಯತ್ವ ಗುಣಗಳಿಂದಲೇ ಸಮಸ್ತ ವಿಕಾರ ಮತ್ತು ವಿಕಾಸದ ಗುಟ್ಟನ್ನು ತಿಳಿದು, ತಿಳಿಸಿಕೊಡಲಿಕ್ಕೆ ಪ್ರಯತ್ನ ಮಾಡಲಾಗಿದೆ. ಸತ್ತೆಯು ಸ್ವತಃ ಉತ್ಪಾದ-ವ್ಯಯ-ಧ್ರೌವ್ಯಾತ್ಮಕವಾಗಿದೆ. ಇಂಥ ಸತ್ತೆಯುಳ್ಳ ಸಮಸ್ತ ದ್ರವ್ಯಗಳು ಗುಣ

ಪರ್ಯಾಯ-ಯುಕ್ತವಾಗಿವೆ. ಇವೇ ಮೌಲಿಕ ಸಿದ್ಧಾಂತಗಳಲ್ಲಿ ಜೈನ ದರ್ಶನ ಸಮ್ಮತ ಪದಾರ್ಥಗಳ ನಿತ್ಯ ಅನಿತ್ಯತ್ವ ಸ್ವರೂಪದ ಮರ್ಮವು ಅಂತರ್ನಿಹಿತವಾಗಿದೆ. ಇದನ್ನು ತಿಳಿದುಕೊಳ್ಳದೆ ಪ್ರಾಣಿಯು ಭ್ರಾಂತವಾಗಿ ತಿರುಗುತ್ತಾನೆ; ಬಂಧನದಲ್ಲಿಯೂ ಬೀಳುತ್ತಾನೆ. ಈ ತಥ್ಯದೆಡೆಗೆ ನಿಜವಾದ ದೃಷ್ಟಿ ಮತ್ತು ಅದರ ನಿಜವಾದ ಜ್ಞಾನ ಹಾಗೂ ಅದಕ್ಕನುಸರಿಸಿ ಆಚರಿಸುವುದು ಇವು ನಡೆದಾಗಲೇ ಯಾವನೂ ಕೂಡ ಪೂರ್ಣ ಸ್ವಾತಂತ್ರ್ಯ ಮತ್ತು ಬಂಧನ-ಮುಕ್ತಿ ರೂಪ ಮೋಕ್ಷದ ಅಧಿಕಾರಿಯಾಗಲು ಶಕ್ತನಾಗುತ್ತಾನೆ. ಇದೇ ಜೈನ ದರ್ಶನಕ್ಕನುಸರಿಸಿ, ಜೀವನದ ಸರ್ವೋಚ್ಚ ಧ್ಯೇಯ ಮತ್ತು ಲಕ್ಷ್ಯವಾಗಿದೆ.

ವ್ಯಾವಹಾರಿಕ ದೃಷ್ಟಿಯಿಂದ ವಿರೋಧದಲ್ಲಿ ಸಾಮಂಜಸ್ಯ, ಕಲಹದಲ್ಲಿ ಶಾಂತಿ, ಜೀವಮಾತ್ರರ ವಿಷಯದಲ್ಲಿಯೂ ಆತ್ಮೀಯತೆಯ ಭಾವ ಉತ್ಪನ್ನವಾಗುವುದೇ ನಿಜವಾದ ದರ್ಶನ, ಜ್ಞಾನ ಮತ್ತು ಚಾರಿತ್ರವಾಗಿದೆ. ಇದರ ಅನುಷಂಗಿಕ ಸಾಧನೆಗಳು ಹೀಗಿವೆ :— ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ ರೂಪ ನಿಯಮ ಹಾಗೂ ಕ್ಷಮಾ, ಮೃದುತಾ ಮೊದಲಾದ ಗುಣಗಳು. ನಾನಾ ಪ್ರಕಾರದ ವ್ರತಗಳು ಮತ್ತು ಉಪವಾಸಗಳು, ಭಾವನೆಗಳು ಹಾಗೂ ತಪಸ್ಸುಗಳು; ಧ್ಯಾನ ಮತ್ತು ಯೋಗಗಳು, ಇವೆಲ್ಲದರ ಉದ್ದೇಶವು ಇದೇ ಆತ್ಮವೃತ್ತಿಯನ್ನು ಸಂಪಾದಿಸುವುದೇ ಆಗಿದೆ, ಸಮತ್ವದ ಬೋಧ ಹಾಗೂ ಅಭ್ಯಾಸ ಮಾಡಿಸುವುದೇ ಅನೇಕಾಂತ ಮತ್ತು ಸ್ಯಾದ್ವಾದದಂಥ ಸಿದ್ಧಾಂತಗಳ ಗುರಿಯಾಗಿದೆ.

ಜೀವನದಲ್ಲಿ ಈ ವೃತ್ತಿಯನ್ನು ಸ್ಥಾಪಿಸುವುದಕ್ಕಾಗಿ ತೀರ್ಥಂಕರರು ಹಾಗೂ ಆಚಾರ್ಯರು ಮಾಡಿದ ಉಪದೇಶವು ಸಹಸ್ರಾರು ಜೈನ ಗ್ರಂಥಗಳಲ್ಲಿ ಗ್ರಥಿತವಾಗಿದೆ ಈ ಗ್ರಂಥಗಳು ವಿವಿಧ ಪ್ರದೇಶಗಳಲ್ಲಿ ಬರೆದಂಥವು, ವಿವಿಧ ಯುಗಗಳಲ್ಲಿ ರಚಿತವಾದಂಥವು, ಭಿನ್ನ ಭಿನ್ನ ಭಾಷೆಗಳಲ್ಲಿ ರೂವುಗೊಂಡಂಥವು ಆಗಿವೆ; ಅರ್ಧಮಾಗಧೀ, ಶೌರಸೇನೀ, ಮಹಾರಾಷ್ಟ್ರೀ ಮತ್ತು ಅಪಭ್ರಂಶ ಪ್ರಾಕೃತಗಳು ಹಾಗೂ ಸಂಸ್ಕೃತದಲ್ಲಿ ಜೈನಧರ್ಮದ ವಿಪುಲ ಸಾಹಿತ್ಯವು ಉಪಲಬ್ಧವಿದೆ. ಅದು ತನ್ನ ಭಾಷೆ, ವಿಷಯ, ಶೈಲಿ ಹಾಗೂ ರಚನೆಗಳ ಗುಣಗಳಿಂದ ತನ್ನ ವಿಶೇಷತೆಯನ್ನು ಕಾಯ್ದುಕೊಂಡಿದೆ. ಆಧುನಿಕ ಲೋಕಭಾಷೆಗಳನ್ನೂ ಅವುಗಳ ಸಾಹಿತ್ಯಿಕ ವಿಭಾಗಗಳ ವಿಕಾಸವನ್ನೂ ತಿಳಿದುಕೊಳ್ಳುವುದಕ್ಕಾಗಿಯಂತೂ ಈ ಸಾಹಿತ್ಯವು ಅದ್ವಿತೀಯವಾಗಿದೆ.

ಸಾಹಿತ್ಯದ ಹೊರತಾಗಿ ಗುಹೆಗಳು, ಸ್ತೂಪಗಳು, ಮಂದಿರಗಳು ಮತ್ತು ಮೂರ್ತಿಗಳು ಅದರಂತೆಯೇ ಚಿತ್ರವೇ ಮೊದಲಾದ ಲಲಿತ ಕಲೆಗಳ ನಿರ್ಮಿತಿಯಿಂದಲೂ ಜೈನ ಧರ್ಮವು ಕೇವಲ ಜನತೆಯ ಆಧ್ಯಾತ್ಮಿಕ ಮತ್ತು ನೈತಿಕ ತರಗತಿಯನ್ನು ಮೇಲಕ್ಕೆತ್ತಿತಷ್ಟೇ ಅಲ್ಲ, ಆದರೆ ಸಮಸ್ತ ದೇಶದ ಭಿನ್ನ ಭಿನ್ನ ಭಾಗಗಳನ್ನು ಸೌಂದರ್ಯದಿಂದ ಅಲಂಕರಿಸಿತು. ಅದರ ದರ್ಶನದಿಂದ ಹೃದಯವು ವಿಶುದ್ಧವೂ ಆನಂದೋನ್ಮಾದ ಭರಿತವೂ ಆಗುತ್ತದೆ.

ಜೈನಧರ್ಮದ ಈ ವಿವಿಧ ಮತ್ತು ವಿಪುಲ ಸಾಮಗ್ರಿಗಳನ್ನು ತಿಳಿದುಕೊಳ್ಳದ ಹೊರತಾಗಿ ಭಾರತೀಯ ಸಂಸ್ಕೃತಿಯ ಜ್ಞಾನವು ಪರಿಪೂರ್ಣವೆಂದು ಹೇಳಲಿಕ್ಕೆ ಬರುವುದಿಲ್ಲ. ಜೈನಧರ್ಮವು ವರ್ಣ-ಜಾತಿರೂಪ ಸಮಾಜ ವಿಭಜನೆಗೆ ಎಂದೂ ಮಹತ್ವ ಕೊಟ್ಟಿಲ್ಲ. ಈ ಸಂಗತಿಯನ್ನು ರಾಷ್ಟ್ರೀಯ ದೃಷ್ಟಿಯಿಂದ ಗಮನಿಸುವುದಕ್ಕೆ ಯೋಗ್ಯವಾಗಿದೆ. ಇಂದಿನ ಈರ್ಷೆ ಮತ್ತು ಸಂಘರ್ಷದ ವಿಷದಿಂದ ದಗ್ಧವಾದ ವಿಶ್ವಕ್ಕೆ ಜೀವಮಾತ್ರರ ಕಲ್ಯಾಣ ಮತ್ತು ಉತ್ಕರ್ಷದ ಭಾವನೆಗಳಿಂದ ತುಂಬಿ-ತುಳುಕುತ್ತಿರುವ ಈ ಉಪದೇಶಾಮೃತದ ಆವಶ್ಯಕತೆಯು ಬಹಳಷ್ಟಿದೆ.

“ಅಕ್ಖರ-ಪಯತ್ಥ-ಹೀಣಂ ಮತ್ತಾ-ಹೀಣಂ ಚ ಜಂ ಮಏ ಭಣಿಯಂ |
ತಂ ಖಮಉ ಣಾಣದೇವಯ ಮಜ್ಝ ವಿ ದುಕ್ಖಕ್ಖಯಂ ದಿನ್ತು ||”

“ಅಕ್ಷರ-ಮಾತ್ರ-ಪದ-ಸ್ವರಹೀನಂ ವ್ಯಂಜನ-ಸಂಧಿ-ವಿವರ್ಜಿತ-ರೇಫಮ್ |
ಸಾಧುಭಿರತ್ರ ಮಮ ಕ್ಷಮಿತವ್ಯಂ ಕೋ ನ ವಿಮುಹ್ಯತಿ ಶಾಸ್ತ್ರ-ಸಮುದ್ರೇ ||”

---

# जैनकला : चित्रावली

# ಜೈನಕಲೆ : ಚಿತ್ರಾವಳಿ

१. मथुरा स्तूपाजवळ शिवयशाने स्थापिलेला आयागपट (पान ३११)

೧. ಶಿವಯಶೆಯ ಸ್ತೂಪವುಳ್ಳ ಆಯಾಗಪಟ, ಮಥುರೆ (ಪುಟ ४೭೫)

२ जिनमूर्तियुक्त आयागपट, मथुरा (पान ३१३)

೨. ಜಿನಮೂರ್ತಿಯುಕ್ತ ಅಯಾಗಪಟ, ಮಥುರೆ (ಪುಟ ೩೭೭)

३. दोन मजली राणीगुहा, उदयगिरी (पान ३१६)

೩. ಎರಡು ಅಂತಸ್ತಿನ ರಾಣೀಗುಹೆ, ಉದಯಗಿರಿ (ಪುಟ ೩೮೦)

४. राणीगुहा तोरणद्वारावरील त्रिरत्न चिन्ह व अशोक वृक्ष (पान ३१६ व ३५६)

೪. ಉದಯಗಿರಿ ರಾಣೀಗುಹೆಯ ತೋರಣದ್ವಾರದ ತ್ರಿರತ್ನ ಚಿಹ್ನ ಮತ್ತು ಅಶೋಕ-ವೃಕ್ಷ (ಪುಟ ೩೮೦)

५. राणीगुहेतील भित्तिशिल्प (पान ३१६)
೫. ರಾಣೀಗುಹೆ ಭಿತ್ತಿಚಿತ್ರ (ಪುಟ ೩೮೦)

६ तेरापूरच्या प्रमुख गुहेतील खांबावरची कारागिरी (पान ३२१)
೬. ತೇರಾಪುರ ಮುಖ್ಯ ಗುಹೆಯ ಸ್ತಂಭಚಿತ್ರ (ಪುಟ ೩೮೫)

७. तेरापूरच्या प्रमुख गुहेतील भित्तिशिल्प (पान ३२१ व ३७९)

೭. ತೇರಾಪುರ ಮುಖ್ಯ ಗುಹೆಯ ಭಿತ್ತಿಶಿಲ್ಪ (ಪುಟ ೩೮೫)

८. तेरापूर येथील तिसऱ्या गुहेचा विन्यास व स्तंभ (पान ३२१)

೮. ತೇರಾಪುರ ಮೂರನೆಯ ಗುಹೆಯ ವಿನ್ಯಾಸ ಮತ್ತು ಸ್ತಂಭ (ಪುಟ ೩೮೫ )

९. वेरूळ येथील इद्रसभेचा मजला (पान ३२४)

೯. ಎಲ್ಲೋರಾ ಇಂದ್ರಸಭೆಯ ಮೇಲಿನ ಅಂತಸ್ತು (ಪುಟ ೩೮೯)

१०. मेघुटी जैनमंदिर, ऐहोळ (पान ३३२)

೧೦. ಮೇಘೂಟ ಜೈನ ಮಂದಿರ, ಐಹೊಳೆ (ಪುಟ ೩೮೮)

११. जैन मंदिर, लाकुडी (पान ३३४)

೧೧. ಜೈನ ಮಂದಿರ, ಲಕ್ಕುಂಡಿ (ಪುಟ ೪೦೧)

१२. जैन मंदिरसमूह, खजुराहो (पान ३३९-३४०)

೧೨. ಜೈನ ಮಂದಿರ ಸಮೂಹ, ಖಜುರಾಹೊ (ಪುಟ ೪೦೮-೯)

१२ खजुराहो येथील पार्श्वनाथ मंदिरातील भित्तिशिल्प (पान ३३९-४०)

೧೩. ಖಜುರಾಹೋ ಪಾರ್ಶ್ವನಾಥ ಮಂದಿರದ ಭಿತ್ತಿಶಿಲ್ಪ (ಪುಟ ೪೦೮-೯)

१४ जैन मदिरसमूह. सोनागिरी (पान ३४१-३४२)

೧೪. ಜೈನಮಂದಿರ ಸಮೂಹ, ಸೋನಾಗಿರಿ (ಪುಟ ೪೧೦)

१५ अब् येथील विमलवसहीतील रगमडपाच्या छतावरील शिल्पकला (पान ३४७)

೧೫. ಅಬೂ ಮಂದಿರದ ಛತ್ರಶಿಲ್ಪ (ಪುಟ ೪೧೪)

१६ जैन मदिर, राकणपूर (पान ३४९)
೧೬. ಜೈನ ಮಂದಿರ, ರಾಣಕಪುರ (ಪುಟ ೪೧೮)

१७. जैन कीर्तिस्तभ, चितोड (पान ३५०)

೧೭. ಜೈನ ಕೀರ್ತಿಸ್ತಂಭ, ಚಿತೋಡ (ಪುಟ ೪೨೦)

१८. जैन मंदिरसमूह, शत्रुजय (पान ३५१)

೧೮. ಜೈನ ಮಂದಿರ ಸಮೂಹ, ಶತ್ರುಂಜಯ (ಪುಟ ೪೨೧)

१९. मस्तकरहित जिनप्रतिमा. लोहानीपूर (पान ३५५)
೧೯. ಮಸ್ತಕರಹಿತನ ಜಿನಪ್ರತಿಮೆ, ಲೋಹಿನೀಪುರ (ಪುಟ ೪೨೫)

२० मस्तकरहित नग्न मूर्ती, सिंधुसंस्कृती, हरप्पा (पान ३५५-३५६)
೨೦. ಮಸ್ತಕರಹಿತನ ನಗ್ನಮೂರ್ತಿ, ಸಿಂಧು ಸಂಸ್ಕೃತಿ ಹರಪ್ಪಾ (ಪುಟ ೪೨೦)

२१. त्रिशृंगयुक्त ध्यानस्थ मूर्ती, सिंधुसंस्कृती (पान ३५६)

೨೧. ತ್ರಿಶೃಂಗಯುಕ್ತ ಧ್ಯಾನಸ್ಥ ಮೂರ್ತಿ, ಸಿಂಧು ಸಂಸ್ಕೃತಿ (ಪುಟ ೪೨೬)

२२ आदिनाथाची खड्गासन धातु-प्रतिमा, चौसा, बिहार (पान ३६५)

೨೨. ಋಷಭ ಖಡ್ಗಾಸನ ಧಾತುಪ್ರತಿಮೆ, ಚೌಸಾ ಬಿಹಾರ (ಪುಟ ೪೩೮)

२३. पद्मासन पार्श्वनाथ, तेरापूर गुहासमूह
(पान ३२१)

೨೩. ಪದ್ಮಾಸನ ಪಾರ್ಶ್ವನಾಥ, ತೇರಾಪುರ ಗುಹೆ (ಪುಟ ೩೨೧)

२४. खड्गासन पार्श्वनाथ तेरापूर गुहासमूह
(पान ३२१)

೨೪. ಖಡ್ಗಾಸನ ಪಾರ್ಶ್ವನಾಥ, ತೇರಾಪುರ ಗುಹೆ (ಪುಟ ೩೨೧)

२५. पद्मासन पार्श्वनाथ, उदयगिरी, विदिशा (पान ३१९-२० व ३६१)

೨೫. ಪದ್ಮಾಸನ ಪಾರ್ಶ್ವನಾಥ, ಉದಯಗಿರಿ, ವಿದಿಶಾ (ಪುಟ ೩೮೩)

२६ देवगढ येथील एक पद्मासन जिनप्रतिमा (पान ३३८-३९ व ३६१)

೨೬. ಪದ್ಮಾಸನ ಜಿನಪ್ರತಿಮೆ, ದೇವಗಡ (ಪುಟ ೪೦೫)

२७. एक पद्मासन जिनप्रतिमा, देवगढ
(पान ३३८ व ३६१)

२८. एक पद्मासन जिनप्रतिमा, देवगढ
(पान ३३८ व ३६१)

२९. एक खड्गासन जिनप्रतिमा, देवगढ
(पान ३३९ व ३६१)
೨೯. ಖಡ್ಗಾಸನ ಜಿನಪ್ರತಿಮೆ, ದೇವಗಢ (ಪುಟ ೪೦೫)

३० जीवन्तस्वामीची धातुप्रतिमा, अकोटा
(पान ३३६)
೩೦. ಜೀವಂತಸ್ವಾಮಿ ಧಾತು ಪ್ರತಿಮೆ, ಅಕೋಟಾ (ಪುಟ ೪೩೯)

३१ गोम्मटेश्वर बाहुबली, श्रवणबेळगोळ (पान ३६७)
೩೧. ಗೊಮ್ಮಟೇಶ್ವರ ಬಾಹುಬಲಿ, ಶ್ರವಣಬೆಳಗೊಳ (ಪುಟ ೪೪೧)

३२. बाहुबली धातुप्रतिमा (पान ३६६)

೩೨. ಬಾಹುಬಲಿಯ ಧಾತುಪ್ರತಿಮೆ (ಪುಟ ೪೪೦)

३३ देवगढ जैन मदिरातील युगल प्रतिमा (पान ३७६)
೩೩. ಯುಗಲ ಪ್ರತಿಮೆ, ಜೈನ ಮಂದಿರ, ದೇವಗಢ (ಪುಟ ೪೫೧)

३४ युगल प्रतिमा, चद्रपूर, झासी (पान ३७६)
೩೪. ಯುಗಲ ಪ್ರತಿಮೆ ಚಂದ್ರಪುರ, ಝಾಾಸೀ (ಪುಟ ೪೫೧)

३५. मूडबिद्री येथील सिद्धान्तग्रथातील ताडपत्रीय चित्र (पान ३८१–३८२)

೩೫. ಮೂಡಬಿದ್ರಿ ಸಿದ್ಧಾಂತಗ್ರಂಥ ತಾಡಪತ್ರ ಚಿತ್ರ (ಪುಟ ೪೫೭)

३२. सुपासणाहचरिय ' मधील कागद-चित्र, पाटण (पान ३८६)
೩೨. ಸುಪಾಸಣಾಹಚರಿಯ, ಕಾಗದ ಚಿತ್ರ, ಪಾಟಣ (ಪುಟ ೪೮೩)

# ಗ್ರಂಥ–ಸೂಚಿ

ಸೂಚನೆ:— ವ್ಯಾಖ್ಯಾನಗಳಲ್ಲಿ ಬಹುತರ ಆಧಾರಭೂತ ಗ್ರಂಥಗಳ ಕೆಲವೊಂದು ಸಂಕೇತವನ್ನು ಆಯಾ ಸ್ಥಳಗಳಲ್ಲಿ ಕೊಡಲಾಗಿದೆ. ವಿಶೇಷ ಪರಿಚಯಕ್ಕಾಗಿಯೂ, ಅಧ್ಯಯನಕ್ಕಾಗಿಯೂ ಕೆಳಗೆ ಕಾಣಿಸಿದ ಗ್ರಂಥಗಳ ಉಪಯೋಗವು ಆಗುತ್ತದೆ.

## ವ್ಯಾಖ್ಯಾನ–೧

## ಜೈನ ಇತಿಹಾಸ


1. History and Culture of the Indian People. Vol. I –V (Bhartiya Vidya Bhavana, Bombay)
2. Mysore and Coorg from the Inscriptions. by B Rice (London, 1909)
3. Studies in South Indian Jainism, Mb Sy. R Iyyangar and B. Seshgiri Rao (Madras, 1922).
4. Rashtrakutas and their Times–A. S. Altekar (Poona, 1934).
5. Mediaval Jainism, by B A Saletore (Bombay, 1938).
6. Jainism and Karnataka Culture, by S R. Sharma (Dharwar, 1940).
7. Traditional Chronology of the Jainas, by S Shaha (Stuttgart, 1935).
8. Jainism in North India, by C. J Shaha (London, 1932).
9. Life in Ancient India as depicted in the Jaina canons, by J. C. Jaina (Bombay 1947).
10. Jainism, the oldest living religion, by Jyotiprasad Jain (Banaras, 1951).
11. Jainism in South India, by P. B. Desai (Sholapur, 1947).
12. Yasastilaka and Indian Culture, by K. K. Handi Rai (Solapur, 1949).
13. Jainism in Gujarat, by C. B Seth (Bombay, 1953).
14. Jaina System of Education, by B. C. Dasgupta (Calcutta, 1942).

15. Jain Community — A Social Survey, by V. A. Sangave (Bombay, 1959).
16. History of Jaina Monachism, by S. B. Deo (Poona, 1956).
17. Repertoire de Epigraphic Jaina, by A. Guerinot (Paris, 1908).
18. ಶ್ರಮಣ ಭಗವಾನ್ ಮಹಾವೀರ–ಕಲ್ಯಾಣವಿಜಯ (ಜಾಲೋರ, ೧೯೪೧)
19. ವೀರ ನಿರ್ವಾಣ ಸಂವತ್ ಔರ್ ಜೈನ ಕಾಲಗಣನಾ–ಕಲ್ಯಾಣವಿಜಯ, (ನಾಗರೀ ಪ್ರಚಾರಿಣೀ ಪತ್ರಿಕಾ ೧೦–೪ ಕಾಶೀ, ೧೯೩೦)
20. ಜೈನ ಲೇಖ ಸಂಗ್ರಹ (ಭಾಗ–೧–೩) ಪೂ. ಚಂ. ನಾಹರ (ಕಲಕತ್ತಾ, ೧೯೧೮–೨೯).
21. ಪಟ್ಟಾವಲೀ ಸಮುಚ್ಚಯ-ದರ್ಶನವಿಜಯ (ವೀರಮಗಾಮ, ಗುಜರಾತ್, ೧೯೩೩).
22. ಜೈನ ಶಿಲಾಲೇಖ ಸಂಗ್ರಹ, ಭಾಗ ೧–೩ (ಮಾ. ದಿ. ಜೈ. ಗ್ರಂಥ ಮಾಲಾ, ಮುಂಬಯಿ).
23. ಭಟ್ಟಾರಕ ಸಂಪ್ರದಾಯ–ವಿ. ಜೋಹರಾಪುರಕರ (ಸೊಲ್ಲಾಪುರ, ೧೯೫೮)
24. ಜೈನ ಸಿದ್ಧಾಂತ ಭಾಸ್ಕರ (ಪತ್ರಿಕಾ) ಭಾ. ೧–೨೨, ಸಿದ್ಧಾಂತ ಭವನ, ಆರಾ.
25. ಅನೇಕಾಂತ (ಪತ್ರಿಕಾ) ಭಾ. ೧–೧೨ (ವೀರ ಸೇವಾ ಮಂದಿರ, ದಿಲ್ಲಿ).

